ಬರೆಸಿರುವದರಿಂದ, ಅದರ ಯೋಗ್ಯತೆಯನ್ನು ನಾನು ವರ್ಣಿಸಲಾರೆನು. ಇಡಿಯ ಕರ್ನಾಟಕದ ಚಿತ್ತವನ್ನು ಈ ಕಾದಂಬರಿಯು ಆಕರ್ಷಿಸಿರುವದು. ಈಗಿನ ಕಾಲದಲ್ಲಿ ಈ ಕಾದಂಬರಿಯನ್ನು ಓದದ ಕನ್ನಡಿಗರು ನಿಶ್ಚಯವಾಗಿ ಅಧನ್ಯರು. ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರ ಅಲೌಕಿಕ ಸಾಮರ್ಥ್ಯವು ಯಾವ ಕನ್ನಡಿಗರ ಸದೂರ್ಮಿಗಳನ್ನು ಸ್ಫೂರ್ತಿಗೊಳಿಸಲಿಕ್ಕಿಲ್ಲ? ಗಳಗನಾಥರ ವಿವಿಧ ಮನೋಹರ ಕಾದಂಬರಿಗಳಲ್ಲಿ ಇದು ಶ್ರೇಷ್ಠತರ ಕಾದಂಬರಿಯಾಗಿದ್ದು, ವಿದ್ಯಾರಣ್ಯ ಮಹಾತ್ಮರ ಸತ್ ಸ್ಫೂರ್ತಿಯಿಂದ ಆ ಗಳಗನಾಥರ ಹೃದಯವು ಇದರಲ್ಲಿ ಬಿಚ್ಚಿ ಇಡಲ್ಪಟ್ಟಿರುವದು.

ಈ ಮನೋಹರ ಕಾದಂಬರಿಯಲ್ಲಿ ೬೦ ಪ್ರಕರಣಗಳಿದ್ದು, ಅವುಗಳಲ್ಲಿ ೧. ವ್ಯಾವಹಾರಿಕ ಯೋಗತ್ರಯಗಳು ೨. ಧರ್ಮದ ದುರಭಿಮಾನ ೩. ವೈದಿಕ ಧರ್ಮಗಳು ೪. ಅವೈದಿಕ ಧರ್ಮಗಳು ೫. ಶಾಂತಿಯ ಪ್ರತ್ಯಕ್ಷ ಕಾರಣವು ಅಧ್ಯಯನವಲ್ಲ, ಗುರು ಕೃಪೆಯು! ೬. ಅಸ್ಪೃಶ್ಯತೆಯೂ, ಧಾರ್ಮಿಕ ವ್ಯವಹಾರವೂ ೭. ಅಸ್ಪೃಶ್ಯತೆಯೂ ರಾಜಕೀಯ ವ್ಯವಹಾರವೂ, ೮. ಸಹಯೋಗ ೯. ಅಸಹಯೋಗದ ಪ್ರಭೇದಗಳು. ೧೦. ಅಹಿಂಸಾ ತತ್ವವೂ, ರಾಜಕೀಯ ಅಹಿಂಸೆಯೂ ೧೧. ರಾಷ್ಟ್ರದ ವಿವೇಕೋದಯ (ಬ್ರಾಹ್ಮಣ ಬ್ರಾಹ್ಮಣೇತರ ವಿವೇಕ) ೧೨. ದೇಶದ್ರೋಹವೂ, ರಾಜದ್ರೋಹವೂ ೧೩. ಪರತಂತ್ರರಿಗೆ ಸೆರೆಮನೆಯೇ ಸ್ವರಾಜ್ಯವು ೧೪. ದೇಶದ್ರೋಹಿಗಳ ಹೇಸಿನತ. ೧೫ ಸಜ್ಜನರಿಗೆ ಶತ್ರುಗಳೂ ಸ್ವಕೀಯರೇ. ೧೬ ದೇಶವಿಘಾತಕ ಭೇದಭಾವನಿರಸನ. ೧೭. ರಾಜದ್ರೋಹದ ಸ್ವರೂಪ ೧೮ ಅಂತಃಕಲಹವು ಅಳಿಗಾಲದ ಲಕ್ಷಣವು ಇತ್ಯಾದಿ ಮಹತ್ವದ ವಿಷಯಗಳನ್ನು ಕುರಿತು ಶ್ರೀ ಮಾಧವಾಚಾರ್ಯರು ಸಮರ್ಪಕವಾಗಿ ನಿರ್ಣಯಿಸಿರುತ್ತಾರೆ. ಈ ಪುಸ್ತಕವನ್ನು ಪ್ರತಿ ಒಬ್ಬ ಕನ್ನಡಿಗನೂ ಮನೆಯಲ್ಲಿ ಸಂಗ್ರಹಿಸತಕ್ಕದ್ದು.

ಈ ಕಾದಂಬರಿಯು ನಮ್ಮ "ಸದ್ಗುರು" ಎಂಬ ಮಾಸಪತ್ರಿಕೆಯಲ್ಲಿ ಭಾಗಶಃ ಎರಡು ವರ್ಷ ಪ್ರಕಟವಾಗಿ, ಉಳಿದ ಕಾದಂಬರೀ ಭಾಗವನ್ನು ಸ್ವತಂತ್ರವಾಗಿ ಬರೆದು ಮುಗಿಸಿರುತ್ತದೆ. ಇದರ ಐದು ಸಾವಿರ ಪ್ರತಿಗಳಲ್ಲಿ ಇನ್ನು ಬಹಳವಾದರೆ ಎರಡುಸಾವಿರ ಪ್ರತಿಗಳು ಉಳಿದಿರಬಹುದು! ಇದನ್ನು ಮುಂಬಯಿ ವಿಶ್ವವಿದ್ಯಾಲಯದವರು ಎಂ.ಎ., ಕ್ಲಾಸಿಗೆ ಪಠ್ಯ ಪುಸ್ತಕವಾಗಿ ನಿಯಮಿಸಿರುವರು. ಬೆಂಗಳೂರಿನ ಸಾಹಿತ್ಯ ಪರಿಷತ್ತಿನ ಅವಲೋಕನಕ್ಕಾಗಿ ಇದನ್ನು ಕಳಿಸಿದಾಗ, ಈವರೆಗೆ ಮಾಡಿದ ಕನ್ನಡಿಗರ ಗೌರವದ ಸೇವಾತಿಶಯಕ್ಕಾಗಿ ಆ ಪರಿಷತ್ತು ಗಳಗನಾಥರಿಗೆ ೨೫೦ ರೂಪಾಯಿ ಉಚಿತವಾಗಿ ಕೊಟ್ಟಿದೆ. ಮೈಸೂರ ಸರ್ಕಾರದ ದೇವರಾಜ ಚಾರ್ಟಿ ಫಂಡಿನಿಂದ ಇದಕ್ಕೆ ೨೦೦ ರೂಪಾಯಿಗಳ ಉಚಿತವು ದೊರೆತಿರುವದು. ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘವೂ ಇದಕ್ಕೆ ಉಚಿತವನ್ನು ಕೊಟ್ಟಿರುವದು. ಇದರ ಬೆಲೆ ೩-೧೨-೦. ಪೋಸ್ಟು ವೆಚ್ಚ ಎಂಟು ಆಣೆ.

**೨. ಕನ್ನಡಿಗರ ಕರ್ಮಕಥೆ-೧೯೧೬:** ಘನತರವಾದ ವಿಜಯನಗರದ ರಾಜ್ಯವು ಪ್ರಸಿದ್ಧ ತಾಳೀಕೋಟೆಯ ಕಾಳಗದಿಂದ ರಸಾತಳಕ್ಕೆ ಹೇಗೆ ಹೋಯಿತೆಂಬುದನ್ನು ಈ ವಿಸ್ತೃತ ಕಾದಂಬರಿಯಲ್ಲಿ ಬಹು ಮನೋಹರವಾಗಿ ವರ್ಣಿಸಿರುತ್ತದೆ. ಇದನ್ನು

ಓದುವದರಿಂದ ಕನ್ನಡಿಗರಲ್ಲಿ ಸ್ವಾಭಿಮಾನ ಮೂಲವಾದ ಹಲವು ವಿಕಾರಗಳೂ, ವಿಚಾರಗಳೂ ಉತ್ಪನ್ನವಾಗದೆ ಇರಲಿಕ್ಕಿಲ್ಲ! ರಾಮರಾಜ, ತಿರುಮಲ, ವೆಂಕಟಾದ್ರಿ, ಮೇಹರ್ಜಾನ, ರಣಮಸ್ತಖಾನ ಮೊದಲಾದ ಪಾತ್ರಗಳ ಚರಿತ್ರ ವಾಚನದಿಂದ ಮನಸ್ಸು ತಲ್ಲೀನವಾಗಿ ಹೋಗುತ್ತದೆ ! ಈ ವಿಸ್ತೃತ ಕಾದಂಬರಿಯ ಬೆಲೆಯು ೧-೮-೦. ಪೋಸ್ಟೇಜು ೫ ಆಣೆ.

**೩. ಕುಮುದಿನಿ-೧೯೧೬:** ಇದೂ ಒಂದು ಕನ್ನಡಿಗರ ಅತ್ಯಂತವಾದ ಅಭಿಮಾನಕ್ಕೆ ಆಸ್ಪದವಾದ ಕಾದಂಬರಿಯೇ ಆಗಿರುವದು. ಈ ಐತಿಹಾಸಿಕ ಸ್ವತಂತ್ರ ಕಾದಂಬರಿಯು ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ್ದು, ಈ ಕಾದಂಬರಿಯೊಳಗಿನ ಶೋಕರಸ ಪ್ರಧಾನವಾದ "ಅಂತಕನ ಕೋಲಾಹಲ" ಎಂಬ ಪ್ರಕರಣವನ್ನು ಓದಿ ನಿಜವಾಗಿ ನಾವು ಮೂರ್ಛಿತರಾದೆವೆಂದು, ಒಬ್ಬ ಮೈಸೂರ ಸೀಮೆಯ ಸಹೃದಯ ವಾಚಕರು ತಿಳಿಸಿರುತ್ತಾರೆ. ಇದನ್ನು ಮೈಸೂರ ಸರಕಾರದವರು ಮೆಟ್ರಿಕ ಕ್ಲಾಸಿಗೆ ಪಠ್ಯ ಪುಸ್ತಕವಾಗಿ ನಿಯಮಿಸಿರುವರು. ಇದರ ಭಾಷಾಂತರವು ಸಂಸ್ಕೃತದಲ್ಲಿ ಆಗಿದೆ. ಬೆಲೆ ೧ ರೂಪಾಯಿ. ಪೋಸ್ಟೇಜು ನಾಲ್ಕು ಆಣೆ.

**೪. ದುರ್ಗದ ಬಿಚ್ಚುಗತ್ತಿ-೧೯೩೮:** ನನ್ನ "ಮಾಧವ ಕರುಣಾ ವಿಲಾಸ" ಎಂಬ ಸ್ವತಂತ್ರವಾದ ದೊಡ್ಡ ಐತಿಹಾಸಿಕ ಕಾದಂಬರಿಯ ತರುವಾಯದಲ್ಲಿ ಬರೆದ ಸ್ವತಂತ್ರ ಐತಿಹಾಸಿಕ ಕಾದಂಬರಿ ಈ 'ದುರ್ಗದ ಬಿಚ್ಚುಗತ್ತಿ' ಇದನ್ನು "ಶ್ರೀ ಮುರುಗೇಶ ಗುರುವರರು' ಪ್ರೇರಿಸಿ ಬರೆಸಿರುವರು. ಈ ಕಾದಂಬರಿಯಲ್ಲಿ ಕರ್ನಾಟಕ ಪ್ರಸಿದ್ಧಿಯ ಚಿತ್ರದುರ್ಗ ಕೋಟೆಯ ನಾಯಕರ ಮನೆತನಕ್ಕೆ ಸಂಬಂಧಿಸಿದ ವೃತ್ತಾಂತ ನಿರೂಪಿತವಾಗಿದೆ. ಇದರ ಬೆಲೆ ೧-೨-೦.

## ಮರಾಠರಿಗೆ ಸಂಬಂಧಿಸಿದುವು

**೫. ಈಶ್ವರೀಸೂತ್ರ-೧೯೧೩:** ಶಿವಾಜಿಯು ತೋರಣಗಡವೆಂಬ ದುರ್ಗವನ್ನು ತಕ್ಕೊಂಡು ಸ್ವರಾಜ್ಯವನ್ನು ಸ್ಥಾಪಿಸಿ ಸ್ವರಾಜ್ಯದ ತೋರಣ ಕಟ್ಟಿದ ಮನೋಹರ ವೃತ್ತಾಂತವು ಇದರಲ್ಲಿ ವರ್ಣಿಸಿರುತ್ತದೆ. ಇದರ ಲೋಕಪ್ರಿಯತೆಯನ್ನು ಇಷ್ಟೆಂದು ವರ್ಣಿಸಲಾಗುವದಿಲ್ಲ. ಕಾದಂಬರಿಯನ್ನು ಪುನಃ ಪುನಃ ಓದಿದರೂ ಮನಸ್ಸು ತೃಪ್ತವಾಗುವದಿಲ್ಲ. ಇದರ ಬೆಲೆ ೧ ರೂ. ಪೋಸ್ಟೇಜು ೪ ಆಣೆ.

**೬. ಮರಾಟರ ಅಭ್ಯುದಯ-೧೯೧೮:** ಮೇಲೆ ಹೇಳಿದಂತೆ ಶಿವಾಜಿಯು ರಾಜ್ಯವನ್ನು ಸ್ಥಾಪಿಸಿದ ಬಳಿಕ ಅದನ್ನು ನಾಶಮಾಡುವುದಕ್ಕಾಗಿ ವಿಜಾಪುರದ ಬಾದಶಹನು ಅಫಜಲಖಾನನೆಂಬ ಬಲಾಢ್ಯ ಸರದಾರನನ್ನು ದೊಡ್ಡ ಸೈನ್ಯದೊಡನೆ ಕಳಿಸಲು, ಶಿವಾಜಿಯು ಆತನನ್ನು ಯುಕ್ತಿಯಿಂದ ಸಂಹರಿಸಿದ ಸಂಗತಿಯು ಇದರಲ್ಲಿ ಮನೋಹರವಾಗಿ ವರ್ಣಿಸಿರುತ್ತದೆ. ಇದನ್ನು ಓದುವಾಗ ಹಲವು ಕಡೆಯಲ್ಲಿ ವಾಚಕರ ಹೃದಯವು ಉಕ್ಕಿ ಬರುವುದೆಂಬುದು ಅನುಭವದ ಮಾತಾಗಿರುವುದು. ಬೆಲೆ ೧ ರೂ. ಪೋಸ್ಟೇಜು ೪ ಆಣೆ.

**೭. ಕಮಲಕುಮಾರಿ-೧೯೧೦:** ದಿಲ್ಲಿಯ ಬಾದಶಹನಾದ ಔರಂಗಜೇಬನು ಶಿವಾಜಿಯ ಹೆಚ್ಚಳವನ್ನು ತಡೆಯದೆ, ಉದಯಭಾನು ಎಂಬ ತನ್ನ ಶೂರ ಸರದಾರನನ್ನು ದೊಡ್ಡ ಸೈನ್ಯದೊಡನೆ ಆತನ ಮೇಲೆ ಕಳಿಸಿದಾಗ, ಶಿವಾಜಿಯ ಬಾಲಮಿತ್ರನಾದ ಅತ್ಯಂತ ಸ್ವಾಮಿನಿಷ್ಠ ತಾನಾಜಿಯು ಸಿಂಹಗಡವನ್ನು ಉದಯಭಾನುವಿನಿಂದ ಕಸಿದುಕೊಂಡು, ತನ್ನ ಒಡೆಯನ ಕಾರ್ಯವನ್ನು ಸಾಧಿಸಿದ ಮನೋಹರ ಪ್ರಸಂಗವನ್ನು ಈ ಕಾದಂಬರಿ ಯಲ್ಲಿ ವರ್ಣಿಸಿರುತ್ತದೆ. ಇದರ ಆರನೆಯ ಆವೃತ್ತಿಯು ಹೊರಡಬೇಕಾಗಿರುವುದು ಕಾದಂಬರಿಗಳಲ್ಲಿ ಇದನ್ನು ಸರಿಗಟ್ಟುವ ಕಾದಂಬರಿಗಳು ಅತಿ ವಿರಳವೆಂದು ಹೇಳಬಹುದು. ಬೆಲೆ ೧ ರೂ. ಪೋಸ್ಟೇಜು ೪ ಆಣೆ.

**೮. ಛತ್ರಪತಿ-೧೯೧೯:** ಮೇಲೆ ಹೇಳಿದಂತೆ ಶಿವಾಜಿಯು ಬಹು ಆಯಕಟ್ಟಿನ ಸ್ಥಳವಾದ ಸಿಂಹಗಡವನ್ನು ಸ್ವಾಧೀನಪಡಿಸಿಕೊಂಡು ಅತಿ ಬಲಿಷ್ಠನಾಗಲು, ಇದನ್ನು ಔರಂಗಜೇಬ ಬಾದಶಹನು ಸೈರಿಸದೆ, ರಾಜಾ ಜಯಸಿಂಗನೆಂಬ ತನ್ನ ಬಲಾಢ್ಯ ರಜಪೂತ ಸರದಾರನನ್ನು ದೊಡ್ಡ ಸೈನ್ಯದೊಡನೆ ಶಿವಾಜಿಯ ಮೇಲೆ ಕಳಿಸಿದನು. ಆಗ ಶಿವಾಜಿಯು ದೂರ ಲಕ್ಷ ಕೊಟ್ಟು ಜಯಸಿಂಗನೊಡನೆ ಯುದ್ಧಮಾಡದೆ ಆತನ ಸೂಚನೆಯಂತೆ ದಿಲ್ಲಿಗೆ ಬಾದಶಹನನ್ನು ಕಾಣುವದಕ್ಕಾಗಿ ಹೋಗಲು, ಬಾದಶಹನು ಆತನನ್ನು ಸೆರೆಯಲ್ಲಿರಿಸಿದನು. ಆಗ ಶಿವಾಜಿಯು ತನ್ನ ಮಗ ಸಂಭಾಜಿಯೊಡನೆ ಪೆಟ್ಟಿಗೆಯಲ್ಲಿ ಮಲಗಿಕೊಂಡು ಹೇಗೆ ಪಾರಾಗಿ ಬಂದನೆಂಬದನ್ನು ಈ ಕಾದಂಬರಿಯಲ್ಲಿ ಮನೋಹರವಾಗಿ ವರ್ಣಿಸಿರುತ್ತದೆ. ಬೆಲೆ ೧ ರೂ. ಪೋ. ೪ ಆಣೆ.

**೯. ಗೃಹಕಲಹ-೧೯೨೧:** ಇದು ಶಿವಾಜಿ ಮಹಾರಾಜರ ಮರಣ ಪ್ರಸಂಗದ ಕಾದಂಬರಿಯು. ಅತ್ಯಂತ ಶೋಕ ಪರ್ಯವಸಾಯಿ. ಇದು ಗೃಹಕಲಹದ ದುಷ್ಪರಿಣಾಮ ವನ್ನು ಹೃದಯಭೇದಕವಾಗಿ ವ್ಯಕ್ತಪಡಿಸುವದು. ಇದು ಅತ್ಯಂತ ಲೋಕಪ್ರಿಯವಾಗಿರುವದು ಬೆಲೆ ೧ ರೂ. ಪೋ. ೪ ಆಣೆ.

**೧೦. ಶಿವಪ್ರಭುವಿನ ಪುಣ್ಯ-೧೯೧೮:** ಶಿವಾಜಿಯ ಮಗ ಸಂಭಾಜಿಯನ್ನು ಔರಂಗಜೇಬನು ಅತಿಕ್ರೂರತನದಿಂದ ಕೊಲ್ಲಿಸಿದ ಪ್ರಸಂಗವೂ, ಶಿವಾಜಿಯ ಚಿಕ್ಕ ಮಗ ರಾಜಾರಾಮನು ಪರಿಪರಿಯ ಕಷ್ಟಗಳನ್ನು ಅನುಭವಿಸಿ, ಅಣ್ಣನ ಕಾಲದಲ್ಲಿ ನಾಶವಾದಂತಾಗಿದ್ದ ಮಹಾರಾಷ್ಟ್ರ ರಾಜ್ಯವನ್ನು ಮತ್ತೆ ಸ್ಥಾಪಿಸಿದ ಪ್ರಸಂಗವೂ ಈ ಕಾದಂಬರಿಯಲ್ಲಿ ಬಹು ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವವು. ಬೆಲೆ ೧ ರೂ. ಪೋ. ೪ ಆಣೆ.

**೧೧. ಸ್ವರಾಜ್ಯಸುಗಂಧ-೧೯೩೮:** ಶಿವಾಜಿಯು ಆಗಲೇ ರಾಯಗಡದಲ್ಲಿ ಛತ್ರಪತಿಯಾಗಿ ಪಟ್ಟಾಭಿಷಿಕ್ತನಾಗಿದ್ದ. ದಿಲ್ಲಿಯ ಮತ್ತು ವಿಜಾಪುರ ಬಾದಶಹನ ವಶದಲ್ಲಿದ್ದ ಅನೇಕ ಕೋಟೆಗಳನ್ನು ಗೆದ್ದುಕೊಂಡು ತನ್ನ ರಾಜ್ಯವನ್ನು ವಿಸ್ತರಿಸಿದ್ದ. ಆದರೆ ಈಗ ಆತನ ದೃಷ್ಟಿಯು 'ಕಲ್ಯಾಣ' ಮತ್ತು 'ರಾಜಮಾಚಿ' ಎಂಬ ಎರಡು ಕೋಟೆಗಳ ಕಡೆಗೆ ಕೇಂದ್ರೀಕೃತವಾಗಿತ್ತು. ಈ ಕಾದಂಬರಿಯಲ್ಲಿ ಈ ಎರಡೂ ಕೋಟೆಗಳನ್ನು ಆತನ ಸರದಾರರು ವಶಪಡಿಸಿಕೊಂಡ ವಿಷಯ ನಿರೂಪಿತವಾಗಿದೆ.

೧೨. **ಕುರುಕ್ಷೇತ್ರ-೧೯೧೯:** ಗರ್ವವು ನಾಶಕರವಾದದ್ದು. ಪ್ರತಾಪಶಾಲಿಯಾದ ಪೇಶ್ವೆ ಭಾವುಸಾಹೇಬನ ಅತಿ ಗರ್ವದ ಬಾಧೆಯಿಂದ ಪ್ರಸಿದ್ಧ ಪಾನಿಪತ್ತದ ಕಾಳಗದಲ್ಲಿ ಪೇಶ್ವೆಯವರ ಉತ್ಕರ್ಷವು ಕುಗ್ಗಿದ ದುಃಖಕಾರಕ ಸಂಗತಿಯು ಈ ಕಾದಂಬರಿಯ ಯೋಗದಿಂದ ಬೋಧಪ್ರದವಾಗಿ ಗೊತ್ತಾಗುತ್ತದೆ. ಆದರೂ ಮಹಾರಾಷ್ಟ್ರದ ಪ್ರತಾಪವೂ, ಸಾಮರ್ಥ್ಯವೂ ಎಷ್ಟು ಘನತರವಾದವಿದ್ದವೆಂಬುದನ್ನು ಈ ಕಾದಂಬರಿಯು ತೋರಿಸದೆ ಇರುವದಿಲ್ಲ. ಬೆಲೆ ೧ ರೂ. ಪೋ. ೪ ಆಣೆ.

## ರಜಪೂತರಿಗೆ ಸಂಬಂಧಿಸಿದುವು

೧೩. **ಕ್ಷಾತ್ರತೇಜ-೧೯೧೪:** ಈ ಐತಿಹಾಸಿಕ ಕಾದಂಬರಿಯಲ್ಲಿ ಔರಂಗಜೇಬನ ಹಾಗು ರಜಪೂತರ ಗುಣಸ್ವಭಾವಗಳು ಚಿತ್ತಾಕರ್ಷಣಪೂರ್ವಕವಾಗಿ ಗೊತ್ತಾಗುತ್ತವೆ. ಇದರಲ್ಲಿ ರೂಪಮತಿಯ ಕುಲೀನತೆ, ಇಂದಿರೆ-ಪದ್ಮೆ-ದುರ್ಗಾದಾಸ ಇವರ ಸ್ವಾಮಿನಿಷ್ಠೆ, ಚಂದ್ರಾವತೀರಾಣಿಯ ತೇಜಸ್ವಿತೆ, ವೈಕುಂಠಯೋಗಿಗಳ ನಿಸ್ಪ್ರಹತೆ, ಮೊದಲಾದವನ್ನು ಸಾಂಸಾರಿಕರಾದ ನಾವು ಲಕ್ಷಪೂರ್ವಕ ಅವಲೋಕಿಸಬಹುದಾಗಿದೆ. ಇದನ್ನು ಮುಂಬಯಿ ವಿದ್ಯಾಖಾತೆಯವರು ಮೆಟ್ರಿಕ್ಕಿಗೆ ಪಠ್ಯಪುಸ್ತಕವಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

೧೪. **ಸತ್ವಸಾರ-೧೯೧೩:** ಇದೊಂದು ಸುಂದರವಾದ ಐತಿಹಾಸಿಕ ಕಾದಂಬರಿಯು. ಮೇವಾಡದ ಸುಪ್ರಸಿದ್ಧ ಮಹಾರಾಜಾ ಪ್ರತಾಪಸಿಂಹನು ಈ ೧೪ ಕಾದಂಬರಿಯ ನಾಯಕನಾಗಿದ್ದಾನೆ. ಮಹಾತ್ಮರ ಸತ್ವದಿಂದಲ್ಲದೆ ಕೇವಲ ದ್ರವ್ಯಾದಿ ಉಪಕರಣಗಳಿಂದ ಮಹಾಕಾರ್ಯಗಳು ಆಗುವದಿಲ್ಲವೆಂತಲೂ, ಸತ್ವಶಾಲಿಯನ್ನು ದ್ರವ್ಯವು ತಾನಾಗಿ ಹೊಂದುವದೆಂತಲೂ ಈ ಕಾದಂಬರಿಯು ಕಲಿಸುವದು. ಇದನ್ನು ಕನ್ನಡಿಗರು ಈ ಕಾಲದಲ್ಲಿ ಓದಿಯೇ ತೀರಬೇಕೆಂದು ಆಗ್ರಹದಿಂದ ಹೇಳುವೆನು. ಇದನ್ನು ಮುಂಬಯಿ ಯೂನಿವರ್ಸಿಟಿಯವರು ಟೆಕ್ಸ್ಟಬುಕ್ಕಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

೧೫. **ತಿಲೋತ್ತಮೆ-೧೯೧೭:** ಇದೂ ಒಂದು ಐತಿಹಾಸಿಕ ಮನೋಹರ ಕಾದಂಬರಿಯೇ ಇರುತ್ತದೆ. ಈ ಕಾದಂಬರಿಯಲ್ಲಿಯ ಆಯೇಷೆ, ತಿಲೋತ್ತಮೆ, ಉಸ್ಮಾನ, ಜಗತ್ಸಿಂಗ ಮೊದಲಾದ ಸದ್ಗುಣಮಂಡಿತ ಪಾತ್ರಗಳ ಸಹವಾಸದಿಂದ ವಾಚಕರ ಹೃದಯವು ದ್ರವಿಸಿ ಅದರಲ್ಲಿ ಸದ್ಗುಣಗಳ ಅಂಕುರಗಳು ತೋರದೆ ಇರವು. ಬೆಲೆ ೧ ರೂ. ಪೋ. ೪ ಆಣೆ.

೧೬. **ಧಾರ್ಮಿಕತೇಜ-೧೯೨೮:** ಇದು ಅತ್ಯಂತ ಗೌರವದ ಮನೋಹರ ಐತಿಹಾಸಿಕ ಹೊಸ ಕಾದಂಬರಿಯು. ಛತ್ರಸಾಲನೆಂಬ ಪ್ರತಾಪಿಯಾದ ಕ್ಷತ್ರಿಯನು ಔರಂಗಜೇಬ ಬಾದಶಹನ ಕಾಲದಲ್ಲಿ ಬುಂದೇಲಖಂಡದ ಸ್ವಾತಂತ್ರ್ಯವನ್ನು ಸ್ಥಾಪಿಸಿದ ವೃತ್ತಾಂತವು ಬಹು ಗಂಭೀರವಾಗಿ ವರ್ಣಿಸಲ್ಪಟ್ಟಿರುತ್ತದೆ. ಪ್ರಾಣನಾಥ ಪ್ರಭುಗಳ ಮಹಿಮೆ ಯಲ್ಲಿಯೂ, ದಲಪತರಾಯ ಸಭಾಕರಣ-ಹೀರಾದೇವಿ-ಸುಫಲದೇವಿ-ಕಂಚುಕಿರಾಯ-ರಣದುಲ್ಲಾಖಾನ ಮೊದಲಾದ ನೀಚೋಚ್ಚ ಪಾತ್ರಗಳ ಚರಿತ್ರ ವಾಚನದಲ್ಲಿಯೂ ಮನಸ್ಸು ತೊಡಗಿಹೋಗವದು. ಬೆಲೆ ೧ ರೂ. ೮ ಆಣೆ. ಪೊ. ೫ ಆಣೆ.

೧೭. ರಾಣಾ ರಾಜಸಿಂಹ-೧೯೨೮: ಇದು ಔರಂಗಜೇಬನ ಕಾಲದ ಐತಿಹಾಸಿಕ ಹೊಸ ಕಾದಂಬರಿಯು. ಇದರಲ್ಲಿ ರಾಣಾ ರಾಜಸಿಂಹನ ಘನವಾದ ಯೋಗ್ಯತೆಯೂ, ಔರಂಗಜೇಬನ ಉದ್ದಾಮ ಮಹತ್ವಾಕಾಂಕ್ಷೆಯೂ, ಅನಂತಶರ್ಮರ ಸತ್ವವೂ, ಮೊಗಲ ಜನಾನಖಾನೆಯ ಸ್ಥಿತಿಯೂ ಚನ್ನಾಗಿ ಚಿತ್ರಿಸಿರುತ್ತದೆ. ಬೆಲೆ ೧೨ ಆಣೆ. ಪೋ. ೪ ಆ.

**ಸಂಕೀರ್ಣ ಕಾದಂಬರಿಗಳು**

೧೮. ಪ್ರಬುದ್ಧ ಪದ್ಮನಯನೆ-೧೮೯೮: ಇದೊಂದು ಕನ್ನಡಿಗರ ಪ್ರೀತಿಯ ಅತಿಮನೋಹರವಾದ ಸ್ವತಂತ್ರ ಕಾಲ್ಪನಿಕ ಕಾದಂಬರಿಯು. ಈವರೆಗೆ ಈ ಕಾದಂಬರಿಯು ಐದು ಆವೃತ್ತಿಗಳಾಗಿ ಹೋಗಿರುವವು. ಇದರ ಭಾಷಾಂತರವನ್ನು ಸಂಸ್ಕೃತದಲ್ಲಿ ಒಬ್ಬರು ಮಾಡಿರುವರು. ಹಳ್ಳಿಯ ಜನರು ಇದರ ಆಟಗಳನ್ನು ಕಟ್ಟಿ ಆಡಿರುವರು. ರಸಿಕರು ಅವಶ್ಯವಾಗಿ ಓದತಕ್ಕ ಕಾದಂಬರಿಯ ಬೆಲೆ ೧ ರೂ. ಪೋ. ೪ ಆಣೆ.

೧೯. ರಾಣೀ ಮೃಣಾಲಿನಿ-೧೯೧೫: ಇದಕ್ಕೆ ಈ ಹೊಸ ಆವೃತ್ತಿಯಲ್ಲಿ ಹೆಚ್ಚು ವಿಷಯವನ್ನು ಸೇರಿಸಿ ದೊಡ್ಡ ಪುಸ್ತಕವಾಗಿ ಮಾಡಿರುತ್ತದೆ. ಈ ಐತಿಹಾಸಿಕ ಕಾದಂಬರಿಯಾದರೂ ಅತ್ಯಂತ ಚಿತ್ತಾಕರ್ಷಕವಾಗಿರುವದು. ಇದರ ಸ್ವಾರಸ್ಯವೆಷ್ಟು, ಲಾಲಿತ್ಯವೆಷ್ಟು, ಗಾಂಭೀರ್ಯವೆಷ್ಟು! ಶಾಭಾಶ್! ಕಾದಂಬರಿಕಾರರಿದ್ದರೆ ಬಂಕೀಮಚಂದ್ರರಂಥ ಕಾದಂಬರಿಕಾರರಿರಬೇಕು! ಈ ಕಾದಂಬರಿಗೆ ಹೊಸದಾಗಿ ಜೋಡಿಸಿದ ವಿಷಯವು ಸ್ವತಂತ್ರವಾಗಿ ಬರೆದದ್ದು. ಬೆಲೆ ೧ ರೂ ೮ ಆಣೆ. ಪೋ ೫ ಆಣೆ.

೨೦. ವೈಭವ-೧೯೧೨: ಇದು ಚಾಣಿಕ್ಯ-ಚಂದ್ರಗುಪ್ತರಿಗೆ ಸಂಬಂಧಿಸಿದ ಅತಿ ಮನೋಹರವಾದ ಐತಿಹಾಸಿಕ ಕಾದಂಬರಿಯಾಗಿರುತ್ತದೆ. ಇದನ್ನು ಓದಲು ಕೈಯಲ್ಲಿ ತಕ್ಕೊಂಡವರು ಪೂರ್ಣವಾಗಿ ಮುಗಿಸದೆ ಕೆಳಗಿಡುವ ಹಾಗಿಲ್ಲೆಂದು ನಾವು ನಂಬಿಗೆಯಿಂದ ಹೇಳುವೆವು. ಕನ್ನಡ ಮುದ್ರಾಮಂಜೂಷಕ್ಕೂ ಇದಕ್ಕೂ ಏನೂ ಸಂಬಂಧವಿಲ್ಲ. ಬೆಲೆ ೧ ರೂ. ಪೋ. ೪ ಆಣೆ.

೨೧. ಧರ್ಮರಹಸ್ಯ-೧೯೧೪: ಇದೊಂದು ಗಂಭೀರ ವಿಚಾರದ ಐತಿಹಾಸಿಕ ಕಾದಂಬರಿಯಾಗಿರುತ್ತದೆ. ಅಶೋಕರಾಜ, ಚಿದಾನಂದಸ್ವಾಮಿ, ಜಿತೇಂದ್ರ, ಮೊಗ್ಗಲೀಪುತ್ರ ಮೊದಲಾದ ನೀಚೋಚ್ಚ ಪಾತ್ರಗಳ ವಕ್ರ-ಸರಲಗತಿಗಳೂ, ಅನುದಾತ್ತ-ಉದಾತ್ತ ಭಾವಗಳೂ ಎಷ್ಟು ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವವೆಂಬದನ್ನು ಬರೆಯಲಾರೆವು. ಈ ಪುಸ್ತಕವನ್ನು ಬರೆಯಲುಪಕ್ರಮಿಸಿದಾಗ ಹಲವು ಸಾರೆ ಕಣ್ಣೀರುಗಳು ಉದುರಿರುವವು. ಇದನ್ನು ಮೈಸೂರ ವಿದ್ಯಾಖಾತೆಯವರು ಮ್ಯೊಟ್ರಿಕ್ ಕ್ಲಾಸಿಗೆ ಪಠ್ಯಪುಸ್ತಕವಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

೨೨. ಸಂಸಾರ ಸುಖ-೧೯೨೬: ಇದು ಅಕಬರಬಾದಶಹನಿಗೆ ಸಂಬಂಧಿಸಿದ ಕಾದಂಬರಿಯು. ಅಂತಹ ದೊಡ್ಡ ಬಾದಶಹನೆಂದರೇನು, ಕಡೆಗೆ ಸಂಸಾರದ ತಾಪದಿಂದ ಹಣ್ಣಾದನು. ಮಾನಸಿಂಹನ ಸೋದರಳಿಯನಾದ ಖುಸರುವಿನ ದುರ್ದೈವವನ್ನು ನೆನಿಸಿ ಮನಸ್ಸು ವಿಷಾದಪಡುವದು. ರಾಜ್ಯತೃಷ್ಣೆಯು ಎಷ್ಟು ಅನರ್ಥಕಾರಕವೆಂಬುದನ್ನು ಈ ಕಾದಂಬರಿಯು ತಿಳಿಸುತ್ತದೆ. ಬೆಲೆ ೧ ರೂ. ಪೋ. ೪ ಆಣೆ.



# ಇತರ ಕೃತಿಗಳು

೧. ಪದ್ಯಾರ್ಥ ಸಾರ – ೧೮೯೭
೨. ಲಘು ನಿಬಂಧ ಸಂಗ್ರಹ ಮತ್ತು ಪತ್ರವ್ಯವಹಾರ – ೧೮೯೯
೩. ಚಿದಂಬರ ಚರಿತ್ರೆ – ೧೯೦೯
೪. ನಿಬಂಧ ಶಿಕ್ಷಣ – ೧೯೧೦
೫. ಗಿರಿಜಾ ಕಲ್ಯಾಣ ಸಾರ – ೧೯೧೧
೬. ರಾಜನಿಷ್ಠೆಯು ನಮ್ಮ ಪುಣ್ಯಶಾಲಿಗಳಾದ ಸಾರ್ವಭೌಮರು – ೧೯೧೨
೭. ದಾಂಪತ್ಯ – ೧೯೧೨
೮. ಕುಟುಂಬ – ೧೯೧೩
೯. ನಿರ್ಯಾಣ ಮಹೋತ್ಸವ – ೧೯೧೫
೧೦. ಭಗವತೀ ಕಾತ್ಯಾಯಿನೀ – ೧೯೧೯
೧೧. ಭಾಗವತಾಮೃತ – ೧೯೨೨
೧೨. ಶೈವ ಸುಧಾರ್ಣವ – ೧೯೨೩
೧೩. ರಾಮಾಯಣಾಮೃತ (ತುಲಸಿ ರಾಮಾಯಣ) – ೧೯೨೬
೧೪. ಸದ್ಗುರು ಪ್ರಭಾವ – ೧೯೨೮
೧೫. ಗೀತೆಯ ಶ್ರವಣಾಧಿಕಾರ – ೧೯೨೮
೧೬. ವಿವೇಕಾನಂದರು ವೈದಿಕರಿಗೆ ಯಾರು? – ೧೯೨೮
೧೭. ಮಹಾಭಾರತಾಮೃತ ಆದಿಪರ್ವ – ೧೯೩೧
೧೮. ರಹಸ್ಯಗಳು – ೧೯೩೩
೧೯. ಮಹಾಭಾರತಾಮೃತ–ಸಭಾಸದನ – ೧೯೩೩
೨೦. ಕಲಿಕುಠಾರ ಅಥವಾ ಲೋಕಾಪುರಪೀಠ ಪ್ರಭಾವ ೨ನೇ ಭಾಗ – ೧೯೩೮
೨೧. ನಳ ಚರಿತ್ರ – ೧೯೩೮
೨೨. ವೀರ ಪ್ರತಾಪ ಅಥವಾ ಸ್ವಾಭಿಮಾನ ಸಂಭ್ರಮ – ೧೯೪೯
೨೩. ಕಲಿಕುಠಾರ ಜ್ಞಾನಯೋಗ ಪ್ರಧಾನ ಖಂಡ – ೧೯೫೯
೨೪. ಉತ್ತರ ರಾಮಚರಿತ್ರ ಸಾರ – ಸು. ೧೯೧೧
೨೫. ಸಾಧು ಸದಾಶಿವ ಲೀಲೆ – ಸು. ೧೯೧೬
೨೬. ಕನ್ಯಾ ಶಿಕ್ಷಕ – ಸು. ೧೯೨೦
೨೭. ಬ್ರಾಹ್ಮಣ್ಯ ಪ್ರಾಪ್ತಿ ಸಾಧನೆ – ಸು. ೧೯೨೩
೨೮. ಸುಂದರ ಲೇಖ ಸಮುಚ್ಚಯ – ಸು. ೧೯೨೮

---

ಆಧಾರ : ಗಳಗನಾಥರು ಮತ್ತು ಅವರ ಕಾದಂಬರಿಗಳು, ಕೃಷ್ಣಮೂರ್ತಿ ಕಿತ್ತೂರ
ಪ್ರ – ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೧೯೭೮

# ಪ್ರಸ್ತಾವನೆ

ಸ್ವರಾಜ್ಯಂ ಸ್ಥಾಪಿತಂ ಯೇನ ತಪಸ್ತಪ್ತ್ವಾ ಸುದುಷ್ಕರಂ ।
ವಂದೇತಂ ವಿಶ್ವವಿಖ್ಯಾತಂ ಮಾಧವಾಖ್ಯ ಮುನೀಶ್ವರಂ ॥

ಶ್ರೀ ಸದ್ಗುರು ಪ್ರೇರಣೆಯಿಂದ ''ಮಾಧವ ಕರುಣಾವಿಲಾಸ''ವೆಂಬ ಈ ಪ್ರಚಂಡವಾದ ಸುರಸ ತಾತ್ವಿಕ ಐತಿಹಾಸಿಕ ಕಾದಂಬರಿಯು ಮುಗಿದದ್ದರಿಂದ, ನನ್ನ ತಲೆಯಮೇಲಿನದೊಂದು ದೊಡ್ಡ ಭಾರವು ಇಳಿದಂತಾಗಿ, ನನಗೆ ಹಿಡಿಸಲಾರದಷ್ಟು ಸಂತೋಷವಾಗಿರುವದು! ನನ್ನ ಲೇಖನ ವ್ಯವಸಾಯದ ಅಖಂಡವಾದ ಹದಿನೆಂಟು ವರ್ಷಗಳ ಅವಧಿಯಲ್ಲಿ ಇಷ್ಟು ಗೌರವದ ಹಾಗು ಇಷ್ಟು ದೊಡ್ಡದಾದ ಸ್ವತಂತ್ರ ವಿಚಾರದ ಪುಸ್ತಕವನ್ನು ನಾನು ಬರೆಯಲೇ ಇಲ್ಲ. ಈ ಪುಸ್ತಕವನ್ನು ಬರೆಯಹತ್ತಿ ಮೂರು ವರ್ಷಗಳ ಮೇಲೆ ಆಯಿತು. ಇದರ ೩೭೬ ಪುಟಗಳನ್ನು ಬರೆದ ಬಳಿಕ ಮುಂದೆ ವಿಷಯವು ಸಾಗದಂತಾಗಲು, ಇದನ್ನು ಅಷ್ಟಕ್ಕೇ ಬಿಟ್ಟುಕೊಟ್ಟು ''ಭಾಗವತಾಮೃತ'' ''ಶೈವಸುಧಾರ್ಣವ'' ಎಂಬ ಎರಡು ದೊಡ್ಡ ಉತ್ತಮ ಪುಸ್ತಕಗಳನ್ನು ಬರೆದು ಭಗವಂತರಾದ ಹರಿಹರರ ಒಂದು ವಿಧವಾದ ಉಪಾಸನೆಯನ್ನು ನಾನು ಮಾಡಬೇಕಾಯಿತು. ಈ ಭಗವದುಪಾಸನೆಯು ಮುಗಿದ ಬಳಿಕ ಭಗವತ್ಕೃಪೆಯಿಂದಲೇ ಮಾಧವ ಕರುಣಾವಿಲಾಸದ ಮುಂದಿನ ೨೪೪ ಪುಟಗಳ ಅತಿ ಮಹತ್ವದ ವಿಷಯವು ಬರೆದು, ಈ ಪ್ರಚಂಡ ಕಾದಂಬರಿಯು ಪೂರ್ಣವಾಯಿತು! ಈ ಅವಧಿಯಲ್ಲಿ ನಮ್ಮ ಪ್ರಿಯ ಚಂದಾದಾರರು ''ಮಾಧವಕರುಣಾವಿಲಾಸ'' ''ಮಾಧವಕರುಣಾವಿಲಾಸ'' ಎಂದು ಕನಕರಿಸುತ್ತ ಅದು ಬೇಗನೆ ಯಾಕೆ ಬರಲೊಲ್ಲದೆಂದು ಚಡಪಡಿಸಿ ಚಾಟಿಯ ಹೊಡೆಯುತ್ತ, ಓದುವ ತಮ್ಮ ಆತುರತೆಯನ್ನು ತಡೆಯಲಾರದೆ ಹಲವರು ಹಲವು ತರದ ಮಾತುಗಳನ್ನು ನನಗೆ ಆಡಿದರು; ಆದರೆ ಅದೆಲ್ಲ ನನ್ನ ಹಾಗು ನನ್ನ ಕಾದಂಬರಿಯ ವಿಷಯದ ನಮ್ಮ ಚಂದಾದಾರರ ಉತ್ಕಟಪ್ರೇಮದ ಲಕ್ಷಣವೆಂದು ತಿಳಿದು ನಾನು ಸಮಾಧಾನವನ್ನೇ ತಾಳಿದೆನು.

ಮನುಷ್ಯನು ತನ್ನ ಕೈಯಿಂದಾಗತಕ್ಕ ಕೆಲಸವನ್ನು ಹಗಲು ರಾತ್ರಿ ಕುಳಿತಾದರೂ ಮಾಡಿ ಬೇಗನೆ ಮುಗಿಸಬಹುದು; ಆದರೆ ಅವನು ಪರರ ಮುಖಾಂತರ ಕೆಲಸ ಮಾಡ ಬೇಕಾಗಿದ್ದ ಪ್ರಸಂಗದಲ್ಲಿ ಈ ಸ್ವಾತಂತ್ರ್ಯವು ಅವನಿಗೆ ಹ್ಯಾಗೆ ಉಳಿಯಬೇಕು? ಮಾಧವ ಕರುಣಾವಿಲಾಸವನ್ನು ಪ್ರೇರಿಸುವವರು ಮಹಾತ್ಮರಾದ ಮಾಧವಾಚಾರ್ಯರು; ಅವರು ಕರುಣಿಸಿ

ಪ್ರೇರಿಸಿದ್ದನ್ನಷ್ಟು ಬರೆಯುವವನು ಪಾಮರನಾದ ಗಳಗನಾಥನು! ಅಂದಬಳಿಕ ಈ ಕಾದಂಬರಿಯು ಬೇಗನೆ ಮುಗಿಯದಿರುವದಕ್ಕೆ ಗಳಗನಾಥನ ಅಜ್ಞಾನಕ್ಕಿಂತ, ಮಹಾತ್ಮರಾದ ಮಾಧವಾಚಾರ್ಯರ ಪರಿಪಕ್ವ ಕಾಲನಿರೀಕ್ಷಣವೇ ಕಾರಣವೆಂದು ಹೇಳಬೇಕಾಗುವದು. ಹೃದಯಸ್ಥರಾದ ಆಚಾರ್ಯವರ್ಯರು ಪ್ರೇರಿಸಿದ್ದರ ಕುರುಹು, ತನ್ನ ಹೃದಯದ ಪರಿತುಷ್ಟತೆಯೆಂದು ತಿಳಿದು, ಅಂಥ ಪರಿತುಷ್ಟತೆಯು ಆಗುತ್ತ ಬಂದಾಗಲೇ ಗಳಗನಾಥನು ಈ ಕಾದಂಬರಿಯನ್ನು ಮೊದಲಿನಿಂದ ಕಡೆತನಕ ಬರೆದಿರುವನೆಂಬದಕ್ಕೆ ಶ್ರೀ ಮಾಧವಾಚಾರ್ಯರೇ ಸಾಕ್ಷಿಯು! ಈ ಪ್ರಸಂಗದಲ್ಲಿ ಗಳಗನಾಥರು ತನ್ನ ಹನ್ನೆರಡು ಸಹಸ್ರ ರೂಪಾಯಿ ಸಾಲದ ಹಂಗು ಇಡದೆ, ತನ್ನ ಈಗಿನ ಪ್ರತಿ ತಿಂಗಳ ಕಡಿಮೆಯ ೨೦೦ ರೂಪಾಯಿಗಳ ವೆಚ್ಚವು ಹ್ಯಾಗೆ ಸಾಗೀತೆಂಬ ಚಿಂತೆಗೊಳಗಾಗದೆ, ಸದ್ಗುರುವು ಕರುಣಿಸಿದರೆ ಬೇಗನೆ ಪಾಠಶಾಲೆಯನ್ನೂ, ಸದ್ಗುರುಮಾಸ ಪತ್ರಿಕೆಯನ್ನೂ ಪುನಃ ಸಾಗಿಸಬೇಕೆಂಬ ತನ್ನ ಅತ್ಯಾತುರತೆಯ ಎಳತಕ್ಕೆ ಒಳಗಾಗದೆ, ಮಹಾತ್ಮರಾದ ಮಾಧವಾಚಾರ್ಯರ ಸತ್ಪ್ರೇರಣೆಯಿಂದ ಕನ್ನಡಿಗರ ಹಿತಕಾರಕ ಸೇವೆಯು ತನ್ನಿಂದ ಘಟಿಸಿ, ಶ್ರೀ ಮಾಧವಾಚಾರ್ಯರ ಘನವಾದ ಯೋಗ್ಯತೆಗೆ ಕೆಲಮಟ್ಟಿಗಾದರೂ ಒಪ್ಪುವಂತೆ ಕಾದಂಬರಿಯು ಗೌರವವುಳ್ಳದ್ದು ಹ್ಯಾಗಾದೀತೆಂಬ ಒಂದೇ ಒಂದು ಚಿಂತೆಯಿಂದ ಕಷ್ಟಪಟ್ಟು ಕಾದಂಬರಿಯನ್ನು ಆತನು ಬರೆದಿರುವನು! ಪ್ರಿಯ ಕನ್ನಡಿಗರೇ, ಬೇಗನೇ ಹ್ಯಾಗಾದರೂ ಕಾದಂಬರಿಯನ್ನು ಮುಗಿಸಿ ನಿಮಗೆ ವ್ಹಿ.ಪಿ. ಮಾಡಿದ್ದರೆ ನನ್ನ ಮೇಲಿನ ಪ್ರೇಮದಿಂದ ನೀವು ವ್ಹಿ.ಪಿ.ಯನ್ನು ಸ್ವೀಕರಿಸಿ ನನ್ನ ದಾರಿದ್ರ್ಯ ವಿಚ್ಛೇದನವನ್ನು ಮಾಡಬಹುದಾಗಿತ್ತು; ಆದರೆ ಅದರಿಂದ ಸ್ವಾರ್ಥೈಕಪರತೆಯ ದೋಷದಿಂದ ನಾನು ಮಾತ್ರ ಮಹಾತ್ಮರಾದ ಮಾಧವಾಚಾರ್ಯರ ಅವಕೃಪೆಗೆ ಪಾತ್ರನಾಗಬೇಕಾಗುತ್ತಿತ್ತು!

ಇನ್ನು ಮಾಧವಾಚಾರ್ಯರು ಹೃದಯಸ್ಥರಾಗಿ ಪ್ರೇರಿಸಲಿಕ್ಕೆ ಅವರು ಗಳಗನಾಥನ ಗಂಟು ತಿಂದದ್ದೇನೆಂಬ ವಿಚಾರವು ಅನ್ಯರಂತೆ ಸ್ವತಃ ಗಳಗನಾಥನಾದ ನನಗೂ ಬಂದಿರುವದು; ಆದರೆ ಅಭಾಗ್ಯನಿಗೂ ಕೆಲವೊಂದು ಪುಣ್ಯಕರ ಪ್ರಸಂಗವು ಅವನ ಗುರುಹಿರಿಯರ ಪುಣ್ಯದಿಂದ ಒದಗುತ್ತಿರಬಹುದೆಂಬ ಹಾಗೆ ತೋರುತ್ತದೆ. ಅಂತೇ ನಮ್ಮ ಶ್ರೀ ಶೇಷಸದ್ಗುರವಿನ ಹಾಗು ನಮ್ಮ ಹಿರಿಯರ ಪುಣ್ಯದಿಂದ ''ಮಾಧವಕರುಣಾವಿಲಾಸ''ಎಂಬ ಹೆಸರಿನ ಕಾದಂಬರಿಯನ್ನು ಬರೆಯಬೇಕೆಂಬ ಸ್ಫೂರ್ತಿಯು ನನ್ನ ಹೃದಯದಲ್ಲಿ ಆದ ನೆವದಿಂದ ಮಹಾತ್ಮರಾದ ಮಾಧವಾಚಾರ್ಯರು ನನ್ನ ಹೃದಯಸ್ಥರಾದರು; ಆದರೆ ಬುದ್ಧಿಹೀನನಾದ ನನ್ನ ಹೃದಯದಲ್ಲಿ ಅವರ ಸತ್ಕಾರವು ಯಾವ ಬಗೆಯಿಂದ ಆಗಬೇಕು? ಆದರೂ ದೈವವಶಾತ್ ಬಡವರ ಮನೆಗೆ ಬಂದ ಭಾಗ್ಯಶಾಲಿಗಳು , ಬಡವರ ಸಂತೋಷಕ್ಕಾಗಿ ತಮ್ಮ ಕರವಸ್ತ್ರವನ್ನೇ ತಮ್ಮ ಆಸನ ವನ್ನಾಗಿ ಮಾಡಿಕೊಂಡು ಕುಳಿತು ಮರ್ಯಾದೆ ಹೊಂದುವಂತೆ, ನನ್ನ ಹೃದಯಸ್ಥರಾದ ಶ್ರೀ ಮಾಧವಾಚಾರ್ಯರು ತಮ್ಮ ಘನತರವಾದ ಯೋಗ್ಯತೆಗೆ ಒಪ್ಪುವಂತೆ ಸದ್ವಿಚಾರಗಳ ಸ್ಫುರಣವನ್ನು ಹಟವಾರಿಯಾದ ನನ್ನ ಹೃದಯದಲ್ಲಿ ಮಾಡಿ, ತಮ್ಮ ಹೆಸರಿನ ಗೌರವವನ್ನು ಕಾಯ್ದುಕೊಂಡಿರುವರು! ಪಾಮರನಾದ ನನ್ನ ಹೃದಯದಲ್ಲಾದ ಈ ಮಹಾತ್ಮರ ಸುಮಂಗಲಕರ

ಸ್ಫುರಣದ ಯೋಗದಿಂದ ನಾನು ನಿಶ್ಚಯವಾಗಿ ಧನ್ಯನಾಗಿರುವೆನು! ಇನ್ನು, ಮೃದಂಗ ಬಾರಿಸುವವನು ಎಷ್ಟು ನಿಪುಣನಿದ್ದರೂ ಮೃದಂಗದ ದೋಷದಿಂದ ಬಾರಿಸುವದರಲ್ಲಿ ದೋಷವಿದ್ದಹಾಗೆ , ಕಾಣುವಂತೆ, ಯೋಗ್ಯತಾಹೀನನಾದ್ದರಿಂದ ಒಡಕ ಮೃದಂಗರೂಪನಾದ ನನ್ನ ಮುಖಾಂತರ ಹೊರಟ ಮಹಾತ್ಮರ ವಿಷಯಸ್ಫೂರ್ತಿಯಲ್ಲಿ ನನ್ನ ಯೋಗದಿಂದ ದೋಷವಿದ್ದಂತೆ ಕಂಡುಬಂದರೂ, ಆ ಸತ್ಯಸ್ಫೂರ್ತಿಯು ವಿದಾರಣ್ಯ ಬಿರುದಿನಿಂದ ಒಪ್ಪುವ ಶ್ರೀ ಮಾಧವಾಚಾರ್ಯರದೆಂಬದನ್ನು ವಾಚಕರು ಸರ್ವಥಾ ಮರೆಯದೆ, ಈ ಕಾದಂಬರಿಯನ್ನು ಬರಿಯ ಕಾದಂಬರಿ ಎಂಬ ದೃಷ್ಟಿಯಿಂದ ಬಡಬಡ ಓದಿಬಿಡುವದಕ್ಕಿಂತ ಇದೊಂದು ಅಭ್ಯಾಸ ಮಾಡತಕ್ಕ ಪುಸ್ತಕವೆಂದು ವಿಚಾರಪೂರ್ವಕವಾಗಿ ಓದುವದು ಲಾಭಕರವಾಗಿರುವದು! ಪ್ರಿಯ ವಾಚಕರೇ, ಮಹಾತ್ಮರು ಪ್ರೇರಿಸುವದೆಂದರೆ, ಎದುರಿಗೆ ಕುಳ್ಳಿರಿಸಿಕೊಂಡು ಬರೆಸುವದಲ್ಲ, ''ನ ದೇವಾದಂಡಮಾದಾಯ ರಕ್ಷಂತಿ ಪಶುಪಾಲವತ್ । ಯಸ್ಯಾಮುಗ್ರಹಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿತಂ ॥'' ಎಂಬಂತೆ ಲೇಖಕನನ್ನು ಬುದ್ಧಿಯಿಂದ ಯೋಜಿಸುವದು!

ಹೀಗೆ ಮಾಧವಾಚಾರ್ಯರು ಪ್ರೇರಿಸಿದಂತೆ ಕಾದಂಬರಿಯನ್ನು ಬರೆದ ನಾನು ಮಾಧವಾಚಾರ್ಯರ ಯೋಗ್ಯತೆಯನ್ನು ವರ್ಣಿಸಲು ಸರ್ವಥಾ ಸಮರ್ಥನಲ್ಲ; ಆದರೂ ಈ ಕಾದಂಬರಿಯ ಕಟ್ಟಕಡೆಯ ಎರಡನೆಯ ಭಾಗದ 29ನೆಯ ''ಮಹಾತ್ಮರ ಭವಿಷ್ಯ ಕಥನ''ವೆಂಬ ಪ್ರಕರಣದಲ್ಲಿ ಅವರ ಯೋಗ್ಯತೆಯನ್ನು ಕುರಿತು ಅವರು ಪ್ರೇರಿಸಿದಂತೆ ಸ್ವಲ್ಪದರಲ್ಲಿ ಬರೆದಿರುವೆನು. ನಮ್ಮ ಸದ್ಗುರುಮಾಸಪತ್ರಿಕೆಯಲ್ಲಿ ಪ್ರಕರಣಶಃ ಬರುತ್ತಿದ್ದ ಈ ಕಾದಂಬರಿ ಯನ್ನು ಓದುತ್ತ ಬಂದಿದ್ದ ಎಷ್ಟೋ ಸಹೃದಯವಾಚಕರು ಆಶ್ಚರ್ಯದಿಂದ ನನ್ನನ್ನು ಕುರಿತು–''ಮಾಧವಾಚಾರ್ಯರು ಹೀಗೆಯೇ ಇದ್ದರೆಯೆ? ವಿರೂಪಾಕ್ಷಾರ್ಯ ಮೊದಲಾದ ಪಾತ್ರಗಳೆಲ್ಲ ನಿಜವಾಗಿಯೇ ಆಗಿನ ಕಾಲದಲ್ಲಿ ಇದ್ದವೆಯೇ ಇದಕ್ಕೆ ಆಧಾರವೇನು?'' ಇತ್ಯಾದಿ ಪ್ರಶ್ನೆಗಳನ್ನು ಕೌತುಕದಿಂದ ಕೇಳುವಾಗ ನನ್ನ ಹೃದಯವು ಆನಂದದಿಂದ ಉಕ್ಕುತ್ತಲಿತ್ತು. ಆಗ ನಾನು ಮಹಾತ್ಮರಾದ ಆಚಾರ್ಯರನ್ನು ಭಕ್ತಿಯಿಂದ ಮನಸಾ ವಂದಿಸಿ, ಹೀಗೆ ಕೇಳುವವರನ್ನು ಕುರಿತು–''ಪುಣ್ಯವಂತರೇ, ನಾನೂ ನಿಮ್ಮ ಕಾಲದವನೇ; ಅಂದಬಳಿಕ ಈಗ 600 ವರ್ಷಗಳ ಹಿಂದೆ ಆಗಿಹೋಗಿರುವ ಮಾಧವಾಚಾರ್ಯರನ್ನು ನಿಮ್ಮಂತೆ ನಾನೂ ಕಂಡವನಲ್ಲ, ಹೀಗಿರುವಾಗ, ಅವರನ್ನು ಕಂಡವರಾಗಲಿ, ಸ್ವತಃ ಅವರೇ ಆಗಲಿ ಆಗಿನ ಪ್ರಸಂಗವನ್ನು ಕುರಿತು ನನ್ನನ್ನು ಪ್ರೇರಿಸದಿದ್ದರೆ ನಾನಾದರೂ ಏನು ಬರೆಯಬೇಕು? ಆದ್ದರಿಂದ ಪ್ರತ್ಯಕ್ಷ ಮಾಧವಾಚಾರ್ಯರೇ ಕರುಣಿಸಿ ಪ್ರೇರಕರಾಗಿ ನನ್ನ ಕೈಯಿಂದ ಈ ಕಾದಂಬರಿಯನ್ನು ಬರೆಸಿರುವದರಿಂದ, ಇದರ ವಿಷಯವಾಗಿ ಕನ್ನಡಿಗರು ನೀವು ಸರ್ವಥಾ ಅವಿಶ್ವಾಸಪಡತಕ್ಕದ್ದಲ್ಲ. ಕನ್ನಡಿಗರನ್ನು ಹಿಂದಕ್ಕೆ ಉದ್ಧರಿಸಿದ ಮಹಾತ್ಮರಾದ ಆ ಮಾಧವಾಚಾರ್ಯರು ಈಗಾದರೂ ಕನ್ನಡಿಗರೊಡನೆ ಇಡಿಯ ಭರತ ಭೂಮಿಯನ್ನೇ ಜಾಗ್ರತಗೊಳಿಸುವದಕ್ಕಾಗಿ ನನ್ನ ಮುಖಾಂತರ ಈ ಕಾದಂಬರೀರೂಪದಿಂದ ಬೋಧಿಸಿರುವರೆಂದು ತಿಳಿದು ನೀವು ಜಾಗ್ರತರಾಗತಕ್ಕದ್ದು. ಈ ಕಾದಂಬರಿಯೊಳಗಿನ ಮುಖ್ಯ ಮುಖ್ಯ ಪಾತ್ರಗಳು ನಿಜವೆಂಬ ಬಗ್ಗೆ, ಹಾಗು

ಮಾಧವಾಚಾರ್ಯರ ಸುವರ್ಣವೃಷ್ಟಿಯೇ ಮೊದಲಾದ ದೈವೀಸಹಾಯದಿಂದ ಹುಕ್ಕ–ಬುಕ್ಕರು, ವಿಜಯನಗರದ ರಾಜ್ಯವನ್ನು ಸ್ಥಾಪಿಸಿದರೆಂಬ ಬಗ್ಗೆ ಇತಿಹಾಸವೂ, ಆಖ್ಯಾಯಿಕೆಯೂ, ದಂತಕತೆಗಳೂ, ತಾಮ್ರ ಪಟ–ಶಿಲಾಸನಗಳೂ ಸಾಕ್ಷಿಗಳಾಗಿರುವವು. ಅಂದಬಳಿಕ ಒಂದು ಅಂಕಡೊಂಕ ಕಲ್ಲಿಗೆ ದೇವರೆಂದು ಹೆಸರಿಟ್ಟ ಮಾತ್ರದಿಂದ ಅದರ ಔಪಾಸನೆಮಾಡಿ ಉದ್ಧೃತರಾಗುವ ಭಾವಿಕ ಶಿಖಾಮಣಿಗಳಾದ ವೈದಿಕರಿಗೆ ನಮಗೆ ಮಾಧವಾಚಾರ್ಯರ ಈ ಕಾಂದಬರೀರೂಪ ಅಂತಃಪ್ರೇರಣೆಯ ಬಗ್ಗೆ ಇದಕ್ಕೂ ಹೆಚ್ಚಿಗೆ ಆಧಾರವೇತಕ್ಕೆ ಬೇಕು?

ಈ ಕಾದಂಬರಿಯಲ್ಲಿ ಶ್ರೀ ಮಾಧವಾಚಾರ್ಯ, ಶ್ರೀ ವಿರೂಪಾಕ್ಷರ್‍ಯ, ಕಾಸಿಮುಖಾನ, ಮಾದಿಗರ ದುರಗಪ್ಪ ಎಂಬ ನಾಲ್ಕು ಪಾತ್ರಗಳನ್ನು ಯೋಜಿಸಿರುವದರಲ್ಲಿ ಲೋಕಸಂಗ್ರಹ ಸರ್ವಸ್ವವು ತೋರಿಸಲ್ಪಟ್ಟಿರುವದು! ಹಿಂದಕ್ಕೆ ನಾನು ಸಣ್ಣವನಿದ್ದಾಗ ಒಬ್ಬರು ಒಂದು ಭಾವಣಿಯಲ್ಲಿ– ''ಮುಸಲ್ಮಾನ, ಜಂಗಮ, ಬ್ರಾಹ್ಮಣ, ಒಬ್ಬ ಹೊಲೆಯ ನಾಲ್ವರು ಜತ್ತಾ'' ಎಂದು ಹೇಳಿದ್ದು ನನ್ನ ಸ್ಮರಣದಲ್ಲಿರುವದು. ಈ ನಾಲ್ವರು ಕೂಡಿ ಒಂದು ಮಹಾ ಕಾರ್ಯ ಮಾಡಿದರೆಂದು ಆ ಭಾವಣಿಯಲ್ಲಿ ಹೇಳಿತ್ತು, ಬಾಲ್ಯದಲ್ಲಿಯ ನನ್ನ ಈ ಸ್ಮರಣವು ಜಗತ್ತನ್ನೇ ಸಂಗ್ರಹಿಸಲು ಸಾಧನವಾಗಿ ಈ ಕಾದಂಬರಿ ಬರೆಯುವಾಗ ಪರಿಣಮಿಸಿದ್ದು ಪರಮಾಶ್ಚರ್ಯವೇ ಸರಿ! ಈ ನಾಲ್ಕು ಪಾತ್ರಗಳ ಯೋಗದಿಂದ ಜಗತ್ತಿನ ಸಂಗ್ರಹವನ್ನೇ ಶ್ರೀ ಮಾಧವಾಚಾರ್ಯರು ಈ ಕಾದಂಬರಿಯಲ್ಲಿ ಮಾಡಿ ತೋರಿಸಿರುವದನ್ನು ಮರ್ಮಜ್ಞ ವಾಚಕರು ಅರಿತುಕೊಳ್ಳಬಹುದು. ವೈದಿಕರಾದ ನಮ್ಮ ದೃಷ್ಟಿಯಿಂದ ಜಗತ್ತಿನ ಜನರಲ್ಲಿ ವೈದಿಕ, ಅವೈದಿಕ ಎಂಬ ಎರಡೇ ವರ್ಗಗಳಾಗುವವು. ವೈದಿಕರೆಂದರೆ, ಸಾಂಗೋಪಾಂಗವಾಗಿಯಾಗಲಿ, ಅಂಗವಾಗಿಯಾಗಲಿ ವೇದವನ್ನು ಮನ್ನಿಸಿ, ಯಾವದೊಂದು ವೇದೋಕ್ತ ದೇವತೆಯನ್ನು ಪೂಜಿಸುವವರೆಂದು ಶ್ರೀ ಮಾಧವಾಚಾರ್ಯರು ಮುಂದೆ ಈ ಕಾದಂಬರಿಯಲ್ಲಿಯೇ ಪ್ರಸಂಗವಶಾತ್ ನಿರೂಪಿಸಿರುವರು. ಈ ವೈದಿಕರಲ್ಲಿ ಶ್ರುತಿ–ಸ್ಮೃತಿ–ಪುರಾಣೋಕ್ತವಾದ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರ ಎಂಬ ನಾಲ್ಕು ವರ್ಣಗಳನ್ನೂ, ಬ್ರಹ್ಮಚರ್ಯ–ಗೃಹಸ್ಥ–ವಾನಪ್ರಸ್ಥ–ಸನ್ಯಾಸ ಎಂಬ ನಾಲ್ಕು ಆಶ್ರಮಗಳನ್ನೂ ಮನ್ನಿಸುವವರು ಚತುರ್ವರ್ಣಾತ್ಮಕ ವೈದಿಕರೆನಿಸುವರು. ಹೀಗೆ ವರ್ಣಾಶ್ರಮಗಳನ್ನು ಪಾಲಿಸದೆ ತತ್ವತಃ ಒಂದೇ ವರ್ಣವನ್ನು ಪಾಲಿಸಿ, ತದ್ಭಿನ್ನವಾದ ಆಚರಣೆಗಳನ್ನು ಬಳಿಕೆಯಲ್ಲಿ ತಂದುಕೊಂಡವರು ಏಕವರ್ಣಾತ್ಮಕ ವೈದಿಕರು. ಹೀಗೆ ವೈದಿಕರಲ್ಲಿ ಎರಡು ವರ್ಗಗಳಾಗುತ್ತಿದ್ದು, ಮೊದಲಿನ ಚತುರ್ವರ್ಣಾತ್ಮಕ ವೈದಿಕರನ್ನು ತೋರಿಸಲಿಕ್ಕೆ ಶ್ರೀಮಾಧವಾಚಾರ್ಯರೆಂಬ ಬ್ರಾಹ್ಮಣರೂ, ಎರಡನೆಯ ಏಕವರ್ಣಾತ್ಮಕ ವೈದಿಕರನ್ನು ತೋರಿಸಲಿಕ್ಕೆ ಶ್ರೀ ವಿರೂಪಾಕ್ಷಾರ್ಯರೆಂಬ ಜಂಗಮರೂ ಈ ಕಾದಂಬರಿಯಲ್ಲಿ ಯೋಜಿಸಲ್ಪಟ್ಟಿರುವರು. ಇನ್ನು ಅವೈದಿಕ ವರ್ಗವನ್ನು ತೋರಿಸಲಿಕ್ಕೆ ಕಾಸಿಮುಖಾನನೆಂಬ ಮುಸಲ್ಮಾನನ ಯೋಜನೆಯಾಗಿದ್ದು ಈ ಮುಸಲ್ಮಾನರಂತೆ ಪಾರಶಿ, ಕ್ರಿಶ್ಚನ್ ಮೊದಲಾದವರೆಲ್ಲ ಅವೈದಿಕ ವರ್ಗದಲ್ಲಿ ಬರುವರೆಂಬದರ ದಿಗ್ದರ್ಶನ ಮಾಡಿದೆ. ಇನ್ನು ನಾಲ್ಕನೆಯ ಪಾತ್ರವು ಮಾದಿಗರ ದುರುಗಪ್ಪನದು. ದೇಶಾಭಿಮಾನವಿರುವವರೆಗೆ ಯಾವ ಧರ್ಮದವರೇ ಆಗಲಿ, ತಮ್ಮ ತಮ್ಮ ಧರ್ಮದಂತೆ ವಿಧಿ–ನಿಷೇಧಗಳನ್ನು ಆಚರಣೆಯಲ್ಲಿ ತೋರಿಸಬೇಕಾಗಿರುವದರಿಂದ

ಸ್ಥಾಪಿತವಾಗುವ ಒಂದಿಲ್ಲೊಂದು ಬಗೆಯ ಅಸ್ಪೃಶ್ಯತಾತತ್ವವನ್ನು ಆ ಪಾತ್ರವು ತೋರಿಸುವದು. ಎಡಗೈಯು ದೇಹಭಾಗವಾಗಿದ್ದರೂ ಮಲಕ್ಷಾಲನರೂಪವಾದ ತನ್ನ ಕರ್ತವ್ಯ ಮಾಡಿದಾಗ, ಅದು ಶುದ್ಧವಾಗುವವರೆಗೆ ಅನ್ಯಾವಯುವಗಳಿಗೆ ಅಸ್ಪೃಶ್ಯವಾಗಿರುವಂತೆ, ಸೂಕ್ಷ್ಮ ವಿಚಾರಮಾಡಿದರೆ ಬರಿಯ ಮನುಷ್ಯರಲ್ಲಿಯೇ ಅಲ್ಲ, ಈ ವಿಧಿ–ನಿಷೇಧದ್ಯೋತಕವಾದ ಅಸ್ಪೃಶ್ಯತಾತತ್ವವು ಸ್ಥೂಲ–ಸೂಕ್ಷ್ಮ ಮಾನದಿಂದ ಪ್ರಾಣಿಮಾತ್ರಗಳಲ್ಲಿಯೂ ಇರುವದೆಂದು ವಿಚಾರಪರರು ಒಪ್ಪಿಕೊಳ್ಳಬೇಕಾಗುವದು. ಒಟ್ಟಿಗೆ ಮಾನವಜಾತಿಯಲ್ಲಿ ವೈದಿಕರಾದ ನಮ್ಮ ದೃಷ್ಟಿಯಿಂದ ವೈದಿಕ, ಅವೈದಿಕ, ಅಸ್ಪೃಶ್ಯ ಎಂಬ ಮೂರು ವರ್ಗದ ಜನರು ಇರುತ್ತಿದ್ದು ವೈದಿಕರಲ್ಲಿಯ ಎರಡು ವರ್ಗಗಳನ್ನು ಹಿಡಿದರೆ ಮೇಲೆ ಹೇಳಿದಂತೆ– ಮುಸಲ್ಮಾನ, ಜಂಗಮ, ಬ್ರಾಹ್ಮಣ, ಒಬ್ಬ ಹೊಲೆಯ ಈ ನಾಲ್ವರು ಜತ್ತಾದರೆ ಜಗತ್ತೇ ಜತ್ತಾದಂತಾಗುವದು! ಈ ನಾಲ್ಕು ವರ್ಗದ ಜನರು ಸ್ವರಾಜ್ಯಕ್ಕಾಗಿ ಹ್ಯಾಗೆ ಒಂದಾಗಬೇಕೆಂಬದನ್ನು ಈ ಕಾದಂಬರಿಯಲ್ಲಿ ಶ್ರೀ ಮಾಧವಾಚಾರ್ಯರು ತೋರಿಸಿರುವದನ್ನು ವಾಚಕರು ಮಾರ್ಮಿಕ ರೀತಿಯಿಂದ ಅರಿತು ಕೊಳ್ಳದಿದ್ದರೆ, ಮಹಾತ್ಮರಾದ ಮಾಧವಾಚಾರ್ಯರು ಈ ಕಾದಂಬರಿಯನ್ನು ಬರೆಸಿದ್ದೂ ಪಾಮರನಾದ ನಾನು ಬಹು ಕಷ್ಟಬಟ್ಟು ಬರೆದದ್ದೂ ವಾಚಕರು ''ಕಾದಂಬರಿಯು ಬಲುಸವಿ'' ಎಂದು ಶ್ಲಾಘಿಸಿದ್ದೂ ವ್ಯರ್ಥವೇ ಸರಿ!

ಇಂಥ ಪ್ರಭಾವಶಾಲಿಗಳಾದ ಆಚಾರ್ಯರು ಈಗ ೬೦೦ ವರ್ಷಗಳ ಹಿಂದೆ ತಮ್ಮ ಅಗಾಧ ತಪಸ್ಸಾಮರ್ಥ್ಯದಿಂದ ಲೋಕಸಂಗ್ರಹಮಾಡಿ ಸ್ವರಾಜ್ಯವನ್ನು ಸ್ಥಾಪಿಸಿದ ಸಂಬಂಧದಿಂದ ಎರಡು ಮತಗಳಿರುವವು. ಆಚಾರ್ಯರು ಗೃಹಸ್ಥಾಶ್ರಮಿಗಳಾಗಿ ಸ್ವರಾಜ್ಯ ಸ್ಥಾಪಿಸಿ ಕುಲಗುರು ಪದವಿಯನ್ನೂ, ಮಂತ್ರಿಪದವಿಯನ್ನೂ ಹೊಂದಿ, ಸಂಗಮ, ಹುಕ್ಕ, ಬುಕ್ಕ ಎಂಬ ಮೂವರು ಅರಸರ ಸಂಪೂರ್ಣ ಆಳಿಕೆಯ ಕಾಲದಲ್ಲಿ ಸ್ವರಾಜ್ಯಸೂತ್ರಗಳನ್ನೂ, ಧರ್ಮಸೂತ್ರಗಳನ್ನೂ ಅಲ್ಲಾಡಿಸಿ ಆಮೇಲೆ ಆಶ್ರಮ ಗ್ರಹಣ ಮಾಡಿ ಶ್ರಿಂಗೇರಿಯ ಶ್ರೀಜಗದ್ಗುರು ಪೀಠವನ್ನು ಅಲಂಕರಿಸಿದರೆಂಬದು ಒಂದು ಮತವು. ಸನ್ಯಾಸಿಗಳಾಗಿಯೇ ರಾಜ್ಯವನ್ನು ಸ್ಥಾಪಿಸಿದರೆಂಬದು ಎರಡನೆಯ ಮತವು. ಈ ಎರಡು ಮತಗಳಲ್ಲಿ ಆಚಾರ್ಯರು ಗೃಹಸ್ಥಾಶ್ರಮಿಗಳಾಗಿಯೇ ರಾಜ್ಯಸ್ಥಾಪನೆ ಮಾಡಿದರೆಂಬ ಮಾತು ಅತ್ಯಂತ ಸ್ಪಷ್ಟವಾಗಿರುವುದರಿಂದ, ಆಚಾರ್ಯರು ಸತ್ಯವಾದ ಅದೇ ಮತವನ್ನೇ ಈ ಕಾದಂಬರಿಯಲ್ಲಿ ಸ್ವೀಕರಿಸಲು ನನ್ನನ್ನು ಪ್ರೇರಿಸಿದರು. ಆ ಮಹಾತ್ಮರ ಪ್ರೇರಣೆಯು ಸತ್ಯವಾದದ್ದೆಂಬದಕ್ಕೆ ಮೂರು ಸಾಕ್ಷಿಗಳಿರುವವು–ವೈದಿಕ ಧರ್ಮದ ಬಿಗಿಯಾದ ನಿರ್ಬಂಧಪಾಲನದ ಜವಾಬದಾರಿಯು ಒಂದನೆಯ ಕಾರಣವು; ಆಚಾರ್ಯಕೃತ ವಿವಿಧ ಗ್ರಂಥಗಳಲ್ಲಿ ಗೃಹಸ್ಥಾಶ್ರಮ–ಸನ್ಯಾಸಾಶ್ರಮಗಳೆರಡಕ್ಕೂ ಸಂಬಂಧಿಸಿ ಆಚಾರ್ಯರ ಹೆಸರುಗಳ ಉಲ್ಲೇಖವಿರುವದು ಎರಡನೆಯ ಕಾರಣವು; ಅವರು ಗೃಹಸ್ಥಾಶ್ರಮಿಗಳಾಗಿಯೇ ಮಂತ್ರಿಗಳೂ, ಕುಲಗುರುಗಳೂ ಆಗಿದ್ದರೆಂಬ ಸಂಬಂಧದಿಂದ ಅವರದೇ ಸ್ವಪ್ರೋಕ್ತಿಯಿರುವದು ಮೂರನೆಯ ಸಾಕ್ಷಿಯು. ಈ ಸಾಕ್ಷಿಗಳ ವಿವರಣೆಯನ್ನು ಅಚ್ಚುಕಟ್ಟಿನಲ್ಲಿ ಮಾಡೋಣ.

(೧) ವರ್ಣಾಶ್ರಮ ಧರ್ಮಪಾಲನದಲ್ಲಿ ವ್ಯತ್ಯಾಸವನ್ನುಂಟುಮಾಡುವದು ನರಕ ಸಾಧನವೆಂದು ನಮ್ಮ ವೈದಿಕ ಧರ್ಮವು ಶಾಸನ ಮಾಡುವದನ್ನು ಬರೆದು ತಿಳಿಸುವ ಕಾರಣವಿಲ್ಲ;

ಅಂದಬಳಿಕ ಆಚಾರ್ಯಪದವಿಯನ್ನು ಹೊಂದಿ ಲೋಕವಿಖ್ಯಾತರಾದ ಮಾಧವ ಮುನಿಗಳು– "ಆಚಿನೋತಿಚ ಶಾಸ್ತ್ರಾರ್ಥಂ ಆಚಾರೇ ಸ್ಥಾಪಯತ್ಯಪಿ । ಸ್ವಯಮಪ್ಯಾಚರೇದ್ಯಸ್ತು ಸ ಆಚಾರ್ಯ ಇತಿ ಸ್ಮೃತಃ॥" ಎಂದು ಆಚಾರ್ಯ ಶಬ್ದದ ನಿರ್ವಚನವಿರುವಾಗ ತಾವು ಸರ್ವಸಂಗ ಪರಿತ್ಯಾಗರೂಪ ಸನ್ಯಾಸಗ್ರಹಣಮಾಡಿ, ಸರ್ವಸಂಗ ನಿಮಗ್ನತೆಯ ರಾಜಕಾರಣವನ್ನು ನಡೆಸಿದರೆಂಬದು ಕೇವಲ ಆಚಾರ್ಯರ ಪವಿತ್ರತರ ಆಚರಣೆಗೇ ಅಲ್ಲ, ನಮ್ಮ ಶ್ರೇಷ್ಠ ವೈದಿಕ ಧರ್ಮ ಪದ್ಧತಿಗೇ ಕಲಂಕವನ್ನುಂಟುಮಾಡುವ ಮಾತಾಗಿರುವದು! ಆಶ್ರಮವು ಸನ್ಯಾಸವು, ಆಚರಣೆಯು ಗೃಹಸ್ಥಾಶ್ರಮದ್ದು, ಇಂಥ ವ್ಯತ್ಯಾಸವನ್ನು ಜಗತ್ತಿಗೆ ತೋರಿಸಿ ಭ್ರಷ್ಟ ಸಂಪ್ರದಾಯವನ್ನು ಬಳಿಕೆಯಲ್ಲಿ ತರುವ ನಾಸ್ತಿಕರು ಜಗದ್ಗುರು ಪೀಠವನ್ನು ಅಲಂಕರಿಸಲಿಕ್ಕೆ ಈಗಿನ ಉಚ್ಛೃಂಖಲಾಚರಣೆಯ ನಾಸ್ತಿಕ ಕಾಲದಲ್ಲಿಯಲ್ಲ, ಈಗ ೬೦೦ ವರ್ಷಗಳ ಹಿಂದೆ ಯೋಗ್ಯರೆನಿಸಿರಬಹುದೋ? ಆಚಾರ್ಯರು ಮಂತ್ರಿಗಳಾಗಿರುವಾಗ ಸ್ವತಃ ಗೋಮಾಂತಕದ ಸೀಮೆಗೆ ದಂಡೆತ್ತಿಹೋಗಿ ಅದನ್ನು ಆಕ್ರಮಿಸಿದ್ದ ಮುಸಲ್ಮಾನರನ್ನು ಓಡಿಸಿ ಅಲ್ಲಿಯ ಪೂರ್ವದ ಸಪ್ತನಾಥಾದಿಕರನ್ನು ಪುನಃ ಸ್ಥಾಪಿಸಿದರೆಂಬದಕ್ಕೆ ಕೆಳಗಿನ ಶ್ಲೋಕವು ಆಧಾರವಾಗಿದೆ.

> ಶ್ಲೋ–ಆಶಾಂತವಿಶ್ರಾಂತ ಯಶಾಃಸಮಂತ್ರೀ ದಿಶೋಜಿಗೀಷುರ್ಮಹತಾಬಲೇನ।
> ಗೋವಾಭಿಧಾಂ ಕೌಂಕಣರಾಜಧಾನಿಮನ್ಯೇನ ರುಣದರ್ಣವೇನ ॥೧॥
>
> ಪ್ರತಿಷ್ಠಿತಾಸ್ತತ್ರ ತುರುಷ್ಕಸಂಧಾನುಸ್ಸಾದ್ಯದೋಷ್ಣಾ ಭುವನೈಕವೀರಃ ।
> ಉನ್ಮೂಲಿತಾನಾಂ ಮಕರೋತ್ಪ್ರತಿಷ್ಠಾಂ ಶ್ರೀ ಸಪ್ತನಾಥಾದಿ ಸುಧಾಭುಜಾಂಯಃ ॥೨॥

ಅಂದಬಳಿಕ ಯತ್ಯಾಶ್ರಮಿಗಳಾಗಿ ಆ ಮಹಾತ್ಮರು ಯುದ್ಧದಂಥ ಹಿಂಸಾಕರ್ಮದಲ್ಲಿ ಪ್ರತ್ಯಕ್ಷ ಸೇರಿರಬಹುದೆ? ಶಿವಶಿವ! ಸನ್ಯಾಸಿಗಳಾಗಿ ಬಡ್ಡಿಯ ವ್ಯವಹಾರಮಾಡಲಿಕ್ಕೆ, ಸನ್ಯಾಸಿಗಳಾಗಿ ವ್ಯಾಜ್ಯ ಬಳಿಸಿ ಕೋರ್ಟು ಕಚೇರಿಗಳನ್ನು ಹತ್ತಲಿಕ್ಕೆ, ಸನ್ಯಾಸಿಗಳಾಗಿ ಗೃಹಸ್ಥಾಶ್ರಮಿಗಳಿಗಿಂತಲೂ ಹೆಚ್ಚು ಸಂಸಾರಾಸಕ್ತರಾಗಿ ಮೆರೆಯಲಿಕ್ಕೆ ಈಗಿನ ಆಶ್ರಮವೇಷಧಾರಣದ ಧರ್ಮಹೀನ ಕಾಲವೇ?

(೨) ಆಚಾರ್ಯರು ಸರ್ವಶಾಸ್ತ್ರಗಳ ಮೇಲೆ ಗ್ರಂಥಗಳನ್ನು ಬರೆದಿರುವರೆಂದು ಖ್ಯಾತಿಯಿರುವದು; ಆದರೆ ಪ್ರವೃತ್ತಿಪರ ಗ್ರಂಥಗಳಲ್ಲಿ "ಸಾಯಣ ಮಾಧವ" "ಪರಾಶರ ಮಾಧವೀಯ" "ಮಾಧವನಿದಾನ" ಇತ್ಯಾದಿ ಗೃಹಸ್ಥಾಶ್ರಮದ ಹೆಸರುಗಳ ಉಲ್ಲೇಖವಿರುವದನ್ನೂ, ಪಂಚದಶಿಯಂಥ ನಿವೃತ್ತಿಪರ ಗ್ರಂಥಗಳಲ್ಲಿ "ವಿದಾರಣ್ಯ" ಎಂಬ ಹೆಸರಿನ ಉಲ್ಲೇಖವಿರುವದೂ ದುರ್ಲಕ್ಷಿಸತಕ್ಕ ಸಂಗತಿಗಳಲ್ಲ. ಅರಣ್ಯ, ಪುರಿ, ತೀರ್ಥ, ಇಂದ್ರ, ಸರಸ್ವತಿ, ಭಾರತಿ ಮುಂತಾದವುಗಳು ಯತಿವಾಚಕ ಶಬ್ದಗಳಾಗಿದ್ದು, ಗೃಹಸ್ಥಾಶ್ರಮಿಗಳಾಗಿದ್ದಾಗ ಮಾತ್ರ ಬರೆದ ವೇದಾದಿ ಪ್ರವೃತ್ತಿಪರ ಗ್ರಂಥಗಳಲ್ಲಿ ಅವುಗಳ ಉಲ್ಲೇಖವಾಗದಿರುವದೂ ನೆನಪಿನಲ್ಲಿಡತಕ್ಕ ಮಾತಾಗಿರುವದು. ಇದರಿಂದ ಮಹಾತ್ಮರಾದ ಮಾಧವಾಚಾರ್ಯರು ಸನ್ಯಾಸಿಗಳಾಗಿ ಗೃಹಸ್ಥರಂತೆ ಆಚರಿಸಲಿಲ್ಲವೆಂಬದಿಷ್ಟೇ ಅಲ್ಲ, ಸನ್ಯಾಸಾಶ್ರಮಿಗಳಿದ್ದಾಗ ಪ್ರವೃತ್ತಿ ಪರ ಗ್ರಂಥಗಳನ್ನೂ, ಗೃಹಸ್ಥಾಶ್ರಮಿಗಳಿದ್ದಾಗ ನಿವೃತ್ತಿಪರ ಗ್ರಂಥಗಳನ್ನೂ ಕೂಡ ಬರೆಯಲಿಲ್ಲೆಂಬ ಮಾತು ಮನಸ್ಸಿನಲ್ಲಿ ಬಂದು ಆಚಾರ್ಯರ ವಿಷಯದ ನಮ್ಮ ಭಕ್ತಿಯು ಮತ್ತಿಷ್ಟು ಹೆಚ್ಚಬಹುದಾಗಿದೆ. ಅವರು

ಗೃಹಸ್ಥಾಶ್ರಮಿಗಳಾಗಿ ಬರೆದ ಗ್ರಂಥಗಳು—ಚತುರ್ವೇದ ಭಾಷ್ಯ, ಐತರೇಯ—ತಾಂಡ್ಯಾದಿ ಬ್ರಾಹ್ಮಣಭಾಷ್ಯ, ಪರಾಶರಸ್ಮೃತಿಭಾಷ್ಯ, ಜೈಮಿನೀಯ ನ್ಯಾಯ ಮಾಲಾವಿಸ್ತರ, (ಶ್ರೌತ) ಸರ್ವದರ್ಶನ ಸಂಗ್ರಹ, ಮಾಧವೀಯ ಧಾತು ವೃತ್ತಿ (ವ್ಯಾಕರಣ) ಕಾಲಮಾಧವ, (ಧರ್ಮಶಾಸ್ತ್ರ) ಮಾಧವನಿದಾನ, (ವೈದ್ಯ) ಶಂಕರ ದಿಗ್ವಿಜಯ, (ಕಾವ್ಯ) ಇತ್ಯಾದಿಗಳು. ಇವರು ಗೃಹಸ್ಥಾಶ್ರಮದಲ್ಲಿ ಬರೆದ ಇಂಥ ಗ್ರಂಥಗಳ ಮಂಗಲಾಚರಣದಲ್ಲಿ—''ವಾಗರ್ಥಾಶಾಧಾಃ'' ಎಂಬ ಶ್ಲೋಕವು ರಾಜಶಾಸನ ಮುದ್ರೆಯಂತೆ ಪ್ರಾಯಃ ಇದ್ದೇ ಇರುತ್ತದೆ. ಈ ಗ್ರಂಥದಲ್ಲಿ ''ಮಾಧವಾರ್ಯ'' ''ಮಾಧವಾಚಾರ್ಯ'' ''ಮಾಧವಾಮಾತ್ಯ'' ಇತ್ಯಾದಿ ಹೆಸರುಗಳಿರುತ್ತವೆ. ''ಪಂಚಾಗ್ನಿನಾಮಾಧವೇನ'' ಎಂಬ ಉಕ್ತಿಯು ಮಾಧವಾಚಾರ್ಯ ಗೃಹಸ್ಥಾಶ್ರಮವನ್ನು ಸ್ಪಷ್ಟವಾಗಿ ತೋರಿಸುತ್ತದೆ, ಇದರಂತೆ ಇವರು ಯತ್ಯಾಶ್ರಮಗ್ರಹಣ ಮಾಡಿದ ನಂತರ—ಜೀವನ್ಮುಕ್ತಿವಿವೇಕ, ಅನುಭೂತಿಪ್ರಕಾಶ, ದಶೋಪನಿಷದ್ದೀಪಿಕಾ, ಬ್ರಹ್ಮಗೀತಾ, ಪಂಚದಶೀ, ಅಪರೋಕ್ಷಾನುಭೂತಿಟೀಕಾ, ವಿವರಣಪ್ರಮೇಹಸಂಗ್ರಹ ಇವೇ ಮೊದಲಾದವನ್ನು ಬರೆದಿರುವರು.

ದಾನಪ್ರತಿಗೃಹಾಧಿಕಾರವು ಗೃಹಸ್ಥಾಶ್ರಮಿಗಳಿರುವಂತೆ ಯತ್ಯಾಶ್ರಮಿಗಳಿರುವದಿಲ್ಲ; ಅಂದಬಳಿಕ ಮಾಧವಾಚಾರ್ಯರು ಮೇಲಿನ ಶ್ಲೋಕದಲ್ಲಿ ಹೇಳಿದಂತೆ ಗೋಮಾಂತಕ ಸೀಮೆಯನ್ನು ಗೆದ್ದಬಳಿಕ ಶಾಲಿವಾಹನಶಕೆ ೧೩೧೩ ಪ್ರಜಾಪತಿ ಸಂವತ್ಸರದ ವೈಶಾಖ ಕೃಷ್ಣ ಅಮಾವಾಸ್ಯಾ ಸೋಮವಾರ ಸೂರ್ಯಗ್ರಹಣದ ದಿವಸ, ಅಂದರೆ ಪೋರ್ತುಗಾಲದ ವಾಸ್ಕೋಡಿಗಾಮನು ಬರುವ ೧೦೭ ವರ್ಷಗಳ ಪೂರ್ವದಲ್ಲಿ ಕಂಚೋರ ಗ್ರಾಮದ ಸುತ್ತಲಿನ ೨೫ ಗ್ರಾಮಗಳನ್ನು ೨೫ ಜನ ಬ್ರಾಹ್ಮಣರಿಗೆ ಶಾಸನ ಪತ್ರಿಕಾಸಂಕಲ್ಪಪೂರ್ವಕ ದಾನಕೊಟ್ಟ ಉಲ್ಲೇಖವಿರುವದಿರಂದ, ಅವರು ಮಂತ್ರಿಗಳಾಗಿರುವಾಗ ಗೃಹಸ್ಥಾಶ್ರಮಿಗಳಿದ್ದರೆಂದು ಹೇಳಬೇಕಾಗುವದು.

(೩) ಪ್ರಿಯವಾಚಕರೇ, ಕುಲಗುರುಗಳೂ, ಮಂತ್ರಿಗಳೂ ಆದ ಮಾಧವಾಚಾರ್ಯರು ಗೃಹಸ್ಥಾಶ್ರಮಿಗಳೇ ಇದ್ದರೆಂಬ ಬಗ್ಗೆ ಮೂರನೆಯ ಮಾರ್ಮಿಕ ಸಾಕ್ಷಿಯನ್ನು ಕೊಟ್ಟು, ೬೦೦ ಪಾನಿನ ಕಾದಂಬರಿಯನ್ನು ಆಚಾರ್ಯರ ಪ್ರೇರಣೆಯಿಂದಲೇ ಆಗಲಿ, ಒಂದೇಸವನೆ ಬರೆದು ಬೇಸತ್ತಿದ್ದ ನಾನು ಈ ಪ್ರಸ್ತಾವನೆಯನ್ನು ಮುಗಿಸುವೆನು. ಆ ಸಾಕ್ಷಿಯೆಂದರೆ, ಈ ಕಾದಂಬರಿಯಲ್ಲಿ ಒಂದೆಡೆಗೆ ಉಲ್ಲೇಖಿಸಲಾಗಿರುವ ಸ್ವತಃ ಮಾಧವಾಚಾರ್ಯರೇ ರಚಿಸಿದ ಶ್ಲೋಕವು. ಅದನ್ನು ಇನ್ನೊಮ್ಮೆ ಇಲ್ಲಿ ಕೊಟ್ಟು, ಅದರ ರಹಸ್ಯಸ್ಫೋಟವನ್ನು ಸ್ವಲ್ಪದರಲ್ಲಿ ಮಾಡುವೆನು.

ಇಂದ್ರಸ್ಯಾಂಗಿರಸೋ, ನಲಸ್ಯ ಸುಮತಿಃ, ಶೈಬ್ಯಸ್ಯ ಮೇಧಾತಿಥಿಃ।
ಧೌಮ್ಯೋ ಧರ್ಮಸುತಸ್ಯ, ವೈನ್ಯನೃಪತೇಃ ಸ್ವೌಜಾ, ನಿಮೇರ್ಗೌತಮಃ॥
ಪ್ರತ್ಯಗ್ ದೃಷ್ಟಿರರೂಂಧತೀಸಹಚರೋ ರಾಮಸ್ಯಪುಣ್ಯಾತ್ಮನಃ।
ಯದ್ವತ್ತಸ್ಯ ವಿಭೋರಭೂತ್ ಕುಲಗುರುರ್ಮಂತ್ರಿ ತಥಾ ಮಾಧವಃ॥

ಈ ಶ್ಲೋಕದಲ್ಲಿ—ಇಂದ್ರನಿಗೆ ಬೃಹಸ್ಪತಿಯು, ನಲನಿಗೆ ಸುಮತಿಯು, ಶೈಬ್ಯನಿಗೆ ಮೇಧಾತಿಥಿಯು, ಧರ್ಮರಾಜನಿಗೆ ಧೌಮ್ಯನು, ಪೃಥುರಾಜನಿಗೆ ಸ್ವಾಜನು, ನಿಮಿಗೆ ಗೌತಮನು, ರಾಮನಿಗೆ ವಶಿಷ್ಠನು ಕುಲಗುರುವೂ, ಮಂತ್ರಿಯೂ ಆಗಿರುವಂತೆ, ಮಾಧವನು ಆ ವಿಭುವಿನ ಕುಲಗುರುವು, ಎಂದು ಹೇಳಿರುವದು. ಅಂದಬಳಿಕ ಬೃಹಸ್ಪತಿ, ಸುಮತಿ, ವಸಿಷ್ಠ ಮೊದಲಾದ ಬ್ರಾಹ್ಮಣರು ಕುಲಗುರು–ಮಂತ್ರಿಗಳಾಗಿರುವಾಗ ಗೃಹಸ್ಥಾಶ್ರಮಿಗಳಾಗಿದ್ದಂತೆ, ಮಾಧವ ಬ್ರಾಹ್ಮಣನೂ ಗೃಹಸ್ಥಾಶ್ರಮಿಯಾಗಿಯೇ ಇರಬೇಕು. ಯತ್ಯಾಶ್ರಮಿಗಳು ಮಂತ್ರಿಪದವಿಯಂಥ ಲೌಕಿಕ ಶಾಸನದ ಅಧಿಕಾರವನ್ನೂ, ಕುಲಗುರು ಪದವಿಯಂಥ ಧಾರ್ಮಿಕ ಶಾಸನದ ಅಧಿಕಾರವನ್ನೂ ನಡಿಸುವದು ಪ್ರಶಸ್ತವಲ್ಲವೆಂಬುದು ಒಪ್ಪತಕ್ಕ ಮಾತು.

ಪ್ರಿಯ ವಾಚಕರೇ, ಮಹಾತ್ಮರಾದ ಶ್ರೀ ಮಾಧವಾಚಾರ್ಯರು ತಮ್ಮ ತಪಃ ಪ್ರಭಾವದಿಂದ ಸುವರ್ಣವೃಷ್ಟಿಗರೆಸುವವರು; ಅಂಥ ತಪಸ್ವಿಗಳ ತಪಸ್ಸಿಗೆ ಪ್ರಸನ್ನರಾಗಿ ಕನ್ನಡಿಗರು ನೀವು ಸುವರ್ಣವೃಷ್ಟಿಗರೆಯುವವರು! ಇಂಥ ತಪಃಪ್ರಿಯರಾದ ನಿಮ್ಮಿಬ್ಬರ ಪ್ರಭಾವವನ್ನು ನಂಬಿ ನನಗಾಗಿರುವ ಹನ್ನೆರಡು ಸಹಸ್ರ ರೂಪಾಯಿ ಸಾಲವನ್ನು ತೀರಿಸಿ ಸ್ವತಂತ್ರನಾಗಿ ಪುನಃ ಸದ್ಗುರು ಮಾಸಪತ್ರಿಕೆಯನ್ನೂ, ಹೊಸ ಪದ್ಧತಿಯ ಸಂಸ್ಕೃತ ಪಾಠಶಾಲೆಯನ್ನೂ ಶ್ರೀ ಶೇಷಸದ್ಗುರುವಿನ ಕೃಪೆಯಿಂದ ಆರಂಭಿಸಬೇಕೆಂದು ಹವಣಿಸುತ್ತಿರುವ ಗಳಗನಾಥನು ನಾನು, ಬಹು ಶ್ರಮಬಟ್ಟು ಶ್ರೀ ಮಾಧವಮುನಿಯ ಪ್ರೇರಣೆ ಪಡೆದು ಈ ''ಮಾಧವಕರುಣಾವಿಲಾಸ''ವೆಂಬ ಕಾದಂಬರಿಯನ್ನು ಬರೆದು ಮುದ್ರಿಸಿ ನಿಮಗೊಪ್ಪಿಸಿರುವೆನು; ಆದರೆ ನನ್ನ ಆ ಸದ್ಧೇತು ಪೂರ್ವಕ ಹವಣಿಕೆಯನ್ನು ಕೊನೆಗಾಣಿಸುವ ಭಾರವು ಕನ್ನಡಿಗರಾದ ನಿಮ್ಮ ಮೇಲಿರುವದು; ಯಾಕಂದರೆ ಶ್ರೀ ಮಾಧವಮುನಿಯ ತಪೋರೂಪವು ಈ ಕಾದಂಬರಿಯಾಗಿದ್ದು, ಅದರ ಪ್ರತಿಫಲಕ್ಕಾಗಿ ಕರೆಯುವ ಸುವರ್ಣವೃಷ್ಟಿಯು ಕನ್ನಡಿಗರಾದ ನಿಮ್ಮದಾಗಿರುವುದು. ಅಂಥ ವೃಷ್ಟಿಯಿಂದ, ಶ್ರಾಂತ ಗಳಗನಾಥನು ಶಾಂತನಾಗುವ ಸುಯೋಗ ವನ್ನು ಶ್ರೀ ಶೇಷಸದ್ಗುರುರೂಪ ಮಾಧವಾಚಾರ್ಯರು, ಅಥವಾ ಮಾಧವಾಚಾರ್ಯ ರೂಪ ಶ್ರೀ ಶೇಷಸದ್ಗುರುವು ಕರುಣಿಸಿ ಒದಗಿಸಿಕೊಡಲೆಂದು ಸರ್ವಾತ್ಮನಾದ ಆ ಸದ್ಗುರುವನ್ನೇ ಪ್ರಾರ್ಥಿಸುವೆನು.

ಶಕೆ ೧೮೪೫ ಅಶ್ವೀನ ಶು॥ ೧೪ — ಕನ್ನಡಿಗರ ಸೇವಕ
ತಾ ೧೪–೧೦–೨೩ — ಗಳಗನಾಥ

# ಸರ್ವಜ್ಞ ವಿಷ್ಣುಶರ್ಮರು

ಮಹಾತ್ಮರ ತಪೋವನದ ಪುಣ್ಯಾಶ್ರಮವು. ಅದು ಮನುಷ್ಯ ವಸತಿಯಿಂದ ಅರಣ್ಯದಲ್ಲಿ ಬಹುದೂರ ಇದ್ದದ್ದರಿಂದ, ಅಲ್ಲಿ ಲೌಕಿಕ ವ್ಯವಹಾರದ ಆಡಂಬರಕ್ಕೆ ಆಸ್ಪದ ಇಲ್ಲದಾಗಿದೆ. ಅತಿಥಿಸತ್ಕಾರ, ಪಾಠಪ್ರವಚನಗಳು, ಗೋಸೇವೆ, ಭಗವದಾರಾಧನ, ನಿತ್ಯ ಕರ್ಮಾನುಷ್ಠಾನ ಮೊದಲಾದ ಪವಿತ್ರ ಸತ್ಕರ್ಮಗಳ ಅವಲೋಕನದಿಂದ ನೋಡುವವರ ಮನಸ್ಸು ಸುಪ್ರಸನ್ನವಾಗುತ್ತಲಿವೆ. ಅಲ್ಲಿಯ ಪರ್ಣಕುಟೀರಗಳು, ವಲ್ಕಲಗಳು, ಕೃಷ್ಣಾಜಿನಗಳು, ದರ್ಭಾಸನಗಳು ಆಶ್ರಮಸ್ಥರ ನಿಸ್ಪೃಹತೆಯನ್ನು ವ್ಯಕ್ತಮಾಡುತ್ತಲಿವೆ. ದಷ್ಟಪುಷ್ಟವಾಗಿದ್ದು, ಪೂಜೆಯ ಮಂಗಲದ್ರವ್ಯಗಳಿಂದ ಪುಣ್ಯಾಶ್ರಮದ ಶ್ರೇಷ್ಠ ಅಲಂಕಾರವಾಗಿ ಶೋಭಿಸಿ, ಅಲ್ಲಲ್ಲಿ ಮೆಲಕುಹಾಕುತ್ತ ಮಲಗಿರುವ ಗೋಗಳ ಹಿಂಡೂ, ಪುಟಿಚಂಡಿನಂಥ ಮೈಕಟ್ಟಿನಿಂದ ಪಳಪಳನೆ ಕಣ್ಣುಬಿಡುತ್ತ ನಿರ್ಭಯದಿಂದ ಸಂಚರಿಸುವ ಚಿಗರೆಗಳ ತಂಡವೂ, ತಪೋವನದಲ್ಲೆಲ್ಲ ಪ್ರತಿಧ್ವನಿಯುಂಟಾಗುತ್ತಿರಲು ಆನಂದದಿಂದ ಕುಣಿಕುಣಿದು ಕೇಕೆ ಹಾಕುವ ನವಿಲುಗಳ ಸಮೂಹವೂ ಆಶ್ರಮದ ಪವಿತ್ರತೆಯನ್ನೂ, ನಿರ್ಭಯತೆಯನ್ನೂ ಬೀರುತ್ತಲಿವೆ. ಅದರಂತೆ, ಮಂಜುಲ ಮೃದು ನುಡಿಗಳಿಂದ ಮನಸ್ಸನ್ನು ರಮಿಸುವ ಶುಕ–ಸಾರಿಕಾದಿ ಪಕ್ಷಿಗಳೂ, ಸ್ಥಾನಾಸ್ಥಾನವರಿತು ನಯಭಯದಿಂದ ನಡೆದುಕೊಳ್ಳುವ ವಾನರಾದಿ ಶಾಖಾಮೃಗಗಳೂ, ಇದು ನಮ್ಮ ಸಂಚಾರದ ಸ್ಥಳವಲ್ಲೆಂದು ವಿವೇಕದಿಂದ ಆಶ್ರಮಸ್ಥಾನದಿಂದ ದೂರ ದೂರದಲ್ಲಿ ಸಂಚರಿಸುತ್ತಿರುವ ವ್ಯಾಘ್ರಾದಿ ಕ್ರೂರ ಮೃಗಗಳೂ ಆಶ್ರಮಸ್ಥಾನದ ಸೌಜನ್ಯದ ಪ್ರಭಾವವನ್ನು ತೋರಿಸುತ್ತಲಿವೆ. ವಿವಿಧ ಹಾಗು ಸುಗಂಧಪುಷ್ಪಗಳ ಘಮಘಮಿಸುವ ಮಿಶ್ರಗಂಧವನ್ನು ಹೊರಲಾರದೆ ಮಾರುತನು ಮಂದವಾಗಿ ಸುಳಿಯುತ್ತ ಕುಡಿ ಚಿಗುರುಗಳನ್ನು ಮೆಲ್ಲನೆ ಅಲ್ಲಾಡಿಸುತ್ತ ಮೈಗೆ ಸುಖಕರವಾಗಿ ತೀಡುತ್ತಲಿದ್ದಾನೆ. ಫಲಭಾರದಿಂದ ಬಳುಕಿ, ಬಳಿಗೆ ಬಂದವರಿಗೆ ಫಲವೀಯಲು ವಿನಯದಿಂದ ಬಾಗಿರುವಂತೆ, ವಿವಿಧ ಫಲವೃಕ್ಷಗಳು ಮನೋಹರವಾಗಿ ಒಪ್ಪುತ್ತಲಿವೆ. ಇವೆಲ್ಲವುಗಳ ಯೋಗದಿಂದ ನೋಡುವವರಿಗೆ ಆ ಪುಣ್ಯಾಶ್ರಮವು ಆನಂದದ ಆಗರವಾಗಿ ತೋರುವುದರಲ್ಲಿ ಆಶ್ಚರ್ಯವಿಲ್ಲ.

ಒಂದು ದಿನ ಅರುಣೋದಯ ಸಮಯವು; ಆಶ್ರಮವನ್ನು ಒತ್ತಿ ಹರಿಯುವ ಗೋದಾವರಿಯ ಪ್ರವಾಹವು ಬೇಸಿಗೆಯಾದದ್ದರಿಂದ ಕೃಶವಾಗಿ ಸಾವಕಾಶ ಸಾಗಿದೆ. ಪಕ್ಷಿಗಳ ಕಿಲಿಕಿಲಿ ಧ್ವನಿಗೆ ಆರಂಭವಾಗಿರಲು, ಆಶ್ರಮಸ್ಥರಲ್ಲಿ ಕೆಲವರು ಗೋದಾವರಿಯ ಸ್ನಾನಮಾಡಿ

ಆಶ್ರಮವನ್ನು ಪ್ರವೇಶಿಸಿ ತಮ್ಮ ನಿತ್ಯಾಹ್ನಿಕದಲ್ಲಿ ತೊಡಗಿರುತ್ತಾರೆ. ಕೆಲವರು ಸ್ನಾನಮಾಡಿ ಆಶ್ರಮಕ್ಕೆ ಹೋಗುತ್ತಲಿದ್ದಾರೆ; ಕೆಲವರು ಸ್ನಾನಮಾಡುತ್ತಲಿದ್ದಾರೆ. ಬ್ರಾಹ್ಮಣ ಪತ್ನಿಯರು ಆಶ್ರಮ ಪ್ರದೇಶವನ್ನು ಉಡುಗಿ ಸಾರಿಸಿ ರಂಗವಲ್ಲಿಗಳನ್ನು ಹಾಕಿ ಮೈ ತೊಳೆದು ಮಂಗಳದ್ರವ್ಯ ಗಳಿಂದ ಅಲಂಕೃತರಾಗಿ, ಪತಿಗಳ ಪ್ರಾತಃಕಾಲದ ಕರ್ಮದ ಉಪಕರಣಗಳನ್ನು ಒದಗಿಸಿ ಕೊಡುತ್ತಲಿದ್ದಾರೆ. ಬ್ರಹ್ಮಚಾರಿಗಳು ಸಮಿತ್ತು–ದರ್ಭೆ ಮೊದಲಾದ ಸಾಧನಗಳನ್ನು ಒದಗಿಸಿಕೊಂಡು ಪ್ರಾತಃಸಂಧ್ಯೆ ಅಗ್ನಿಕಾರ್ಯಗಳನ್ನು ಮಾಡತೊಡಗಿರುತ್ತಾರೆ. ಬ್ರಾಹ್ಮಣ ಕುಮಾರಿಯರು ಹೆಳಲು ಹಾಕಿಕೊಂಡು ಮೈ ತೊಳೆದು ಸೌಭಾಗ್ಯ ದ್ರವ್ಯಗಳಿಂದ ಒಪ್ಪುತ್ತ ಹೂಗಳೆತ್ತುವುದು, ಮಾಲೆ ಹಾಕುವುದು, ದೀಪದಬತ್ತಿ ಗಳನ್ನು ಹಾಕಿಕೊಡುವುದು, ಆರತಿ ಬರೆಯುವುದು ಮೊದಲಾದ ಔಪಾಸನೆಯ ಕಾರ್ಯಗಳಲ್ಲಿ ತತ್ಪರತೆಯಿಂದ ತೊಡಗಿರುತ್ತಾರೆ. ಒತ್ತಟ್ಟಿಗೆ ಅಗ್ನಿಹೋತ್ರ ವ್ಯವಹಾರವು, ಮತ್ತೊತ್ತಟ್ಟಿಗೆ ದೇವತಾರ್ಚನೆಯ ಸಂಭ್ರಮವು, ಇನ್ನೊತ್ತಟ್ಟಿಗೆ ಗೋಸೇವೆಯ ಸಡಗರವು, ಬೇರೊತ್ತಟ್ಟಿಗೆ ಸತ್ಪುರುಷಾರಾಧನೆಯ ವೈಭವವು. ಎಲ್ಲ ಕಡೆಯಲ್ಲಿ ಅತಿಥಿಸತ್ಕಾರದ ತತ್ಪರತೆಯು ಏಕಸಮಯಾವಚ್ಛೇದದಿಂದ ಕಣ್ಣಿಗೆ ಬೀಳುತ್ತಲಿವೆ. ಆಗ ಪವಿತ್ರ ವೇದಘೋಷ, ಮಂಜುಲ ಘಂಟಾನಾದ, ವಿವಿಧ ಸಾತ್ವಿಕ ಮಂಗಲ ವಾದ್ಯಧ್ವನಿ, ಸುವಾಸಿನಿಯರ ಮಂಗಲಾರತಿಯ ಪದಗಳ ಮನೋಹರ ಆಲಾಪ ಇವು ಕೇಳುವವರ ಕಿವಿಗಳನ್ನು ಪವಿತ್ರ ಮಾಡುತ್ತ ದಿಕ್ಕುದಿಕ್ಕಿಗೆ ಹಬ್ಬುತ್ತಲಿವೆ. ಹೀಗಿರುವಾಗ ಸರ್ವಜ್ಞ ವಿಷ್ಣುಶರ್ಮರು ತಮ್ಮ ನಿತ್ಯಕರ್ಮಗಳನ್ನು ತೀರಿಸಿಕೊಂಡು ಮೂರುತಾಸು ಹೊತ್ತಾಗಿರಲು, ತಮ್ಮ ಪ್ರಿಯ ಶಿಷ್ಯನಾದ ಮಾಧವನನ್ನು ಕುರಿತು– ''ಮಾಧವ'' ಎಂದು ಕರೆದು ಏನೋ ಹೇಳುತ್ತಿದ್ದರು. ಅಷ್ಟರಲ್ಲಿ ಸೋಮೇಶ್ವರಾವಧಾನಿಗಳು ಬಂದು ಸರ್ವಜ್ಞರನ್ನು ನಮಸ್ಕರಿಸಿ ತಮ್ಮ ಆಸನದಲ್ಲಿ ಕುಳಿತುಕೊಳ್ಳಲು ಹೇಳುವುದು ಅಷ್ಟಕ್ಕೇ ನಿಂತಿತು.

ಆ ತಪೋಧನರು ಕುಳಿತುಕೊಂಡಿದ್ದ ಸ್ಥಳವು ಒಂದು ಪ್ರಶಸ್ತ ಪರ್ಣಕುಟೀರವಾಗಿತ್ತು. ಅಲ್ಲಿ ಸ್ವಚ್ಛ ಪ್ರಕಾಶವಿದ್ದು ದರ್ಭಾಸನ–ಕೃಷ್ಣಾಜಿನಗಳು ಯಥೇಚ್ಛವಾಗಿ ಹಾಸಿದ್ದವು; ಉಪವನದ ಸುಗಂಧವಾಯುವು ಕುಟೀರದಲ್ಲಿ ಯಥೇಚ್ಛ ಸುಳಿದಾಡಿ, ಕುಳಿತವರ ಮನಸ್ಸನ್ನು ಉಲ್ಲಾಸ ಗೊಳಿಸುತ್ತಿತ್ತು. ಅಲ್ಲಿ ದರ್ಭೆ, ಸಮಿತ್ತು, ಪುಷ್ಪ, ಅಕ್ಷತೆ ಮೊದಲಾದ ವೈದಿಕ ಕರ್ಮೋಪಯುಕ್ತ ವಸ್ತುಗಳ ಹೊರತು ಬೇರೆ ಚಿತ್ತಾಕರ್ಷಕ ವಸ್ತುಗಳೇನೂ ಇಲ್ಲದಿದ್ದರೂ, ಮತ್ತು ಶುಭ್ರವಸ್ತ್ರ, ಭಸ್ಮ ರುದ್ರಾಕ್ಷಮಾಲೆ ಇವುಗಳ ಹೊರತು ಬೇರೆ ಅಲಂಕಾರಗಳೇನೂ ಅಲ್ಲಿ ತೋರದಿದ್ದರೂ ತಪೋಧನರ ತೇಜಸ್ಸಿನಿಂದ ಬೆಳಗುತ್ತಿದ್ದ ಆ ಕುಟೀರವು, ಮುಮುಕ್ಷುಗಳಿಗೆ ತಾರಕವಾಗಿಯೂ, ಪುಣ್ಯಾತ್ಮರಾದ ಫಲೇಚ್ಛುಗಳಿಗೆ ಕಲ್ಪವೃಕ್ಷವಾಗಿಯೂ, ಪರಹಿಂಸಕ ಪಾಪಿಗಳಿಗೆ ಭಯಪ್ರದ ವಾಗಿಯೂ ತೋರುತ್ತಿತ್ತು. ಸರ್ವಜ್ಞರು ಒಂದು ಪ್ರಶಸ್ತವಾದ ಕೃಷ್ಣಾಜಿನದ ಮೇಲೆ ಕುಳಿತು ಕೊಂಡಿದ್ದರು. ಆ ಮಹಾತ್ಮರ ಪವಿತ್ರ ಹೃದಯವೇ ಮೂರ್ತಿಮತ್ತಾಗಿ ಮಂಡಿಸಿರುವುದೋ ಅನ್ನುವಂತೆ, ಅವರ ಭಸ್ಮೋದ್ಧೂಲಿತ ಗಾತ್ರವು ಒಪ್ಪುತ್ತಿತ್ತು. ಅವರ ರುದ್ರಾಕ್ಷ ಮಾಲೆಗಳೂ, ಹಾಸ್ಯಯುಕ್ತವಾದ ಸುಪ್ರಸನ್ನ ಮುಖಮುದ್ರೆಯೂ, ಪವಿತ್ರ ಜಟಾಭಾರವೂ ಭಕ್ತರಿಗೆ ವರವೀಯಲು ಅತಿ ಸುಲಭನಾದ ಸಾಕ್ಷಾತ್ ಚಂದ್ರಮೌಳಿಯ ನೆನಪು ಮಾಡಿಕೊಡುತ್ತಲಿದ್ದವು.

ಸೋಮೇಶ್ವರರು ಸರ್ವಜ್ಞರ ಪಟ್ಟಶಿಷ್ಯರಾಗಿದ್ದರು. ಅವರು ತಮ್ಮ ಆಸನದಲ್ಲಿ ಬಂದು ಕುಳಿತ ತರುವಾಯದಲ್ಲಿ ಉಳಿದ ಬ್ರಾಹ್ಮಣರೂ ಕುಟೀರವನ್ನು ಒಬ್ಬೊಬ್ಬರಾಗಿ ಪ್ರವೇಶಿಸಿ ಅಲ್ಲಿ ಹಾಕಿದ್ದ ಆಸನಗಳನ್ನು ಅಲಂಕರಿಸಿದರು.

ಪ್ರಿಯ ವಾಚಕರೇ, ಆ ಪರ್ಣಕುಟೀರದೊಳಗಿನ ಬ್ರಾಹ್ಮಣರು ಕನ್ನಡಿಗರೂ, ತೆಲಗರೂ ಇದ್ದರೆಂಬುದು ನಮ್ಮೆಲ್ಲರ ಸದಭಿಮಾನದ ಮಾತೇ ಸರಿ! ಇರಲಿ, ಸರ್ವಜ್ಞ ವಿಷ್ಣುಶರ್ಮರು ತಮ್ಮ ಸಮ್ಮುಖದಲ್ಲಿ ಕುಳಿತುಕೊಂಡಿದ್ದ ಬ್ರಾಹ್ಮಣರನ್ನು ವಿನಯಭಾವದ ಸುಪ್ರಸನ್ನ ಮುಖಮುದ್ರೆಯಿಂದ ನೋಡುತ್ತ ತಮ್ಮ ಶಿಷ್ಯ ಮಾಧವನನ್ನು ಕುರಿತು ವಾತ್ಸಲ್ಯಯುಕ್ತ ಗೌರವದಿಂದ – ''ಮಾಧವಾ, ನೀನು ನಿನ್ನೆ ಆ ಬ್ರಾಹ್ಮಣ ಕುಟುಂಬಗಳನ್ನು ದುಷ್ಟ ಯವನರ ದವಡೆಯೊಳಗಿಂದ ಬಿಡಿಸಿದ್ದು ಬಹಳ ನೆಟ್ಟಗಾಯಿತು. ಇಲ್ಲದಿದ್ದರೆ ಅನ್ಯಾಯದಿಂದ ಬ್ರಾಹ್ಮಣಹಿಂಸೆಯಾಗಿ, ಯವನರ ಉಪಟಳಕ್ಕೆ ಉತ್ತೇಜನವಾದಂತಾಗುತ್ತಿತ್ತು. ಅದರಲ್ಲಿಯೂ ಭೋಜನಪ್ರಿಯರೆಂದು ಹೀಯಾಳಿಸಿಕೊಳ್ಳುವ ಬ್ರಾಹ್ಮಣರು ದುಷ್ಟ ಯವನರನ್ನು ಓಡಿಸಿದರೆಂಬದೊಂದು ಬ್ರಾಹ್ಮಣವೃಂದಕ್ಕೆ ಈಗಿನ ಕಾಲದಲ್ಲಿ ವಿಲಕ್ಷಣ ಗೌರವದ ಸಂಗತಿಯಾಗಿರುವುದು; ಆದರೆ ಈ ಗೌರವವನ್ನು ಕುನಸಿನ ಸ್ವಭಾವದ ಯವನರ ಮುಂದೆ ಕಾಯ್ದುಕೊಳ್ಳುವುದು ಕಠಿಣವಾಗಿರುವುದು. ಬ್ರಾಹ್ಮಣ ಪಕ್ಷಪಾತಿಯಾದ ಶ್ರೀ ಹರಿಯೇ ಅದನ್ನು ಕಾಯತಕ್ಕದ್ದು. ಅದರಲ್ಲಿಯೂ, ನಿನ್ನಂಥ ತೇಜಸ್ವಿಯು ಯವನರ ಕಣ್ಣಲ್ಲಿ ಒತ್ತಬಹುದಾದ್ದರಿಂದ, ಮನಸ್ಸಿನಲ್ಲಿ ಇಲ್ಲದ ದುಷ್ಟ ವಿಚಾರಗಳು ಬರುತ್ತಿರುವುವು'' ಎಂದು ನುಡಿಯುತ್ತಿರಲು, ಗುರುಗಳ ಮುಖದಿಂದ ಹೊರಟ ತನ್ನ ಸ್ತುತಿಪರ ಉದ್ಗಾರಗಳನ್ನು ಕೇಳಿ ಮಾಧವನು ವಿನಯದಿಂದ ತಲೆಬಾಗಿಸಿದನು. ಆಗ ಸೋಮೇಶ್ವ ರಾವ ಧಾನಿಗಳು ಸರ್ವಜ್ಞರನ್ನು ಕುರಿತು–

ಸೋಮೇಶ್ವರ–ಮಾಧವನ ಯೋಗ್ಯತೆಯು ಸಾಮಾನ್ಯವಾದದ್ದಲ್ಲ. ನಿಮ್ಮ ಶಿಷ್ಯ ಮಾಧವನು ದ್ರೋಣಾಚಾರ್ಯರಂತೆ ಚತುರ್ವೇದಜ್ಞನಂತೂ ಇದ್ದೇ ಇರುವನು; ಆದರೆ ಆತನು ಭಾರತೀಯ ಆ ಶ್ರೇಷ್ಠ ಆಚಾರ್ಯನಂತೆ ಅಪ್ರತಿಮ ಧನುರ್ಧಾರಿಯಾಗಿರದಿದ್ದರೂ ರಾಜಕಾರಣಪಟುವಾಗಿರುವನು. ತರುಣರ ಮನಸ್ಸನ್ನು ಎಳಕೊಳ್ಳುವ ಮಾಧವನು ಬಲು ಬಲ್ಲಿದನು. ಆತನ ಯುಕ್ತಿಗ್ಗಂತೂ ಎಣೆಯಿಲ್ಲ. ಪರಸಂಕಟಹಾರಕನಾದ ನಿಮ್ಮ ಮಾಧವನು ಜೀವದ ಹಂಗಿಲ್ಲದೆ ನಿನ್ನೆ ಯವನರಮೇಲೆ ಏರಿಹೋದದ್ದರಿಂದಲೇ ಆತನ ಸಂಗಡಿಗರು ಸಾವಿಗೆ ಹೆದರದೆ ಯವನರನ್ನು ಹಣೆದು ಓಡಿಸಿದರು. ''ಇವರೇನು ತುಕಡಿಮುರಕ ಹಾರವರೆಂ''ದು ಯವನರು ತಿಳಿದಿರಬಹುದು. ಆದರೆ ನಮ್ಮ ಮಾಧವನು ನಿನ್ನೆ ಯವನರಿಗೆ ಬ್ರಾಹ್ಮಣರ ಕೈಯ್ಯನ್ನು ಚೆನ್ನಾಗಿ ತೋರಿಸಿದನು. ಭಾಪು ಮಾಧವ! ನೀನು ನಿಜವಾಗಿ ಕುಲದೀಪಕನಿರುತ್ತೀ!

ಸರ್ವಜ್ಞರು– ಇದೆಲ್ಲ ತಪೋನಿಷ್ಠ ಬ್ರಾಹ್ಮಣರ ಅಶೀರ್ವಾದದ ಮಹಿಮೆಯು. ಸಜ್ಜನರ ಸೇವೆಯ ಪ್ರಭಾವದಿಂದಲೇ ನಮ್ಮ ಮಾಧವನು ಇಷ್ಟು ಗೌರವಶಾಲಿಯಾದನು. ಸೋಮೇಶ್ವರ, ನೀನು ಹೇಳಿದಂತೆ ನಮ್ಮ ಮಾಧವನ ಅನುಯಾಯಿಗಳ ಶೌರ್ಯವು ಬಣ್ಣಿಸತಕ್ಕಂತಹದಾಗಿತ್ತು. ನಮ್ಮ ಕನ್ನಡಿಗರಲ್ಲಿ ಶೌಯವಿಲ್ಲವೆಂತಲ್ಲ; ಸದ್ಗುಣಗಳಿಲ್ಲವೆಂತಲ್ಲ. ಹಾಗಿದ್ದರೆ ಕರ್ನಾಟಕದ

ಚಾಲುಕ್ಯವಂಶದ ಪ್ರಸಿದ್ಧ ಪುಲಕೇಶಿಯು ಉತ್ತರ ಹಿಂದುಸ್ಥಾನವನ್ನು ಗೆದ್ದು ವೀರಾಗ್ರೇಸರನಾದ ಶಿಲಾದಿತ್ಯನನ್ನು ಜಯಿಸಿ ''ಪರಮೇಶ್ವರ''ನೆಂಬ ಬಿರುದು ಧರಿಸುತ್ತಿದ್ದನೇ? ಎಂಥ ಎಂಥ ವೀರರು ಕನ್ನಡಿಗರಲ್ಲಿ ಆಗಿಹೋಗಿರುವುದಿಲ್ಲ! ಆದರೆ ಕಾಲಮಹಿಮೆಯಿಂದ ಕನ್ನಡಿಗರು ನೀಚರ ಸ್ವಾರ್ಥಕ್ಕೂ, ಅಂತಃಕಲಹಗಳಿಗೂ ಗುರಿಯಾಗಿ, ಒಕ್ಕಟ್ಟು, ಕಳೆದುಕೊಂಡಿರುವರು. ಸದ್ಗುಣಗಳನ್ನು ಹಾಳುಮಾಡಿಕೊಂಡಿರುವರು. ಈ ಹೀನಸ್ಥಿತಿಯು ಒದಗಲಿಕ್ಕೆ ಸತ್ಸಂಗದ ಅಭಾವವೇ ಕಾರಣವು. ನಮ್ಮ ಮಾಧವನ ಅನುಯಾಯಿಗಳು, ಕನ್ನಡಿಗರು, ತೆಲಗರು, ಇರುವರಲ್ಲವೇ? ಆದರೆ ಸಮಾಗಮದ ಪ್ರಭಾವದಿಂದ ಅವರಲ್ಲಿ ನಿಜವಾದ ದೈವಭಕ್ತಿಯು, ನಿಸ್ವಾರ್ಥ ಬುದ್ಧಿಯ ಒಕಟ್ಟು, ಸ್ವಧರ್ಮದ ಸಲುವಾಗಿ ಪ್ರಾಣ ಕೊಡುವ ಆವೇಶವೂ ಪ್ರಾಪ್ತವಾಗಿರುವುದು, ಶ್ರೀ ವಿರೂಪಾಕ್ಷನ ಮನಸ್ಸಿಗೆ ಬಂದರೆ, ನಮ್ಮ ಮಾಧವನು ಕರ್ನಾಟಕದ ಸಿಂಹಾಸನಸ್ಥಾಪನಾ ಚಾರ್ಯನೆನಿಸಿಕೊಳ್ಳಬಹುದು! ಆದರೆ ಇದಕ್ಕಾಗಿ ಮಾಧವನು ಘೋರ ತಪಸ್ಸನ್ನೇ ಆಚರಿಸಬೇಕು. ಸೊಮೇಶ್ವರ, ತಪಸ್ವಿಯೇ ಮಹಾಕಾರ್ಯಗಳನ್ನು ಸಾಧಿಸಬಲ್ಲನಲ್ಲವೇ?

ಸೋಮೇಶ್ವರ–ಸರಿ ! ಸರ್ವಜ್ಞರ ಮಾತು ಒಪ್ಪತಕ್ಕದ್ದೇ ಸರಿ. ಸಾಕ್ಷಾತ್ ಬ್ರಹ್ಮನು ಕೂಡ ಸೃಷ್ಟಿಮಾಡುವ ಮಾರ್ಗವನ್ನು ತಪಸ್ಸಿನಿಂದಲೇ ಕಂಡುಕೊಂಡನು. ಮಹಾ ಮಹಾ ದೈತ್ಯರೂ, ದೇವತೆಗಳೂ ತಪಸ್ಸಿನಿಂದಲೇ ಮಹಾಕಾರ್ಯಗಳನ್ನು ಸಾಧಿಸಿದರೆಂದು ಪುರಾಣಗಳು ಹೇಳುತ್ತಿರುವುವು. ಗುರುವರ, ಮಹಾ ಬಲಿಷ್ಠರಾದ ಯವನರಿಂದ ಸ್ವದೇಶವನ್ನು ರಕ್ಷಿಸುವುದು ಸಾಮಾನ್ಯ ಕಾರ್ಯವಲ್ಲ, ಅದನ್ನು ಮಹಾತಪಸ್ವಿಯೇ ಸಾಧಿಸಬಹುದು; ಆದರೆ ದುಷ್ಟ ಯವನರ ನೀಚತನವಾದರೂ ಎಷ್ಟದು? ಬ್ರಹ್ಮಹತ್ಯ, ಸ್ತ್ರೀಹತ್ಯ, ಶಿಶುಹತ್ಯಗಳನ್ನು ಮಾಡಲಿಕ್ಕೂ ಅವರು ಹೇಸುವುದಿಲ್ಲವಲ್ಲ ! ಸ್ತ್ರೀಯರ ಪಾತಿವ್ರತ್ಯ ಭಂಗಮಾಡುವ ಆ ನೀಚರ ಮುಖಾವಲೋಕವನ್ನು ಮಾಡಬಹುದೇ? ಇಂಥ ತಾಮಸಿಗಳ ಧರ್ಮವೂ, ಆ ಧರ್ಮವನ್ನು ಸ್ಥಾಪಿಸಿದವನೂ ಎಂಥ ತಾಮಸಿಯಾಗಿರಬಹುದು ! ಶಸ್ತ್ರ ಭಯದಿಂದ ತನ್ನ ಧರ್ಮವನ್ನು ಹಬ್ಬಿಸಬೇಕೆಂದು ಆ ಯವನ ಧರ್ಮಸ್ಥಾಪಕನು ತನ್ನ ಶಿಷ್ಯರನ್ನು ಆಜ್ಞಾಪಿಸಿರುವನಂತೆ!

ಸರ್ವಜ್ಞರು–ಶಿವ ಶಿವ! ಶಾಂತಂಪಾಪಂ! ಸೋಮೇಶ್ವರ, ಸಂತಾಪದ ಭರದಲ್ಲಿ ನಿನ್ನಂಥ ವಿವೇಕಿಯ ಮುಖದಿಂದಲೂ ಇಂಥ ಅಯೋಗ್ಯವಾದ ಉದ್ಗಾರವು ಹೊರಡಲು ಆಶ್ಚರ್ಯವಿಲ್ಲ, ಸ್ವಾರ್ಥಪರರಾದ ಧರ್ಮಮೂಢ ಯವನರ ಕ್ರೂರತನ–ದುರಾಚಾರಗಳ ಮೇಲಿಂದ ಮಹಾತ್ಮರಾದ ಮಹಮ್ಮದ ಪೈಗಂಬರರಿಗೂ, ಅವರ ಪವಿತ್ರ ಧರ್ಮಕ್ಕೂ ಹೆಸರಿಡುವುದು ಮಹತ್ಪಾಪ ಸಾಧನವಾಗಿರುವುದು. ಯಾರ ಆಕಸ್ಮಿಕ ದೈವೀ ಸ್ಫೂರ್ತಿಯ ಉಕ್ತಿಗಳು ಕೂಡಿ ಪೂಜ್ಯ ಕುರಾಣವಾಗಿರುವುದೋ, ಪೃಥ್ವಿಯೊಳಗಿನ ಜನಾಂಗದ ದೊಡ್ಡ ಭಾಗವು ಯಾವ ಮಹಾತ್ಮನ ಅನುಯಾಯಿಯಾಗಿರುವುದೋ ಅಂಥ ಮಹನೀಯರಿಗೆ ಹೆಸರಿಡಬಹುದೇ? ಅಂಥವರ ಧರ್ಮವು ತಾಮಸವಾಗಬಹುದೇ? ಪೈಗಂಬರರ ಘನತರವಾದ ಯೋಗ್ಯತೆಯನ್ನೂ, ಅವರ ಸತ್ವಶಾಲಿತ್ವವನ್ನೂ ಅವರ ದಿವ್ಯ ಚರಿತ್ರದ ಒಂದೆರಡು ಸಂಗತಿಗಳಿಂದ ಪರಧರ್ಮದವರಾದ ನಾವು ಕೂಡ ಅರಿತುಕೊಳ್ಳಬಹುದು.

ಸೋಮೇಶ್ವರ–ಕ್ಷಮಿಸಬೇಕು, ಪ್ರಮಾದದಿಂದ ಸತ್ಪುರುಷರ ನಿಂದೆಯ ದೋಷವು ಘಟಿಸಿದ್ದಕ್ಕಾಗಿ ನನಗೆ ಪಶ್ಚಾತ್ತಾಪವಾಗಿದೆ. ದಯಮಾಡಿ ನನ್ನ ತಪ್ಪು ತಿಳುವಳಿಕೆಯನ್ನು ದೂರ ಮಾಡೋಣವಾದರೆ, ಕೃತಕೃತ್ಯನಾಗುವೆನು.

ಸರ್ವಜ್ಞರು– ''ಇಲಿಯ ಹೊಡಿಯಹೋಗಿ ಗಣಪತಿಗೆ ಪೆಟ್ಟು ಬಿದ್ದಂತೆ'' ಧರ್ಮಹೀನರ ಆಚರಣೆಗೆ ಹೆಸರಿಡಹೋಗಿ ಧರ್ಮಾತ್ಮರಿಗೆ ನಿಂದೆಯ ಆರೋಪವು ತಟ್ಟನೆ ತಟ್ಟುವ ಸಂಭವವಿರುತ್ತದೆ. ಊರೊಳಗಿನ ಕೆಲವು ಕಳ್ಳರಯೋಗದಿಂದ ಊರಿಗೇ ಕಳ್ಳವೆಂಬ ಆರೋಪ ಬರುವುದು ವಾಡಿಕೆಯಾಗಿದೆ. ಇರಲಿ, ನಾನು ಕೇಳಿದ ಆ ಇಸ್ಲಾಮಿ ಧರ್ಮಸ್ಥಾಪಕನ ಒಂದೆರಡು ಚರಿತ್ರೆಗಳನ್ನು ಹೇಳುವೆನು ಕೇಳು. ಅದರಿಂದ ಆ ಮಹಾತ್ಮರಾದ ಪೈಗಂಬರರ ಯೋಗ್ಯತೆಯು ನಿನಗೆ ತಾನೇ ಗೊತ್ತಾಗುವುದು. ನನ್ನ ಮಾತಿನಕಡೆಗೆ ಬ್ರಹ್ಮವೃಂದದ ಅವಧಾನವಿರಲಿ– ಮಹಮ್ಮದ ಪೈಗಂಬರರು ಪ್ರತಿನಿತ್ಯ ನಮಾಜು ಮಾಡುವುದೊಂದು ಸ್ಥಳವಿತ್ತಂತೆ. ಅಲ್ಲಿ ಅವರ ನಮಾಜಿನ ಹೊತ್ತಿಗೆ ಒಬ್ಬ ಮುದುಕಿಯು ದಿನಾಲು ತಪ್ಪದೇ ನೆಗ್ಗಲಿಯ ಮುಳ್ಳುಗಳನ್ನು ನಿಯಮದಿಂದ ಹಾಕುತ್ತಿದ್ದಳಂತೆ. ಪೈಗಂಬರರು ನಮಾಜು ಮಾಡಹತ್ತಿದಕೂಡಲೇ ಕ್ರಮವಾಗಿ ಅವರ ಮೊಣಕಾಲುಗಳಿಗೂ, ಹಸ್ತಗಳಿಗೂ, ಹಣೆಗೂ ಮುಳ್ಳುಗಳು ನಡುತ್ತಿದ್ದವು. ಹೀಗೆ ನಿಯಮದಿಂದ ಆ ಮುದುಕಿಯು ತೊಂದರೆ ಕೊಡುತ್ತಿದ್ದರೂ, ಮಹಾತ್ಮರಾದ ಪೈಗಂಬರರ ಶಾಂತಗುಣಕ್ಕೆ ಭಂಗಬರಲಿಲ್ಲ. ಅವರು ತಾಳ್ಮೆಯಿಂದ ಮುಳ್ಳುಗಳನ್ನು ತಕ್ಕೊಳ್ಳುತ್ತ ನಮಾಜು ಮಾಡುತ್ತಿದ್ದರು ! ಹೀಗಿರುವಾಗ ಒಂದುದಿನ ಅವರ ಶಿಷ್ಯರು ತಮ್ಮ ಗುರುಗಳಾದ ಪೈಗಂಬರರನ್ನು ಕುರಿತು– ''ಸ್ವಾಮೀ, ತಾವು ಶಾಪಾನುಗ್ರಹ ಶಕ್ತಿಯುಳ್ಳವರು. ಈ ಮುದುಕಿಯು ನಿಷ್ಕಾರಣ ತೊಂದರೆ ಕೊಡುವುದರಿಂದ, ಈಕೆಯನ್ನು ಶಪಿಸೋಣಾಗಬೇಕು'' ಎಂದು ಪ್ರಾರ್ಥಿಸಿದರು. ಆಗ ಪೈಗಂಬರರು ಬಹು ಸಮಾಧಾನದಿಂದ ತಮ ಶಿಷ್ಯರನ್ನು ಕುರಿತು – ''ಈ ಮುದುಕಿಯು ಜ್ಞಾನಿಯಾಗಿದ್ದರೆ ಹೀಗೆ ಯಾಕೆ ಮಾಡುತ್ತಿದ್ದಳು? ಈಕೆಯ ಅಜ್ಞಾನವನ್ನು ದೂರ ಮಾಡುವುದಕ್ಕಾಗಿ ನಾನು ದೇವರನ್ನು ಪ್ರಾರ್ಥಿಸುವೆನು. ನೀವೂ ನನ್ನ ಸಂಗಡ ದೇವರನ್ನು ಪ್ರಾರ್ಥಿಸಿರಿ'' ಎಂದು ಹೇಳಿ, ಮುದುಕಿಯ ಅಜ್ಞಾನ ನಿವಾರಣೆಗಾಗಿ ಶಿಷ್ಯರೊಡನೆ ದೇವರನ್ನು ಪ್ರಾರ್ಥಿಸಿದರಂತೆ! ಅದರಂತೆ, ಒಮ್ಮೆ ಪೈಗಂಬರರ ಕಕ್ಕಂದಿರು ಪೈಗಂಬರರ ಸತ್ಯವಾದ ಬೋಧಕ್ಕಾಗಿ ಸಂತಾಪಗೊಂಡು ಪೈಗಂಬರರ ಕೆನ್ನೆಗೆ ಕಸುವಿನಿಂದ ಹೊಡೆಯಲು, ಪೈಗಂಬರರು ತಮ್ಮ ಕಕ್ಕಂದಿರಿಗೆ ಅಹಿತವನ್ನು ಚಿಂತಿಸಿದೆ, ಅವರನ್ನು ಶಿಕ್ಷಿಸಲು ಅಪ್ಪಣೆ ಕೇಳಿಕೊಳ್ಳುವ ಸಮರ್ಥ ದೇವದೂತರ ವಿನಂತಿಗೆ ಒಪ್ಪದೆ, ಅವರೊಡನೆ ಕಕ್ಕಂದಿರ ಅಜ್ಞಾನ ನಿವಾರಣೆಗಾಗಿ ದೇವರನ್ನು ಪ್ರಾರ್ಥಿಸಿದರಂತೆ! ಇಂಥ ಸತ್ವಶಾಲಿಗಳೂ, ಕರುಣಾಳುಗಳೂ, ಹಿಂಸೆಗೆ ಹೇಸುವವರೂ ಆದ ಮಹಾತ್ಮರು ಅನ್ಯರಿಗೆ ಶಸ್ತ್ರದ ಭಯತೋರಿಸಿ ಧರ್ಮವನ್ನು ಹಬ್ಬಿಸಲು ಆಜ್ಞಾಪಿಸಿರಬಹುದೇ?

ಸೋಮೇಶ್ವರ – ಹಾಗಾದರೆ ಜನರು ಹೀಗೆ ಹೇಳುವರಲ್ಲ?

ಸರ್ವಜ್ಞ – ''ಜನವೋ ದನವೋ'' ಅನ್ನುವಂತೆ, ಜನವಾರ್ತೆಯನ್ನು ಯಾವಾಗಲೂ

ವಿಚಾರಮಾಡದೆ ನಂಬಕೂಡದು. ಇಂಥ ಅಪ್ಪಣೆಯನ್ನು ಪೈಗಂಬರರು ಸರ್ವಥಾ ಮಾಡಲಾರರೆಂದು ನಾನಂತು ತಿಳಿಯುವೆನು. ಹಾಗೆ ಪೈಗಂಬರರ ಉಕ್ತಿಯು ಇದ್ದದ್ದೇ ನಿಜವಿದ್ದರೆ, ಅದರ ಗರ್ಭಿತಾರ್ಥವು ಬೇರೆಯಾಗಿರಬಹುದು. ತಮ್ಮ ಬೋಧರೂಪವಾದ ಶಸ್ತ್ರದಿಂದ, ಜನರ ಅಜ್ಞಾನ ರೂಪ ಸೈತಾನವನ್ನು ಛೇದಿಸಿ ಜನರನ್ನು ಜ್ಞಾನಸಂಪನ್ನರಾಗಿ ಮಾಡಿರೆಂದು ಅವರು ಬೋಧಿಸಿರಬಹುದು. ಮುಸಲ್ಮಾನ ಸಾಧುಗಳ ಚರಿತ್ರೆಗಳ ಮೇಲಿಂದಲೂ, ಮುಸಲ್ಮಾನ ಧರ್ಮದ ತತ್ವಗಳ ಮೇಲಿಂದಲೂ ಪೈಗಂಬರರು ಮಹಾ ಮಹಿಮರೆಂದು ನಮ್ಮ ನಂಬಿಗೆಯಾಗಬಹುದು. ದುರಭಿಮಾನದಿಂದ ಅನ್ಯಧರ್ಮಗಳ ಜ್ಞಾನ ಮಾಡಿಕೊಳ್ಳದೆ, ಆ ಧರ್ಮವನ್ನು ನಿಂದಿಸುವುದು ಹಾನಿಕಾರಕವಾಗಿರುವುದು. ಸೋಮೇಶ್ವರ, ಯವನರ ಮಾತಂತು ಇರಲಿ, ವೈದಿಕರೆನಿಸುವ ನಾವು ವೈದಿಕ ಧರ್ಮಕ್ಕೆ ವಿರೋಧವಾಗಿ ಎಷ್ಟು ತಪ್ಪುಗಳನ್ನು ಮಾಡುವುದಿಲ್ಲ? ಆದರೆ ನಮ್ಮ ಆ ತಪ್ಪುಗಳ ಮೇಲಿಂದ, ಅನ್ಯರು ನಮ್ಮ ಪವಿತ್ರ ವೈದಿಕಧರ್ಮವನ್ನೂ, ವೈದಿಕಧರ್ಮ ಪ್ರವರ್ತಕರನ್ನೂ, ವೇದವನ್ನೂ ಹಳಿದರೆ ನಮಗೆ ಸಮಾಧಾನವಾಗಬಹುದೇ? ಈಗಿನ ನಮ್ಮ ಕನ್ನಡಿಗರಲ್ಲಿ ದಿನದಿನಕ್ಕೆ ಹೆಚ್ಚುತ್ತಲಿರುವ ನೀಚ ಸ್ವಾರ್ಥಪರತೆ, ಹೇಡಿತನ, ವಂಚಕತನ, ಸದಭಿಮಾನ ಶೂನ್ಯತೆ, ಅನೇಕತ್ವ, ಆಲಸ್ಯ, ಸ್ವಚ್ಛಂದವೃತ್ತಿ ಈ ಗುಣಗಳು ಆತ್ಮಘಾತಕವಲ್ಲವೋ? ಮುಸಲ್ಮಾನರು ಸ್ವಪರಾಕ್ರಮ ದಿಂದ ಅನ್ಯರ ನಾಶ ಮಾಡಿ ತಮ್ಮ ತಿಳುವಳಿಕೆಯಂತೆ ಲಾಭ ಮಾಡಿಕೊಳ್ಳುತ್ತಿರುವರು; ಸೃಷ್ಟಿಯಲ್ಲಿ ಜೀವನಾರ್ಥ ಕಲಹವು ಎಲ್ಲ ಕಡೆಯಲ್ಲಿ ನಡೆದಿರುವುದೆಂದು ತೋರುವುದರಿಂದ, ಈಗ ಯವನರು ಮಾಡುತ್ತಿರುವ ಕೊಲೆಯು ಒಂದು ಪಕ್ಷದಲ್ಲಿ ಕ್ಷಮ್ಯವಾಗಬಹುದು; ಆದರೆ, ಈಗ ಕನ್ನಡಿಗರು ಮೇಲೆ ಹೇಳಿದ ದುರ್ಗುಣಗಳ ಮೂಲಕ ಕೈಲಾಗದವರಾಗಿ ಆತ್ಮಘಾತವನ್ನು ಮಾಡಿಕೊಳ್ಳುತ್ತಿರುವರಲ್ಲ! ಪರರನ್ನು ಘಾತಿಸುವದಕ್ಕಿಂತ ಆತ್ಮಘಾತವು ಹೆಚ್ಚು ನೀಚತರದ್ದಾಗಿರುವದು. ಇಂಥ ಆತ್ಮಘಾತಕರಾದ ಕನ್ನಡಿಗರನ್ನು ನೋಡಿ, ವೈದಿಕ ಧರ್ಮವು ಆತ್ಮಘಾತವೆಂದು ಅನ್ಯರು ಹೇಳಿದರೆ ಎಷ್ಟು ಸಮಂಜಸವಾಗಬಹುದು? ನಿಸ್ಪೃಹತೆಯ ಪ್ರಕಾಶದಲ್ಲಿ ಸ್ವಸ್ವರೂಪಜ್ಞಾನಮಾಡಿಕೊಡುವ ಪವಿತ್ರ ಧರ್ಮತತ್ವಗಳೆತ್ತ? ಧರ್ಮದ ಸೋಗಿನಿಂದ ಸ್ವಾರ್ಥ ಸಾಧನಕ್ಕಾಗಿ ಮನಬಂದಂತೆ ನಡೆಯುವ ಲಂಡರ ಆಚರಣೆಯೆತ್ತ? ಸೋಮೇಶ್ವರ, ವಿಚಾರವಂತರು ಪರಧರ್ಮಗಳನ್ನು ಸರ್ವಥಾ ನಿಂದಿಸಲಾಗದು; ಪೃಥ್ವಿಯೊಳಗಿನ ಎಲ್ಲ ಧರ್ಮಗಳು ಜೀವಿಗಳ ಉದ್ಧಾರಕ್ಕಾಗಿಯೇ ಉದಯಿಸಿರುತ್ತವೆ. ಅವೆಲ್ಲವುಗಳ ಮೂಲತತ್ವಗಳು ಒಂದೇ ಇದ್ದು, ದೇಶಕಾಲಪರಿಸ್ಥಿತಿಗನುಸರಿಸಿ ಅವುಗಳ ಬಾಹ್ಯಸ್ವರೂಪಗಳು ಮಾತ್ರ ಭಿನ್ನವಾಗಿರಬಹುದು. ಲೋಕಹಿತಕ್ಕೆ ಹೆಣಗುವವನು ಪರಧರ್ಮ ಸಹಿಷ್ಣುವಾಗಿದ್ದರೆಯೇ ಅವನಿಂದ ನಿಜವಾದ ಲೋಕಹಿತವು ಸಾಧಿಸುವದು. ಈ ಮಾತನ್ನು ನಮ್ಮ ಮಾಧವನಂತು ಚನ್ನಾಗಿ ನೆನಪಿನಲ್ಲಿಡಬೇಕು.

ಸೋಮೇಶ್ವರ–ಸರ್ವಜ್ಞರ ಇಂದಿನ ಬೋಧವು ಪರಮ ತಾರಕವಾಗಿರುವದು; ಆದರೆ ಸದ್ಗುರೋ, ಈಗಿನ ದುಷ್ಟ ಮುಸಲ್ಮಾನರ ಉಪಟಳಕ್ಕೆ ಕರ್ನಾಟಕವು ಹ್ಯಾಗೆ ಈಡಾಗಬೇಕು?

ಈಗ ಕರ್ನಾಟಕದ ಮೇಲೆ ಸಾಗಿ ಬಂದಿರುವ ಮುಹಮ್ಮದ ತಘಲಕನ ಕ್ರೂರತನವನ್ನೇನು ವರ್ಣಿಸಬೇಕು? ಆ ವಿಲಕ್ಷಣ ಪುರುಷನ ಉತ್ತರ ಹಿಂದುಸ್ತಾನದ ಕ್ರೂರ ಕೃತಿಗಳನ್ನು ಕಿವಿಯಿಂದ ಕೇಳುತ್ತಿದ್ದೆವು. ಮನುಷ್ಯರ ಮೈದೊಗಲು ಸುಲಿಸುವದು, ಮನುಷ್ಯರ ಬೇಟೆ ಯಾಡುವುದು ಮುಂತಾದ ಆತನ ಹಲವು ಕ್ರೂರಕೃತ್ಯಗಳನ್ನು ಜನರು ವರ್ಣಿಸುವರು; ಆದರೆ ಅವನ್ನು ಈಗ ಪ್ರತ್ಯಕ್ಷ ಅನುಭವಿಸುವ ಸಮಯವು ನಮಗೆ ಬಂದೊದಗಿರುತ್ತದೆ. ಅವನ ಅಣ್ಣನ ಮಗನಾದ ಬಹಾಉದ್ದಿನ ಗುಸ್ತಸ್ಪ ಎಂಬವನು ದಂಗೆ ಎಬ್ಬಿಸಿ, ಕಡೆಗೆ ತನ್ನ ಕ್ರೂರನಾದ ಕಕ್ಕನ ಭಯದಿಂದ ನಮ್ಮ ಆನೆಗುಂದಿಯ ಪುರಾತನ ರಾಜವಂಶದ ಜಂಬುಕೇಶ್ವರನೆಂಬ ಶೂರ ರಾಯನ ಬೆನ್ನುಬಿದ್ದನು. ಈ ಪ್ರಸಂಗದಲ್ಲಿ ನಮ್ಮ ರಾಯನ ವಂಶವು ಆ ಕ್ರೂರ ಮುಹಮ್ಮದನಿಂದ ನಿರ್ವಂಶವಾಯಿತು. ಈ ದುಷ್ಟ ಮುಹಮ್ಮದ ತಘಲಕನು ಪ್ರಸಿದ್ಧವಾದ ಕನೋಜದ ಪಟ್ಟಣವನ್ನು ಮುತ್ತಿ ಬೇಟೆಯ ಮೃಗಗಳನ್ನು ಕೊಲ್ಲುವಂತೆ ಆ ಪಟ್ಟಣದೊಳಗಿನ ಜನರನ್ನೆಲ್ಲ ಕೊಂದನಂತೆ! ಇವನ ಇಂಥ ಭಯಂಕರ ಕೊಲೆಯಿಂದ ಎಷ್ಟೋ ಪಟ್ಟಣಗಳು ನಿರ್ಮಾನುಷವಾದವಂತೆ. ಇವನ ಕೆಲವು ಹುಚ್ಚುತನದ ಕೃತಿಗಳಿಂದ ಇವನಿಗೆ ಹುಚ್ಚ ಮುಹಮ್ಮದನೆಂಬ ಹೆಸರು ಬಿದ್ದಿದೆಯಂತೆ. ಇವನ ವಿಲಕ್ಷಣ ಚರಿತ್ರೆಗಳನ್ನು ಜನರು ಕಥೆಮಾಡಿ ಹೇಳುವರು. ಶಿವಶಿವ! ಮಹಾತ್ಮರೇ, ಇಂಥ ಕ್ರೂರತನದ ವರ್ಣನವು ನಮ್ಮ ಯಾವ ಪುರಾಣದಲ್ಲಿರುವದು? ಸಾಕು, ರಕ್ತಸುರಿಸುವದಕ್ಕೆ ಮೆಚ್ಚಿದವನಾದ ಈ ಕ್ರೂರನ ವರ್ಣನವು ಸಾಕು. ಇಂಥ ಕ್ರೂರರನ್ನು ತಡೆಯುವ ಸಾಮರ್ಥ್ಯವು ನಮ್ಮಲ್ಲಿ ಇಲ್ಲದಾಯಿತೆ? ಹಾಯ್ ಹಾಯ್! ವೈದಿಕ ಧರ್ಮಕ್ಕೆ ಗತಿಯಿಲ್ಲದಾಯಿತಲ್ಲ! ಸದ್ಗುರೋ, ಇದಕ್ಕೆ ಮುಂದೆ ಉಪಾಯವೇನು?

ಈ ಮಾತುಗಳನ್ನು ಕೇಳಿ ಸರ್ವಜ್ಞ ವಿಷ್ಣುಶರ್ಮರು ಗಾಂಭೀರ್ಯದಿಂದ ವಿಚಾರ ಮಾಡುತ್ತ ಸುಮ್ಮನೆ ಕುಳಿತುಕೊಂಡರು. ಆಗ ಆ ಮಹಾತ್ಮರು ತಮ್ಮ ಜ್ಞಾನದೃಷ್ಟಿಯಿಂದ ಭವಿಷ್ಯವನ್ನು ಅರಿತುಕೊಳ್ಳುತ್ತಿರುವಂತೆ ತೋರಿತು. ಎಲ್ಲ ಬ್ರಹ್ಮವೃಂದವು ಸರ್ವಜ್ಞರನ್ನು ನೋಡುತ್ತ ಸುಮ್ಮನೆ ಕುಳಿತುಕೊಂಡಿತ್ತು. ಶಿಷ್ಯೋತ್ತಮನಾದ ಮಾಧವನು ಶ್ರೀ ಗುರುಚರಣ ದಲ್ಲಿ ದೃಷ್ಟಿಯನ್ನಿಟ್ಟು ಸುಮ್ಮನೆ ನಿಂತುಕೊಂಡಿದ್ದನು. ಹೀಗೆ ಬಹಿರಂಗದಲ್ಲಿ ಸ್ತಬ್ಧತೆಯು ತೋರುತ್ತಿದ್ದರೂ, ಪ್ರತಿ ಒಬ್ಬ ವ್ಯಕ್ತಿಯ ಅಂತರಂಗವು ವಿಚಾರಮಗ್ನವಾಗಿತ್ತು. ಅವರವರ ಅಧಿಕಾರಗಳಂತೆ ಅವರವರ ವಿಚಾರಗಳು ಭಿನ್ನವಾಗಿದ್ದವು. ಇನ್ನು ಸರ್ವಜ್ಞರು ಏನು ಹೇಳುವರೋ ಎಂದು ಎಲ್ಲರು ಎದರು ನೋಡುತ್ತಿದ್ದರು. ಅಷರಲ್ಲಿ ಸರ್ವಜ್ಞರು ಬ್ರಹ್ಮವೃಂದವನ್ನು ಕುರಿತು – ''ಬ್ರಾಹ್ಮಣ ಶ್ರೇಷ್ಠರೇ ಇನ್ನು ಮೇಲೆ ತಪಸ್ವಿಗಳಿಗೆ ಅರಣ್ಯವಾಸವು ಕಠಿಣವಾಗುವದು. ಪ್ರತಾಪರುದ್ರದೇವನ ಆಶ್ರಯವು ತಪ್ಪಿದ್ದರಿಂದ ಇನ್ನು ನಮಗೆ ಆಶ್ರಮವಾಸವು ಸುರಕ್ಷಿತವಲ್ಲ. ಕಾಲಮಹಿಮೆಯು ವಿಲಕ್ಷಣವಾದದ್ದು. ಕರ್ನಾಟಕದ ಚಾಲುಕ್ಯ, ಹೊಯ್ಸಳ, ಕದಂಬ, ರಾಷ್ಟ್ರಕೂಟ, ಯಾದವ ಮೊದಲಾದ ಪ್ರಸಿದ್ಧ ರಾಜವಂಶಗಳ ಪ್ರತಾಪಿಗಳ ಕೀರ್ತಿಯು ನಾಮಶೇಷವಾಗಿ, ಕರ್ನಾಟಕವು ಹೇಡಿತನದಿಂದ ಕಣ್ಣೀರು ಹಾಕುವ

ಪ್ರಸಂಗವು ಬಂದೊದಗಿರುವದು. ತಪಸ್ವಿಗಳು ಇನ್ನು ಪಟ್ಟಣ. ಗ್ರಾಮಗಳನ್ನು ಸೇರಬೇಕಾಯಿತು. ಆದರೂ, ಸತ್ವಸ್ಥರು ಚಿಂತೆಮಾಡುವ ಕಾರಣವಿಲ್ಲ. ಬಂದ ಪ್ರಸಂಗಕ್ಕೆ ಎದೆಗೊಟ್ಟು ಸತ್ವವನ್ನು ಕಾಯ್ದುಕೊಂಡು ಧರ್ಮ–ತೇಜಸ್ಸಿನಿಂದ ಪ್ರಕಾಶಿಸುತ್ತಲಿರುವದೇ ಸನಾತನ ವೈದಿಕ ಧರ್ಮದ ಅಸ್ತಿತ್ವದ ಲಕ್ಷಣವಾಗಿರುವದು. ಈ ಧರ್ಮತೇಜವು ಸಂಪೂರ್ಣ ನಷ್ಟವಾಗುವವರೆಗೆ, ಬರಿಯ ಕರ್ನಾಟಕವೇಯೇಕೆ ನಮ್ಮ ಭರತಭೂಮಿಯು ಮೃತಿಯನ್ನು ಹೊಂದಲಾರದು. (ಮಾಧವನಕಡೆಗೆ ನೋಡಿ) ಮಾಧವ, ಬ್ರಹ್ಮತೇಜಸ್ಸಿನ ವೈಭವವನ್ನು ತೋರಿಸುವ ಪ್ರಸಂಗವು ಬಂದೊದಗಿರುವದಲ್ಲವೆ? ಏಳು; ಧರ್ಮ ರಕ್ಷಣದ ಕಾರ್ಯಕ್ಕೆ ಉದ್ಯುಕ್ತನಾಗು; ಆ ಉದ್ಯೋಗಕ್ಕೆ ತಕ್ಕ ಅಧಿಕಾರವನ್ನು ತಪಸ್ಸಿನಿಂದ ಪಡೆ. ಈ ಕಾರ್ಯದಲ್ಲಿ ನಿನಗೆ ಈ ಬ್ರಹ್ಮವೃಂದದ ಆಶೀರ್ವಾದದ ಅಮೋಘ ಬಲವು ಸಹಾಯಕಾರಿಯಾಗಿರುವದು! ನಿನ್ನ ಕುಲಸ್ವಾಮಿನಿಯಾದ ಶ್ರೀ ಭುವನೇಶ್ವರಿಯು ನಿನಗೆ ಮಾರ್ಗದರ್ಶಕಳಾಗುವಳು ಎಂದು ನುಡಿಯಲು, ತನ್ನ ಮೇಲೆ ಸದ್ಗುರುವಿನ ಕೃಪೆಯಾದಂತೆ ಆ ಭಾಗ್ಯಶಾಲಿಯಾದ ಮಾಧವನು ಸಂತೋಷಪಡುತ್ತ ಬ್ರಹ್ಮವೃಂದಕ್ಕೆ ಸಾಷ್ಟಾಂಗವಾಗಿ ವಂದಿಸಿದನು. ಆಗ ಸರ್ವಜ್ಞ ವಿಷ್ಣುಶರ್ಮರೇ ಮೊದಲಾದ ಬ್ರಾಹ್ಮಣರು ತಮ್ಮ ಬ್ರಹ್ಮ ತೇಜಸ್ಸಿನ ಪ್ರಭಾವವನ್ನು ತಮ್ಮ ಕೃಪಾದೃಷ್ಟಿಯ ಯೋಗದಿಂದ ಮಾಧವನ ಹೃದಯದಲ್ಲಿ ಸ್ಥಾಪಿಸಿದರು! ಧನ್ಯನು, ತೇಜೋನಿಧಿಯಾದ ಮಾಧವನು ಪರಮ ಧನ್ಯನು!!

## ಮಾಧವನ ಮನೋದಯ

ವಿನಯಶಾಲಿಯಾದ ಮಾಧವನು ಗುರುಗಳ ಸಮ್ಮುಖದಲ್ಲಿ ಪಿಟ್ಟೆಂದು ಮಾತಾಡಲಿಲ್ಲ–ಗುರುವಚನದ ಒಲವನ್ನರಿತು ನಡೆಯುವದು ಆ ಗುರುಪುತ್ರನ ಶೀಲವಾಗಿತ್ತು. ಆತನು ಗುರುಗಳ ಇಚ್ಛೆಯಂತೆ ಅವರನ್ನು ಶ್ರೀ ಕಂಚೀ ಕ್ಷೇತ್ರಕ್ಕೂ, ಸೋಮೇಶ್ವರಾವಧಾನಿಗಳ ಇಚ್ಛೆಯಂತೆ ಅವರನ್ನು ಶೃಂಗೇರಿಗೂ, ಉಳಿದ ಬ್ರಾಹ್ಮಣರ ಇಚ್ಛೆಯಂತೆ ಅವರವರ ಕುಟುಂಬಗಳನ್ನು ಬೇರೆ ಬೇರೆ ಸ್ಥಳಗಳಿಗೂ ಸುರಕ್ಷಿತವಾಗಿ ಮುಟ್ಟಿಸಿದನು. ಶ್ರೀ ಗುರುವಿನ ಇಚ್ಛೆಯಂತೆ ಧರ್ಮರಕ್ಷಣಕ್ಕೋಸ್ಕರ ತ್ರಿಕರಣಪೂರ್ವಕವಾಗಿ ಯತ್ನಿಸುವದು ಆತನ ಮನಸ್ಸಿನಲ್ಲಿ ಕಟಿಯುತ್ತಿತ್ತು. ಆಶ್ರಮಸ್ಥರ ಸಂರಕ್ಷಣದ ಚಿಂತೆ ಬಿಟ್ಟಂತಾದ್ದರಿಂದ, ಧರ್ಮೋದ್ಧಾರದ ಕಾರ್ಯಕ್ಕೆ ಆತನ ಕೈತೆರವಾದಂತಾಯಿತು ; ಆದರೆ ಆತನ ಕಾಲ್ತೊಡರು ಮಾತ್ರ ಇನ್ನೂ ದೂರವಾಗಿದ್ದಿಲ್ಲ. ಮಾಧವನು ಗೃಹಸ್ಥಾಶ್ರಮಿಯಾದದ್ದರಿಂದ ಪರತಂತ್ರನಾಗಿದ್ದನು. ಆತನ ತಂದೆಯಾದ ಮಾಯಣ, ತಾಯಿಯಾದ ಶ್ರೀಮತಿ, ತಮ್ಮಂದಿರಾದ ಸಾಯಣ–ಭೋಗನಾಥರೆಂಬವರು ಮಾಧವನನ್ನು ಆಶ್ರಯಿಸಿದ್ದರು. ತನ್ನ ಅರ್ಧಾಂಗಿಯಾದ ವೈತಿಹೋತ್ರಿಯನ್ನಂತು ಮಾಧವನು ಅತಿಕ್ರಮಿಸುವಹಾಗಿದ್ದಿಲ್ಲ. ತಪೋನಿಷ್ಠನಾದ ಮಾಧವನ

ಕುಟುಂಬವು ಬಡತನದ್ದೆಂದು ಹೇಳುವ ಕಾರಣವಿಲ್ಲ. ಮಾಧವನ ತಂದೆಯು ಸತ್ಪುರುಷನು. ತಾಯಿಯು ಪರಮ ಸಾಧ್ವಿಯು. ಅಂತೇ ಅವರ ಪುಣ್ಯೋದರದಲ್ಲಿ ಮಾಧವನಂಥ ಕುಲದೀಪಕನು ಹುಟ್ಟಿದನು. ಆತನ ಬಂಧುಗಳು ಘನವಿದ್ವಾಂಸರಿದ್ದರು. ಸಾಯಣನಂತು ಮಾಧವನಿಗೆ ಸಮಾನನಾದ ಪಂಡಿತನಾಗಿದ್ದನು. ಅಂದಬಳಿಕ ಮಾಧವನ ಕುಟುಂಬದ ಘನತರವಾದ ಯೋಗ್ಯತೆಯನ್ನೇನು ವರ್ಣಿಸಬೇಕು? ನಿಸ್ಪೃಹತೆಯು ಆ ಕುಟುಂಬದ ಜೀವನ ಸರ್ವಸ್ವವೂ, ಪರೋಪಕಾರವು ಆ ಕುಟುಂಬದ ಕುಲವ್ರತವೂ ಆಗಿದ್ದವು. ತೈತ್ತಿರೀಯ ಶಾಖೆಯ ಬೋಧಾಯನ ಸೂತ್ರದ ನಮ್ಮ ಪ್ರಭಾವಶಾಲಿಯಾದ ಮಾಧವನು ಆಗಿನಕಾಲದ ಬ್ರಹ್ಮವೃಂದದ ಪುಣ್ಯನಿಧಿಯಂತೆ ಒಪ್ಪುತ್ತಿದ್ದನು.

ಹೀಗೆ ಮಾಧವನು ಜನ್ಮದರಿದ್ರನಾಗಿದ್ದರೂ, ಪ್ರಭಾವಶಾಲಿಯೂ, ಘನಪಂಡಿತನೂ, ಗುಣನಿಧಿಯೂ ಆದದ್ದರಿಂದ, ವಾತಾಪಿಪುರದ (ಬಾದಾಮಿಯ) ಚಾಲುಕ್ಯ ಕುಲದಮಾತ್ಯನಾದ ವೀತಿಹೋತ್ರನು ತನ್ನ ಮಗಳನ್ನು ಆತನಿಗೆ ಲಗ್ನಮಾಡಿ ಕೊಟ್ಟಿದ್ದನು. ಹಿಂದಕ್ಕೆ ಮಹಾತ್ಮರಾದ ಅಗಸ್ತ್ಯರು ರಾಜಪುತ್ರಿಯಾದ ಲೋಪಾಮುದ್ರೆಯನ್ನು ಲಗ್ನವಾದಂತೆ, ಮಾಧವನು ಆಮಾತ್ಯ ಪುತ್ರಿಯ ಲಗ್ನವಾದದ್ದು ಈಗಿನ ಕಾಲದಲ್ಲಿ ವಿಲಕ್ಷಣವಾಗಿ ತೋರಬಹುದು; ಆದರೆ ಮನುಷ್ಯನ ಗುಣ-ವಿದ್ಯೆಗಳಿಗೆ ಮಹತ್ವಕೊಡುವ ಉಜ್ವಲ ಕಾಲವು ಹಿಂದಾಗಿ, ಕೇವಲ ಗಳಿಕೆಗೆ ಮಹತ್ವಕೊಡುವ ಹೀನಕಾಲವು ಭರತಭೂಮಿಗೆ ಒದಗಿರುವದರಿಂದ, ಇಂಥ ಪವಿತ್ರ ವಿವಾಹಗಳು ಈಗ ವಿಲಕ್ಷಣವಾಗಿ ತೋರಿದರೆ ಆಶ್ಚರ್ಯವಲ್ಲ, ಪ್ರಾಚೀನಕಾಲದ ಸತಿಯರು ಪತಿಯ ಅನುಸರಣ ಮಾಡುವಲ್ಲಿ ಪರಮ ಧುರೀಣರಾದ್ದರಿಂದ ಮಾಧವನಿಗೆ ಶ್ರೀಮಂತರ ಮನೆಯ ಹೆಣ್ಣು ಭಾರವಾಗಲಿಲ್ಲ. ಎಷ್ಟಾದರೂ ವೀತಿ ಹೋತ್ರ ಬ್ರಾಹ್ಮಣನೇ ಅಲ್ಲವೇ? ಅಂದಬಳಿಕ, ಆತನ ಸಾತ್ವಿಕವಾದ ಸಂಪತ್ತು ವೈತಿಹೋತ್ರಿಯ ಪತಿಯ ಅನುಸರಣಕ್ಕೆ ಹ್ಯಾಗೆ ಬಾಧಕವಾದೀತು? ನದಿಗಳು ತಮ್ಮ ಸಮುದ್ರನಾಥನಲ್ಲಿ ಸಮರಸವಾಗಿ ಬೆರೆತುಕೊಳ್ಳುವಂತೆ, ಆರ್ಯ ಸ್ತ್ರೀಯರು ವಿವಾಹದ ನೆವದಿಂದ ತಮ್ಮ ಪತಿಯ ಸ್ಥಿತಿಗತಿಗಳಲ್ಲಿ ಸಮರಸವಾಗಿ ಬೆರೆತುಕೊಳ್ಳುವ ಕೌತುಕದ ಸಂಗತಿಯನ್ನು ಭರತಭೂಮಿಯಲ್ಲಲ್ಲದೆ ಬೇರೆ ಕಡೆಯಲ್ಲಿ ಕಾಣಬಹುದೆ? ಗರ್ಭ ಶ್ರೀಮತಿಯಾದ ವೈತ್ರಿಹೋತ್ರಿಯು ಮಾಧವನ ಪಾಣಿಗ್ರಹಣ ಮಾತ್ರದಿಂದ ಜನ್ಮದರಿದ್ರಳಾಗಿ ಹೋದದ್ದು ಜಾತಿವಂತರಾದ ಆರ್ಯ ಸ್ತ್ರೀಯರಿಗೆ ಆಶ್ಚರ್ಯದ ಮಾತಲ್ಲ. ಆ ಅಮಾತ್ಯಪುತ್ರಿಯು ಸುಗುಣೆಯು, ಸುಶೀಲೆಯು, ಸದಾನಂದ ವೃತ್ತಿಯವಳು; ಆದದ್ದರಿಂದಲೇ ಆಕೆಯ ಅಲೌಕಿಕ ಸೌಂದರ್ಯವು ರಸಿಕ-ಕವಿವರ-ಮಾಧವನಿಗೆ ಆದರಣೀಯವಾಗಿಯೂ, ಜನರಿಗೆ ವಂದನೀಯವಾಗಿಯೂ ತೋರುತ್ತಿತ್ತು. ಆ ಸಾಧ್ವಿಯು ಪರಮಾನಂದದಿಂದ ಜಡ ಮುತ್ತೈದೆಯಾಗಿ ಕೃತಕೃತ್ಯತೆಯಿಂದ ತನ್ನ ಪ್ರಭಾವಶಾಲಿಯಾದ ಪತಿಯ ಪ್ರತಿಚ್ಛಾಯೆಯಂತೆ ವರ್ತಿಸುತ್ತಿದ್ದಳು.

ಈಗ ಮಾಧವನ ವಯಸ್ಸು ನಾಲ್ವತ್ತರ ಮೇಲೆ ಐವತ್ತರ ಒಳಗೆ ಇರಬಹುದು; ಆದರೆ ಗುರುಕುಲವಾಸದಿಂದ ಬ್ರಹ್ಮಚರ್ಯವನ್ನು ಯಥಾವಿಧಿ ಪಾಲಿಸಿದ ಆತನ ತಾರುಣ್ಯವು

ಅಚ್ಚಳಿದಿದ್ದಿಲ್ಲ. ಆತನು ಇಪ್ಪತ್ತೈದು ವರ್ಷದ ತರುಣನಂತೆ ಪ್ರಕಾಶಮಾನನಾಗಿದ್ದನು. ಆತನ ನಿಲುವಿಕೆ ಎತ್ತರ, ಮೈಕಟ್ಟು ಹುರಿಕಟ್ಟಿನದು, ಬಾಹುಗಳು ಆಜಾನುವಾಗಿ ಅಂಗಕಾಂತಿಯು ಕಾದ ಬಂಗಾರವನ್ನು ಹೋಲುತ್ತಿತ್ತು; ದೈವಬಲ–ವಿದ್ಯಾಬಲ–ತಪೋಬಲಗಳ ದಿವ್ಯ ಕಾಂತಿಯು ಆತನ ಮುಖದಲ್ಲಿ ಉಕ್ಕುತ್ತಿದ್ದು, ದರ್ಶನ ಮಾತ್ರದಿಂದಲೇ ಆತನು ಜನರ ಚಿತ್ತವನ್ನು ಆಕರ್ಷಿಸುತ್ತಿದ್ದನು. ಮಾಧವನ ಅಗಾಧ ಪಾಂಡಿತ್ಯ, ಆ ಅಗಾಧ ಪಾಂಡಿತ್ಯವನ್ನು ಸಫಲಗೊಳಿಸುವ ಸತತೋದ್ಯೋಗ, ಆ ಸತತೋದ್ಯೋಗವನ್ನು ಬೆಳಗುವ ಸ್ವಾರ್ಥರಾಹಿತ್ಯ, ಆ ಸ್ವಾರ್ಥರಾಹಿತ್ಯವನ್ನು ಶೃಂಗರಿಸುವ ಸ್ವದೇಶೋದ್ಧಾರತತ್ಪರತೆ ಇವು ಕೇವಲ ಶಬ್ದವಾದಿಗಳಾದ ಪಂಡಿತರಲ್ಲಿ ಇರಬಹುದೇ? ಮಾಧವನು ಸ್ವಭಾವತಃ ಪರಮಸಾತ್ವಿಕನು– ಆದರೆ ದುಷ್ಟರ ರಾಜಸ–ತಾಮಸ ವೃತ್ತಿಯ ಪರಪೀಡೆಯ ಕೃತಿಗಳು ಕಣ್ಣಿಗೆ ಬಿದ್ದಕೂಡಲೆ, ಆತನ ಆ ಸಾತ್ವಿಕ ವೃತ್ತಿಯೇ ರಾಜಸ–ತಾಮಸ ವೃತ್ತಿಗಳಲ್ಲಿ ರೂಪಾಂತರಿಸಿ, ಲೋಕಕಲ್ಯಾಣವನ್ನುಂಟು ಮಾಡುತ್ತಿತ್ತು. ಪ್ರಿಯ ವಾಚಕರೇ, ಪರೋಪಕಾರ ಮಾಡುವಾಗ ಬಡವನಾದವನು ಬಡವನೇ? ಪರಹಿತಕ್ಕಾಗಿ ದೇಹದ ಆಹುತಿಯನ್ನು ಕೊಟ್ಟವನು ಆತ್ಮಘಾತಕಿಯೇ? ದುಷ್ಟಶಾಸನ – ಶಿಷ್ಟ ಪರಿಪಾಲನಗಳಲ್ಲಿ ಸಂತಾಪಗೊಂಡವನು ವಿಕಾರವಶನೇ. ಅದರಂತೆ ಪರಮ ಧನ್ಯಳಾದ ಕರ್ನಾಟಕ ಭೂಮಾತೆಯ ಪ್ರಭಾವಶಾಲಿ ಪುತ್ರನಾದ ಪರೋಪಕಾರದಕ್ಷ ಮಾಧವನು, ಕಾರ್ಯತಃ ಸಾತ್ವಿಕನೇ ಆಗಿರಲಿ, ರಾಜಸನೇ ಆಗಿರಲಿ, ತಾಮಸನೇ ಆಗಿರಲಿ ಆತನ ಲೋಕೋದ್ಧಾರದ ಕಾರ್ಯಗಳಲ್ಲಿ ಆತನ ಗುಣಗಳೆಲ್ಲ ಅಡಗಿಹೋಗಿ, ಆತನು ಆಗಾಗ್ಗೆ ಮಾಡುವ ಲೋಕಕಲ್ಯಾಣವೊಂದು ಮಾತ್ರ ಒಡೆದು ಕಾಣುತ್ತಿತ್ತು.

ಒಂದು ಕೃಷ್ಣ ಪಕ್ಷದ ರಾತ್ರಿಯು, ನಾಲ್ಕುತಾಸು ಮೀರಿದೆ. ಹೊರಗೆ ಮಳೆಯು ಕಟ್ಟಿ ಹರಿಯುತ್ತಿದ್ದದ್ದರಿಂದ, ಒಬ್ಬರ ಮಾತು ಒಬ್ಬರಿಗೆ ಕೇಳದಾಗಿವೆ. ಸಕಾಲವೃಷ್ಟಿಯ ಮೂಲಕ ಜನರೆಲ್ಲ ಆನಂದಮಗ್ನರಾಗಿದ್ದಾರೆ. ಶ್ರೀಮಂತರು ಉಪ್ಪರಿಗೆಯ ಕಿಡಕಿಗಳ ಬಳಿಯಲ್ಲಿ ಆನಂದದಿಂದ ಕುಳಿತುಕೊಂಡಿದ್ದಾರೆ. ರಸಿಕರ ಗಾಯನವಾದನಗಳು ಪರಮ ರಮಣೀಯವಾಗಿ ಕೇಳಿಸಹತ್ತಿವೆ. ಒಕ್ಕಲಿಗರ ಆನಂದಕ್ಕೆ ಕಳೆಯೇರಿ, ಅವರು ಬೆಳೆಗಳ ಭರವನ್ನು ಬಣ್ಣಿಸ ತೊಡಗಿದ್ದಾರೆ. ಅವರ ಕೊಟ್ಟಿಗೆಯಲ್ಲಿ ದನಗಳು ಆನಂದದಿಂದ ಮೆಲಕು ಹಾಕುತ್ತಲಿವೆ. ಅವರ ಆಳುಮಕ್ಕಳು ಹಾಡಿ ಹಾಡಿ ಬೀಸುತ್ತಲಿದ್ದಾರೆ. ಸೋರಕ ಮನೆಯವರು ಮಾಳಿಗೆ ಮೆಟ್ಟುವಾಗ ''ನಿಂತಿತೇ? ಮತ್ತೆ ಯಾವಕಡೆಗೆ ಸೋರುವದು?'' ಎಂದು ಒಳಗಿನವರನ್ನು ಒದರಿ ಒದರಿ ಕೇಳುತ್ತಲಿದ್ದಾರೆ; ಕೆಲವು ಮನೆಯವರು ಸೋರಿದ ನೀರು ತುಂಬಿ ಚೆಲ್ಲುತ್ತಲಿದ್ದಾರೆ: ಕೆಲವು ಮನೆಯವರು ಕಟ್ಟಿದ್ದ ಹರಿಗಳನ್ನು ಸರಿಮಾಡ ತೊಡಗಿದ್ದಾರೆ. ಮುಂಗಾರಿಯ ಮಳೆಯಾದ್ದರಿಂದ, ಕೋಲಮಿಂಚಿನ ಹೊಯ್ಲುವೂ, ಗುಡುಗು–ಸಿಡಿಲುಗಳ ಅಬ್ಬರವೂ ಭಯವನ್ನುಂಟುಮಾಡುತ್ತಲಿವೆ. ''ಅಬ್ಬಬ್ಬಾ! ಏನು ಮಳೆಯಪ್ಪಾ ಇದು! ರಾತ್ರಿಯಾದದ್ದರಿಂದ ಕಾಣುವಂತಿಲ್ಲ, ಹಗಲಾಗಿದ್ದರೆ ಆರ್ಭಟಿಸಿ ಹೋಗುತ್ತಿತ್ತು. ಎಂಥ ಅಣೆಯಕಲ್ಲಿನ ಹೊಡೆತವಿದು! ಹಾದಿಯಲ್ಲಿ ಸಿಕ್ಕಗಿಕ್ಕರೆ ಸತ್ತುಹೋಗುವದೇ ಸರಿ'' ಎಂದು ನುಡಿಯುತ್ತ ತಂಗಾಳಿಗೆ

ನಡುಗುಹುಟ್ಟಿದ್ದರಿಂದ ಮನೆಯೊಳಗಿನ ಮುದುಕರು ಒಬ್ಬೊಬ್ಬರೇ ಮುಸುಗಿಕ್ಕಿ ಮಲಗಿಕೊಳ್ಳ ಹತ್ತಿದ್ದಾರೆ. ಹುಡುಗರಿಗೆ ನಿದ್ದೆ ಹತ್ತಿಬಿಟ್ಟಿದ್ದರಿಂದ, ಅವರ ಆಣೇಕಲ್ಲಿನ ಕುಣಿತವು ಕಣ್ಣಿಗೆ ಬೀಳದಾಗಿದೆ, ಮನೆಯ ಮುಖ್ಯರು, ಸೋರಿ ಸಾಮಾನುಗಳೆಲ್ಲಿ ಕೆಡುವವೋ ಎಂಬ ಚಿಂತೆಯಿಂದ ದೀಪ ಹಿಡದು ಎಲ್ಲ ಕಡೆಯಲ್ಲಿ ನೋಡುತ್ತ ಸೋರುವ ಸ್ಥಳಗಳಲ್ಲಿಯ ಸಾಮಾನುಗಳನ್ನು ಕಿತ್ತಿಕಿತ್ತಿ ಇಡುತ್ತ'' ನಿಮಗೆ ಏತರ ಚಿಂತೆ'' ಎಂದು ಮಲಗಿದವರ ಮೇಲೆ ಹರಿಹಾಯ ಹತ್ತಿದ್ದಾರೆ. ಕೆಲವು ದನಗಳು ಮಳೆಯ ಅರ್ಭಾಟಕ್ಕೆ ಬೆದರಿ ಹರಕೊಂಡು ಹೊರಬಿದ್ದು''ಅಂಬಾ'' ಎಂದು ಕೂಗಹತ್ತಿವೆ. ಹಳ್ಳ-ಸರವುಗಳು ನಾಲ್ಕೂ ಕಡೆಗೆ ಭೋರ್ಗರೆಯಹತ್ತಿವೆ. ''ಇದೇನು ಜಲಪ್ರಳಯವೇ ಒದಗಿತೋ ಏನು?'' ಎಂದು ಜನರು ನಿದ್ದೆಯಿಂದ ಆಕಳಿಸುತ್ತ ಮಳೆಯು ಯಾವಾಗ ನಿಂತೀತೆಂದು ಹಾದಿಯ ನೋಡುತ್ತತೂಕಡಿಸಹತ್ತಿದ್ದಾರೆ. ರಾತ್ರಿ ಐದು ತಾಸಾಯಿತು, ಆರು ತಾಸಾಯಿತು, ಏಳರ ಮನೆಗೆ ಬಂದಿತು; ಆದರೂ ಮಳೆ ನಿಲ್ಲಲೊಲ್ಲದು! ಕುಳಿತವರಿಗೆ ಕುಳಿತಲ್ಲಿಯೇ, ಅಡ್ಡಾದವರಿಗೆ ಅಡ್ಡಾದಲ್ಲಿಯೇ ನಿದ್ದೆ ಹತ್ತಿಹೋಯಿತು.

ಇಂಥ ಭಯಂಕರ ಮಳೆಯ ಸುದ್ದಿಯೇ ನಮ್ಮ ಮಾಧವನಿಗೆ ಇದ್ದಂತೆ ತೋರಲಿಲ್ಲ. ಅವನು ಅಂತರ್ಗೃಹದಲ್ಲಿ ವಿಚಾರಮಗ್ನನಾಗಿ ಕುಳಿತುಬಿಟ್ಟಿದ್ದನು. ಸಮೆಯಲ್ಲಿ ದೀಪವು ನಿಚ್ಚಳವಾಗಿ ಉರಿಯುತ್ತಿತ್ತು, ಅದರ ಬಳಿಯಲ್ಲಿ ಒಂದು ತಾಡವಾಲೆಯ ಪುಸ್ತಕವು ಉಚ್ಚಿ ಇಟ್ಟಿತ್ತು ಮಾಧವನು ಕುಶಾಸನದ ಮೇಲೆ ಮಣೆಗೆ ಆತು ಕುಳಿತುಕೊಂಡಿದ್ದನು. ಪುಸ್ತಕದ ಕಡೆ ಆತನ ದೃಷ್ಟಿಯು ಇದ್ದಂತೆ ತೋರುತ್ತಿದ್ದರೂ ಪುಸ್ತಕ ನೋಡುವ ಉದ್ದೇಶವು ಆತನದಿದ್ದಿಲ್ಲ ವೆಂದು ಸಹಜವಾಗಿ ತಿಳಿಯುತ್ತಿತ್ತು. ಹೀಗೆ ವಿಚಾರಮಗ್ನನಾಗಿದ್ದ ಮಾಧವನು ನಡುವೆ ಒಂದೆರಡು ಸಾರೆ ''ಸದ್ಗುರೋ'' ಎಂದು ಉಸುರುಗರೆದನು. ಧೀರನೂ, ಜ್ಞಾನಸಂಪನ್ನನೂ, ಗುರುಪುತ್ರನೂ ಆದ ಮಾಧವನು ಹೀಗೆ ಉಸುರುಗಳೆಯಲಿಕ್ಕೆ ಕಾರಣವೇನಿರಬಹುದು? ಆತನು ಸಾಂಸಾರಿಕ ತಾಪದಿಂದ ಪೀಡಿತನಾಗಿರಬಹುದೇ? ಛೇ ಛೇ! ಸಂಸಾರ ತಾಪಕ್ಕೆ ಆತನಿಗೆ ಸರ್ವಥಾ ಆಸ್ಪದವಿದ್ದಿಲ್ಲ; ಯಾಕಂದರೆ ಆತನ ತಾಯಿ – ತಂದೆಗಳು ಸಜ್ಜನರು. ಆತನ ತಮ್ಮಂದಿರು ಜ್ಞಾನಸಂಪನ್ನರು. ಸ್ವತಃ ಮಾಧವನು ಘನವಿದ್ವಾಂಸನಿದ್ದು, ಸರ್ವಜ್ಞ ವಿಷ್ಣುಶರ್ಮರಂಥವರ ಶಿಷ್ಯನಾಗಿದ್ದನು; ಆತನ ಅರ್ಧಾಂಗಿಯಾದ ವೈತಿಹೋತ್ರಿಯು ಕುಲೀನಳು–ಪರಮ ಸಾಧ್ವಿಯು ಆಗಿದ್ದಳು. ಇಂಥ ಸಜ್ಜನಸಂಗದಲ್ಲಿ ವ್ಯವಹರಿಸುವ ವಿವೇಕಿಯಾದ ಮಾಧವನಿಗೆ ಸಾಂಸಾರಿಕ ತಾಪವು ಎತ್ತಣಿಂದ ಸೋಂಕಬೇಕು? ದುಷ್ಟ ಮುಸಲ್ಮಾನರಿಂದ ಹಿಂದೂ ಜನರಿಗಾಗುತ್ತಿದ್ದ ತಾಪವನ್ನು ನೋಡಿ ಕರುಣಾಶಾಲಿಯಾದ ಮಾಧವನಿಗೆ ಬಹಳ ವ್ಯಸನವಾಗುತ್ತಿತ್ತು, ಮುಸಲ್ಮಾನರು ಹಿಂದೂಜನರ ರಕ್ತಸುರಿಸುವದನ್ನೂ, ಒತ್ತಾಯದಿಂದವರ ಕುಲಗೆಡಿಸುವದನ್ನೂ, ಅವರ ಸ್ತ್ರೀಯರ ಪಾತಿವ್ರತ್ಯ ಭಂಗ ಮಾಡುವದನ್ನೂ, ಗುಡಿ–ಗುಂಡಾರಗಳಲ್ಲಿ ಗೋಗಳನ್ನು ವಧಿಸುವದನ್ನೂ ನೋಡಿ, ಆತನು ಯಾವಾಗಲೂ ಕನಿಕರಪಡುತ್ತಿದ್ದನು. ಆ ಗಂಭೀರನು ಈ ಭಯಂಕರ ಸ್ಥಿತಿಯನ್ನು ನಿಲ್ಲಿಸುವ ಉಪಾಯವನ್ನು ಕುರಿತು ಯೋಚಿಸುತ್ತಿರುವಾಗ ತನ್ನ ದಾರಿದ್ರ್ಯವನ್ನೂ, ಸಹಾಯ ಹೀನತೆಯನ್ನೂ ನೆನಿಸಿ ತಳಮಳಿಸಿದನು. ವಿಚಾರಾಂತದಲ್ಲಿ ಸ್ವದೇಶಬಾಂಧವರ ಸಂಕಟ

ನಿವಾರಿಸುವದು ಅಸಂಭವವಾಗಿ ತೋರಿ, ಆತನು ಹೀಗೆ ಉಸುರ್ಗರೆಯುತ್ತಿದ್ದನು. ತನ್ನ ಅರ್ಧಾಂಗಿಯು ಬಂದದ್ದು ಆತನಿಗೆ ಗೊತ್ತೇ ಆಗಿದ್ದಿಲ್ಲ. ದುಃಖವೇಗದಲ್ಲಿ ಆತನು ಒಮ್ಮಿಂದೊಮ್ಮೆ ತನ್ನನ್ನು ಕುರಿತು– "ಮಾಧವ, ಕೆಲಸಕ್ಕೆ ಬಾರದ ನಿನ್ನ ಹಾಳು ಪಾಂಡಿತ್ಯವನ್ನು ತಕ್ಕೊಂಡು ಮಾಡುವದೇನು? ಕೈಯಲ್ಲಿ ಪುಸ್ತಕ ಹಿಡಿಯುವ ಬದಲು ಶಸ್ತ್ರ ಹಿಡಿಯಲು ಸಮರ್ಥನಾಗಿದ್ದರೆ ಈಗಿನ ಕಾಲದಲ್ಲಿ ನಿನ್ನಿಂದ ದೇಶಕಲ್ಯಾಣವು ವಿಶೇಷವಾಗುತ್ತಿತ್ತು. ನೀನು ಒಂಟೆಯ ಹೊರೆಯ ಪುಸ್ತಕಗಳನ್ನು ಓದಿದ್ದು ವ್ಯರ್ಥವಲ್ಲವೇ? ಕಾರ್ಯಕಾರಿಯಲ್ಲದ ನಿನ್ನ ಶಬ್ದ ಪಾಂಡಿತ್ಯವು ಸುಟ್ಟುಹೋಗಲಿ. ಅನಾಥರ ಸಂಕಟನೋಡಿ ನಿನ್ನ ಹೃದಯವು ಕರಗುತ್ತದೆ. ದುಷ್ಟರ ದುರ್ವರ್ತನವನ್ನು ನೋಡಿ ನಿನ್ನ ಸರ್ವಾಂಗವು ತಪ್ತವಾಗುತ್ತದೆ; ಆದರೆ ಹೊಟ್ಟೆಯಲ್ಲಿದ್ದ ಸಿಟ್ಟು ರಟ್ಟೆಯಲ್ಲಿಲ್ಲೆನ್ನುವಂತೆ ದುರ್ಬಲನಾದ ನಿನ್ನ ಹೃದಯವು ಕರಗಿ ಮಾಡುವದೇನು? ಸರ್ವಾಂಗವು ತಪ್ತವಾಗಿ ಮಾಡುವದೇನು? ನಿನ್ನ ಸಮರ್ಥ ಗುರುಗಳ ಮನೋದಯವನ್ನು ನೀನು ಹ್ಯಾಗೆ ಕೊನೆಗಾಣಿಸುವೆ? ಹಾಯ್ ಹಾಯ್! ಕರ್ನಾಟಕ ಭೂಮಾತೆಯೇ, ನೀನು ತೇಜೋಹೀನಳಾದೆಯಾ? ವೀರಪುತ್ರರು ನಿನ್ನಲ್ಲಿ ಹುಟ್ಟದಾದರೆ? ನಮ್ಮಂಥ ಕೈಲಾಗದವರನ್ನು ಹಡೆದು ನೀನು ವ್ಯರ್ಥವಾಗಿ ದಣಿದೆ!'' ಹೀಗೆ ನುಡಿಯುವಾಗ ಮಾಧವನ ಕಣ್ಣೀರುಗಳುದುರಿದುವು!

ಎಂದೂ ನೋಡದೆಯಿದ್ದ ಪತಿಯ ಈ ದುಃಖದ ಸ್ಥಿತಿಯನ್ನು ನೋಡಿ, ಎಂದೂ ಕೇಳದೆಯಿದ್ದ ಪತಿಯ ಈ ಔದಾಸೀನ್ಯದ ಉದ್ಗಾರವನ್ನು ಕೇಳಿ ವೈತಿಹೋತ್ರಿಯು ಬೆರಗಾದಳು! ಅಮಾತ್ಯ ಪುತ್ರಿಯಾದದ್ದರಿಂದ, ಪತಿಯ ಮಾತಿನ ಅರ್ಥವು ತಟ್ಟನೆ ಆಕೆಯ ಮನಸ್ಸಿಗೆ ಹೊಳೆಯಿತು. ಯವನರ ಕ್ರೂರ ಕೃತಿಗಳನ್ನೂ, ಹಿಂದೂ ಜನರ ದೈನ್ಯವನ್ನೂ ತಂದೆಯ ಮುಖದಿಂದ ಆಕೆಯು ಎಷ್ಟೋ ಸಾರೆ ಕೇಳಿದ್ದಳು; ಆದ್ದರಿಂದ ಪತಿಯ ಉದ್ಗಾರದಿಂದ ಆಕೆಯ ಮನಸ್ಸಿಗೂ ವ್ಯಥೆಯಾಯಿತು. ಪತಿಯ ಕಾಲದೆಸೆಯಲ್ಲಿ ಕುಳಿತಿದ್ದ ಆಕೆಯು ವಿನಯದಿಂದ ಪತಿಯನ್ನು ಕುರಿತು–

ವೈತಿಹೋತ್ರಿ–ಇಷ್ಟೇಕೆ ಉದಾಸೀನವಾಗಬೇಕದು! ತಪೋಧನರಿಗೆ ಯಾವದೂ ಅಸಾಧ್ಯವಲ್ಲ. ಅಗಾಧ ತಪಸ್ಸಿಗೆ ಘನತರವಾದ ಜ್ಞಾನದ ಜೋಡು ಇದ್ದ ಬಳಿಕ ಮತ್ತೆ ಏನು ಬೇಕು? ತಮ್ಮ ಅರ್ಧಾಂಗಿಯು ಅಮಾತ್ಯ ಪುತ್ರಿಯಲ್ಲವೆ? ಆಗುವದಾದರೆ ತಮ್ಮಿಂದಲೇ ದೇಶೋದ್ಧಾರವಾಗಬೇಕು.

ಮಾಧವ – ಯಾರು? ಅಮಾತ್ಯ ಪುತ್ರಿಯೇನು? ಪ್ರಿಯೆ, ಮಾಧವನ ಪ್ರಾಚೀನ ಪುಣ್ಯದಿಂದಲೇ ನೀನು ಆತನ ಪಾಣಿಗ್ರಹಣ ಮಾಡಿರುವೆ. ಬಂದದ್ದು ಗೊತ್ತೇ ಆಗಲಿಲ್ಲ. ಮಾಧವನು ಎಂಥ ವಿದ್ವಾಂಸನಾದರೂ, ಈಗ ಆತನು ನಿಶ್ಚಯವಾಗಿ ಅಮಾತ್ಯ ಪುತ್ರಿಯ ಬಳಿಯಲ್ಲಿ ರಾಜಕಾರಣದ ಅಧ್ಯಯನ ಮಾಡಬೇಕಾಗಿದೆ; ಆತನು ಪುಸ್ತಕ ಬಿಟ್ಟು, ಕೈಯಲ್ಲಿ ಶಸ್ತ್ರವನ್ನು ಧರಿಸಬೇಕಾಗಿದೆ. ಇಟ್ಟುಬಿಡು, ಈಗ ಪುಸ್ತಕವನ್ನು ನಿನ್ನ ಕೈಮುಟ್ಟಿ ಕಟ್ಟಿ ಅತ್ತ ನಾಗವಂದಿಗೆಯ ಮೇಲೆ ಇಟ್ಟುಬಿಡು. ಸ್ವದೇಶದ ಉದ್ಧಾರವಾಗುವವರೆಗೆ ನಾನು ಪುಸ್ತಕವನ್ನು ಮುಟ್ಟುವ ಹಾಗಿಲ್ಲ. ದೇಶದಲ್ಲಿ ಸುಖಶಾಂತಿಗಳು ನೆಲೆಗೊಂಡಬಳಿಕ, ಪುಸ್ತಕಜ್ಞಾನದ ವೈಭವವನ್ನು

ತೋರಿಸುವ ಪ್ರಂಸಗಬಂದರೆ ತೋರಿಸೋಣವಂತೆ; ಆದರೆ ಅಮಾತ್ಯ ಪುತ್ರೀ, ದೇಶೋದ್ಧಾರಕ್ಕಾಗಿ ಯಾವ ಮಾರ್ಗವನ್ನು ಅವಲಂಬಿಸಬೇಕಾಗಿದೀತು?

ವೈತಿಹೋತ್ರಿ– ಇದೇನು ಕೇಳುವದು? ಅತ್ಯಂತ ಸಮರ್ಥರಾದ ಯವನರ ಅಬ್ಬರಕ್ಕೆ ಬೆದರಿ, ನಮ್ಮಲ್ಲಿಯ ಮಹಾ ಮಹಾ ವೀರರೂ, ಶ್ರೇಷ್ಠ ಮುತ್ಸದ್ದಿಗಳೂ ಮುಂದುಗಾಣದೆ ಹೋಗಿರಲು, ನನ್ನ ಪಾಡೇನು? ಸತಿಯು ಪತಿಯನ್ನು ಅನುಸರಿಸಿ ನಡೆಯುವುದು ಆಕೆಯ ಮುಖ್ಯ ಧರ್ಮವೆಂಬ ಮಾತಷ್ಟು ನನಗೆ ಗಟ್ಟಿಮುಟ್ಟಿಯಾಗಿ ಗೊತ್ತಿರುವದು.

ಮಾಧವ–ಪ್ರಿಯೇ, ನಿನಗೆ ಗಟ್ಟಿಮುಟ್ಟಾಗಿ ಗೊತ್ತಿದ್ದ ಈ ಮಾತು ಬಲು ಮಹತ್ವದ್ದು. ಈ ಅನುಸರಣ ಗುಣವೊಂದು ಇಲ್ಲದ್ದರಿಂದಲೇ ನಮ್ಮಲ್ಲಿಯ ಒಕ್ಕಟ್ಟು ಹಾಳಾಗಿ, ನಾವು ತೇಜೋ ಹೀನರಾಗಿದ್ದೇವೆ ; ನಮ್ಮನ್ನು ಯವನರು ಸಿಕ್ಕಹಾಗೆ ಎಳೆಯಹತ್ತಿದ್ದಾರೆ. ಈ ಅನುಸರಣ ಗುಣವು ನಷ್ಟವಾದದ್ದನ್ನು ಕುರಿತು ಹೆಚ್ಚಿಗೆ ಹೇಳುವದೇನು? ಅಹಂಭಾವ, ಸ್ವಾರ್ಥಪರಾಯಣತೆ ಇವು ಹೆಚ್ಚಾದದ್ದರಿಂದ ಮಗನು ತಂದೆಯ ಅನುಸರಣ ಮಾಡನು; ಹೆಂಡತಿಯು ಗಂಡನ ಅನುಸರಣ ಮಾಡಳು; ಕಿರಿಯರು ಹಿರಿಯರನ್ನು ಅನುಸರಿಸರು; ಶಿಷ್ಯರು ಗುರುಗಳನ್ನು ಲೆಕ್ಕಿಸರು. ಇಂಥ ಸ್ಥಿತಿಯಲ್ಲಿ ದೇಶಹಿತಕ್ಕಾಗಿ ಹೆಣಗುವವನನ್ನು ದೇಶದ ಜನರು ಅನುಸರಿಸದಿದ್ದರೆ ಆಶ್ಚರ್ಯ ವೇನು? ಶ್ರೀರಾಮನು ತಂದೆಯ ಅನುಸರಣ ಮಾಡುವಾಗ, ಅಹಂಭಾವವನ್ನು ಬಿಟ್ಟು ಪುತ್ರಭಾವವನ್ನೂ, ರಾಜ್ಯ ಪ್ರಾಪ್ತಿರೂಪ ಸ್ವಾರ್ಥವನ್ನು ಬಿಟ್ಟು ಕರ್ತವ್ಯಬುದ್ಧಿಯನ್ನೂ ವಹಿಸಿ ಅರಣ್ಯವಾಸದ ಕಷ್ಟಕ್ಕೆ ಗುರಿಯಾಗಬೇಕಾಯಿತು. ಅದರಂತೆ, ಶ್ರೀ ಸೀತಾಮಾತೆಯು ಅಹಂಭಾವವನ್ನು ಬಿಟ್ಟು ಸತೀಭಾವವನ್ನೂ, ಸ್ವಾರ್ಥವನ್ನು ಬಿಟ್ಟು ಪತ್ಯರ್ಥರೂಪ ಕರ್ತವ್ಯವನ್ನು ವಹಿಸಿ, ಅರಣ್ಯವಾಸದ ಕಷ್ಟಕ್ಕೆ ಈಡಾಗಬೇಕಾಯಿತು. ಇದೇ ಮೇರೆಗೆ ಲಕ್ಷ್ಮಣನು, ತನ್ನ ಅಣ್ಣನಾದ ಶ್ರೀರಾಮನನ್ನು ಅನುಸರಿಸುವಾಗ ಅಹಂಭಾವವನ್ನು ಬಿಟ್ಟು ಭ್ರಾತೃಭಾವವನ್ನೂ, ಸುಖಸರ್ವಸ್ವವನ್ನು ತ್ಯಜಿಸಿ ಆಜ್ಞಾಪಾಲನ ಧರ್ಮವನ್ನೂ ವಹಿಸಿ, ಮನೋನಿಗ್ರಹದಿಂದ ಪರಿಪರಿಯ ಕಷ್ಟಗಳನ್ನು ಅನುಭವಿಸಬೇಕಾಯಿತು. ಹೀಗೆ ತಮ್ಮ ತಮ್ಮ ಸಂಬಂಧಗಳನ್ನರಿತು, ಆ ಸಂಬಂಧವನ್ನು ಕಾಯ್ದುಕೊಳ್ಳುವಾಗ ಅನ್ಯರ ಸಲುವಾಗಿ ಸ್ವಾರ್ಥವನ್ನು ತ್ಯಜಿಸುವ ಸದ್ಗುಣವು ನಮ್ಮಲ್ಲಿ ದಿನದಿನಕ್ಕೆ ಕಡಿಮೆಯಾಗುತ್ತ ಬಂದಿದೆ; ಅಂದಬಳಿಕ ಈಗ ಯಾವನಾದರೊಬ್ಬನು ಸ್ವದೇಶಹಿತಕ್ಕಾಗಿ ಯತ್ನಿಸಹತ್ತಿದರೆ, ಅವನ ಸಂಗಡ ಕಷ್ಟಪಡಲಿಕ್ಕೆ ಎಷ್ಟು ಜನರು ಸಿದ್ಧರಾಗ ಬಹುದು? ಈಗ ಪ್ರತಿಯೊಬ್ಬನು ತನ್ನ ಹಾಗೂ ತನ್ನವರ ಹಿತವನ್ನು ನೋಡುತ್ತಿರುವನಲ್ಲದೆ, ತನ್ನ ದೇಶದ ಹಿತದ ಕಲ್ಪನೆಯು ಸಹ ಅವನ ಮನಸ್ಸಿನಲ್ಲಿ ಬರುವದಿಲ್ಲ. ಎಲ್ಲರ ಒದ್ದಾಟವು ಸ್ವಾರ್ಥಕ್ಕಾಗಿ ನಡೆದಿರುತ್ತದೆ. ''ಯಾರ ಉಸಾಬರಿ ನಮಗೇನು? ನಮ್ಮಷ್ಟಕ್ಕೆ ನಾವಿದ್ದರಾಯಿತು'' ಎಂಬ ನೀಚ ವಿಚಾರದಲ್ಲಿ ತೊಡಗಿರುವ ಈಗಿನ ಕಾಲದಲ್ಲಿ, ಸ್ವದೇಶೋದ್ಧಾರಕನಿಗೆ ಹೆಜ್ಜೆ ಹೆಜ್ಜೆಗೆ ವಿಘ್ನಗಳು ಬರಬಹುದಲ್ಲವೇ? ಮೊದಲೇ ನೀಚವಾದ ಸ್ವಾರ್ಥಶಕ್ತಿ, ಅದರಲ್ಲಿ ಸಮರ್ಥ ರಾದ ಮುಸಲ್ಮಾನರ ಕ್ರೂರ ಕೃತ್ಯಗಳ ಭಯ, ಅಂದಬಳಿಕ ಜನರು ಸ್ವದೇಶಿಹಿತಕ್ಕಾಗಿ ಮುಂದುವರಿಯುವದು ಹ್ಯಾಗೆ? ದೇವಗಿರಿ, ಒರಂಗಲ್ ಮೊದಲಾದ ಸಮರ್ಥ ಹಿಂದೂ

ರಾಜ್ಯಗಳು ನಮ್ಮವರ ನೀಚ ಸ್ವಾರ್ಥಮೂಲವಾದ ಕರುಳು ಕತ್ತರಿಸುವ ಕೃತಿಗಳಿಂದ ಮಣ್ಣುಗೂಡಿ ಹೋದವು. ಈಗ ಉಳಿದಿರುವ ನಮ್ಮ ಸಣ್ಣಪುಟ್ಟ ರಾಜ್ಯಗಳು ಯವನರ ಅಬ್ಬರಕ್ಕೆ ತತ್ತರಿಸತೊಡಗಿವೆ. ಅರಸರ ಗತಿಯೇ ಹೀಗಾದಬಳಿಕ ಪಾಪ ಸಾಮಾನ್ಯ ಜನರ ಪಾಡೇನು? ಅಮಾತ್ಯಪುತ್ರೀ, ನಾನು ಸ್ವದೇಶೋದ್ಧಾರಕ್ಕಾಗಿ ಟೊಂಕಕಟ್ಟಿ ಮುಸಲ್ಮಾನರ ದಾಳಿಗಳನ್ನು ತಡೆಯಲು ಯತ್ನಿಸಿದರೆ, ನನ್ನನ್ನು ಯಾರು ಅನುಸರಿಸುವರು? ಲೋಕಸಂಗ್ರಹವೇ ಆಗದಬಳಿಕ ಲೌಕಿಕ ಮಹಾಕಾರ್ಯವು ಹ್ಯಾಗೆ ಸಾಧಿಸಬೇಕು? ನನ್ನಲ್ಲಿ ದ್ರವ್ಯಬಲವಿಲ್ಲ– ಮನುಷ್ಯ ಬಲವಿಲ್ಲ; ಅಂದಬಳಿಕ ಮುಸಲ್ಮಾನರಂಥ ಸಮರ್ಥ ಶತ್ರುಗಳನ್ನು ಮುಂಗೈ ಹಿಡಿದು ತರಬುವ ಬಗೆ ಹ್ಯಾಗೆ? ಹೊರಗೆ ಮಳೆ ಸುರಿಯುತ್ತಿರುವಂತೆ, ಸ್ವದೇಶೋದ್ಧಾರಕ್ಕಾಗಿ ಈಗ ಸುವರ್ಣವೃಷ್ಟಿಯು ಆಗಲೇಬೇಕು: ಆದರೆ ಅದು ಹ್ಯಾಗಾಗಬೇಕು? ಪ್ರಿಯೇ, ಇಂಥ ಪ್ರಸಂಗದಲ್ಲಿ ನಾನು ಏನು ಮಾಡಲಿ?

ವೈತಿಹೋತ್ರಿ–ರಾಜಕೀಯ ತಂತ್ರಗಳಿಂದ ನನ್ನ ತಂದೆಯ ಮನಸ್ಸನ್ನು ಮೆಚ್ಚಿಸಿ, ನನ್ನ ಪಾಣಿಗ್ರಹಣ ಮಾಡಿದವರ ಮುಂದೆ ಮಾತಾಡುವ ಯೋಗ್ಯತೆಯು ನನ್ನದಲ್ಲ; ಆದರೂ ಸಥಿಯಿಂದ ಮಾತಾಡುವುದಕ್ಕಾಗಿ ಕ್ಷಮಿಸಬೇಕು. ಮನುಷ್ಯನು ಸತ್ವಶಾಲಿಯಾಗುವದೂ, ಸತ್ವಹೀನನಾಗುವದೂ ಸಹವಾಸದ ಫಲವು, ವಿಷಯಾಸಕ್ತರ ಸಹವಾಸದಿಂದ ಆತನು ಸತ್ವಹೀನನೂ, ತಪಸ್ವಿಗಳ ಸಹವಾಸದಿಂದ ಸತ್ವಶಾಲಿಯೂ ಆಗುವನು. ಬಹು ದಿವಸ ಸ್ವರಾಜ್ಯದ ನಿರುಪದ್ರವದ ಸುಖವನ್ನು ಅನುಭವಿಸಿದ ಕನ್ನಡಿಗರಿಗೆ, ವಿಷಯಸುಖದ ನಂಜು ತಲೆಗೇರಿರುವದರಿಂದ, ಅವರ ಸ್ವಭಾವಸಿದ್ಧ ಸದ್ಗುಣಗಳು ಮೃತಪ್ರಾಯವಾಗಿ, ಅವರ ಒಳಜಗಳಗಳು ಬೆಳೆದಿರುವವು. ಅವರ ಆ ನಂಜು ಇಳಿಯುವುದಕ್ಕಾಗಿ, ತಮ್ಮಂಥ ತಪೋಧನರು ಧರ್ಮ ಜಾಗೃತಿರೂಪ ಅಂಜನವನ್ನು ಅವರ ಕಣ್ಣಿಗೆ ಹಚ್ಚಿದರೆ, ಸದ್ಗುಣಗಳ ಜಾಗೃತೆಯಾಗಿ ತದ್ವಾರಾ ಸತ್ವವೃದ್ಧಿಯು ತಾನೇ ಆಗುವದು. ''ತಪಸ್ಸಿನಿಂದ ಕಾರ್ಯವಾಗುತ್ತದಲ್ಲದೆ ದುಡ್ಡಿನಿಂದ ಕಾರ್ಯವಾಗುವದಿಲ್ಲೆಂ''ದು ಅಪ್ಪನು ಯಾವಾಗಲೂ ಅನ್ನುತ್ತಿರುವನು.

ಮಾಧವ–ಪ್ರಿಯೇ, ವೈತಿಹೋತ್ರಿ, ನಿನ್ನ ಮಾತುಗಳು ಎಷ್ಟು ಸಮಂಜಸವಾದವುಗಳು! ನಿನ್ನನ್ನು ಹಡೆದ ವಿಪ್ರವರ್ಯ–ವೀತಿಹೋತ್ರರವರು ಧನ್ಯರೇ ಸರಿ. ಕುಲೀನಳಾದ ನಿನ್ನ ಪಾಣಿಗ್ರಹಣ ಮಾಡಿದ ನನ್ನ ಮನೋರಥಗಳು ಸಿದ್ಧಿಸುವಲ್ಲಿ ಆಶ್ಚರ್ಯವಿಲ್ಲ; ಆದರೆ ನಿನ್ನ ಮಾತಿನಿಂದ ನಾನು ತಪೋಧನನಾಗಬೇಕಾಯಿತಲ್ಲವೇ? ಅದಕ್ಕೆ ನಿನ್ನ ಒಪ್ಪಿಗೆ ಯಿರುವದಷ್ಟೇ?

ವೈತಿಹೋತ್ರಿ – ಅವ್ವಯ್ಯ! ಒಪ್ಪಿಗೆಯಿರದೇನು ಮಾಡೀತು? ತಮ್ಮಂಥ ಸತ್ವಶಾಲಿಗಳ ಪಾಣಿಗ್ರಹಣ ಮಾಡಿದ್ದು ವ್ಯರ್ಥವೆ? ಸ್ವದೇಶೋದ್ಧಾರಕ್ಕಿಂತ ಹೆಚ್ಚಿನ ಪವಿತ್ರ ಕಾರ್ಯವು ಯಾವದಿರುವದು? ಹುಟ್ಟಿದ ಪ್ರಾಣಿಯು ಎಂದಿಲ್ಲೊಂದು ದಿನ ಸತ್ತುಹೋಗತಕ್ಕದ್ದೇ ಅಲ್ಲವೆ? ಕೀರ್ತಿಯನ್ನಿಟ್ಟು ದೇಹವನ್ನು ತ್ಯಜಿಸುವದು ಮನುಷ್ಯ ಪ್ರಾಣಿಯ ವಿಶೇಷ ಲಕ್ಷಣವಾಗಿರುವದು. ''ವೈತಿಹೋತ್ರಿಯ ಪತಿಯು ದೇಶೋದ್ಧಾರಕನೂ ಧರ್ಮೋದ್ಧಾರಕನೂ''

ಎಂಬ ಕೀರ್ತಿಯನ್ನು ಪಡೆಯುವದಕ್ಕಿಂತ ಹೆಚ್ಚಿನ ಭಾಗ್ಯವು ನನಗೇನು ಬೇಕಾಗಿರುವದು? ಭಗವನ್, ತಮ್ಮ ಪಾಣಿಗ್ರಹಣ ಮಾತ್ರದಿಂದ ನನ್ನ ಮನೋರಥಗಳೆಲ್ಲ ಪೂರ್ಣವಾಗಿ ಹೋಗಿರುತ್ತವೆ. ತಮ್ಮ ದ್ವಾರದಿಂದ ನನ್ನಲ್ಲಿಯೂ ಉತ್ಪನ್ನವಾಗಿರುವ ಲೋಕೋದ್ಧಾರರೂಪ ಮನೋರಥವೊಂದು ಪೂರ್ಣವಾಗುವದು ಉಳಿದಿದೆ. ಅದಕ್ಕಾಗಿ ತಮ್ಮ ಅನುಸರಣ ಮಾಡುವದು ನನ್ನ ಕರ್ತವ್ಯವಾಗಿರುವದು. ಹೇಳಬೇಕು, ವೈತಿಹೋತ್ರಿಯು ಸ್ವದೇಶೋದ್ಧಾರಕ್ಕಾಗಿ ಏನು ಮಾಡಬೇಕೆಂಬದನ್ನು ಆಜ್ಞಾಪಿಸಬೇಕು.

ಹೀಗೆ ನುಡಿಯುವ ಹೆಂಡತಿಯ ಮಾತುಗಳನ್ನು ಕೇಳಿ ಮಾಧವನು ಪರಮಾನಂದಪಟ್ಟನು. ಉತ್ಸಾಹದಿಂದ ತಾನು ಅಂಗೀಕರಿಸಿದ ಸತ್ಕಾರಕ್ಕೆ ತನ್ನ ಅರ್ಧಾಂಗಿಯು ಮನಃಪೂರ್ವಕವಾಗಿ ಅನುಕೂಲವಾಗುವದನ್ನು ನೋಡುವ ಪತಿಯು ಭಾಗ್ಯವಂತನೇ ಸರಿ. ಹಿಂದೆ ಹೇಳಿದಂತೆ, ವೈತಿಹೋತ್ರಿಯು ಕುಲೀನಳು, ಪತಿಭಕ್ತಿಪರಾಯಣಳು, ಮಾಧವನಂಥ ರಸಿಕ ಕವಿವರನ ಮನಸ್ಸನ್ನು ರಮಿಸುವಷ್ಟು ಚತುರಳು, ಲೋಕೋತ್ತರ ಸೌಂದರ್ಯಶಾಲಿನಿಯು. ಆಕೆಯು ಎಷ್ಟು ಚೆಲುವೆಯಿದ್ದರೂ, ಆಕೆಯ ಮುಖಕಾಂತಿಯು ಎಷ್ಟು ದಿವ್ಯವಾಗಿದ್ದರೂ ಆಕೆಯೊಬ್ಬ ಸತ್ವಸ್ಥ ವಿಪ್ರಶ್ರೇಷ್ಠನ ಪೂಜ್ಯ ಪತ್ನಿಯಾಗಿರುವಳೆಂಬದು ಆಕೆಯ ಉಡಿಗೆ–ತೊಡಿಗೆಗಳ ಮೇಲಿಂದ ಸ್ಪಷ್ಟವಾಗಿ ತೋರುತ್ತಿತ್ತು. ಆರ್ಯ ಸ್ತ್ರೀಯರು ಬರಿಯ ಅಂತರಂಗದಿಂದಲೇ ಅಲ್ಲ, ಬಹಿರಂಗದಿಂದಲೂ ಪತಿಯನ್ನು ಹ್ಯಾಗೆ ಅನುಸರಿಸುವರೆಂಬ ಕೌತುಕದ ಸಂಗತಿಯು, ವೈತಿಹೋತ್ರಿಯ ಬಡತನದ ಉಡಿಗೆ–ತೊಡಿಗೆಗಳಿಂದ ಚೆನ್ನಾಗಿ ವ್ಯಕ್ತವಾಗುತ್ತಿತ್ತು. ಇರಲಿ, ಇಂಥ ಸನ್ಮಾನನೀಯ ಪತ್ನಿಯನ್ನು ಕುರಿತು ಮಾಧವನು ನುಡಿದನೇನೆಂದರೆ–

ಮಾಧವ–ಭಾಗ್ಯಶಾಲಿನಿಯೇ, ವಿವೇಕಿಯಾದ ನಿನ್ನನ್ನು ನಾನು ಏನೆಂದು ಆಜ್ಞಾಪಿಸಲಿ? ಯವನರನ್ನು ತರುಬಲಿಕ್ಕೆ ಸೈನ್ಯವನ್ನು ಕೂಡಿಸಲು, ವಿಪುಲವಾದ ಸಂಪತ್ತು ಬೇಕಷ್ಟೇ? ಅದನ್ನು ಯಾರು ಕೊಡುವರು? ಸಾಕ್ಷಾತ್ ಭುವನೇಶ್ವರಿಯ ಹೊರತು ಮತ್ತೊಬ್ಬರು ಅದನ್ನು ಕೊಡಲು ಸಮರ್ಥರಾಗಬಹುದೇ? ನಾನು ಘೋರ ತಪಸ್ಸಿನಿಂದ ಶ್ರೀ ಭುವನೇಶ್ವರಿಯನ್ನು ಮೆಚ್ಚಿಸುವೆನು. ಅದಕ್ಕೋಸ್ಕರ ನೀನು ನನಗೆ ಪಂಪಾಕ್ಷೇತ್ರಕ್ಕೆ ಹೋಗಲು ಅನುಮತಿಸಬೇಕು; ಮತ್ತು ನಮ್ಮ ಸಂಸಾರದ ಎಲ್ಲ ಭಾರವನ್ನು ಅಮಾತ್ಯ ಪುತ್ರಿಯಾದ ನೀನು ವಹಿಸಿ, ಅದನ್ನು ಧೌರಂಧರ್ಯದಿಂದ ಸಾಗಿಸಬೇಕು. ಶ್ರೀ ಗುರುಗಳ ಅಪ್ಪಣೆಯಂತೆ ನಾನು ನಿಶ್ಚಯವಾಗಿ ಯವನರ ಅಬ್ಬರವನ್ನು ಅಡಗಿಸುವೆನು, ಹಿಂದುಗಳ ವರ್ಚಸ್ಸನ್ನು ಹೆಚ್ಚಿಸುವೆನು, ಶ್ರೀಗುರು ಮುಖದಿಂದ ವರಪ್ರದಾನರೂಪವಾಗಿ ಹೊರಟ ವಾಣಿಯಂತೆ ನಾನು ನಿಜವಾಗಿ ''ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ'' ನೆಂದು ಗೌರವದ ಬಿರುದನ್ನು ಪಡೆಯುವೆನು. ನನ್ನ ಈ ಕಠಿಣತರವಾದ ಮಹಾಕಾರ್ಯಕ್ಕೆ ನೀನು ಸಂಪೂರ್ಣವಾಗಿ ಅನುಮತಿಸಬೇಕು. ನೋಡು, ನನ್ನ ತಪಸ್ಸಿನ ಮಹಿಮೆಯನ್ನಾದರೂ ನೋಡು. ಈಗ ಹೊರಗೆ ಒಂದೇಸವನೆ ಮಳೆಯು ಸುರಿಯುತ್ತಿರುವಂತೆ, ಸ್ವದೇಶಕಾರ್ಯಕ್ಕಾಗಿ ಬಂಗಾರದ ಮಳೆ ಸುರಿಸದಿದ್ದರೆ ನಾನು ಮಾಧವನೇ ಅಲ್ಲ. ಈಗ ಒಂದೇಸವನೆ ಸುರಿಯುತ್ತಿರುವ ಮಳೆಯು, ಮುಂದೆ ನಾನು ಸುರಿಸಬೇಕಾಗಿರುವ ಬಂಗಾರದ

ಮಳೆಯನ್ನು ಸೂಚಿಸುತ್ತಿರುವದೆಂದು ನಿಶ್ಚಯವಾಗಿ ತಿಳಿದುಕೋ. ಸಕಾಲಕ್ಕೆ ಆದದ್ದರಿಂದ ಈಗಾದ ಮಳೆಯಾದರೂ ಬಂಗಾರದ ಮಳೆಯೇ ಸರಿ. ಈಗಾದ ಮಳೆಯಿಂದ ಪೈರು ಚೆನ್ನಾಗಿ ಬಂದು ದೇಶವು ಸುಭಿಕ್ಷವಾಗುವದು; ಆದರೆ ನಾನು ಸುರಿಸುವ ಪ್ರತ್ಯಕ್ಷ ಬಂಗಾರದ ಮಳೆಯಿಂದ ಕರ್ನಾಟಕ ದೇಶವು ನಿಷ್ಕಂಟಕವಾಗಿ, ಧರ್ಮಾರ್ಥ–ಕಾಮ–ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳ ಭರದ ಬೆಳೆಗೆ ಅನುಕೂಲವಾಗುವಂತೆ, ಎಂದೂ ಮರೆಯದ ನೂತನ ಸಾಮ್ರಾಜ್ಯವು ಸ್ಥಾಪಿತವಾಗುವದೆಂದು ನನ್ನ ಮನಸ್ಸಿಗೆ ಹೊಳೆಯುವದು!

ಪತಿಯ ಈ ಗಂಭೀರ ವಚನವನ್ನು ಕೇಳಿ ವೈತಿಹೋತ್ರಿಯು ಸಂತೋಷ ಪಟ್ಟು ಅಭಿಮಾನಪೂರ್ವಕವಾಗಿ ಅದಕ್ಕೆ ಒಪ್ಪಿಕೊಂಡಳು. ಬಳಿಕ ಮಾಧವನು ಹಿರಿಯರ ಆಶೀರ್ವಾದ ಪಡೆದು, ಬಂಧುಗಳ ಅನುಮತಿಯನ್ನು ಸಂಪಾದಿಸಿ ಪಂಪಾಕ್ಷೇತ್ರಕ್ಕೆ ಹೊರಟನು. ಆ ಪವಿತ್ರ ಪಂಪಾಕ್ಷೇತ್ರವು ಪುಣ್ಯಾತಿಶಯದಿಂದ ದಕ್ಷಿಣ ಕಾಶಿಯೆನಿಸುವದಷ್ಟೇ? ಆ ತುಂಗಾತೀರಸ್ಥ ಮಹಾಕ್ಷೇತ್ರದ ಮಹಿಮೆಯನ್ನೇನು ವರ್ಣಿಸುವದು? ಶ್ರೀ ವಿರೂಪಾಕ್ಷ ಸಾನ್ನಿಧ್ಯ, ತುಂಗಭದ್ರೆಯ ಪುಣ್ಯೋದಕ ಪ್ರಾಪ್ತಿ ಋಷ್ಯಮೂಕಾದಿ ವಿಶ್ರುತ ಪರ್ವತಗಳ ಅಸ್ತಿತ್ವ, ಶ್ರೀ ಸೀತಾ–ರಾಮ–ಲಕ್ಷ್ಮಣರ ವಾಸ್ತವ್ಯ, ಪಂಪಾ–ಮಾನಸ ಸರೋವರಗಳ ಸೌಂದರ್ಯ ಇವುಗಳಿಂದ ಆ ಪುರಾತನ ಕ್ಷೇತ್ರವು ಸುರ–ನರ ಸೇವ್ಯಗಾಗಿ ಭಾವಿಕರನ್ನು ಕೃತಾರ್ಥವಾಗ ಮಾಡಹತ್ತಿತ್ತು, ಇಂಥ ಮಹಾಕ್ಷೇತ್ರದಲ್ಲಿ ಮಾಧವನು ಭುವನೇಶ್ವರಿಯನ್ನು ಕುರಿತು ಏಕಾಕಿಯಾಗಿ ತಪಸ್ಸನ್ನಾಚರಿಸ ಹತ್ತಿದನು. ''ಸ್ವಯಿಂದಾಸಾಸ್ತಪಸ್ವಿನಃ'' ಎಂಬಂತೆ, ಆ ಮಹಾತ್ಮನಿಗೆ ಅನ್ಯರ ಸಹಾಯದ ಅವಶ್ಯಕತೆಯೇನು?

## ಕಗ್ಗ ಕುರುಬನು !

ಛೀ, ಛೀ ಎಂಥ ಹೊತ್ತು ಬಂತಪ್ಪಾ ಇದು! ಮುಸಲರ ಕಾಟಕ್ಕೆ ದೇಶವು ಉಳಿಯುವ ಹಾದಿ ಕಾಣುವುದಿಲ್ಲ. ಹಿಡಿ, ಹೊಡಿ, ಓಡಿಸು, ಕೊಲ್ಲು ಎಂಬ ನುಡಿಗಳೇ ಅವರು ಹೊಕ್ಕಲ್ಲಿ ಕೇಳುವವು. ಅವರು ಎಗ್ಗಿಲ್ಲದೆ ಹೆಂಗಸರನ್ನು ಹಿಡಿದು ಎಳೆಯುವರು, ಗಂಡಸರನ್ನು ಕೊಲ್ಲುವರು; ಮನೆಮಾರುಗಳನ್ನು ಸುಲಿಯುವರು; ಆಕಳ ಕುತ್ತಿಗೆಗಳನ್ನು ಚರಚರ ಕೊಯ್ಯುವರು; ಸಿಕ್ಕವರ ಕುಲಗೆಡಿಸುವರು! ಮುಂದೇನು ಗತಿಯು? ಕೇಳುವವರೇ ಇಲ್ಲದಾಯಿತಲ್ಲ? ನಮ್ಮ ಕುರಿಗಳ ಹಿಂಡು ಅವರ ಕಣ್ಣಿಗೆ ಬಿದ್ದರೆ ಸಾಕು, ಅದು ಹಾಳಾಯಿತೆಂದು ತಿಳಿಯಬೇಕು. ಆ ದುಷ್ಟ ತಘಲಕ ಮಹಮ್ಮದನು ದೇವರಾಯನನ್ನು ಹೆಸರಿಗೆ ಆನೆಗುಂದಿಯ ಅರಸನನ್ನು ಮಾಡಿರುವನು! ಕಾರಭಾರವೆಲ್ಲ ದುಷ್ಟ ಕಾಶೀಮನ ಕೈಯಲ್ಲಿ! ನಮ್ಮ ಜಂಬುಕೇಶ್ವರರಾಯನ ಕಾಲದಲ್ಲಿದ್ದ ಆನೆಗುಂದಿಯ ಸಿರಿಯು ಈಗೆಲ್ಲಿದೆ? ಊರ ಲಕ್ಷಣವೇ ಹೋಗಿದೆ! ಹೆಗ್ಗಾ, ಹೀಗಾದರೆ ಮುಂದೆ ಹ್ಯಾಗಲೆ? ನಮ್ಮ ಛಪ್ಪಧಿ ಮುಸಲರಿಗೆ ಬೆದರಿ ಬೀಳುವರಲ್ಲ! ಥೂಥೂ! ಹಾವಿಗೆ ಗರುಡನ ಗೆರೆ

ತೋರಿಸಿದ ಹಾಗಾಗಿದೆ. ನಮ್ಮವರಿಗೇನು ಬೇನೆಯಾಯಿತು? ಇವರೇನು ಗಾಳಿಗೆ ಹುಟ್ಟಿರುವರೇ? ತಾಯಿಯ ಮೊಲೆ ಕುಡಿದಿಲ್ಲವೇ? ಮುಸಲರು ಬಂದಕೂಡಲೆ ಓಡುವರು! ತಮ್ಮತಮ್ಮೊಳಗೆ ಕುತ್ತಿಗೆ ಕೊಯ್ಯಲಿಕ್ಕೆ ಹೇಗೆ. ದಿನ ಬೆಳಗಾದರೆ ಜಗಳ. ಇಂದು ಈ ಅರಸರು ಆ ಅರಸನನ್ನು ಹೊಡೆದನು, ನಾಳೆ ಆ ಅರಸನು ಈ ಅರಸರನ್ನು ಹೊಡೆದನು. ಒಬ್ಬರ ಕಂಡರೆ ಒಬ್ಬರಿಗೆ ಸೇರಿಕೆ ಇಲ್ಲ. ಇವನು ಹಾಳಾಗಿ ಹೋಗಲೆಂದು ಅವನು ಅನ್ನುವನು, ಅವನು ಹಾಳಾಗಿ ಹೋಗಲೆಂದು ಇವನು ಅನ್ನುವನು. ಬಡವರನ್ನು ಹಿಂಡಿ ಹಿಪ್ಪಿ ಮಾಡಲಿಕ್ಕೆ ನಮ್ಮವರು ಬಲು ಶೂರರು. ಈಗ ವಸ್ತಾದಿ ಬಂದಿದ್ದಾನೆ, ತೋರಿಸಬಾರದೇ ಗಂಡಸುತನವನ್ನು? ಒಬ್ಬನ ಮೋರೆ ಇತ್ತಾದರೆ ಮತ್ತೊಬ್ಬನ ಮೋರೆ ಅತ್ತ, ಈಗ ಎಲ್ಲರಿಗೂ ಮುಣುಗುನೀರು ಬಂದಿರವದು. ಹೆಗ್ಗಣ್ಣಾ ನಾವೆಲ್ಲರೂ ಒಕ್ಕಟ್ಟಾದರೆ ಮುಸಲರದೇನು ನಡೆಯುವದು ಹೇಳು? ಎಷ್ಟಾದರೂ ಅವರು ಹೊರಗಿನಿಂದ ಎತ್ತಿಬಂದವರು. ನಮ್ಮೊಳಗೇ ತಾಳಿಲ್ಲ, ಉಂಡಮನೆಯ ಗಳ ಎಣಿಸುವವರ ಗಂತೂ ನಮ್ಮಲ್ಲಿ ಲೆಕ್ಕವೇ ಇಲ್ಲ. ಇಂಥವರಿಂದಲೇ ದೇವಗಿರಿಯು ಹಾಳಾಯಿತು; ಇಂಥವ ರಿಂದಲೇ ವರಂಗಲ್ಲವು ಮಣ್ಣುಗೂಡಿತು. ಆಗಲಿ, ನಮ್ಮ ಗುಣಕ್ಕೆ ತಕ್ಕ ಆಟವನ್ನು ದೇವರು ಮಾಡಿದ್ದಾನೆ. ಯಾಕಲೇ ಹೆಗ್ಗಾ, ಸುಮ್ಮನೆ ಕುಳಿತುಕೊಳ್ಳುತ್ತೀ? ಮಂದಿಯ ಮಾತು ಇರಲಿ, ನನಗೂ ನಿನಗೂ ಏನು ಬೇನೆಯಾಗಿದೆ ಹೇಳು? ನೀನು ಸಿಟ್ಟಿಗೆದ್ದರೆ ಮುಸಲ್ಮಾನರನ್ನು ಕಾಲಿನಿಂದ ಒರಸೀ, ನನಗೆ ಇಷ್ಟು ದಿವಸಗಳಾಗಿರುವವಲ್ಲ, ಎಲೇ, ಈಗ ಮುಸಲರು ಬರಲಿ, ಒದ್ದು ಎರಡು ಹೆಣ ಕೆಡವದಿದ್ದರೆ ಮಾಳನೆಂದು ಕರೆಯಬೇಡ. ಅಯ್ಯೋ! ಏನುಮಾಡಲಿ, ಹೊಟ್ಟೆಯೊಳಗಿನ ರೊಚ್ಚು ಏಳುತ್ತದೆ. ನನ್ನ ಬಂಗಾರದಂಥ ಸೊಸೆಯನ್ನು ಮುಸಲರು ಮೋಸದಿಂದ ಎತ್ತಿಕೊಂಡು ಹೋದರು. ಇರಲಿ, ಈ ಸೇಡು ತೀರಿಸಿಕೊಳ್ಳದೆ ಬಿಡುವೆನೆ? ನಮ್ಮ ಮಲ್ಲನು ಮುಸಲರನ್ನು ಕಂಡರೆ ಬೆಂಕಿಯನ್ನು ಕಾರುತ್ತಿರುವನು. ಹೆಚ್ಚಿನ ಮಾತೇಕೆ? ಹೊತ್ತುಬಂದಾಗ ಕಗ್ಗ ಕುರುಬರ ಕೈ ಮುಸಲರಿಗೆ ಗೊತ್ತಾದೀತು.

ಮಾತಾಡುತ್ತಾಡುತ್ತ ಮಾಳನ ಕಣ್ಣುಗಳು ಕೆಂಪಾದವು. ಅವನ ಸಂತಾಪವು ಹೆಚ್ಚಿತು. ಅವನು ಒಮ್ಮೆ ಹೆಗ್ಗನ ಕಡೆಗೆ, ಒಮ್ಮೆ ತನ್ನ ಕುರಿಯ ಹಿಂಡಿನ ಕಡೆಗೆ ನೋಡುತ್ತಿದ್ದನು. ಇತ್ತ ಹೆಗ್ಗನೂ ಸಂತಾಪಗೊಂಡಿದ್ದನು. ಮುಸಲ್ಮಾನರ ದುಷ್ಟ ಕೃತಿಗಳ ಸ್ಮರಣದಿಂದ ಅವನ ಕ್ರೋಧಾಗ್ನಿಯು ಪ್ರಜ್ವಲಿತವಾಗಿರಲು, ಅವನ ಕಣ್ಣುಗಳೂ ಕೆಂಪಾಗಿದ್ದವು; ತುಟಿಗಳು ನಡುಗುತ್ತಿದ್ದವು. ಹೆಗ್ಗನ ಆ ಉಗ್ರ ಮೂರ್ತಿಯನ್ನು ನೋಡಿದರೆ, ಇವನು ಕುರುಬನಹುದೋ, ಅಲ್ಲವೋ ಎಂಬ ಸಂಶಯವು ಬರಬಹುದಾಗಿತ್ತು. ಅವನ ವಯಸ್ಸು ಮೂವತ್ತು ಇರಬಹುದು. ಅವನ ಮೈಬಣ್ಣ ನಸುಗೆಂಪು, ಎದೆಯು ಅಗಲ, ಮುಖಮುದ್ರೆಯು ದರ್ಪಯುಕ್ತ, ಮುಂಡೆ ದಿರುಗಿರುವ ಆತನ ಬಾಹುಗಳು ಪುಷ್ಟ; ತೊಡೆಗಳು ಮಾಂಸಮಯ. ಆತನ ಸ್ವರೂಪವು ತಿದ್ದಿ ಮಾಡಿದ ಹಾಗಿದ್ದು, ಉದ್ದ ತಲೆಗೂದಲುಗಳಿಂದ ಆತನು ಕ್ಷತ್ರಿಯ ವೀರನನ್ನು ಹೋಲುತ್ತಿದ್ದನು. ಇವರಿಬ್ಬರು ಕಗ್ಗ ಕುರುಬರು ಒಂದು ಬೇವಿನ ಮರದ ಬುಡದಲ್ಲಿ ಕುಳಿತುಕೊಂಡಿದ್ದರು. ಲಂಗೋಟಿಯ ಹೊರತು ಅವರ ಮೈಮೇಲೆ ಅರಿವೆಗಳಿದ್ದಿಲ್ಲ. ಅವರು ತಲೆಗೊಂದು ಚಿಂದಿ

ಯನ್ನು ಸುತ್ತಿಕ್ಕೊಂಡಿದ್ದರು. ತಮ್ಮತಮ್ಮ ಗೊಂಗಡಿಯನ್ನು ಬುಡದಲ್ಲಿ ಒಗೆದುಕೊಂಡಿದ್ದರು. ಮಾಳನ ದೊಡ್ಡ ಕುರಿಯ ಹಿಂಡು ಹಕ್ಕಲದಲ್ಲಿ ಮೇಯುತ್ತ ಹಬ್ಬಿ ಹರಿ ಬಿದ್ದಿತ್ತು. ಮಾಳನ ಕೈಕೆಳಗಿನ ಎಂಟು–ಹತ್ತು ಜನ ಕುರುಬರು ಉದ್ದ ಕೋಲುಗಳನ್ನು ಹಿಡಕೊಂಡು ಅಲ್ಲಲ್ಲಿ ನಿಂತು ''ಟರ್ ಹುಶ್'' ಎಂದು ಕುರಿಗಳನ್ನು ಮೇಸುತ್ತಿದ್ದರು. ಸಿಕ್ಕತ್ತ ಕುರಿಗಳು ಹೋಗದಂತೆ, ದೊಡ್ಡದೊಡ್ಡ ನಾಯಿಗಳು ಸುತ್ತುಗಟ್ಟಿ ಅವನ್ನು ತರಬುತ್ತಿದ್ದವು. ಮಾಳನ ಪ್ರೀತಿಯ ಎರಡು ನಾಯಿಗಳು ಅವನ ಬಳಿಯಲ್ಲಿ ಮಲಗಿದ್ದವು. ಅವುಗಳ ಕಿರಿಹೊಟ್ಟೆ, ಜೋತಾಡುವ ಕೆಂಪು ನಾಲಗೆ, ಹದನಾದ ಹಲ್ಲುಗಳು, ಗುಲಗಂಜಿಯಂಥ ಕಣ್ಣುಗಳು ಇವನ್ನು ನೋಡಿದರೆ, ಇವು ಹುಲಿಯನ್ನು ತರುಬಬಹುದೆಂಬಂತೆ ತೋರುತ್ತಿತ್ತು. ಮುಸಲ್ಮಾನರ ಹಾವಳಿಯ ಮೂಲಕ ಅವರು ತಮ್ಮತಮ್ಮ ಕತ್ತಿ–ಕಠಾರಿಗಳನ್ನು ಸಂಗಡ ತರುತ್ತಲಿದ್ದರು.

ಮುಸಲ್ಮಾನರ ದುಷ್ಕೃತಿಗಳಿಂದ ಸಂತಾಪಗೊಂಡಿದ್ದ ಆ ಇಬ್ಬರೂ ಕುರುಬರು ಕೆಲಹೊತ್ತು ಸುಮ್ಮನೆ ಕುಳಿತಿದ್ದರು. ಕೆಲಹೊತ್ತಿನ ಮೇಲೆ ಮಾಳನ ಸಂತಾಪವು ಕಡಿಮೆಯಾಯಿತು. ಆದರೆ ಹೆಗ್ಗನ ಸಂತಾಪಾಗ್ನಿಯು ಮಾತ್ರ ಇನ್ನೂ ಶಾಂತವಾಗಿದ್ದಿಲ್ಲ. ಆತನ ಆ ಉಗ್ರ ಮೂರ್ತಿಯನ್ನು ನೋಡಿ ಮಾಳನು ಬೆರಗಾದನು. ಹೆಗ್ಗನು ಇಷ್ಟು ಸಂತಾಪಗೊಳ್ಳುವ ಕಾರಣವು ಮಾಳನಿಗೆ ತಿಳಿಯದಾಯಿತು. ''ಇವನು ಕುರುಬನೇ'' ಎಂಬ ಸಂಶಯವು ಆತನ ಮನಸ್ಸಿನಲ್ಲಿ ಉತ್ಪನ್ನವಾಯಿತು. ತುದಿಗುಂಡಿಯಿಂದ ಕಂಬಳಿಯ ಮೇಲೆ ಕುಳಿತಿದ್ದ ಹೆಗ್ಗನು ಒಮ್ಮೆಲೆ ವೀರಮುಂಡೆಯಿಂದ ಕುಳಿತು ಅವಡುಗಚ್ಚಿ ತನ್ನ ಕೋಲನ್ನು ಮುಷ್ಟಿಯಲ್ಲಿ ಗಟ್ಟಿಯಾಗಿ ಹಿಡಿದನು. ಆತನು ಮಾಳನನ್ನು ನೋಡಿ ಕೂಡಲೆ ಆನೆಗುಂದಿಯ ಕಡೆಗೆ ನೋಡಿ– ''ಸುಡಲಿ, ನಮ್ಮ ಬಾಳುವೆ ಸುಡಲಿ'' ಎಂದು ನುಡಿದು, ಕೋಲನ್ನೊಗೆದು ಪ್ರಶಸ್ತವಾಗಿ ಕಂಬಳಿಯ ಮೇಲೆ ಕುಳಿತು ಉಸುರ್ಗಳೆದನು. ಮಾಳನು ಇದನ್ನು ಆಶ್ಚರ್ಯದಿಂದ ನೋಡುತ್ತಿದ್ದನು. ಆಗ ಮಾಳನ ಕಡೆಗೆ ದೃಷ್ಟಿಯು ಹೋಗಲು, ಹೆಗ್ಗನ ಸಂತಾಪವು ಕಡಿಮೆಯಾಯಿತು. ತಾನು ಹೀಗೆ ಸಂತಾಪ ಗೊಂಡದ್ದು ಯೋಗ್ಯವಲ್ಲೆಂದು ಹೆಗ್ಗನು ಮನಸ್ಸಿನಲ್ಲಿ ಅಂದುಕೊಂಡು ಮಾಳನನ್ನು ಕುರಿತು– ''ಮಾಳಪ್ಪಾ, ನಿನ್ನ ಸೊಸೆಯ ಸುದ್ದಿಯನ್ನು ಕೇಳಿ ನನಗೆ ಯಾಕೋ ಬಹಳ ಸಿಟ್ಟು ಬಂತು ಬಿಡು. ಪತಿವ್ರತೆಯರ ಮೇಲೆ ಕೈಮಾಡುವ ದುಷ್ಟರ ಸುದ್ದಿಯನ್ನು ಕೇಳಿದ ಕೂಡಲೆ, ನನಗೆ ಹೀಗೆ ಸಂತಾಪವಾಗುವ ಚಾಳಿಯದೆ. ಮುಸಲ್ಮಾನರನ್ನು ಈಗ ಏನು ಮಾಡಲಿ ಎನ್ನುವ ಹಾಗೆ ನನಗೆ ಆಗಿದೆ. ಅವರ ನೀಚತನವಾದರೂ ಎಷ್ಟದು! ನಮ್ಮ ಕುರುಬ–ಕಬ್ಬೇರ ಜಾತಿಯು ಒಟ್ಟಾದರೆ, ಅವರ ದೂಳು ಹಾರಿಸಬಹುದು. ಹೆದರುವದೇಕೆ? ಹುಟ್ಟುವದೊಂದು ದಿನ, ಸಾಯುವದೊಂದು ದಿನ! ಅವರು ನಮ್ಮ ಹೆಂಗಸರ ಮೇಲೆ ಕೈ ಮಾಡಿದ ಬಳಿಕ–ನಮ್ಮ ಕುಲಗೆಡಿಸಿದ ಬಳಿಕ– ಉಳಿಯಿತೇನು? ನಿನ್ನ ಮಗ ಮಲ್ಲಪ್ಪನು ಬರಲಿ, ನಿನ್ನ ಸೊಸೆಯ ಗೊತ್ತುಹಚ್ಚಿಯೇ ತೀರುವೆವು. ಇದರ ಕಾಲಲ್ಲಿ ಬೇಕಾದದ್ದು ಆಗಲಿ'' ಎಂದು ನುಡಿಯುತ್ತಿರಲು, ದೂರದಲ್ಲಿ ಒಂದು ಮೇಣೆಯು ಬರುತ್ತಿರುವದು ಅವರ ಕಣ್ಣಿಗೆ ಬಿದ್ದಿತು.

ಆಗ ಆರುತಾಸು ಆಗಿ ಏಳರ ಅಮಲು ಇರಬಹುದು. ಮಳೆಗಾಲವಾದದ್ದರಿಂದ ಆಕಾಶದಲ್ಲಿ ಮೋಡಗಳು ಮುಸುಕಿದ್ದವು. ಮೇಣೆಯು ಒಂದು ಕೈಗಲ್ಲ ಅಳತೆಗೆ ಬರಲು, ಎಲ್ಲವೂ ಸ್ಪಷ್ಟವಾಗಿ ಕಾಣಿಸಹತ್ತಿತು. ಹಿಂದೂ ಬೋವಿಗಳು ಮೇಣೆಯನ್ನು ಹೊತ್ತಿದ್ದರು. ಹತ್ತು ಜನ ಮುಸಲ್ಮಾನ ರಾವುತರೂ, ನಾಲ್ಕು ಜನ ಹಿಂದೂ ರಾವುತರೂ ಅದನ್ನು ರಕ್ಷಿಸುತ್ತ ಸಾಗಿದ್ದರು. ಭಯಪಟ್ಟವರಂತೆ ಅವರು ಅತ್ತಿತ್ತ ನೋಡುತ್ತಿದ್ದರು. ''ಹೂ, ಲಗು ಲಗು ಕಾಲುಹಾಕಿರಿ'' ಎಂಗು ಕಾವಲುಗಾರರಲ್ಲಿಯ ಒಬ್ಬ ಹಿಂದುವು ಬೋವಿಗಳಿಗೆ ಅವಸರ ಮಾಡುತ್ತಿದ್ದನು. ಹೀಗೆ ಆ ಮೇಣೆಯು ಕುರುಬರ ಬಳಿಯ ಹಾದಿಯಿಂದ ಮುಂದಕ್ಕೆ ಸಾಗಿಹೋಯಿತು. ಅದು ಆ ಕುರುಬರ ಕಣ್ಣುಮರೆಯಾಗುತ್ತಿರುವಷ್ಟರಲ್ಲಿ, ಇತ್ತ ಒಬ್ಬನು ಅಡ್ಡದಾರಿಯಿಂದ ಕುರುಬರ ಬಳಿಗೆ ಓಡುತ್ತ ಬರತೊಡಗಿದನು. ಅವನು ಸನಿಯಕ್ಕೆ ಬಂದಕೂಡಲೆ ಮಾಳನು ಹೆಗ್ಗನಿಗೆ–ಹೆಗ್ಗಣ್ಣಾ, ಯಾಕೋ ನಮ್ಮ ಮಲ್ಲನು ಓಡಿ ಬರುತ್ತಾನಲೆ ? – ಈ ಮೇಣೆಯಲ್ಲಿ ಏನೋ ಗಾತವಿದ್ದ ಹಾಗೆ ಕಾಣುತ್ತದೆ. ಆನೆಗುಂದಿಯು ಇಲ್ಲಿಗೆ ಮೂರು ಹರದಾರಿ ಇರಬಹುದು. ಇಂಥ ಮಟಮಟ ಮಧ್ಯಾಹ್ನದಲ್ಲಿ ಇಷ್ಟು ದೂರ ಇತ್ತಕಡೆಗೆ ಬರುವ ಮೇಣೆಯು ಯಾರದಿರಬಹುದು! ಮುಸಲ್ಮಾನ ರಾವುತರೂ, ಹಿಂದೂ ರಾವುತರೂ ಕೂಡಿ ಅದನ್ನು ರಕ್ಷಿಸುತ್ತಿರುವದರ ಗೂಢವೇನು? ಎಂದು ನುಡಿಯುತ್ತಿರಲು, ಮಲ್ಲನು ಬಂದು– ''ಅಪ್ಪಾ, ಗಾತವಾಯಿತು. ನಮ್ಮ ಜನರೇ ನಮ್ಮ ಗೋಣು ಮುರಿಯಹತ್ತಿದರು. ಕರಿ, ಮೊದಲು ನಮ್ಮ ಕುರಿಯೊಳಗಿನ ಕುರುಬರನ್ನು ಇಲ್ಲಿ ಕರಿ. ಈಗ ಮಾತಾಡುತ್ತ ನಿಲ್ಲುವಹಾಗಿಲ್ಲ'' ಎಂದು ನುಡಿದು, ತಾನೇ ಸಿಳ್ಳುಹಾಕಿದನು. ಕೂಡಲೆ ಕುರಿಯ ಹಿಂಡಿನೊಳಗಿನ ಕುರುಬರು ಓಡುತ್ತ ಬಂದರು. ಆಗ ಮಲ್ಲನು ಹೆಗ್ಗನ ಕಡೆಗೆ ನೋಡಿ ತನ್ನ ತಂದೆಯನ್ನು ಕುರಿತು– ''ಅಪ್ಪಾ, ಏಳು, ಆ ಮೇಣೆಯನ್ನು ಮುಂದಕ್ಕೆ ಬಿಡುವಹಾಗಿಲ್ಲ. ನಮ್ಮ ಹೆಂಗಸರನ್ನು ಎತ್ತಿಕೊಂಡು ಹೋಗುವ ಕೆಟ್ಟಚಾಳಿಯ ಮುಸಲರ ಮಗ್ಗಲು ಮುರಿಯದಿದ್ದರೆ ಪರಿಣಾಮವಿಲ್ಲ. ಮೊನ್ನೆ ಅವರು ನನ್ನ ಹೆಂಡತಿಯನ್ನು ಮೋಸದಿಂದ ಅಪಹರಿಸಿದರು. ಇಂದು ಯಾವಳೋ ಒಬ್ಬ ದೊಡ್ಡ ಮನೆತನದ ಹೆಣ್ಣು ಮಗಳನ್ನು ಮೋಸದಿಂದ ಮೇಣೆಯಲ್ಲಿ ಹಾಕಿಕೊಂಡು ಹೋಗಹತ್ತಿದ್ದಾರೆ. ಮುಸಲ್ಮಾನರ ಸೇಡು ತೀರಿಸಿಕೊಳ್ಳಲಿಕ್ಕೆ ತಕ್ಕ ಸಮಯವು ಒದಗಿರುತ್ತದೆ. ಅಂದಬಳಿಕ ಅಸಿಮಿಸಿಯೇಕೆ?'' ಎಂದವನೇ ಬಂಟನಾದ ಮಲ್ಲನು ದೊಡ್ಡ ಬಡಿಗೆಯನ್ನು ಹೆಗಲಮೇಲಿಟ್ಟುಕೊಂಡು ಮೇಣೆಯ ಬೆನ್ನು ಹತ್ತಿ ಓಡಹತ್ತಿದನು. ಕೂಡಲೆ ಮಾಳನೇ ಮೊದಲಾದ ಕುರುಬರು ಆತನ ಬೆನ್ನು ಹತ್ತಿದರು. ಹೆಗ್ಗನಂತು ಮಲ್ಲನಿಗಿಂತ ಮೊದಲೇ ಓಡಿದ್ದನು. ಬಡಿಗೆಗಳ ಹೊರತು ಆ ಕುರುಬರ ಬಳಿಯಲ್ಲಿ ಕತ್ತಿಗಳೂ, ಕಠಾರಿಗಳೂ ಇದ್ದವು. ಒಂದು ಕ್ಷಣದಲ್ಲಿ ಅವರು ಮೇಣೆಯ ರಕ್ಷಕರ ಮೇಲೆ ಬಿದ್ದರು. ಕೂಡಲೆ ಹೆಗ್ಗನು ಒಬ್ಬ ಮುಸಲ್ಮಾನ ರಾವುತನನ್ನು ಜೋಲಿಯ ಹೊಡೆದು ಕುದುರೆಯ ಮೇಲಿಂದ ನೆಲಕ್ಕೆ ಕೆಡವಿ ಅವನ ಎದೆಯಮೇಲೆ ಕುಳಿತು, ಅವನು ತಿರುಗಿ ಮೇಲಕ್ಕೇಳದಂತೆ ಬಲವಾದ ಗಾಯಮಾಡಿದನು. ಅತ್ತ ಮಲ್ಲನು ಮತ್ತೊಬ್ಬ ಮುಸಲ್ಮಾನ ರಾವುತನನ್ನು ನೆಲಕ್ಕೆ ಕೆಡವಿ ರೊಚ್ಚಿನಿಂದ ಅವನ ಕುತ್ತಿಗೆ ಹಿಚಿಕಿ ಪೂರಾ ಗೊತ್ತಿಗೆ ಹಚ್ಚಿದನು. ಅಷ್ಟರಲ್ಲಿ ಮಾಳನು ಸಂತಾಪದ ಭರದಿಂದ ಬೋವಿಗಳನ್ನು

ಬಡಿಗೆಯಿಂದ ಹಣಿದು ಮೇಣೆಯನ್ನು ಕೆಳಗಿಳಿಸಿಬಿಟ್ಟಿದ್ದನು. ಇತ್ತ ಉಳಿದ ಕುರುಬರ ಹುಂಬತನದ ಹೊಡತದಿಂದ ಯಾರ ಕುದುರೆಗಳು ಗಾಯಹೊಂದಿದ್ದವು; ಯಾರ ಕುದುರೆಗಳು ಬೆದರಿ ಓಡಿದ್ದವು; ಯಾರು ಸ್ವತಃ ಗಾಯಹೊಂದಿ ನೆಲಕ್ಕೆ ಉರುಳಿದ್ದರು.

ಹೀಗೆ ಕುರುಬರು ಅಕಸ್ಮಾತ್ತಾಗಿ ತಮ್ಮ ಮೇಲೆ ಬಿದ್ದು ಹಣಿದು ಹಲಾಕು ಮಾಡಿದ್ದನ್ನು ನೋಡಿ, ಉಳಿದ ಮುಸಲ್ಮಾನ ರಾವುತರು ಗಾಬರಿಯಾದರು. ಹೇಡಿ ಹಿಂದೂ ರಾವುತರಂತೂ ಮೆಲ್ಲಗೆ ಕಾಲು ತೆಗೆಯತೊಡಗಿದ್ದರು. ಅದನ್ನು ನೋಡಿ ಹೆಗ್ಗನು ತಿರಸ್ಕಾರದಿಂದ ಅವರನ್ನು ಕುರಿತು – "ಥೂ! ನಿಮ್ಮ ಬಾಳಿಗೆ ಬೆಂಕಿ ಹಚ್ಚಲಿ! ವೈರಿಗಳಿಗೆ ಎದುರಾಗಿ ಕಾದದೆ ಕಾಲು ದೆಗೆಯಲಿಕ್ಕೆ ನಿಮಗೆ ನಾಚಿಕೆ ಬರುವದಿಲ್ಲವೆ ? ವಿಶ್ವಾಸಘಾತದಿಂದ ಒಬ್ಬ ಹೆಣ್ಣುಮಗಳ ಮರ್ಯಾದೆಯ ಮಣ್ಣುಗೂಡಿಸುವ ಹವಣಿಕೆಯಲ್ಲಿದ್ದ ನೀವು, ಈಗ ಶೂರರಾದ ಮುಸಲ್ಮಾನ ರಾವುತರನ್ನು ವಿಶ್ವಾಸಘಾತದಿಂದ ಮುಣುಗಿಸಲಿಕ್ಕೆ ನಿಂತಿರುತ್ತೀರಲ್ಲ! ಛೀ, ಛೀ, ಜೀವಗಳ್ಳರು ತಮ್ಮ ಹೆಂಡಿರನ್ನು ಮಂದಿಗೆ ಮಾರಲಿಕ್ಕೆ ಸಹ ಹಿಂದೆಮುಂದೆ ನೋಡಲಾರರು! ಎಲೇ, ಬಂಟರ ಬಂಟನಾದ ವಾಲಿಯು ತನ್ನ ಬಂಟತನದಿಂದ ಶ್ರೀ ರಾಮಚಂದ್ರನನ್ನು ನಾಚಿಸಿದ್ದು ಇದೇ ಗಂಡುಮೆಟ್ಟಿನ ಸ್ಥಳದಲ್ಲಿಯಲ್ಲವೆ? ಇಂಥ ವಾನರಾಧೀಶ್ವರನ ಪಾದ ಮೂಡಿದ ಪವಿತ್ರವಾದ ಈ ಭೂಮಿಯನ್ನು ಸ್ವಜನದ್ರೋಹಿಗಳೂ, ಸ್ವಪಕ್ಷಗಾತಕರೂ ಆದ ನೀವು ಮೈಲಿಗೆ ಮಾಡಿ ಬಿಡುವಿರಲ್ಲ! ಹಾ, ಎಚ್ಚರಿಕೆ, ಸುಮ್ಮನೆ ನಿಂತುಕೊಳ್ಳಿರಿ, ಮುಂದಕ್ಕೆ ಒಂದು ಹೆಜ್ಜೆಯನ್ನಿಟ್ಟರೆ ನಿಮ್ಮನ್ನು ತುಂಡರಿಸಿ ಚೆಲ್ಲುವೆನು. ನೋಡಿರಿ, ಈ ಪಾಪಭೀರುಗಳಾದ ಪುಣ್ಯವಂತ ಕುರುಬರ ಪರೋಪಕಾರ ಗುಣವನ್ನು ಕಣ್ದೆರೆದು ನೋಡಿರಿ. ಕೈಪ–ಕಂಬಳಿಯ ಸರಳ ಹೃದಯದ ಈ ಕುರುಬರು, ಮುರುಕ ಕತ್ತಿ– ಕಠಾರಿಗಳನ್ನು ಹಿಡಿದು ಕಾದುತ್ತಿರುವಾಗ, ಬೆಟ್ಟದಂಥ ಕುದುರೆ ಹತ್ತಿ, ತೀಕ್ಷ್ಣ ಶಸ್ತ್ರಾಸ್ತ್ರಗಳನ್ನು ಧರಿಸಿ, ಸುಡುವ ಕಾಮಣ್ಣನಹಾಗೆ ಸಿಂಗಾರಾಗಿರುವ ನೀವು ಓಡಿ ಹೋಗುವಿರಾ? ಅಧಮರಿರಾ, ನಿಮ್ಮಂಥ ರಣಹೇಡಿಗಳ ದಂಡು, ಗಂಡುಗಲಿಗಳಾದ ಮುಸಲ್ಮಾನರ ದಂಡಿಗೆ ಹೇಗೆ ಈಡಾದೀತು? ಅಂತೇ ನಮ್ಮ ದೊಡ್ಡ ದೊಡ್ಡ ರಾಜ್ಯಗಳು ಒಂದರಹಿಂದೊಂದು ಮುಣುಗಹತ್ತಿವೆ. ಮಲೀಕಕಾಫರನಂಥ ವೀರಾಗ್ರಣಿಯು ನಿಮ್ಮಂಥ ರಣಹೇಡಿಗಳನ್ನು ಸರಸರ ಸವರುತ್ತ ಒಂದೇ ಉಸರಿಗೆ ರಾಮೇಶ್ವರವನ್ನು ಮುಟ್ಟಿದನು. ಈಗಾದ ಬವಣೆಯು ನಿಮಗೆ ಸಾಕಾಗಿಲ್ಲವೆ? ಮುಸಲ್ಮಾನರ ಕ್ರೂರ ಕೃತ್ಯಕ್ಕೆ ಗೋಳಿಡುವ ಸ್ವದೇಶಬಾಂಧವರ ಶೋಕ–ಕರ್ಕಶ ಧ್ವನಿಯು ನಿಮ್ಮ ಕಿವಿಗೆ ಕೇಳುವದಿಲ್ಲವೆ? ರಕ್ಷಕರು ಇಲ್ಲದ್ದರಿಂದ ಯವನರ ಕ್ರೂರತನದ ಕೊಲೆ–ಸುಲಿಗೆಗಳಿಗೆ ಗಡಗಡನೆ ನಡುಗುತ್ತ ಶರಣುಹೋಗುವದಕ್ಕಾಗಿ ದಶದಿಕ್ಕುಗಳನ್ನು ನೋಡುವ ಸ್ವದೇಶ ಬಾಂಧವರ ದೈನ್ಯದ ಮುಖಮುದ್ರೆಗಳು ನಿಮ್ಮ ಕಣ್ಣಿಗೆ ಕಾಣುವದಿಲ್ಲವೆ? ವೀರ ಬಂಧುಗಳೇ, ನನ್ನ ಕಠೋರ ಮಾತುಗಳಿಗಾಗಿ ನನ್ನ ಮೇಲೆ ಸಿಟ್ಟಾಗಬೇಡಿರಿ, ಹೂವು ಮಾರಿದಲ್ಲಿ ಹುಲ್ಲು ಮಾರಿದಂತೆ, ನಿಮ್ಮಂಥ ರಣಪಂಡಿತರ ವಂಶದವರು ಹೇಡಿಗಳಾದರೆ ಕರ್ನಾಟಕವನ್ನು ಯವನರ ಬಾಧೆಯಿಂದ ರಕ್ಷಿಸುವವರು ಯಾರು? ನಿಮ್ಮ ಕರ್ನಾಟಕದ ಗತವೈಭವವನ್ನು ಸ್ಮರಿಸಿರಿ; ನಿಮ್ಮ ಪೂರ್ವಜರ

ಶೌರ್ಯವನ್ನು ನೆನಪು ಮಾಡಿಕೊಳ್ಳಿರಿ; ನಿಮ್ಮ ಪರಿಪುಷ್ಟವಾದ ವಿಶಾಲ ಬಾಹುಗಳನ್ನು ನೋಡಿಕೊಳ್ಳಿರಿ. ಮಿತ್ರರೇ, ನನ್ನ ಒರಟು ಮಾತಿಗೆ ಸಿಟ್ಟಾಗಬೇಡಿರಿ. ಇಲ್ಲಿ ಕೂಡಿರುವ ನೀವು ಹತ್ತಿಪ್ಪತ್ತು ಜನರೇ ಕರ್ನಾಟಕಮಾತೆಯ ಉದ್ಧಾರಕ್ಕಾಗಿ ಪ್ರತಿಜ್ಞೆ ಮಾಡಿದರೆ ಬೇಕಾದದ್ದು ಆಗಬಹುದು. ಸತ್ವಶಾಲಿಗಳಾದ ಒಬ್ಬೊಬ್ಬರೇ ಒಂದೊಂದು ರಾಜ್ಯವನ್ನು ಸ್ಥಾಪಿಸಿರುವಾಗ, ನೀವು ಇಪ್ಪತ್ತು ಜನರು ಕರ್ನಾಟಕವನ್ನು ಉದ್ಧರಿಸಲಿಕ್ಕಿಲ್ಲವೆ? ಇಳಿಯಿರಿ, ಕುದುರೆಗಳಿಂದ ಕೆಳಗಿಳಿಯಿರಿ. ಕಗ್ಗ ಕುರುಬನೆನಿಸುವ ಈ ಹೆಗ್ಗನು ಮಾಡುವ ಪ್ರತಿಜ್ಞೆಯನ್ನು ಕೇಳಿರಿ – "ಕರ್ನಾಟಕ ಭೂಮಾತೆಯೇ, ನಿನಗೊದಗಿದ ದೈನ್ಯವನ್ನು ದೂರಮಾಡುವದಕ್ಕಾಗಿಯೇ ನಿನ್ನ ಅಧಮ ಪುತ್ರನೆನಿಸುವ ನನ್ನ ಜನ್ಮವೂ, ಜೀವನವೂ ಇರುವವು. ಆ ಪವಿತ್ರ ಕಾರ್ಯದಲ್ಲಿಯೇ ನನ್ನ ದೇಹವನ್ನು ಸವಿಸುವೆನು. ಇದಕ್ಕೆ ಜನ್ಮಭೂಮಿಯಾದ ನೀನೂ, ಜಾನ್ಹವೀ ರಮಣನಾದ ಶ್ರೀ ವಿರೂಪಾಕ್ಷನೂ, ಗುಪ್ತನಿಧಿಯಂತೆ ಈ ಮೇಣೆಯಲ್ಲಿ ಮರೆಯಾಗಿರುವ ತರುಣೀಮಣಿಯೂ ಸಾಕ್ಷಿಯಾಗಿರುವಿರಿ!"

ಹೆಗ್ಗನ ಈ ವೀರಾಲಾಪಗಳನ್ನು ಕೇಳಿ ಮೇಣೆಯ ಬಾಗಿಲುಗಳು ಪಳಕ್ಕನೆ ತೆರೆದವು. ಆಗ ಒಬ್ಬ ತರುಣಿಯು ಹೊರಗೆ ಬಂದು ನೋಡಲು, ವಿಲಕ್ಷಣ ನೋಟವು ಆಕೆಯ ಕಣ್ಣಿಗೆ ಬಿದ್ದಿತು. ಹಿಂದೂ ರಾವುತರೂ, ಬೋವಿಗಳೂ ಪಶ್ಚಾತ್ತಾಪದಿಂದ ಹೆಗ್ಗನ ಚರಣಕ್ಕೆರಗಿದ್ದರು. ಕುರುಬರೆಲ್ಲ ಆಶ್ಚರ್ಯದಿಂದ ಹೆಗ್ಗನನ್ನು ನೋಡುತ್ತ ನಿಂತಿದ್ದರು. ಒತ್ತಟ್ಟಿಗೆ ಮುಸಲ್ಮಾನ ರಾವುತರ ಎರಡು ಹೆಣಗಳು ಬಿದ್ದಿದ್ದವು. ಒತ್ತಟ್ಟಿಗೆ, ಗಾಯಹೊಂದಿದ ಹಿಂದೂ–ಮುಸಲ್ಮಾನರ ಮೈಗಳು ರಕ್ತಮುಡುಗಿ ವಿದ್ರೂಪವಾಗಿ ತೋರುತ್ತಿದ್ದವು. ಇನ್ನೊತ್ತಟ್ಟಿಗೆ, ಮುಸಲ್ಮಾನ ರಾವುತರು ಮುಂಗಾಣದೆ ಬೆರಗಾಗಿ ನಿಂತುಕೊಂಡಿದ್ದರು. ಆಗ ಆ ತರುಣಿಯು ಆದರದಿಂದ ಹೆಗ್ಗನನ್ನು ನೋಡಿ –ಧನ್ಯ ಪುರುಷಾ, ನೀನು ಕುರುಬನೆ? ಕೃತಿಯಿಂದ ಮಾತ್ರ ನೀನು ಕುರುಬನಿದ್ದಂತೆ ತೋರುವದಲ್ಲ. ನಿನ್ನ ಮಾತುಗಳು ಕುರುಬರಿಗೆ ಒಪ್ಪುವದಿಲ್ಲ. ನೀನು ಬೂದಿ ಮುಚ್ಚಿದ ಕೆಂಡದಂತೆ, ಕಾರಣಾಂತರದಿಂದ ರೂಪವನ್ನಾಚ್ಛಾದಿಸಿರುವ ಸತ್ಕುಲೋತ್ಪನ್ನನಾದ ಯಾವನೊಬ್ಬ ವೀರಪುರುಷನೇ ಆಗಿರು, ಅಥವಾ ಸಮುದ್ರದಲ್ಲಿ ವಡವಾಗ್ನಿಯು ಉತ್ಪನ್ನವಾದಂತೆ ಕುರುಬರ ಸಭ್ಯಕುಲದಲ್ಲಿ, ಆ ಕುಲದ ಮಡ್ಡತನವನ್ನು ದಹಿಸುವದಕ್ಕಾಗಿಯೂ, ಕರ್ನಾಟಕ ವನ್ನುದ್ಧರಿಸುವದಕ್ಕಾಗಿಯೂ ಆವತರಿಸಿದ ವೀರಮಣಿಯೇ ಆಗಿರು; ನಿನ್ನಲ್ಲಿಯ ಉತ್ತಮೋತ್ತಮ ಗುಣಗಳಿಗಾಗಿ, ಆನೆಗುಂದಿಯ ದೇವರಾಜನ ಪುತ್ರಿಯಾದ ಪದ್ಮಿನಿಯು ನಾನು ನಿನ್ನನ್ನು ವಂದಿಸುವೆನು. ಈ ವಿಶ್ವಾಸಘಾತಕಿಗಳು ನನ್ನನ್ನು ಕಾಶೀಮಖಾನನ ಜನಾನಖಾನೆಯಲ್ಲಿ ಸೇರಿಸಿ ಪುರುಷಾರ್ಥವನ್ನು ಸಾಧಿಸತಕ್ಕವರಿದ್ದರು; ಆದರೆ ಪುಣ್ಯವಂತನಾದ ನೀನು ನನ್ನ ಮಾನವನ್ನು ಉಳಿಸಿದೆ. ಎಲೇ ಚಿನ್ನವೆಂಕಟಾ, ಓಬಲಾ, ಪೆದ್ದಾ ನಿಮಗೆ ಎಂಥ ಕಠಿಣ ಶಿಕ್ಷೆಯನ್ನು ವಿಧಿಸಬೇಕಾದೀತು? ಈ ಅಧಮನಾದ ಹನುಮಾನನನ್ನು ಏನು ಮಾಡಿದರೆ ಸಿಟ್ಟು ಹೋದೀತು? ಎಲೇ ಬೋವಿಗಳಿರಾ, ನೀವು ದೇವರಾಯನ ಉಪ್ಪು ಉಂಡವರಲ್ಲವೆ? ನೀಚರಾದ ಈ ಯವನ ರಾವುತರು, ನನ್ನ ತಂದೆಯ ಮಿತ್ರನೆನಿಸುವ ಕಾಸಿಮಖಾನನ ಪರಿಜನರಿರುವರಲ್ಲ! ಛೀ,

ಛೀ, ನಿಮ್ಮಂಥ ಸ್ವಾಮಿದ್ರೋಹಿಗಳ, ಹಾಗು ಮಿತ್ರದ್ರೋಹಿಗಳ ಮುಖಾವಲೋಕನ ಮಾಡಲಾಗದು; ಆದರೆ ನನ್ನ ಮಾನವನ್ನು ರಕ್ಷಿಸಿದವನೂ, ಮಹಾ ಪ್ರತಾಪಿಯೂ, ಸ್ವದೇಶೋದ್ಧಾರದ ಕಂಕಣ ಕಟ್ಟಿದವನೂ ಆದ ಈ ಪುಣ್ಯಪುರುಷನನ್ನು ಅಭಿನಂದಿಸುವದಕ್ಕಾಗಿ ನಿರ್ಲಜ್ಜೆಯಿಂದ ನಾನು ಮೇಣೆಯನ್ನು ಬಿಟ್ಟು ಹೊರಗೆಬಂದು ದಿಟ್ಟತನದಿಂದ ಮಾತಾಡ ಬೇಕಾಯಿತು. (ಹೆಗ್ಗನ ಕಡೆಗೆ ತಿರುಗಿ) ಪುಣ್ಯಾತ್ಮಾ ಈ ಅತಿ ಪ್ರಸಂಗಕ್ಕಾಗಿ ನೀನು ನನ್ನನ್ನು ಕ್ಷಮಿಸು; ಮತ್ತು ವೀರನಾದ ನೀನು ನನ್ನ ಪ್ರಾರ್ಥನೆಯನ್ನು ಮನ್ನಿಸಿ, ನನ್ನನ್ನು ಈಗಲೇ ನನ್ನ ತಂದೆಯ ಬಳಿಗೆ ಕಳಿಸು. ವೈಭವಶಾಲಿಯೇ, ನೀನು ಸ್ವದೇಶೋದ್ಧಾರದಂಥ ಕಠಿಣ ಕಾರ್ಯ ಮಾಡುವವನೆಂಬದನ್ನು ಈ ಪದ್ಮಿನಿಯು ಸರ್ವಥಾ ಮರೆಯಳೆಂಬದು ನಿನ್ನ ನೆನಪಿನಲ್ಲಿರಲಿ ಎಂದು ಹೇಳಿ, ಆ ತರುಣಿಯು ಪುನಃ ಮೇಣೆಯಲ್ಲಿ ಕುಳಿತು ಬಾಗಿಲು ಇಕ್ಕಿಕೊಂಡಳು.

ಹೀಗೆ ಮಿಂಚಿನಂತೆ ಪಳಕ್ಕನೆ ಹೊಳೆದು ಗದ್ದರಿಸಿ ಅಡಗಿಹೋದ ಪದ್ಮಿನಿಯ ವೈಭವದಿಂದ ಎಲ್ಲರೂ ಸ್ತಂಭಿತರಾದರು. ಆಕೆಯ ಈ ಕೃತಿಯಿಂದ ಹೆಗ್ಗನ ಗೌರವವವು ಮತ್ತಿಷ್ಟು ಹೆಚ್ಚಿತು. ಅಲ್ಲಿರುವ ಹಿಂದುಗಳಿಗೆ ಹೆಗ್ಗನು ದೇವರಹಾಗೆ ಕಾಣಹತ್ತಿದನು. ಸತ್ವಶಾಲಿಗಳಾದ ಸ್ವದೇಶಭಕ್ತರ ಲೋಕ ಸಂಗ್ರಹ ಸಾಮರ್ಥ್ಯವು ಆಶ್ಚರ್ಯಕಾರಕವೇ ಸರಿ. ಅದು ತಮ್ಮ ಸ್ವಾರ್ಥತ್ಯಾಗದ ಉಜ್ವಲ ಕೃತಿಗಳಿಂದ, ಮತ್ತು ಜನರ ಸ್ವಾಭಿಮಾನದ ಜಾಗೃತಗೊಳಿಸುವ ತಮ್ಮ ಹೃದಯಭೇದಕ ಮಾತುಗಳಿಂದ, ಅದೇಕೆ, ಪ್ರತ್ಯಕ್ಷ ತಮ್ಮ ದಿವ್ಯವಾದ ಮೂರ್ತಿಯ ದರ್ಶನದಿಂದ ಜನರ ಚಿತ್ತ ಹರಣ ಮಾಡುವರು. ಈಗಂತೂ ಹೆಗ್ಗನ ಉಜ್ವಲ ಕೃತಿ, ಹೃದಯಭೇದಕ ಮಾತು, ದಿವ್ಯ ಮೂರ್ತಿಯ ದರ್ಶನ ಈ ಮೂರರ ಮುಪ್ಪುರಿಯು ಜನರ ಚಿತ್ತಾಕರ್ಷಕವಾಗಿರಲು, ಕಾರ್ಯವಾಗದೆ ಹೇಗೆ ಉಳಿದೀತು? ಅಲ್ಲಿದ್ದ ಎಲ್ಲ ಹಿಂದೂ ಜನರು ಹೆಗ್ಗನಲ್ಲಿ ಪರಮ ಭಕ್ತಿಯನ್ನಿಟ್ಟು ಸ್ವದೇಶೋದ್ಧಾರಕ್ಕಾಗಿ ಆತನು ಹೇಳಿದಂತೆ ಪ್ರತಿಜ್ಞೆಯನ್ನು ಮಾಡಿ, ಅವನ ಮೊದಲನೆಯ ಸಂಗಡಿಗರಾದರು. ಹೀಗೆ ಹಿಂದೂ ಜನರೆಲ್ಲರೂ ಒಕ್ಕಟ್ಟಾದದ್ದನ್ನು ನೋಡಿ ಮುಸಲ್ಮಾನ ರಾವುತರು ಹತವೀರ್ಯರಾದರು. ಹೆಗ್ಗನು ಅವರ ಕುದುರೆಗಳನ್ನೂ, ಶಸ್ತ್ರಾಸ್ತ್ರ ಗಳನ್ನೂ ಕಸಿದುಕೊಂಡು, ಏನೂ ಅಪಾಯಮಾಡದೆ ಅವರನ್ನು ಹೋಗಗೊಟ್ಟನು; ಮತ್ತು ಸತ್ತುಬಿದ್ದಿದ್ದ ಮುಸಲ್ಮಾನರಿಗೆ ಮಣ್ಣುಕೊಡಲು ಅವರಿಗೆ ಸೂಚಿಸಿ, ಅವರಿಗೆ ನೆರವಾಗಲು ತನ್ನವರಿಗೆ ಹೇಳಿದನು. ಇದರಿಂದ ಮುಸಲ್ಮಾನರಿಗೆ ಬಹಳ ಸಂತೋಷವಾಯಿತು; ಆದರೆ ಹೆಗ್ಗನೊಬ್ಬನು ತಮ್ಮ ಪ್ರಬಲ ಶತ್ರುವಾದದ್ದರಿಂದ ಬೇಗನೆ ಅವನನ್ನು ನಾಶಗೊಳಿಸಬೇಕೆಂತಲೂ, ತಮ್ಮ ಕೈಗೆ ಸಿಕ್ಕ ಬೇಟೆಯು ಆಕಸ್ಮಾತ್ ತಪ್ಪಿಸಿಕೊಂಡದ್ದರಿಂದ ಅದನ್ನು ಪುನಃ ಸಂಪಾದಿಸಿ, ತಮ್ಮ ಒಡೆಯನಾದ ಕಾಸೀಮನ ಪ್ರೀತಿಯನ್ನು ಸಂಪಾದಿಸಬೇಕೆಂತಲೂ ಅವರು ಮನಸ್ಸಿನಲ್ಲಿ ನಿಶ್ಚಯಿಸದೆ ಬಿಡಲಿಲ್ಲ. ಶವಗಳ ವ್ಯವಸ್ಥೆಯಾಗುವವರೆಗೆ ಆ ಧರ್ಮಿಷ್ಠರಾದ ಕುರುಬರು ಸ್ಥಳಬಿಟ್ಟು ಕದಲಲಿಲ್ಲ. ಹದಿನಾಲ್ಕು ಕುದುರೆಗಳೂ, ವಿವಿಧ ಶಸ್ತ್ರಾಸ್ತ್ರಗಳೂ ಅವರ ಕೈ ಸೇರಿಸಿದ್ದರಿಂದ, ಅವರು ಕುರುಬರು ಹೋಗಿ ಕಲಿಗಳಾದರು. ಹೆಗ್ಗನು ಅವರ ನಾಯಕನಾದನು, ಮಾಳನು ಮಂತ್ರಾಲೋಚಕನಾದನು, ಮಲ್ಲನು ಸೇನಾನಾಯಕನಾದನು, ಉಳಿದವರು

ದಂಡಾಳುಗಳಾದರು. ಸಾರಾಂಶ ಹೆಗ್ಗನು ಕಗ್ಗ ಕುರುಬನು ಹೋಗಿ ಒಬ್ಬ ಚಿಕ್ಕ ಪಾಳೇಗಾರನಾದನು; ಆ ಪಾಳೇಗಾರನು ಮೇಣೆಯನ್ನು ದಕ್ಷತೆಯಿಂದ ರಕ್ಷಿಸುತ್ತಿರಲು, ಮೇಣೆಯು ಆನೆಗುಂದಿಯ ಕಡೆ ಸಾಗಿತು.

## ಹಾ, ತಡೆ !

ಪಂಪಾ ಸರೋವರದ ತೀರವು; ಅಮಾವಾಸ್ಯೆಯ ಮಧ್ಯರಾತ್ರಿಯಾದದ್ದರಿಂದ ಆ ನಿರ್ಜನಾರಣ್ಯವನ್ನು ಪುಕ್ಕರು ಪ್ರವೇಶಿಸುವ ಹಾಗಿದ್ದಿಲ್ಲ. ಚಳಿಗಾಲದ ಸ್ವಚ್ಛವಾದ ಆಕಾಶದಲ್ಲಿ ನಕ್ಷತ್ರಗಳು ಫಳಫಳನೆ ಹೊಳೆಯುತ್ತಿದ್ದವು. ಆಗಿನ ಕಟಗುಟ್ಟಿಸುವ ಚಳಿಯ ಮಹಿಮೆಯನ್ನೇನು ವರ್ಣಿಸಬೇಕು? ಆ ಕಗ್ಗ ಕಾಲದಲ್ಲಿ ಕ್ರಿಮಿ–ಕೀಟಗಳ ಸಂಹಾರವು ಮಿತಿಮೀರಿ ಆಗುತ್ತಿರಲು, ಆ ಘೋರಾರಣ್ಯದಲ್ಲಿ ಮಳೆಗಾಲದಂತೆ, ''ಜಿರ್ ಜಿಟ್'' ಎಂಬ ಕರ್ಕಶಧ್ವನಿಯು ಕೇಳಬರುತ್ತಿದ್ದಿಲ್ಲ. ಕ್ರೂರ ಮೃಗಗಳು ತಮ್ಮ ತಮ್ಮ ವಾಸಸ್ಥಳಗಳಲ್ಲಿ ಬಿದ್ದುಕೊಂಡು ಬಿಟ್ಟದ್ದರಿಂದ, ಅವುಗಳ ಸದ್ದು ಅಡಗಿದಂತಾಗಿತ್ತು. ಒಟ್ಟಿಗೆ ಆ ಗಹನ ಪ್ರದೇಶದಲ್ಲಿ ಸ್ತಬ್ಧತೆಯ ಸಾಮ್ರಾಜ್ಯವಾಗಿ, ನೋಡಿದತ್ತ ಔದಾಸೀನ್ಯವು ಸುರಿಯುತ್ತಿತ್ತು. ಆಗ ನಡುನಡುವೆ ತರಗೆಲೆಗಳುದುರುವ ಸಪ್ಪಳ, ಆ ತರಗೆಲೆಗಳ ಮೇಲೆ ಕ್ಷುದ್ರ ಪ್ರಾಣಿಗಳು ಓಡಾಡುವಾಗ ಆಗುವ ''ಸರಸರ'' ಎಂಬ ಸಪ್ಪಳ ಇವುಗಳಿಂದ ಆ ಸ್ಥಳದ ಭಯಂಕರತೆಯು ಮತ್ತಿಷ್ಟು ಹೆಚ್ಚುತ್ತಿತ್ತು. ಆಗ ಗಾಳಿಯ ಸುಳುವಿದ್ದಿಲ್ಲ. ಸರೋವರದ ಸ್ತಬ್ಧವಾದ ನೀರು ತಣ್ಣಗೆ ಆಣೆಕಲ್ಲಾಗಿದ್ದವು. ಸರೋವರದಲ್ಲಿ ಮೂಡಿದ ನಕ್ಷತ್ರಗಳು ಚಳಿಯಿಂದ ನಡುಗುವಂತೆ ಚಲಿಸುತ್ತಿದ್ದವು. ಬಹಳ ಹೇಳುವದರಿಂದೇನು? ಸೂರ್ಯನ ಸಹಾಯವು ತಪ್ಪಿದ್ದರಿಂದ ಚರ–ಚರಾತ್ಮಕವಾದ ವಿಶ್ವವೇ ಚಳಿಗೆ ಅಂಜಿ ಕಟಗುಟ್ಟುತ್ತ, ಶೀತ ನಿವಾರಣಕ್ಕಾಗಿ ಆ ಸಾಕ್ಷಾತ್ ದಿನಮಣಿಯನ್ನು ಕುರಿತು ಮೌನದಿಂದ ಮೊರೆಯಿಡುತ್ತಿರುವಂತೆ ಭಾಸವಾಗುತ್ತಿತ್ತು.

ಇಂಥ ಕಗ್ಗತ್ತಲೆಯ ಭಯಂಕರ ರಾತ್ರಿಯಲ್ಲಿ ನಮ್ಮ ಕುರುಬರ ಹೆಗ್ಗಣ್ಣನು ಒಬ್ಬನೇ ಸರೋವರದ ಕಡೆಗೆ ಯಾಕೆ ಸಾಗಿರಬಹುದು? ಆತನು ಈಗ ಕಗ್ಗ ಕುರುಬನಂತೆ ಕೈಪ ಹಾಕಿ ಕಂಬಳಿ ಹೊದ್ದು ತಲೆಗೆ ಚಿಂದಿಯನ್ನು ಸುತ್ತಿದ್ದಿಲ್ಲ. ಬಣ್ಣಿಸುವ ಬಂಟನಂತೆ ಉಡುಪು–ತೊಡುಪುಗಳನ್ನು ಧರಿಸಿದ್ದನು. ಹುಟ್ಟಾ ತೇಜಸ್ವಿಯಾಗಿದ್ದ ಆತನು ಈಗ ಎಷ್ಟು ತೇಜೋವಂತನಾಗಿ ಕಾಣುತ್ತಿದ್ದನೆಂಬದನ್ನು ನಾವು ಹೇಳಲಾರೆವು. ಆತನು ಹಾಕಿದ ವೀರಕಾಸಿ, ತೊಟ್ಟ ಕವಚ, ಧರಿಸಿದ ಶಿರಸ್ತ್ರಾಣ, ಅಲ್ಲಲ್ಲಿ ಸಿಕ್ಕಿಸಿದ ವಿವಿಧ ಶಸ್ತ್ರಗಳು, ಬೆನ್ನಿಗಿಟ್ಟಿದ್ದ ಧನುಷ್ಯ–ಬಾಣಗಳು, ಕೈಯಲ್ಲಿ ಧರಿಸಿದ ತೀಕ್ಷ್ಣ ಖಡ್ಗ ಇವುಗಳಿಂದ ಆ ವೀರಪುರುಷನ ಸ್ವಭಾವಸಿದ್ಧ ಪರಾಕ್ರಮವು ಚೆನ್ನಾಗಿ ಅಲಂಕೃತವಾಗಿತ್ತು. ಮಾಡುವದೇನು? ಆ ವೀರನ ದಿವ್ಯ ರೂಪವನ್ನು ನೋಡಿ ಧನ್ಯವಾಗುವ ಯೋಗವು ಆ ಮಧ್ಯರಾತ್ರಿಯಲ್ಲಿ ಯಾರಿಗೂ ಇದ್ದಿಲ್ಲ. ಕರ್ನಾಟಕ ಭೂಮಾತೆಯು, ಪಕ್ಕನೆ

ಹೊರಬಿದ್ದಿದ್ದ ತನ್ನ ಅಲೌಕಿಕ ವೀರಪುತ್ರನಿಗೆ ಜನರ ಕಣ್ಣು ಹತ್ತಬಾರದೆಂದು ಆತನಿಗೆ ಕಗ್ಗತ್ತಲೆಯ ಮುಸುಕು ಹಾಕಿದ್ದಳೆಂದು ಹೇಳಬಹುದು. ಕಗ್ಗ ಕುರುಬನಾಗಿದ್ದ ಹೆಗ್ಗನು ಈಗ ಬಣ್ಣಿಸುವ ಬಂಟನು ಹೇಗಾಗಿರಬಹುದೆಂದು ವಾಚಕರು ಶಂಕಿಸುತ್ತಿರಬಹುದು; ಆದರೆ ಕಾಲಮಹಿಮೆಯು ಏನು ತಾನೆ ಮಾಡಲಿಕ್ಕಿಲ್ಲ?

ಹೆಗ್ಗನು ಯಾರೇ ಇರಲಿ, ಅದನ್ನು ನಾವು ಇಲ್ಲಿ ಹೇಳಲಿಚ್ಛಿಸುವುದಿಲ್ಲ. ದೇವರಾಯನ ಮಗಳಾದ ಪದ್ಮಿನಿಯನ್ನು ಮುಸಲ್ಮಾನರ ದವಡೆಯೊಳಗಿಂದ ಆತನು ಬಿಡಿಸಿದ್ದನ್ನು ವಾಚಕರು ಮರೆತಿಲ್ಲವಷ್ಟೆ? ಅದರಂತೆ ಆ ಪ್ರಸಂಗದಲ್ಲಿಯ ಆತನ ಪರಾಕ್ರಮವನ್ನು ನೋಡಿ ಮಲ್ಲನಂಥ ಬಲಿಷ್ಠ ಕುರುಬನೂ, ಮುದ್ದ, ಪೆದ್ದ, ಓಬಲ ಮೊದಲಾದ ರಾವುತರೂ, ಅವರ ಅನುಯಾಯಿಗಳೂ ಸಾಚಿ ಸ್ವದೇಶೋದ್ಧಾರದ ಪ್ರತಿಜ್ಞೆ ಮಾಡಿ ಹೆಗ್ಗನನ್ನು ಕೂಡಿದರೆಂಬ ದಾದರೂ ವಾಚಕರ ನೆನಪಿನಲ್ಲಿರಬಹುದು. ತನ್ನ ಮಗಳ ಬಂಧವಿಮೋಚನ ಮಾಡಿದ್ದಕ್ಕಾಗಿ ದೇವರಾಯನು ಅತ್ಯಂತ ಸಂತುಷ್ಟನಾಗಿದ್ದನು. ಆತನು ಕಾಸಿಮಖಾನನ ಮೇಲೆ ಬಹಳ ಸಿಟ್ಟಾದರೂ, ಖಾನನನ್ನು ಪ್ರಸಿದ್ಧ ರೀತಿಯಿಂದ ದಂಡಿಸುವಷ್ಟು ಸಾಮರ್ಥ್ಯವು ದೇವರಾಯ ನಿಗಿದ್ದಿಲ್ಲ. ಅತ್ತ ತಘಲಕ ಮಹಮ್ಮದನಿಗೆ ದೇವರಾಯನನ್ನು ಕಿತ್ತಿಹಾಕಿ ಆನೆಗುಂದಿಯ ಆಡಳಿತವನ್ನು ತನ್ನವರಿಗೆ ಒಪ್ಪಿಸುವ ಧೈರ್ಯವೂ ಇದ್ದಿಲ್ಲ. ಅವರು ಅಂತರಂಗದಲ್ಲಿ ಒಬ್ಬರನ್ನೊಬ್ಬರು ಮುರಿಯಲಿಕ್ಕೆ ಯತ್ನಿಸುತ್ತಿದ್ದರು. ಈ ಸ್ಥಿತಿಯಲ್ಲಿ ಹೆಗ್ಗನ ಪರಾಕ್ರಮವು ದೇವರಾಯನಿಗೆ ಆಶಾಜನಕವಾಗಿ ತೋರಿದ್ದರಲ್ಲಿ ಆಶ್ಚರ್ಯವಿಲ್ಲ. ದೇವರಾಯನು ಆತನನ್ನು ಒಂದು ಚಿಕ್ಕ ಸೈನ್ಯದ ಮುಖ್ಯನನ್ನಾಗಿ ಮಾಡಿದನು. ಕೂಡಲೆ ಹೆಗ್ಗನ ಕಗ್ಗತನವು ಹೋಗಿ ಆತನು ಶೂರ ಸರದಾರರಲ್ಲಿ ಒಬ್ಬನಾದನು. ಆದರೆ ಧೂರ್ತನಾದ ಹೆಗ್ಗನು ಒಮ್ಮೆಲೆ ಬೈಲಿಗೆ ನಿಂತು ಮುಸಲ್ಮಾನರಿಗೆ ವಿರೋಧ ಬಳಿಸಲಿಚ್ಛಿಸಲಿಲ್ಲ. ಆತನು ಯುಕ್ತಿಯಿಂದ ತನ್ನ ಬಲವನ್ನು ಹೆಚ್ಚಿಸಿಕೊಳ್ಳುವದಕ್ಕಾಗಿ ಒಳಗಿಂದೊಳಗೆ ಯತ್ನಿಸತೊಡಗಿದನು. ಆತನು ಆನೆಗುಂದಿಯಲ್ಲಿರದೆ ಒಂದು ಗುಪ್ತಸ್ಥಳದಲ್ಲಿ ತನ್ನ ಅನುಯಾಯಿಗಳೊಡನೆ ಇರಹತ್ತಿದನು. ಹೆಗ್ಗನ ಉಬ್ಬಾಳುತನವು ಸಾಮಾನ್ಯವಾದುದಲ್ಲ. ಅಂಜಿಕೆಯೆಂದರೇನೆಂಬದು ಆತನಿಗೆ ಗೊತ್ತೇ ಇದ್ದಿಲ್ಲವೆಂದು ಹೇಳಬಹುದು. ಆತನ ಅನುಯಾಯಿಗಳು ಸ್ವಲ್ಪ ಜನರಿದ್ದರೂ ಅವರು ಜೀವಕ್ಕೆ ಜೀವ ಕೊಡುವವರಾಗಿದ್ದರು. ಹೆಗ್ಗನ ಸ್ವಜನಾಭಿಮಾನ, ಸ್ವಾರ್ಥತ್ಯಾಗ, ಪರಾಕ್ರಮ, ಪರೋಪಕಾರ ಬುದ್ಧಿ ಇವುಗಳ ಯೋಗದಿಂದ ದಿನದಿನಕ್ಕೆ ಅವನ ಅನುಯಾಯಿಗಳ ಸಂಖ್ಯೆಯು ಹೆಚ್ಚುತ್ತ ಹೋಗಿತ್ತು. ಈಗ ಮುಸಲ್ಮಾನರ ಕಾಟದಿಂದ ಹಿಂದೂ ಜನರು ಬೇಸತ್ತು ಸಂತಾಪಗೊಂಡಿದ್ದರು; ಆದರೆ ತಕ್ಕ ಮುಂದಾಳುವು ದೊರೆಯದ್ದರಿಂದ ಒಟ್ಟುಗೂಡಲಿಕ್ಕೆ ಅವರಿಗೆ ಮಾರ್ಗವಿದ್ದಿಲ್ಲ. ಈ ಕೊರತೆಯನ್ನು ಹೆಗ್ಗನು ತುಂಬಿಕೊಟ್ಟನು. ಮೇಲಾಗಿ ದೇವರಾಯನ ಗುಪ್ತ ಸಹಾಯವು ಹೆಗ್ಗನಿಗಿತ್ತು.

ಇಂದು ಹೆಗ್ಗನು ಯಾವದೋ ಒಂದು ಗುಪ್ತ ಕಾರ್ಯವನ್ನು ಸಾಧಿಸುವುದಕ್ಕಾಗಿ ಆನೆಗುಂದಿಗೆ ಹೋಗಿದ್ದವನು, ತಿರುಗಿ ಮಧ್ಯರಾತ್ರಿಯಲ್ಲಿಯೇ ತನ್ನ ಬಿಡಾರದ ಕಡೆಗೆ ಸಾಗಿದ್ದನು.

ತನ್ನ ಆ ಮಹತ್ವದ ಕಾರ್ಯದಲ್ಲಿ ಹೆಗ್ಗನ ಮನಸ್ಸು ಮಗ್ನವಾಗಿಹೋಗಿತ್ತು. ಕಾರ್ಯಾಸಕ್ತನಾದ ಆ ಪುಣ್ಯವಂತನಿಗೆ ಕಾರ್ಯಸಾಧನದ ನಿದಿಧ್ಯಾಸದಲ್ಲಿ ಒಮ್ಮೊಮ್ಮೆ ಅನುಕೂಲ ಪ್ರತಿಕೂಲ ಸಂಗತಿಗಳ ಪರಿವೆಸಹ ಉಳಿಯುತ್ತಿದ್ದಿಲ್ಲ. ತಾನು ಒಬ್ಬನು, ಇಂದು ಅಮಾವಾಸ್ಯೆಯ ಕಗ್ಗತ್ತಲೆಯ ಮಧ್ಯರಾತ್ರಿಯು, ಮುಸಲ್ಮಾನರ ಪುಂಡಾಟಿಕೆಯ ದಿನದಲ್ಲಿ ತನಗೆ ಏನಾದರೂ ಅಪಾಯ ತಟ್ಟೀತು ಎಂಬ ವಿಚಾರಮಾಡದೆ ಆತನು ಹೊರಟುಬಿಟ್ಟಿದ್ದನು. ಒಮ್ಮೊಮ್ಮೆ ಕಾರ್ಯಸಾಧಕರು ಹೀಗೆ ಸಾಹಸ ಮಾಡುವ ಪ್ರಸಂಗ ಬರುವದು ನಿಜವು. ಅದರಂತೆ ಹೆಗ್ಗಣ್ಣನು ಅತ್ಯಂತ ಸಾಹಸದಿಂದ ಮಧ್ಯರಾತ್ರಿಯಲ್ಲಿ ಒಬ್ಬನೇ ಸಾಗಿದ್ದನು. ಯಾವದೋ ಗಹನ ವಿಚಾರದಲ್ಲಿ ಮಗ್ನನಾಗಿದ್ದ ಆತನಿಗೆ, ತಾನು ಎಷ್ಟು ಹಾದಿಯನ್ನು ನಡೆದೆನು, ತನ್ನ ವಾಸಸ್ಥಳವು ಇನ್ನು ಎಷ್ಟು ದೂರ ಉಳಿಯಿತು ಎಂಬದರ ಪರಿವೆ ಸಹ ಇದ್ದಂತೆ ತೋರಲಿಲ್ಲ. ಆತನು ತಗ್ಗು ದಿನ್ನೆಗಳಲ್ಲಿ ಮುಗ್ಗುತ್ತ ಎಡವುತ್ತ ನಡೆದಿದ್ದನು. ಆತನ ಲಕ್ಷವು ಗುಪ್ತಕಾರ್ಯದ ಕಡೆಗೆ, ಆತನು ನಡೆಯುವದು ಮನೆಯ ಕಡೆಗೆ ಆಗಿದ್ದವು. ಹೀಗೆ ಆತನು ಸಾಗಿರುವಾಗ ಮಧ್ಯರಾತ್ರಿಯು ಮೀರಿ ಉತ್ತರರಾತ್ರಿಗೆ ಆರಂಭವಾಯಿತು. ಪಂಪಾಸರೋವರದ ಮೇಲಿನ ನಸುಗಾಳಿಯು ಸುಳಿಯಹತ್ತಿ ಚಳಿಯು ಹೆಚ್ಚಿತು. ಒಂಭತ್ತುತಾಸು ರಾತ್ರಿಯ ಅಮಲು ಇರುವಾಗ ಆತನು ಪಂಪಾಸರೋವರದ ತೀರಕ್ಕೆ ತಲುಪಿದನು. ಆತನು ಇನ್ನು ಸರೋವರದ ಒಂದು ಪಾವಟಿಗೆಯನ್ನು ಇಳಿಯ ತಕ್ಕವನು. ಅಷ್ಟರಲ್ಲಿ ಒಂದು ಮನುಷ್ಯಾಕೃತಿಯು ಆತನಿಗೆ ಕಾಣಿಸಿತು. ಹೆಗ್ಗನು ಎದೆಗಾರನೇನೋ ನಿಜ. ಆದರೆ ಕಗ್ಗತ್ತಲೆಯ ನಿರ್ಜನ ಪ್ರದೇಶದಲ್ಲಿ ಪಕ್ಕನೆ ಮನುಷ್ಯಾಕೃತಿಯು ಕಣ್ಣಿಗೆ ಬಿದ್ದದ್ದರಿಂದ, ಆತನು ಚಕಿತನಾಗಿ ಒಂದು ಹೆಜ್ಜೆ ಹಿಂದಕ್ಕೆ ಸರಿದು ನಿಂತುಕೊಂಡನು. ಅವನ ಮೈ ಜುಮ್ಮೆಂದ ಹಾಗಾಯಿತು. ಭೂತ–ಪ್ರೇತಗಳ ಸುದ್ದಿಗಳನ್ನು ಆತನು ಹೇರಳವಾಗಿ ಕೇಳಿದ್ದನು. ಅವುಗಳ ಅಸ್ತಿತ್ವವು ಶಾಸ್ತ್ರಸಮ್ಮತವಾದದ್ದರಿಂದ, ಅವುಗಳ ವಿಷಯವಾಗಿ ಆತನ ನಂಬಿಗೆಯೂ ಇತ್ತು; ಆದರೆ ಕೆಚ್ಚೆದೆಯ ವೀರರು ಇಂಥ ಭಯವನ್ನು ಸ್ವಾಭಾವಿಕವಾಗಿಯೇ ದುರ್ಲಕ್ಷಿಸುವಂತೆ, ಆತನು ದುರ್ಲಕ್ಷಿಸುತ್ತಿದ್ದನು, ಮಾತ್ರ.

ಹೀಗೆ ಚಕಿತನಾಗಿ ಸರಿದು ನಿಂತ ಹೆಗ್ಗನು ಮನಸ್ಸಿನಲ್ಲಿ– ''ಇಷ್ಟು ರಾತ್ರಿ ಇಲ್ಲಿ ಯಾರು ಕುಳಿತಿರಬಹುದು? ಈ ಪ್ರದೇಶದ ಸಂಬಂಧದಿಂದ ಬಗೆಬಗೆಯ ಭಯಪ್ರದ ಸುದ್ದಿಗಳು ಜನರಲ್ಲಿ ಹಬ್ಬಿರುವವು. ಹೊತ್ತುಮುಳುಗಿದ ಬಳಿಕ ಇಲ್ಲಿ ಒಬ್ಬಿಬ್ಬರು ಇರುವ ಪ್ರಚಾರವಿಲ್ಲೆಂದು ಕೇಳಿದ್ದೇನೆ. ಹೀಗಿದ್ದು, ಇಲ್ಲಿ ನಿರ್ಭಯದಿಂದ ಯಾರೋ ಕುಳಿತಿರುವದು ಆಶ್ಚರ್ಯವಲ್ಲವೆ? ನೋಡೋಣ, ಯಾರು ಕುಳಿತಿರುವರೆಂಬದನ್ನು ಇನ್ನಿಷ್ಟು ಮುಂದಕ್ಕೆ ಹೋಗಿ ನೋಡೋಣ ಎಂದು ಅಂದುಕೊಂಡು, ನಮ್ಮ ಧೀರ ಹೆಗ್ಗನು ಮೆಲ್ಲನೆ ಮುಂದಕ್ಕೆ ಸಾಗಿಹೋದನು. ಅತ್ತ ಸರೋವರದಲ್ಲಿ ಕುಳಿತಿದ್ದ ವ್ಯಕ್ತಿಗೆ ಯಾವ ಸುದ್ದಿಯೂ ಗೊತ್ತಾದಂತೆ ತೋರಲಿಲ್ಲ. ಅದು ನಿಶ್ಚಲವಾಗಿ ಕುಳಿತು ಬಿಟ್ಟಿತ್ತು. ಅಂಥ ಕಟಗುಟ್ಟುವ ಚಳಿಯಲ್ಲಿ ಅದು ನೀರೊಳಗೆ ಕಾಲು ಇಳಿ ಬಿಟ್ಟು, ಕುಳಿತದ್ದನ್ನು ನೋಡಿದರೆ, ಅದಕ್ಕೆ ತನ್ನ ದೇಹದ ಪರಿವೆಯಿದ್ದಂತೆ ತೋರಲಿಲ್ಲ. ಕಗ್ಗತ್ತಲೆ ಯಲ್ಲಿ ಹೆಗ್ಗನಿಗೆ ಆ ವ್ಯಕ್ತಿಯ ಆಕೃತಿಯು ಸ್ಪಷ್ಟವಾಗಿ ಕಾಣಲೊಲ್ಲದು. ಗಂಡಸೆಂಬದೂ

ತಿಳಿಯಲೊಲ್ಲದು; ಹೆಂಗಸೆಂಬದೂ ತಿಳಿಯಲೊಲ್ಲದು. ಅದರಿಂದ ಹೆಗ್ಗನ ಉತ್ಸುಕತೆಯು ಮತ್ತಿಷ್ಟು ಹೆಚ್ಚಿತು. ಆತನು ಒರೆಯಿಂದ ಖಡ್ಗವನ್ನು ಹಿರಿದು, ಮೆಲ್ಲನೆ ಒಂದೊಂದೇ ಹೆಜ್ಜೆಯಿಡುತ್ತ ಸಪ್ಪಳವಾಗದಂತೆ ಪಾವಟಿಗೆಗಳನ್ನು ಇಳಿಯ ಹತ್ತಿದನು; ತನ್ನ ಸುಳುವು ಹತ್ತಬಾರದೆಂದು ಆತನು ಗಟ್ಟಿಯಾಗಿ ಉಸಲು ಸಹ ಬಿಡದಾಗಿದ್ದನು. ಆತನು ಆ ವ್ಯಕ್ತಿಯ ಸನಿಯಕ್ಕೆ ಹೋದಕೂಡಲೆ, ತನ್ನ ಖಡ್ಗ ಮೊದಲಾದವನ್ನು ಸಾವರಿಸಿ ಹಿಡಿದುಕೊಂಡು ಮೆಲ್ಲಗೆ ಕುಳಿತು ಸಾವಕಾಶ ಸರಿಯ ಹತ್ತಿದನು. ಸನಿಯಕ್ಕೆ ಹೋದಹೋದಂತೆ ಆ ವ್ಯಕ್ತಿಯು ಸ್ತ್ರೀಯೆಂಬುದು ಸ್ಪಷ್ಟವಾಗಿ ಕಾಣಿಸಹತ್ತಿತು. ಆಗ ಹೆಗ್ಗನಿಗಾದ ಆಶ್ಚರ್ಯವನ್ನು ವರ್ಣಿಸಲಾಸಲ್ಲ. ಇಲ್ಲಿ ಸ್ತ್ರೀಯು ಹೀಗೆ ನಿರ್ಭಯದಿಂದ ಚಳಿಯ ಪರಿವೆಯಿಲ್ಲದೆ ನೀರಲ್ಲಿ ಕಾಲು ಇಳಿಬಿಟ್ಟು ಕುಳಿತುಕೊಳ್ಳುವದು ಅಸಂಭವವಾದ್ದರಿಂದ, ಇದು ಪಿಶಾಚವಿರಬಹುದೆಂದು ಹೆಗ್ಗನು ತರ್ಕಿಸಿದನು. ಆ ಪಿಶಾಚವು ಮಾತಾಡುವದಂತು ಇರಲಿ, ಮಿಸುಕುತ್ತಿದ್ದಿಲ್ಲ ಸಹ! ಹೆಗ್ಗನು ಮಹಾ ಧೈರ್ಯಶಾಲಿಯು. ಮತ್ತಿಷ್ಟು ಮುಂದಕ್ಕೆ ಸರಿದನು. ಅವನಿಗೂ ಆ ಸ್ತ್ರೀಗೂ ಒಂದು ಮಾರುಗೈ ಅಂತರವಿರಬಹುದು. ಅಲ್ಲಿ ಹೆಗ್ಗನು ಪ್ರಶಸ್ತವಾಗಿ ಕುಳಿತುಬಿಟ್ಟು ಆ ಸ್ತ್ರೀಯನ್ನು ದಿಟ್ಟಿಸಿನೋಡ ಹತ್ತಿದನು.

ಕಗ್ಗತ್ತಲೆಯ ರಾತ್ರಿಯಾಗಿದ್ದರೂ, ಆಕಾಶವೂ ನಿರಭ್ರವಾದದ್ದರಿಂದ ನಕ್ಷತ್ರಗಳ ಮಂದಪ್ರಕಾಶದಲ್ಲಿ ಆ ಸ್ತ್ರೀಯರೂಪವು ಚೆನ್ನಾಗಿ ಕಾಣಿಸಹತ್ತಿತು. ಆಕೆಯು ಅತ್ಯಂತ ತರುಣಿಯಾಗಿದ್ದು ಸೌಂದರ್ಯಶಾಲಿನಿಯಾಗಿದ್ದಳು. ಆಕೆಯ ಉಟ್ಟ ಸೀರೆಯಮೇಲಿಂದಲೂ, ಆಕೆಯ ಉಡಿಗೆ-ತೊಡಿಗೆಯ ಮೇಲಿಂದಲೂ ಆಕೆಯ ಬ್ರಾಹ್ಮಣ ಸ್ತ್ರೀಯಲ್ಲೆಂಬದು ಗೊತ್ತಾಗುತ್ತಿತ್ತು. ಆಕೆಯ ಸೆರಗನ್ನು ಹೇಗಾದರೂ ಒಗೆದುಕೊಂಡದ್ದರಿಂದ, ಆಕೆಯ ಸ್ವರೂಪಾವ ಲೋಕನಕ್ಕಾಗಿ ಪಾಪಭೀರುವಾದ ಹೆಗ್ಗನಿಗೆ ಸಂಕೋಚವಾಗತೊಡಗಿತು. ಆದರೂ ವಿಕಾರ ರಹಿತನಾದ ಆ ವೀರನು, ಕೇವಲ ಸ್ವರೂಪಜ್ಞಾನದ ದೃಷ್ಟಿಯಿಂದ ಆ ಸ್ತ್ರೀಯನ್ನು ಪರೀಕ್ಷಿಸಿ ಪರೀಕ್ಷಿಸಿ ನೋಡತೊಡಗಿದನು. ಆ ಸ್ತ್ರೀಯ ವರ್ಣವು ಗೌರ, ಮೈಕಟ್ಟು ಬಿಗುವಿನದು, ನಿಲುವಿಕೆ ಗಿಡ್ಡತರ, ಆಕೆಯು ಹೆಳಲು ಬಿಚ್ಚಿ ಕೂದಲುಗಳನ್ನು ಬೆನ್ನಮೇಲೆ ಚೆಲ್ಲಿಕೊಟ್ಟುಬಿಟ್ಟಿದ್ದಳು. ಆಕೆಯ ಬಲಗೈಯಲ್ಲಿ ಒಂದು ಕಠಾರಿಯಿತ್ತು. ಆಕೆಯು ತನ್ನ ಕಠಾರಿಯನ್ನು ಒಮ್ಮೆ ಸರೋವರದ ಪಾವಟಿಗೆಯ ಮೇಲೆ ಇಡುವಳು, ಒಮ್ಮೆ ಕೈಯಲ್ಲಿ ತಕ್ಕೊಳ್ಳುವಳು. ಇದನ್ನೆಲ್ಲ ಹೆಗ್ಗನು ಬೆರಗಾಗಿ ನೋಡುತ್ತಿರಲು, ಆ ಸ್ತ್ರೀಯು ಬಿಕ್ಕಿ ಬಿಕ್ಕಿ ಅಳಹತ್ತಿದಳು. ಬರಬರುತ್ತ ಆಕೆಯು ದೊಡ್ಡದನಿ ತೆಗೆದು ಅಳತೊಡಗಿದಳು. ಆಕೆಯ ಅಳೋಣವು ಪರ್ವತಗಳಲ್ಲಿ ಪ್ರತಿಧ್ವನಿಗೊಂಡು, ಆ ನಿಶ್ಯಬ್ದವಾದ ಅರಣ್ಯವನ್ನು ತುಂಬಿಬಿಟ್ಟಿತು. ಮತ್ತೊಬ್ಬ ಅಳ್ಳೆದೆಯವನಾಗಿದ್ದರೆ ಆಗ ಅಂಜಿ ನೆತ್ತಿಯಿಂದ ಜೀವಬಿಡುವದೇ ಸರಿ! ಹೆಗ್ಗನಂಥ ವೀರನ ಕಲ್ಲೆದೆಯೂ ಕಂಪಿಸಿತೆಂದಬಳಿಕ, ಆ ಭಯಪ್ರದ ಸ್ಥಿತಿಯನ್ನು ವರ್ಣಿಸುವದು ಹೇಗೆ? ಹೀಗೆ ಆ ಸ್ತ್ರೀಯು ಬಹಳ ಹೊತ್ತು ಒಂದೇಸವನೆ ಅತ್ತಳು. ಅಳುತ್ತಳುತ್ತ ಒಮ್ಮೆಲೆ ಆಕೆಯ ನಗೆಗೆ ಆರಂಭವಾಯಿತು. ಆಗಂತೂ ಹೆಗ್ಗನಿಗೆ ಬಹಳ ಅಂಜಿಕೆ ಬಂದಿತು. ಈಕೆಯು ಮನುಷ್ಯಳಲ್ಲವೆಂದು ಆತನು ನಿಶ್ಚಯಿಸಿದನು. ಆ ಧೀರನು ತನ್ನ ಖಡ್ಗವನ್ನು ಸಾವರಿಸಿ ಆ ಪಿಶಾಚದ ಸಮಾಚಾರವನ್ನು ತಕ್ಕೊಳ್ಳಬೇಕೆನ್ನುತ್ತಿರಲು, ಅತಿ ಮಂಜುಲವಾದ

ಗಾಯನವು ಆತನ ಕಿವಿಗೆ ಬೀಳತೊಡಗಿತು. ಆಗ ಆತನು ಕೈಯನ್ನು ಹಿಂದಕ್ಕೆ ತಕ್ಕೊಂಡು, ಇಲ್ಲಿ ನಡೆಯುವ ಚಮತ್ಕಾರವನ್ನೆಲ್ಲ ಕಡೆತನಕ ನೋಡಿಯೇ ತೀರಬೇಕೆಂದು ನಿಶ್ಚಯಿಸಿ, ದಿಟ್ಟತನ ದಿಂದ ಆ ಸ್ತ್ರೀಯ ಬೆನ್ನಹಿಂದೆ ನಿಂತುಕೊಂಡನು.

ಆ ಸ್ತ್ರೀಯು ಕೆಲಹೊತ್ತು ಗಾಯನಮಾಡಿದ ಬಳಿಕ ಎದ್ದು ಕೈಜೋಡಿಸಿ ನಿಂತುಕೊಂಡು ಗಾಂಭೀರ್ಯದಿಂದ– ''ಹಾಯ್ ದುರ್ದೈವವೇ, ನನ್ನನ್ನು ಯಾವ ಮನೆಗೆ ತಂದುಬಿಟ್ಟೆ? ನನ್ನ ಚೆಲುವಿಕೆಯೂ, ಮಂಜುಲ ಗಾನವೂ ನನಗೆ ಮುಳುವಾದವಲ್ಲ! ನಾನೊಬ್ಬ ಸಾಮಾನ್ಯ ಸ್ತ್ರೀಯಾಗಿದ್ದರೆ ಈ ಬವಣೆಯು ನನಗೆ ಯಾಕೆ ಬರುತ್ತಿತ್ತು? ನನ್ನ ಪತಿಯು ಎಷ್ಟು ಕರುಣಾಳುವು, ಎಂಥ ಬಲಶಾಲಿಯು, ಎಷ್ಟು ಸಾತ್ವಿಕನು! ನನ್ನನ್ನು ಕಂಡರೆ ಎಷ್ಟು ಪಂಚಪ್ರಾಣ ಮಾಡುತ್ತಿದ್ದನಲ್ಲ! ಹಾ! ಕ್ರೂರ ಯವನರಿರಾ, ನನ್ನ ಬಾಳುವೆಗೇಡು ಮಾಡಿದಿರಾ, ನನ್ನ ಶಾಪವು ನಿಮಗೆ ತಟ್ಟದೆ ಹೋದೀತೇ? ಗರತಿಯರ ಮರಗು ನಿಮ್ಮನ್ನು ಮುರಿಯದೆ ಸರ್ವಥಾ ಬಿಡಲಿಕ್ಕಿಲ್ಲ! ಹಾ ! ಶ್ರೀ ಪಂಪಾಪತೇ, ಕೋದಂಡಧಾರಿಯಾದ ಶ್ರೀರಾಮಾ, ಇನ್ನು ನನ್ನ ಗತಿಯೇನು? ನಾಯಿ ಮುಟ್ಟಿದ ಗಡಿಗೆಯಂತೆ ನನ್ನನ್ನು ಜನರು ಅಪವಿತ್ರಳೆಂದು ತಿಳಿಯುವರಲ್ಲ! ನನ್ನಂಥ ಪಾಮರಳ ಪಾಡಾದರೂ ಏನು? ಪ್ರತ್ಯಕ್ಷ ಲೋಕಮಾತೆಯಾದ ಜಾನಕಿಗೆ ರಾವಣ ಗೃಹವಾಸ ಲೋಕಾಪವಾದವು ಬಿಡಲಿಲ್ಲ, ನಾನಂತೂ ನಿಜ ಯವನರಿಂದ ಅಪಹರಿಸಲ್ಪಟ್ಟವಳು. ಜನರು ಹೊರಗೆ ಕಾಣುವದನ್ನಷ್ಟು ನೋಡಬಲ್ಲರು. ಅವರಿಗೆ ಅಂತರಂಗವು ಹೇಗೆ ತಿಳಿಯಬೇಕು? ನಾನು ಅತ್ಯಂತ ಪರಿಶುದ್ಧಳು, ಯವನರಿಗೆ ಮಂಕು ಬೂದಿಯನ್ನು ಹಚ್ಚಿಬಂದಿದ್ದೇನೆ ಎಂಬುದನ್ನು ಜನರೇನು ಬಲ್ಲರು? ಇಲ್ಲದ ಅಪವಾದ ವಿಡುವದರ ಕಡೆಗೇ ಜನರ ಒಲವು ವಿಶೇಷವಾಗಿರುವದು. ಅದರಲ್ಲಿ ನಮ್ಮಂಥ ಹೆಂಗಸರ ವಿಷಯವಿದ್ದರಂತೂ ತೀರಿಯೇಹೋಯಿತು. ಅದೊಂದು ದುರ್ಜನರ ಮನೋರಂಜನದ ವಿಷಯವಾಗಿ ಹೋಗುವದು. (ಬಳಬಳ ಕಣ್ಣೀರುಗಳುದುರುತ್ತಿರಲು, ಸುಮ್ಮನಾಗಿ ಕೆಲಹೊತ್ತಿನ ಮೇಲೆ) ಛೀ ಛೀ! ಇದೆಲ್ಲ ನನ್ನ ಅರಣ್ಯರೋದನವಾಯಿತಲ್ಲ! ಇದನ್ನು ಇಲ್ಲಿ ಯಾರು ಕೇಳ ಬೇಕು? ನನ್ನಿಂದ ಯಾರಿಗೆ ಸುಖವಾಯಿತು? ನಾನು ಇತ್ತ ಕಣ್ಣೀರು ಸುರಿಸುತ್ತ ಕುಳಿತಿರುವೆನು, ಅತ್ತ ನನ್ನ ಗಂಡನು ಮನಸ್ಸಿನಲ್ಲಿ ಸಣ್ಣಾಗಹತ್ತಿರಬಹುದು. ಮುಪ್ಪಿನ ಅತ್ತೆ–ಮಾವಂದಿರು ಹೊಟ್ಟೆಬೇನೆ ಹಚ್ಚಿಕೊಂಡಿರಬಹುದು. ನನ್ನ ಮೇಲಿದ್ದ ಅವರ ಪ್ರೀತಿಯಾದರೂ ಎಷ್ಟದು! ನನ್ನ ಬಾಳು ನಾಯಿಯ ಬಾಳಿಗಿಂತಲೂ ಕಡೆಯಾಯಿತು. ಇನ್ನು ಈ ಜನ್ಮವಿಟ್ಟು ಮಾಡುವದೇನು? ಆತ್ಮಘಾತದ ಹೊರತು ಬೇರೆ ಉಪಾಯವಿಲ್ಲ. ಆದರೆ ಆತ್ಮಘಾತವು ಪಾಪ ವೆಂದು ಕೇಳಿದ್ದೇನೆ. ಆತ್ಮಘಾತಕಿಯನ್ನು ದೇವರು ಆದರಿಸಬಹುದೆ?

ಈ ಮೇರೆಗೆ ನುಡಿದು ಉಸುರ್ಗರೆಯುತ್ತ ಆ ತರುಣಿಯು ಮತ್ತೆ ಕುಳಿತುಕೊಂಡಳು. ಆಕೆಯು ತನ್ನ ಬಳಿಯಲ್ಲಿದ್ದ ಕಠಾರಿಯನ್ನು ತಕ್ಕೊಂಡು ಅದನ್ನು ಕುರಿತು – ''ಪರೋಪಕಾರಿ ಯಾದ ತೀಕ್ಷ್ಣ ಶಸ್ತ್ರವೇ, ದುಷ್ಟ ಯವನರ ದವಡೆಯೊಳಗಿಂದ ನನ್ನನ್ನು ಬಿಡಿಸಲಿಕ್ಕೆ ನೀನು ಸಹಾಯ ಮಾಡಿದ್ದರಿಂದ ನೀನು ನನಗೆ ಆಪದ್ಬಂಧುವಾದೆ. ನನ್ನ ಪಾತಿವ್ರತ್ಯದ ರಕ್ಷಣಾವು

ನಿನ್ನ ಪುಣ್ಯದಿಂದಾದದ್ದು ಸಾಮಾನ್ಯ ಲಾಭವಲ್ಲ; ಆದರೆ ದುರ್ದೈವಿಯಾದ ನಾನು ಲೋಕಾಪವಾದದ ಭಯದಿಂದ ನನ್ನ ಪತಿಯ ಬಳಿಗೆ ಹೋಗಲಿಕ್ಕೆ ಬಾರದಾಗಿದೆ. ಅಂದಬಳಿಕ ನಾನು ಇನ್ನು ಯಾರ ಬಳಿಗೆ ಹೋಗಲಿ? ನನ್ನನ್ನು ಯಾರು ಹೊಟ್ಟೆಯಲ್ಲಿ ಹಾಕಿಕೊಂಡಾರು? ''ಗಂಡನಿಗೆ ಸೇರದ್ದು ಗುಂಡ ಕಲ್ಲಿಗೂ ಸೇರದೆ''ಂಬ ಲೋಕೋಕ್ತಿಯಂತೆ, ಗಂಡನಿಗೆ ಬೇಡಾದ ನಾನು ಎಲ್ಲರಿಗೂ ಬೇಡಾಗಲಿಕ್ಕಿಲ್ಲವೇ? ಎಲೈ ತೀಕ್ಷ್ಣ ಕಠಾರಿಯೇ, ನೀನು ನನ್ನ ಹೃದಯವನ್ನು ಪ್ರವೇಶಿಸಿ ಅದರ ನೈರ್ಮಲ್ಯವನ್ನು ಪರೀಕ್ಷಿಸಬಾರದೆ? ಹೃದಯಭೇದನ ವಿದ್ಯೆಯಲ್ಲಿ ನೀನು ಅತ್ಯಂತ ಕುಶಲನಾದ್ದರಿಂದ ಹೇಳುತ್ತೇನೆ. ಅಪದ್ಬಂಧುವೆನಿಸುವ ನಿನಗೆ ನನ್ನ ಹೃದಯವನ್ನು ತೋರಿಸುವದು ಅವಶ್ಯವಾಗಿದೆ. ನಾನೇನು ಆತ್ಮಘಾತ ಮಾಡಿಕೊಳ್ಳುವ ಉದ್ದೇಶದಿಂದ ನಿನ್ನನ್ನು ಹೃದಯದಲ್ಲಿ ಸೇರಿಸಿಕೊಳ್ಳುವದಿಲ್ಲ. ನಿನ್ನ ಆಪ್ತಳೆನಿಸುವ ನಾನು ಪವಿತ್ರಳೆಂಬದು ನಿನ್ನ ಅನುಭವಕ್ಕೆ ಬಂದರೆ, ಯೋಗ್ಯಳಿಗೆ ಸಹಾಯ ಮಾಡಿದ ಸಮಾಧಾನವು ನಿನಗೆ ಆದೀತು'' ಎಂದು ನುಡಿದು ಆ ವೀರ ವನಿತೆಯು ಆವೇಶದಿಂದ ಎದ್ದುನಿಂತು ಕಠಾರಿಯಿಂದ ಹೃದಯವನ್ನು ಇರಿದು ಕೊಳ್ಳುತ್ತಿರಲು, ಹೆಗ್ಗನು ಮುಂದುವರಿದು ತಟ್ಟನೆ ಆಕೆಯ ಕೈಹಿಡಿದು – ಹಾ, ತಡೆ! ತಂಗೀ, ನಿನ್ನ ನಿರ್ಮಲ ಹೃದಯವನ್ನು ಸೂಕ್ಷ್ಮ ದೃಷ್ಟಿಯಿಂದ ಪರೀಕ್ಷಿಸಿ ಮನಗಂಡಿದ್ದ ನಿನ್ನ ಬಂಧುವಾದ ನಾನು, ನಿನ್ನ ಪರಿಶುದ್ಧತೆಯನ್ನು ಪ್ರಸ್ಥಾಪಿಸಲು ಸಿದ್ಧನಿರುವೆನು. ನಿನ್ನಂಥ ಸಾಧ್ವಿಯನ್ನು ನಿರಾಕರಿಸುವ ಪತಿಯು ಅದಾವನಿರುವನು ನೋಡುವೆನು. ತಂಗೀ, ಒಂದು ಪಕ್ಷದಲ್ಲಿ ನಿನ್ನ ಪತಿಯು ನಿನ್ನನ್ನು ನಿರಾಕರಿಸಿದರೆ, ನಿನ್ನ ಬಂಧುವಾದ ನಾನು ನಿನ್ನ ರಕ್ಷಕನಲ್ಲವೆ? ನಿನ್ನಂಥ ಸತ್ವಸ್ಥ ಸಾಧ್ವಿಯರ ಪ್ರಭಾವದಿಂದಲೇ ಕರ್ನಾಟಕ ಭೂಮಾತೆಯ ಉದ್ಧಾರವಾಗಬೇಕಾಗಿರಲು, ನೀನು ದೇಹತ್ಯಾಗ ಮಾಡಬಹುದೆ? ನಾವಿಬ್ಬರೂ ಒಬ್ಬ ಕನ್ನಡತಾಯಿಯ ಮಕ್ಕಳಾದದ್ದರಿಂದ, ಪರಸ್ಪರ ಬಂಧುಗಳಾದೆವು. ತಾಯಿಯನ್ನು ಸೇವಿಸುವದಕ್ಕೆ ಇಬ್ಬರೂ ಬಾಧ್ಯಸ್ಥರಾಗಿರುವೆವು. ಪತಿವ್ರತೆಯರಿಗೆ ಯವನರಿಂದ ಹೇಗೆ ಬಾಧೆ ತಟ್ಟುವದೆಂಬುದು ನಿನ್ನ ಅನುಭವದ ಮಾತಾಗಿರುವದು. ಅಂದಬಳಿಕ ಭಗಿನಿಯರನ್ನು ಯವನರ ಬಾಧೆಯಿಂದ ಮುಕ್ತಮಾಡಲಿಕ್ಕೆ ನೀನು ಯಾಕೆ ಯತ್ನಿಸಬಾರದು? ಹೇಗೂ ನೀನು ಈಗ ದೇಹತ್ಯಾಗಕ್ಕೆ ಮನಸ್ಸು ಮಾಡಿರುವೆ. ಲೋಕಾಪವಾದವೆಂಬ ಕ್ಷುದ್ರ ಕಾರಣದಿಂದ ದೇಹವನ್ನರ್ಪಿಸುವದಕ್ಕಿಂತ, ಲೋಕೋದ್ಧಾರಕ್ಕಾಗಿ ಈಶ್ವರ ಸಾಕ್ಷಿಯಿಂದ ದೇಹವನ್ನರ್ಪಿಸುವದು ಹೆಚ್ಚು ಶ್ರೇಯಸ್ಕರವಲ್ಲವೆ? ಹಾಗೆ ಮಾಡಿದರೆ ಪರಮೇಶ್ವರನಿಗೆ ಪ್ರೀತಿಯಾಗಲಿಕ್ಕಿಲ್ಲವೆ? ಆದ್ದರಿಂದ ಪ್ರಿಯ ಭಗಿನಿ, ಬಿಡು, ಅಭಿಮಾನದಿಂದ ವ್ಯರ್ಥ ಆತ್ಮಘಾತ ಮಾಡಿಕೊಳ್ಳುವ ದುರ್ವಿಚಾರವನ್ನು ಸರ್ವಥಾ ಬಿಟ್ಟುಬಿಡು. ಇನ್ನು ಇಂಥ ಕ್ಷುದ್ರ ವಿಚಾರವನ್ನು ಪುನಃ ಮನಸ್ಸಿನಲ್ಲಿ ತಂದರೆ ನಿನ್ನ ಅಣ್ಣನಾದ ನನ್ನ ಆಣೆ!

ಹೀಗೆ ಆಕಸ್ಮಾತ್ತಾಗಿ ಯಾರೋ ತನ್ನ ಕೈ ಹಿಡಿದದ್ದನ್ನು ನೋಡಿ ಆ ತರುಣಿಯು ಚಿಟ್ಟನೆ ಚೀರಿ ಮೆಟ್ಟಿ ಬಿದ್ದಳು; ಭಯದಿಂದ ಆಕೆಯ ದೇಹದಲ್ಲಿ ಕಂಪವು ಉತ್ಪನ್ನವಾಯಿತು. ಅದರಲ್ಲಿ ಹೇಮಂತ ಋತುವಿನ ಚಳಿಯನ್ನು ಕಚ್ಚಿಕೊಂಡು ಪಂಪಾಸರೋವರದ ಮೇಲಿಂದ ಹಾಯ್ದುಬರುವ ತಂಗಾಳಿಯು ತಗಲಲು, ಆ ಕೋಮಲಾಂಗಿಯು ಗದಗುಟ್ಟಿ ನಡುಗಹತ್ತಿದಳು.

ಈ ಸ್ಥಿತಿಯಲ್ಲಿ ಆಕೆಗೆ ಹೆಗ್ಗನ ಮಾತುಗಳು ಎಷ್ಟರಮಟ್ಟಿಗೆ ಕೇಳಿದವೆಂಬದನ್ನು ಹೇಳಲಾಗುವುದಿಲ್ಲ. ಮೊದಲೇ ಸ್ತ್ರೀಜಾತಿಯ ಸ್ವಾಭಾವಿಕವಾದ ಪುಕ್ಕತನ ಆ ಪುಕ್ಕತನವನ್ನು ಹೆಚ್ಚಿಸುವಂಥ ಅರಣ್ಯ ಮಧ್ಯದ ಕಗ್ಗತ್ತಲೆಯ ರಾತ್ರಿಯಲ್ಲಿ ಅನ್ಯರು ಕೈ ಹಿಡಿದಬಳಿಕ ಕೇಳುವದೇನು? ಆ ತರುಣಿಯು ಪಿಶಾಚವೇ ತನ್ನ ಕೈ ಹಿಡಿಯಿತೆಂದು ತಿಳಿದು ಅಂಜಿಕೆಯಿಂದ ಮೈ ಮರೆತು ಕಡಕೊಂಡು ಬೀಳುತ್ತಿದ್ದು; ಅಷ್ಟರಲ್ಲಿ ಹೆಗ್ಗನು ಆಕೆಯನ್ನು ಹಿಡಿದು ಮೆಲ್ಲಗೆ ಸರೋವರದ ಪಾವಟಿಗೆಯ ಮೇಲೆ ಮಲಗಿಸಿದನು. ಸ್ತ್ರೀಯರು ಪುಕ್ಕರಾದರೂ ಪ್ರಸಂಗವಶಾತ್ ಅತಿಸಾಹಸದ ಕಾರ್ಯಕ್ಕೆ ಆವೇಶದಿಂದ ಕೈ ಹಾಕುವರೆಂಬದು ನಿಜವು; ಆದರೆ ಅವರ ಆ ಕ್ಷಣಿಕಾವೇಶವನ್ನು ಅಳಿಸುವಂಥ ಪ್ರಸಂಗವು ಒದಗಿದರೆ, ಅವರ ಸ್ವಾಭಾವಿಕವಾದ ಪುಕ್ಕತನವು ತಟ್ಟನೆ ಅವರ ಮುಂದೆ ಬಂದು ನಿಲ್ಲುವದು. ನಮ್ಮ ತರುಣೀಮಣಿಯ ಗತಿಯು ಹೀಗೆಯೇ ಆಯಿತು. ಯಾವದೋ ಒಂದು ದುಸ್ಸಹವಾದ ಮನೋವ್ಯಥೆಯಿಂದ ಆಕೆಯು ಜೀವದ ಹಂಗುದೊರೆದು ದೇಹತ್ಯಾಗ ಮಾಡಬೇಕೆಂದು ಪಂಪಾಸರೋವರಕ್ಕೆ ನಿರ್ಭಯದಿಂದ ಬಂದಿದ್ದಳು. ಆದರೆ ಹೆಗ್ಗನ ಪ್ರತಿಬಂಧದಿಂದ ಆಕೆಗೆ ತನ್ನ ಪ್ರಾಣತ್ಯಾಗದ ಉದ್ದೇಶದ ವಿಸ್ಮರಣವಾಗಲು, ಆಕೆಯನ್ನು ಪ್ರಾಣಿಮಾತ್ರಗಳಿಗೆ ಸ್ವಾಭಾವಿಕವಾಗಿರುವ ಮರಣಭಯವು ಆವರಿಸಿತು! ಆಗ ಹೆಗ್ಗನು ಗಾಬರಿಯಾಗಿ ಗದಗುಟ್ಟಿ ನಡುಗುವ ಸುಂದರಿಗೆ ಕನಿಕರದಿಂದ ತನ್ನ ಸೆಲ್ಲೆಯನ್ನು ಹೊಚ್ಚಿದನು. ಹೆಗ್ಗನು ಅತ್ಯಂತ ಪಾಪಭೀರುವು; ಪರನಾರಿ ಸೋದರನು. ಮೈಮರೆತು ಮಲಗಿದ್ದ ಪರಸ್ತ್ರೀಯರ ಅಂಗಸ್ಪರ್ಶ ಮಾಡಲಿಕ್ಕೂ ಆತನ ಮನಸ್ಸು ಹಿಂಜರಿಯಹತ್ತಿತು! ತನ್ನಿಂದ ಇದೊಂದು ಅಚಾತುರ್ಯದ ಕಾರ್ಯವು ಘಟಿಸಿದ್ದರಿಂದ, ನಾನೆಲ್ಲಿ ಸ್ತ್ರೀಹತ್ಯದ ಪಾತಕಕ್ಕೆ ಗುರಿಯಾಗುವೆನೋ ಎಂದು ಆತನು ಅಂಜತೊಡಗಿದನು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಆತನ ಆ ಅಂಜಿಕೆಯು ದೂರವಾಯಿತು. ಆ ತರುಣಿಯ ನಡುಗು ನಿಂತು ಆಕೆಯು ಮೈ ಒಡ್ಡುಮುರಿಯುತ್ತ ಸೆಲ್ಲೆಯ ಮುಸುಕು ತೆಗೆದು ಎದ್ದುಕುಳಿತಳು; ಆದರೆ ಹೆಗನು ಬಳಿಯಲ್ಲಿಯೇ ಕುಳಿತದ್ದನ್ನು ನೋಡಿ. ''ಅವ್ವಯ್ಯಾ! ಪಿಶಾಚವು ಇನ್ನೂ ನನ್ನ ಬೆನ್ನು ಬಿಡಲೊಲ್ಲದೆ? ಎಂದು ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡು ಮತ್ತೆ ಪಾವಟಿಗೆಯ ಮೇಲೆ ಒರಗಿದಳು.

ಈ ಪ್ರಸಂಗದಲ್ಲಿ ಹೆಗ್ಗನು ಮಾತಾಡುವ ಅವಸರ ಮಾಡಲಿಲ್ಲ. ಆತನು ಆ ಸ್ತ್ರೀಯ ಭಯವು ತಾನಾಗಿ ಕಡಿಮೆಯಾಗಲೆಂದು ಸುಮ್ಮನೆ ಕುಳಿತುಕೊಂಡನು; ಆದರೆ ತಾನು ಪಿಶಾಚವಲ್ಲೆಂಬದನ್ನು ತರುಣಿಯು ಅರಿತುಕೊಳ್ಳಲೆಂದು ತಿಳಿದು ಸ್ವಲ್ಪ ಹೊತ್ತಿನಮೇಲೆ ಆತನು ಉಸುರ್ಗರೆದು, ''ಹಾ! ಪಂಪಾಪತೆ, ಕರ್ನಾಟಕಕ್ಕೆ ಎಂಥ ಪ್ರಸಂಗವು ಒದಗಿತಲ್ಲ! ಎಲ್ಲಿ ನೋಡಿದರೂ ಪತಿವ್ರತೆಯರ ಛಲನ, ವೈದಿಕ ಧರ್ಮದ ವಿಡಂಬನೆ, ಕನ್ನಡಿಗರ ಸ್ವಾತಂತ್ರ್ಯ ನಾಶ ಇವೇ ಕಣ್ಣಿಗೆ ಬೀಳುತ್ತಿರುವುವು! ಪಾಪ! ಸ್ವಲ್ಪ ದಿನಗಳ ಹಿಂದೆ ಕುರುಬರ ಮಾಳಪ್ಪನ ಸೊಸೆಯನ್ನು ಯವನರು ಎತ್ತಿಕೊಂಡು ಹೋದರಂತೆ! ಮೊನ್ನೆ ಮೊನ್ನೆ ಪ್ರತ್ಯಕ್ಷ ದೇವರಾಯನ ಮಗಳ ಮೇಣೆಯನ್ನು ಮೋಸದಿಂದ ಯವನರು ಸಾಗಿಸಿಕೊಂಡು ಹೋಗುತ್ತಿದ್ದರು; ಆದರೆ ಮಾಳಪ್ಪನ ಮಗ ಮಲ್ಲಪ್ಪನು ಅತಿ ಸಾಹಸಮಾಡಿದ್ದರಿಂದ ಆ ರಾಜಪುತ್ರಿಯು ಯವನರ

ಕೈಯೊಳಗಿಂದ ಪಾರಾಗಿ ತಂದೆಯ ಬಳಿಗೆ ಹೋದಳು. ಹೀಗೆಯೇ ಯವನರ ಕಾಟ ಹೆಚ್ಚುತ್ತ ಹೋದರೆ ನಮ್ಮ ಗತಿಯೇನು? ಇದನ್ನು ಕೇಳುವವರು ಯಾರೂ ಇಲ್ಲವೆ? ನಮ್ಮ ಅಕ್ಕ–ತಂಗಿಯರೂ, ಹೆಂಡಿರು–ಮಕ್ಕಳೂ ಹೀಗೆ ಕೆರೆ–ಬಾವಿಗಳ ಪಾಲಾಗುವದನ್ನು ನೋಡುತ್ತ ಕಣ್ಣೀರು ಸುರಿಸುತ್ತ ನಾವು ಕುಳಿತುಕೊಳ್ಳೋಣವೆ? ಹೇಡಿಗಳಿಗೆ ಕಣ್ಣೀರು ಸುರಿಸುವದಕ್ಕಿಂತ ಹೆಚ್ಚಿನ ಪ್ರಶಸ್ತವಾದ ಉಪಾಯವು ಬೇರೆ ಯಾವದಿರುವದು?'' ಎಂದು ನುಡಿದು, ಆತನು ಮತ್ತೆ ಉಸುರ್ಗಳೆದು ಸುಮ್ಮನಾದನು. ಹೆಗ್ಗನ ಈ ಮಾತುಗಳನ್ನು ಕೇಳಿ ಆ ತರುಣಿಯು ಪೂರಾ ಎಚ್ಚೆತ್ತಳು. ಹೆಗ್ಗನ ಮಾತು ಕೇಳಿ ಆಕೆಗೆ ಹೇಗೆಹೇಗೋ ಆಗಿ, ತಾನು ಮೂರ್ಛೆಹೋಗುವಾಗ ಹೆಗ್ಗನು ಆಡಿದ ಮಾತುಗಳು ಕನಸಿನ ಮಾತುಗಳಂತೆ ಒಂದೊಂದೇ ಈಗ ಆಕೆಯ ನೆನಪಿಗೆ ಬರತೊಡಗಿದವು. ಆ ತರುಣಿಯು ಕೆಲವು ಹೊತ್ತು ತನ್ನೊಳಗೆ ಆಲೋಚಿಸುತ್ತ ಮಲಗಿ ಕೊಂಡಿದ್ದಳು. ತನ್ನ ಕೈ ಹಿಡಿದದ್ದು ಪಿಶಾಚವೆಂಬ ಆಕೆಯ ಕಲ್ಪನೆಯು ಪೂರಾ ದೂರವಾಗಿ, ಆಕೆಯ ಅಂಜಿಕೆಯೂ ಸಂಪೂರ್ಣವಾಗಿ ಅಳಿದುಹೋಯಿತು. ತನ್ನ ಕೈಹಿಡಿದ ಪುಣ್ಯವಂತನ ವಿಷಯವಾಗಿ ಆಕೆಯಲ್ಲಿ ಪೂಜ್ಯಬುದ್ಧಿಯು ಉತ್ಪನ್ನವಾಯಿತು. ಆತನು ತನ್ನನ್ನು ಕುರಿತು ಆಗಾಗ್ಗೆ ''ತಂಗೀ'' ಎಂದು ಕರೆದದ್ದು ಈ ಮೊದಲೆ ಆಕೆಯ ನೆನಪಿಗೆ ಬಂದಿತು. ಹೀಗೆ ಆಪದ್ಬಂಧುವಾಗಿ ತನ್ನನ್ನು ಬದುಕಿಸಬಂದ ಪುಣ್ಯಾತ್ಮನ ವಿಷಯವಾಗಿ ತಾನು ಇಲ್ಲದ ಸಂಶಯಕ್ಕೆ ಗುರಿಯಾಗುವದು ಯೋಗ್ಯವಲ್ಲೆಂದು ತಿಳಿದು, ತನ್ನ ಪ್ರಾಣರಕ್ಷಕನೊಡನೆ ಮಾತಾಡುವ ನೆವವನ್ನು ಆಕೆಯು ಹುಡುಕಹತ್ತಿದಳು. ಅಷ್ಟರಲ್ಲಿ ಹೆಗ್ಗನು ಕಡುವುಮತೆಯಿಂದ ಬಹುಮಾನಪೂರ್ವಕವಾಗಿ– ''ತಂಗೀ, ಏಳಮ್ಮಾ! ಇಲ್ಲದ ಆಲೋಚನೆಗಳನ್ನು ಮಾಡಬೇಡ. ನಿನ್ನಂಥ ತೇಜಸ್ವಿನಿಯು ಸ್ವದೇಶೋದ್ಧಾರದ ಕಾರ್ಯದಲ್ಲಿ ಸವಿಯಬೇಕಲ್ಲದೆ, ಕೈಲಾಗದ ಹೇಡಿಗಳಂತೆ ಆತ್ಮಹತ್ಯೆ ಮಾಡಿಕೊಳ್ಳುವದು ಸರಿಯಲ್ಲ, ಇದು ದೇವರ ಮನಸ್ಸಿಗೆ ಬಾರದ್ದರಿಂದಲೇ ಆತನು ನನ್ನನ್ನು ಇಲ್ಲಿಗೆ ಬರಮಾಡಿರುವನೆಂದು ತಿಳಿದುಕೊಳ್ಳು! ಹೇಗೂ ನೀನು ಜೀವದ ಆಶೆಯನ್ನು ಬಿಟ್ಟಿರುವೆ, ಹೀಗೆ ದುಸ್ಸಹ ಶೋಕಕ್ಕಾಗಿ ಆತ್ಮವನ್ನು ಅರ್ಪಿಸುವದು ಪಾಪಕರವಾಗಿರುವದು. ಇದಕ್ಕೆ ದುರ್ಮರಣವೆಂಬ ಸಂಜ್ಞೆಯು; ಆದರೆ ಪರಹಿತದ ದೃಷ್ಟಿಯಿಂದ ಒಂದು ಪಕ್ಷದಲ್ಲಿ ದುರ್ಮರಣವಾದರೂ ಅದು ತಾರಕವೇ ಆಗುವದು. ಇಂಥ ಪುಣ್ಯಾತ್ಮರಿಗೆ ಆತ್ಮಹತ್ಯದ ದೋಷವು ತಟ್ಟದು. ಪರಹಿತೇಚ್ಛೆಯು ಈಶ್ವರೇಚ್ಛೆಯಾದದ್ದರಿಂದ, ಈಶ್ವರೇಚ್ಛೆಯಿಂದ ವಿಷವು ಅಮೃತವಾಗುವಂತೆ ಪರಹಿತಕ್ಕಾಗಿ ಆದ ಆತ್ಮನಿವೇದನವು ಅಮೃತಪ್ರಾಯವಾಗಿ ತಾರಕವಾಗುವದು. ತಂಗೀ, ಒಬ್ಬ ತತ್ವದರ್ಶಿಯಾದ ಸತ್ಪುರುಷನು ಮಾಡಿದ ಉಪದೇಶವನ್ನು ನಾನು ನಿನಗೆ ಮಾಡಿರುವೆನು. ಇನ್ನು ನೀನು ಪರಹಿತಕ್ಕೋಸ್ಕರ ಮನಃಪೂರ್ವಕವಾಗಿ ಯತ್ನಿಸತಕ್ಕದ್ದು. ಏಳು, ಮನಸ್ಸಿನ ದೌರ್ಬಲ್ಯವನ್ನು ಬಿಟ್ಟು ಪೌರುಷಶಾಲಿಯಾಗು. ಈಗ ಪುರುಷರಷ್ಟೇ ಪೌರುಷ ತೋರಿಸಿದರೆ ಆಗುವಹಾಗಿಲ್ಲ, ಸ್ತ್ರೀಯರೂ ಪೌರುಷ ತೋರಿಸಬೇಕಾಗಿದೆ. ಒಬ್ಬ ಸ್ತ್ರೀಯ ಪೌರುಷವು ನೂರು ಜನ ಪುರುಷರಿಗೆ ಪೌರುಷ ಪ್ರದಾನ ಮಾಡೀತು!'' ಎಂದು ನುಡಿಯಲು, ಆ ತರುಣಿಗೆ ಅಷ್ಟೇ ಸಾಕಾಗಿ ಆಕೆಯು ಮೇಲಕ್ಕೆದ್ದು ಮರ್ಯಾದೆಯಿಂದ ನಿಂತುಕೊಂಡು ಅಣ್ಣನನ್ನು ದಿಟ್ಟಿಸಿನೋಡತೊಡಗಿದಳು.

# ತೋಬಾ ! ತೋಬಾ !

ಹಾಗೆ ನೋಡುವಾಗ ಆ ತರುಣಿಯ ದೃಷ್ಟಿಯಲ್ಲಿ ವಿಲಕ್ಷಣವಾದ ತೇಜಸ್ವಿತೆಯು ಪ್ರಕಟವಾಗಿತ್ತು, ತನ್ನ ಕೈಯನ್ನು ಹಿಡಿದು ನಿಲ್ಲಿಸಿ, ಪರಹಿತಕ್ಕಾಗಿ ಟೊಂಕಕಟ್ಟಲು ತನ್ನನ್ನು ಬೋಧಿಸುವ ಮಹಾಪುರಷನಿವನು ಯಾರೆಂಬದನ್ನು ತಿಳಿದುಕೊಳ್ಳುವದಕ್ಕಾಗಿ, ಆಕೆಯು ಎವೆಯಿಕ್ಕದೆ ಹೆಗ್ಗನನ್ನು ನೋಡತೊಡಗಿದ್ದಳು! ತನ್ನಂಥ ತರುಣಿಯು ಹೀಗೆ ನಿರ್ಲಜ್ಜೆಯಿಂದ ಪರಪುರುಷರನ್ನು ನೋಡುವದು ಯುಕ್ತವಲ್ಲವೆಂಬ ಅರಿವು ಸಹ ಆಕೆಗೆ ಇದ್ದಂತೆ ತೋರಲಿಲ್ಲ; ಅಥವಾ ನಿರ್ಮಲಾಂತಃಕರಣದ ತರುಣಿಯರಿಗೆ ದಿಟ್ಟತನವನ್ನು ತೋರಿಸುವ ಪ್ರಸಂಗವು ಒದಗಿದಾಗ, ಅವರನ್ನು ಕ್ಷುದ್ರ ಲಜ್ಜೆಯಾದರೂ ಯಾಕೆ ಸೋಂಕುವದು? ಹೀಗೆ ಆ ತರುಣಿಯು ತನ್ನನ್ನು ನೋಡಹತ್ತಿದ ಕೂಡಲೆ ಸುಜನನಾದ ನಮ್ಮ ಹೆಗ್ಗಣ್ಣನು ತಲೆ ತಗ್ಗಿಸಿ ಭೂಮಿಯನ್ನು ನೋಡಹತ್ತಿದನು. ಆಗ ಅದೇ ಸೂರ್ಯೋದಯವಾಗುತ್ತಿದ್ದದ್ದರಿಂದ, ಮೂಡಲು ಕೆಂಪು ಹರಿದು ಚುಮುಚುಮು ಬೆಳಗಾಗುತ್ತಲಿತ್ತು, ಉದಯ ಹೊಂದುವ ದಿನಮಣಿಯ ಸ್ವಾಗತವನ್ನು ಮಂಗಲಗಾನದಿಂದ ಮಾಡುತ್ತಿರುವಂತೆ, ವಿವಿಧ ಪಕ್ಷಿಗಣವು ಕಿಲಿಬಿಲಿ ಧ್ವನಿಮಾಡುತ್ತ ಗೂಡುಗಳಿಂದ ಹೊರಬಿದ್ದು ಆಕಾಶದಲ್ಲಿ ಉಡ್ಡಾಣ ಮಾಡುತ್ತಿತ್ತು, ಅರಳಿದ ವಿವಿಧ ವನಪುಷ್ಪಗಳ ಮಕರಂದ ಸೇವನಕ್ಕಾಗಿ ಭ್ರಮರಗಳು ಝೇಂಕರಿಸುತ್ತ ಹೂವಿನಿಂದ ಹೂವಿಗೆ ಅಂಡಲೆ ಯುತ್ತಿದ್ದವು. ಆಗ ಪುಷ್ಪಪರಾಗಗಳ ಲೇಪನದಿಂದ ಅವುಗಳ ದೇಹಗಳು ಧೂಲಿದೂಸರ ವಾದಂತಾಗಿರಲು, ಅವಕ್ಕೆ ಒಂದು ಬಗೆಯ ಶೋಭೆಯುಂಟಾಗಿತ್ತು, ನಾಲ್ಕೂ ಕಡೆಯಲ್ಲಿ ಘಮಘಮಿಸುವ ಚಳಿಗಾಲದ ವನಪುಷ್ಪಗಳ ಸುಗಂಧವು ಬಳಿಯ ಸರೋವರದೊಳಗೆ ಅಲ್ಲಲ್ಲಿ ಅರಳಿ ಕುಲು ಕುಲು ನಗುತ್ತ ನಲಿದಾಡುವಂತೆ ತೋರುವ ಕುಮುದ ಪುಷ್ಪಗಳೂ, ಪಕ್ಕ ಕೊಡುವುತ್ತ ಹೊರಬಿದ್ದು ಕೇಕೆಹಾಕುವ ನವಿಲುಗಳ ಕೇಕೆಗಳೂ ಮನುಷ್ಯ ಮಾತ್ರರ ಅಂತಃಕರಣವನ್ನು ಸ್ವಾಭಾವಿಕವಾಗಿಯೇ ಸುಪ್ರಸನ್ನವಾಗಿ ಮಾಡಬಹುದಾಗಿತ್ತು; ಆದರೆ, ಕಾರಣಾಂತರದಿಂದ ವ್ಯಗ್ರ ಚಿತ್ತರಾಗಿದ್ದ ನಮ್ಮ ಹೆಗ್ಗನಿಗೂ, ಅಪರಿಚಿತ ತರುಣಿಗೂ ಅವುಗಳ ಸುದ್ದಿ ಸಹ ಹತ್ತಿರಲಿಕ್ಕಿಲ್ಲ; ಅವರು ತಮ್ಮ ತಮ್ಮ ವಿಚಾರಗಳಲ್ಲಿ ಮಗ್ನರಾಗಿಹೋಗಿದ್ದರು. ಬೆಳಗಾಗುತ್ತ ಹೋದಂತೆ ಹೆಗ್ಗನ ಗಂಭೀರ ರೂಪವು ಸ್ಪಷ್ಟವಾಗಿ ಕಾಣಹತ್ತಿತು. ಆತನ ವಿಷಯವಾಗಿ ತರುಣಿಯಲ್ಲಿ ಪೂಜ್ಯಭಾವವು ಉತ್ಪನ್ನವಾಯಿತು. ಆ ವೀರ ಪುರುಷನ ಮುಖದಲ್ಲಿ ಉಕ್ಕುತ್ತಿದ್ದ ಸೌಜನ್ಯಯುಕ್ತಗಾಂಭೀರ್ಯ, ತೋಳುಗಳಲ್ಲಿ ತೋರುತ್ತಿದ್ದ ಅಮೋಘ ಬಲ, ಮನಸ್ಸಿನಲ್ಲಿ ಸುಳಿದಾಡಿ ತೇಜಃಪುಂಜ ನೇತ್ರಗಳಿಂದ ಹೊರಬೀಳುತ್ತಿದ್ದ ದೀನವಾತ್ಸಲ್ಯ, ತಲೆಯಲ್ಲಿ ತುಂಬಿ ಸರ್ವಾಂಗದಲ್ಲಿ ತಾಕಲಾಡುತ್ತಿದ್ದ ಪರಹಿತ ಪ್ರವೃತ್ತಿ ಇವುಗಳನ್ನು ನೋಡಿ, ನಮ್ಮ ಕುಶಾಗ್ರಬುದ್ಧಿಯ ತರುಣಿಯು ಕೈಜೋಡಿಸಿ, ಆ ದಿವ್ಯಪುರುಷನನ್ನು ಕುರಿತು— ''ಅಣ್ಣಾ, ಪರೋಪಕಾರ ದೀಕ್ಷಾಗುರುವೇ, ಪುಣ್ಯಪುರುಷನಾದ ನಿನ್ನ ದರ್ಶನದಿಂದ ನಾನು ಧನ್ಯಳಾದೆನು. ಉಷಃಕಾಲದಲ್ಲಿ ನನಗಾದ ನಿನ್ನ ಮಂಗಲ ಮುಖದರ್ಶನವು, ಪ್ರಭಾತದ ಕರದರ್ಶನದಂತೆ ಕಲ್ಯಾಣಪ್ರದವಾಗಿರುವದು. ನಮ್ಮ ಸುತ್ತು

ಕೈತೊಳೆದು ಬೆನ್ನು ಹತ್ತಿರುವ ಯವನರ ಪಾರುಪತ್ಯ ಮಾಡುವುದಕ್ಕಾಗಿ ನೀನು ಕರ್ನಾಟಕದ ಪುಣ್ಯವೇ ಮೂರ್ತಿಗೊಂಡಂತೆ ಅವತರಿಸಿರುತ್ತಿ! ಹಾಗಲ್ಲದಿದ್ದರೆ ನಮ್ಮ ದೇವರಾಯರ ಪುತ್ರಿಯಾದ ಪದ್ಮಿನೀದೇವಿಯರ ವಿಪತ್ತನ್ನು ದೂರಮಾಡಲು ನೀನು ಸಮರ್ಥನಾಗುತ್ತಿದ್ದೆಯಾ? ಮತ್ತು ನಮ್ಮಂಥ ಅಬಲೆಯರ ವಿಪತ್ತನ್ನು ನೋಡಿ ನಿನ್ನ ಹೃದಯವು ದಯಾರ್ದ್ರವಾಗಿ, ದುಷ್ಟ ಶಾಸನಕ್ಕಾಗಿ ನಿನ್ನ ಕೆಳದುಟಿಯು ನಡುಗುತ್ತಿರಲು ನಿನ್ನ ಖಡ್ಗಮುಷ್ಟಿಯು ಸಂಕುಚಿತವಾಗುತ್ತಿತ್ತೇ?

ಈ ಮೇರೆಗೆ ನುಡಿದು ಆ ತರುಣಿಯು ಹೆಗ್ಗಣ್ಣನನ್ನು ಅಭಿನಂದಿಸುತ್ತಿರಲು ದೂರದಲ್ಲಿ ಕುದುರೆಗಳ ಖುರಪುಟ ಧ್ವನಿಯಾಗುತ್ತಿರುವಂತೆ ಆಕೆಗೆ ಕೇಳಿಸಿತು. ಇತ್ತ ಹೆಗ್ಗನಿಗೂ ಅದರ ಸಂಶಯವು ಬರತೊಡಗಿತ್ತು, ಅವರು ಆ ಧ್ವನಿಯು ಕೇಳಬರುತ್ತಿದ್ದ ದಿಕ್ಕಿನ ಕಡೆಗೆ ಕಿವಿಗೊಟ್ಟು ಕೇಳುತ್ತಿರಲು, ಬರಬರುತ್ತ ಆ ಧ್ವನಿಯು ಹೆಚ್ಚು ಹೆಚ್ಚು ಸ್ಪಷ್ಟವಾಗಿ ಕೇಳಹತ್ತಿತು. ಇಷ್ಟು ನಸುಕಿನಲ್ಲಿ ಕುದುರೆಗಳೆತ್ತಣವು? ಎಂದು ಅವರು ವಿಚಾರಮಾಡುತ್ತಲಿದ್ದರು; ಅಷ್ಟರಲ್ಲಿ ಹತ್ತುಜನ ಮುಸಲ್ಮಾನ ಸವಾರರು ವೇಗದಿಂದ ಸಾಗಿಬಂದು ಹೆಗ್ಗನನ್ನೂ, ಆ ತರುಣಿಯನ್ನೂ ಮುತ್ತಿದರು! ಅವರನ್ನು ನೋಡಿದಕೂಡಲೆ ಆ ತರಣಿಯು ಹೌಹಾರಿದಳು. ಹೆಗ್ಗನು ತನ್ನ ಖಡ್ಗವನ್ನು ಸಾವರಿಸಿದನು; ಆದರೆ ಒಬ್ಬನು ಹತ್ತುಜನರಿಗೆ ಈಡಾಗುವ ಪ್ರಸಂಗ ಒದಗಿದ್ದು ಚಿಂತಾಜನಕವೇ ಸರಿ, ರಾವುತರು ಮೊದಲು ಹೆಗ್ಗನಮೇಲೆ ಹರಿಹಾಯ್ದು ಹೋಗುತ್ತಿರಲು, ಅಷ್ಟರಲ್ಲಿ ತರುಣಿಯು– ''ಅಪ್ಪಯ್ಯಾ! ದುಷ್ಟ ಕಾಸಿಮನ ಜನರು'' ಎಂದು ದುಡುಮ್ಮನೇ ಪಂಪಾಸರೋವರದಲ್ಲಿ ಧುಮುಕಿಬಿಟ್ಟಳು! ಅಷ್ಟರಲ್ಲಿ ಆಕೆಯ ಬೆನ್ನಹಿಂದೆಯೇ ಯಾರೋ ಮತ್ತೊಬ್ಬರು ಸರೋವರದಲ್ಲಿ ಧುಮುಕಿದ ಸಪ್ಪಳವು ಕೇಳಿಸಿತು. ಅದನ್ನು ನೋಡಿ ಹೆಗ್ಗನು ತನ್ನ ತಂಗಿಯ ಪ್ರಾಣರಕ್ಷಣಕ್ಕಾಗಿ ಖಡ್ಗವನ್ನು ಚೆಲ್ಲಿಕೊಟ್ಟು ತಾನೂ ಸರೋವರದಲ್ಲಿ ಹಾರಿಕೊಳ್ಳುತ್ತಿರಲು, ಬಲಿಷ್ಠರಾದ ಮುಸಲ್ಮಾನ ರಾವುತರು ಈ ಸಂಧಿಯನ್ನು ಸಾಧಿಸಿ ಅವನನ್ನು ಹಿಡಿದು ಹೆಡಮುರಿಗೆ ಬಿಗಿದರು. ಮುಸಲ್ಮಾನರ ಭಯದಿಂದ ಒಬ್ಬ ತರುಣಿಯು ಆತ್ಮಹತ್ಯೆ ಮಾಡಿ ಕೊಳ್ಳುತ್ತಿರಲು, ಅದನ್ನು ತಪ್ಪಿಸುವದಾಗಲೊಲ್ಲದೆಂದು ಹೆಗ್ಗನಿಗೆ ಬಹಳ ವ್ಯಥೆಯಾಯಿತು. ಆ ವ್ಯಥೆಯಿಂದ ಆ ವೀರನು ಮೂಢನಾಗಿ ಆತ್ಮರಕ್ಷಣಕ್ಕೆ ಸಹ ಹೆಣಗದೆ ತರುಣಿಯ ಗತಿಯೇನಾಯಿತಲ್ಲ ಎಂಬ ವ್ಯಸನದಿಂದ ಸರೋವರದ ಕಡೆಗೆ ದಿಟ್ಟಿಸಿನೋಡುತ್ತ ನಿಂತುಕೊಂಡನು. ಆತನು ಮನಸ್ಸಿನಲ್ಲಿ– ಆ ತರುಣಿಯು ಈಗ ಮೇಲಕ್ಕೇಳಬಹುದಲ್ಲವೇ? ಆಕೆಯೊಡನೆ ಇನ್ನೊಬ್ಬರಾರು ಸರೋವರದಲ್ಲಿ ಧುಮುಕಿರಬಹುದು? ಅವರು ಧುಮುಕುವ ಉದ್ದೇಶವೇನಿರಬಹುದು? ಹಾಯ್ ಹಾಯ್! ನಾನು ಆಕೆಯ ಕಠಾರಿಯನ್ನು ಕಸಿದು ಆಕೆಯ ಆತ್ಮಹತ್ಯವನ್ನು ತಡೆದು ದೇಶೋದ್ಧಾರದ ನೆವದಿಂದ ಆಕೆಯ ಮನಸ್ಸನ್ನು ತಿರುಗಿಸಿದ್ದು ವ್ಯರ್ಥವಾಯಿತಲ್ಲ! ಏನು ಮಾಡಲಿ! ಈ ದುಷ್ಟರು ಪ್ರತಿಬಂಧಿಸದಿದ್ದರೆ ಕ್ಷಣದಲ್ಲಿ ಆಕೆಯನ್ನು ಪಾತಾಳದಿಂದಾದರೂ ಎತ್ತಿಕೊಂಡು ಬರುತ್ತಿದ್ದೆನು. ಈ ದುಷ್ಟರೊಡನೆ ಹೆಣಗುವದರೊಳಗೆ ಆ ಅಬಲೆಯು ನಿಶ್ಚಯವಾಗಿ ಮರಣ ಹೊಂದುವಳು ಎಂದು ಆಲೋಚಿಸುತ್ತ, ಕೈಲಾಗದವನಂತೆ ಯವನರ ಕೈಸೇರಿ ಸರೋವರದ ಕಡೆಗೆ ಎವೆಯಿಕ್ಕದೆ ನೋಡುತ್ತ ನಿಂತುಕೊಂಡನು. ಇತ್ತ ಮುಸಲ್ಮಾನರಾದರೂ ಆ ತರುಣಿಯ ಆಕಸ್ಮಿಕ ಉಡ್ಡಾಣದಿಂದ ಬೆರಗಾಗಿ

ಆಕೆಯ ಗತಿಯೇನಾಗುವದೋ ನೋಡಬೇಕೆಂಬ ಕುತೂಹಲದಿಂದ ಹೆಗ್ಗನನ್ನು ಹಿಡಿದುಕೊಂಡೇ ಆತನೊಡನೆ ತಾವೂ ಸರೋವರದ ಕಡೆಗೆ ನೋಡುತ್ತ ನಿಂತುಕೊಂಡರು.

ತರುಣಿಯು ಸರೋವರದಲ್ಲಿ ಧುಮುಕಿದಕೂಡಲೆ ''ದುಡುಂ'' ಎಂಬ ಸಪ್ಪಳವಾಗಿ ದೊಡ್ಡ ದೊಡ್ಡ ತೆರೆಗಳು ವರ್ತುಲಾಕಾರವಾಗಿ ಎದ್ದು ಸರೋವರದ ಪಾವಟಿಗೆಗಳಿಗೆ ಅಪ್ಪಳಿಸಹತ್ತಿದವು. ಅಷ್ಟರೊಳಗೆ ಮೇಲೆ ಹೇಳಿದಂತೆ ಮತ್ತೊಬ್ಬರು ಧುಮುಕಿ, ಆ ತೆರೆಗಳನ್ನು ಮತ್ತಿಷ್ಟು ಹೆಚ್ಚಿಸಿದರು. ಆ ಹಿಂದುಗಡೆ ಧುಮುಕಿದ ವ್ಯಕ್ತಿಯನ್ನು ಹೆಗ್ಗನೂ ನೋಡಿದ್ದಿಲ್ಲ, ಯವನರೂ ನೋಡಿದ್ದಿಲ್ಲ; ಆದ್ದರಿಂದ ಆ ಮಾತು ಎಲ್ಲರಿಗೂ ಕೌತುಕದ್ದಾಗಿಯೇ ತೋರಿತು. ಎಲ್ಲರೂ ನಿರ್ವ್ಯಾಪಾರರಾಗಿ ಸರೋವರದ ಕಡೆಗೆ ನೋಡುತ್ತ ನಿಂತುಕೊಂಡರು. ಹಿಂದುಗಡೆ ಧುಮುಕಿದವರು ಗಂಡಸೊ ಹೆಂಗಸೊ ಎಂಬದು ಸಹ ಅವರಿಗೆ ತಿಳಿಯಲಿಲ್ಲ. ಹೆಗ್ಗನಿಗಂತೂ ಈ ಮಾತು ಪರಮಾಶ್ಚರ್ಯವಾಗಿ ತೋರಿತು. ತಾನು ಮಧ್ಯರಾತ್ರಿಯಿಂದ ಇಲ್ಲಿ ಇದ್ದು, ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ವ್ಯವಹರಿಸುತ್ತಿರುವಾಗ ಮನುಷ್ಯರ ಸುಳುವು ಕೂಡ ಇಲ್ಲದಿರಲು, ಈಗ ಯಾರು ಹಾರಿಕೊಂಡಿರಬಹುದೆಂದು ಆತನು ಆಲೋಚಿಸತೊಡಗಿದನು. ಆ ಭಯಂಕರವಾದ ಸರೋವರದಲ್ಲಿ ಮೊಸಳೆಗಳು ವಿಪುಲವಾಗಿದ್ದು, ಅವುಗಳಲ್ಲಿ ಯಾವದೊಂದು ಮೊಸಳೆಯು ದಂಡೆಯಲ್ಲಿ ಬಿದ್ದಿರುವಾಗ, ತರುಣಿಯು ಹಾರಿಕೊಂಡ ಸಪ್ಪಳಕ್ಕೆ ಹೆದರಿ, ಅದು ತಾನೂ ಹಾರಿಕೊಂಡಿರಬಹುದೋ, ಎಂದು ಆತನು ಶಂಕಿಸತೊಡಗಿದನು. ಆತನ ಈ ಶಂಕೆಯು ಕೇವಲ ಅಶಕ್ಯವಾದದ್ದಿದ್ದಿಲ್ಲ. ತರುಣಿಯು ಮೊಸಳೆಗಳ ತುತ್ತಾಗುವದೇ ನಿಶ್ಚಯವೆಂದು ಆತನು ಭಾವಿಸಿದನು. ನೀರಲ್ಲಿ ಮುಳಗಿದವರು ಒಮ್ಮೆಯಾದರೂ ಮೇಲಕ್ಕೇಳುವ ವಾಡಿಕೆಯಿರುವದಲ್ಲವೆ? ಅದರಂತೆ ತರುಣಿಯು ಈಗ ಏಳಬಹುದೆಂದು ಅವರೆಲ್ಲರೂ ಆತುರದಿಂದ ನೋಡುತ್ತ ನಿಂತುಕೊಂಡರು. ಹೀಗೆ ಎಲ್ಲರೂ ಕುತೂಹಲಭರಿತರಾದದ್ದರಿಂದ ಅವರ ಶತ್ರು-ಮಿತ್ರಭಾವಗಳ ವಿಸ್ಮೃತಿಯಾಗಿ ಹೋಯಿತು. ತರುಣಿಯು ಯಾವಾಗ ಏಳುವಳೆಂಬ ವಿಚಾರದಲ್ಲಿ ಅವರ ಚಿತ್ತವೃತ್ತಿಗಳು ತಲ್ಲೀನವಾಗಿಹೋದವು. ಹೀಗಿರುವಾಗ ಸರೋವರದ ಮಧ್ಯದಿಂದ ಒಂದು ಭಯಂಕರವಾದ ಮೊಸಳೆಯು ಏಳಲು, ಕೂಡಲೆ ಹೆಗ್ಗನ ಮುಖದಿಂದ – ''ಹಾ! ಹಾ! ಮೊಸಳೆ ಹಾರಿದ್ದೇ ನಿಜವು'' ಎಂಬ ಶಬ್ದಗಳು ಹೊರಟವು. ಮುಸಲ್ಮಾನರು ಬೆರಗಾಗಿ ಮೊಸಳೆಯನ್ನು ನೋಡುತ್ತ ನಿಂತುಕೊಂಡಿದ್ದರು. ಹೀಗೆ ಮೊಸಳೆಯ ಜಲವಿಹಾರವನ್ನು ನೋಡುವಲ್ಲಿ ಸ್ವಲ್ಪ ಕಾಲಹರಣವಾಗುತ್ತಿರಲು, ಸರೋವರದಲ್ಲಿ ಮತ್ತೊಂದು ಆಶ್ಚರ್ಯಕಾರಕ ಪ್ರಸಂಗವು ಕಣ್ಣಿಗೆ ಬಿದ್ದಿತು. ಒಬ್ಬ ದಿವ್ಯಪುರುಷನು ತರುಣಿಯನ್ನು ಹೆಗಲಮೇಲೆ ಹೊತ್ತುಕೊಂಡು ಮೇಲಕ್ಕೆದ್ದು ವೇಗದಿಂದ ಈಸುತ್ತ ಸರೋವರದ ಮಧ್ಯದ ಕಡೆಗೆ ಸಾಗತೊಡಗಿದನು. ಸಮೀಪದಲ್ಲಿದ್ದ ಮೊಸಳೆಯನ್ನು ಆತನು ಲೆಕ್ಕಿಸಲೇ ಇಲ್ಲ. ಈ ಪರಮಾಶ್ಚರ್ಯವನ್ನು ನೋಡಿ ಮುಸಲ್ಮಾನರು ಹೌಹಾರಿ ನಿಂತುಕೊಂಡರು. ಹೆಗ್ಗನ ಮನಸ್ಸಿಗೆ ಸಮಾಧಾನವಾಯಿತು. ತರುಣಿಯ ಪ್ರಾಣರಕ್ಷಣಕ್ಕಾಗಿಯೇ ಈ ಮಹಾತ್ಮನು ಹಾರಿಕೊಂಡಿರುವನೆಂದು ಆತನು ತಿಳಿದುಕೊಂಡನು. ತಾನೂ ಆ ಪುಣ್ಯವಂತನಿಗೆ ನೆರವಾಗುವುದಕ್ಕಾಗಿ ಸರೋವರದಲ್ಲಿ ಧುಮುಕಬೇಕೆಂಬ ಅವನ

ಹವಣಿಕೆಯು ವ್ಯರ್ಥವಾಯಿತು; ಯಾಕಂದರೆ, ಆತನು ಮುಸಲ್ಮಾನರ ಕೈಯಲ್ಲಿ ಪೂರಾ ಸಿಕ್ಕುಹೋಗಿದ್ದನು. ಮಹಾಬಲಶಾಲಿಯಾದ ಆ ದಿವ್ಯಪುರುಷನು ನಿರಾಯಾಸವಾಗಿ ಈಸುತ್ತ ತರುಣಿಯನ್ನು ಹೊತ್ತುಕೊಂಡು ಆಚೆಯ ದಂಡೆಯಕಡೆಗೆ ಸಾಗಿದ್ದನು. ಆತನ ಈಸುವ ವೇಗಕ್ಕೆ ಮುಸಲ್ಮಾನರು ಬೆರಳುಕಚ್ಚಿದರು. ಹೆಗ್ಗನಂತೂ— ''ಶಾಬಾಸ್! ಪುಣ್ಯಪುರುಷಾ, ಧನ್ಯನು ಧನ್ಯನು'' ಎಂದು ಕೂಗಿ, ಆತನನ್ನು ಅಭಿನಂದಿಸಿದನು. ಆತನ ಅಭಿನಂದನ ಧ್ವನಿಯು ಆ ಪುರುಷನ ಕಿವಿಗೆ ಬಿದ್ದಿರಬಹುದು. ಆದ್ದರಿಂದಲೇ ಆತನು ತನ್ನ ಅಭಿನಂದನಕ್ಕಾಗಿ ಕೃತಜ್ಞತೆಯನ್ನು ಪ್ರಕಟಿಸುವಂತೆ ''ಜಯ ಭುವನೇಶ್ವರೀ ಮಾತೆ! ಜಯ ವಿರುಪಾಕ್ಷ!'' ಎಂದು ನಾಮಘೋಷ ಮಾಡಿ ಹಿಂದಿರುಗಿ ನೋಡಿ, ಕೂಡಲೆ ನೀರಲ್ಲಿ ಮುಣುಗಿ ಕಾಣದಾದನು! ಆತನು ಮುಣುಗಿ ದಲ್ಲಿಂದ ದಂಡೆಯು ಬಹಳ ದೂರವಿದ್ದಿಲ್ಲ, ಹತ್ತು ಮಾರುಗೈಯೊಳಗಿತ್ತು. ಹೀಗೆ ಆ ದಿವ್ಯ ಪುರುಷನು ಮುಣುಗುವ ಮೊದಲೇ ಮೊಸಳೆಯು ಸರೋವರದಲ್ಲಿ ಮುಣುಗಿಕೊಂಡಿತ್ತು.

ಆ ದಿವ್ಯಪುರುಷನ ಮೋರೆಯು ದಂಡೆಯಿಂದ ಅತ್ತಕಡೆಗಿದ್ದದ್ದರಿಂದ ದಂಡೆಯ ಮೇಲಿನವರಿಗೆ ಅದು ಸ್ಪಷ್ಟವಾಗಿ ಕಾಣಿಸಲಿಲ್ಲ. ಹೆಗ್ಗನ ಅಭಿನಂದನವನ್ನು ಕೇಳಿ ಒಮ್ಮೆ ಆತನು ತಿರುಗಿನೋಡಿದಾಗ, ಆತನ ತೇಜಃಪುಂಜ ಮುಖವು ಹೆಗ್ಗನ ಕಣ್ಣಿಗೆ ಬಿದ್ದಿತು. ಆಗ ಹೆಗ್ಗನು ತರುಣಿಯ ಸುರಕ್ಷಿತತೆಯ ವಿಷಯವಾಗಿ ನಿಶ್ಚಿಂತನಾಗಿದ್ದನು; ಆದರೆ ಆ ತೇಜಸ್ವಿಯು ಮುಣುಗಿದವನು ತಿರುಗಿ ಮೇಲಕ್ಕೆದ್ದಂತೆಯೇ ತೋರಲಿಲ್ಲ. ಸರೋವರ ತೀರವನ್ನು ಗಿಡಗಳು ಮುಚ್ಚಿ ಮುಸಕುಹಾಕಿದ್ದರಿಂದ, ಆ ಪುರುಷನು ನೀರಲ್ಲಿಯೇ ಈಸುತ್ತ ಹೋಗಿ ಎಲ್ಲಿಯಾದರೂ ಗಿಡಗಳ ಮರೆಯಲ್ಲಿ ದಂಡೆಗೆ ಹತ್ತಿದನೆಂಬದೂ ಗೊತ್ತಾಗಲಿಲ್ಲ; ಅಥವಾ ತರುಣಿಯ ಭಾರದಿಂದ ಕೈಸೋತು ನೀರಲ್ಲಿ ಮುಳುಗಿದನೆಂಬದೂ ಗೊತ್ತಾಗಲಿಲ್ಲ; ಅಥವಾ ಮೊಸಳೆಯಿಂದ ಎಳೆಯಲ್ಪಟ್ಟನೆಂಬದೂ ತಿಳಿಯಲಿಲ್ಲ. ಆಗ ಹೊತ್ತು ಏರಿ ನಾಲ್ಕೂ ಕಡೆಗೆ ಹೊಬಿಸಿಲು ಬಿದ್ದಿತ್ತು. ಜನರ ಹಾಗೂ ದನಕರುಗಳ ಸುಳಿದಾಟದ ಸುಳಿವು ನಾಲ್ಕೂ ಕಡೆಗೆ ಕೇಳಿಸುತ್ತಿತ್ತು. ಆಗ ಯವನರು ತರುಣಿಯ ಆಶೆಬಿಟ್ಟು ಹೆಗ್ಗನ ಕಡೆಗೆ ತಿರುಗಿದರು. ಅವರ ಮುಖ್ಯಸ್ಥನು ಪಸ್ತೂನೀ ಭಾಷೆಯಿಂದ ಹೆಗ್ಗನನ್ನು ಕುರಿತು— ''ಏ ಕಾಫೀರ, ದೇವರಾಯನ ಮಗಳನ್ನು ಬಿಡಿಸಿದವನು ನೀನೇ ಅಲ್ಲವೆ? ನೆಟ್ಟಗಾಯಿತು. ನಮಗೆ ಮಂಕುಬೂದಿ ಹಚ್ಚಿ ಓಡಿಬಂದಿದ್ದ ತರುಣಿಯು ನಮಗೆ ಸಿಗದಿದ್ದರೂ, ನೀನು ಅನಾಯಾಸವಾಗಿ ಸಿಕ್ಕದ್ದರಿಂದ ನಮಗೆ ಪರಮ ಲಾಭವಾಯಿತು. ನೀನು ಕಾಫೀರರ ಮುಖ್ಯನಾಗಿ ದಿನದಿನಕ್ಕೆ ಬಲವನ್ನು ಹೆಚ್ಚಿಸಿಕೊಳ್ಳುತ್ತ ನಮ್ಮ ಕಾರ್ಯಕ್ಕೆ ವಿಘ್ನಮಾಡತೊಡಗಿರುವೆ. ದೇವರಾಯನು ನಿನಗೆ ಗುಪ್ತಸಹಾಯಕನಿರುವಂತೆ ತೋರುತ್ತದೆ. ನಿಮ್ಮ ಗೂಢತಂತ್ರಗಳನ್ನೂ, ಗುಪ್ತಸ್ಥಳಗಳನ್ನೂ ಗೊತ್ತುಹಚ್ಚುವದಕ್ಕಾಗಿ ನಮ್ಮವರು ನಾಲ್ಕೂಕಡೆಗೆ ಸಂಚರಿಸುತ್ತಿರುವರು. ಈಗ ಅನಾಯಸವಾಗಿ ನೀನು ನಮ್ಮ ಕೈಗೆ ಹತ್ತಿರುವದರಿಂದ ನಿನ್ನ ಶಿರಚ್ಛೇದ ಮಾಡಿ, ನಮ್ಮ ಹೆಚ್ಚಳದ ದೊಡ್ಡ ಪ್ರತಿಬಂಧವನ್ನು ದೂರಮಾಡುವೆನು. ನಿನ್ನ ಆ ಮಲ್ಲ, ಚಿನ್ನವೆಂಕಟ, ಓಬಲ, ಪೆದ್ದ, ಮಾರ, ಹನುಮಾನ್ ಮೊದಲಾದ ಅನುಯಾಯಿಗಳು ಎಲ್ಲಿರುವರು? ಆ ಕೃತಘ್ನರ ಮೈದೊಗಲು ಸುಲಿಸಲು, ನಮ್ಮ ಬಾದಶಹನು ಸಮರ್ಥನಿರುವನು.

ನಿಮ್ಮ ರಣಹೇಡಿ ಹಿಂದುಗಳನ್ನು ಯಾರು ಕೇಳಬೇಕು? ಏ, ಬದಮಾಷ್, ಕಣ್ಣು ಕೆಕ್ಕರಿಸಿ ನೋಡುವಿಯಾ? ಕ್ರೋಧಸಂತಪ್ತನಾಗಿ ಈಗ ನೀನು ಮಾಡುವದೇನು? ಈ ಕಠಾರಿಯಿಂದ ಮೊದಲು ನಿನ್ನ ಕಣ್ಣುಗುಡ್ಡೆಗಳನ್ನು ಒಡೆಯುವೆನು ನೋಡು, ಎಂದು ಕಠಾರಿಯನ್ನು ಹಿರಿದು ಮೇಲಕ್ಕೆತ್ತಲು, ಮಹಾಬಲಿಷ್ಠನಾದ ಮಲ್ಲನು ಅಕಸ್ಮಾತ್ ಹಿಂದಿನಿಂದ ಬಂದು ಅವನ ಕಠಾರಿಯನ್ನು ಕಸಿದು ಅವನನ್ನು ಒದ್ದು ನೆಲಕ್ಕೆ ಕೆಡವಿದನು. ಹೆಗ್ಗನ ಉಳಿದ ಅನುಯಾಯಿಗಳು ಉಳಿದ ಮುಸಲ್ಮಾನ ರಾವುತರ ಸಮಾಚಾರವನ್ನು ತಕ್ಕೊಳ್ಳಹತ್ತಿದರು. ಅಷ್ಟರಲ್ಲಿ ಹೆಗ್ಗನೂ ಆಯುಧಪಾಣಿಯಾಗಿ ಮುಸಲ್ಮಾನರೊಡನೆ ಕಾದಲು ಸಿದ್ಧನಾದನು. ಆತನು ಮುಸಲ್ಮಾನ ರಾವುತರಿಗೆ— ''ಇನ್ನು ಸುಮ್ಮನೆ ಕಾದಿ ನೀವು ಪ್ರಾಣಕಳಕೊಳ್ಳಬೇಡಿರಿ; ಶಸ್ತ್ರಗಳನ್ನಿಟ್ಟು ಶರಣುಬಂದು ಪ್ರಾಣ ಉಳಿಸಿಕೊಂಡು ಹೋಗಿರಿ. ಪವಿತ್ರ ಹೃದಯದ ನಮ್ಮ ತರುಣಿಯು ಜಲಸಮಾಧಿಹೊಂದಿದರೂ, ನಿಮ್ಮಂಥ ಪಾಪಿಗಳ ಕೈಯೊಳಗಿಂದ ಮರ್ಯಾದೆಯಿಂದ ಪಾರಾಗಿಹೋದದ್ದು ಸಮಾಧಾನದ ಸಂಗತಿಯೇ ಸರಿ ! ಹೋಗಿರಿ, ನಿಮ್ಮ ಶಸ್ತ್ರಾಸ್ತ್ರಗಳನ್ನೂ, ಕುದುರೆಗಳನ್ನೂ ಬಿಟ್ಟು ಜೀವದಿಂದ ಪಾರಾಗಿಹೋಗಿರಿ. ನಿಮ್ಮಂಥ ನೀಚವೃತ್ತಿಯವರನ್ನು ಸಂಹರಿಸುವದಕ್ಕೆ ನನ್ನ ಮನಸ್ಸು ಒಪ್ಪಲೊಲ್ಲದು'' ಎಂದು ಹೇಳಲು, ಅಭಿಮಾನಿಗಳೂ, ಶೂರರೂ ಆದ ಮುಸಲ್ಮಾನರು ಅದಕ್ಕೆ ಒಪ್ಪದೆ ಕಾದಲು ಸಿದ್ಧರಾದರು; ಆದರೆ ದೈವಶಾಲಿಯಾದ ಹೆಗ್ಗನ ತೇಜಸ್ಸಿಗೆ ಈಡಾಗದೆ, ಅವರು ಶೌರ್ಯದಿಂದ ಕಾದಿ ಒಬ್ಬನೂ ಉಳಿಯದಂತೆ ಎಲ್ಲರೂ ಕಾಳಗದಲ್ಲಿ ಮಡಿದರು.

ಈ ಪ್ರಸಂಗದಲ್ಲಿ ಮಲ್ಲಣ್ಣನಿಂದಾದ ಸಹಾಯಕ್ಕಾಗಿ ಹೆಗ್ಗನು ಅತ್ಯಂತ ಕೃತಜ್ಞನಾದನು. ಆತನು ಮಲ್ಲನನ್ನು ಬಿಗಿದಪ್ಪಿ—''ಮಲ್ಲಣ್ಣಾ, ನೀನು ಕುರುಬರ ಮಲ್ಲಣ್ಣನಲ್ಲ; ವೀರಾಗ್ರಣಿ ಯಾದದ್ದರಿಂದ ಮಲ್ಲಸರ್ಜನಿರುತ್ತೀ! ನೀನು ಈ ಸಮಯಕ್ಕೆ ಒದಗದಿದ್ದರೆ, ನಿಮ್ಮ ಹೆಗ್ಗನ ದೇಶೋದ್ಧಾರದ ಆಶೆಗಳೆಲ್ಲ ಬಯಲಾಗಿಹೋಗುತ್ತಿದ್ದವು. ಎಂಥ ಆಕಸ್ಮಿಕ ಯೋಗವಿದು! ನೀವು ನಿನ್ನೆ ರಾತ್ರಿ ನನ್ನನ್ನು ಆ ಫಕೀರನಿರುವ ಮಕಾನಕ್ಕೆ ಕಳಿಸಿಹೋದಿರಷ್ಟೇ? ನಿಮ್ಮ ಮುಂದೆ ಹೇಳಿದಂತೆ ನೀವು ನನ್ನನ್ನು ಕರೆಯಲಿಕ್ಕೆ ಬಂದಬಳಿಕವೇ ನಾನು ಅಲ್ಲಿಂದ ಹೊರಟುಬರತಕ್ಕವನು; ಆದರೆ ಫಕೀರನು ಹೇಳಿದ ಸುದ್ದಿಯಿಂದ ಮಧ್ಯರಾತ್ರಿಯಲ್ಲಿ ಬರುವ ಪ್ರಸಂಗ ಬರಲು, ಆಗೇ ಹೊರಟುಬಿಟ್ಟೆನು, ಫಕೀರನು ಬೇಡೆಂದರೂ ಕೇಳಲಿಲ್ಲ. ಮಹಾಕಾರ್ಯಗಳನ್ನು ಸಾಧಿಸ ಬೇಕೆನ್ನುವವನು ಮಹಾಸಂಕಟಗಳಿಗೆ ಗುರಿಯಾಗಲು ಸಿದ್ಧನಾಗಿರಬೇಕಾಗುತ್ತದೆಂಬ ಸಿದ್ಧಾಂತವು ಸುಳ್ಳಲ್ಲ! ನಾನು ಆಗ ಹೊರಟದ್ದು ಒಂದು ಬಗೆಯಿಂದ ಯೋಗ್ಯವೇ ಆಯಿತು. ಯಾಕಂದರೆ, ಹಾಗೆ ಮಾಡಿದ್ದರಿಂದ ಒಬ್ಬ ಸಾಧ್ವಿಯ ಪ್ರಾಣರಕ್ಷಣವಾಯಿತು. ಮಲ್ಲಣ್ಣಾ, ಒಳ್ಳೆಯ ಪ್ರಸಂಗದಲ್ಲಿ ದುಷ್ಟ ಯವನರು ಬಂದು ಆ ಸಾಧ್ವಿಯನ್ನು ಈ ಪಂಪಾಸರೋವರದ ಪಾಲು ಮಾಡಿದರು. ಶ್ರೀ ವಿರೂಪಾಕ್ಷನು ಆಕೆಯನ್ನು ಸುರಕ್ಷಿತವಾಗಿ ಕಾಯದೆ ಬಿಡನೆಂಬ ನಂಬಿಗೆಯು ನನಗಿರುತ್ತದೆ. ನನ್ನ ಪಂಚಪ್ರಾಣಗಳಂತೆ ಇದ್ದ ನೀವು ಐವರು, ನಿಮ್ಮ ಪರಿವಾರದೊಡನೆ ಹೊತ್ತಿಗೆ ಬಂದು ನನ್ನ ಪ್ರಾಣ ರಕ್ಷಣ ಮಾಡಿದ್ದರ ಶುಭಲಕ್ಷಣದ ಮೇಲಿಂದ ಈ ಮಾತು ಹೇಳುವೆನು'' ಎಂದು

ನುಡಿಯಲು, ಮಲ್ಲಸರ್ಜನು— ''ಒಡೆಯಾ, ನಮ್ಮಿಂದ ನಿನಗೆ ಉಪಕಾರವೆ? ಸಗಣಿಯ ಹುಳಗಳಂತೆ ಸಪ್ಪಳಿಲ್ಲದೆ ಹುಟ್ಟಿ ಸಪ್ಪಳಿಲ್ಲದೆ ಸತ್ತುಹೋಗುತ್ತಿದ್ದ ನಮಗೆ, ಹೊಸ ಜೀವಕಳೆ ತಂದು ಮನುಷ್ಯರ ಬಟ್ಟೆಗೆ ಕೂಡಿಸಿದ ನೀನು ನಮ್ಮ ದೇವರಲ್ಲವೆ? ದೇವರ ಮೇಲೆ ಭಕ್ತರ ಉಪಕಾರವೇ? ಏನೇ ಇರಲಿ ಹೊತ್ತಿಗೆ ಸಾವು ಬಂದದ್ದಕ್ಕಾಗಿ ನಮಗೆ ಬಹಳ ಸಂತೋಷವಾಗಿದೆ. ಇನ್ನಮೇಲೆ ನೀನು ಹೀಗೆ ಮೈಮೇಲೆ ಮರಹಾಕಿಕೊಂಡಂತೆ ಮಾಡಬೇಡ. ಸಣ್ಣಪುಟ್ಟ ಕೆಲಸಗಳಿಗೆ ನಮ್ಮನ್ನು ಅಟ್ಟು. ದೊಡ್ಡ ಕೆಲಸಗಳಿಗೆ ನಮ್ಮನ್ನು ಮುಂದೆ ಹಾಕಿ ನೀನು ಮಾರ್ಗತೋರಿಸುತ್ತಿರು. ನೀನು ನಮ್ಮ ಪ್ರಾಣವಿದ್ದ ಹಾಗೆ, ನಿನ್ನ ಆಶ್ರಯ ತಪ್ಪಿದರೆ ನಮ್ಮಿಂದೇನು ಕೆಲಸವಾದೀತು? ನಮ್ಮ ಮೇಲೆ ಕೆಲಸದ ಹೊರೆ ಬಿದ್ದು ನಮಗೂ ಇಷ್ಟು ಬುದ್ಧಿಬರಲಿ. ಮಡ್ಡ ಕುರುಬರನ್ನು ಮಡ್ಡರಾಗಿಯೇ ಇಡಬೇಡ'' ಎಂದು ಹೇಳಿದನು. ಮಲ್ಲ ಸರ್ಜನ ಈ ಮಾತುಗಳನ್ನು ಕೇಳಿ ಹೆಗ್ಗನಿಗೆ ಬಹು ಸಮಾಧಾನವಾಯಿತು.

ಮಲ್ಲಸರ್ಜನನಂತೆಯೇ ಚಿನ್ನವೆಂಕಟ, ಪೆದ್ದ, ಓಬಲ, ಹನುಮಾನ್ ಮೊದಲಾದವರೂ ಮುಂದುವರಿದು ಹೆಗ್ಗನನ್ನು ವಂದಿಸಿ— ''ದೇವರೂ, ನಮ್ಮಿಂದಲೂ ಸೇವೆಯನ್ನು ಸ್ವೀಕರಿಸಬೇಕು. ಸ್ವಾರ್ಥಾಭಿಲಾಷೆಯಿಂದ ಯವನರ ಮನಸ್ಸನ್ನೊಲಿಸುವಾಗ ನಮ್ಮ ಮನಸ್ಸುಗಳು ಅತ್ಯಂತ ಮಲಿನವಾಗಿದ್ದವು. ಅವು ತಮ್ಮಂಥವರ ಸೇವೆಯಿಂದಲೇ ಪವಿತ್ರವಾಗಬೇಕಾಗಿವೆ. ತಾವು ಉರಿಯಲ್ಲಿಹಾರೆಂದರೂ ಹಾರಲಿಕ್ಕೆ ನಾವು ಸಿದ್ಧರಿರುವೆವು. ನಮ್ಮ ಪರೀಕ್ಷೆಯನ್ನಾದರೂ ತಾವು ಮಾಡಬೇಕು.'' ಎಂದು ಪ್ರಾರ್ಥಿಸಲು, ಅದನ್ನು ಕೇಳಿ ಹೆಗ್ಗನ ಅಂತಃಕರಣವು ಉಕ್ಕಿಬಂದಿತು. ಸ್ವಲ್ಪ ದಿನಗಳ ಹಿಂದೆ ಕುರಿಕಾಯುತ್ತಿದ್ದ ಕುರುಬನೂ, ಕೇವಲ ಸ್ವಾರ್ಥಕ್ಕಾಗಿ ಸ್ವಜನದ್ರೋಹ ಮಾಡಲು ಸಿದ್ಧರಾಗಿದ್ದ ಚಿನ್ನವೆಂಕಟನೇ ಮೊದಲಾದವರೂ ಹೀಗೆ ಸ್ವದೇಶಸೇವೆಗಾಗಿ ತಮ್ಮನ್ನು ಪ್ರಾರ್ಥಿಸುವದನ್ನು ನೋಡಿ ಆತನಿಗೆ ಪರಮಾನಂದವಾಯಿತು. ಸ್ವದೇಶೋದ್ಧಾರದ ಮಹಾ ಕಾರ್ಯವನ್ನು ಮಾಡುವ ಮಹಾತ್ಮರಿಗೆ ಹೀಗೆ, ದಾಸಾನುದಾಸರಾಗಿ ವರ್ತಿಸುವ ಅವಶ್ಯವು ವಿಶೇಷವಾಗಿರುತ್ತದೆ. ವಾನರರಾದರೂ ಸೇವಾಧುರೀಣರಾದದ್ದರಿಂದ ಅವರ ಸಹಾಯದಿಂದಲೇ ಶ್ರೀರಾಮನು ಮಹಾಸಮರ್ಥನಾದ ರಾವಣನನ್ನು ಸಂಹರಿಸಿ ಪೃಥ್ವಿಯನ್ನು ನಿಷ್ಕಂಟಕವಾಗಿ ಮಾಡಿದನು. ಇಂಥ ಸೇವಾಧರ್ಮವುಳ್ಳ ಆಜ್ಞಾಧಾರಕರಾದ ನಾಲ್ವರು ಬಂಧುಗಳ ಸಹಾಯ ದಿಂದಲೇ ಧರ್ಮರಾಯನು ಮಹಾಭಾರತದ ಯುದ್ಧದಲ್ಲಿ ಜಯಶಾಲಿಯಾದನು. ಇಂಥ ಸ್ವಯಂ ಸೇವಕರಾದ ಮಾವಳರ ಸಹಾಯದಿಂದಲೇ ಶ್ರೀ ಶಿವಛತ್ರಪತಿಯು ಸ್ವರಾಜ್ಯವನ್ನು ಸ್ಥಾಪಿಸಿದನು. ಇಂಥ ಧನ್ಯವಾದ ಆಜ್ಞಾಧಾರಕರೂಪ ಸಂಪತ್ತು ತನ್ನಲ್ಲಿ ಹೆಚ್ಚುತ್ತ ನಡೆದದ್ದನ್ನು ನೋಡಿ ಹೆಗ್ಗನು ಉತ್ಸಾಹಗೊಂಡನು. ಈ ಉತ್ಸಾಹದ ಭರದಲ್ಲಿಯೇ ಆತನು ಹೊರಡಲು ಸಿದ್ಧನಾದನು. ಆಗ ಮುಸಲ್ಮಾನರ ಶವಗಳ ವಿಷಯವಾಗಿ ಬೇರೆ ಉಪಾಯಗಾಣದೆ, ಸ್ವರಾಜ್ಯಸ್ಥಾಪನದ ಪ್ರಥಮ ಬಲಿಯಂತೆ ಅವನ್ನು ಪಂಪಾಸರೋವರದಲ್ಲಿ ದೂಡಿ, ಮೊಸಳೆಗಳಿಗೆ ಹೊಸ ಆಹಾರವನ್ನುಂಟು ಮಾಡಿಕೊಟ್ಟನು. ಬಳಿಕ ಆ ಮುಸಲ್ಮಾನರ ಕುದುರೆಗಳನ್ನೂ, ಸಿಕ್ಕಷ್ಟು ಸುಲಿಗೆಯನ್ನೂ ತಕ್ಕೊಂಡು ಅಶ್ವಾರೂಢನಾಗಿ ಪರಿವಾರದೊಡನೆ ಹೊರಟನು.

ದೇಶಾಭಿಮಾನದಿಂದ ಪ್ರೇರಿತರಾದ ಆ ಕನ್ನಡ ವೀರರು ಹಾದಿಯನ್ನು ಹಿಡಿದು ಸಾಗಿದ್ದಿಲ್ಲ ಅವರ ಕುದುರೆಗಳು ಕಾಲಾಳುಗಳ ಬೆನ್ನು ಹತ್ತಿ ಅಡವಿಬಿದ್ದು ನಡೆದಿದ್ದವು. ಮಲ್ಲನ ಕುದುರೆ ಎಲ್ಲಕ್ಕೂ ಮುಂದೆ, ಆತನ ಹಿಂದೆ ಹೆಗ್ಗಣ್ಣನ ಕುದುರೆ, ಹೆಗ್ಗಣ್ಣನ ಎಡ–ಬಲ–ಹಿಮ್ಮಗ್ಗಲುಗಳಲ್ಲಿ ಚಿನ್ನವೆಂಕಟ, ಪೆದ್ದ, ಓಬಲ ಮೊದಲಾದ ವೀರರ ಕುದುರೆಗಳು ಸಾಗಿದ್ದವು. ಹೆಗ್ಗನು ತನ್ನ ಸದ್ಗುಣಗಳಿಂದಲೂ, ಶೌರ್ಯಮೂಲವಾದ ವಿಲಕ್ಷಣ ವರ್ಚಸ್ಸಿನಿಂದಲೂ ತನ್ನ ಅನುಯಾಯಿಗಳ ಪರಮಾದರಕ್ಕೆ ಪಾತ್ರನಾಗಿದ್ದನು. ಅವರು ಆತನನ್ನು ದೇವರ ಅವತಾರವೆಂದು ಭಾವಿಸಹತ್ತಿದ್ದರು. ಹಾಗೆ ಭಾವಿಸಲಿಕ್ಕೆ ಹೆಗ್ಗನು ಪಾತ್ರನೂ ಇದ್ದನು. ಆತನು ಹೆಸರಿಗೆ ಕುರುಬನು; ಆದರೆ ರಾಜ್ಯ ಸ್ಥಾಪಕರಲ್ಲಿರತಕ್ಕ ಗುಣಗಳಿಂದ ಆತನು ಅಲಂಕೃತನಾಗಿದ್ದನು. ಪ್ರಿಯವಾಚಕರೇ, ಗುಣಗಳೇ ಪೂಜೆಯ ಸ್ಥಾನವಲ್ಲವೆ? ಗುಣವಂತನ ಜಾತಿಯನ್ನು ಯಾರು ನೋಡುವರು? ಗೋತ್ರವನ್ನು ಯಾರು ವಿಚಾರಿಸುವರು? ಮನಸ್ಸಿಲ್ಲದಿದ್ದರೂ ಸದ್ಗುಣಮಂಡಿತ–ವರ್ಚಸ್ವಿಯನ್ನು ನಮಸ್ಕರಿ ಸಲಿಕ್ಕೆ ಕೈಗಳು ಅಕಸ್ಮಾತ್ ಒಮ್ಮೊಮ್ಮೆ ತಾವಾಗಿ ಎದ್ದುಬಿಡುವವು. ''ವರ್ಣಾನಾಂ ಬ್ರಾಹ್ಮಣೋ ಗುರುಃ'' ಎಂಬ ತಾತ್ವಿಕ ವಚನಾಧಾರವನ್ನು ತೋರಿಸಿ, ನಮ್ಮಂಥ ಜಾತಿ ಮಾತ್ರ ಬ್ರಾಹ್ಮಣರು ನಮ್ಮನ್ನು ನಮಸ್ಕರಿಸಿರೆಂದು ಹೇಳಿದರೆ, ಅನ್ಯರು ನಮಸ್ಕರಿಸುವದೊತ್ತಟ್ಟಿಗುಳಿದು, ದ್ವೇಷ ಬೆಳಿಸುವರು; ಆದರೆ ಕ್ಷತ್ರಿಯರೆನಿಸುವ ಶ್ರೀರಾಮ, ಶ್ರೀಕೃಷ್ಣರವರು ತಮ್ಮ ದೈವೀಗುಣಗಳ ಯೋಗದಿಂದ ಬ್ರಾಹ್ಮಣರ ಮನೆಯ ದೇವರಾಗಿರುವರು! ಈ ತತ್ವವನ್ನು ಎಲ್ಲ ವರ್ಣದವರೂ ನೆನಪಿಟ್ಟು ವಿವೇಕಿಗಳಾಗತಕ್ಕದ್ದಾಗಿದೆ. ಇರಲಿ, ಸದ್ಯಕ್ಕೆ ನಾವು ನಮ್ಮ ಕುರುಬರ ಹೆಗ್ಗಣ್ಣನ ಕಡೆಗೆ ಹೋಗೋಣ. ಹೆಗ್ಗಣ್ಣನಲ್ಲಿ ಸರ್ವ ಸದ್ಗುಣಗಳ ತಾಯಿಯಾದ ನಿಸ್ಪೃಹತೆಯು ಪೂರ್ಣತ್ವದಿಂದ ವಾಸಿಸುತ್ತಿತ್ತು. ಆ ಪುಣ್ಯವಂತನು ತನ್ನ ಪರಿವಾರವನ್ನಂತೂ ತನ್ನ ಪ್ರಾಣಕ್ಕಿಂತ ಹೆಚ್ಚೆಂದು ತಿಳಿದು ಅವರೊಡನೆ ನಡೆದುಕೊಳ್ಳುತ್ತಿದ್ದನು. ಸಂಕಟಕ್ಕೆ ನಿರ್ಭಯದಿಂದ ಮುಂದುವರಿಯುವದು ಆತನ ಹುಟ್ಟುಗುಣವಾಗಿತ್ತು. ತನಗೆ ಉಪಕೃತಿ ಮಾಡಿದವರ ವಿಷಯ ವಾಗಿ ಕೃತಜ್ಞತೆಯನ್ನು ತೋರಿಸುವಾಗ ಆತನು ತನ್ನನ್ನೇ ಮರೆತುಬಿಡುತ್ತಿದ್ದನು. ಪರನಾರೀ ಸೋದರತ್ವ, ದೀನವಾತ್ಸಲ್ಯ, ಶರಣಾಗತರಕ್ಷತೆ, ಪರೋಪಕಾರದಕ್ಷತೆ ಇವು ಆತನ ಶ್ರೇಷ್ಠಾ ಲಂಕಾರಗಳಾಗಿದ್ದವು. ಇವೆಲ್ಲ ಗುಣಗಳನ್ನು ಪ್ರಕಾಶಿಸುವಂಥ, ಹಾಗು ಮನುಷ್ಯತ್ವಕ್ಕನುಸರಿಸಿ ಆತನಲ್ಲಿದ್ದ ಒಂದೆರಡು ಔಪಚಾರಿಕ ದೋಷಗಳನ್ನು ಮರೆಮಾಡುವಂಥ ಔದಾರ್ಯಗುಣವು ಆತನಲ್ಲಿ ಮನೆಮಾಡಿಕೊಂಡಿತ್ತು, ಇಂಥ ಪುರುಷಶ್ರೇಷ್ಠನ ಅನುಯಾಯಿಗಳಲ್ಲಿ ಸದ್ಗುಣಗಳ ಸಂಚಾರವಾಗದಿದ್ದರೆ ಬೇರೆ ಯಾರಲ್ಲಿ ಆಗಬೇಕು? ಆತನು ಮುಸಲ್ಮಾನರ ಕ್ರೂರತನದ ಕೃತ್ಯಗಳಿಗಾಗಿ ಸಂತಾಪಗೊಂಡವನಾದ್ದರಿಂದ, ಅವರ ವಿಷಯವಾಗಿ ಒಮ್ಮೊಮ್ಮೆ ಅತ್ಯಂತವಾದ ದ್ವೇಷಭಾವವನ್ನು ತಾಳುತ್ತಿದ್ದನು: ಆದರೂ ಶರಣಾಗತರನ್ನು ರಕ್ಷಿಸುವ ವಿಷಯವಾಗಿ ಮಾತ್ರ ಆತನು ಮುಸಲ್ಮಾನರನ್ನು ತಿರಸ್ಕರಿಸುತ್ತಿದ್ದಿಲ್ಲ. ಒಮ್ಮೆ ಒಬ್ಬನನ್ನು ಬೆನ್ನಿಗೆ ಹಾಕಿಕೊಂಡರೆ ತೀರಿತು. ಅವನು ಹಿಂದುವೇ ಇರಲಿ, ಮುಸಲ್ಮಾನನೇ ಇರಲಿ, ಅವನ ಸಂರಕ್ಷಣಕ್ಕಾಗಿ ತನ್ನ ಪ್ರಾಣವನ್ನರ್ಪಿಸಲಿಕ್ಕೆ ಸಹ ಆತನು ಹಿಂದೆಮುಂದೆ ನೋಡುತ್ತಿದ್ದಿಲ್ಲ. ಅಂತೇ ಈಗ ಆತನು ತನಗೆ

ಶರಣಾಗತನಾಗಿದ್ದ ಬಹಾಉದ್ದೀನನೆಂಬ ಮುಸಲ್ಮಾನನ ಸಂರಕ್ಷಣಕ್ಕಾಗಿ ತನ್ನ ಅನುಯಾಯಿಗಳೊಡನೆ ಆತುರದಿಂದ ಸಾಗಿದ್ದನು.

ಬಹಾಉದ್ದೀನನು ಯಾರೆಂಬದನ್ನು ತಿಳಿದುಕೊಳ್ಳಲಿಕ್ಕೆ ಸ್ವಲ್ಪ ಇತಿಹಾಸ ಹೇಳುವ ಅವಶ್ಯವಿರುವದರಿಂದ ಅದನ್ನು ನಾವು ಮುಂದಿನ ಪ್ರಕರಣದಲ್ಲಿ ಸ್ವಲ್ಪದರೊಳಗೆ ಹೇಳುವೆವು. ಆದರೆ ಸದ್ಯಕ್ಕೆ ಹೆಗ್ಗನ ವಾಸಸ್ಥಳದ ಪರಿಚಯವನ್ನು ನಾವು ವಾಚಕರಿಗೆ ಮಾಡಿಕೊಡುವೆವು. ಅದಕ್ಕಾಗಿ ವಾಚಕರು ನಮ್ಮೊಡನೆ ಹೆಗ್ಗನ ಬೆನ್ನುಹತ್ತಿ ಬರಬೇಕು. ಮೇಲೆ ಹೇಳಿದಂತೆ ಹೆಗ್ಗನು ತನ್ನ ಪರಿವಾರದೊಡನೆ ಎರಡುತಾಸು ಪಶ್ಚಿಮಕ್ಕೆ ನಡೆದುಹೋದಬಳಿಕ ಒಂದು ಗಹನಾರಣ್ಯವನ್ನು ಪ್ರವೇಶಿಸಿದನು. ಅಲ್ಲಿಂದ ಮುಂದೆ ದಾರಿಯ ಸುಳುವು ಸರ್ವಥಾ ಇದ್ದಿಲ್ಲ. ಅವರು ಆ ಅರಣ್ಯವನ್ನು ಪ್ರವೇಶಿಸಿದಕೂಡಲೆ ಒಬ್ಬೊಬ್ಬರು ಒಂದೊಂದು ಕಡೆಗೆ ಸಾಗಿದರು. ಹೀಗೆ ಮಾಡಿದ್ದರ ಕಾರಣವು ಕುದುರೆಗಳ ಹಾಗು ಜನರ ತುಳಿತದಿಂದ ಹಾದಿಯು ಬೀಳಬಾರದೆಂಬದೇ ಅಲ್ಲದೆ ಬೇರೆ ಏನೂ ಇದ್ದಿಲ್ಲ. ಹೀಗೆ ಅವರು ಅರ್ಧತಾಸು ನಡೆದಬಳಿಕ ಗುಡ್ಡದ ಓರೆಯ ಒಂದು ಭಯಂಕರವಾದ ಕೊರಕಲದ ದಂಡೆಯ ಮೇಲಿಂದ ಒಂದು ವಟವೃಕ್ಷದ ಬುಡದಲ್ಲಿ ಎಲ್ಲರೂ ಒಟ್ಟುಗೂಡಿದರು. ಆಗ ಮಲ್ಲಸರ್ಜನು ಸಂಕೇತಸೂಚಕವಾದ ಒಂದು ಸಿಳ್ಳುಹಾಕಿದನು. ಕೂಡಲೆ ಗಿಡದ ಗುಂಪಿನೊಳಗಿಂದ ನಾಲ್ವರು ಸಮರ್ಥರಾದ ಸೇವಕರು ''ದೇವರುಃ'' ಎಂದು ಕೈ ಜೋಡಿಸಿ ನಿಂತುಕೊಂಡರು. ಅವರಲ್ಲಿ ಒಬ್ಬನನ್ನು ಕುರಿತು ಹೆಗ್ಗನು— ''ಭರಮಾ, ಇಬ್ಬರು ಈ ಹೊಸ ಕುದುರೆಗಳನ್ನು ಜೋಕೆಯಿಂದ ಹಿಡಿಸಿಕೊಂಡು ಹೋಗಿ ಕಟ್ಟಿಸಲಿ. ನಾವು ಪಾಳಯಕ್ಕೆ ಹೋಗಬೇಕಾಗಿರುವದರಿಂದ ಬೇಗನೆ ಕೊರಕಲಿಗೆ ಹಲಿಗೆಗಳನ್ನು ಹಾಕಿಸು'' ಎಂದು ಆಜ್ಞಾಪಿಸಿದನು. ಕೂಡಲೆ ಭರಮನು ಕುದುರೆಗಳನ್ನು ಕೊರಕಲದ ದಂಡೆಗುಂಟ ಎತ್ತಕಡೆಗೋ ಕಳಿಸಿದನು. ಇತ್ತ ಕೆಲವರು ಕೊರಕಲಿಗೆ ವಿಲಕ್ಷಣವಾದ ಹಂಚಿಕೆಯಿಂದ ಮೂರು ಹಲಿಗೆಗಳನ್ನು ಸರಿಸಿ ಆಚೆಯ ಕಡೆಗೆ ಹೋಗುವ ದಾರಿಯನ್ನು ಮಾಡಿಕೊಟ್ಟರು. ಆ ಮೂರೇ ಮೊಳದ ಹಲಿಗೆಗಳ ಮೇಲಿಂದ ಹೆಗ್ಗನೇ ಮೊದಲಾದವರು ಕುದುರೆ ಹತ್ತಿಕೊಂಡೇ ಆಚೆಗೆ ಸಾಗಿಹೋದರು. ಕೂಡಲೆ ಹಲಿಗೆಗಳು ಸರಿದು ಅವು ಕಾಣದಾದವು. ಕೊರಕಲವೇನು ಅಷ್ಟು ಅಗಲವಿದ್ದಿಲ್ಲ. ನೀರಿನ ಕೊರೆತದಿಂದ ಅದು ಬಹಳ ಆಳವಾಗಿ ಮಾತ್ರ ಇತ್ತು. ಗಿಡಬಳ್ಳಿಗಳಿಂದ ಮುಚ್ಚಿಹೋದದ್ದರಿಂದ ನೋಡುವವರಿಗೆ ಅದು ಎಷ್ಟು ಆಳವಾಗಿರುವದೋ ಅನ್ನುವ ಹಾಗೆ ಮತ್ತಿಷ್ಟು ಭಯವನ್ನುಂಟು ಮಾಡುತ್ತಿತ್ತು. ಹೆಗ್ಗನೇ ಮೊದಲಾದವರು ಗುಡ್ಡದ ಒಂದು ಕಣಿವೆಯಿಂದ ಮುಂದಕ್ಕೆ ಸಾಗಿಹೋದರು. ಕಣಿವೆಯ ಇಕ್ಕಟ್ಟಿನ ದಾರಿಯಲ್ಲಿ ಆತನ ಕಾವಲುಗಾರರ ಬಿಗಿಯಾದ ಕಾವಲು ಇತ್ತು. ಹೆಗ್ಗನನ್ನು ನೋಡಿದಕೂಡಲೆ ಕಾವಲುಗಾರರು ಮುಜುರೆಮಾಡಿ ನಿಂತುಕೊಂಡರು. ಹೆಗ್ಗನು ಹಾಗೆ ಮುಂದಕ್ಕೆ ಸಾಗಿಹೋಗಿ ಕಣಿವೆಯ ಅಡ್ಡತಿಡ್ಡ ಹಾದಿಯಲ್ಲಿಯ ನಾಲ್ಕು ಕಾವಲುಗಳನ್ನು ದಾಟಿ ಒಂದು ಬೈಲು ಪ್ರದೇಶಕ್ಕೆ ಮುಟ್ಟಿದನು. ಈ ಪ್ರದೇಶವು ನಾಲ್ಕೂ ಕಡೆಯಿಂದ ಸ್ವಾಭಾವಿಕವಾಗಿಯೇ ದುರ್ಭೇದ್ಯವಾಗಿತ್ತು. ಅದರಲ್ಲಿ ಕೇವಲ ಹೊಸಬರಾಗಿದ್ದ ಮುಸಲ್ಮಾನರಿಗಂತು ಇದರ ಸುಳಿವು ಸಹ ಹತ್ತುವಹಾಗಿದ್ದಿಲ್ಲ; ಹತ್ತಿದ್ದರೂ ಅದನ್ನು

ಪ್ರವೇಶಿಸುವದು ಪರಮ ದುಸ್ತರವಾಗಿತ್ತು. ಆ ವಾಸಸ್ಥಳವು ಗಹನಾರಣ್ಯ ಪ್ರದೇಶವೇ ಆಗಿತ್ತು. ಅಲ್ಲಿ ಗಿಡಗಳಲ್ಲಿ ಮುಚ್ಚಿ ಹೋಗಿದ್ದ ಹಲವು ಗುಡಿಸಲುಗಳಿದ್ದು, ಅವುಗಳಲ್ಲಿ ಹೆಗ್ಗನ ಹೊಸ ದಂಡಾಳುಗಳು ವಾಸಿಸುತ್ತಿದ್ದರು. ದಿನದಿನಕ್ಕೆ ಅವನ ದಂಡಾಳುಗಳ ಸಂಖ್ಯೆಯೂ ಹೆಚ್ಚುತ್ತ ನಡೆದಂತೆ ಗುಡಿಸಲುಗಳ ಸಂಖ್ಯೆಯೂ ಹೆಚ್ಚಹತ್ತಿತ್ತು. ಹೆಗ್ಗನು ದಾರಿಯಲ್ಲಿಯ ಗುಡಿಸಲುಗಳನ್ನು ನೋಡುತ್ತ, ಭೆಟ್ಟಿಯಾದವರ ಯೋಗಕ್ಷೇಮವನ್ನು ವಿಚಾರಿಸುತ್ತ ತನ್ನ ಕಚೇರಿಯ ಗುಡಿಸಲಿಗೆ ಹೋಗಲು, ಅಲ್ಲಿ ಒಬ್ಬ ಫಕೀರನು ಆತುರದಿಂದ ಆತನ ಹಾದಿಯನ್ನು ನೋಡುತ್ತ ಕುಳಿತು ಕೊಂಡಿದ್ದನು. ಫಕೀರನು ಹೆಗ್ಗನನ್ನು ನೋಡಿದಕೂಡಲೆ ಎದ್ದು ನಿಂತು ಸಲಾಮು ಮಾಡಿ— ''ತೋಬ ತೋಬಾ! ಅಲ್ಲಾನ ಕೃಪೆಯಿಂದಲೇ ಇಂದು ನಿಮ್ಮ ದರ್ಶನವಾಯಿತು! ಇಲ್ಲದಿದ್ದರೆ ಇಷ್ಟು ಹೊತ್ತಿಗೆ ನಾನು ದಿಲ್‌ಖುಶ್ ಖಾನನ ಸೆರೆಯಾಳಾಗುತ್ತಿದ್ದೆನು'' ಎಂದು ನುಡಿಯುತ್ತಿರಲು, ಹೆಗ್ಗನು ಆತನ ಕೈಹಿಡಿದು ಆದರದಿಂದ ಆತನನ್ನು ಕುಳ್ಳಿರಿಸಿಕೊಂಡನು. ಪ್ರಿಯವಾಚಕರೇ, ಈ ಫಕೀರನು ನಿಜವಾದ ಫಕೀರನಾಗಿರದೆ ಫಕೀರವೇಷಧಾರಿ ಬಹಾಉದ್ದೀನನಾಗಿದ್ದನು.

## ಹುಚ್ಚ ಮಹಮ್ಮದನು !

ಈ ಕಾಲದಲ್ಲಿ ಮುಸಲ್ಮಾನರು ತಮ್ಮ ಪರಾಕ್ರಮದಿಂದ ಉತ್ತರ ಹಿಂದುಸ್ಥಾನವನ್ನು ಹಣ್ಣು ಮಾಡಿ ದಕ್ಷಿಣಕ್ಕೆ ಹೊರಳಿದ್ದರು. ದಕ್ಷಿಣ ಹಿಂದುಸ್ಥಾನದೊಳಗೆ ಅಲ್ಲಲ್ಲಿ ಸಣ್ಣ ಸಣ್ಣ ಅರಸರು ಆಳುತ್ತಿದ್ದು ಅವರು ಸ್ವಾರ್ಥಮೂಲವಾದ ಅಂತಃಕಲಹಗಳಿಂದ ತಮ್ಮತಮ್ಮೊಳಗೆ ಹೋರಾಡುತ್ತ ಬಲಹೀನರಾಗಿದ್ದರು. ಶೂರ ಮುಸಲ್ಮಾನರೊಡನೆ ಒಕ್ಕಟ್ಟಿನಿಂದ ಕಾದುವ ಯೋಗ್ಯತೆಯು ಅವರಲ್ಲಿದ್ದಿಲ್ಲ. ದಿಲ್ಲಿಯ ಬಾದಶಹನಾದ ಅಲ್ಲಾಉದ್ದೀನ ಖಿಲಜಿಯ ಸರದಾರನೆನಿಸುವ ಮಲಿಕಕಾಫರನು ಬಿರುಗಾಳಿಯಂತೆ ದಕ್ಷಿಣಕ್ಕೆ ಸಾಗಿಬಂದು, ತಡೆಯಿಲ್ಲದೆ ರಾಮೇಶ್ವರದವರೆಗೆ ಸಾಗಿಹೋಗಿ ಅಲ್ಲಿ ಒಂದು ಮಸೀದೆ ಕಟ್ಟಿಸಿ ಬಂದದ್ದನ್ನು ನೋಡಿ ಹಿಂದೂಜನರು ಬೆಚ್ಚಿ ಬೆರಗಾದರು! ಕ್ಷುದ್ರ ಅಂತಃಕಲಹದಿಂದಲೂ, ಹೇಯವಾದ ವಿಷಯ ಸೌಖ್ಯಾನುಭವದಿಂದಲೂ ಹಿಂದೂಜನರ ಒರಟತನವೂ, ಸಾಹಸವೂ ಅಳಿದುಹೋಗಿ, ಅವರನ್ನು ಪುಕ್ಕತನವೂ, ಡಾಂಭಿಕ ತನವೂ ಸಂಪೂರ್ಣವಾಗಿ ಆವರಿಸಿಕೊಂಡಿದ್ದವು. ಅವರು ಮುಸಲ್ಮಾನರನ್ನು ಕಂಡರೆ ಅಂಜಿ ನಡುಗುತ್ತಲಿದ್ದರು. ಉತ್ತರ ಹಿಂದುಸ್ಥಾನದ ಮುಸಲ್ಮಾನರ ಅಬ್ಬರದ ತುಳತದಿಂದ ದಕ್ಷಿಣ ಹಿಂದುಸ್ಥಾನದ ನೆಲಗಟ್ಟು ಅದರಹತ್ತಿತು. ಇನ್ನು ನಮ್ಮ ಗತಿಯೇನೆಂದು ಜನರು ಮುಂದುಗಾಣದೆ ಯೋಚಿಸಹತ್ತಿದರು. ಅಷ್ಟರಲ್ಲಿ ಮಹಮ್ಮದ ತಘಲಕನ ಕ್ರೂರತನದ ಕೃತ್ಯಗಳು ಒಂದರ ಹಿಂದೊಂದು ಕಿವಿಗೆ ಬೀಳಲು, ಹಿಂದೂಜನರ ಕೈ ಕಾಲ ನರಗಳು ಸತ್ತಂತಾಗಿ ಅವರಿಗೆ ರಕ್ಷಕರು ಯಾರೂ ಕಾಣದಂತಾದರು.

ಮಹಮ್ಮದ ತಘಲಕನು ಒಬ್ಬ ವಿಲಕ್ಷಣ ಪುರುಷನಾಗಿದ್ದನು. ಆತನಲ್ಲಿಯ ಸದ್ಗುಣಗಳನ್ನು ಮನಸ್ಸಿನಲ್ಲಿ ತಂದರೆ, ಇಂಥ ಉತ್ತಮ ಬಾದಶಹನು ಮತ್ತೊಬ್ಬನಾಗಲಿಕ್ಕಿಲ್ಲೆಂದು ಹೇಳ ಬೇಕೆನಿಸುತ್ತದೆ; ಆದರೆ ಆತನ ಕ್ರೂರತನವನ್ನೂ, ವಿಚಾರಶೂನ್ಯತೆಯನ್ನೂ ಮನಸ್ಸಿನಲ್ಲಿ ತಂದರೆ ಇಂಥ ರಾಕ್ಷಸನು ಮನುಷ್ಯಕುಲದಲ್ಲಿ ಮತ್ತೊಬ್ಬನು ಹುಟ್ಟಲಿಲ್ಲೆಂದು ಹೇಳಬೇಕಾಗುತ್ತದೆ. ದಿಲ್ಲಿಯ ಬಾದಶಹನೆನಿಸುವ ಈ ಮಹಮ್ಮದ ತಘಲಕನು ಮೂರು ಕುಲದ ಮುಸಲ್ಮಾನನು. ಆ ಕಾಲದ ಗ್ರಂಥಕರ್ತರು ಈತನನ್ನು ಅಪ್ರತಿಮ ಪುರುಷನೆಂದು ವರ್ಣಿಸಿದ್ದಾರೆ. ಈತನು ದಾನಶೂರನಿದ್ದನು. ಕಲಾನಿಪುಣರಿಗಂತೂ ಈತನು ಬೇಡಿದ್ದು ಕೊಡುವನು. ಈ ವಿಲಕ್ಷಣ ಸ್ವಭಾವದ ಅರಸನು ಬೇನೆಯವರ ಸಲುವಾಗಿ ಔಷಧಾಲಯಗಳನ್ನೂ, ಅನಾಥರ ಸಲುವಾಗಿ ಛತ್ರಗಳನ್ನೂ ಇಡಿಸಿದ್ದನು. ಅವನು ವೈದ್ಯ, ನ್ಯಾಯ, ಖಗೋಲ, ಗಣಿತ ಮುಂತಾದ ಶಾಸ್ತ್ರಗಳಲ್ಲಿ ಪ್ರವೀಣನಿದ್ದನು. ಗ್ರೀಸ ದೇಶದ ವೇದಾಂತ ತತ್ವಗಳನ್ನೂ, ಮಾನಸಶಾಸ್ತ್ರವನ್ನೂ ಅಭ್ಯಸಿಸಿದ್ದನು. ಧರ್ಮದ ಕಟ್ಟಳೆಗಳನ್ನು ನಡಿಸುವಲ್ಲಿ ಆತನು ಅತಿ ನಿಕಟನಿದ್ದನು. ಆತನು ಅತಿ ನಮ್ರ ಸ್ವಭಾವದವನೂ, ನ್ಯಾಯಶೀಲನೂ ಆಗಿದ್ದನು. ಇಂಥ ಸದ್ಗುಣಗಳ ಸಂಗ್ರಹದ ಮತ್ತೊಬ್ಬ ಅರಸನು ಇತಿಹಾಸದಲ್ಲಿ ವಿಪುಲವಾಗಿ ದೊರೆಯಬಹುದೆ?

ಇನ್ನು ಮಹಮ್ಮದನಲ್ಲಿದ್ದ ದುಷ್ಟ ಗುಣಗಳನ್ನು ವಿಚಾರಿಸೋಣ. ಆತನು ಅತ್ಯಂತ ದುರಭಿಮಾನಿಯು. ತನ್ನ ಇಚ್ಛೆಗೆ ವಿರುದ್ಧವಾಗಿ ವರ್ತಿಸಿದ್ದನ್ನು ಸರ್ವಥಾ ಸೈರಿಸನು. ಸಿಟ್ಟು ಬಂದಾಗ ಆತನು ಕೃತಾಂತನಂತೆ ತೋರುವನು. ಮನುಷ್ಯರ ರಕ್ತ ಸುರಿಸುವ ವಿಷಯದಲ್ಲಿ ಇವನಷ್ಟು ಪ್ರಸಿದ್ಧನಾದವನು ಈವರೆಗೆ ಮತ್ತೊಬ್ಬನಾಗಲಿಲ್ಲ. ಅವನು ವಿಧಿಸಿದ ಶಿಕ್ಷೆಗಳು ಘೋರವಾದವುಗಳು. ಒಮ್ಮೊಮ್ಮೆ ಅನ್ಯಾಯದವೂ ಇರುತ್ತಿದ್ದವು. ಜನರ ರಕ್ತ ಸುರಿಸುವ ವಿಷಯದಲ್ಲಿ ಇವನು ಸ್ವಲ್ಪವಾದರೂ ಹಿಂದೆಮುಂದೆ ನೋಡುತ್ತಿದ್ದಿಲ್ಲ. ಜನರ ಸಂಹಾರ ಮಾಡಹತ್ತಿದನೆಂದರೆ ಇವನು ಮನುಷ್ಯಕುಲವನ್ನು ಉಳಿಸುವನೋ ಇಲ್ಲವೋ ಅನ್ನುವಹಾಗೆ ಆಗುತ್ತಿತ್ತು. ಪ್ರತಿ ವಾರದಲ್ಲಿ ತನ್ನ ಆಶ್ರಯದ ಕೆಲವು ವಿದ್ವಾಂಸರನ್ನಾಗಲಿ, ಧರ್ಮಿಷ್ಟರನ್ನಾಗಲಿ, ರಾಜ್ಯಕಾರ್ಯ ನಿರ್ವಾಹಕರನ್ನಾಗಲಿ ಅವನು ಸಂಹರಿಸದೆ ಇರುತ್ತಿದ್ದಿಲ್ಲ. ಅವನ ಇಚ್ಛೆಗೆ ವಿರುದ್ಧವಾಗಿ ಸ್ವಲ್ಪ ನಡೆದರೆ ಸಾಕು, ಸಿಟ್ಟಿನಿಂದ ಅವನ ಹುಚ್ಚು ತಲೆಗೇರುವದು! ಆಗ ಆತನು ಅಘೋರ ಕೃತ್ಯಗಳನ್ನು ಮಾಡತೊಡಗುವನು. ಈ ದುಷ್ಟನು ತಗಣಿಗಳನ್ನು ಒರೆಯುವಂತೆ ಎಷ್ಟೋ ಕುಲದ ಜನರನ್ನು ನಾಶಮಾಡಿದನು. ಮೃಗಗಳ ಬೇಟೆಯಾಡುವಂತೆ ಈ ಕ್ರೂರನು ಮನುಷ್ಯರ ಬೇಟೆಯಾಡುವನು. ತನ್ನ ಸೈನ್ಯದೊಡನೆ ಜನವಸತಿಯ ಪ್ರದೇಶವನ್ನು ಮುತ್ತಿ ನಾಲ್ಕೂ ಕಡೆಯಿಂದ ಮನುಷ್ಯರನ್ನು ಸಂಹರಿಸುತ್ತ ಆ ವಸತಿಯ ಮಧ್ಯಸ್ಥಾನದಲ್ಲಿ ತನ್ನ ಸೈನ್ಯದೊಡನೆ ಒಟ್ಟುಗೂಡುವದು ಇವನ ಮನೋರಂಜನದ ವಿಷಯವಾಗಿತ್ತು. ಈ ರೀತಿಯಿಂದ ದುಷ್ಟನು ಕನೋಜ ಮೊದಲಾದ ಎಷ್ಟೋ ಪಟ್ಟಣದ ಜನರನ್ನು ನಾಶಮಾಡಿದನು.

ಈ ಹುಚ್ಚ ಮಹಮ್ಮದನು ಯಮಶಾಸನದವನು. ಇವನ ಅಪ್ಪಣೆಯನ್ನು ಮುರಿಯಲು, ಜನರು ಗದಗುಟ್ಟಿ ನಡುಗುತ್ತಿದ್ದರು. ಈ ವಿಲಕ್ಷಣ ಪುರುಷನು ಒಮ್ಮೆ ದಿಲ್ಲಿಯ ನಿವಾಸಿಗಳನ್ನು

ಕುರಿತು— ''ನೀವು ದೌಲತ್ತಾಬಾದಿಗೆ ಹೋಗಬೇಕೆ''ಂದು ಆಜ್ಞಾಪಿಸಿದನು. ಆಗ ಜನರು ಸ್ವಲ್ಪ ತಡಮಾಡಲು, ಆ ಕ್ರೂರನು— ''ಇನ್ನು ದಿಲ್ಲಿಯ ಯಾವನಾದರೊಬ್ಬನು ಮನೆಯಲ್ಲಾಗಲಿ, ಓಣಿಯಲ್ಲಾಗಲಿ ಕಣ್ಣಿಗೆಬಿದ್ದರೆ ತಕ್ಕ ಶಿಕ್ಷೆಯು ವಿಧಿಸಲಾಗುವದೆ''ಂದು ಅಪ್ಪಣೆ ಮಾಡಿದನು. ಇದನ್ನು ಕೇಳಿ ಎಲ್ಲರೂ ತಡಮಾಡದೆ ಹೊರಟರು. ಆಗ ಅವನ ಸೇವಕರು ಊರೆಲ್ಲ ತಿರುಗಿ ಒಂದು ಮನೆಯಲ್ಲಿದ್ದ ಒಬ್ಬ ಬೇನೆಯವನನ್ನೂ, ಮತ್ತೊಂದು ಮನೆಯಲ್ಲಿದ್ದ ಒಬ್ಬ ಕುರುಡನನ್ನೂ ಹಿಡಿದು ಬಾದಶಹನಿಗೆ ಒಪ್ಪಿಸಿದರು. ಬಾದಶಹನು ಅವರನ್ನು ನೋಡಿ ಸಿಟ್ಟು ಬೆಂಕಿಯಾಗಿ, ಬೇನೆಯವನನ್ನು ಒಂದು ಉನ್ನತಸ್ಥಾನದಿಂದ ಕೆಳಗೆ ದೂಡಿಸಲು ಆಜ್ಞಾಪಿಸಿದನು. ಕುರುಡನ ಕಾಲುಹಿಡಿದು ದೌಲತ್ತಾಬಾದದವರೆಗೆ ದರದರ ಎಳೆಯುತ್ತಹೋಗಬೇಕೆಂದು ಅಪ್ಪಣೆಯಿತ್ತನು. 600 ಮೈಲಿನ ಅಂತರದ ಹತ್ತು ದಿವಸದ ದಾರಿಯಲ್ಲಿ ಆ ಕುರುಡನನ್ನು ಎಳೆಯುತ್ತ ಹೋಗುವಾಗ ಅವನ ಒಂದೊಂದೇ ಅವಯವಗಳು ಕಳಚಿಬಿದ್ದುಹೋಗಿ ಒಂದು ಕಾಲು ಮಾತ್ರ ಉಳಿಯಿತು. ಆ ಉಳಿದ ಒಂದೇ ಕಾಲನ್ನು ಕ್ರೂರ ಮಹಮ್ಮದನ ಭಯದಿಂದ ಸೇವಕರು ದೌಲತ್ತಾಬಾದಿನ ವರೆಗೆ ಎಳೆದೊಯ್ದು ಅಲ್ಲಿ ಚೆಲ್ಲಿ ಕೊಟ್ಟರು! ಈ ಕಾಲದಲ್ಲಿ ಒಮ್ಮೆ ಮಹಮ್ಮದನು ತನ್ನ ಅರ ಮನೆಯ ಮಾಳಿಗೆಯ ಮೇಲೆ ಏರಿನಿಂತು, ಊರು ಹಾಳಾದದ್ದನ್ನೂ, ಅಲ್ಲಿ ಹೊಗೆ ಹಾಯದ್ದನ್ನೂ ನೋಡಿ ''ಈಗ ಮಾತ್ರ ನನ್ನಮನಸ್ಸು ಸಮಾಧಾನಹೊಂದಿತು'' ಎಂದು ನುಡಿದನಂತೆ!

ಈ ವಿಲಕ್ಷಣ ಪುರುಷನನ್ನು ಪ್ರಾಚೀನ ಲೇಖಕರು ಘನವಂತನೆಂತಲೂ, ಅವನ ಕೃತಿಗಳು ಘನತರವಾದವುಗಳೆಂತಲೂ ಉಲ್ಲೇಖಿಸಿದ್ದಾರೆ. ಇವನು ದೊಡ್ಡ ಪ್ರಭುವೆಂದು ತೋರಿಸುವ ಎಷ್ಟೋ ಕತೆಗಳುಂಟು. ಅವುಗಳಲ್ಲಿ ಒಂದನ್ನು ಇಲ್ಲಿ ಹೇಳುವೆವು. ಇವನು ಕೋರಮಂಡಲದ ಪ್ರದೇಶದಲ್ಲಿದ್ದಾಗ್ಗೆ ಒಬ್ಬನು ಇವನ ಮುಂದೆ – ಸಮುದ್ರದಲ್ಲಿ ಕೆಲವು ಹರದಾರಿಗಳ ಮೇಲೆ ಒಂದು ದೊಡ್ಡ ದ್ವೀಪವುಂಟು. ಅದರ ಭೂಮಿಯು ಸುವರ್ಣಮಯವಾಗಿರುವದು. ಅದರಲ್ಲಿಯ ಮನೆಗಳು ವಜ್ರ–ಹವಳಗಳಿಂದ ಕೆಚ್ಚಲ್ಪಟ್ಟಿರುವವು. ಅಲ್ಲಿ ಒಂದು ದೇವಸ್ಥಾನವಿದ್ದು, ಆ ದೇವಸ್ಥಾನಕ್ಕೆ ಆಕಾಶದಿಂದ ದೇವದೂತರು ಬಂದು ಸಂಗೀತ ನರ್ತನಾದಿಗಳನ್ನು ನಡೆಯಿಸುತ್ತಿರುವರು ಎಂದು ಹೇಳಿದನು. ಅದನ್ನು ಕೇಳಿ ಮಹಮ್ಮದನು ಆ ದ್ವೀಪವನ್ನು ಸ್ವಾಧೀನಪಡಿಸಿಕೊಳ್ಳಲು ನಿಶ್ಚಯಿಸಿ, ಸೈನ್ಯವನ್ನು ಸಿದ್ಧಗೊಳಿಸಿದನು; ಆದರೆ ಆ ಎಲ್ಲ ಸೈನ್ಯವನ್ನು ಒಯ್ಯುವಷ್ಟು ಹಡಗಗಳು ಅವರ ಬಳಿಯಲ್ಲಿ ಇದ್ದಿಲ್ಲ. ಆಗ ಆತನು ಚಕ್ಕಡಿಗಳಲ್ಲಿ ಕಲ್ಲು ಮಣ್ಣು ಹೇರಿಸಿ ಅವುಗಳಿಂದ ಸಮುದ್ರವನ್ನು ತುಂಬಿಸಹತ್ತಿದನು. ಒಳ್ಳೇ ಯತ್ನದಿಂದ ಹತ್ತು ಹನ್ನೆರಡು ಹರದಾರಿಯ ಸೇತುವು ಸಿದ್ಧವಾಗಿ, ಕಡೆಗೆ ಆತನು ಸಿಲಾಓ ದ್ವೀಪಕ್ಕೆ ಮುಟ್ಟಿದನು. ಈ ಸೇತುವು ಕಾಲಾಂತರದಿಂದ ನೀರಿನಲ್ಲಿ ಮುಳುಗಿ ಅದರಲ್ಲಿ ಈಗ ಸೆಳವುಗಳು ಬಿದ್ದಿರುವವು. ಅವನ ಸೇನಾನಾಯಕನಾದ ಮಲೀಕನಾಯಕನೆಂಬವನು ತನ್ನ ಒಡೆಯನು ಈ ಅಸಂಭವ ಕಾರ್ಯದಲ್ಲಿ ವ್ಯರ್ಥ ದಣಿಯುವದನ್ನು ನೋಡಿ, ಕೋರೋಮಂಡಲದ ದಂಡೆಯ ಮೇಲಿನ ಎರಡು ಹಡಗಗಳಲ್ಲಿ ಬಂಗಾರ ಮತ್ತು ರತ್ನಗಳನ್ನು ತುಂಬಿ, ಇವು ಆ ಸುವರ್ಣಮಯ ದ್ವೀಪದಿಂದ ಅದರ ಅರಸನ ಕಡೆಯಿಂದ ಕಾಣಿಕೆಯಾಗಿ ಬಂದಿರುವವೆಂತಲೂ, ಆ ಅರಸನು ಶರಣುಬಂದಂತೆ ಪತ್ರ

ಬರೆದಿರುವನೆಂತಲೂ ಹೇಳಿ ಕೃತ್ರಿಮ ಪತ್ರವನ್ನು ಮಹಮ್ಮದನಿಗೆ ತೋರಿಸಿದನು. ಅದನ್ನು ನೋಡಿ ಮಹಮ್ಮದನು ಸಂತೋಷಪಟ್ಟು ತನ್ನ ಸೇತುಕಟ್ಟುವ ಕೆಲಸವನ್ನು ನಿಲ್ಲಿಸಿಬಿಟ್ಟನು. ತನ್ನ ಕಾರ್ಯದ ಸ್ಮಾರಕಕ್ಕಾಗಿ ಅಲ್ಲಿ ಒಂದು ಮಸೀದೆಯನ್ನು ಕಟ್ಟಿಸಲು, ಅದು ಈಗ ಒಂದು ದೊಡ್ಡ ಯಾತ್ರೆಯ ಸ್ಥಾನವಾಗಿರುತ್ತದೆ.

ಈ ವಿಲಕ್ಷಣ ಪುರುಷನನ್ನು ಹಿಂದೂಜನರು ಯತಿಯೆಂದು ಭಾವಿಸಿರುವರು. ಇವನಲ್ಲಿ ಇಲ್ಲದ ಅಮಾನುಷತನವನ್ನು ಕಲ್ಪಿಸುವರು. ಇವನು ಪ್ರಾರ್ಥನೆ ಮಾಡುವಾಗ ಸ್ವರ್ಗದಿಂದ ಗುಲಾಬಿ ಹೂಗಳು ಅವನ ಮುಂದೆ ಬೀಳುತ್ತಿದ್ದವಂತೆ! ಅವನು ಮಹಾ ಜಯಶಾಲಿ ಯಾದದ್ದರಿಂದ ಅವನ ಆಡಳಿತಕ್ಕೆ ಪೃಥ್ವಿಯ ಒಂದು ದೊಡ್ಡಭಾಗವು ಸೇರಿತ್ತು. ಅವನು ಎಷ್ಟೋ ಅರಸರನ್ನು ಗೆದ್ದು ಕೆಲವರನ್ನು ಮಾಂಡಲೀಕರನ್ನಾಗಿ ಮಾಡಿಕೊಂಡಿದ್ದನು; ಕೆಲವರನ್ನು ಕೊಂದನು; ಕೆಲವರ ಮೈದೊಗಲು ಸುಲಿಸಿ, ಆ ತೊಗಲುಗಳನ್ನು ತನ್ನ ಸಂಗಡ ಒಯ್ದನು. ಇದೇ ಕಾರಣ ದಿಂದಲೇ ಇವನಿಗೆ ಅರಸರ ತೊಗಲಿನ ಅಧಿಪತಿಯೆಂಬ ಬಿರುದು ಬಂದಿತ್ತು. ಇಂಥ ವಿಲಕ್ಷಣ ಗುಣದ ಅರಸನು ಹಿಂದೂಜನರಿಗೆ ವಿಲಕ್ಷಣವಾಗಿ ಕಾಣುವದೇ ಸರಿಯೆಂದು ಪರದೇಶದ ಇತಿ ಹಾಸಕಾರರು ಅನ್ನುವರು. ಅವನಿಗೆ ಹಿಂದೂಜನರು ಅಮಾನುಷ ಪುರುಷನೆಂತಲೂ, ರಾಕ್ಷಸ ನೆಂತಲೂ, ರಾಕ್ಷಸಹೃದಯದ ಯತಿಯೆಂತಲೂ, ಯತಿಹೃದಯವುಳ್ಳ ರಾಕ್ಷಸನೆಂತಲೂ ಅನ್ನುತ್ತಿದ್ದರಂತೆ! ಪ್ರಿಯವಾಚಕರೇ, ಬಹಾಉದ್ದೀನನು ಇಂಥ ಕ್ರೂರಪುರುಷನ ಅಣ್ಣನ ಮಗನಾಗಿದ್ದನೆಂಬದನ್ನು ಚೆನ್ನಾಗಿ ನೆನಪಿನಲ್ಲಿಡಿರಿ.

ಬಹಾಉದ್ದೀನನು ಕಾರಣಾಂತರದಿಂದ ಇಂಥ ತನ್ನ ಕ್ರೂರ ಕಕ್ಕನ ಕೋಪಕ್ಕೆ ಗುರಿಯಾಗಿ ದಕ್ಷಿಣಕ್ಕೆ ಓಡಿಬಂದು ಆತನ ವಿರುದ್ಧ ಬಂಡಾಯವೆಬ್ಬಿಸಿದನು; ಆದ್ದರಿಂದ ಮಹಮ್ಮದನು ಸಿಟ್ಟಾಗಿ ಬಹಾಉದ್ದೀನನ್ನು ಹಿಡಿಯುವದಕ್ಕಾಗಿ ದಕ್ಷಿಣಕ್ಕೆ ಬಂದನು. ದಕ್ಷಿಣದ ಸಣ್ಣ ಸಣ್ಣ ಅರಸರು ಬಹಾಉದ್ದೀನನ ಬೆನ್ನುಕಟ್ಟದಾದರು. ಆಗ ಆನೆಗುಂದಿಯ ಅಥವಾ ಕಂಪಲಿಯ ಅರಸನಾದ ಜಂಬುಕೇಶ್ವರರಾಯನನ್ನು ಆ ಅನಾಥನು ಮೊರೆಹೊಕ್ಕನು. ಆಗ ಶೂರನಾದ ಆ ರಾಯನು ಕ್ಷಾತ್ರಧರ್ಮದಂತೆ ಶರಣಾಗತನನ್ನು ಹೊರದೂಡಲಾರದೆ ಆತನ ಬೆನ್ನುಕಟ್ಟಿದನು. ಇದರಿಂದ ಮಹಮ್ಮದನು ಜಂಬುಕೇಶ್ವರನ ಮೇಲೆ ಸಿಟ್ಟಾಗಿ, ಆತನ ರಾಜಧಾನಿಯಾದ ಆನೆಗುಂದಿಯ ಮೇಲೆ ಸಾಗಿಬಂದನು. ಈ ಪ್ರಸಂಗದಲ್ಲಿ ರಾಯನು ಶೌರ್ಯದಿಂದ ಕಾದಿದರೂ ಆತನಿಗೆ ಯಶಸ್ಸು ಬರಲಿಲ್ಲ. ಆತನು ಶರಣಾಗತನನ್ನು ಸುರಕ್ಷಿತವಾಗಿ ದ್ವಾರಸಮುದ್ರದ ಬಲ್ಲಾಳನ ಆಶ್ರಯಕ್ಕೆ ಕಳಿಸಿ ತಾನು ಶೌರ್ಯದಿಂದ ಕಾದಿ ಯುದ್ಧದಲ್ಲಿ ಮರಣಹೊಂದಿದನು! ಆತನ ಹೆಂಡಿರು ಮಕ್ಕಳು ಕಿಚ್ಚಿನಲ್ಲಿ ಬಿದ್ದು ಪ್ರಾಣಕೊಟ್ಟರು. ಮಹಮ್ಮದನು ತನ್ನ ಸೆರೆಯಲ್ಲಿ ಸಿಕ್ಕ ರಾಯನ ಹನ್ನೊಂದುಮಂದಿ ಮಕ್ಕಳನ್ನು ಮುಸಲ್ಮಾನರಾಗಿ ಮಾಡಿದನಂತೆ! ಹೀಗೆ ಆನೆಗುಂದಿಯು ಮಹಮ್ಮದನ ವಶವಾಯಿತು; ಆದರೆ ಆತನು ಆನೆಗುಂದಿಯ ರಾಜ್ಯದ ಮೇಲೆ ನಿಯಮಿಸಿದ್ದ ಮುಸಲ್ಮಾನ ಸುಬೇದಾರರನ್ನು ಹಿಂದೂಜನರು ಪರಿಪರಿಯಾಗಿ ಗೋಳಾಡಿಸಿ ಆತನಿಗೆ ರಾಜ್ಯವಾಳಗೊಡದಾದರು. ಇದನ್ನರಿತು ಮಹಮ್ಮದನು ಜಂಬುಕೇಶ್ವರನ ಮಂತ್ರಿ ಯಾದ

ದೇವರಾಯನನ್ನು ರಾಜ್ಯದ ಪ್ರತಿನಿಧಿಯಾಗಿ ನಿಯಮಿಸಿ, ಕಾಸಿಮನನ್ನು ಆತನ ಸಹಾಯಕನಾಗಿ ನಿಯಮಿಸಿದನು. ಇತ್ತ ಬಹಾಉದ್ದೀನನು ದ್ವಾರಸಮುದ್ರದ ಅರಸನ ಆಶ್ರಯವನ್ನು ಪಡೆದು, ಗುಪ್ತರೀತಿಯಿಂದ ದೇವರಾಯನೊಡನೆ ತನ್ನ ಕಕ್ಕನ ವಿರುದ್ಧವಾಗಿ ಒಳಸಂಚು ನಡಿಸತೊಡಗಿದನು. ಆ ಸಾಹಸಿಯು ವೇಷಾಂತರದಿಂದ ಆನೆಗುಂದಿಗೆ ಬರುತ್ತ- ಹೋಗುತ್ತಲಿದ್ದನು. ಆತನು ದ್ವಾರಸಮುದ್ರ, ಆನೆಗುಂದಿ ಮುಂತಾದ ಹಿಂದೂ ರಾಜರ ಒಕ್ಕಟ್ಟಿನಿಂದ ತನ್ನ ಕಕ್ಕನನ್ನು ದಕ್ಷಿಣದಿಂದ ಓಡಿಸಬೇಕೆಂದು ಮಾಡಿದನು. ಈ ಒಳಸಂಚಿನ ಸುದ್ದಿಯು ಮಹಮ್ಮದನಿಗೆ ಗೊತ್ತಾಗಿ, ಹೊತ್ತುಸಾಧಿಸಿ ಅವನನ್ನು ಹಿಡಿಯುವ ಬಗ್ಗೆ ಆ ಕ್ರೂರ ಬಾದಶಹನು ತನ್ನ ಜನರನ್ನು ಆಜ್ಞಾಪಿಸಿದ್ದನು. ಮಹಮ್ಮದನ ಜನರು ಅದೇ ಹವಣಿಕೆಯ ಲ್ಲಿರುವಾಗ ಮೇಲೆ ಹೇಳಿದ ಮಸೀದೆಯಲ್ಲಿ ಅವರು ಬಹಾಉದ್ದೀನನ ಗೊತ್ತುಹಿಡಿದರು. ಹೆಗ್ಗನ ಮೇಲೆಯೂ ಅವರ ಕಣ್ಣಿತ್ತೆಂಬದನ್ನು ವಾಚಕರು ಬಲ್ಲರು. ಹೆಗ್ಗನು ಫಕೀರನೊಡನೆ ಮಸೀದೆಯಲ್ಲಿ ಆಲೋಚಿಸುತ್ತಿರುವದನ್ನು ನೋಡಿ, ಈ ಫಕೀರನು ಸಾಮಾನ್ಯ ಫಕೀರನಾಗಿರದೆ ಬಹಾ ಉದ್ದೀನನೇ ಆಗಿರಬೇಕೆಂದು ತರ್ಕಿಸಿ, ಹಿಂದೆ ಹೇಳಿದಂತೆ ರಾತ್ರಿ ಹೆಗ್ಗನು ಹೋದಬಳಿಕ ಫಕೀರ ವೇಷಧಾರಿಯಾದ ಬಹಾಉದ್ದೀನನ್ನು ಹಿಡಿಯಲು ಯತ್ನಿಸಿದರು; ಆದರೆ ಸಾಹಸಿಯಾದ ಬಹಾಉದ್ದೀನನು ಗುಪ್ತದ್ವಾರದಿಂದ ಪಾರಾಗಿ ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಹೆಗ್ಗನ ಗುಪ್ತಸ್ಥಳಕ್ಕೆ ಬಂದಿದ್ದನು.

ಹೆಗ್ಗನು ನಿಜವಾಗಿ ಯಾರಿರುವನೆಂಬದು ಬಹಾಉದ್ದೀನನಿಗೆ ಗೊತ್ತಿರಬಹುದು; ಹಾಗಲ್ಲದಿದ್ದರೆ, ಅವನು ಒಬ್ಬ ಮಡ್ಡ ಕುರುಬನಂತ ತೋರುವ ಹೆಗ್ಗನನ್ನು ನಂಬಿ ವಿಪತ್ಕಾಲದಲ್ಲಿ ಅವನ ಬಳಿಗೆ ಹೀಗೆ ಹೋಗಬಹುದೇ? ಹೆಗ್ಗನು ವಿಶ್ವಾಸಕ್ಕೆ ಪಾತ್ರನೆಂತಲೂ ಶರಣುಹೋದ ತನ್ನನ್ನು ರಕ್ಷಿಸಲು ಸಮರ್ಥನೆಂತಲೂ, ಪ್ರಸಂಗ ಒದಗಿದರೆ ತನ್ನ ಜೀವದ ಹಂಗು ಇಲ್ಲದೆ ತನ್ನನ್ನು ರಕ್ಷಿಸಬಹುದೆಂತಲೂ ಬಹಾಉದ್ದೀನನು ತಿಳಿದಿದ್ದನು. ಬಹಾಉದ್ದೀನನ ನಂಬಿಗೆಯು ಹೆಗ್ಗನ ಮೇಲೆ ಇದ್ದಷ್ಟು ಇಡಿಯ ಆನೆಗುಂದಿಯಲ್ಲಿ ಮತ್ತೊಬ್ಬನ ಮೇಲೆ ಇದ್ದಿಲ್ಲ. ಆ ವಿಪದ್ಗ್ರಸ್ತನಾದ ಯವನನು, ಅತ್ಯಂತ ದೈನ್ಯದಿಂದ ಹೆಗ್ಗನನ್ನು ಕುರಿತು ಹಿಂದಿನ ಪ್ರಕರಣದ ಕಟ್ಟಕಡೆಗೆ ಹೇಳಿದಂತೆ— ''ತೋಬಾ! ತೋಬಾ! ಅಲ್ಲಾನ ಕೃಪೆಯಿಂದಲೇ ಇಂದು ನಿಮ್ಮ ದರ್ಶನವಾಯಿತು. ಇಲ್ಲದಿದ್ದರೆ ಇಷ್ಟು ಹೊತ್ತಿಗೆ ನಾನು ದಿಲ್‌ಖುಶ್‌ಖಾನನ ಸೆರೆಯಾಳಾಗುತ್ತಿದ್ದನು'' ಎಂದು ನುಡಿಯುತ್ತಿರಲು, ಹೆಗ್ಗನು ಆತನ ಕೈ ಹಿಡಿದು ಆದರದಿಂದ ಕುಳ್ಳಿರಿಸಿಕೊಂಡನೆಂದು ಅದೇ ಪ್ರಕರಣದ ಕಡೆಯಲ್ಲಿ ಹೇಳಿದೆಯಷ್ಟೇ! ಆಗ ಬಹಾಉದ್ದೀನನ ಮೋರೆಯು ಅತ್ಯಂತ ಮ್ಲಾನವಾಗಿತ್ತು, ಧಾವಿಸಿಬಂದಿದ್ದರಿಂದ ಅವನ ಸರ್ವಾಂಗವು ಬೆವತು ಅವನ ಕಫನಿಯು ತೊಯ್ದುತಪ್ಪಡಿಯಾಗಿತ್ತು, ಅವನು ಟೊಂಕಕ್ಕೆ ಸುತ್ತಿದ ವಸ್ತ್ರ, ತಲೆಗೆ ಸುತ್ತಿದ ಹಸರು ಸೆಲ್ಲೆ, ಕೊರಳೊಳಗಿನ ಶಿಲೆಯ ಮಣಿಗಳು, ಹೆಗಲಮೇಲಿನ ಹೊಲಸು ವಸ್ತ್ರ, ಕೈಯೊಳಗಿನ ಭಿಕ್ಷಾಪಾತ್ರೆ ಇವುಗಳು ಬಡ ಫಕೀರನೆಂದೇ ಹೇಳುತ್ತಿದ್ದರೂ, ಆ ಕುಲೀನನ ದಿವ್ಯತೇಜಸ್ಸು ನೋಡುವವರನ್ನು ಬೆರಗುಗೊಳಿಸುತ್ತಿತ್ತು, ಬಹಾಉದ್ದೀನನು ಪ್ರಾಢವಯಸ್ಕ ನಾಗಿದ್ದನು. ಆತನ ಮೈ ಬಣ್ಣ ಕೆಂಪು, ನಿಲುವು ಎತ್ತರ, ಮೈಕಟ್ಟು ಅಚ್ಚ ಪಠಾಣರಿಗೆ ಒಪ್ಪುವಂಥ ಕಸುವಿನದು.

ಈತನು ಪ್ರಸಂಗದಲ್ಲಿ ಹಿಚಿಕಿ ಮಂದಿಯನ್ನು ಕೊಲ್ಲಬಹುದೆನ್ನುವ ಹಾಗೆ ನೋಡುವವರಿಗೆ ತೋರುತ್ತಿದ್ದನು. ತಾನು ತನ್ನ ಕ್ರೂರ ಕಕ್ಕನ ಕೈಯಲ್ಲಿ ಸಿಕ್ಕರೆ ಏನಾಗುವದೋ, ಅವನೇನು ತನ್ನ ಮೈದೊಗಲು ಸುಲಿಯುವನೊ, ತನ್ನನ್ನು ಜೀವದಿಂದ ಹುಗಿಸುವನೋ, ತನ್ನ ಒಂದೊಂದೇ ಅವಯವಗಳನ್ನು ಕಡಿಸುವನೊ ಎಂದು ಆತನು ಆಲೋಚಿಸುತ್ತಿದ್ದನು. ಒಮ್ಮೊಮ್ಮೆ ಮನುಷ್ಯನ ಉತ್ಸಾಹವೆಲ್ಲ ಕುಗ್ಗಿ ಹೋಗಿ, ತನಗೆ ಇನ್ನು ತರುಣೋಪಾಯವಿಲ್ಲೆಂಬಂತೆ ತೋರಿ ಅವನ ಕೈಕಾಲೇ ಹೋಗುತ್ತವೆ. ಅದರಂತೆ ಈಗ ಬಹಾಉದ್ದೀನನ ಗತಿಯಾಗಿತ್ತು. ಆತನು ತಲೆಗೆ ಸುತ್ತಿದ ಸೆಲ್ಲೆಯನ್ನು ತೆಗೆದಿಟ್ಟು ಉಸುರ್ಗರೆದು ಹೆಗ್ಗನ ಮೋರೆಯನ್ನು ದೈನ್ಯದಿಂದ ನೋಡಹತ್ತಿದನು.

ಹೀಗೆ ನೋಡುವ ಬಹಾಉದ್ದೀನನನ್ನು ನೋಡಿ ಕರುಣಾಳುವಾದ ಹೆಗ್ಗನ ಅಂತಃಕರಣವು ಕರಗಿ ನೀರಾಯಿತು! ಆತನು ಅತ್ಯಂತವಾದ ಕಾರುಣ್ಯದಿಂದ– ''ಖಾನಸಾಹೇಬ, ಪರ್ವತದಂತೆ ಅಚಲವಾದ ನಿಮ್ಮ ಹೃದಯ ಕೂಡ ಈಗ ಚಲಿಸಿದ್ದನ್ನು ನೋಡಿದರೆ, ನಿಮ್ಮ ಕಕ್ಕಂದಿರ ಹೃದಯದ ಕಾಠಿಣ್ಯದ ಪಡಿಕಟ್ಟು ಗೊತ್ತಾಗುವಹಾಗಿದೆ. ಅವರು ಸಿಟ್ಟುಬಂದಾಗ ಯಾವ ಅಪರಾಧಕ್ಕೆ ಯಾವ ವಿಧದ ಶಿಕ್ಷೆಯ ವಿಧಿಸಬಹುದೆಂಬುದನ್ನು ಹೇಳಲಾಗುವದಿಲ್ಲ. ದಿಲ್ಲಿಯ ಒಬ್ಬ ಕುರುಡನು ಆಜ್ಞಾಭಂಗದ ಅಲ್ಪ ಅಪರಾಧ ಮಾಡಿದರೆ ಆತನನ್ನು ದೌಲತ್ತಾಬಾದದವರೆಗೆ ದರದರ ಎಳೆದೊಯ್ಯಬೇಕೆಂದು ಶಿಕ್ಷೆಯನ್ನು ವಿಧಿಸಬಹುದೇ? ರಾಕ್ಷಸರಿಂದಲೂ ಆಗದ ಈ ಕೃತಿಯು ಮನುಷ್ಯರಿಗೆ ಸರ್ವಥಾ ಒಪ್ಪದು. ಈ ಕಲಿಯುಗದಲ್ಲಿ ಇಂಥ ಕಲಿಪುರುಷರೇ ಜಯಶಾಲಿಗಳಾಗುತ್ತಿರುವರು. ನಿಮ್ಮ ಸರಳತನ, ಔದಾರ್ಯ, ಪರಾಕ್ರಮ, ನ್ಯಾಯಬುದ್ಧಿ, ದಯಾಗುಣ ಇವನ್ನು ನೋಡಿದರೆ ಕೇವಲ ಕಲಿಪುರುಷನ ಮಹಿಮೆಯಿಂದಲೇ ನೀವು ವಿಪತ್ತನ್ನು ಭೋಗಿಸುತ್ತಿರುವಿರೆಂದು ಅನ್ನಬೇಕಾಗುತ್ತದೆ. ನಿಮ್ಮ ಬೆನ್ನುಕಟ್ಟಿದ ನಮ್ಮ ಜಂಬುಕೇಶ್ವರರಾಯನಿಗೆ ಯಶಸ್ಸು ಬರಲಿಲ್ಲ. ದ್ವಾರಸಮುದ್ರದ ಬಲ್ಲಾಳರಾಜನು ನಿಮಗೆ ಆಶ್ರಯಕೊಡುವ ವಿಷಯದಲ್ಲಿ ತತ್ತರಿಸುತ್ತಿರುವರು. ನಿಮ್ಮ ಕಕ್ಕಂದಿರೊಡನೆ ಅವರಿಗೆ ಪ್ರತ್ಯಕ್ಷ ಸಂಬಂಧ ಒದಗಿದಾಗ ಏನಾಗುವದೋ ತಿಳಿಯದು. ನಿಮ್ಮ ಕಕ್ಕಂದಿರೇನು ಗುಣಹೀನರೆಂದು ನಾನು ಹೇಳುವದಿಲ್ಲ. ಅವರು ವಿದ್ವಾಂಸರಿರುವರು, ಯುದ್ಧಕಲಾ ವಿಶಾರದರಿರುವರು, ನ್ಯಾಯಶೀಲರಿರುವರು; ತ್ಯಾಗದಲ್ಲಂತೂ ಅನ್ಯರು ಅವರನ್ನು ಸರ್ವಥಾ ಸರಿಗಟ್ಟಲಾರರು; ಆದರೆ ಪ್ರಸಂಗದಲ್ಲಿ ಅವರ ವಿವೇಕವು ನಷ್ಟವಾಗುತ್ತದೆ; ಪ್ರಾಣಿಗಳ ವಿಷಯದ ದಯಾಗುಣವು ಸಂಪೂರ್ಣವಾಗಿ ಲೋಪ ಹೊಂದುತ್ತದೆ. ಅಲ್ಪಾಪರಾಧಕ್ಕಾದರೂ ಅವರು ಸಿಟ್ಟಿನಿಂದ ಹುಚ್ಚಾಗುವರು. ಹಾಗೆ ಸಿಟ್ಟಿನಿಂದ ಭ್ರಾಂತರಾದಾಗ ಪರವಶತೆಯಿಂದ ಅವರು ನುಡಿದದ್ದೇ ಶಿಕ್ಷೆಯಾಗುವದು. ಅವರು ಎಷ್ಟೋ ಜನ ಅರಸರ ಮೈದೊಗಲು ಸುಲಿಸಿದ್ದನ್ನು ನೆನಿಸಿದರೆ ಮೈ ಜುಮ್ಮೆನ್ನುತ್ತದೆ! ಹರಹರ! ಎಂಥ ಕ್ರೂರತನವಿದು! ಆದರೆ ಖಾನಸಾಹೇಬ, ನಿಮ್ಮಂಥ ಪೌರುಷಿಗಳು ಇಂಥ ದುಷ್ಟರ ಶಾಸನ ಮಾಡದೆ ಅವರ ದುಷ್ಟತನದ ಕೃತಿಗಳನ್ನು ಅಬಾಧಿತವಾಗಿ ನಡೆಯಗೊಡುವದು ಒಂದು ಬಗೆಯ ಅಪರಾಧವಲ್ಲವೆ? ಹಾಗೆ ಪ್ರತಿಬಂಧಿಸುವ ಕಾರ್ಯದಲ್ಲಿ ನಿಮ್ಮ ಮಿತ್ರನಾದ ಈ ಹೆಗ್ಗನು ನಿಮ್ಮ ಭುಜಕ್ಕೆ ಭುಜವಾನಿಸಿ ಯತ್ನಿಸಲು ಸಿದ್ಧನಿರುತ್ತಾನೆಂದು ತಿಳಿಯಿರಿ. ನೀವು ತಿರುಗಿ ದ್ವಾರಸಮುದ್ರದ

ಅರಸನ ಆಶ್ರಯಕ್ಕೆ ಹೋಗದೆ ನನ್ನ ಬಳಿಯಲ್ಲಿಯೇ ಇದ್ದುಬಿಡಿರಿ. ನೋಡುವಾ, ಆ ತಘಲಕನ ಕೊಬ್ಬಾದರೂ ಎಷ್ಟಿದೆಯೆಂಬದನ್ನು! ನೀವು ಮನಸ್ಸಿನ ಔದಾಸೀನ್ಯವನ್ನು ಬಿಟ್ಟು ಬಿಡಬೇಕು. ಇಗೋ, ನನ್ನ ಈ ಗುಪ್ತಸ್ಥಳದ ಜನರೆಲ್ಲರೂ ನಿಮ್ಮ ಸಹಾಯಕರೆಂದು ತಿಳಿಯಿರಿ. ಅನುಭವವಿಲ್ಲದ ನಮಗೆ ನಿಮ್ಮ ಅನುಭವ ಪ್ರಯೋಜನವಾಗಲಿ! ಖಾನಸಾಹೇಬ, ನೀವು ನಮ್ಮ ರಾಯರ ಬೆನ್ನುಬಿದ್ದ ವೀರರೆಂಬ ಮಾತು ನಮ್ಮ ಸ್ಮರಣದಲ್ಲಿ ಚೆನ್ನಾಗಿ ಇರುತ್ತದೆ. ದುರ್ದೈವದಿಂದ ನಮ್ಮ ಜಂಬುಕೇಶ್ವರ ರಾಯರಿಂದಾಗದ ಕಾರ್ಯವನ್ನು ಶ್ರೀ ವಿರೂಪಾಕ್ಷನು ಅವನ ಸೇವಕರಿಂದ ಮಾಡಿಸಬಹುದು. ನೀವು ನಿಶ್ಚಿಂತೆಯಿಂದ ನಮ್ಮ ಬಳಿಯಲ್ಲಿ ಇರಬೇಕು. ನಾನು ಬದುಕಿರುವವರೆಗೆ ನಿಮ್ಮ ಕೂದಲು ಕೊಂಕಗೊಡಲಿಕ್ಕಿಲ್ಲ. ಇದಕ್ಕೆ ಶ್ರೀ ವಿರೂಪಾಕ್ಷನೇ ಸಾಕ್ಷಿಯು!

ಕೆಚ್ಚೆದೆಯ ಹೆಗ್ಗನ ಈ ಪೌರುಷದ ಹಿತದ ಮಾತುಗಳು ಈಶ್ವರೇಚ್ಛೆಯಿಂದ ಬಹಾಉದ್ದೀನನಿಗೆ ವ್ಯರ್ಥವಾಗಿ ತೋರಿದವು. ಈಶ್ವರೇಚ್ಛೆಯಿಂದ ವಿಷವು ಅಮೃತವೂ, ಅಮೃತವು ವಿಷವೂ ಆಗುತ್ತದೆಂಬ ಕಾಲಿದಾಸಕವಿಯ ಉಕ್ತಿಯು ವ್ಯರ್ಥವಾದದ್ದಲ್ಲ. ಹೆಗ್ಗನ ಅಮೃತೋಪಮಾನವಾದ ಮಾತುಗಳು ಬಹಾಉದ್ದೀನನಿಗೆ ವಿಷಪ್ರಾಯವಾಗಿ ತೋರಿದವು. ಅಲ್ಪಬಲದ ಹೆಗ್ಗನ ಆಟವು ತನ್ನ ಕಕ್ಕನ ಮುಂದೆ ಎಷ್ಟು ಮಾತ್ರವೂ ನಡೆಯದೆಂದು ಆತನು ಭಾವಿಸಿದನು. ಆತನಿಗೆ ಹೆಗ್ಗನಿಗಿಂತ ದ್ವಾರಸಮುದ್ರದ ಅರಸನು ಬಲಿಷ್ಠನಾಗಿ ತೋರಿದ್ದು ಆಶ್ಚರ್ಯವಲ್ಲ; ಮೇಲಾಗಿ ಆ ಬಲ್ಲಾಳರಾಜನು ಪ್ರಸಂಗದಲ್ಲಿ ತನ್ನ ವಿಶ್ವಾಸಘಾತ ಮಾಡಲಾರ ನೆಂತಲೂ ಆತನು ಭಾವಿಸಿದನು. ಇದಲ್ಲದೆ ಹೆಗ್ಗನು ಅನುಭವವಿಲ್ಲದ ತರುಣವೀರನಿದ್ದು, ಆತನಲ್ಲಿ ಹೇರಳ ದ್ರವ್ಯವೂ, ವಿಪುಲ ಸೈನ್ಯವೂ ಇಲ್ಲದ್ದರಿಂದ ಇಂಥವನು ಬಲಿಷ್ಠನಾದ ತನ್ನ ಕಕ್ಕನಿಗೆ ಎದುರಾಗುವ ಬಗೆ ಹ್ಯಾಗೆಂಬ ಶಂಕೆಯು ಆತನಲ್ಲಿ ಉತ್ಪನ್ನವಾಯಿತು. ಹೀಗೆ ಹೆಗ್ಗನ ಸಹಾಯದ ವಿಷಯವಾಗಿ ಶಂಕಿಸುತ್ತ ಸುಮ್ಮನೆ ವಿಚಾರಮಾಡುತ್ತ ಕುಳಿತಿದ್ದ ಬಹಾಉದ್ದೀನನು, ಸ್ವಲ್ಪ ಹೊತ್ತಿನಮೇಲೆ ಹೆಗ್ಗನನ್ನು ಕುರಿತು– "ಪ್ರಿಯದೋಸ್ತ ಹೆಗ್ಗಣ್ಣಾ, ನನ್ನ ಮೇಲೆ ನಿಮ್ಮ ಅಗಣಿತ ಉಪಕಾರವಾಗಿರುವದು. ಈ ವರೆಗೆ ನಿಮ್ಮ ಆಶ್ರಯದ ಬಲದಿಂದಲೇ ನಾನು ಈ ಆನೆಗುಂದಿಗೆ ಬರುತ್ತಿರುತ್ತೇನೆ. ಪ್ರತ್ಯಕ್ಷ ನಮ್ಮ ಕಕ್ಕನು ನನ್ನನ್ನು ಕೊಲ್ಲಲು ಯತ್ನಿಸುವಾಗ, ಪರಧರ್ಮದವರಾದ ನೀವು ನನ್ನನ್ನು ರಕ್ಷಿಸಲು ಪ್ರತಿಜ್ಞೆ ಮಾಡುವದು ವಿಲಕ್ಷಣವಲ್ಲವೆ? ಶರಣಾಗತ ರಕ್ಷಕರೆಂಬ ಘನತರವಾದ ಬಿರುದನ್ನು ಕಾಯ್ದುಕೊಳ್ಳುವಾಗ, ತಮ್ಮನ್ನೇ ಮರೆತುಬಿಡುವ ನಿಮ್ಮ ಪರಮ ಪವಿತ್ರವಾದ ಕ್ಷಾತ್ರಧರ್ಮವು ಧನ್ಯವಾದದ್ದು. ನಿಮ್ಮ ಪೂಜ್ಯ ಜಂಬುಕೇಶ್ವರರಾಯರು ಶರಣಾಗತನಾದ ನನ್ನ ಸಲುವಾಗಿ ತಮ್ಮ ಸರ್ವಸ್ವವನ್ನೇ ಏಕೆ, ತಮ್ಮ ಆತ್ಮವನ್ನು ಅರ್ಪಿಸಲಿಕ್ಕೆ ಸಹ ಹಿಂದೆ ಮುಂದೆ ನೋಡಲಿಲ್ಲ! ಅವರ ಈ ಕೀರ್ತಿಯು ಅಜರಾಮರವಾಗುವಲ್ಲಿ ಸಂಶಯವಿಲ್ಲ. ಈಗಲೂ ನೀವು ನಿಮ್ಮ ಆ ಸ್ವಾಮಿಯ ಮೇಲಿನ ಅಭಿಮಾನದಿಂದ ನನ್ನನ್ನು ಬೆನ್ನಿಗೆ ಕಟ್ಟಿಕೊಳ್ಳಲು ಆತುರಪಡುವದಕ್ಕಾಗಿ ನಾನು ಅತ್ಯಂತ ಕೃತಜ್ಞನಾಗಿರುವೆನು. ಆದರೆ ನಿಮ್ಮದೇ ನಿಮಗೆ ಎತ್ತಲಾರದಾಗಿರುವಾಗ ನನ್ನ ಭಾರವನ್ನು ನಿಮ್ಮ ಮೇಲೆ ಹಾಕಲಾರೆನು. ನನ್ನ ಕಕ್ಕನು ನನ್ನನ್ನು ಹಿಡಿಯುವದಕ್ಕಾಗಿ ದಿಲ್‌ಖುಷ್‌ಖಾನನನ್ನು ನಿಯಮಿಸಿರುವನು. ಆ ಖಾನನು ಆನೆಗುಂದಿಯ

ಪ್ರತಿನಿಧಿಯಾದ ದುಷ್ಟ ಕಾಸಿಮಖಾನನ ಸಹಾಯದಿಂದ ನನ್ನನ್ನು ಹಿಡಿಯಲು ವಿಶ್ವಪ್ರಯತ್ನ ಮಾಡುವಲ್ಲಿ ಸಂಶಯವಿಲ್ಲ. ಇಂಥ ಬಲಾಢ್ಯರಾದ ಇಬ್ಬರು ಖಾನನ ಮುಂದೆ ನಿಲ್ಲುವ ದುರ್ಧರ ಪ್ರಸಂಗವನ್ನು, ಈಗೀಗ ತಲೆಯೆತ್ತುತ್ತಿರುವ ನಿಮಗೆ ನಾನು ತಂದುಕೊಡುವದು ಧರ್ಮವಲ್ಲ. ಇಲ್ಲಿಂದ ದೂರದಲ್ಲಿರುವ ದ್ವಾರಸಮುದ್ರದ ಅರಸನ ಆಶ್ರಯಕ್ಕೇ ನಾನು ಹೋಗುವೆನು. ಅಂಥ ಪ್ರಸಂಗ ಒದಗಿದಲ್ಲಿ ನಿಮ್ಮ ಕೊರಳಿಗೆ ನಾನು ಬೀಳತಕ್ಕವನೇ ಸರಿ. ಎಲ್ಲಿದ್ದರೂ ನನ್ನ ಯೋಗಕ್ಷೇಮವನ್ನು ನೀವು ವಿಚಾರಿಸುತ್ತಿರಬೇಕು. ಸದ್ಯಕ್ಕೆ ನಾನು ದ್ವಾರಸಮುದ್ರಕ್ಕೆ ಹೋಗುವೆನೆಂಬದನ್ನು ನಿಮಗೆ ತಿಳಿಸುವದಕ್ಕಾಗಿ ನಾನು ಬಂದಿರುತ್ತೇನೆ. ಇಂದೇ ನಾನು ವೇಷಾಂತರದಿಂದ ದ್ವಾರಸಮುದ್ರಕ್ಕೆ ತೆರಳುವೆನು. ಪ್ರಿಯದೋಸ್ತ ಹೆಗ್ಗಣ್ಣ, ನಿರ್ಮಲಾಂತಃಕರಣದ ನಿಮ್ಮನ್ನು ಬಿಟ್ಟು ಹೋಗಲಾರದೆ ನನ್ನ ಮನಸ್ಸು ತಲ್ಲಣಿಸುತ್ತದೆ; ಆದರೆ ಮಾಡಬೇಕೇನು? ದುರ್ದೈವಿಯಾದ ನನ್ನ ಸಂರಕ್ಷಣದ ದೊಡ್ಡ ಭಾರವನ್ನು ನಿಮ್ಮ ಮೇಲೆ ಹೊರಿಸಲಿಕ್ಕೆ ನಾನು ಸರ್ವಥಾ ಇಚ್ಛಿಸುವದಿಲ್ಲ. ಮೇಲಾಗಿ ಇಲ್ಲಿ ಇದ್ದರೆ ನನ್ನ ಸಂರಕ್ಷಣವಾದೀತೆಂದು ನನ್ನ ಮನಸ್ಸಿಗೆ ತೋರಲೊಲ್ಲದು; ಆದ್ದರಿಂದ ನಾನು ಹೋಗಿಬರುವೆನು. ನಮ್ಮ ಕಕ್ಕನ ದುಷ್ಟ ಪರಿವಾರವು ನಿಮಗೆ ಯಾವ ಕಾಲಕ್ಕೆ ಏನು ಮಾಡೀತೆಂಬದನ್ನು ನಾನು ಹೇಳಲಾರೆನು. ನಿಮ್ಮ ಈ ಗುಪ್ತಸ್ಥಳದ ಗೊತ್ತು ಅವರಿಗೆ ಹತ್ತಿದಹಾಗೆ ತೋರುತ್ತದೆ. ನೀವು ಹಿಂದಕ್ಕೆ ದೇವರಾಯನ ಮಗಳಾದ ಪದ್ಮಿನೀದೇವಿಯನ್ನು ಕಾಸಿಮನ ಜನರ ಕೈಯಿಂದ ಬಿಡಿಸಿದ್ದಿರಷ್ಟೇ? ಆದರೆ ಈಗ ಆ ದುಷ್ಟ ಕಾಸಿಮನು ಪದ್ಮಿನಿಯ ಹರಣಕ್ಕಾಗಿ ಗುಪ್ತಕಾರಸ್ಥಾನವನ್ನು ನಡೆಸಿರುವನು. ಅದರ ಸಂಬಂಧದ ನಿಜವಾದ ಸುದ್ದಿಯನ್ನು ನನ್ನ ಪರಮಮಿತ್ರನಾದ ಬಖತ್ಯಾರನು ನಿಮಗೆ ತಿಳಿಸಬಹುದು. ಆತನನ್ನು ಆ ಅಬಲೆಯ ವಿಪನ್ನಾವರಣದ ಸಲುವಾಗಿ ನಿಮಗೆ ಸಹಾಯ ಮಾಡಬೇಕೆಂತಲೇ ನಾನು ಇಲ್ಲಿ ಬಿಟ್ಟುಹೋಗುವೆನು! ಈಗ ಬಖತ್ಯಾರನು ಕಾಸಿಮನ ನಂಬಿಗೆಯವನಾಗಿ ಅವನ ಬಳಿಯಲ್ಲಿ ವಾಸಿಸುತ್ತಿರುವನು. ಇದಕ್ಕೂ ಹೆಚ್ಚಿನ ಯಾವ ಸಂಗತಿಯನ್ನೂ ಈಗ ನಾನು ನಿಮ್ಮ ಮುಂದೆ ಹೇಳುವದಿಲ್ಲ. ಇನ್ನು ನನಗೆ ಹೋಗಲಪ್ಪಣೆಕೊಡಿರಿ, ಎಂದಿನಂತೆ ನನ್ನ ಮೇಲೆ ನಿಮ್ಮ ಸಂಪೂರ್ಣ ಲೋಭವಿರಬೇಕು.''

ಬಹಾಉದ್ದೀನನ ಈ ಮಾತುಗಳನ್ನು ಕೇಳಿ ಹೆಗ್ಗನು ವಿಚಾರಮಗ್ನನಾದನು. ರಾವಣನ ಸಂಹಾರದ ವಿಷಯದಲ್ಲಿ ವಿಭೀಷಣನಿಂದ ಶ್ರೀರಾಮನಿಗೆ ಸಹಾಯವಾದಂತೆ, ಮಹಮ್ಮದ ತಘಲಕನ ಸ್ವಜನನೆನಿಸುವ ಬಹಾಉದ್ದೀನನ ಆಲೋಚನೆಯಿಂದ ತನ್ನ ಕಾರ್ಯಕ್ಕೆ ಸಹಾಯವಾದೀತೆಂದು ಹೆಗ್ಗನು ಭಾವಿಸಿದ್ದನು. ಆದರೆ ಹೀಗೆ ಹೆಗ್ಗನು ಬಹಾಉದ್ದೀನನನ್ನು ಪ್ರೀತಿಸಲಿಕ್ಕೆ ಕೇವಲ ಸ್ವಾರ್ಥವೇ ಕಾರಣವೆಂದು ಮಾತ್ರ ವಾಚಕರು ಊಹಿಸಲಾಗದು. ಬಹಾಉದ್ದೀನನ್ನು ಆತನು ಸ್ವಾಭಾವಿಕವಾಗಿಯೇ ಮನಮುಟ್ಟಿ ಪ್ರೀತಿಸುತ್ತಿದ್ದನು. ಆ ಸದ್ಗುಣಿಯಾದ ಯುವಕನಿಗೆ ಸಹಾಯಮಾಡಬೇಕೆಂದು ಕಗ್ಗ ಕುರುಬನೆನಿಸಿಕೊಳ್ಳುವ ಹೆಗ್ಗನು ಮನಃಪೂರ್ವಕವಾಗಿ ಬಯಸುತ್ತಿದ್ದನು. ಆದರೆ ಬಹಾಉದ್ದೀನನು— ''ಇಲ್ಲಿ ಇದ್ದರೆ ನನ್ನ ಸಂರಕ್ಷಣವಾದೀತೆನ್ನುವ ಹಾಗೆ ತೋರುವದಿಲ್ಲ''ಂದು ನುಡಿದದ್ದರಿಂದ ಹೆಗ್ಗನು ಹೆಚ್ಚಿಗೆ ಏನೂ ಹೇಳಲಾರದೆ, ಬಹಾಉದ್ದೀ

ಮುಖದಿಂದ ಪಕ್ಕನೆ ಹೊರಬಿದ್ದ ಉದಾತ್ತ ವಿಚಾರದ ಮಾತುಗಳು ಈಗ ಆತನಿಗೆ ಪ್ರತ್ಯಕ್ಷವಾದಂತಾದವು. ಕಾಸಿಮನ ಈ ದುರಾಲೋಚನೆಯನ್ನು ನಾನು ಯಾವಾಗ ನಿಷ್ಫಲ ಮಾಡೇನೆನ್ನುವ ಹಾಗೆ ಆತನಿಗಾಯಿತು. ಆದರೂ ಆ ಸುಜನನು ಬಹಾಉದ್ದೀನನನ್ನು ಸುರಕ್ಷಿತವಾಗಿ ದ್ವಾರಸಮುದ್ರಕ್ಕೆ ಮುಟ್ಟಿಸುವ ವಿಷಯವಾಗಿ ಉದಾಸೀನನಾಗಲಿಲ್ಲ. ತಾನೇ ದ್ವಾರಸಮುದ್ರವರೆಗೆ ಹೋಗಿ ತನ್ನ ಆ ಯವನಮಿತ್ರನನ್ನು ಕಳಿಸಿಬರಬೇಕೆಂದು ಆತನು ಆಲೋಚಿಸಿದನು. ಆಗ ನಮ್ಮ ದೊಡ್ಡಮನಸ್ಸಿನ ಹೆಗ್ಗಣ್ಣನು ಬಹಾಉದ್ದೀನನ್ನು ಕುರಿತು— ''ಖಾನಸಾಹೇಬ, ಆಗಲಿ, ತಮ್ಮ ಇಚ್ಛೆಯಂತೆಯೇ ಆಗಲಿ. ತಾವು ದ್ವಾರಸಮುದ್ರಕ್ಕೆ ಅವಶ್ಯವಾಗಿ ಹೋಗಬಹುದು. ಯಾವ ರೀತಿಯಿಂದಾದರೂ ತಮ್ಮ ಹಿತವಾದರಾಯಿತು. ಇಂದೇ ರಾತ್ರಿ ತಾವು ದ್ವಾರಸಮುದ್ರಕ್ಕೆ ಹೊರಡಬಹುದು. ನಾನು ನಿಯಮಿತ ಪರಿವಾರದೊಡನೆ ನಿಮ್ಮೊಡನೆ ಬರುವೆನು. ಹ್ಯಾಗೂ ನಾನು ದ್ವಾರಸಮುದ್ರದ ರಾಜನನ್ನು ಒಮ್ಮೆ ಕಾಣಬೇಕಾಗಿದೆ, ಇದೊಂದು ನೆವವಾಯಿತು. ಖಾನಸಾಹೇಬ, ನೀವು ಪದ್ಮಿನೀ ದೇವಿಯವರ ವಿಷಯದ ಸುದ್ದಿಯನ್ನು ಹೇಳಿದಾಗಿನಿಂದ ನನ್ನ ಮನಸ್ಸಿಗೆ ಬಹಳ ಅಸಮಾಧಾನವಾಗಿದೆ. ದುಷ್ಟ ಕಾಸಿಮನ ವಿಷಯವಾಗಿ ನನ್ನ ಮನಸ್ಸು ಸಂತಾಪಗೊಳ್ಳುವದು; ಆದರೆ ಬರಿಯ ಸಂತಾಪಪಡುವದರಿಂದ ಪ್ರಯೋಜನವೇನಾಗುವದು? ಇರಲಿ, ದೊಡ್ಡಮನಸ್ಸಿನಿಂದ ನೀವು ಹ್ಯಾಗೂ ನಿಮ್ಮ ಮಿತ್ರನಾದ ಬಖತ್ಯಾರನನ್ನು ಇಲ್ಲಿ ಬಿಟ್ಟುಹೋಗಿರುವಿರಿ. ನಮ್ಮ ಹಿಂದೂ ಸ್ತ್ರೀಯರ ಮಾನರಕ್ಷಣಕ್ಕಾಗಿ ನೀವು ಯತ್ನಿಸುವದನ್ನು ನೋಡಿ ನನಗೆ ಬಹಳ ಸಮಾಧಾನವಾಗುತ್ತದೆ. ಇದೊಂದು ನಮ್ಮ ಮೇಲೆ ನಿಮ್ಮ ಉಪಕಾರವೇ ಆಯಿತೆಂದು ನಾನು ತಿಳಿಯುವೆನು. ಇರಲಿ, ಶ್ರೀ ವಿರೂಪಾಕ್ಷನ ಇಚ್ಛೆಯಿದ್ದಂತಾಗಲಿ. ನಮ್ಮ ಕೈಯಲ್ಲೇನಿದೆ? ಯತ್ನ ಮಾಡುವಷ್ಟು ನಮ್ಮ ಕೆಲಸವು, ಫಲಪ್ರಾಪ್ತಿಯು ಈಶ್ವರಾಧೀನವು. ಏಳಿರಿ, ಬೇಗನೆ ಹೊರಡುವ ಸಿದ್ಧತೆ ಮಾಡೋಣ'' ಎಂದು ಮೇಲಕ್ಕೇಳಲು ಮಲ್ಲಸರ್ಜನನು ಹೆಗ್ಗನನ್ನು ತಡೆದು, ''ಇಂಥ ಸಾಹಸಕ್ಕೆ ನೀವು ಹೋಗತಕ್ಕದ್ದಲ್ಲ. ಖಾನಸಾಹೇಬರನ್ನು ದ್ವಾರಸಮುದ್ರಕ್ಕೆ ಮುಟ್ಟಿಸುವ ಜವಾಬದಾರಿಯು ನನ್ನ ಕಡೆಗೆ; ನಾನು ಬರುವನತಕ ತಾವು ಸ್ವಸ್ಥವಾಗಿ ಮನೆಯಲ್ಲಿರಬೇಕು'' ಎಂದು ಹೇಳಿ, ಆಗ್ರಹದಿಂದ ಆತನು ಬಹಾಉದ್ದೀನನನ್ನು ಕಳಿಸುವ ಸಿದ್ಧತೆಯಲ್ಲಿ ತೊಡಗಿದನು.

# ಶುಭೋದಯ

ಮಲ್ಲಸರ್ಜನನು ತನ್ನ ನಾಲ್ಕು ಜನ ಅನುಯಾಯಿಗಳೊಡನೆ ಫಕೀರರ ವೇಷದಿಂದ ಬಹಾಉದ್ದೀನನಿದ್ದಲ್ಲಿಗೆ ಬಂದನು. ಆ ವೇಷಧಾರಿಗಳು ಅನುವು ದೊರೆತಲ್ಲಿ ಶಸ್ತ್ರಗಳನ್ನು ಗುಪ್ತವಾಗಿ ಇರಿಸಿಕೊಂಡಿದ್ದರು. ಬಹಾಉದ್ದೀನನಂತೂ ಸರ್ವಸನ್ನಾಹದಿಂದ ಸಿದ್ಧವಾಗಿಯೇ ಇದ್ದನು. ಬೆಳಗು ನಾಲ್ಕುತಾಸು ಇರುತ್ತ ಅವರು ತಮ್ಮ ಗುಪ್ತಸ್ಥಳದಿಂದ ಹೊರಬಿದ್ದರು. ಹೆಗ್ಗನು ಎರಡು ಕಾವಲಿನ ಸ್ಥಳಗಳನ್ನು ದಾಟಿ ಅವರನ್ನು ಕಳಿಸಲಿಕ್ಕೆ ಬಂದಿದ್ದನು. ಆಗ ಬಹಾಉದ್ದೀನನು ವಿನಯದಿಂದ ಹೆಗ್ಗನಿಗೆ ಸಲಾಮು ಮಾಡಿ— ''ದೋಸ್ತಸಾಹೇಬ, ಇನ್ನು ನೀವು ನಿಂತುಕೊಳ್ಳಿರಿ. ನಿಮ್ಮ ಅಂತಃಕರಣ ದಿಂದಲೂ, ಅಲ್ಲಾನ ಕೃಪೆಯಿಂದಲೂ ನಾವು ಸುರಕ್ಷಿತವಾಗಿ ದ್ವಾರಸಮುದ್ರಕ್ಕೆ ಮುಟ್ಟುವೆವು. ಮಲ್ಲಸರ್ಜನನು ನಮ್ಮ ಬೆಂಬಲವಾಗಿ ಬಂದಿರುವದರಿಂದ ನೀವು ನಿಶ್ಚಿಂತೆ ಯಿಂದ ಹೋಗಬೇಕು. ಪುನಃ ನಿಮ್ಮ ದರ್ಶನದ ಯೋಗವನ್ನು ಬೇಗನೆ ಅಲ್ಲಾನು ತಂದುಕೊಡಲಿ! ನಿಮ್ಮ ಮುಖಾಂತರವಾಗಿ ನಿಮ್ಮ ಹಿಂದೂ ರಾಜ್ಯದ ಪುನರ್ಘಟನೆಯಾಗುವ ಲಕ್ಷಣವು ನನಗೆ ಸ್ಪಷ್ಟವಾಗಿ ತೋರುತ್ತಿರುವದು. ಧರ್ಮವಿದ್ದಲ್ಲಿ ಜಯವಿರುವದು. ಧರ್ಮಿಷ್ಟರಾದ ನೀವು ಸದಾ ಜಯಶಾಲಿಗಳಾಗಿರೆಂದು ನಾನು ಹರಸುವೆನು'' ಎಂದು ಹೇಳುತ್ತ, ಹಸ್ತಾಂದೋಲನಪೂರ್ವಕವಾಗಿ ಹೆಗ್ಗನಿಗೆ ಸಲಾಮು ಮಾಡಿ ಹೊರಟನು. ಮಲ್ಲಸರ್ಜನನೂ ಅವನ ಅನುಯಾಯಿಗಳೂ ವಿನಯದಿಂದ ಹೆಗ್ಗನನ್ನು ವಂದಿಸಿದರು. ಆಗ ಹೆಗ್ಗನು ಮಲ್ಲಸರ್ಜನನಿಗೆ– ''ಗೆಳೆಯಾ, ಖಾನಸಾಹೇಬರನ್ನು ಜೋಕೆ. ನಾನೇ ಅವರನ್ನು ಕಳಿಸಲಿಕ್ಕೆ ಹೋಗತಕ್ಕದ್ದು; ಆದರೆ ವಿಪತ್ತಿಗೀಡಾದವರನ್ನು ರಕ್ಷಿಸುವಲ್ಲಿ ನಿನ್ನ ಯೋಗ್ಯತೆಯು ನನಗಿಂತಲೂ ಹೆಚ್ಚಿನದೆಂಬದನ್ನು, ನನ್ನ ವಿಪತ್ತು ದೂರಮಾಡಿ ನೀನು ಸಿದ್ಧ ಮಾಡಿದವನಾದ್ದರಿಂದ ಈಗ ಖಾನಸಾಹೇಬರ ಅಂಗರಕ್ಷಣದ ಪವಿತ್ರ ಕರ್ತವ್ಯವನ್ನು ನಿನಗೆ ಒಪ್ಪಿಸಿದ್ದೇನೆ. ನೀನೂ ನಿನ್ನ ಅನುಯಾಯಿಗಳೂ ಅತ್ಯಂತ ಸ್ವಾಭಿಮಾನಿಗಳು, ಸ್ವಜನ ಹಿತ ಸಾಧನತತ್ಪರರು; ಕೈಕೊಂಡ ಕಾರ್ಯವನ್ನು ಸಾಧಿಸುವಾಗ ಜೀವದ ಆಸೆಯನ್ನು ಕೂಡ ಇಡದವರು. ಆದರೂ ಕ್ರೂರ ತಘಲಕನ ದಂಡಾಳುಗಳ ವಿಷಯವಾಗಿ ಬಹು ಜಾಗರೂಕವಾಗಿರತಕ್ಕದ್ದು. ಖಾನಸಾಹೇಬರನ್ನು ಹಿಡಿಯುವದಕ್ಕಾಗಿ ಅವರು ನಾಲ್ಕೂ ಕಡೆಯಲ್ಲಿ ತಿರುಗುತ್ತಿರುವರು. ವಿಶೇಷವಾಗಿ ಆನೆಗುಂದಿಯ ಸೀಮೆಯನ್ನು ದಾಟುವತನಕ ನೀವು ಬಹು ಜಾಗರೂಕತೆಯಿಂದ ನಡೆದುಕೊಳ್ಳಿರಿ'' ಎಂದು ಹೇಳಿ ಹಿಂದಕ್ಕೆ ತಿರುಗಿದನು. ಮಲ್ಲಸರ್ಜನನೂ, ಅವನ ಅನುಯಾಯಿಗಳೂ ವಿನಯದಿಂದ ಹೆಗ್ಗನನ್ನು ವಂದಿಸಿ ಬೇಗ ಬೇಗನೆ ಮಾರ್ಗ ಕ್ರಮಿಸಹತ್ತಿದರು.

ಇತ್ತ ಹೆಗ್ಗನು ತನ್ನ ಸೇವಕರನ್ನು ಅನುಸರಿಸಿ ತನ್ನ ಬಿಡಾರದ ಕಡೆಗೆ ಸಾಗಿದನು. ಆತನ ಮನಸ್ಸಿನಲ್ಲಿ ಹಲವು ವಿಚಾರದ ತರಂಗಗಳು ಉತ್ಪನ್ನವಾಗಿದ್ದವು. ನಮ್ಮ ಜನರು ಬಹಾಉದ್ದೀ ನನನ್ನು ಕಳಿಸಿ ಹ್ಯಾಗೆ ಸುರಕ್ಷಿತವಾಗಿ ಬಂದಾರು; ಬಹಾಉದ್ದೀನನು ಹ್ಯಾಗೆ ಸುರಕ್ಷಿತವಾಗಿ ಮುಟ್ಟಿಯಾನು, ಸ್ವರಾಜ್ಯಸ್ಥಾಪನೆಯ ಕಾರ್ಯವು ನನ್ನಿಂದ ಹ್ಯಾಗೆ ಕೊನೆಗಂಡೀತು? ಎಂದು

ಆತನು ಚಿಂತಿಸತೊಡಗಿದನು. ಮುಸಲ್ಮಾನರ ಶೌರ್ಯ ಸಾಹಸಗಳು, ಅವರ ಕ್ರೂರತನ, ತನ್ನ ಹಿಂದೂಜನರ ದೈನ್ಯಾವಸ್ಥೆ, ಅವರ ಪರಸ್ಪರ ವೈಮನಸ್ಸು, ಸ್ವಾರ್ಥಪರಾಯಣತೆ, ತಮ್ಮ ಅರಸರ ಅಂತಃಕಲಹ, ಕನ್ನಡಿಗರ ಅಭಿಮಾನಶೂನ್ಯತೆ ಮುಂತಾದವುಗಳ ಸ್ಮರಣವಾಗಿ, ತನ್ನ ಸ್ವರಾಜ್ಯಸ್ಥಾಪನೆಯ ಮಾರ್ಗವು ಅತ್ಯಂತ ಕಂಟಕಮಯವಾದದ್ದೆಂತಲೂ, ಭಯಪ್ರದ ವಾದದ್ದೆಂತಲೂ ಆತನು ಭಾವಿಸಿದನು. ಈ ಭಾವನೆಯಿಂದ ಅವನ ಮನಸ್ಸು ಅತ್ಯಂತ ಉದಾಸವಾಗಿ, ಅದರಲ್ಲಿ ನಿರಾಶೆಯ ಅಂಕುರವು ಮೊಳೆದೋರಿ ಆ ಅಂಕುರವು ಭರದಿಂದ ಬೆಳೆಯಹತ್ತಿತು. ಮಹಾಕಾರ್ಯಕ್ಕೆ ಕೈ ಹಾಕಿದ ಮಹಾಪುರುಷರ ಮನಸ್ಸಾದರೂ ಒಮ್ಮೊಮ್ಮೆ ಪ್ರತಿಕೂಲ ಸಂಗತಿಗಳಿಂದ ಹೀಗೆ ಕುಗ್ಗುವದುಂಟು. ಹೇರಳ ದ್ರವ್ಯವಿಲ್ಲ, ವಿಪುಲ ಜನಸಹಾಯ ವಿಲ್ಲ, ಯೋಗ್ಯ ಮಾರ್ಗದರ್ಶಕರಿಲ್ಲ, ಇದ್ದ ಒಬ್ಬ ಬಹಾಉದ್ದೀನನೂ ಹೊರಟುಹೋಗಿಬಿಟ್ಟನು. ಅವನನ್ನು ಕಳಿಸಹೋದ ಮಲ್ಲಸರ್ಜನನೇ ಮೊದಲಾದ ನಂಬಿಗೆಯ ಶೂರಜನರು ಕ್ಷಣದಲ್ಲಿ ನಾಶವಾಗುವ ಸಂಭವ . ಇವೇ ಮೊದಲಾದ ಪ್ರತಿಕೂಲ ಸಂಗತಿಗಳು ಮನಸ್ಸಿನಲ್ಲಿ ಬಂದು ಹೆಗ್ಗನ ಉತ್ಸಾಹವು ಕುಗ್ಗಿತು. ಅವನು ತನ್ನ ವಾಸಸ್ಥಳಕ್ಕೆ ಹೋಗಿ ಸುಮ್ಮನೆ ಹಾಸಿಗೆಯಮೇಲೆ ಬಿದ್ದುಕೊಂಡನು. ಏನು ಮಾಡಿದರೂ ಆತನ ವಿಚಾರದ ತರಂಗಗಳು ಕಡಿಮೆಯಾಗಲೊಲ್ಲವು. ಅವನು ಒಮ್ಮೆ ಹಾಸಿಗೆಯ ಮೇಲೆ ಎದ್ದುಕೂಡ್ರುವನು – ಒಮ್ಮೆ ಮಲಗುವನು, ನಿರಾಶೆಯಿಂದ ಒಮ್ಮೆ ಉಸುರ್ಗರೆಯುವನು, ಒಮ್ಮೆ ಸಂತಾಪದಿಂದ ಅವಡುಗಚ್ಚುವನು, ಕಡೆಗೆ ನಿದ್ದೆ ಹತ್ತಿದರೆ ಸ್ವಲ್ಪ ಸಮಾಧಾನವಾದೀತೆಂದು, ಕಣ್ಣು ಮುಚ್ಚಿಕೊಂಡು ಹಾಸಿಗೆಯ ಮೇಲೆ ಕೆಲವು ಹೊತ್ತು ಸುಮ್ಮನೆ ಮಲಗಿಕೊಂಡನು. ಆದರೆ ಚಿಂತಾತುರನಾದ ಆ ವೀರನಿಗೆ ನಿದ್ದೆಯು ಹ್ಯಾಗೆ ಬರಬೇಕು? ಏನು ಮಾಡಿದರೂ ನಿದ್ದೆಬಾರದ್ದರಿಂದ ಆತನು ಬೇಸತ್ತು ಶಯ್ಯಾಗೃಹದಿಂದ ಹೊರಗೆ ಬಂದನು. ಕೃಷ್ಣಪಕ್ಷವಾದದ್ದರಿಂದ ಹೊರಗೆ ಕತ್ತಲೆಯು ಮುಸುಕಿತ್ತು, ನಕ್ಷತ್ರಗಳು ಆಕಾಶದ ತುಂಬ ಪಳಪಳ ಹೊಳೆಯುತ್ತಿದ್ದವು. ಬೇಸಿಗೆಯ ತಂಗಾಳಿಯು ಸುಖಕರವಾಗಿ ಬೀಸುತ್ತಲಿತ್ತು, ಈ ಸ್ಥಿತಿಯಲ್ಲಿ ಹೆಗ್ಗನು ವಿಚಾರಮಗ್ನನಾಗಿ ಇತ್ತಿಂದತ್ತ ಅತ್ತಿಂದಿತ್ತ ತಿರುಗಾಡಹತ್ತಿದನು. ಅಷ್ಟರಲ್ಲಿ ದೂರ ಯಾರೋ ಹಾಡಿದಹಾಗೆ ಆತನಿಗೆ ಕೇಳಿಸಹತ್ತಲು, ಆತನು ಬೆರಗಾಗಿ ಕಿವಿಗೊಟ್ಟು ಕೇಳಹತ್ತಿದನು. ಆಗ ಬೆಳಗಿನ ಎರಡು ತಾಸು ರಾತ್ರಿ ಇರಬಹುದಾಗಿತ್ತು, ಇಂಥ ಹೊತ್ತಿನಲ್ಲಿ ಎಲ್ಲಿ ಎಂದೂ ಕೇಳದ ಗಾಯನ ಧ್ವನಿಯು ಇಂದು ಎಲ್ಲಿಂದ ಬಂತೆಂದು ಆತನು ಆಲೋಚಿಸತೊಡಗಿದನು. ಅದರಲ್ಲಿ ಸ್ತ್ರೀಯು ಗಾಯನ ಮಾಡುವದನ್ನು ಕೇಳಿಯಂತೂ ಆತನಿಗೆ ಪರಮಾಶ್ಚರ್ಯವಾಯಿತು. ಬೆಳಗುಮುಂಜಾವಿನ ಹೊತ್ತಾದ್ದರಿಂದ ಆ ಸ್ತ್ರೀಯು ಉದಯರಾಗ ಮಾಡಹತ್ತಿದ್ದಳು. ತನ್ನ ಗುಪ್ತ ಭಾವಣೆಯಲ್ಲಿ ಸ್ತ್ರೀಯರ ಸುಳಿವಿಲ್ಲದಿರುವಾಗ ಆ ಸ್ತ್ರೀಯು ಈ ನಿರ್ಮಾನುಷಾರಣ್ಯದಲ್ಲಿ ಎಲ್ಲಿಂದ ಬಂದಳೆಂದು ಆತನು ಆಶ್ಚರ್ಯಪಟ್ಟನು. ಅಷ್ಟರಲ್ಲಿ ಕಾವಲುಗಾರರು ''ಯಾರವರು ಹಾಡುವವರು'' ಎಂದು ಗಟ್ಟಿಯಾಗಿ ಕೂಗಹತ್ತಿದ್ದರು! ಆದರೆ ಅದಕ್ಕೆ ಪ್ರತ್ಯುತ್ತರವು ದೊರೆಯಲಿಲ್ಲ, ಯಾವಳೋ ಒಬ್ಬ ಸ್ತ್ರೀಯು ಜಗತ್ತಿನ ಹಂಗು ಇಲ್ಲದೆ ಎಲ್ಲಿಯೋ ಸ್ವಚ್ಛಂದದಿಂದ ಹಾಡುತ್ತ ಕುಳಿತುಕೊಂಡಂತೆ ಹೆಗ್ಗನಿಗೆ ಭಾಸವಾಯಿತು. ಆತನು ಈ ಸ್ತ್ರೀಯು ಯಾರೆಂಬದನ್ನು

ಪರೀಕ್ಷಿಸಿಯೇ ಬಿಡಬೇಕೆಂದು ನಿಶ್ಚಯಿಸಿ ಆತನು ಹಾಗೆಯೇ ಹೊರಟನು. ಆಗ ಅರುಣೋದಯ ವಾಗಿ ಕುಕೂಕೂ ಎಂದು ಕೋಳಿಗಳು ಕೂಗಹತ್ತಿದವು.

ಈ ಮೇರೆಗೆ ಹೆಗ್ಗನು ತಿರುಗಿ ಶಯ್ಯಾಗೃಹವನ್ನು ಪ್ರವೇಶಿಸದೆ ಆ ಗಾಯನಧ್ವನಿಯು ಕೇಳಬರುವ ದಿಕ್ಕಿನಕಡೆಗೆ ಭರದಿಂದ ಸಾಗಹತ್ತಲು ಸೇವಕನು— "ದೇವರೂ, ಚಾಕರಿಗೆ ಸೇವಕನು ಸಿದ್ಧನಿರುವನು" ಎಂದು ಕೈ ಜೋಡಿಸಿ ನುಡಿದನು. ಆಗ ಹೆಗ್ಗನು— "ನರಸಾ, ಈಗ ನಿನ್ನ ಅವಶ್ಯವಿಲ್ಲ, ಈಗ ನಾನು ಇಲ್ಲಿಯೇ ಹೋಗಿಬರುತ್ತೇನೆ" ಎಂದು ನುಡಿದು ಮುಂದಕ್ಕೆ ಸಾಗಿದನು. ಆದರೂ ಆ ಸ್ವಾಮಿನಿಷ್ಠ ಸೇವಕನು ಅಂಜುತ್ತಂಜುತ್ತ ಮೆಲ್ಲಮೆಲ್ಲನೆ ಒಡೆಯನನ್ನು ಹಿಂಬಾಲಿಸದೆ ಬಿಡಲಿಲ್ಲ.. ಹೆಗ್ಗನು ತನ್ನ ಸೇವಕನ ಕಡೆಗೆ ಹೊರಳಿ ಸಹ ನೋಡದೆ ಗಾಯಕಿಯು ಇದ್ದ ದಿಕ್ಕಿನ ಕಡೆಗೆ ವೇಗದಿಂದ ಸಾಗಿದ್ದನು. ಬೆಳ್ಳಗೆ ಬೆಳಗಾದರೂ ದಟ್ಟ ಗಿಡಗಳಲ್ಲಿ ಮಾರ್ಗವು ಸ್ವಚ್ಛವಾಗಿ ಕಾಣಲೊಲ್ಲದು. ಆದರೂ ಹೆಗ್ಗನು ಸುಳುವು ಹಿಡಿದು ಒಂದೇ ಸವನೆ ಮಾರ್ಗವನ್ನು ಕ್ರಮಿಸುತ್ತಿದ್ದನು. ಹೀಗೆ ಸುಮಾರು ಒಂದು ಮೈಲು ಹೋದಬಳಿಕ ಒಬ್ಬ ಸ್ತ್ರೀಯು ಒಂದು ಗುಹೆಯ ಮುಖದಲ್ಲಿ ಕುಳಿತು ಹಾಡುತ್ತಲಿದ್ದಳು. ಈ ನಿರ್ಜನಪ್ರದೇಶದಲ್ಲಿ ತನ್ನ ಗಾಯನ ಧ್ವನಿಯು ಅನ್ಯರ ಕಿವಿಗೆ ಬಿದ್ದೀತೆಂಬ ಕಲ್ಪನೆ ಸಹ ಆಕೆಗೆ ಇದ್ದಂತೆ ತೋರಲಿಲ್ಲ. ಆಕೆಯು ಹೆಗ್ಗನನ್ನು ನೋಡಿ ಪರಮಾಶ್ಚರ್ಯಪಟ್ಟವಳಂತೆ ತಟ್ಟನೆ ಎದ್ದುನಿಂತು ಆತನನ್ನು ಎವೆಯಿಕ್ಕದೆ ನೋಡಹತ್ತಿದಳು. ಆ ಸ್ತ್ರೀಯ ವಯಸ್ಸು ಇಪ್ಪತ್ತುವರ್ಷದ್ದಾಗಿರಬಹುದು. ಆಕೆಯು ಸ್ವಚ್ಛ ಬಿಳಿಯ ವಸ್ತ್ರವನ್ನುಟ್ಟು ಹಣೆಗೆ ಭಸ್ಮವನ್ನು ಹಚ್ಚಿದ್ದಳು. ಆಕೆಯ ಕೊರಳೊಳಗಿನ ರುದ್ರಾಕ್ಷಮಾಲೆ, ಕೈಯೊಳಗಿನ ಏಕತಾರಿ, ಇವು ಆಕೆಯ ಪಾರಮಾರ್ಥಿಕ ಒಲವನ್ನು ಸೂಚಿಸಿದ್ದವು. ಆಕೆಯು ಗುಹೆಯ ಮುಂದಿನ ಅಂಗಳವನ್ನು ಸ್ವಚ್ಛಮಾಡಿ ಉಡುಗಿ ಸಾರಿಸಿ ರಂಗವಲ್ಲಿಯನ್ನು ಹಾಕಿದ್ದಳು. ಪ್ರಾತಃಸ್ನಾನದಿಂದ ಆಕೆಯ ಸಾತ್ವಿಕ ಮುಖಕಾಂತಿಯು ಹೆಚ್ಚಿರಲು, ಅದರಿಂದ ಹೆಗ್ಗನ ಮನಸ್ಸಿನಲ್ಲಿ ಒಂದು ಬಗೆಯ ಪೂಜ್ಯಭಾವವು ಉತ್ಪನ್ನವಾಯಿತು. ತನ್ನ ಛಾವಣಿಯ ಇಷ್ಟು ಸಮೀಪದಲ್ಲಿ ಈ ಬಗೆಯ ಗುಹೆ ಇದ್ದದ್ದನ್ನು ಈ ಮೊದಲು ತಾನು ಎಂದೂ ನೋಡಿರಲಿಲ್ಲವಲ್ಲ. ಈ ತರುಣಿಯು ಇಂದು ಪಕ್ಕನೆ ಕಣ್ಣಿಗೆ ಬಿದ್ದದ್ದು ಆಶ್ಚರ್ಯವಲ್ಲವೆ? ಏಕಾಕಿಯಾದ ಸ್ತ್ರೀಯು ಹೀಗೆ ನಿರ್ಭಯದಿಂದ ಗಾಯನಮಾಡುತ್ತ ಕುಳಿತುಕೊಳ್ಳುವ ಸ್ಥಳವೆ ಇದು? ಛೇ ಛೇ! ಈಕೆಯ ರಕ್ಷಕರು ಯಾರಾದರೂ ಇಲ್ಲಿ ನಿಶ್ಚಯವಾಗಿ ಇರಲೇಬೇಕು. ಅದರಲ್ಲಿಯೂ ಈ ಪುಣ್ಯಾತ್ಮಳ ದಿವ್ಯ ಮುಖಕಾಂತಿಯಿಂದ ವಿಚಾರಿಸಲು, ಈಕೆಯ ರಕ್ಷಕನು ಯಾವನೊಬ್ಬ ಮಹಾತಪಸ್ವಿಯು ಇರಬೇಕೆಂದು ನನಗೆ ಭಾಸವಾಗುತ್ತದೆ. ಹಾಗಿದ್ದರೆ ನನ್ನ ಭಾಗ್ಯೋದಯವೇ ಆಯಿತೆಂದು ತಿಳಿಯುವೆನು. ಬಹಾಉದ್ದೀನನಂಥ ಒಬ್ಬ ಮಿತ್ರನ ಸಹಾಯವು ತಪ್ಪುವ ಸಂಧಿಯಲ್ಲಿ, ಒಬ್ಬ ತಪಸ್ವಿಯ ಸಮಾಗಮದ ಲಾಭವು ನನಗೆ ದೊರೆತರೆ ಅದೊಂದು ಶ್ರೀ ವಿರೂಪಾಕ್ಷನ ಕೃಪೆಯೆಂತಲೇ ಭಾವಿಸುವೆನು. ಶರಣಾಗತರಕ್ಷಕಾ, ದೀನಬಂಧೋ, ಪಂಪಾಪತೇ, ಹೀನ ದೀನ ಸ್ಥಿತಿಯ ಕರ್ನಾಟಕದ ವಿಷಯವಾಗಿ ನಿನ್ನಲ್ಲಿ ದಯವು ಉತ್ಪನ್ನವಾಯಿತೇ? ಅಥವಾ ಪಾಮರನಾದ ನನ್ನ ಮನೋವ್ಯಥೆಗೆ ಕನಿಕರಪಟ್ಟು ಪ್ರಭಾತಸಮಯದಲ್ಲಿ ಈ ಧಾರ್ಮಿಕ ತೇಜಸ್ಸಿನ ದರ್ಶನವನ್ನು ನನಗೆ ಮಾಡಿಸಿದೆಯಾ? ಕೇವಲ ನಮ್ಮ

ಬಳಿಯಲ್ಲಿದ್ದ ಈ ಅರಣ್ಯ ಪ್ರದೇಶದಲ್ಲಿ ಈ ಗುಹೆಯೆಲ್ಲಿತ್ತು? ಈ ಪುಣ್ಯಾತ್ಮಳಾದ ಸ್ತ್ರೀಯೆಲ್ಲಿದ್ದಳು? ಮಾಂತ್ರಿಕನ ಮಾಟದಂತೆ ಅಕಸ್ಮಾತ್ ಈ ಗುಹೆಯು ಪ್ರಕಟವಾಗಿರುವದಲ್ಲ! ಏನು, ಈ ಗುಹೆಯ ಸುತ್ತುಮುತ್ತಲಿನ ಪ್ರದೇಶವು ಗಿಡಗಂಟಿ ಕಡಿದು ಈಗೀಗ ಬಯಲು ಮಾಡಿದಂತೆ ತೋರುತ್ತದೆ? ಛೇ ಛೇ! ನನ್ನ ಮೇಲೆ ಪರಮಾನುಗ್ರಹ ಮಾಡುವದಕ್ಕಾಗಿ ಯಾವನೋ ಒಬ್ಬ ತಪೋಧನನು ಈ ಗುಪ್ತ ಗುಹೆಯನ್ನು ಬೈಲಿಗಿಟ್ಟು ಅದರಲ್ಲಿ ವಾಸಿಸಲಿಕ್ಕೆ ಬಂದಿರುವದು ನಿಶ್ಚಯವು! ಕರ್ನಾಟಕಾ, ಇಂಥಾ ತಪೋಧನರ ಪರಂಪರೆಯು ಇನ್ನೂ ನಿನ್ನಲ್ಲಿ ಕುಗ್ಗಿರುವದಿಲ್ಲ ಕಂಡೆಯಾ! ತ್ರಿಮತ ಸ್ಥಾಪಕರಾದ ಆಚಾರ್ಯತ್ರಯರ ಉತ್ಪತ್ತಿಸ್ಥಾನವು ನೀನೇ ಅಲ್ಲವೇ? ವೀರಶೈವ ಮತಪ್ರದರ್ಶಕನಾದ ಶ್ರೀಬಸವೇಶ್ವರನು ನಿನ್ನಲ್ಲಿಯೇ ಜನ್ಮವೆತ್ತಲಿಲ್ಲವೇ? ಪರಮ ಭಗವದ್ಭಕ್ತ ಶಿಖಾಮಣಿಯಾದ ಶ್ರೀ ಮಾರುತಿಯ ಜನ್ಮಸ್ಥಾನವಾದ ಅಂಜನಾದ್ರಿಯು ನಿನ್ನನ್ನು ಅಲಂಕರಿಸುತ್ತ ಇಗೋ ಇಲ್ಲಿಯೇ ಇರುತ್ತದೆ. ನೋಡು ಹೀಗೆ ಮಹಾ ಮಹಾ ತಪೋಧನರ, ಹಾಗು ಭಗವದ್ಭಕ್ತರ ಪರಂಪರೆಯು ಇರುವವರೆಗೆ ನಿನ್ನ ಪಾರಮಾರ್ಥಿಕ ಸೌಭಾಗ್ಯತಿಲಕವನ್ನಾದರೂ ಅಳಿಸುವದು ಅಶಕ್ಯವಲ್ಲವೇ! ಎಲ ಎಲಾ! ಏನು ವಿಚಿತ್ರವಿದು! ಈ ಸ್ತ್ರೀಯ ಪರಿಚಯವು ನನಗೆ ಮಸಮಸಕಾಗಿ ಹತ್ತಿದ ಹಾಗಾಗುತ್ತದಲ್ಲ, ಈಕೆಯ ದನಿಯ ಗುರುತು ಹತ್ತಿದಂತೆಯೂ ನನಗೆ ಭಾಸವಾಗುತ್ತದೆ. ಬರಿಯ ದನಿಯ ಗುರುತೇ ಏಕೆ, ಈಕೆಯು ಇದೇ ಈಗ ಅಂದ ಪದವನ್ನೇ ನಾನು ಈ ಮೊದಲೇ ಎಲ್ಲಿಯೋ ಕೇಳಿದಂತೆ ನೆನಪಿಗೆ ಬರುತ್ತದೆ.

ಈ ಮೇರೆಗೆ ಹೆಗ್ಗನು ಮನಸ್ಸಿನಲ್ಲಿ ಆಲೋಚಿಸುತ್ತ ದಿಗಿಲುಬಿದ್ದು ಏನೋ ನೆನಪು ಮಾಡಿಕೊಳ್ಳುತ್ತ ನಿಂತುಕೊಂಡಿರಲು, ಆ ಸ್ತ್ರೀಯು ಮಂಜುಲ ಸ್ವರದಿಂದ— ''ಅಣ್ಣಾ, ನನ್ನ ಗುರುತು ಹತ್ತಲೊಲ್ಲದೇ? ದೀನಬಂಧುವಾದ ನೀನು ಯವನರ ದವಡೆಯೊಳಗಿಂದ ಪಾರಾಗಿ ಸುರಕ್ಷಿತನಾಗಿರುವೆಯಾ? ಹೀಗೆಯೇ ಅಖಂಡ ನೂರು ವರ್ಷ ಬಾಳು! ಇಂದಿಗೆ ನಾನೇ ಧನ್ಯಳು. ನನ್ನ ಧರ್ಮಬಂಧುವಿನ ತೇಜಃಪುಂಜ ಮೂರ್ತಿಯನ್ನು, ಪುಣ್ಯಾತ್ಮರು ಉದಯ ಹೊಂದುವ ದಿನಮಣಿಯನ್ನು ಉಷಃಕಾಲದಲ್ಲಿ ನೋಡುವಂತೆ ನಾನು ಕಣ್ಣು ತುಂಬ ನೋಡಿದೆನು. ಇಂಥ ಆನಂದದ ಪ್ರಸಂಗವು ಒದಗುತ್ತದೆಂಬದನ್ನು ಸೂಚಿಸುವದಕ್ಕಾಗಿಯೋ ಏನೋ ಶ್ರೀ ಗುರುಗಳು ಶಿಷ್ಯ ಸಮೇತರಾಗಿ ಸ್ನಾನಕ್ಕೆ ಹೋದಕೂಡಲೆ ಗಾಯನಮಾಡುವ ಇಚ್ಛೆಯು ನನ್ನಲ್ಲಿ ಉತ್ಪನ್ನವಾಯಿತು. ಅಣ್ಣಾ, ನಿನ್ನ ಪುಣ್ಯದಿಂದಲೇ ನಾನು ಪಂಪಾಸರೋವರದ ಮಹಾಜಲವನ್ನು ದುಮುಕಿಯೂ ಪಾರಾದೆನು. ನಿನ್ನ ಪುಣ್ಯದಿಂದಲೇ ನನಗೆ ಸತ್ಸಮಾಗಮದ ಅಲಭ್ಯ ಲಾಭವು ಪ್ರಾಪ್ತವಾಗಿರುವದು'' ಎಂದು ನುಡಿಯುತ್ತ ಆ ಸ್ತ್ರೀಯು ಭಕ್ತಿಯಿಂದ ಹೆಗ್ಗನ ಚರಣಕ್ಕೆರಗಿದಳು!

ಆ ಸ್ತ್ರೀಯ ಮಾತನ್ನು ಕೇಳಿ ಹೆಗ್ಗನ ಸಂಶಯವು ದೂರವಾಗಿ ಆಕೆಯ ಪರಿಚಯವು ಅವನಿಗೆ ಪ್ರಶಸ್ತವಾಗಿ ಆಯಿತು. ಹೆಗ್ಗನಂತೆ ನಮ್ಮ ವಾಚಕರಿಗಾದರೂ ಆ ಸ್ತ್ರೀಯ ಗುರುತು ಈಗ ಹತ್ತಿರಬಹುದೆಂದು ನಮಗೆ ತೋರುತ್ತದೆ. ಹಿಂದಕ್ಕೆ ಪಂಪಾಸರೋವರದಲ್ಲಿ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ನಿಂತಿದ್ದ ಸ್ತ್ರೀಯೇ ಈಕೆಯೆಂದು ವಾಚಕರಿಗೆ ಹೇಳುವ ಕಾರಣವಿಲ್ಲ.

ಈಕೆಯು ಪಂಪಾಸರೋವರದಲ್ಲಿ ದುಮುಕುವಾಗ ಹೆಗ್ಗನು ಈಕೆಯ ಕೈ ಹಿಡಿದು ಉಪದೇಶಿಸಿ ಸಮಾಧಾನಪಡಿಸಿದ್ದನ್ನೂ, ಅಷ್ಟರಲ್ಲಿ ಯವನರು ಅಲ್ಲಿಗೆ ಬರಲು ಈಕೆಯು ಭಯದಿಂದ ''ಅವ್ವಯ್ಯಾ! ದುಷ್ಟ ಕಾಸಿಮನ ಜನರು'' ಎಂದು ನುಡಿದು ದುಡಮ್ಮನೆ ಪಂಪಾಸರೋವರದಲ್ಲಿ ಹಾರಿಕೊಂಡದ್ದನ್ನೂ, ಮುಂದೆ ಯಾವನೋ ಒಬ್ಬ ಪುಣ್ಯವಂತನು ಈಕೆಯನ್ನು ಹೊತ್ತುಕೊಂಡು ಈಸುತ್ತ ಸರೋವರದ ಆಚೆಯ ದಂಡೆಗೆ ಒಯ್ದದ್ದನ್ನೂ ವಾಚಕರಿಗೆ ನೆನಪು ಮಾಡಿಕೊಡುವ ಕಾರಣವಿಲ್ಲ. ಇದೆಲ್ಲ ಹೆಗ್ಗನ ಮನಸ್ಸಿಗೆ ಹೊಳೆದು ಆತನು ಕೌತುಕದಿಂದ ಆ ಸ್ತ್ರೀಯನ್ನು ಕುರಿತು – ''ತಂಗೀ, ಏನು ವಿಲಕ್ಷಣ ಸಮಯವಮ್ಮಾ ಇದು! ಯವನರ ತಾಪದಿಂದ ಪರಿತಪ್ತಳಾದ ನೀನು ತಪೋಧನರ ಕೃಪೆಯಿಂದ ತಪಸ್ವಿನಿಯಾಗಿ ನನ್ನ ಕಣ್ಣಿಗೆ ಕಾಣಿಸುತ್ತಿರುವೆಯಲ್ಲ! ಅಲ್ಪಕಾಲದಲ್ಲಿ ನಿನ್ನ ಮುಖಲಕ್ಷಣದಲ್ಲಾದ ಬದಲಾವಣೆಯು ಸತ್ಸಮಾಗಮದ ಮಹಿಮೆಯನ್ನು ಚೆನ್ನಾಗಿ ಸೂಚಿಸುತ್ತದೆ. ಹಿಂದಕ್ಕೆ ನಿನ್ನನ್ನು ಸಮಾಧಾನಗೊಳಿಸುವಾಗ ಉದ್ದುದ್ದ ಮಾತುಗಳನ್ನಾಡಿದ ನನ್ನನ್ನು ಈಗ ದರ್ಶನಮಾತ್ರದಿಂದ ನೀನು ಸಮಾಧಾನಗೊಳಿಸಿರುವೆಯಲ್ಲ! ಐಹಿಕ ತಾಪಕ್ಕೆ ಅನುವು ಗೊಡದಂಥ ನಿನ್ನ ಈಗಿನ ಗಂಭೀರವೃತ್ತಿ, ಎಂಥ ಮಹಾ ವಿಪತ್ತುಗಳಿಂದಲೂ ಚಲಿಸಲಾರದ ನಿನ್ನ ಅಮೋಘ ಶಾಂತವೃತ್ತಿ, ಯಾವಬಗೆಯ ವ್ಯಾಮೋಹಕ್ಕೂ ಸೊಪ್ಪು ಹಾಕದ ನಿನ್ನ ನಿಸ್ಪೃಹವೃತ್ತಿ ಮುಂತಾದ ಉಚ್ಚತಮ ವೃತ್ತಿಗಳು ನಿನ್ನ ಅಂಗಾಂಗಗಳಿಂದ ಹೊರಸೂಸುತ್ತಿರುವಂತೆ ನನಗೆ ತೋರುತ್ತಿರುವದಲ್ಲ! ಅಬಲೆಯಾದ ನಿನ್ನ ರೂಪಾಂತರವು ಎಷ್ಟು ಅಲ್ಪಕಾಲದಲ್ಲಿ ಆಗಿರುತ್ತದಲ್ಲಮ್ಮಾ! ತಂಗೀ, ಇಂಥ ಅಲಭ್ಯವಾದ ಸತ್ಸಮಾಗಮದ ಯೋಗವು ನಿನ್ನ ಬಂಧುವಿಗೆ ಒದಗಲಿಕ್ಕಿಲ್ಲವೆ? ಎಂದು ಆತುರದಿಂದ ನುಡಿಯುತ್ತಿರಲು, ಮೆಲ್ಲ ಮೆಲ್ಲನೆ ಮೇಲಕ್ಕೇರುತ್ತಿದ್ದ ದಿನಮಣಿಯ ನಸುಬಿಸಿಲಿನಿಂದ ಆ ವನಪ್ರದೇಶವು ಅಲಂಕೃತವಾಗತೊಡಗಿತು. ಆಗ ಆ ಸ್ತ್ರೀಯು ಹೆಗ್ಗನನ್ನು ಕುರಿತು— ''ಅಣ್ಣಾ, ಸತ್ಸಮಾಗಮದ ಸುದ್ದಿಯರಿಯದ ನನಗೆ ನಿನ್ನ ಪುಣ್ಯದಿಂದ ಅದು ಘಟಿಸಿ ನನ್ನನ್ನು ಉದ್ಧರಿಸಲು, ಅತ್ಯಾಸಕ್ತಿಯಿಂದ ಆ ಸಮಾಗಮವನ್ನು ಬಯಸುವ ನಿನಗೆ ಅದು ಲಭಿಸಲಿಕ್ಕಿಲ್ಲವೆ? ಅಣ್ಣಾ, ಸಂತರು ಪರಹಿತಕ್ಕಾಗಿಯೇ ಜನ್ಮವೆತ್ತವರು; ಪರಹಿತಕ್ಕಾಗಿಯೇ ಬಾಳುವರು; ಅವರ ಎಲ್ಲ ವ್ಯವಹಾರಗಳು ಪರಹಿತಕ್ಕಾಗಿಯೇ ಇರುವವು. ಆದ್ದರಿಂದ ಪರಹಿತದಕ್ಷತೆಯಿಂದ ಸಜ್ಜನ ಕೋಟಿಗೆ ಸೇರಿದ ನಿನಗೆ ಸಜ್ಜನರು ದೂರವಾಗಿಲ್ಲ! ನಿನ್ನಂಥ ಪುಣ್ಯಾತ್ಮರು ಪ್ರತ್ಯಕ್ಷ ಸತ್ಸಮಾಗಮವನ್ನು ಪಡೆಯದಿದ್ದರೂ, ನಿಮ್ಮನ್ನು ಸಜ್ಜನರು ಆನಂದದಿಂದ ತಮ್ಮ ಹೃದಯದಲ್ಲಿಟ್ಟುಕೊಂಡಿರುವರೆಂಬ ಅನುಭವವು ನನಗೆ ಬಂದಿರುತ್ತದೆ. ಪರಪೀಡೆಗಾಗಿ ಜನ್ಮವೆತ್ತಿದ ಉಣ್ಣೆಯು ಸದಾ ಗೋವಿನ ಕೆಚ್ಚಲಿಗೆ ಹತ್ತಿದ್ದರೂ ಅದು ಪವಿತ್ರಕ್ಷೀರದ ಮಹಿಮೆಯನ್ನು ಅರಿಯಬಲ್ಲದೆ? ಅದರಂತೆ ಸಜ್ಜನರ ಕುಲವ್ರತವಾದ ಪರಹಿತದ ಪರಿಚಯವಿಲ್ಲದ ನಮ್ಮಂಥ ಪಾಮರರು ಸತ್ಸಮಾಗಮ ಪಡೆದರೂ ತಾದೃಶಲಾಭವಿಲ್ಲ ಕಂಡೆಯಾ! ಅಣ್ಣಾ, ಪರಹಿತ ದೀಕ್ಷಾಗುರುವೇ, ಕರ್ನಾಟಕದ ಕಲ್ಯಾಣಕ್ಕಾಗಿ ಸದಾ ಪರಿತಪ್ತವಾಗುತ್ತಿದ್ದ ಮಹಾತಪಸ್ವಿಯಾದ ನೀನು ದರ್ಶನಮಾತ್ರದಿಂದ ನನಗೆ ಸತ್ಸಂಗವನ್ನು ಒದಗಿಸಿಕೊಡಲಿಲ್ಲವೇ? ನಿನ್ನ ಯೋಗ್ಯತೆಯನ್ನು ಪಾಮರಳಾದ ನಾನೇ ಏಕೆ, ತ್ರಿಕಾಲ ಜ್ಞಾನಿಯಾದ

ನನ್ನ ಸದ್ಗುರುವು ಕೂಡ ಸದಾ ಅದನ್ನು ಹೊಗಳುತ್ತಿರುವನು. ನಿನ್ನೆ ರಾತ್ರಿ ನಮ್ಮ ಸದ್ಗುರುನಾಥನು ನಿನ್ನ ದೊಡ್ಡಿಸ್ತನವನ್ನು ಹೊಗಳಿದ್ದನ್ನು ನಾನು ಕೇಳಿದೆನು. ನಿನ್ನ ಜೀವಕ್ಕಿರುವ ಹಲವುಸಂಕಟಗಳನ್ನು ಲೆಕ್ಕಿಸದೆ, ಒಬ್ಬ ಯವನನನ್ನು ಬೆನ್ನಿಗೆಹಾಕಿಕೊಂಡು ರಕ್ಷಿಸಲು ನೀನು ಪ್ರತಿಜ್ಞೆಮಾಡಿದೆಯಂತೆ; ಆದರೆ ಕ್ಷೀಣಪುಣ್ಯನಾದ ಆ ಯವನನು ನಿನ್ನಂಥ ಸಜ್ಜನನನ್ನು ನಿರಾಕರಿಸಿ ಮೃತ್ಯುವಿನ ಮುಖವನ್ನು ಪ್ರವೇಶಿಸಹೋಗುವಂತೆ ದ್ವಾರಸಮುದ್ರದ ಬಲ್ಲಾಳರಾಜನ ಆಶ್ರಯಕ್ಕೆ ಹೋದನೆಂದು ನನ್ನ ಸದ್ಗುರುವು ಹೇಳಿದನು! ಅಣ್ಣಾ, ಈ ಮಾತು ದಿಟವೇ? ದಿಟವಿರದೇನು ಮಾಡೀತು? ನನ್ನ ಗುರುವು ಅಸತ್ಯಭಾಷಣ ಮಾಡುವವನೆ? ಇರಲಿ, ನನ್ನ ಆದಿಗುರುವೇ, ಇತ್ತಬಾ, ಇಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸು. ಈಗ ನಮ್ಮ ಸದ್ಗುರುನಾಥನು ಪ್ರಾತರಾಹ್ನಿಕವನ್ನು ತೀರಿಸಿಕೊಂಡು ಧನರಾದ ಶಿಷ್ಯರೊಡನೆ ಇಲ್ಲಿಗೆ ಬರುವನು. ಆ ಮಹಾಮಹಿಮನ ದರ್ಶನದಿಂದ ನೀನು ಕೃತಾರ್ಥನಾಗುವೆಯಂತೆ. ಅಣ್ಣಾ, ಇಂದು ನಿಶ್ಚಯವಾಗಿ ನಿನ್ನ ಶುಭೋದಯವಾಯಿತೆಂದು ತಿಳಿದುಕೋ!''

ಆ ತರುಣ ತಪಸ್ವಿನಿಯ ಈ ಮಾತುಗಳನ್ನು ಕೇಳಿ ಆಶ್ಚರ್ಯಮಗ್ನನಾದ ನಮ್ಮ ಹೆಗ್ಗಣ್ಣನು ಜಡಮೂಢನಂತೆ ಆ ಪುಣ್ಯಾತ್ಮಳು ತೋರಿಸಿದ ಸ್ಥಳದಲ್ಲಿ ಕುಳಿತುಕೊಂಡನು! ನಿನ್ನೆ ರಾತ್ರಿ ನಡೆದ ಸಂಗತಿಯನ್ನು ಆ ಮಹಾತ್ಮನು ಯತಾರ್ಥವಾಗಿ ಹೇಳಿದ್ದನ್ನೂ, ಬಹಾಉದ್ದೀನನು ದ್ವಾರ ಸಮುದ್ರಕ್ಕೆ ಹೋದದ್ದು ಮೃತ್ಯುವಿನ ಮುಖವನ್ನು ಪ್ರವೇಶಿಸಿದಂತಾಯಿತೆಂದು ಭವಿಷ್ಯವನ್ನು ಸೂಚಿಸಿದ್ದನ್ನೂ ಕೇಳಿ ಹೆಗ್ಗನ ಅಂತಃಕರಣವು ಆ ಮಹಾತ್ಮನ ವಿಷಯದಲ್ಲಿ ಭಕ್ತಿರ ಸಪೂರ್ಣವಾಯಿತು! ಭೂತ-ಭವಿಷದ್ವಾದಿಯಾದ ಆ ಮಹಾತ್ಮನ ದರ್ಶನವು ತನಗೆ ಯಾವಾಗಾದೀತೆಂದು ಆತನು ಆತುರಪಡತೊಡಗಿದನು. ಬಹಾಉದ್ದೀನನು ದ್ವಾರಸಮುದ್ರಕ್ಕೆ ಹೋಗುವದರಿಂದ ಹಿತವಾಗದೆಂಬ ಮಾತು ಈ ಮೊದಲೆ ಹೆಗ್ಗನ ಮನಸ್ಸಿನಲ್ಲಿ ಆಗಾಗ್ಗೆ ಬರುತ್ತಿತ್ತು; ಆದರೆ - ''ಇಲ್ಲಿ ಇದ್ದರೆ ನನ್ನ ಹಿತವಾಗುವಂತೆ ತೋರುವದಿಲ್ಲ'' ಎಂದು ಸ್ವತಃ ಬಹಾಉದ್ದೀನನೇ ನುಡಿದದ್ದರಿಂದ ಇಲ್ಲಿಯೇ ಇರೆಂದು ಆತನಿಗೆ ಆಗ್ರಹಮಾಡಿದರೆ ಸ್ವಾರ್ಥಕ್ಕಾಗಿ ಆಗ್ರಹ ಮಾಡಿದಹಾಗಾಯಿತೆಂದು ತಿಳಿದು ಆ ಸುಜನನು ನಿನ್ನೆ ರಾತ್ರಿ ಬಹಾಉದ್ದೀನನನ್ನು ದ್ವಾರಸಮುದ್ರಕ್ಕೆ ಕಳಿಸಿಕೊಟ್ಟಿದ್ದನು. ಪ್ರಿಯ ವಾಚಕರೇ, ಭವಿಷ್ಯವನ್ನು ಯಾರು ತಪ್ಪಿಸುವರು? ಕಾಲಕ್ಕನುಸರಿಸಿ ಆಗುವದು ಆಗಿಯೇತೀರುತ್ತದೆ; ಆದರೂ ತನ್ನ ಮಿತ್ರನ ಮೃತ್ಯು ಸೂಚನೆಯಿಂದ ಹೆಗ್ಗನ ಅಂತಃಕರಣವು ವ್ಯಥಿತವಾಯಿತು. ತಾನು ಆಗ್ರಹದಿಂದ ಬಹಾಉದ್ದೀನನನ್ನು ಇಟ್ಟುಕೊಳ್ಳದೆಯಿದ್ದದ್ದು ಅಪರಾಧವಾಯಿತೆಂದು ಆತನು ಪಶ್ಚಾತ್ತಾಪ ಪಟ್ಟನು. ಈಗಾದರೂ ತಿರುಗಿ ಆತನನ್ನು ಕರಿಸಿಕೊಳ್ಳಲಾ! ದೊಡ್ಡವರು ಭವಿಷ್ಯವನ್ನು ಸೂಚಿಸಿ ನನ್ನನ್ನು ಎಚ್ಚರಗೊಳಿಸಲು, ನಾನು ನನ್ನ ಮಿತ್ರನ ಹಿತ ಸಾಧಿಸದಿರುವದು ಮಿತ್ರದ್ರೋಹ ವೆನಿಸಲಿಕ್ಕಿಲ್ಲವೇ? ಆದ್ದರಿಂದ ನಾನು ಈಗಲೇ ಯಾರನ್ನಾದರೂ ಅಟ್ಟಿ, ನನ್ನ ಮಿತ್ರನನ್ನು ಕರೆಸುವೆನು. ಎಂದು ಯೋಚಿಸಿ, ತನ್ನ ಬಿಡಾರಕ್ಕೆ ಹೋಗಬೇಕೆನ್ನುತ್ತಿರಲು, ಮತ್ತೆ ಮನಸ್ಸು ತಿರುಗಿ— ಮಹಾತ್ಮರ ದರ್ಶನಯೋಗವು ಅನಾಯಾಸವಾಗಿ ಒದಗಿರಲು, ಅದನ್ನು ಪರಿತ್ಯಜಿಸಿ

ಹೋಗಬಹುದೆ? ದೊಡ್ಡವರ ಕೃಪೆಯಿಂದಲ್ಲವೇ ಯಾವದೊಂದು ಮಹಾಕಾರ್ಯವು ಸಾಧಿಸುವದು! ಆದ್ದರಿಂದ ನಾನು ಮೊದಲು ಮಹಾತ್ಮರ ದರ್ಶನ ಮಾಡಿಕೊಂಡು ಅವರಿಗೆ ಸಾಷ್ಟಾಂಗವಾಗಿ ಎರಗಿ ಆಮೇಲೆ ಮಾಡತಕ್ಕದ್ದನ್ನು ಮಾಡುವೆ ಎಂದು ನಿಶ್ಚಯಿಸಿ, ತಪಸ್ವಿಯನ್ನು ಕುರಿತು– ''ತಂಗೀ, ಈ ಮಹಾತ್ಮರು ಇಲ್ಲಿಗೆ ಬಂದು ಎಷ್ಟು ದಿವಸವಾಯಿತು? ಇಲ್ಲಿಯ ಸ್ಥಿತಿಯನ್ನು ನೋಡಿದರೆ ಈ ಸ್ಥಳಕ್ಕೆ ಅವರು ಹೊಸದಾಗಿ ಬಂದಂತೆ ಕಾಣುತ್ತದೆ. ಪೆಳೆಯಲ್ಲಿ ಮುಚ್ಚಿಹೋಗಿದ್ದ ಗುಹೆಯನ್ನು ನಿನ್ನೆ ಮೊನ್ನೆ ಗಿಡಗಂಟಿ ಕಡಿದು ಬೈಲು ಮಾಡಿದಂತೆ ಕಾಣುತ್ತದೆ. ಕೇವಲ ನನ್ನನ್ನು ಅನುಗ್ರಹಿಸುವದಕ್ಕಾಗಿಯೆ ಅವರು ಇಲ್ಲಿಗೆ ಬಂದಿರುವರೆಂದು ನಾನು ಭಾವಿಸಿರುವೆನು. ನನ್ನ ಉತ್ಕರ್ಷದ ಕಾಲವೇ ಒದಗಿತೆಂದು ನಾನು ತಿಳಿಯುತ್ತೇನೆ. ತಪೋಧನರು ಮನಸ್ವಿಗಳು. ಸ್ವಾರ್ಥದೃಷ್ಟಿಯಿಂದ ಅವರಿಗೆ ಜಗತ್ತಿನ ಹಂಗು ಇಲ್ಲ; ಆದರೆ ಜಗತ್ಕಲ್ಯಾಣದ ದೃಷ್ಟಿಯಿಂದ ಅವರು ಜಗತ್ತಿನ ದಾಸರಾಗುವರು. ಜಗತ್ತನ್ನು ಉದ್ಧರಿಸುವ ಪ್ರಸಂಗ ಒದಗಿದಲ್ಲಿ ಜನ್ಮರಹಿತರಾದ ಅವರು ಜನ್ಮ ತಾಳುವರು. ಹೀಗೆ ಪರೋಪಕಾರದಲ್ಲಿಯೇ ದೇಹವೆತ್ತಿದ್ದರಿಂದ ಅವರು ಮಾನಾಪಮಾನಗಳನ್ನು ಲೆಕ್ಕಿಸದೆ, ಆದರ–ಅನಾದರಗಳ ಕಡೆಗೆ ಲಕ್ಷ್ಯಗೊಡದೆ ನಮ್ಮಂಥ ಪಾಮರರನ್ನು ಉದ್ಧರಿಸುವದಕ್ಕಾಗಿ, ತಾಯಿಯು ಎಳೆಗರುವಿದ್ದಲ್ಲಿಗೆ ಧಾವಿಸುವಂತೆ ನಾವಿದ್ದಲ್ಲಿಗೆ ಬರುವರು! ತಂಗೀ, ಇದಕ್ಕೆ ಬೇರೆ ಸಾಕ್ಷಿಯೇಕೆ? ಸ್ವಜನರನ್ನು ಯವನರ ಬಾಧೆಯಿಂದ ಮುಕ್ತಮಾಡಬೇಕೆಂಬ ನೀಗಲಾರದ ಕೆಲಸಕ್ಕೆ ದುರಭಿಮಾನದಿಂದ ಕೈ ಹಾಕಿ ನಾನು ಪೇಚಾಡುತ್ತಿರಲು, ಅದರಲ್ಲಿಯೂ ನಿನ್ನೆ ರಾತ್ರಿ ಅತ್ಯಂತ ತಾಪದಿಂದ ನಿದ್ರೆಯಿಲ್ಲದೆ ನಾನು ತಳಮಳಿಸುತ್ತಿರಲು, ನಿನ್ನ ಮಂಜುಳ ಗಾನದ ನೆವದಿಂದ ಆ ಕರುಣಾಳುಗಳು ನನ್ನನ್ನು ತಮ್ಮ ಸ್ಥಾನಕ್ಕೆ ಕರೆಸಿಕೊಂಡಿರುವರು ನೋಡು! ಹೇಳಮ್ಮ ಈ ಮಹಾತ್ಮರು ಇಲ್ಲಿಗೆ ಎಂದು ಬಂದರು? ಇದಕ್ಕೂ ಮೊದಲು ಇವರು ಎಲ್ಲಿದ್ದರು? ಎಂಬದನ್ನು ಗೊತ್ತಿದ್ದರೆ ಹೇಳು. ನೀನು ಕೇವಲ ನನ್ನ ಪರಿಚಯದವಳಷ್ಟೇ ಅಲ್ಲ, ಬೆನ್ನಿನಲ್ಲಿ ಬಿದ್ದ ತಂಗಿಯಂತೆ ಇರುವದರಿಂದ ಸಢಿಯಿಂದ ಹೀಗೆ ನಾನು ನಿನ್ನನ್ನು ಕೇಳುವೆನು. ಇಲ್ಲದಿದ್ದರೆ ಮಹಾತ್ಮರ ಸನ್ನಿಧಿಯಲ್ಲಿ ಹೆಣ್ಣು ಮಗಳ ಮುಂದೆ ಚಕಾರ ಶಬ್ದವಾಡುವ ಯೋಗ್ಯತೆಯು ನನ್ನದಲ್ಲ.

ಹೆಗ್ಗನ ಈ ಮಾತುಗಳನ್ನು ಕೇಳಿ ಆ ತಪಸ್ವಿನಿಯು ಗಾಂಭೀರ್ಯದಿಂದ— ''ಅಣ್ಣಾ, ನಿನ್ನ ಪ್ರಶ್ನೆಗಳಿಗೆ ನಾನು ನಿಸ್ಸಂಶಯದಿಂದ ಉತ್ತರವನ್ನು ಕೊಡಲಾರೆನು; ಯಾಕಂದರೆ ಈ ಮಹಾತ್ಮರ ವೃತ್ತಾಂತವು ನನಗೆ ಗೊತ್ತಿಲ್ಲ. ನಾನು ಪಂಪಾಸರೋವರದಲ್ಲಿ ಹಾರಿಕೊಂಡಾಗ ನನ್ನನ್ನು ಎತ್ತಿಕೊಂಡು ದಾಟಿಸಿದ ಪುಣ್ಯಾತ್ಮನು ಈ ಮಹಾತ್ಮರ ಶಿಷ್ಯರಲ್ಲಿ ಒಬ್ಬನು. ಆತನು ನನ್ನನ್ನು ಕರಕೊಂಡು ಹೋಗಿ ಈ ಮಹಾತ್ಮರ ಮುಂದೆ ನಿಲ್ಲಿಸಿದನು. ಆಗ ಈ ಕರುಣಾಶಾಲಿಗಳು ಕೃಪಾದೃಷ್ಟಿಯಿಂದ ನನ್ನನ್ನು ನೋಡಿ– ''ಜಾತಿಯು ಹೀನವಾದರೂ ಚೇತನದ ಯೋಗ್ಯತೆಯು ದೊಡ್ಡದದೆ; ಇರಲಿ, ಆಶ್ರಮದ ಸುತ್ತಲಿನ ಕಸಕಡ್ಡಿಯನ್ನು ತೆಗೆಯುತ್ತ ಇರಲಿ'' ಎಂದು ಅನುಗ್ರಹಿಸಿ ನುಡಿದರು. ಅಣ್ಣಾ, ಸಿಕ್ಕವರಿಗೆ ಸನ್ನಿಧಿಯಲ್ಲಿ ವಾಸಿಸುವ ಯೋಗವು ದೊರೆಯಬಹುದೆ? ಈ ಉಗ್ರ ತಪಸ್ಸನ್ನು ಸೈರಿಸುವವರಾರು? ಸರ್ಪದ ಸಹವಾಸ ಮಾಡಬಹುದು; ಆದರೆ ಉಗ್ರ ತಪಸ್ವಿಗಳ

ಸಹವಾಸ ಮಾಡಲಾಸಲ್ಲ. ಅಣ್ಣಾ, ನಾನು ಈ ಮಹಾತ್ಮರ ಕಣ್ಣಿಗೆ ಬೀಳುವುದೇ ಅಪರೂಪವು. ಅಪ್ಪಿತಪ್ಪಿ ಬಿದ್ದರೆ ನನ್ನ ಮೈ ನಡುಗುವದು! ಬೆಳಗು ಮೂರುತಾಸು ಇರುತ್ತ ಎದ್ದು ಮಹಾತ್ಮರ ವಾಸಸ್ಥಳದ ಸುತ್ತಲಿನ ಕಸ ತೆಗೆದು ಸಾರಿಸಿ ತಳಿಹಾಕಿ ರಂಗವಲ್ಲಿಯನ್ನು ಹಾಕುವದಷ್ಟು ನಿಯಮಿಸಿದ ನನ್ನ ನಿತ್ಯದ ಕೆಲಸವು. ಇದರ ಮೇಲೆ ಯಾರು ಏನು ಕೆಲಸ ಹೇಳಿದರೂ ಅದನ್ನು ಮಾಡುವದು ಕೈಕೊಂಡ ಕೆಲಸವು. ಈವರೆಗೆ ನಾನು ಈ ತಪೋಧನರ ಮುಂದೆ ನಿಂತಿಲ್ಲ, ಮಾತಾಡುವದಂತು ಹೋಗಲಿ! ಅಣ್ಣಾ, ನಡುವಗಲ ಮಾರ್ತಾಂಡನನ್ನು ನೋಡಬಹುದು; ಆದರೆ ತಪಸ್ತೇಜಸ್ಸಿನಿಂದ ಬೆಳಗುವ ಈ ಮುನಿಪುಂಗವನನ್ನು ನೋಡಲಾಸಲ್ಲ. ಅಖಂಡ ಮೂರುದಿನ ಗಾಯತ್ರಿಯ ಪುರಶ್ಚರಣ ಮಾಡಿದಬಳಿಕ ನಾಲ್ಕನೆಯ ದಿನ ಏಳುವಾಗ ಪಟ್ಟಶಿಷ್ಯರೂ ಕೂಡ ಎಡಗೈಯಲ್ಲಿ ಜೀವ ಹಿಡಕೊಂಡು ವರ್ತಿಸುತ್ತಿರುವರು! ಅಂದಬಳಿಕ ಪಾಮರಳಾದ ನನ್ನ ಪಾಡೇನು? ಈ ಮಹಾಸ್ಥಾನದಲ್ಲಿ ನನ್ನ ಯೋಗ್ಯತೆಯು ಕಸಬರಿಗೆಗಿಂತಲೂ ಕಡೆಯಾಗಿರುವದು. ಅಣ್ಣಾ, ನೋಡು ಅಲ್ಲಿ ಇಟ್ಟಿರುವ ಶ್ರೀಗುರುಸ್ಥಾನದ ಪವಿತ್ರ ಕಸಬರಿಗೆಯನ್ನು ನೋಡು. ಅದನ್ನು ಹಿಡಿಯುವ ಯೋಗವು ಪೂರ್ಣ ಪುಣ್ಯಬಲದಿಂದ ಪ್ರಾಪ್ತವಾಗುವದಲ್ಲದೆ, ಜನ್ಮಸಿದ್ಧವಾದ ಹಕ್ಕಿನಿಂದ ಪ್ರಾಪ್ತವಾಗಲಾರದು. ಭಕ್ತಿಯಿಂದ ಗುರುವಿನ ಅಂಗಳವನ್ನು ಉಡುಗಿ ಸಾರಿಸುವ ಪುಣ್ಯವಂತರು ಭೂತಳದಲ್ಲಿ ಸೂರ್ಯನಂತೆ ಪ್ರಕಾಶಿಸುವರೆಂದು ಕೇಳಿದ್ದೇನೆ. ಆದರೆ ಗುರುವಿನ ಅಂಗಳವನ್ನು ಕೂಡಾ ಉಡುಗಲು ಅಯೋಗ್ಯಳಾದ ನಾನು ಶ್ರೀಗುರುವಿನ ವೃತ್ತಾಂತವನ್ನು ಏನು ಹೇಳುವೆನು? ಆದರೆ ಅಣ್ಣಾ, ಈ ಮೊದಲು ಒಂದು ಗುಹೆಯಲ್ಲಿ ಗಾಯತ್ರಿಯ ಪುರಶ್ಚರಣ ಮಾಡುತ್ತಿದ್ದ ಈ ಮಹಾತ್ಮರು, ಯಾಕೋ ಒಮ್ಮಿಂದೊಮ್ಮೆ ಈಗ ಒಂಬತ್ತು ದಿನಗಳ ಹಿಂದೆ ಈ ಗುಹೆಗೆ ಬಂದು ಪುರಶ್ಚರಣವನ್ನು ಆರಂಭಿಸಿದರು. ಸಿದ್ಧರ ಇಂಥ ಗುಹೆಗಳು ಈ ಪ್ರದೇಶದಲ್ಲಿ ಬಹಳ ಇರುವವಂತೆ. ಇರಲಿ, ಈ ಮಹಾತ್ಮರೇನು ತಮ್ಮ ಶಿಷ್ಯರಿಗೆ ಹೇಳಿ ಈ ಗುಹೆಯನ್ನು ಹುಡುಕಿಸಿದವರಲ್ಲ. ಕಸ ಕಡ್ಡಿ ತೆಗಿಸಿ ಸ್ವಚ್ಛಮಾಡಿಸಿದವರಲ್ಲ; ಗಿಡಗಂಟಿಗಳನ್ನು ಕಡಿಯಹೇಳಿದವರಲ್ಲ. ಅಣ್ಣಾ, ಬಹಳ ಮಾಡಿ, ಶ್ರೀಗುರುಗಳು ಮೌನವಾಗಿಯೇ ಇರುವರೆಂದು ಹೇಳಬಹುದು. ಅವರ ಸ್ಥಿತಿಯು ತೀರ ಉದಾಸೀನವಾದದ್ದು. ಇವರಿಗೆ ಶಿಷ್ಯರ ಅವಶ್ಯಕತೆಯೂ ಇದ್ದಂತೆ ತೋರುವುದಿಲ್ಲ. ಯಾಕೆಂದರೆ, ಇವರು ಶಿಷ್ಯರಿಗೆ ಯಾವ ಸೇವೆಯನ್ನೂ ಮಾಡಹೇಳುವುದಿಲ್ಲ. ಶಿಷ್ಯರು ಗುರುಗಳ ಮನಸ್ಸಿನ ಒಲವನ್ನರಿತು ಏನಾದರೂ ಮಾಡಿದರೆ ಮಾಡಬೇಕು. ಪುರಶ್ಚರಣವು ಮುಗಿದ ದಿವಸ ಕಂದಮೂಲಗಳನ್ನು ಮಿತವಾಗಿ ಸೇವಿಸಿ, ಪುನಃ ಪುರಶ್ಚರಣವನ್ನು ಆರಂಭಿಸುವರು. ಇವರಿಗೆ ಯಾತರ ಭಯವೂ ಇದ್ದಂತೆ ತೋರುವದಿಲ್ಲ. ಮೊದಲಿನ ಗುಹೆಯಲ್ಲಿ ಪುರಶ್ಚರಣವನ್ನು ಮುಗಿಸಿ ಎದ್ದವರು ಸ್ನಾನಾದಿಗಳಾದನಂತರ ಕಂದಮೂಲಾದಿಗಳನ್ನು ಸೇವಿಸಿ ನೆಟ್ಟಗೆ ಈ ಗುಹೆಗೆ ಬಂದು ಪುರಶ್ಚರಣವನ್ನು ಆರಂಭಿಸಿದರು. ಕಸಕಡ್ಡಿಯೆನ್ನಲಿಲ್ಲ; ಹುಳಹುಪ್ಪಡಿಯೆನ್ನಲಿಲ್ಲ. ಇಲ್ಲಿಗೆ ಬಂದಂದಿನಿಂದ ಇಂದಿಗೆ ಮೂರನೆಯ ಪುರಶ್ಚರಣವು ಮುಗಿದಿದೆ. ಪುರಶ್ಚರಣ ಮುಗಿದು ಸ್ನಾನಕ್ಕೆ ಹೋದ ಅವಕಾಶದಲ್ಲಿ ಶಿಷ್ಯರು ಗುಹೆಯನ್ನು ಉಡುಗಿ ಸಾರಿಸಿ ಸ್ವಚ್ಛ ಮಾಡಿದರು; ಮತ್ತು ಪುರಶ್ಚರಣಕ್ಕೆ ಕೂತಾಗ ಈ ಹೊರಗಿನ ಗಿಡಗಂಟೆಗಳನ್ನು ಕಡಿದು ಬಯಲು ಮಾಡಿರುವರು!

ಅಣ್ಣಾ, ಇಷ್ಟು ಸನಿಯದಲ್ಲಿದ್ದ ನಿನ್ನ ಸುಳವು ನಮಗೂ ನಮ್ಮ ಸುಳವು ನಿನಗೂ ಹತ್ತದೆ ಇದ್ದದ್ದು ಆಶ್ಚರ್ಯವೇ ಸರಿ! ಇರಲಿ, ಈಗ ಸ್ನಾನಕ್ಕೆ ಹೋಗಿರುವ ಗುರುಗಳು ಅನುಷ್ಠಾನವನ್ನು ತೀರಿಸಿಕೊಂಡು ಇನ್ನು ಅರ್ಧತಾಸಿನ ಸುಮಾರಕ್ಕೆ ಗುಹೆಗೆ ಬಂದರೆಂದರೆ ಫಲಮೂಲಗಳ ಅಲ್ಪಾಹಾರಮಾಡಿ ಅವಶ್ಯಬಿದ್ದರೆ ಮಿತಭಾಷಣ ಮಾಡಿ ಪುನಃ ಪುರಶ್ಚರಣಕ್ಕೆ ಕುಳಿತುಕೊಳ್ಳುವರು. ಬಳಿಕ ಮೂರುದಿನ ಏಳುವದಿಲ್ಲ! ಅಣ್ಣಾ, ಆಯಿತು ಈ ಪಾಮರಳಿಗೆ ಗೊತ್ತಿದ್ದ ಸದ್ಗುರುವಿನ ವೃತ್ತಾಂತವನ್ನು ಹೇಳುವದು ಮುಗಿಯಿತು.''

ಹೆಗ್ಗನು ತಪಸ್ವಿನಿಯ ಈ ಮಾತುಗಳನ್ನು ಬೆರಗಾಗಿ ಕೇಳುತ್ತಿದ್ದನು. ಆಕೆಯ ವರ್ಣನದಿಂದ ತಪೋಧನರ ವಿಷಯದ ಆತನ ಭಕ್ತಿಯು ಅಧಿಕವಾಯಿತು. ಆತನು ಬಹುದೂರದಲ್ಲಿ ನಿಂತಿದ್ದ ತನ್ನ ಸೇವಕನ ಕೈಯಲ್ಲಿ ತನ್ನ ಪೋಷಾಕನ್ನೆಲ್ಲ ಕೊಟ್ಟು ಮನೆಗೆ ಹೋಗಿ ಒಗೆದ ಧೋತರವನ್ನು ತರಹೇಳಿ, ಅಲ್ಲಿಯೇ ಬಳಿಯಲ್ಲಿದ್ದ ಜಲಾಶಯದಲ್ಲಿ ಸ್ನಾನಮಾಡಹೋದನು. ಅಷ್ಟರಲ್ಲಿ ಸೇವಕನು ಓಡುತ್ತ ಹೋಗಿ ಒಗೆದ ಬಟ್ಟೆಗಳನ್ನು ತರಲು, ಹೆಗ್ಗನು ಸ್ನಾನಮಾಡಿ ಆ ಬಟ್ಟೆಗಳನ್ನು ಉಟ್ಟುಕೊಂಡು ತಪಸ್ವಿನಿಯು ಕೊಟ್ಟ ಭಸ್ಮವನ್ನು ಹಚ್ಚಿಕೊಂಡು ಪರಿಶುದ್ಧನಾದನು. ಮೊದಲೆ ವಿನಯಭಾವದ್ದಾಗಿದ್ದ ಹೆಗ್ಗನ ವೃತ್ತಿಯು, ತಪಸ್ವಿನಿಯ ಸಹವಾಸದಿಂದ ಈಗ ಅತ್ಯಂತ ಲೀನವಾಯಿತು. ಅಂತರಂಗಶುದ್ಧಿಯ ಆ ಪುಣ್ಯಾತ್ಮನು ಈಗ ಸ್ನಾನಮಾಡಿ ಧೌತವಸ್ತ್ರವನ್ನುಟ್ಟು ಭಸ್ಮ ಹಚ್ಚಿಕೊಂಡು ಬಹಿಃಶುದ್ಧಿಯನ್ನು ಪಡೆದು ಸತ್ಪುರುಷರ ದರ್ಶನಕ್ಕೆ ಪೂರ್ಣ ಅಧಿಕಾರಿಯಾದನು. ಆ ವಿನಯಶಾಲಿಯು ತನ್ನ ಸೇವಕನಿಗೆ ಠಾಣ್ಯಕ್ಕೆ ಹೋಗಹೇಳಿ, ಮಹಾಪುರುಷರ ದರ್ಶನೋತ್ಕಂಠಿತನಾಗಿ ಅವರ ಮಾರ್ಗಪ್ರತೀಕ್ಷೆ ಮಾಡುತ್ತ ನಿಂತುಕೊಂಡನು. ''ಶೆಟ್ಟಿ ಇಳಿದಲ್ಲಿ ಪಟ್ಟಣ''ವೆಂಬ ಕನ್ನಡ ಗಾದೆಯಂತೆ, ಶ್ರೇಷ್ಠರು ವಾಸಿಸಿದ ಹಾಳು ಗುಹೆಯು ಈಗ ಮಹಾಜನಸೇವ್ಯವಾಯಿತು. ನಮ್ಮ ಹೆಗ್ಗಣ್ಣನು ಕುರುಬನೆನಿಸಿಕೊಳ್ಳುತ್ತಿದ್ದರೂ ಮಹಾಜನಗಣ್ಯನಾಗಿದ್ದನು; ಯಾಕಂದರೆ ಆತನು ಕನ್ನಡನಾಡಿನ ಉದ್ಧಾರದ ಮಹಾಕಾರ್ಯ ಸಾಧನಕ್ಕಾಗಿ ಟೊಂಕಕಟ್ಟಿದವನಾಗಿದ್ದನು. ವಯೋಧರ್ಮಕ್ಕನುಸರಿಸಿ ತರುಣ ಹೆಗ್ಗನ ವೃತ್ತಿಯು ಅತ್ಯಂತ ಚಪಲವಾಗಿತ್ತು, ತಾನು ಸ್ನಾನಮಾಡಿ ಸಿದ್ಧವಾಗುವದರೊಳಗೆ ಮಹಾ ಪುರುಷರ ಆಗಮನವೆಲ್ಲಿ ಆಗುವದೋ ಎಂದು ಆತನು ಆತುರಪಟ್ಟಿದ್ದನು. ತನ್ನ ಮನೋದಯದಂತೆ, ತಾನು ಪರಿಶುದ್ಧನಾಗುವವರೆಗೆ ಮಹಾತ್ಮರ ಆಗಮನವಾಗದೆ ಇದ್ದದ್ದೊಂದು ಸುಲಕ್ಷಣವೆಂದು ಆತನು ತಿಳಿದನು. ಆತನು ತಪಸ್ವಿನಿಯನ್ನು ಕುರಿತು— ''ತಂಗೀ, ಮಹಾತ್ಮರು ಬರುವ ಹೊತ್ತಾಯಿತಲ್ಲವೆ? ಇನ್ನು ಅರ್ಧತಾಸಿನೊಳಗೆ ಬರುವರೆಂದು ನೀನು ಹೇಳಿದ್ದೆ; ಆದರೆ ಇನ್ನೂ ಬರಲಿಲ್ಲವಲ್ಲ'' ಎಂದು ನುಡಿಯುತ್ತಿರುವಾಗ, ಏನೋ ನೆನಪಿಗೆ ಬಂದಂತಾಗಲು, ಆತನು ಆತುರದಿಂದ ತಪಸ್ವಿನಿಗೆ— ''ತಂಗೀ, ಪ್ರಮಾದವಾಯಿತು! ಗುರುಗಳ ಹಾಗೂ ದೇವರ, ಅದರಂತೆ ಅರಸರ ದರ್ಶನವನ್ನು ಬರಿಗೈಯಿಂದ ತೆಗೆದುಕೊಳ್ಳಬಾರದೆಂದು ಶಾಸ್ತ್ರವಿರುವದು; ಆದ್ದರಿಂದ ನನಗೊಂದು ಫಲವು ಬೇಕಾಯಿತು. ಈಗ ಓಡುತ್ತಹೋಗಿ ಫಲವನ್ನು ತರುವೆನು. ಅಷ್ಟರಲ್ಲಿ ಗುರುಗಳು ಬರಲಿಕ್ಕಿಲ್ಲವಷ್ಟೇ?'' ಎಂದು ನುಡಿಯುತ್ತಿರಲು, ತಪಸ್ವಿನಿಯು ತಾನೇ ಒಳಗೆಹೋಗಿ ಒಂದು

ಫಲವನ್ನು ತಂದು ಹೆಗ್ಗನಿಗೆ ಕೊಟ್ಟು— ''ಅಣ್ಣಾ ಇನ್ನು ಅವಕಾಶವಿಲ್ಲ. ನೀನು ಅತ್ತಹೋಗಲು, ಇತ್ತ ಗುರುಗಳು ಬಂದರೆ ನಿನಗೆ ದರ್ಶನವಾಗಲಿಕ್ಕಿಲ್ಲ; ಅವರು ಪುರಶ್ಚರಣಕ್ಕೆ ಕುಳಿತರಂತೂ ಮೂರುದಿನ ದರ್ಶನದ ಆಶೆಯಿಲ್ಲ; ಆದ್ದರಿಂದ ಇಗೋ ಈ ಫಲವನ್ನು ಹಿಡಿ. ಶ್ರೀಗುರುವಿನ ಈ ಫಲವನ್ನು ಸ್ವೀಕರಿಸಿ ಆತನಿಗೆ ಇದನ್ನು ಅರ್ಪಿಸುವ ನೆವದಿಂದ ನಿನ್ನ ದೇಹವನ್ನು ಆತನ ಚರಣಕ್ಕರ್ಪಿಸಿಬಿಡು. ಸದ್ಗುರುವಿನ ಸೇವೆಯಿಂದ ನಿನ್ನ ಪುಣ್ಯಶರೀರವು ಕೃತಾರ್ಥವಾಗುವದು'' ಎಂದು ನುಡಿಯುತ್ತಿರಲು, ನಾಲ್ವರು ಶಿಷ್ಯರೊಡನೆ ಮಹಾಪುರುಷರು ದೂರದಲ್ಲಿದಯಮಾಡಿಸುತ್ತಿರುವದು ಹೆಗ್ಗನ ಕಣ್ಣಿಗೆ ಬಿದ್ದಿತು. ಶಿಷ್ಯರ ಮಧ್ಯದಲ್ಲಿರುವ ತೇಜಃಪುಂಜವಾದ ಆ ದಿವ್ಯ ಮೂರ್ತಿಯನ್ನು ದೂರದಿಂದಲೇ ನೋಡಿ ಹೆಗ್ಗನು ಪರಮಾನಂದ ಪಟ್ಟು, ಇಂದು ತನ್ನ ಶುಭೋದಯವಾಯಿತೆಂದು ಭಾವಿಸಿದನು. ಪ್ರಿಯವಾಚಕರೇ, ಸದ್ಗುರುವಿನ ದರ್ಶನಕ್ಕಿಂತ ಹೆಚ್ಚಿನದು ಭಾವಿಕರಿಗೆ ಈ ಲೋಕದಲ್ಲಿ ಮತ್ತೊಂದಾವದಿರುವದು?

## ವರಪ್ರದಾನ

ಹೆಗ್ಗನು ಉತ್ಕಂಠಿತನಾಗಿ ಮಹಾತ್ಮರ ಬರವನ್ನು ಎದುರುನೋಡುತ್ತಿದ್ದನು. ಆ ದಿವ್ಯಮೂರ್ತಿಯು ಸನಿಯಕ್ಕೆ ಬಂದಂತೆ ಹೆಗ್ಗನ ಸರ್ವಾಂಗದಲ್ಲಿ ರೋಮಾಂಚನಗಳು ಉತ್ಪನ್ನವಾದವು. ಆತನ ಹೃದಯದ ಭಕ್ತಿರಸವು ಉಕ್ಕಿ ಅದು ನೇತ್ರದ್ವಾರದಿಂದ ಆನಂದಬಾಷ್ಪರೂಪವಾಗಿ ಹೊರಬೀಳತೊಡಗಿತು. ಆ ಪುಣ್ಯವಂತನ ಕಂಠವು ಬಿಗಿದು ವಾಣಿಗೆ ಪ್ರತಿಬಂಧವಾಗಲು, ಆನಂದಾತಿಶಯದ ಕೃತಜ್ಞತೆಯ ಗದ್ಗದ ಸ್ವರದಿಂದ ಆ ಸಚ್ಛಿಷ್ಯನು ಏನೋ ಅಸ್ಪಷ್ಟವಾಗಿ ನುಡಿಯುತ್ತ ರೋದನ ಮಾಡತೊಡಗಿದನು! ಪ್ರಿಯವಾಚಕರೇ, ಆ ಆನಂದಾತಿಶಯದ ಕೃತಜ್ಞತಾದರ್ಶಕವಾದ ರೋದನದ ಅನುಭವವು ನಿಮಗಿರುವದೋ?'' ''ಮನೋಹಿಜನ್ಮಾಂತರ ಸಂಗತಿಜ್ಞಂ'' ಎಂಬ ಕಾಲಿದಾಸೋಕ್ತಿಯಂತೆ, ಆ ಮಹಾಪುರುಷರ ಹಾಗೂ ಹೆಗ್ಗನ ಪೂರ್ವಜನ್ಮದ ಗುರುಶಿಷ್ಯ ಸಂಬಂಧವು ಇರಬೇಕೆಂದು ಭಾವಿಸಬೇಕಾಗುವದು. ಅಥವಾ ಸದ್ಭಾವದ ಪುಣ್ಯವಂತರ ಚಿತ್ತವನ್ನು ಭರದಿಂದ ಆಕರ್ಷಿಸಿ ಅದನ್ನು ಕೂಡಲೆ ಕರಗಿಸಿ ನೀರು ಮಾಡಿಬಿಡುವಂಥ ಮಹಾವೈಭವದ ತೇಜಸ್ಸಾದರೂ ಸತ್ಪುರುಷರಲ್ಲಿ ಇರಬೇಕಾಗುವದು. ಅವರಿಬ್ಬರ ಜನ್ಮಾಂತರ ಸಂಬಂಧವು ಇರಲಿ ಇಲ್ಲದಿರಲಿ, ದರ್ಶನಮಾತ್ರದಿಂದ ಜನರ ಮನಸ್ಸಿನಮೇಲೆ ವಿಲಕ್ಷಣ ಪರಿಣಾಮ ಮಾಡುವಂಥ ದಿವ್ಯತೇಜಸ್ಸು ಆ ಮಹಾಪುರುಷನಲ್ಲಿ ನಿಶ್ಚಯವಾಗಿ ಇತ್ತು, ಆ ಮಹಾತ್ಮನ ಹೆಸರು ಮಾಧವನು. ಹಿಂದಕ್ಕೆ ನಾವು ೧೯ನೇ ೨೦ನೇ ಪ್ರಕರಣದಲ್ಲಿ ವರ್ಣಿಸಿದ ಸರ್ವಜ್ಞ ವಿಷ್ಣುಶರ್ಮರ ಶಿಷ್ಯೋತ್ತಮನಾದ ಮಾಧವನೇ ಈತನೆಂದು ವಾಚಕರು ತಿಳಿಯಬೇಕು. ಸದ್ಗುರು ವಿಷ್ಣು ಶರ್ಮರ ಅಪ್ಪಣೆಯಂತೆ ಪಂಪಾಕ್ಷೇತ್ರದಲ್ಲಿ ತಪಸನ್ನಾಚರಿಸ ತೊಡಗಿದಂದಿನಿಂದ ಮಾಧವನ ದೇಹವು ಅತ್ಯಂತ ಕೃಶವಾಗತೊಡಗಿತ್ತು, ಆತನು ಮೊದಲು

ಶ್ರೀ ಭುವನೇಶ್ವರಿಯ ಸನ್ನಿಧಿಯಲ್ಲಿ ಗಾಯತ್ರಿಯ ಪುರಶ್ಚರಣವನ್ನು ಮಾಡತೊಡಗಿದನು; ಆದರೆ ಅಲ್ಲಿ ದರ್ಶನಕ್ಕೆ ಬರುವ ಜನರಿಂದ ತೊಂದರೆಯಾಗ ಹತ್ತಿದ್ದರಿಂದ ಗುಡ್ಡದೊಳಗಿನ ಗವಿಗಳಲ್ಲಿ ಒಬ್ಬನೇ ಪುರಶ್ಚರಣವನ್ನು ಆರಂಭಿಸಿದನು. ಆ ತಪಸ್ವಿನಿಯು ಹೆಗ್ಗನ ಮುಂದೆ ಹೇಳಿದಂತೆ ಮಾಧವನು ಆಹಾರವನ್ನು ಎಂದೋ ಬಿಟ್ಟು ಕಂದಮೂಲಫಲಗಳನ್ನು ಮಿತವಾಗಿ ಭಕ್ಷಿಸತೊಡಗಿದ್ದನು. ಆತನ ತಪಸ್ಸಾಮ್ರಾಜ್ಯವು ಹೆಚ್ಚಾದಂತೆ ಮೂರು ಮೂರು ದಿನಗಳವರೆಗೆ ಪುರಶ್ಚರಣವ್ಯಾಪಾರವು ನಡೆಯತೊಡಗಿತು. ಇದರಿಂದ ಮಾಧವನ ದೇಹವು ಕೃಶವಾದರೂ, ಅಗ್ನಿಮಯಕಾಷ್ಠದಂತೆ ಆತನ ತಪೋಮಯ ದೇಹವು ತೇಜೋವಿಶೇಷದಿಂದ ನೋಡುವವರ ಕಣ್ಣುಗಳನ್ನು ಕುಕ್ಕುತ್ತಿತ್ತು.

ತೇಜಃಪುಂಜ ಮಾಧವನು ತನ್ನ ಕ್ಷೀಣವಾದ ಸರ್ವಾಂಗಕ್ಕೆ ಭಸ್ಮ ಬಳಿದು ಶುಭ್ರ ಕೌಪೀನವನ್ನು ಧರಿಸಿ ಬೆನ್ನಿಗೆ ಕೃಷ್ಣಾಜಿನವನ್ನು ಕಟ್ಟಿಕೊಂಡು ಮುಂಗೈ–ರಟ್ಟೆ–ಜಡೆಗಳಲ್ಲಿ ರುದ್ರಾಕ್ಷಮಾಲೆಗಳನ್ನು ಧರಿಸಿದ್ದರಿಂದ, ತಪಸ್ಸಾಮ್ರಾಜ್ಯ–ಚಕ್ರವರ್ತಿಯಾದ ಸಾಕ್ಷಾತ್ ಫಾಲಾಕ್ಷನಂತೆ ತೋರುತ್ತಿದ್ದನು. ಫಾಲಾಕ್ಷ ಅಗ್ನಿನೇತ್ರವು ಮಾಧವನ ಹಣೆಯಲ್ಲಿಲ್ಲದಿದ್ದರೂ ಆ ಅಗ್ನಿನೇತ್ರಗತವಾದ ಅಗ್ನಿಯು ಮಾಧವನ ನೇತ್ರದ್ವಯಗಳಲ್ಲಿಯೇ ಪ್ರಸ್ಥಾಪಿತವಾಗಿರುವಂತೆ, ಆತನ ಕಣ್ಣುಗಳು ಕೆಂಪಾಗಿದ್ದವು. ಫಾಲಾಕ್ಷನ ಚತುರ್ಭುಜಗಳು ಮಾಧವನಲ್ಲಿ ತೋರದಿದ್ದರೂ ಎರಡೇ ಬಾಹುಗಳುಳ್ಳ ಲೌಕಿಕರ ಮರ್ಯಾದಿತ ಸಾಮರ್ಥ್ಯಕ್ಕೆ ಮಾಧವನು ತನ್ನ ಉಗ್ರತಪಸ್ಸಿನ ಯೋಗದಿಂದ ಪ್ರಾಪ್ತವಾದ ಅಮರ್ಯಾದಿತ ಸಾಮರ್ಥ್ಯವನ್ನು ಜೋಡುಮಾಡಿದ್ದರಿಂದ, ಆತನ ಎರಡು ಭುಜಗಳಲ್ಲಿಯೇ ಫಾಲಾಕ್ಷನ ಹೆಚ್ಚಿನ ಎರಡು ಭುಜಗಳು ಅಡಕವಾಗಿದ್ದವು. ಫಾಲಾಕ್ಷನು ಸರ್ಪಭೂಷಣನಷ್ಟೆ? ಆತನ ಆ ಸರ್ಪಭೂಷಣಗಳ ಉಗ್ರತೆಯು ಮಾಧವನ ತಪಸ್ಸಿನ ಉಗ್ರತೆಯಲ್ಲಿ ಅಡಕವಾಗಿತ್ತು. ಪ್ರಿಯವಾಚಕರೇ, ಉಪಮಾನೋಪಮೆಯಗಳಲ್ಲಿ ಸರ್ವಸಾಮ್ಯ ವಿರಲೇಬೇಕೆಂಬ ನಿಯಮವೆಲ್ಲಿದೆ? ಆದ್ದರಿಂದ ಫಾಲಾಕ್ಷನ ರುಂಡಮಾಲೆ, ಗಂಗಾಧರತ್ವ, ವೃಷಭವಾಹನಾದಿಗಳ ಗೊಡವಿಗೆ ಹೋಗದೆ, ಮಾಧವನಲ್ಲಿ ಫಾಲಾಕ್ಷನಿಗಿಂತ ಅಧಿಕವಾದ ದ್ದೊಂದು ಗುಣವಿದ್ದದ್ದನ್ನು ಮಾತ್ರ ಹೇಳಿಬಿಡುವೆವು. ಫಾಲಾಕ್ಷನು ತನ್ನ ವಾಮಭಾಗವನ್ನು ಲೋಕಮಾತೆಯಾದ ಪಾರ್ವತಿಗೆ ಪತ್ನಿಯೆಂಬ ಅಭಿಮಾನದಿಂದ ಕೊಟ್ಟುಬಿಟ್ಟು, ಅರ್ಧನಾರೀಶನೆಂಬ ಬಿರುದನ್ನು ಮಾತ್ರ ಪಡೆದಿರುವನು; ಆದರೆ ನಮ್ಮ ಮಹಾತ್ಮನಾದ ಮಾಧವನು ತನ್ನ ಸರ್ವಾಂಗವನ್ನೇ ಕರ್ನಾಟಕ ಭೂಮಾತೆಯ ಕಲ್ಯಾಣಕ್ಕಾಗಿ ನಿಸ್ಪೃಹತೆಯಿಂದ ಕೊಟ್ಟುಬಿಟ್ಟು ಕರ್ನಾಟಕದ ಸಿಂಹಾಸನ ಸ್ಥಾಪನಾಚಾರ್ಯನೆಂಬ ಬಿರುದನ್ನು ಪಡೆದನು! ಅಹಹ! ಮಾಧವಾ! ತಪೋಧನನಾದ ಮಾಧವಾ! ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ ಮಾಧವಾ! ಅಮಾತ್ಯಶ್ರೇಷ್ಠ ಮಾಧವಾ! ವಿದ್ಯಾರಣ್ಯ ಮಾಧವಾ! ಜಗದ್ಗುರು ಮಾಧವಾ! ನಿನ್ನ ಚರಣಾರ ವಿಂದಗಳಿಗೆ ಪಾಮರನ ಅನಂತ ಪ್ರಣಾಮಗಳಿರಲಿ!!!

ಇಂಥ ಅದ್ವಿತೀಯ ಮಹಿಮಾಶಾಲಿಯಾದ ಮಾಧವನನ್ನು ಹೆಗ್ಗನು ಭಯಭಕ್ತಿಯಿಂದ ನೋಡುತ್ತ ನಿಂತಿರಲು, ಮಾಧವನ ದಿವ್ಯಮೂರ್ತಿಯು ಗುಹೆಯ ಅಂಗಳಕ್ಕೆ ಬಂದಿತು. ಕೂಡಲೆ

ಹೆಗ್ಗನು ಫಲವನ್ನರ್ಪಿಸಿ ಕಣ್ಣು ಮುಚ್ಚಿಕೊಂಡು ಶ್ರೀಗುರುವಿನ ಗುಹಾಪ್ರವೇಶದ ಮಾರ್ಗಕ್ಕೆ ಪ್ರತಿಬಂಧವಾಗದಂತೆ ಸಾಷ್ಟಾಂಗವಾಗಿ ಎರಗಿದನು. ಆಗ ತ್ರಿಕಾಲಜ್ಞನಾದ ಮಾಧವನು ಗಂಭೀರಧ್ವನಿಯಿಂದ— ''ಯಾರು? ಹುಕ್ಕನೇನು? ಮುಂದೆ ವಿದ್ಯಾನಗರದ ಹರಿಹರರಾಜ ನೆಂದು ಪ್ರಸಿದ್ಧನಾಗಬೇಕಾಗಿರುವ ಯಾದವ ಕುಲೋತ್ಪನ್ನ ಹುಕ್ಕರಾಜನೇನು? ಪುಣ್ಯಶಾಲಿಯೇ, ಏಳು, ಹೊಸ ರಾಜ್ಯವನ್ನು ಸ್ಥಾಪಿಸಲು ನಿನಗೆ ಶ್ರೀವಿರೂಪಾಕ್ಷನ ಅಪ್ಪಣೆಯಾಗಿದೆ; ಆದರೆ ರಾಜ್ಯಸ್ಥಾಪನವು ಮಹಾತಪಸ್ಸಿನ ಫಲವೆಂಬುದನ್ನು ಮರೆಯಬೇಡ. ಏಳು, ತಪಸ್ಸನ್ನಾಚರಿಸು'' ಎಂದು ವರದವಾಣಿಯನ್ನು ನುಡಿದು, ಆ ಮಹಾತ್ಮನು ಶಿಷ್ಯರೊಡನೆ ಗುಹೆಯನ್ನು ಪ್ರವೇಶಿಸಿದನು. ತನ್ನ ಗುರುವು ಈ ವರದವಾಣಿಯನ್ನು ನುಡಿಯುವಾಗ ನಮ್ಮ ತಪಸ್ವಿನಿಯು ಒಂದು ಮೂಲೆಯಲ್ಲಿ ಮರೆಯಾಗಿದ್ದಳು! ಆಕೆಯು ತನ್ನ ಅಣ್ಣನಿಗಾದ ವರಪ್ರದಾನವನ್ನು ಕೇಳಿ ಆಶ್ಚರ್ಯಪಟ್ಟು, ನಮ್ಮ ಹೆಗ್ಗಣ್ಣನು ಬರಿಯ ಅಣ್ಣನೇ ಅಲ್ಲ, ಪ್ರಜೆಗಳಾದ ನಮ್ಮನ್ನು ಮಕ್ಕಳಂತೆ ಪಾಲಿಸತಕ್ಕವನಾಗಿರುವದರಿಂದ ನಮ್ಮ ಅಪ್ಪನೂ ಆಗಿರುವನು! ಅವ್ವಯ್ಯಾ! ನಮ್ಮ ಅಣ್ಣನು ಎಂಥ ದೈವಶಾಲಿಯು! ಅಂತೇ ಆ ಪುಣ್ಯಾತ್ಮನ ದರ್ಶನ–ಸದ್ಬೋಧಗಳ ಯೋಗದಿಂದ ಸದ್ಗುರು ಚರಣಪ್ರಾಪ್ತಿಯು ನನ್ನಂಥ ಪಾಮರಳಿಗೆ ಆಯಿತು! ಎಂದು ಮನಸ್ಸಿನಲ್ಲಿ ಅಂದುಕೊಂಡು ಅತ್ಯಂತ ಗೌರವಭಾವದಿಂದ ಬೈಲಿಗೆ ಬಂದು ತನ್ನ ಅಣ್ಣನನ್ನು ನೋಡಲು, ಆತನು ಕೈಜೋಡಿಸಿಕೊಂಡು ತಲೆತಗ್ಗಿಸಿ ಕಣ್ಣೀರು ಸುರಿಸುತ್ತ ನಿಂತುಕೊಂಡಿದ್ದನು. ಮಹಾಪುರುಷರ ವರದವಾಣಿಯ ಶ್ರವಣಾನಂದದಿಂದ ಆತನ ಮೈಮೇಲೆ ಎಚ್ಚರವು ತಪ್ಪಿದಂತಾಗಿತ್ತು! ಬಾಹ್ಯದೃಷ್ಟಿಯ ಪರಿವೆಯು ಆತನಿಗೆ ಇದ್ದಂತೆ ತೋರಲಿಲ್ಲ. ಆತನು ಒಂದೇಸವನೆ ಕಣ್ಣೀರು ಸುರಿಸುತ್ತ ಕೈಜೋಡಿಸಿದವನು ಕೈಜೋಡಿಸಿಯೇ ನಿಂತುಬಿಟ್ಟಿದ್ದನು. ಆತನನ್ನು ಎಚ್ಚರ ಗೊಳಿಸುವದು ಉದ್ಧಟನತನವೆಂದು ತಿಳಿದು ತಪಸ್ವಿನಿಯು ಸುಮ್ಮನೆ ನಿಂತಳು. ತನ್ನ ಅಣ್ಣನ ಈ ವಿಲಕ್ಷಣ ಸ್ಥಿತಿಯನ್ನು ನೋಡುತ್ತಿದ್ದ ಆ ತಪಸ್ವಿನಿಯೂ ಆಶ್ಚರ್ಯದಿಂದ ಮೈಮರೆತು ನಿಂತುಬಿಟ್ಟಿದ್ದಳು. ಹೀಗೆ ಸುಮಾರು ಅರ್ಧತಾಸು ಕ್ರಮಿಸುತ್ತಿರಲು, ಗುಹೆಯೊಳಗಿಂದ ಶಿಷ್ಯರು ಬಂದು ನಮ್ಮ ಹೆಗ್ಗಣ್ಣನಿಗೆ— ''ಹುಕ್ಕರಾಜಾ, ಹಿಡಿ ಗುರುಪ್ರಸಾದವನ್ನು'' ಅನ್ನಲು ತಪಸ್ವಿನಿಯು ಮೆಟ್ಟಿಬಿದ್ದು ಶಿಷ್ಯರನ್ನು ನೋಡಿ ವಿನಯದಿಂದ ಹಿಂದಕ್ಕೆ ಸರಿದಳು. ಆಗ ಓರ್ವ ಶಿಷ್ಯನು ''ಚಿನ್ನಮ್ಮಾ ಈ ಪ್ರಸಾದವನ್ನು ಗುರುಗಳು ದಯಪಾಲಿಸಿರುವರು. ಈ ಪುಣ್ಯಶಾಲಿಗೆ ಇದನ್ನು ಕೊಡತಕ್ಕದ್ದು'' ಎಂದು ನುಡಿಯುತ್ತಿರುವಾಗ, ನಮ್ಮ ಹೆಗ್ಗಣ್ಣನು ಎಚ್ಚತ್ತು ಶಿಷ್ಯರನ್ನು ಭಯದಿಂದ ನೋಡಹತ್ತಿದನು. ಆಗ ಚಿನ್ನಮ್ಮನು— ''ಅಣ್ಣಾ, ಶ್ರೀ ಗುರುಗಳು ಮಹಾಪ್ರಸಾದವನ್ನು ದಯಪಾಲಿಸಿದ್ದಾರೆ, ಸ್ವೀಕರಿಸು'' ಅನ್ನಲು, ವಿನಯಶಾಲಿಯಾದ ಹೆಗ್ಗನು ಶಿಷ್ಯರನ್ನು ವಂದಿಸಿ ಪ್ರಸಾದವನ್ನು ಸ್ವೀಕರಿಸಿ ಪುನಃ ವಂದಿಸಿದನು. ಆಗ ಶಿಷ್ಯರು ಆ ಪುಣ್ಯವಂತನಿಗೆ— ''ಮಹಾರಾಜಾ, ಭಾಗ್ಯಶಾಲಿಯಾದ ನೀನು ಇನ್ನು ಮನೆಗೆ ಹೋಗಬಹುದು. ಶ್ರೀಗುರುಗಳು ಇನ್ನು ಮೂರು ದಿನಗಳವರೆಗೆ ಏಳುವದಿಲ್ಲ. ಇಂದಿಗೆ ಮೂರನೆಯ ದಿನ ಬೆಳಗುಮುಂಜಾನೆ ಏಳುವರು'' ಎಂದು ಹೇಳಿ, ಅವರು ಗುಹೆಯಲ್ಲಿ ಪುನಃ ಪ್ರವೇಶಿಸಿದರು. ನಮ್ಮ ಹೆಗ್ಗಣ್ಣನಾದರೂ

ಅಲ್ಲಿ ಬಹಳ ಹೊತ್ತು ನಿಲ್ಲದೆ ಶ್ರೀಗುರುಗಳು ತನ್ನ ಹೆಸರು ವಂಶ ಮೊದಲಾದವನ್ನು ಹೇಳಿದ್ದಕ್ಕಾಗಿಯೂ ಅವರು ಅಲಭ್ಯ ಫಲದರ್ಶಕ ಭವಿಷ್ಯವಾಣಿಯನ್ನು ನುಡಿದದ್ದಕ್ಕಾಗಿಯೂ ಆಶ್ಚರ್ಯಪಡುತ್ತ ಚಿನ್ನಮ್ಮನ ಅನುಮತಿಯಿಂದ ತನ್ನ ಬಿಡಾರಕ್ಕೆ ಹೊರಟು ಹೋದನು. ಶ್ರೀಗುರುವಿನ ಫಲಮಂತ್ರಾಕ್ಷತೆಯು ಆತನ ಆರಾಧ್ಯ ದೈವತವಾಯಿತು!

ಪ್ರಿಯವಾಚಕರೇ, ನಾವಾದರೂ ಇನ್ನು ಹೆಗ್ಗನನ್ನು ಹುಕ್ಕನೆಂತಲೇ ಕರೆಯೋಣ; ಯಾಕಂದರೆ, ಮಹಾತ್ಮರ ವಾಣಿಯು ವ್ಯರ್ಥವಾದದ್ದಲ್ಲ. ಸದ್ಗುರು ವಿಷ್ಣುಶರ್ಮರ ಸನ್ನಿಧಿಯಲ್ಲಿ ಪರಮಶಿಷ್ಯನಾಗಿ ವರ್ತಿಸುತ್ತಿದ್ದ ಮಾಧವನು, ಈಗ ತನ್ನ ತಪಸ್ಸಾಮರ್ಥ್ಯದಿಂದ ಶಾಪಾನುಗ್ರಹಶಕ್ತನೂ, ತ್ರಿಕಾಲಜ್ಞನೂ ಆಗಿರುವದರಿಂದ, ಅಂಥ ಮಹಾತೇಜಸ್ವಿಯನ್ನು "ಮಾಧವ" ಎಂಬ ಒಂಟಿ ಹೆಸರಿನಿಂದ ಕರೆಯಲಿಕ್ಕೆ ನಮಗೆ ಸಂಕೋಚವಾಗುವದು. ಆದ್ದರಿಂದ, ಕನ್ನಡಿಗರ ಅಭಿಮಾನಕ್ಕೆ ಆಸ್ಪದನಾದ ನಮ್ಮ ಆ ಪರಮಪೂಜ್ಯ ಮಾಧವನನ್ನು ಇನ್ನು ಮುಂದೆ "ಮಾಧವಾಚಾರ್ಯ" ಎಂಬ ಬಹುಮಾನವಾಚಕ ಶಬ್ದದಿಂದ ನಾವು ಕರೆಯುವೆವು. ಬಹುಮಾನಕ್ಕಾಗಿ ವ್ಯವಹಾರದಲ್ಲಿ ಯಾವನೊಬ್ಬ ಬ್ರಾಹ್ಮಣನ ಹೆಸರಿನ ಮುಂದೆ "ಆಚಾರ್ಯ" ಎಂಬ ಶಬ್ದವನ್ನು ಔಪಚಾರಿಕವಾಗಿ ಪ್ರಯೋಗಿಸುವದುಂಟು; ಆದರೆ ಇಲ್ಲಿ ಮಾಧವನ ಹೆಸರಿನ ಮುಂದೆ ಅದನ್ನು ಹಾಗೆ ಔಪಚಾರಿಕವಾಗಿ ಉಪಯೋಗಿಸಿರುವೆವೆಂದು ಮಾತ್ರ ವಾಚಕರು ತಿಳಿಯತಕ್ಕದ್ದಲ್ಲ, ಯಾಕಂದರೆ— "ಆಚಿನೋತಿಚ ಶಾಸ್ತ್ರಾರ್ಥಂ ಆಚಾರೇ ಸ್ಥಾಪಯತ್ಯಪಿ। ಸ್ವಯಮ ಪ್ಯಾಚರೇದ್ಯುಸ್ತು ಸ ಆಚಾರ್ಯ ಇತಿಸ್ಮೃತಃ" ಎಂಬ ಉಕ್ತಿಯಂತೆ, ಅಂದರೆ, ಶಾಸ್ತ್ರಾರ್ಥವನ್ನು ಒಟ್ಟುಗೂಡಿಸಿ ಅದನ್ನು ಆಚಾರದಲ್ಲಿ ಪ್ರಸ್ಥಾಪಿಸುವದಲ್ಲದೆ, ಅದರಂತೆ ಸ್ವತಃ ಆಚರಿಸುವವನು "ಆಚಾರ್ಯ" ಎಂದು ತಿಳಿಯಲ್ಪಡುವನೆಂಬ ಭಾವದಂತೆ, ನಮ್ಮ ಪರಮಪೂಜ್ಯ ಮಾಧವನನ್ನು ನಾವು ಇಲ್ಲಿ "ಮಾಧವಾಚಾರ್ಯ" ಎಂದು ಪರಮಭಕ್ತಿಯಿಂದ ಕರೆಯತೊಡಗುವೆವು ! ನಮ್ಮ ಮಾಧವಾಚಾರ್ಯರ ಯೋಗ್ಯತೆಯು ಸಾಮಾನ್ಯವಾದದ್ದಲ್ಲ. ಧರ್ಮ ಸಂಸ್ಥಾಪನೆಗಾಗಿ (ಕೇವಲ ಐಹಿಕ ವೈಭವಕ್ಕಾಗಿಯಲ್ಲ) ಹೊಸ ರಾಜ್ಯವನ್ನು ಸ್ಥಾಪಿಸಲು, ಕ್ಷತ್ರಿಯರನ್ನು ಪ್ರೇರೇಪಿಸಿ ಪ್ರೋತ್ಸಾಹಿಸಿದ ಬ್ರಾಹ್ಮಣ ಮಹಾತ್ಮರು ತಮ್ಮ ತೇಜೋವಿಶೇಷದಿಂದ ಭರತಭೂಮಿಯಲ್ಲಿ ಹಲವರು ಒಪ್ಪುತ್ತಿರಬಹುದು; ಅದರಂತೆ, ಅದೇ ಧರ್ಮಸಂಸ್ಥಾಪನೆಗಾಗಿ ಸಂಸ್ಕೃತ ವಾಙ್ಮಯವನ್ನು ತಮ್ಮ ಪ್ರತಿಭಾಸಂಪನ್ನವಾದ ಗ್ರಂಥಗಳಿಂದ ಅಲಂಕರಿಸಿದ ಬ್ರಾಹ್ಮಣ ಮಹಾತ್ಮರು ಭರತಭೂಮಿಯಲ್ಲಿ ಹಲವರು ಒಪ್ಪುತ್ತಿರಬಹುದು; ಆದರೆ ಇವರೆಡೂ ಪವಿತ್ರ ಕಾರ್ಯವನ್ನು ಅತ್ಯುಜ್ವಲತೆಯಿಂದ ನೆರವೇರಿಸಿದ ನಮ್ಮ "ಮಾಧವಾಚಾರ್ಯ" ರಂಥ ತಪೋಧನರು ಬ್ರಾಹ್ಮಣರಲ್ಲಿ ಅತಿ ವಿರಲವೆಂದು ಹೇಳಬಹುದು; ಆದ್ದರಿಂದ ಪ್ರಿಯ ಕನ್ನಡಿಗರೇ, ನಮ್ಮ ಮಾಧವಾಚಾರ್ಯರು ಕರ್ನಾಟಕದ ಅವಿನಾಶಿಯಾದ ಕೀರ್ತಿಧ್ವಜವಾಗಿರುವ ರೆಂಬುದನ್ನು ನೀವು ಸರ್ವಥಾ ಮರೆಯತಕ್ಕದ್ದಲ್ಲ.

ಇಂಥ ಅದ್ವಿತೀಯ ಬ್ರಾಹ್ಮಣಶ್ರೇಷ್ಠನನ್ನು ಕಣ್ಣಾರೆಕಂಡಿದ್ದನಷ್ಟೇ ಅಲ್ಲ, ಆ ಶ್ರೇಷ್ಠ ಬ್ರಾಹ್ಮಣನ ಏಕನಿಷ್ಠ ಸೇವೆಯ ಕೃಪಾವಿಶೇಷದಿಂದ ಕರ್ನಾಟಕದ ಸಿಂಹಾಸನವನ್ನು ಸ್ಥಾಪಿಸಿದ

ಯಾದವ ಕುಲೋತ್ಪನ್ನನಾದ ಸನ್ಮಾನ್ಯ ಹುಕ್ಕಮಹಾರಾಜನು ಪರಮ ಧನ್ಯನೆಂಬುದರಲ್ಲಿ ಸಂಶಯವಿಲ್ಲ. ಮಾಧವಾಚಾರ್ಯರ ತೇಜೋಮಯ ಮೂರ್ತಿಯು ದರ್ಶನಮಾತ್ರದಿಂದ ಹುಕ್ಕರಾಜನ ಹೃದಯದಲ್ಲಿ ನೆಲೆಯೂರಿ ನಿಂತುಕೊಂಡಿತು. ಆ ಮಹಾತ್ಮರ ಭವಿಷ್ಯವಾಣಿಯು ಹುಕ್ಕರಾಜನ ಹೃದಯದಲ್ಲಿ ನವಜೀವನ ಸಾಧನವನ್ನುಂಟುಮಾಡಿತು. ದೇಶೋದ್ಧಾರಕ್ಕಾಗಿ ಹೆಣಗುತ್ತಿದ್ದ ಆತನಿಗೆ, ಸ್ವಾರ್ಥದ ಸೋಂಕಿಲ್ಲದ ತಪೋರಾಶಿಯ ಆಶ್ರಯವು ದೊರೆತದ್ದರಿಂದ, ತನ್ನ ಆ ಪವಿತ್ರ ಕಾರ್ಯಕ್ಕಾಗಿ ತನ್ನ ಸರ್ವಸ್ವವನ್ನು ಈಡಾಡಲು ಆತನು ಆತುರಪಟ್ಟನು. ತಪೋಧನರಾದ ಈ ಮಹಾತೇಜಸ್ವಿಗಳು ಇಚ್ಛಾಮಾತ್ರದಿಂದ ಬೇಕಾದುದನ್ನು ಮಾಡಲು ಸಮರ್ಥರೆಂಬ ದೃಢವಾದ ನಂಬಿಗೆಯು ಆ ಯಾದವ ವೀರನಲ್ಲಿ ಉತ್ಪನ್ನವಾಗಿ, ಇವರ ಅನುಗ್ರಹ ಪಡೆಯಲು ಉಪಾಯವೇನೆಂದು ಆತನು ಆಲೋಚಿಸತೊಡಗಿದನು. ಮಹಾತ್ಮರಾದ ಸಜ್ಜನರ ಸೇವೆಯಿಂದ ಚಿನ್ನಮ್ಮನ ವೃತ್ತಿಯಲ್ಲಿ ಅಲ್ಪಕಾಲದೊಳಗೆ ಆದ ಹೆಚ್ಚುಕಡಿಮೆಯನ್ನು ಆತನು ಪ್ರತ್ಯಕ್ಷ ನೋಡಿದ್ದರಿಂದ, ಮಾಧವಾಚಾರ್ಯರ ದಿವ್ಯ ಪ್ರಭಾವದ ಮುಂದೆ ತನ್ನ ಪ್ರಭಾವವು ತುಚ್ಛವಾದದ್ದೆಂದು ಆತನು ಎಣಿಸಿದನು. ಹೀಗೆ ಹಲವು ವಿಚಾರಗಳಿಂದ ಮನಸ್ಸು ಚಂಚಲವಾಗಿರಲು, ಆತನು ತನ್ನ ಕುಳಿತುಕೊಳ್ಳುವ ಗುಡಿಸಲು ಹೊಕ್ಕನು. ಆಗ ನಾಲ್ಕು ತಾಸು ಹೊತ್ತು ಏರಿತ್ತು; ಆತನ ಎಲ್ಲ ಪರಿವಾರವು ನಿತ್ಯದ ತನ್ನ ಕೆಲಸ-ಬೊಗಸೆಗಳನ್ನು ಬಿಟ್ಟು ಆತುರದಿಂದ ಆತನ ಹಾದಿಯನ್ನು ನೋಡುತ್ತಲಿತ್ತು. ತಮ್ಮ ಒಡೆಯನಿಗಾದ ಮಾಧವಾಚಾರ್ಯರ ದರ್ಶನದ, ಹಾಗು ಮಾಧವಾಚಾರ್ಯರು ತಮ್ಮ ಒಡೆಯನಿಗೆ ಮಾಡಿದ ವರಪ್ರದಾನ, ಅದರಂತೆ ತಮ್ಮ ಒಡೆಯನನ್ನು ಮಾಧವಾಚಾರ್ಯರು ಹುಕ್ಕಮಹಾರಾಜನೆಂದು ಕರೆದ ಸುದ್ದಿಯು ಛಾವಣಿಯ ತುಂಬ ಹಬ್ಬಿದ್ದರಿಂದ, ಎಲ್ಲರೂ ಕೌತುಕಪಟ್ಟು ಆ ಸುದ್ದಿಯನ್ನು ಕುರಿತು ಚರ್ಚಿಸತೊಡಗಿದ್ದರು. ಸದ್ಗುಣಿಯೂ, ಪ್ರತಾಪಶಾಲಿಯೂ ಆದ ತಮ್ಮ ಒಡೆಯನು ಕುರುಬನಾಗಿರದೆ ಯಾದವರಾಜರ ಕುಲದವನಿರುವನೆಂಬುದು ಗೊತ್ತಾಗಲು, ಅವರಿಗೆ ಪರಮಾನಂದವಾಯಿತು. ಹುಕ್ಕರಾಜನ ವಿಷಯವಾಗಿ ಅವರ ಭಕ್ತಿ ವಿಶ್ವಾಸಗಳು ಹೆಚ್ಚಿದವು. ತಾವು ಆ ಸತ್ಕುಲ ಪ್ರಸೂತನ ಸೇವಕರಾದದ್ದಕ್ಕಾಗಿ ಅವರು ಸಮಾಧಾನಪಟ್ಟರು. ಕಗ್ಗ ಕುರುಬನಲ್ಲಿ ಇಂಥ ಪ್ರತಾಪಯುಕ್ತ ಸದ್ಗುಣಗಳು ಇರುವದು ಹ್ಯಾಗೆಂಬ ಅವರ ಶಂಕೆಯ ನಿವಾರಣವು ಈಗ ಸಂಪೂರ್ಣವಾಗಿ ಆಗಲು, ಅವರು ಯಾದವರಾಜನ ಸೇವೆಗಾಗಿ ತಮ್ಮ ಟೊಂಕವನ್ನು ಮತ್ತಿಷ್ಟು ಬಿಗಿದುಕಟ್ಟಿದರು! ಅವರಿಗೆ ಈಗ ಹುಕ್ಕನ ಮೂರ್ತಿಯು ಬಲು ಮನೋಹರವಾಗಿಯೂ, ಪರಮ ತಾರಕವಾಗಿಯೂ ತೋರತೊಡಗಿತು. ಅವರು ತಮ್ಮ ಒಡೆಯನ ದರ್ಶನಕ್ಕಾಗಿ ನಿಶ್ಶಂಕೆಯಿಂದ ಆತನ ಗುಡಿಸಲಿನ ಸುತ್ತಲು ನೆರೆದಿದ್ದರು. ನಿರ್ಮಲಭಕ್ತಿಯಿಂಬ ಪರವಶ ರಾದವರಿಗೆ ಭಯ-ಶಂಕೆಗಳ ಪರಿವೆ ಎಲ್ಲಿ ಉಳಿಯುವದು? ಹೀಗೆ ತನ್ನ ಪರಿವಾರವು ದರ್ಶನೋತ್ಸುಕವಾಗಿ ತನ್ನ ಗುಡಿಸಲಿನ ಸುತ್ತಲು ನೆರೆದದ್ದನ್ನು ನೋಡಿ, ಹುಕ್ಕರಾಜನ ಕಂಠವು ಗದ್ಗದಿತವಾಯಿತು. ಆತನು ಅತ್ಯಂತವಾದ ಅಭಿಮಾನದಿಂದ ಪೆದ್ದ, ಚಿನ್ನಓಬಲ, ಚಿನ್ನವೆಂಕಟ ಮೊದಲಾದ ಸರದಾರರನ್ನು ನೋಡುತ್ತಿರಲು, ಅವರಲ್ಲಿ ಪೆದ್ದನೆಂಬವನು-

ಪೆದ್ದ– ದೊರೆಯೇ, ಹುಕ್ಕಪ್ರಭೂ, ಒಬ್ಬ ಸಾಮಾನ್ಯ ಕುರುಬನೆಂದು ತಿಳಿದು ನಿನ್ನೊಡನೆ ನಡೆದುಕೊಂಡಿದ್ದ ನಾವು ಎಂಥ ಅಪರಾಧಿಗಳಾದೆವಲ್ಲ! ಇಂದು ಬೆಳಗಿನಲ್ಲಿ ಮಹಾಪುರುಷರ ದರ್ಶನವಾದದ್ದೇ ಸುಲಕ್ಷಣವು. ಅದರಲ್ಲಿ ಆ ಮಹಾತ್ಮರು ನಿಮ್ಮ ಕುಲಗೋತ್ರಗಳನ್ನು ಹೇಳಿ ನಿಮಗೆ ವರಪ್ರದಾನ ಮಾಡಿದ್ದು ಸುಲಕ್ಷಣದಲ್ಲಿ ಅತ್ಯಂತ ಸುಲಕ್ಷಣವು. ಮಹಾಪುರುಷರ ಇಂದಿನ ಈ ಕೃಪಾವಿಶೇಷದಿಂದ ಸೇವ್ಯ–ಸೇವಕಭಾವದಿಂದ ಬದ್ಧವಾಗಿದ್ದ ಈ ಕೃಪಾ ಭಾವಣೆಯೊಳಗಿನ ಬರಿಯ ನಾವೇ ಏಕೆ? ಇಡಿಯ ಕರ್ನಾಟಕವೇ ಕೃತಾರ್ಥವಾಗಿರುವದು. ದೊರೆಯೇ, ಮಹಾತ್ಮರ ಅನುಗ್ರಹವಿಲ್ಲದೆ ಯಾವ ಮಹತ್ಕಾರ್ಯವು ತಾನೇ ಸಾಧಿಸುವದು? ಹಿಂದಕ್ಕೆ ಒಬ್ಬ ತಪೋಧನನ ಅನುಗ್ರಹದಿಂದ ಹೊಯ್ಸಾಲ ರಾಜವಂಶವು ಸ್ಥಾಪಿಸಲ್ಪಟ್ಟಿದ್ದು ಪ್ರಸಿದ್ಧವಾಗಿರುವದಲ್ಲವೇ? ಇದರಂತೆ, ನಾವು ಪ್ರಾಚೀನ ರಾಜವಂಶಗಳ ವೃತ್ತಾಂತವನ್ನು ಶೋಧಿಸಿದರೆ, ಉಜ್ವಲ ಕ್ಷಾತ್ರತೇಜಸ್ಸಿಗೆ ಶಾಂತವಾದ ಬ್ರಹ್ಮತೇಜಸ್ಸಿನ ಜೋಡು ಆದಾಗಲೇ, ರಾಜವಂಶಗಳ ಪ್ರತಿಷ್ಠಾಪನೆಯಾದದ್ದು ವಿಪುಲವಾಗಿ ಕಂಡುಬರುವದು. ಅದರಂತೆ, ಈಗ ನೀವು ಈ ಮಹಾತ್ಮರ ಸಹಾಯದಿಂದ ನಿಶ್ಚಯವಾಗಿ ಕರ್ನಾಟಕ ಸಿಂಹಾಸನವನ್ನು ಸ್ಥಾಪಿಸುವಿರಿ. ಹಾಗಾಗದಿದ್ದ ಪಕ್ಷದಲ್ಲಿ ನಿಮ್ಮ ಉಜ್ವಲ ಕ್ಷಾತ್ರತೇಜಸ್ಸಿಗೆ ಇಂದು ಪವಿತ್ರ ಬ್ರಹ್ಮತೇಜಸ್ಸಿನ ಜೋಡು ದೊರೆಯುತ್ತಿದ್ದಿಲ್ಲ. ಹುಕ್ಕಪ್ರಭೂ, ಇನ್ನು ಮೇಲೆ ಮುಸಲ್ಮಾನರ ಅಬ್ಬರವು ನಿಶ್ಚಯವಾಗಿ ಕುಗ್ಗುವದು. ವೈದಿಕಧರ್ಮದ ಪುನರುಜ್ಜೀವನವು ತಪ್ಪದೆ ಆಗುವುದು.

ಹುಕ್ಕ–ಪೆದ್ದಣ್ಣಾ, ನಿನ್ನ ಉತ್ತೇಜಕ ಭಾಷಣವನ್ನು ನಾನು ವ್ಯರ್ಥವೆಂದು ಭಾವಿಸುವದಿಲ್ಲ. ಇಷ್ಟುದಿನ ನಮಗೆ ಮಹಾತ್ಮರ ಕೃಪೆಯ ಯೋಗವು ಒದಗದೆ ಇದ್ದದ್ದೊಂದು ಕೊರತೆಯಾಗಿತ್ತು. ಆ ಕೊರತೆಯು ಇಂದಿನ ತಪೋಧನರ ದರ್ಶನದಿಂದ ಕೂಡಿಬಂದತಾಗಿರುವದಲ್ಲದೆ, ಕರ್ನಾಟಕ ದೊಡನೆ ನನ್ನನ್ನು ಉದ್ಧರಿಸಿಕೊಳ್ಳುವ ಸುಯೋಗವು ಒದಗಿಸಿದಂತಾಗಿರುತ್ತದೆ! ಆದರೆ ಆ ಮಹಾತ್ಮರು ಕರುಣಾಶಾಲಿಗಳಾಗಿ ತಮ್ಮ ತಪಸ್ಸಾಮ್ರಾಜ್ಯದ ಸೌಖ್ಯವನ್ನು ಬಿಟ್ಟು, ನಮ್ಮ ವಿಷಯಸುಖ ಸಮ್ರಾಜ್ಯದ ಪ್ರತಿಷ್ಠಾಪನೆಯ ತಾಪದಾಯಕ ಕಾರ್ಯಕ್ಕೆ ಮನಸ್ಸು ಮಾಡುವ ಬಗೆ ಹೇಗೆ? ನಮ್ಮ ಆ ತಪೋಧನರು ಅತ್ಯಂತ ನಿಸ್ಪೃಹಿಗಳೆಂಬದು ಅವರ ದರ್ಶನಮಾತ್ರದಿಂದ ಯಾರಿಗಾದರೂ ಒಡೆದುಕಾಣುವ ಹಾಗಿದೆ. ''ನಿಸ್ಪೃಹಸ್ಯ ತೃಣಂ ಜಗತ್'' ಎಂಬಂತೆ ಅವರಿಗೆ ಜಗತ್ತು ಹುಲ್ಲಿಗಿಂತ ಕಡಿಮೆಯಾಗಿರುವದು. ಅಂದಬಳಿಕ ನಮ್ಮ ಕರ್ನಾಟಕ ಸಿಂಹಾಸನ ಸ್ಥಾಪನದಂಥ ತಾಪದಾಯಕ ಕಾರ್ಯಕ್ಕೆ ಅವರು ಯಾಕೆ ಮನಸ್ಸು ಮಾಡುವರು?

ಪೆದ್ದ– ದೊರೆಯೇ, ಇದೊಂದು ದೊಡ್ಡ ವಿಘ್ನವೆಂದೇ ಹೇಳಬೇಕಾಗುವದು; ಆದರೆ ಆ ವಿಘ್ನವನ್ನು ಹ್ಯಾಗೆ ದೂರಮಾಡಿಕೊಳ್ಳಬೇಕಾದೀತು?

ಹುಕ್ಕ–ಆ ವಿಘ್ನನಿವಾರಣಕ್ಕೆ ಒಂದೇ ಒಂದು ಉಪಾಯವಿರುವದು. ಆ ಮಹಾತ್ಮರಲ್ಲಿ ಅತ್ಯಂತ ಶ್ರದ್ಧೆಯನ್ನು ತಾಳಿ ನಿಸ್ಪೃಹತೆಯಿಂದ ಅವರನ್ನು ಸೇವಿಸುವದರಿಂದ ಈ ವಿಘ್ನ ನಿವಾರಣವಾಗುತ್ತದೆ. ಎಲ್ಲವನ್ನು ಬಿಟ್ಟು ನೀನೇಗತಿಯೆಂದು ಶರಣುಹೋಗುವವರ

ಯೋಗಕ್ಷೇಮವನ್ನು ದೇವರಾಗಲಿ-ಸತ್ಪುರುಷರಾಗಲಿ ವಹಿಸುವರು; ಆದ್ದರಿಂದ ಈಗ ನಾನು ಪ್ರಸಂಗ ಪರಿತ್ಯಾಗ ಮಾಡಿ ನಿರಭಿಮಾನದಿಂದ ಆ ಮಹಾತ್ಮರನ್ನು ಸೇವಿಸುವೆನು; ಆದರೆ ಪೆದ್ದಣ್ಣಾ ಮೊದಲು ಸಜ್ಜನರ ದರ್ಶನವಾಗುವದೇ ದುರ್ಲಭವು! ದರ್ಶನವಾದ ಬಳಿಕ ಅವರನ್ನು ಸೇವಿಸಿ ಅನುಗ್ರಹ ಪಡೆಯುವದು ಅತ್ಯಂತ ದುರ್ಲಭವು. ನಿಸ್ಪೃಹಿಗಳು ನಮಗೆ ಪ್ರಸನ್ನವಾಗಬೇಕಾದರೆ ನಾವು ನಿಸ್ಪೃಹರಾಗಬೇಕಾಗುವದು. ಮೊದಲಿಗೆ ನಿಸ್ಪೃಹರಾದ ಸಜ್ಜನರನ್ನು ಸೇವಿಸುವದು ಶಕ್ಯವಲ್ಲದಿದ್ದರೂ, ಸಜ್ಜನರನ್ನು ಸೇವಿಸುತ್ತ ಸೇವಿಸುತ್ತ ಅವರ ಅನುಗ್ರಹದಿಂದ ನಿಸ್ಪೃಹ ರಾಗುವದು ಶಕ್ಯವಾಗಿರುತ್ತದೆ. ಆದ್ದರಿಂದ ನಾನು ಮೊದಲು, ಆ ಮಹಾತ್ಮರನ್ನು ಸೇವಿಸ ತೊಡಗುವೆನು. ಅವರ ಅನುಗ್ರಹವನ್ನು ಸಂಪಾದಿಸಿದ ಹೊರತು ನಾನು ಯಾವ ಕಾರ್ಯಕ್ಕೂ ಕೈ ಹಾಕುವದಿಲ್ಲ.

ಈ ಮೇರೆಗೆ ನುಡಿದು ಹುಕ್ಕನು ಸರ್ವಸಂಗವನ್ನು ತ್ಯಜಿಸಿ ಸತ್ಸೇವೆಯನ್ನು ಕೈಗೊಂಡನು. ಕರ್ತವ್ಯನಿಷ್ಠನಾದ ಆ ಪುಣ್ಯವಂತನು ಶ್ರೀಗುರು ಸ್ಥಾನದ ಎಂಥ ಹೀನಕೆಲಸ ಮಾಡಲಿಕ್ಕೂ ಹಿಂಜರಿಯಲಿಲ್ಲ. ಸತ್ಸಮಾಗಮದ ಮಹಿಮೆಯೇ ಅಂಥಹದು. ಸಜ್ಜನರು ದರ್ಶನಮಾತ್ರದಿಂದ ಜನರ ಮನಸ್ಸಿನ ದುರಭಿಮಾನದ ಗಂಟನ್ನು ಸಡಿಲಿಸಿ ಅದರ ಸಂದಿಯಲ್ಲಿ ಸದ್ಭಾವನೆಯ ಬೀಜವನ್ನು ಬಿತ್ತುವರು. ಆ ಸದ್ಭಾವನೆಯ ವೃಕ್ಷವು ಬೇರುಬಿಡುತ್ತ ಬೆಳೆಯುತ್ತ ಹೋದಂತೆ ದುರಭಿಮಾನದ ಗಂಟು ಉಚ್ಚುತ್ತಹೋಗಿ ತಜ್ಜನ್ಯ ದುರ್ಗುಣಗಳ ಕಸುವು ಕಡಿಮೆಯಾಗುತ್ತ ಹೋಗುವದು. ಅದರಲ್ಲಿ ಹುಕ್ಕನಂಥ ಭಾಗ್ಯಶಾಲಿಗೆ ಸತ್ಸಮಾಗಮದ ಯೋಗವು ಒದಗಿದರಂತು ಬಂಗಾರವೇ ಆಗುವದು! ದೇಶೋದ್ಧಾರಕ್ಕಾಗಿ ದೇಹವನ್ನರ್ಪಿಸಿದ್ದ ಆ ಪುಣ್ಯ ಶಾಲಿಯ ದುರಭಿಮಾನದ ಕಸುವೂ, ಆ ದುರಭಿಮಾನಮೂಲವಾದ ದುರ್ಗುಣಗಳ ಕಸುವೂ ಪ್ರಸಂಗವಶಾತ್ ದಿನದಿನಕ್ಕೆ ಕುಗ್ಗುತ್ತಬಂದಿದ್ದವು. ಈ ಸ್ಥಿತಿಯಲ್ಲಿ ಮಾಧವಾಚಾರ್ಯರಂಥ ಮಹಾತೇಜಸ್ವಿಗಳ ದರ್ಶನವಾದ ಕೂಡಲೆ ಆತನ ಮನಸ್ಸು ನಿರ್ಮಲವಾಗಿ, ಅದರಲ್ಲಿ ಸದ್ಭಾವನೆಯ ಬೆಳೆಯು ಭರದಿಂದ ಬರತೊಡಗಿತು. ಆ ಭಾಗ್ಯಶಾಲಿಯು ಸಾಕ್ಷಾತ್ ಮಾಧವಾಚಾರ್ಯರ ವಿಷಯವಾಗಿಯೂ, ಅವರ ಶಿಷ್ಯರ ವಿಷಯವಾಗಿಯೂ ಗುರು ಭಾವವನ್ನು ತಾಳಿದಂತೆ, ತನ್ನ ತಂಗಿಯೆಂದು ತಿಳಿದುಕೊಂಡಿದ್ದ ಚಿನ್ನಮ್ಮನ ವಿಷಯವಾಗಿಯೂ ಗುರುಭಾವವನ್ನು ತಾಳಿದನು; ಯಾಕೆಂದರೆ, ಆ ಪುಣ್ಯವಂತಳು ಗುರುಸೇವೆಯಿಂದ ಧನ್ಯಳಾದವಳೆಂದು ಆತನು ತಿಳಿದುಕೊಂಡಿದ್ದನು. ಇಷ್ಟಕ್ಕೆ ಹುಕ್ಕನ ಸದ್ಭಾವನೆಯ ಮಜಲು ಮುಗಿಯಲಿಲ್ಲ. ಶ್ರೀ ಗುರುವಿಗೆ ಸಂಬಂಧಿಸಿದ ಪ್ರತಿಯೊಂದು ಒಡವೆಯ ವಿಷಯವಾಗಿ, ಬಹಳವೇಕೆ, ಗುರುಸ್ಥಾನದ ಕಲ್ಲು-ಮಣ್ಣು-ಗಿಡಗಳ ವಿಷಯವಾಗಿ ಕೂಡ ಆತನು ಗೌರವವನ್ನು ತಾಳಿದ್ದನು. ಆದ್ದರಿಂದ ಭಕ್ತಿಪುರಸ್ಸರವಾಗಿ ಶ್ರೀ ಗುರುಸ್ಥಾನದ ಕಸ-ಕಡ್ಡಿ ತೆಗೆದು ಸಾರಿಸುವದು, ಹೊತ್ತುಹೊತ್ತಿಗೆ ಕಂದಮೂಲ-ಫಲಗಳನ್ನೂ, ಆಕಳ ಹಾಲನ್ನೂ ಒದಗಿಸಿಕೊಡುವದು, ದಾಸಾನುದಾಸನಾಗಿ ಎಲ್ಲರ ಕೆಲಸಗಳನ್ನು ಕಸಿದುಕೊಂಡು ಅವನ್ನು ಆಸಕ್ತಿಯಿಂದ ತಾನು ಮಾಡುವದು ಹುಕ್ಕನ ಸಾಂಪ್ರದಾಯವಾಗಿ ಹೋಯಿತು. ಬರಬರುತ್ತ ಆ ಪುಣ್ಯವಂತನ ದೇಹಾಭಿಮಾನವು ಅಳಿಯಿತು.

ಇಂದ್ರಿಯ ನಿಗ್ರಹಶಕ್ತಿಯು ಬಲಿಯಿತು. ದೇಹದಂಡದ ಸಾಮರ್ಥ್ಯವು ಹೆಚ್ಚಿತು. ಆತನು ಅತ್ಯಂತ ಮಿತಭಾಷಿಯಾಗಿದ್ದನು. ಅಥವಾ ಆತನು ಮೌನವ್ರತವನ್ನೇ ಕೈಗೊಂಡಿದ್ದನೆಂತಲೂ ಹೇಳಬಹುದಾಗಿತ್ತು; ಆತನು ಶ್ರೀ ಗುರುವಿನ ಕಣ್ಣಿಗೆ ಅಪ್ಪಿತಪ್ಪಿ ಬಿದ್ದರೆ ಬೀಳಬೇಕು. ತನ್ನ ಸೇವೆಯ ಸಡಗರವನ್ನು ಮಂದಿಗೆ ತೋರಿಸಲು ಮುಂದುವರಿಯುವದನ್ನಂತೂ ಆತನು ಅರಿಯೇ ಅರಿಯನು. ಬರಬರುತ್ತ ಆತನಲ್ಲಿ ಎಲ್ಲರ ವಿಷಯವಾಗಿ ಗುರುಭಾವವೂ, ಸ್ವಾರ್ಥದ ವಿಷಯವಾಗಿ ಕೇವಲ ಉದಾಸೀನಭಾವವೂ ಉತ್ಪನ್ನವಾದವು. ಆತನಲ್ಲಿ ಕಠಿಣವಾದ ವೈರಾಗ್ಯವು ತಲೆದೋರಹತ್ತಿತ್ತು. ಶ್ರೀಗುರುಗಳು ಪುರಶ್ಚರಣವನ್ನು ಮುಗಿಸಿ ಉಪಾಹಾರವನ್ನು ಸ್ವೀಕರಿಸುವವರೆಗೆ, ಅಂದರೆ ಅಖಂಡ ಮೂರು ದಿನ ಆತನು ಬಾಯಲ್ಲಿ ನೀರು ಸಹ ಹಾಕದಾದನು. ತಾನಾಯಿತು, ತನ್ನ ಸೇವೆಯಾಯಿತು, ಸೇವೆಯಿಲ್ಲದಿರುವಾಗ ಶ್ರೀಗುರುಸ್ಮರಣವಾಯಿತು ಎಂಬ ಚಂದದಿಂದ ಆತನು ಕಾಲವನ್ನು ಕ್ರಮಿಸತೊಡಗಿದನು. ಈ ಕಾಲಕ್ರಮದಲ್ಲಿ ಅವನ ದೇಹವು ಕೃಶವಾದರೂ ಆತನ ತಪಸ್ತೇಜವು ಹೆಚ್ಚಿತು. ವಿಷಯೋಪಭೋಗದ ದೃಷ್ಟಿಯಿಂದ ಆತನು ಬಡವನಾದರೂ, ವೈರಾಗ್ಯ ಸಂಪತ್ತಿನ ವ್ಯಾಪ್ತಿಯಿಂದ ಆತನು ಶ್ರೀಮಂತನಾದನು. ಆ ಭಾಗ್ಯಶಾಲಿಯ ಸೇವೆಯಲ್ಲಿ ತೋರುವ ದೃಢನಿಶ್ಚಯ, ಏಕೋಭಾವ, ನಿಷ್ಕಲಂಕವಾದ ಭಕ್ತಿ ಇವು ಮುಪ್ಪುರಿಗೊಂಡು ಶ್ರೀ ಗುರುವಿನ ಅಂತಃಕರಣವನ್ನು ಎಳೆಯಹತ್ತಿದವು. ಗುರುಸೇವೆಯಲ್ಲಿ ಅಥವಾ ಗುರುಸ್ಮರಣದಲ್ಲಿ ತನ್ನನ್ನು ಮರೆತುಬಿಡುವದು ಆತನ ಸ್ವಭಾವಗುಣವಾಗಿಹೋಯಿತು. ಆ ಸತ್ವಶಾಲಿಯು ಹೀಗೆ ಗುರುಸೇವೆ, ಗುರುಸ್ಮರಣಗಳ ದ್ವಾರದಿಂದ ಗುರುಮಯನಾಗಹತ್ತಿದ್ದರಿಂದ ಆ ಸಚ್ಛಿಷ್ಯನ ಅಂತಃಕರಣದಲ್ಲಿ ಗುರುವಿನ ಮೂರ್ತಿಯು ಪ್ರತ್ಯಕ್ಷ ನೆಲೆಗೊಳ್ಳಹತ್ತಿತು. ಶ್ರೀಗುರುವಿನ ಸರ್ವ ವ್ಯಾಪಾರಗಳ ಜ್ಞಾನವೂ ಆತನಿಗೆ ಆಗಹತ್ತಿತು! ಹೀಗೆ ಧ್ಯಾನದಲ್ಲಿ ಪ್ರಕಟವಾಗಹತ್ತಿದ ಸದ್ಗುರುವಿನ ಮೂರ್ತಿಯನ್ನು ನೋಡಿ ಹುಕ್ಕನು ನಲಿದಾಡಹತ್ತಿದನು. ಆತನು ಶ್ರೀಗುರು ಧ್ಯಾನವನ್ನು ಬಿಟ್ಟು ಅನ್ಯ ವ್ಯಾಪಾರಗಳನ್ನು ನಡೆಸದಾದನು. ಹೀಗೆ ಅಖಂಡ ಮೂರು ಮೂರು ದಿನಗಳವರೆಗೆ ಶ್ರೀಗುರುವಿನ ಸಂಗಡ ಆತನೂ ಧ್ಯಾನದಲ್ಲಿ ಕುಳಿತುಕೊಳ್ಳಹತ್ತಿದನು. ಮೂರನೆಯ ದಿನ ಬೆಳಗುಮುಂಜಾವಿನಲ್ಲಿ ಶ್ರೀಗುರುಗಳು ಪುರಶ್ಚರಣವನ್ನು ಮುಗಿಸಿ ಏಳಲು, ಹುಕ್ಕನೂ ಏಳುವನು. ಈ ಸ್ಥಿತಿಯಲ್ಲಿ ನೋಡಿ ಉಳಿದ ಶಿಷ್ಯರೂ, ಚಿನ್ನಮ್ಮನೂ ಬೆರಗಾದರು. ಅಲ್ಪಕಾಲದಲ್ಲಿ ಹುಕ್ಕರಾಜನು ಸಮಾಧಿಯ ಸಿದ್ಧಿಯನ್ನು ಪಡೆದನೆಂದು ಅವರು ತಿಳಿದುಕೊಂಡರು. ಹುಕ್ಕನ ವಿಷಯದಲ್ಲಿ ಅವರ ಆದರವು ಹೆಚ್ಚಿತು. ಹುಕ್ಕನು ಧ್ಯಾನಬಿಟ್ಟು ಎದ್ದಕೂಡಲೆ ತನ್ನ ಸದ್ಗುರುವಿನ ಶಿಷ್ಯಪರಿವಾರಕ್ಕೆಲ್ಲ ನಮಸ್ಕರಿಸಿ ವಿನಯದಿಂದ ''ನನ್ನ ಪೂಜ್ಯ ಗುರುಜನಗಳಿರಾ, ನಾನು ಕರ್ತವ್ಯಭ್ರಷ್ಟನಾಗಿ ಸೇವಾಸೂತ್ರಗಳಿಲ್ಲದೆ ಹೀಗೆ ಧ್ಯಾನಸ್ಥನಾಗಿ ಸುಮ್ಮನೆ ಕುಳಿತುಕೊಳ್ಳುವದು ಅಪರಾಧವಾಗಿರುವದು; ಆದರೆ ನಿಮ್ಮ ಮುಂದೆ ಮುಚ್ಚಿಡುವದು ಅಪರಾಧವಾದದ್ದರಿಂದ ಎಲ್ಲವನ್ನೂ ಬಿಚ್ಚಿ ಇಡುತ್ತೇನೆ. ಧ್ಯಾನಮಾಡುತ್ತ ಕುಳಿತಕೂಡಲೆ ಗುರುವಿನ ಧ್ಯಾನಸ್ಥ ಮೂರ್ತಿಯು ಪ್ರತ್ಯಕ್ಷ ನನ್ನ ಎದುರಿಗೆ ಬಂದು ಕುಳಿತುಕೊಳ್ಳುವದರಿಂದ, ಆ ದಿವ್ಯಮೂರ್ತಿಯ

ದರ್ಶನಾ ನಂದದೊಳಗೆ ನನಗೆ ಯಾವದೂ ಬೇಡಾಗುತ್ತದೆ! ಧ್ಯಾನಸ್ಥನಾಗುವ ಮೊದಲು ಹೀಗೆ ಕರ್ತವ್ಯಭ್ರಷ್ಟನಾಗಿ ಕುಳಿತುಕೊಳ್ಳುವದು ಯೋಗ್ಯವಲ್ಲೆಂದು ಪಶ್ಚಾತ್ತಾಪಡುವೆನು; ಆದರೆ ಧ್ಯಾನಸ್ಥನಾದಬಳಿಕ ಶ್ರೀಗುರು ಮೂರ್ತಿಯನ್ನಗಲಿ ಏಳುವ ಮನಸ್ಸಾಗುವದಿಲ್ಲ! ನನ್ನ ಈ ಔದ್ಧತ್ಯಕ್ಕಾಗಿ ತಾವು ನನ್ನನ್ನು ಕ್ಷಮಿಸಬೇಕು. ಇನ್ನು ಮೇಲೆ ಧ್ಯಾನಕ್ಕೆ ಕುಳಿತುಕೊಳ್ಳುವ ಮೊದಲೇ ಕಂದ–ಮೂಲ–ಫಲಾದಿಗಳನ್ನು ಮತ್ತಿಷ್ಟು ತಂದಿಡುವೆನು. ಹೊತ್ತಿಗೆ ಗೋಕ್ಷೀರವನ್ನು ಒದಗಿಸಿಕೊಡುವದಾಗದಿದ್ದರೆ ಅದಕ್ಕೆ ನನ್ನ ಉಪಾಯವಿಲ್ಲ! ಮಹನಿಯರೇ, ನನ್ನ ಅನುಯಾಯಿಗಳು ಬಹು ಜನರಿರುವರು; ಅವರು ತಮಗೆ ಕಂದ–ಮೂಲ–ಫಲಾದಿಗಳನ್ನೂ, ಗೋಕ್ಷೀರ ವನ್ನೂ ಹೊತ್ತುಹೊತ್ತಿಗೆ ಒದಗಿಸಿಕೊಡಬಹುದು; ಆದರೆ ''ಸ್ವಯಂದಾಸಾಸ್ತಪಸ್ವಿನಃ'' ಎಂಬಂತೆ, ಅತ್ಯಂತ ಸ್ವಾವಲಂಬಿಗಳಾದ ತಾವು, ಪರಮಾನುಗ್ರಹ ಮಾಡಿ ನನ್ನ ಸೇವೆಯನ್ನು ಪರಿಗ್ರಹಿಸುತ್ತಿರುವಾಗ, ಹೀಗೆ ನಾನು ದುರಭಿಮಾದಿಂದ ಅನ್ಯರನ್ನು ತಮ್ಮ ಸೇವೆಗಾಗಿ ನಿಯಮಿಸಲಾರೆನು. ಶ್ರೀಗುರು ಕೃಪೆಯಿಂದ ಸರ್ವಸಿದ್ಧಿಗಳನ್ನು ಪಡೆದಿದ್ದ ತಮಗೆ ಯಾತರ ಕೊರತೆಯಿದೆ? ಆದರೂ ಶ್ರೀ ಗುರುಮೂರ್ತಿಯ ಪರಮಾಹ್ಲಾದಕತೆಯ ಕಡೆಗೂ, ನನ್ನ ಪಾಮರತ್ವದ ದರ್ಶನಲೋಲುಪತೆಯ ಕಡೆಗೂ ಲಕ್ಷಗೊಟ್ಟು, ಮಹಾಪರಾಧಿಯಾದ ನಾನು ಅನಿಯಮಿತವಾಗಿಯೇ ಆಗಲೊಲ್ಲದೇಕೆ ಮಾಡುವ ಅಲ್ಪ ಸೇವೆಯನ್ನು ಸ್ವೀಕರಿಸಬೇಕು. ಇದು ನಾನು ಕೈ ಜೋಡಿಸಿ ಮಾಡಿಕೊಳ್ಳುವ ನನ್ನ ಪ್ರಾರ್ಥನೆಯು!'' ಎಂದು ಹೇಳಿಕೊಳ್ಳಲು, ಮಾಧವಾಚಾರ್ಯರ ಧನ್ಯರಾದ ಶಿಷ್ಯರು, ಗುರುಕೃಪೆಯಿಂದ ಪ್ರಾಪ್ತವಾಗಿದ್ದ ಹುಕ್ಕನ ಈ ಘನತರವಾದ ಯೋಗ್ಯತೆಯನ್ನರಿತು, ಆತನ ವಿನಯಭಾವಕ್ಕೆ ಪ್ರಸನ್ನರಾಗಿ ಆತನ ಸೇವೆಯನ್ನು ಆದರದಿಂದ ಪರಿಗ್ರಹಿಸತೊಡಗಿದರು. ವಿನಯಶಾಲಿಯೂ, ತಾನು ಪರಿಚಾರಕರ ಪರಿಚಾರಕ ನೆಂದು ತಿಳಿದುಕೊಂಡವನೂ ಆದ ಹುಕ್ಕನು, ಶಿಷ್ಯರು ತಂದ ಫಲಮೂಲಾದಿಗಳನ್ನು, ಭಕ್ಷಿಸದೆ ಧ್ಯಾನದಿಂದ ಎದ್ದ ಕೂಡಲೆ ತಾನೇ ಫಲಮೂಲಾದಿಗಳನ್ನೂ, ಗೋಕ್ಷೀರವನ್ನೂ ತಂದು, ಅವನ್ನು ಶ್ರೀಗುರುವೂ ಆತನ ಪರಿವಾರವೂ ಪರಿಗ್ರಹಿಸಿದ ಮೇಲೆ ಮಹಾಪ್ರಸಾದವೆಂದು ಅಲ್ಪಾಹಾರ ವನ್ನು ತಾನು ಸ್ವೀಕರಿಸುವನು. ಧ್ಯಾನದಲ್ಲಿಯ ಶ್ರೀಗುರುಮೂರ್ತಿಯ ದರ್ಶನಾನಂದದಿಂದ ಸಂತುಷ್ಟನಾಗುತ್ತಿದ್ದ ಹುಕ್ಕನಿಗೆ ಹಸಿವೆ ನೀರಡಿಕೆಗಳು ಬಾಧಿಸದಾದವು. ಶ್ರೀ ಗುರುಕೃಪೆಯ ವೈಭವದಿಂದ ಆ ಭಾಗ್ಯಶಾಲಿಯು ದಿನದಿನಕ್ಕೆ ತೇಜೋವಿಶೇಷದಿಂದ ಬೆಳಗಹತ್ತಿದನು. ಸದ್ಗುರುದರ್ಶನದ ಪರಮಾನಂದದಲ್ಲಿ ಆ ಧನ್ಯಪುರುಷನು, ಈ ಮೊದಲೇ ಶ್ರೀಗುರುವು ತನಗೆ ಮಾಡಿದ ವರಪ್ರದಾನವನ್ನು ಕೂಡ ಸಂಪೂರ್ಣವಾಗಿ ಮರೆತುಬಿಟ್ಟನು!

# ಸುವರ್ಣವೃಷ್ಟಿಯು !

ಹೀಗೆ ಹುಕ್ಕರಾಜನು ನಿತ್ಯದಲ್ಲಿ ಸದ್ಗುರು ದರ್ಶನದ ಪರಮಾನಂದದ ಅನುಭವದಿಂದ ಪರಿಪುಷ್ಟನಾಗತೊಡಗಿದನು. ಮೇಲೆ ಹೇಳಿದಂತೆ ಆತನಿಗೆ ಸದ್ಗುರುವಿನ ವರದವಾಣಿಯ ವಿಸ್ಮೃತಿಯೇ ಆದಬಳಿಕ, ಆತನಿಗೆ ತನ್ನ ಪರಿವಾರಾದಿಗಳ ಹಂಗು ಎಲ್ಲಿ ಉಳಿಯಬೇಕು? ಹೀಗೆ ಕೆಲವು ದಿನಗಳು ಕ್ರಮಿಸುತ್ತಿರಲು, ಒಂದು ದಿನ ಮಾಧವಾಚಾರ್ಯರು ಧ್ಯಾನಸ್ಥರಾಗಿ ಕುಳಿತ ಎರಡನೇ ದಿವಸದ ಮಧ್ಯರಾತ್ರಿಯು ಪ್ರಾಪ್ತವಾಯಿತು. ಆಗ ಎಲ್ಲ ಶಿಷ್ಯರು ಮಲಗಿ ನಿದ್ದೆ ಮಾಡುತ್ತಿದ್ದರು. ಚಿನ್ನಮ್ಮನಿಗೂ ಅದೇ ಜಂಪುಹತ್ತಿತ್ತು. ಮಾಧವಾಚಾರ್ಯರು ಗುಹೆಯಲ್ಲಿ ಗಾಯತ್ರಿಯ ಪುರಶ್ಚರಣ ಮಾಡುತ್ತ ಕುಳಿತಿದ್ದರು. ಹೊರಗೆ ತನ್ನ ಸ್ಥಳದಲ್ಲಿ ಹುಕ್ಕರಾಜನು ಗುರುಸ್ಮರಣ ಮಾಡುತ್ತ ಕುಳಿತಿದ್ದನು. ಅಂದು ಅಶ್ವಿನ ಅಮಾವಾಸ್ಯೆಯಾದದ್ದರಿಂದ ಕಗ್ಗತ್ತಲೆಯು ಮುಸುಕಿತ್ತು. ಆಗ ನಿರಭ್ರವಾದ ಆಕಾಶದಲ್ಲಿಯ ನಕ್ಷತ್ರಗಳು, ತಮ್ಮಲ್ಲಿದ್ದ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಹೊಳೆದು, ಕಗ್ಗತ್ತಲೆಯನ್ನು ದೂರಮಾಡಲು ಯತ್ನಿಸುತ್ತಿರುವಂತೆ, ನಾ ಮೇಲು ನೀ ಮೇಲು ಅನ್ನುತ್ತ ಆಕಾಶದ ತುಂಬ ಲಕಲಕಿಸುತ್ತಿದ್ದವು. ಗುಹೆಯ ನೆರೆಯ ಹುಕ್ಕನ ಭಾವಣೆಯ ಜನರೆಲ್ಲ ಗಾಢನಿದ್ರೆಯ ಸುಖವನ್ನು ಅನುಭವಿಸುತ್ತಿದ್ದರು. ಆಗ ನಡುನಡುವೆ ಕಿವಿಗೆ ಬಿದ್ದರೆ ವನ್ಯಮೃಗಗಳ ಕರ್ಕಶಧ್ವನಿಗಳು ಮಾತ್ರ ಬೀಳುತ್ತಿದ್ದವು. ಹೀಗಿರುವಾಗ ಮಾಧವಾಚಾರ್ಯರ ಘೋರ ತಪಶ್ಚರ್ಯಕ್ಕೆ ಪ್ರಸನ್ನಳಾದ ಶ್ರೀ ಭುವನೇಶ್ವರಿಯು ಅಕಸ್ಮಾತ್ ಪ್ರತ್ಯಕ್ಷಳಾಗಿ ಅವರ ಸಮ್ಮುಖದಲ್ಲಿ ನಿಂತುಕೊಂಡಳು. ಕೂಡಲೆ ಅತ್ತ ಹುಕ್ಕನ ಧ್ಯಾನದಲ್ಲಿ ಪ್ರತ್ಯಕ್ಷನಾಗಿದ್ದ ಗುರುಮೂರ್ತಿಯ ಎದುರಿಗೂ ಆ ಭುವನೇಶ್ವರಿಯ ದಿವ್ಯಮೂರ್ತಿಯು ಪ್ರಕಟವಾಯಿತು. ಸದ್ಗುರುವಿನ ಕೃಪೆಯಿದ್ದದ್ದರಿಂದಲೇ, ಆ ತೇಜೋಮಯ ಮೂರ್ತಿಯನ್ನು ನೋಡಲು ಹುಕ್ಕನು ಸಮರ್ಥನಾದನಲ್ಲದೆ, ನಮ್ಮಂಥ ಪಾಮರರಿಗೆ ಅದು ಸರ್ವಥಾ ಶಕ್ಯವಲ್ಲ. ಪಕ್ಕನೆ ಪ್ರಕಟವಾದ ಆ ದಿವ್ಯಮೂರ್ತಿಯ ದುಸ್ಸಹ ಪ್ರಕಾಶದಿಂದ ಹುಕ್ಕನ ಕಣ್ಣುಗಳು ಒಮ್ಮೆಲೆ ಮುಚ್ಚಬಡಿದವು; ಆದರೂ ಗುರ್ವನುಗ್ರಹದಿಂದ ಅತ್ಯಂತ ಸಮರ್ಥನಾಗಿದ್ದ ಆ ಭಾಗ್ಯಶಾಲಿಯು ಕಣ್ತೆರೆದು ಗುರುಸಮ್ಮುಖದಲ್ಲಿ ಪ್ರಸನ್ನವದನದಿಂದ ನಿಂತುಕೊಂಡಿದ್ದ ಆ ದಿವ್ಯಮೂರ್ತಿಯನ್ನು ಆಶ್ಚರ್ಯದಿಂದ ನೋಡತೊಡಗಿದನು. ವಿರಕ್ತಶಿಖಾಮಣಿಯಾದ ತನ್ನ ಗುರುವಿನ ಎದುರಿಗೆ ಹೀಗೆ ಈ ಮೊದಲು ಎಂದೂ ಕಣ್ಣಿಗೆ ಬೀಳದೇಯಿದ್ದ ಈ ಅಲೌಕಿಕ ಸುಂದರಿಯು ಯಾರಾಗಿರಬಹುದು? ಅಹಹ! ಮರ್ತ್ಯರಾದವರಲ್ಲಿ ಈ ದಿವ್ಯತೇಜಸ್ಸು, ಈ ಅಲೌಕಿಕ ಸೌಂದರ್ಯ, ಈ ಅಪಾರವಾದ ಐಶ್ವರ್ಯ ಇವು ಇರಬಹುದೇ? ಈ ದಿವ್ಯಮೂರ್ತಿಯು ಸಾಕ್ಷಾತ್ ಭಗವತಿ ಲಕ್ಷ್ಮೀದೇವಿಯೇ ಆಗಿರಬಹುದಲ್ಲವೇ? ಇದರಲ್ಲಿ ಸಂಶಯವೇಕೆ? ಈ ಸುವರ್ಣಮಯ ದೇಹ, ಈ ಶುಭ್ರವಸ್ತ್ರಪರಿಧಾನ, ಈ ರಜತ–ಸುವರ್ಣ ಪುಷ್ಪಗಳ ಮಾಲೆ, ರತ್ನಗಳ ಕಾಂತಿಯಿಂದ ಕಣ್ಣುಕ್ಕುಕ್ಕುವ ಈ ಕಿರೀಟ–ಕುಂಡಲಾದ್ಯಾಭರಣಗಳು, ಕಮಲದಂತೆ ವಿಶಾಲವಾದ ಈ ನೇತ್ರಗಳು, ಬಲಗೈಯಲ್ಲಿ ಹಿಡಿದಿದ್ದ ಈ ವಿಶಾಲವಾದ ಕಮಲ, ಈ ಪದ್ಮಾಸನದಲ್ಲಿ ನಿಲ್ಲೋಣ, ಈ ಪ್ರಸನ್ನವದನ

ಇವು ಶ್ರೀ ಮಹಾಲಕ್ಷ್ಮಿಯ ಸ್ಮರಣ ಮಾಡಿಕೊಡುತ್ತವಲ್ಲವೇ? ಅಹಹ ! ಮಹಾದೇವೀ, ಆದಿಮಾಯೇ, ನೀನು ಸಾಕ್ಷಾತ್ ಲಕ್ಷ್ಮಿಯೇ ಆಗಿರು, ಅಥವಾ ಮತ್ತೆ ಯಾರೇ ಆಗಿರು; ಶ್ರೀ ಗುರುಸನ್ನಿಧಿಯಲ್ಲಿ ವರಪ್ರದಾನ ಮಾಡುವವಳಂತೆ ನಿಂತಿರುವ ನಿನ್ನನ್ನು ನಾನು ಸಾಷ್ಟಾಂಗವಾಗಿ ವಂದಿಸುವೆನು ಎಂದು ಮನಸ್ಸಿನಲ್ಲಿ ಅಂದು ಹುಕ್ಕನು ಆ ದಿವ್ಯಮೂರ್ತಿಯನ್ನು ಸಾಷ್ಟಾಂಗವಾಗಿ ನಮಸ್ಕರಿಸಿದನು.

ಪ್ರಿಯ ವಾಚಕರೇ, ಆ ಮಹಾತ್ಮರಾದ ಗುರು–ಶಿಷ್ಯರ ಮನಸ್ಸಿನ ಏಕರೂಪತೆಯ ಹೊಲಬು ಎಂತಹದೋ ನಮಗಂತೂ ತಿಳಿಯದು. ಹೀಗೆ ಹುಕ್ಕನು ಆ ದಿವ್ಯಮೂರ್ತಿಯನ್ನು ಸಾಷ್ಟಾಂಗವಾಗಿ ವಂದಿಸಿದ ಕೂಡಲೆ, ಮಾಧವಾಚಾರ್ಯರು ಕಣ್ದೆರೆದು ಆ ದಿವ್ಯ ಮೂರ್ತಿಯನ್ನು ನೋಡಿ ಆನಂದಭರಿತನಾಗಿ ಕೈ ಜೋಡಿಸಿಕೊಂಡು—

ಶ್ಲೋಕ— ''ಸರಸಿಜನಿಲಯೇ ಸರೋಜಹಸ್ತೇ।
ಧವಲ ತಾರಾಂಶುಕ ಗಂಧಮಾಲ್ಯ ಶೋಭೇ।
ಭಗವತಿ ಹರಿ ವಲ್ಲಭೇ ಮನೋಜ್ಞೇ।
ತ್ರಿಭುವನ ಭೂತಿಕರೀ ಪ್ರಸೀದಮಹ್ಯಂ'' ॥1॥

ಅಂದರೆ ''ಕಮಲದ ಮನೆಯವಳೇ, ಕೈ ಕಮಲದವಳೇ, ಶುಭ್ರ ವಸ್ತ್ರ ಗಂಧಮಾಲ್ಯಗಳಿಂದ ಒಪ್ಪುವವಳೇ, ಮನೋಹರಳೇ, ಮೂರು ಲೋಕಗಳ ಐಶ್ವರ್ಯವನ್ನುಂಟು ಮಾಡುವವಳೇ, ಭಗವತಿಯಾದ ವಿಷ್ಣುಸತಿಯೇ ನನಗೆ ಪ್ರಸನ್ನಳಾಗು'' ಎಂದು ಭಕ್ತಿಯಿಂದ ಪ್ರಾರ್ಥಿಸಿದನು. 1. ತನ್ನ ಗುರುವು ಹೀಗೆ ದೇವಿಯನ್ನು ಪ್ರಾರ್ಥಿಸುವದನ್ನು ನೋಡಿ ಹುಕ್ಕನು ಆಶ್ಚರ್ಯಪಡುತ್ತಾ ಮುಂದೆ ಏನಾಗುವದೋ ನೋಡಬೇಕೆಂದು ಕುಳಿತವನಂತೆ ಸುಮ್ಮನೆ ಕೈ ಜೋಡಿಸಿ ಕಣ್ಣುಮುಚ್ಚಿಕೊಂಡು ಗುರುಧ್ಯಾನತತ್ಪರನಾಗಿ ಕುಳಿತುಕೊಂಡುಬಿಟ್ಟನು. ಇಂದಿನ ಗುರುಧ್ಯಾನದಲ್ಲಿ ಒಂದು ಅಪೂರ್ವ ಪ್ರಸಂಗ ನೋಡುವ ಯೋಗವು ಒದಗಿದ್ದಕ್ಕಾಗಿ ಆ ಸಚ್ಛಿಷ್ಯನಿಗೆ ಪರಮಾನಂದವಾಗಿತ್ತು. ಅತ್ಯಂತ ನಿಸ್ಪೃಹನಾದ ತನ್ನ ಸದ್ಗುರುವಿನ ಮುಂದೆ ಇಷ್ಟಾರ್ಥವನ್ನು ಪೂರೈಸುವದಕ್ಕಾಗಿ ಸಾಕ್ಷಾತ್ ಲಕ್ಷ್ಮಿಯು ಪ್ರಕಟವಾದದ್ದರ ರಹಸ್ಯವು ಆತನಿಗೆ ತಿಳಿಯದಾಯಿತು. ನಮ್ಮ ಗುರುವಿನ ಉಗ್ರ ವೈರಾಗ್ಯವೆತ್ತ, ಶ್ರೀ ಲಕ್ಷ್ಮಿಯ ಪ್ರಸನ್ನತೆಯೆತ್ತ, ಹೊಟ್ಟೆತುಂಬಿದವನಿಗೆ ಹುಗ್ಗಿ ಮುಳ್ಳುಮುಳ್ಳೆನ್ನುವಂತೆ ಜಗತ್ತನ್ನೇ ಹುಲ್ಲಿಗೆ ಸರಿಮಾಡುವ ಮಹಾವಿರಕ್ತರಿಗೆ ಲಕ್ಷ್ಮೀದೇವಿಯಿಂದಾಗುವ ಪ್ರಯೋಜನವೇನಿರಬಹುದು? ಎಂದು ಆತನು ಯೋಚಿಸತೊಡಗಿದನು. ಅತ್ತ ಮಾಧವಾಚಾರ್ಯರು ಭುವನೇಶ್ವರಿಯ ಸಮ್ಮುಖದಲ್ಲಿ ಕೈ ಜೋಡಿಸಿ ನಿಂತುಕೊಂಡಿದ್ದರು; ಶ್ರೀ ಭುವನೇಶ್ವರಿಯು ಪ್ರಸನ್ನವದನದಿಂದ ಮಾಧವಾಚಾರ್ಯರನ್ನು ನೋಡುತ್ತ ನಿಂತುಕೊಂಡಿದ್ದಳು. ಆ ವಿಲಕ್ಷಣ ಪ್ರಸಂಗವು ಪುಣ್ಯವಂತನಾದ ಹುಕ್ಕನಿಗೆ ಬಹು ಕೌತುಕದ್ದಾಗಿ ತೋರಿತು. ಸದ್ಗುರುವಿನ ಮಹಿಮೆಯು ಸ್ಮರಣದಿಂದ ಆತನ ಮೈಯಲ್ಲಿ ರೋಮಾಂಚನಗಳೇಳುತ್ತಿರಲು, ಪುನಃ ಪುನಃ ಆತನು ತನ್ನ ಧ್ಯಾನದಲ್ಲಿ ನೆಲೆಗೊಂಡಿರುವ ಆ ಎರಡು ದಿವ್ಯ ಮೂರ್ತಿಗಳನ್ನು ನಮಸ್ಕರಿಸುತ್ತಿದ್ದನು. ಸದ್ಗುರುವಿನ ಮೋಹನಿವಾರಕ ವಿರಾಗರೂಪ ಸಂಪತ್ತು ಹೆಚ್ಚಿನದೋ, ಲೋಕಮಾತೆಯ ಜಗನ್ಮೋಹಕವಾದ ರಾಗರೂಪ ಸಂಪತ್ತು

ಹೆಚ್ಚಿನದೋ ಎಂಬುದನ್ನು ಆತನು ತಿಳಿಯದಾದನು. ಸದ್ಗುರುವನ್ನು ನೋಡಿದಾಗ ಆತನ ವಿರಾಗ ಸಂಪತ್ತೇ ಹುಕ್ಕನಿಗೆ ಅಧಿಕವಾಗಿ ತೋರುತ್ತಿತ್ತು; ಲೋಕಮಾತೆಯನ್ನು ನೋಡಿದಾಗ ಆಕೆಯ ರಾಗಸಂಪತ್ತೇ ಆತನಿಗೆ ಹೆಚ್ಚಿನದಾಗಿ ತೋರುತಿತ್ತು, ಇಬ್ಬರನ್ನೂ ನೋಡಿದಾಗ ಏನೂ ತಿಳಿಯದೆ ಆತನು ಮೂಢನಾಗುತ್ತಿದ್ದನು. ಹೀಗಿರುವಾಗ ಲೋಕಮಾತೆಯು ಮುಗುಳುನಗೆಯಿಂದ ಮಾಧವಾಚಾರ್ಯರನ್ನು ಕುರಿತು–

ಭುವನೇಶ್ವರಿ–ಮಾಧವ, ಭಕ್ತಶಿರೋಮಣೇ, ಇಂಥ ಕಠಿಣ ತಪವೇಕೆ?

ಮಾಧವ–ಜನನಿ, ನಿನ್ನ ಪ್ರಸನ್ನತೆಗಾಗಿ.

ಭುವನೇಶ್ವರಿ–ಏನು? ನನ್ನ ಪ್ರಸನ್ನತೆಗಾಗಿಯೇ! ಮಾಧವಾ, ನಿನ್ನ ಕುಲದೈವತವಾದ ನಾನು ನಿನ್ನ ಕುಲಶೀಲಕ್ಕನುಸರಿಸಿ, ನಿನಗೆ ವೈರಾಗ್ಯ ಸಂಪತ್ತನ್ನಿತ್ತು ನಿನ್ನನ್ನು ಮೋಕ್ಷಸಾಮ್ರಾಜ್ಯಕ್ಕೆ ಅಧಿಕಾರಿಯನ್ನಾಗಿ ಮಾಡಿರಲು, ನೀನು ಈಗ ಯಾವ ಕಾಮನೆಯಿಂದ ತಪಸ್ಸನ್ನಾಚರಿಸುವೆ? ನನ್ನ ಅನುಗ್ರಹದಿಂದ ಸದಾ ಸಂತುಷ್ಟಚಿತ್ತನಾಗಿದ್ದ ನಿನಗೆ ಮತ್ತೇತರ ಕೊರತೆಯಪ್ಪಾ? ಬೇಡು, ತ್ರಿಭುವನ ಭೂತಿಕರಿಯಾದ ನಾನು ಪ್ರಸನ್ನಳಾಗಿ ನಿಂತಿದ್ದೇನೆ. ಏನು ಬೇಕು ಬೇಡು!

ಮಾಧವ–ಲೋಕಜನನೀ, ಈಗ ನನಗೆ ಬೇಕಾದದ್ದು ವಿಪುಲ ಸಂಪತ್ತು!

ಭುವನೇಶ್ವರಿ–ಏನಂದೀ? ವಿಪುಲ ಸಂಪತ್ತೇ? ಮಾಧವಾ, ಆಶ್ಚರ್ಯವು ಪರಮಾಶ್ಚರ್ಯವು! ವಿಪುಲ ಸಂಪತ್ತಿನಿಂದಾಗುವ ಅನರ್ಥ ಪರಂಪರೆಯನ್ನರಿಯದಷ್ಟು ಮೂಢನು ನೀನು ಹ್ಯಾಗಾದೆ? ಇಷ್ಟಾರ್ಥಪ್ರದಳಾದ ನನ್ನನ್ನು ಭಜಿಸುವ ಭಕ್ತರು ಮೂರು ವಿಧವಾಗಿರುವರು. ಕೆಲವರು ರಾಗಿಗಳೆನಿಸಿ, ಅಂದರೆ ಭೋಗೇಚ್ಛೆಯುಳ್ಳವರಾಗಿ ವಿವಿಧ ಭೋಗಪ್ರಾಪ್ತ್ಯರ್ಥ ನನ್ನನ್ನು ಭಜಿಸುವರು; ಇವರು ಅಧಮಾಧಿಕಾರಿಗಳು. ಕೆಲವರು ವಿರಾಗಿಗಳೆನಿಸಿ, ಅಂದರೆ ಭೋಗೇಚ್ಛಾರಹಿತರಾಗಿ ಮೋಕ್ಷಪ್ರಾಪ್ತ್ಯರ್ಥವಾಗಿ ನನ್ನನ್ನು ಭಜಿಸುವರು; ಇವರು ಉತ್ತಮಾಧಿಕಾರಿಗಳು. ಕೆಲವರು ತನ್ಮಿಶ್ರರೆನಿಸಿ, ಅಂದರೆ ಇರುವವರೆಗೆ ಐಹಿಕ ಭೋಗಗಳನ್ನು ಭೋಗಿಸಿ, ಮರಣಾನಂತರ ಮೋಕ್ಷ ಪ್ರಾಪ್ತಿಯಾಗಬೇಕೆಂದು ನನ್ನನ್ನು ಭಜಿಸುವರು. ಇವರು ಮಧ್ಯಮಾಧಿಕಾರಿಗಳು; ಆದರೆ ಮಾಧವಾ, ನೀನು ಯಾವ ವರ್ಗದ ಅಧಿಕಾರಿಯು?

ಮಾಧವ–ತಾಯೀ, ನಾನು ಅಧಮ ವರ್ಗದವನು! ನನಗೆ ವಿಪುಲ ಸಂಪತ್ತು ಬೇಕಾಗಿದೆ, ಕೊಡು.

ಭುವನೇಶ್ವರಿ–ಇದೇನು ಮಾಧವಾ, ಮಹಾಸಾಧುವಾದ ಮಾಯಣನ ಹೊಟ್ಟೆಯಲ್ಲಿ ಹುಟ್ಟಿದ ನೀನು ಅಧಮಾಧಿಕಾರಿಯೇ? ನೀನು ವಿಪುಲ ಸಂಪತ್ತನ್ನು ಬಯಸುವೆಯಾ? ನಿನ್ನ ತಂದೆಯಾದ ಮಾಯಣ, ತಾಯಿಯಾದ ಶ್ರೀಮತಿ, ನಿನ್ನ ಬಂಧುಗಳಾದ ಸಾಯಣ–ಭೋಗನಾಥರು, ನಿನ್ನ ಪ್ರಿಯ ಪತ್ನಿಯಾದ ವೈತಿಹೋತ್ರಿ ಇವರೆಲ್ಲರು ಪರಮವೈರಾಗ್ಯಶಾಲಿಗಳಾಗಿರಲು, ನೀನು ಮತ್ತೆ ಯಾರ ಸಲುವಾಗಿ ವಿಪುಲ ಸಂಪತ್ತನ್ನು ಬಯಸುವೆಯಪ್ಪಾ! ಯಾರ ಗೊಡವೆ ನನಗೇನು? ನನ್ನ ಭೋಗಕ್ಕಾಗಿಯೇ ವಿಪುಲ ಸಂಪತ್ತು ಬೇಕೆಂದು ನೀನು

ಬಯಸುತ್ತಿದ್ದರೆ, ನಿನ್ನ ಈ ಘೋರ ತಪಸ್ಸಿನ ಸಾರ್ಥಕತೆಯಾದಂತಾಯಿತು! ಮಾಧವಾ, ನೀಚವಾದ ಸ್ವಾರ್ಥಬುದ್ಧಿಯಿಂದ ವಿಪುಲ ಸಂಪತ್ತನ್ನು ಸಂಪಾದಿಸುವದಕ್ಕೆ ಇಷ್ಟೊಂದು ಆಯಾಸವೇಕೆ? ಲೋಕದಲ್ಲಿ ಜನರು ಅನ್ಯಾಯದಿಂದ ಬೇಕಾದಷ್ಟು ಸಂಪತ್ತನ್ನು ಸಂಪಾದಿಸಿ, ಕೃತಕೃತ್ಯರಾಗುತ್ತಿರಲು, ಅದಕ್ಕಾಗಿ ನೀನು ಇಂಥ ಘೋರ ತಪಸ್ಸನ್ನೇಕೆ ಆಚರಿಸಿದೆ? ಮಾಯಣನ ಪವಿತ್ರೋದರದಿಂದ ಜನಿಸಿದ, ನಿನಗೆ ನಾನು ವಿಪುಲ ಸಂಪತ್ತನ್ನು ಕೊಡಲಾರೆನು? ನಿನಗೆ ಅದು ಬೇಕಾಗಿದ್ದರೆ ಹೋಗು, ಅದನ್ನು ಸಂಪಾದಿಸುವ ಹಲವು ಲೌಕಿಕ ಮಾರ್ಗಗಳಿಗೆ; ಅವುಗಳಲ್ಲಿ ಯಾವುದಾದ ರೊಂದನ್ನು ಅನುಸರಿಸು.

ಮಾಧವ–ತಾಯೀ, ಆದಿಮಾಯೆಯೆನಿಸುವ ನಿನ್ನ ಮುಗುಳುನಗೆಯ ಮಾತಿಗೆ ಮೋಹಿಸ ದವರುಂಟೇ? ಆದರೆ ನೀನು ಹೇಳಿದಂತೆ ಮಾಯಣಪುತ್ರನೆನಿಸುವ ನಿನ್ನ ಉಪಾಸಕನಾದ ಈ ಮಾಧವನು ಹಾಗೆ ಸರ್ವಥಾ ಮೋಹಿಸಲಾರನು. ದೈವೀಭಾವನದ ನಿನ್ನ ಭಜಕನು ಉತ್ತಮಾಧಿಕಾರಿಯೇ ಇರಲಿ, ಮಧ್ಯಮಾಧಿಕಾರಿಯೇ ಇರಲಿ, ಅಧಮಾಧಿಕಾರಿಯೇ ಇರಲಿ, ನಿನ್ನ ಕೃಪಾಪ್ರಸಾದವನ್ನು ಪಡೆಯಲಿಕ್ಕೆ ಅವನೇ ಪಾತ್ರನಲ್ಲದೆ, ನೀನು ಕೇವಲ ಭೋಗಸಾಧನವೆಂಬ ಕ್ಷುದ್ರ ಭಾವನೆಯುಳ್ಳ ಲೌಕಿಕರು ಸರ್ವಥಾ ಅದಕ್ಕೆ ಪಾತ್ರರಲ್ಲವು. ತಾಯಿ, ಪತ್ನೀಪದವನ್ನು ಹೊಂದದೆಯಿದ್ದ ಸ್ತ್ರೀಸಮೂಹವು ಪುರುಷರಿಗೆ ಮಾತೃ ಸಮಾನವಷ್ಟೇ? ಅಂದಬಳಿಕ ಯಾವನೊಬ್ಬ ಅಧಮನು ಪರಸ್ತ್ರೀಯರನ್ನು ಜನನಿಯೆಂದು ಭಾವಿಸದೆ, ಆಕೆಯ ಮೋಹಕರೂಪಕ್ಕೆ ಮರುಳಾಗಿ ಆಕೆಯನ್ನು ಬಲಾತ್ಕರಿಸಹೋದರೆ ಆತನು ನಾಶದ ಪಂಥವನ್ನು ಹಿಡಯದೆ ಯಾಕೆ ಬಿಟ್ಟಾನು? ಅದರಂತೆ ನಿನ್ನ ಉಪಾಸಕರಲ್ಲದ ಮಹಾಪಾಪಿಗಳು, ಲೋಕಜನನಿಯಾದ ನಿನ್ನನ್ನು ಇಷ್ಟಾರ್ಥಪ್ರದ ಜನನಿಯೆಂದು ಭಾವಿಸದೆ, ನಿನ್ನ ಮೋಹಕ ಸ್ವರೂಪಕ್ಕೆ ಮರುಳಾಗಿ, ಅವಶ್ಯಳಾದ ನಿನ್ನನ್ನು ದುರ್ಬುದ್ಧಿಯಿಂದ ಬಲಾತ್ಕರಿಸಹೋಗಿ ನಾಶಪಂಥವನ್ನು ಹಿಡಿಯುವದು ನಿಶ್ಚಯವು! ಅವರು, ಚೌರ್ಯ, ವಂಚನೆ, ಪರಸಂತಾಪ, ಆತ್ಮಘಾತ ಮೊದಲಾದ ಹೀನೋಪಾಯಗಳು ನಿನ್ನನ್ನು ಬಲಾತ್ಕರಿಸುವ ಸಾಧನಗಳೆಂದು ತಿಳಿಯುವರು. ಮಹಾ ತೇಜೋವಂತಳಾದ ಪತಿವ್ರತಾಸ್ತ್ರೀಯು, ಪ್ರಸಂಗವಶಾತ್ ಅಧಮರ ಪಾಶಕ್ಕೆ ಒಳಗಾದಂತೆ ತೋರಿಸಿ, ಕಡೆಗೆ ಅವರನ್ನು ನಾಶಗೊಳಿಸುವಂತೆ, ತೇಜಸ್ವರೂಪಳಾದ ವಿಷ್ಣುಪತ್ನಿಯು ನೀನು, ಬಲಾತ್ಕರಿಸುವ ಪಾಪಿಗಳ ಬಲಾತ್ಕಾರದಿಂದ ಬಡ ಬಡ ಅವರ ಮನೆಯನ್ನು ಪ್ರವೇಶಿಸಿದಂತೆ ತೋರಿಸಿ ಕಡೆಗೆ ಅವರನ್ನು ಸಮೂಲವಾಗಿ ನಾಶಗೊಳಿಸುವೆ! ತಾಯಿ, ನಿನ್ನ ಸಂಗ್ರಹವು ನಿನ್ನ ಪ್ರಾಪ್ತಿಯ ಲಕ್ಷಣವಲ್ಲದೇ ಅಲ್ಲ! ಯಾಕಂದರೆ, ಅಪಾರಳೂ, ಅವಶ್ಯಳೂ ಆದ ನಿನ್ನನ್ನು ಸಂಗ್ರಹಿಸಲು, ನಿನ್ನ ಪತಿಯಾದ ಮಹಾವಿಷ್ಣುವೊಬ್ಬನಲ್ಲದೆ ಅನ್ಯರು ಯಾರು ಸಮರ್ಥರಾಗಬಹುದು? ಹೀಗಿದ್ದು ನೀಚರು ಇದನ್ನರಿಯದೆ ಆ ಮಾರ್ಗದಿಂದ ನಿನ್ನನ್ನು ಸಂಪಾದಿಸಹೋಗಿ ಬಗೆಬಗೆಯ ದುಃಖಗಳಿಗೆ ಗುರಿಯಾಗಿ ಪರಲೋಕದಲ್ಲಿ ಘೋರ ನರಕಕ್ಕೆ ಈಡಾಗುವರು. ತಾಯಿ, ಅಮಾರ್ಗಿಗಳಾದ ಶ್ರೀಮಂತರು ವಿವಿಧ ರೋಗಗಳಿಗೆ ಗುರಿಯಾಗಲಿಕ್ಕೂ, ಸಂತತಿಯನ್ನು ಪಡೆಯದೆ ಇರಲಿಕ್ಕೂ ನಿನ್ನ ಕ್ಷೋಭವೇ ಕಾರಣವಲ್ಲವೆ? ಆದರೆ

ನಿನ್ನ ಕೃಪಾಸಂಪಾದನವು ಮಾತ್ರ ವ್ಯರ್ಥವೆಂದು ನಾನು ಹೇಳಲಾರೆನು. ತಾಯಿ, ನಿನ್ನ ಅನುಗ್ರಹವೂ ಈ ದಿವ್ಯಮೂರ್ತಿಯ ದರ್ಶನವೂ ಕಂಡವರಿಗೆ ಆಗುವದುಂಟೇ? ನಿನ್ನ ಮೋಹಕದೃಶ್ಯ ಸ್ವರೂಪವೆನಿಸುವ ಧನಾದಿಗಳನ್ನು ಧರ್ಮಮೂಲಕ ತಪಸ್ಸಿನಿಂದ ಸಂಪಾದಿಸಿ, ಅವನ್ನು ಲೋಕಹಿತರೂಪವಾದ ಯಜ್ಞಕ್ಕೋಸ್ಕರ ವಿನಿಯೋಗಿಸುವವರು ಮಾತ್ರ ನಿನ್ನ ಪರಮಾನುಗ್ರಹವನ್ನೂ, ಈ ದಿವ್ಯಮೂರ್ತಿಯ ದರ್ಶನವನ್ನೂ ಪಡೆಯಲು ಪಾತ್ರರಾಗುವರು. ಅವರ ಮನೆಯಲ್ಲಿಯೇ ನಿನ್ನ ನಿತ್ಯ ಸಂಚಾರವಿರುವದು. ಚಂಚಲಸ್ವಭಾವದ ಲೋಕಮಾತೆ ಯಾದ ನಿನ್ನನ್ನು ಕಾಲು ಮುರಿದು ಕೆಡವಿದಂತೆ ಮಾಡುವವರ ಮನೆಯಲ್ಲಿ ನೀನು ನಿಲ್ಲಬಹುದೇ? ಹೀಗೆ ಮಾಡುವದು ಉಡಿಯಲ್ಲಿ ಬೆಂಕಿಯಲ್ಲಿ ಬಚ್ಚಿಟ್ಟುಕೊಂಡಂತೆಯಲ್ಲವೇ? ತಾಯಿ, ನಮ್ಮ ಭರತಭೂಮಿಯು ನಾಶದ ಪಥವನ್ನು ಹಿಡಿದಿರುವದಕ್ಕೆ ನಿನ್ನನ್ನು ನೀಚತನದಿಂದ ಬಲಾತ್ಕರಿಸಿ ಕಾಲುಮುರಿದು ಅಲ್ಲಲ್ಲಿ ಕೆಡವಿದ್ದೇ ಕಾರಣವು. ನಿನ್ನನ್ನು ಬಲಾತ್ಕರಿಸಿ ಅನ್ಯಾಯದಿಂದ ಸಂಗ್ರಹಿಸಿಕೊಂಡ ರಾಜ್ಯಗಳು ಲಯಹೊಂದಿದವು, ಮನೆಗಳು ಮುಣುಗಿದವು, ದೇವಸ್ಥಾನಗಳು ಸುಲಿದವು, ಮೂರ್ತಿಗಳು ಒಡೆದವು! ಒಂದೇ ಮಾತಿನಲ್ಲಿ ಹೇಳುವದೆಂದರೆ, ಭರತಭೂಮಿಯಲ್ಲಿ ತಪೋಹಾನಿಯಾಗಿ ಬಂಗಾರದ ಹೊಗೆಹಾಯಹತ್ತಿದ ದಿವಸವೇ ಅದರ ನಾಶಕ್ಕೆ ಆರಂಭವಾಯಿತು! ತಾಯಿ, ನಿನ್ನನ್ನು ಹೀಗೆ ನಿಲ್ಲಿಸಿ ನಾನು ಹರಟುವದು ಉಚಿತವಲ್ಲದ್ದರಿಂದ ಸುಮ್ಮನಾಗುವೆನು. ಆದರೆ ನನ್ನ ಕುಲಸ್ವಾಮಿನಿಯಾದ ನೀನು ನನಗೆ ದ್ರವ್ಯಸಂಪಾದನದ ಲೌಕಿಕ ಮಾರ್ಗವನ್ನು ತೋರಿಸಿದ್ದಕ್ಕಾಗಿ ವ್ಯಸನವಾಗಿರುವದೆಂದು ಮಾತ್ರ ನಾನು ನಿವೇದಿಸದೆ ಇರಲಾರೆನು.

ಭುವನೇಶ್ವರಿ–ಭಕ್ತಶಿರೋಮಣೀ, ನೀನು ವ್ಯಸನಪಡಬೇಕೆಂದು ನಾನು ಮಾತಾಡಿದವಳಲ್ಲ, ಜ್ಞಾನಸಂಪನ್ನನಾದ ನಿನ್ನ ಮುಖದಿಂದ ಧನ ಸಂಪಾದನದ, ಹಾಗು ಅದರ ವಿನಿಯೋಗದ ಯೋಗ್ಯ ಮಾರ್ಗವು ಲೋಕಕ್ಕೆ ಗೊತ್ತಾಗಲೆಂದು ಸಥಿಯಿಂದ ಮಾತಾಡಿದೆನು; ಆದರೆ ಮಾಧವಾ, ಈಗಿನ ಕಲಿಯುಗದ ತಾಪದಾಯಕ ದ್ರವ್ಯಸಂಪಾದನದ ಪರಿಣಾಮವು ಏನಾದೀತೆಂದು ನೀನು ತಿಳಿದುಕೊಂಡಿರುತ್ತೀ? ಮಾತಾಡು, ಮಹಾಕಾರ್ಯಕ್ಕಾಗಿ ತಪಸ್ಸನ್ನಾಚರಿಸುತ್ತಿರುವ ನೀನು ಮನಬಿಚ್ಚಿ ಬೇಕಾದಷ್ಟು ಮಾತಾಡು, ಹೊಟ್ಟೆಯಲ್ಲಿಟ್ಟು ಕೊಳ್ಳಬೇಡ.

ಮಾಧವಾಚಾರ್ಯ–ತಾಯಿ, ನಿನ್ನ ಮುಂದೆ ಹೇಳದೆ ಹೊಟ್ಟೆಯಲ್ಲಿಟ್ಟುಕೊಂಡರೆ ಆಗುವದೇನು? ಇನ್ನು ಕಲಿಮಹಿಮೆಯಿಂದ ಜನರು ನಿನ್ನ ಸಂಪಾದನದ ಕಾಲಲ್ಲಿ ಸುಟ್ಟು ಸುಣ್ಣವಾಗುವರೆಂದು ನಾನು ಹೇಳುವೆನು. ಇಂಥ ಅತ್ಯಂತ ತಾಪದಾಯಕ ಸಂಪಾದನೇಚ್ಛೆಯ ಮಿತಿಯಾಗಲಿ, ತಾಪದಾಯಕ ಸಂಪಾದನದ ಮಿತಿಯಾಗಲಿ. ಮೀರಿದರೆ ಆಗಾಗ್ಗೆ ಭಯಂಕರ ರಾಜ್ಯಕ್ರಾಂತಿಯುಂಟಾಗಿ ಲೋಕಹಿತ ಯಜ್ಞದ ಬದಲು ಲೋಕಸಂಹಾರರೂಪ ಯಜ್ಞದಲ್ಲಿ ನಿನ್ನ ಅಸುರೀ ಸಂಗ್ರಹದ ವಿನಿಯೋಗವಾಗುವದು! ಆದ್ದರಿಂದ ಇನ್ನುಮೇಲೆ ಜಗತ್ತಿನಲ್ಲಿ ಭೂತಿ–ಪುಷ್ಟಿ–ತುಷ್ಟಿ–ಕೀರ್ತಿಗಳು ಉಂಟಾಗದೆ ದಾರಿದ್ರ್ಯ, ಅಶಕ್ತತೆ, ಅತೃಪ್ತಿ ಅಪಕೀರ್ತಿಗಳು

ಉಂಟಾಗುವವು. ಕಾಲಮಹಿಮೆಯಿಂದ ತಪೋಹಾನಿಯಾಗಿ ಧನತೃಷ್ಣೆಯು ಹೆಚ್ಚಾದ ಬಳಿಕ ಹೀಗಾಗತಕ್ಕದ್ದೇ ಸರಿ! ಆದರೆ ತಾಯಿ, ನನ್ನ ಜನ್ಮಭೂಮಿಯಾದ ಕರ್ನಾಟಕಕ್ಕೆ ಈ ದುರ್ದೆಶೆಯು ಒದಗದಂತೆ ನೀನು ರಕ್ಷಿಸಬೇಕು.

ಭುವನೇಶ್ವರಿ–ಆದೇಕೆ? ಕರ್ನಾಟಕದ ಉದ್ಧಾರಕ್ಕಾಗಿಯೇ ನೀನು ಇಷ್ಟು ಅಭಿಮಾನ ಪಡುವದೇಕೆ? ಬ್ರಾಹ್ಮಣನೆನಿಸುವ ನಿನ್ನ ದೃಷ್ಟಿಯು ಇಷ್ಟು ಸಂಕುಚಿತವಾಗ ಬಹುದೇ? ಜಗತ್ತಿನ ಕಲ್ಯಾಣ ಚಿಂತನವು ನಿನ್ನ ಕರ್ತವ್ಯವಲ್ಲವೇ?

ಮಾಧವಾಚಾರ್ಯ–ಹೌದು ಜನನೀ, ನಿನ್ನ ಮಾತಿಗೆ ನಾನೆಲ್ಲಿ ಅಲ್ಲವೆನ್ನುತ್ತೇನೆ? ಆದಿಮಾಯೆಯೆನಿಸುವ ನಿನ್ನ ಚರಣಕ್ಕೆರಗಿ ಅರಿಕೆ ಮಾಡಿಕೊಳ್ಳುವದೇನಂದರೆ, ಕಾರ್ಯತಃ ನಾನು ಕರ್ನಾಟಕದ ಹಿತವನ್ನು ಚಿಂತಿಸುವದು ನಿಜವಿದ್ದರೂ, ತತ್ವತಃ ನಾನು ಜಗತ್ತಿನ ಹಿತವನ್ನೇ ಚಿಂತಿಸಿದ ಹಾಗಾಗುವದು. ನಿನ್ನ ಈ ಸಂಕುಚಿತರೂಪದಲ್ಲಿ ವಿಶ್ವವ್ಯಾಪಿಯಾದ ನೀನು ಅಡಕವಾಗಿರುವೆಯಷ್ಟೆ? ಅದರಂತೆ ನಿನ್ನ ಕೃಪೆಯಿಂದ ನಾನು ಮಾಡುವ ಕರ್ನಾಟಕದ ಉದ್ಧಾರದ ತತ್ವಗಳು ಜಗತ್ತನ್ನೇ ಉದ್ಧರಿಸುವಲ್ಲಿ ಸಂಶಯವಿಲ್ಲ. ದೇಹೋಪಾದಿಯಿಂದ ಮರ್ಯಾದಿತವಾಗಿರುವ ನಾವು, ಅಮರ್ಯಾದಿತ ಜಗತ್ತಿನ ಉದ್ಧಾರವನ್ನು ತತ್ವತಃ ಮಾಡ ಬಹುದಲ್ಲದೆ ಕಾರ್ಯತ್ಯ ಮಾಡುವದು ಶಕ್ಯವಲ್ಲ, ಆದರೂ ಆ ಉದಾತ್ತ ತತ್ವಗಳ ಜೀರ್ಣೋದ್ಧಾರವು ಅಲ್ಲಲ್ಲಿ ಭಗವತ್ಕೃಪೆಯಿಂದ ಆಗಾಗ್ಗೆ ಆಗಬೇಕಾಗುತ್ತದೆ; ಆದ್ದರಿಂದ ಕರ್ನಾಟಕದ ಉದ್ಧಾರಕ್ಕೋಸ್ಕರ ನೀನು ನನ್ನನ್ನು ಅನುಗ್ರಹಿಸು.

ಭುವನೇಶ್ವರಿ–ವಿಪ್ರಶ್ರೇಷ್ಠ, ನೀನು ಹೇಳುವದು ಯುಕ್ತವೇ ಸರಿ; ನಿನ್ನ ಪ್ರಾರಬ್ಧದಲ್ಲಿ ವಿಪುಲ ಧನಪ್ರಾಪ್ತಿಯ ಯೋಗವಿಲ್ಲದಿರುವಾಗ ನಾನು ಮಾಡುವದೇನು? ಮನುಷ್ಯನು ಪಡೆದದ್ದು ಉಣ್ಣುವನು, ದುಡಿದದ್ದು ಉಣ್ಣುವದಿಲ್ಲ ಎಂದು ಲೋಕೋಕ್ತಿಯಿರುವದು. ಅಂದಬಳಿಕ ನೀನು ನಿರರ್ಥಕವಾಗಿ ಆಯಾಸಪಟ್ಟರೆ ವಿಪುಲ ಧನಪ್ರಾಪ್ತಿಯಾಗಬಹುದೇ?

ಮಾಧವ–ಏನು? ಜನನೀ, ನಾನು ಮಾಡಿದ ತಪಶ್ಚರ್ಯಕ್ಕೆ ವೃಥಾಯಾಸವೆನ್ನುವೆಯಾ? ಅದನ್ನು ಲೌಕಿಕರ ಸ್ವಾರ್ಥಪರವಾದ ಮಹತ್ವಾಕಾಂಕ್ಷೆಯ ಕಕ್ಕಸದ ದುಡಿತಕ್ಕೆ ಹೋಲಿಸುವೆಯಾ? ನೀನು ಪ್ರತ್ಯಕ್ಷವಾಗಿ ನನ್ನೆದುರಿಗೆ ನಿಂತು ಹೀಗೆ ಮಾತಾಡುವದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಗಿದೆ! ದಯಮಾಡಿ ಹೇಳು, ದುಡ್ಡು ದುಡ್ಡು ಎಂದು ದುಡ್ಡಿನ ಸಲುವಾಗಿ ಪ್ರಾಣ ಕೊಡುವ ಜನರು ದುಡ್ಡಿನ ರಾಶಿಯನ್ನು ಸಂಪಾದಿಸಿದರೂ, ನಿನ್ನ ಈ ದಿವ್ಯಮೂರ್ತಿಯ ದರ್ಶನವು ಅವರಿಗೆ ಆಗಬಹುದೇ? ಭಗವತೀ, ಅಂಥ ಎಷ್ಟು ಜನರಿಗೆ ನೀನು ದರ್ಶನ ಕೊಟ್ಟಿರುವೆ? ಅಂಥ ಎಷ್ಟು ಜನರು ನಿನ್ನ ಈ ವೈಭವಸಂಪನ್ನವಾದ ನಗೆಮೊಗದ ಸೊಬಗನ್ನು ನೋಡಿ ನಲಿದಾಡಿರುವರು? ಅಂದಬಳಿಕ ನನ್ನ ತಪಶ್ಚರ್ಯವನ್ನು ವೃಥಾಯಾಸವೆಂದು ನೀನು ಹೀಯಾಳಿಸಬಹುದೇ? ತಾಯಿ, ಅಷ್ಟೈಶ್ವರ್ಯಗಳು ನಿನ್ನ ಪ್ರಸಾದಗಳಾಗಿರುವವು. ಈ ಪ್ರಸಾದಪ್ರಾಪ್ತಿಯ ಅವಸರದಲ್ಲಿ ನಿನ್ನನ್ನು ಮರೆತು ಹೆಣಗುವ ಭಾವನಾರಹಿತರಂತೆ ನಾನು ಆಯಾಸಪಟ್ಟಿರುವದಿಲ್ಲ, ನನ್ನ ಬಲವತ್ತರವಾದ ಭಾವನೆಯು ನಿನ್ನನ್ನು ಹಿಡಿದು

ಎಳತಂದಿರುವದು. ನನ್ನ ತಪಶ್ಚರ್ಯೆಕ್ಕೆ ಪ್ರಸನ್ನಳಾಗಿ ನೀನು ಬಂದಿರುತ್ತೀ. ನನ್ನ ಜನನಿಯು ನೀನು ನನ್ನವಳಾದ ಬಳಿಕ ನಿನ್ನ ಪ್ರಸಾದರೂಪವಾದ ಅಷ್ಟೈಶ್ವರ್ಯಗಳು ಯಾರವಾದವು? ಲೋಕಜನನೀ, ಲೋಕಸೇವೆಗಾಗಿ ಆತುರಪಡುತ್ತಿರುವ ನಿನ್ನ ಪಾಮರ ಪುತ್ರನಾದ ಮಾಧವನನ್ನು ಹೀಗೆ ಯಾಕೆ ಕೆದರಿ ಕೆದರಿ ಪರಿಕ್ಷಿಸುವೆ?

ಭುವನೇಶ್ವರಿ–ಮಾಧವಾ, ನನ್ನ ಪರೀಕ್ಷಣಕ್ಕೆ ಬ್ರಾಹ್ಮಣನಾದ ನೀನೇ ತಕ್ಕವನು. ಬ್ರಾಹ್ಮಣರು ನೀವು ನನ್ನ ಪರಬ್ರಹ್ಮ ಸ್ವರೂಪದಲ್ಲಿ ಮನಸ್ಸನ್ನಿಟ್ಟು, ನನ್ನ ಈ ಮಾಯಾ ಸ್ವರೂಪವನ್ನು ಯಾವಾಗಲೂ ತಿರಸ್ಕರಿಸುತ್ತಿರುವಿರಿ. ನಾನು ನಿಮಗೆ ಗಣ್ಯಳೇ ಅಲ್ಲ, ಅತ್ಯಂತ ನಿಸ್ಪೃಹರೆನಿಸುವ ನಿಮ್ಮನ್ನು ನಾನೂ ಲೆಕ್ಕಿಸುವದಿಲ್ಲ; ಆದರೆ ಅದು ಒತ್ತಟ್ಟಿಗಿರಲಿ. ನಿನ್ನ ಪ್ರಾರಬ್ಧ ದಲ್ಲಿ ಐಶ್ವರ್ಯ ಭೋಗವಿಲ್ಲದ್ದರಿಂದ ಈಗ ನಿನಗೆ ವಿಪುಲವಾದ ಸಂಪತ್ತು ಪ್ರಾಪ್ತವಾಗಲಾರದು. ನೀನೇ ಹೇಳು, ಇದಕ್ಕೆ ನಾನೇನು ಮಾಡಬೇಕು? ನಿನ್ನ ಉಗ್ರತಪಸ್ಸಿಗೆ ಮೆಚ್ಚಿ ನಾನು ನಿನಗೆ ಪ್ರಸನ್ನಳಾಗಿದ್ದೇನೆ; ಆದರೆ ಐಶ್ವರ್ಯ ಭೋಗವು ಈ ಜನ್ಮದಲ್ಲಿ ನಿನಗೆ ಇಲ್ಲವೇ ಇಲ್ಲವಾದ್ದರಿಂದ, ನಾನು ಈ ಜನ್ಮದಲ್ಲಿ ನಿನಗೆ ಐಶ್ವರ್ಯವನ್ನು ಕೊಡಲಾರೆನು. ಈ ಜನ್ಮದ ಈ ಘೋರ ತಪಸ್ಸಿನ ಫಲವು ಮುಂದಿನ ಜನ್ಮದಲ್ಲಿ ನಿನಗೆ ನಿಶ್ಚಯವಾಗಿ ದೊರೆಯುವದು!

ಮಾಧವ–ಜನನೀ, ಏನಂದಿ? ನೀನು ನಿಸ್ಪೃಹ ಬ್ರಾಹ್ಮಣರನ್ನು ದುರ್ಲಕ್ಷಿಸುವೆಯಾ? ಇಂಥ ಮೋಸದ ಮಾತನ್ನು ನೀನು ಆಡಬಾರದು. ತತ್ವತಃ ನೋಡಿದರೆ ನಿನ್ನ ನಿಜವಾದ ವಾಸ್ತವ್ಯವು ಅಂಥ ನಿಸ್ಪೃಹಬ್ರಾಹ್ಮಣರ ಮನೆಯಲ್ಲಿಯೇ ಇರುತ್ತದೆ. ಜಗತ್ತು, ತುಷ್ಟಿ–ಪುಷ್ಟಿ–ಕೀರ್ತಿಗಳ ಸಲುವಾಗಿ ನಿನ್ನನ್ನು ಬಯಸುವದೇನೋ ನಿಜ; ಆದರೆ ನಿನ್ನ ಸ್ವರೂಪವರಿಯದ ಅಜ್ಞಾನಿಗಳು ಸಂಪತ್ತು ಹೆಚ್ಚುತ್ತಹೋದಂತೆ ಹೆಚ್ಚು ಹೆಚ್ಚು ತಾಪಕ್ಕೆ ಗುರಿಯಾಗುತ್ತ ಹೋಗುವರು; ಆದರೆ ಬ್ರಹ್ಮನಿಷ್ಠ ಬ್ರಾಹ್ಮಣರ ಮಾತು ಹಾಗಲ್ಲ, ಅವರನ್ನು ತುಷ್ಟಿ–ಪುಷ್ಟಿ–ಕೀರ್ತಿಗಳು ಸದಾ ಓಲೈಸುತ್ತಿರುವವು. ಇಂಥವರ ತುಷ್ಟಿ–ಪುಷ್ಟಿ–ಕೀರ್ತಿಗಳಿಗೆ ನಿನ್ನ ಅವಶ್ಯಕತೆಯಿಲ್ಲದಿದ್ದರೂ, ಲೋಕಕಲ್ಯಾಣಾರ್ಥವಾಗಿ ನೀನು ಅವರ ಜಿಹ್ವಾಗ್ರದಲ್ಲಿ ಯಾವಾಗಲೂ ವಾಸಿಸಿರುತ್ತೀ! ಈ ಸಂಬಂಧದಿಂದ ಶ್ರುತಿಯು––''ಭದ್ರೇಷಾಂ ಲಕ್ಷ್ಮೀರ್ನಿಹಿತಾಧಿವಾಚಿ'' ಅಂದರೆ, ''ಈ ಬ್ರಾಹ್ಮಣರ ಮಾತಿನಲ್ಲಿ ಮಂಗಳಕರವಾದ ಲಕ್ಷ್ಮಿಯು ಇರುತ್ತಾಳೆ'' ಎಂದು ಹೇಳಿರುವದು. ಅಂತೇ, ಅಂಥ ಬ್ರಹ್ಮನಿಷ್ಠ ಬ್ರಾಹ್ಮಣರ ಜಿಹ್ವಾಗ್ರದಿಂದ ಆಶೀರ್ವಚನವು ಹೊರಟಕೂಡಲೆ ಜಗತ್ತಿಗೆ ತುಷ್ಟಿ–ಪುಷ್ಟಿ–ಕೀರ್ತಿಗಳು ಲಭಿಸುವವು! ತಾಯಿ, ನಿನ್ನ ಕೃಪಾಪಾತ್ರರಾದ ಬ್ರಾಹ್ಮಣರ ಯೋಗ್ಯತೆಯು ಸಾಮಾನ್ಯವಾದದ್ದಲ್ಲ, ಅವರೇ ಮಹಾಲಕ್ಷ್ಮಿಯಾದ ನಿನ್ನ ಹೃದಯವನ್ನು ಸಂಪೂರ್ಣವಾಗಿ ಬಲ್ಲವರು! ನಿನ್ನ ಹೃದ್ಗತ ಚಾಂಚಲ್ಯವು ಅವರಿಗೆ ಚೆನ್ನಾಗಿ ಗೊತ್ತಿರುತ್ತದೆ; ಆದ್ದರಿಂದಲೇ ನಿನ್ನನ್ನು ಸಂಗ್ರಹಿಸಿಕೊಳ್ಳುವ ಗೊಡವೆಗೆ ನಿಜವಾದ ಬ್ರಾಹ್ಮಣರು ಸರ್ವಥಾ ಹೋಗುವದಿಲ್ಲ. ಚಿತ್ಸ್ವರೂಪಳಾದ ನಿನ್ನನ್ನು ತಮ್ಮ ಜಿಹ್ವಾಗ್ರದಲ್ಲಿ ಸ್ಥಿರವಾಗಿ ಇಟ್ಟುಕೊಳ್ಳುವದನ್ನು ಬಿಟ್ಟು, ನಿನ್ನ ಜಡಸ್ವರೂಪವಾದ ವಿತ್ತದ ಆಶ್ರಯದಿಂದ ಜಡರಾಗಲಿಕ್ಕೆ ಅವರು ಯಾಕೆ ಹೋದಾರು? ದೇವೀ, ಜಡಸ್ವರೂಪಳಾದ ನಿನ್ನ ಗತಿಯೂ ಮೂರು ವಿಧವಾದದ್ದೆಂದು ಜ್ಞಾನಿಗಳು ಹೇಳಿರುವರು ಹ್ಯಾಗಂದರೆ–

ಆರ್ಯಾ:- ದಾನಂ ಭೋಗೋ ನಾಶಸ್ತಿಸ್ರೋಗತಯೋಭವಂತಿ ವಿತ್ತಸ್ಯ ।
ಯೋನದದಾತಿ ನಭುಂಗ್ತೆ ತಸ್ಯ ತೃತಿಯಾ ಗರ್ಭವತಿ ॥

ಅಂದರೆ, ವಿತ್ತಸ್ವರೂಪಳಾದ ನಿನಗೆ ದಾನ-ಭೋಗ-ನಾಶಗಳೆಂಬ ಮೂರು ಗತಿಗಳಿರುವವು; ಆದ್ದರಿಂದ ಯಾವನು ದಾನವನ್ನು ಮಾಡುವದಿಲ್ಲ, ತಾನೂ ಭೋಗಿಸುವದಿಲ್ಲ ಅವನ ವಿತ್ತವು ನಾಶಹೊಂದುವದು. ವಿತ್ತನಾಶವೆಂದರೆ, ಚೌರ್ಯಾದಿ ಕರ್ಮಗಳಿಂದಾಗುವ ವಿತ್ತಾಪಹರಣವು. ಇಂಥ ನಾಶದ ಗಾಳಿಯು ಕೂಡ ಬ್ರಾಹ್ಮಣರ ಜಿಹ್ವಾಗ್ರದ ನಿನ್ನ ಚಿತ್ ಸ್ವರೂಪಕ್ಕೆ ಸೋಂಕಲಾರದು; ಯಾಕಂದರೆ, ನಾಶವು ಜಡಪದಾರ್ಥಕ್ಕೆ ಮಾತ್ರ ಸಂಬಂಧಿಸಿರುವದು. ಜನನೀ, ಇನ್ನು ನಿನ್ನ ಜಡಸ್ವರೂಪವಾದ ವಿತ್ತಸಂಪಾದನವಂತೂ ಬ್ರಾಹ್ಮಣ ವರ್ಗದ ಲಕ್ಷಣವೇ ಅಲ್ಲೆಂಬುದನ್ನು ನಾನು ನಿನ್ನಮುಂದೆ ವಿಜ್ಞಾಪಿಸಿಕೊಳ್ಳುವ ಅವಶ್ಯವಿರುವದಿಲ್ಲ; ಯಾಕೆಂದರೆ ಚಾತುರ್ವರ್ಣಗಳಲ್ಲಿ ಕೇವಲ ತ್ಯಾಗವು ಬ್ರಾಹ್ಮಣವರ್ಗದ ಲಕ್ಷಣವು, ತ್ಯಾಗಾದಿಕ್ಯವು ಕ್ಷತ್ರಿಯವರ್ಗದ ಲಕ್ಷಣವು, ತ್ಯಾಗ ಭೋಗಗಳ ಸಮತೆಯು ವೈಶ್ಯವರ್ಣದ ಲಕ್ಷಣವು. ಭೋಗಾದಿಕ್ಯವು ಶೂದ್ರವರ್ಣದ ಲಕ್ಷಣ. ಕೇವಲ ತ್ಯಾಗವೆಂದರೆ, ವಿತ್ತಸಂಪಾದನ ಸಾಮರ್ಥ್ಯವಿದ್ದರೂ, ವಿತ್ತದ ಗೌಣತ್ವವರಿತು ಅದರ ಅವಶ್ಯಕತೆ ಇಲ್ಲದಾಗ ಅದನ್ನು ಸಂಪಾದಿಸದಿರುವದು; ಮತ್ತು ಪ್ರಾರಬ್ಧಪ್ರಾಪ್ತ ವಿಪುಲವಿತ್ತವನ್ನು ಪರಾರ್ಥಕ್ಕಾಗಿ ವಿನಿಯೋಗಿಸಿ, ತಾನು ಯದೃಚ್ಛಾಲಾಭಸಂತುಷ್ಟನಾಗಿರುವದು. ಬ್ರಾಹ್ಮಣವರ್ಣದ ಈ ಉದಾತ್ತ ಲಕ್ಷಣವು ಜಗತ್ತಿನಲ್ಲಿ ಹೊಳೆಯುವವರೆಗೆ ಬ್ರಾಹ್ಮಣರು ಲೋಕಪೂಜ್ಯರು, ಲೋಕಗುರುಗಳು ಆಗುವಲ್ಲಿ ಸಂಶಯವಿಲ್ಲ. ಅವರ ಗೌರವಕ್ಕೆ ಬಾಧೆ ಯಾರಿಂದ ಬಂದೀತು? ತಮ್ಮ ಈ ಪವಿತ್ರ ಬ್ರಾಹ್ಮಣ್ಯವನ್ನು ಕಾಯ್ದುಕೊಳ್ಳುವುದಕ್ಕಾಗಿ ನಿಜವಾದ ಬ್ರಾಹ್ಮಣರು ಅನಾದಿ ಕಾಲದಿಂದ, ಋದ್ಧಿಸಿದ್ಧಿಗಳು ತಮ್ಮ ದಾಸಿಯರಾಗಿದ್ದರೂ ತಾವು ದರಿದ್ರರಾಗಿಯೇ ತೋರುತ್ತಬಂದಿರುವರು! ಅದರಿಂದ ತೇಜಸ್ವಿಗಳಾದ ಬ್ರಾಹ್ಮಣರ ದಾರಿದ್ರ್ಯವು ಅವರಿಗೆ ಅಲಂಕಾರಪ್ರಾಯವಾಗಿರುವದು. ಜನನೀ, ಭಗವಾನ್ ಭಾರ್ಗವನು 21 ಸಾರೆ ನಿಃಕ್ಷತ್ರಿಯ ಪೃಥ್ವಿಯನ್ನು ಮಾಡಿ, ಪ್ರಾಪ್ತವಾದ ಸಮಸ್ತ ಭೂಮಂಡಲವನ್ನು ಉದಕಧಾರಾಪೂರ್ವಕವಾಗಿ ಭಗವಾನ್ ಕಶ್ಯಪರಿಗೆ ದಾನಮಾಡಿ ತಾನು ಹೊಸ ಭೂಮಿಯಲ್ಲಿ ಇದ್ದದ್ದು ನಿನಗೆ ಗೊತ್ತಿಲ್ಲವೇ? ಇದು ಬ್ರಾಹ್ಮಣರ ಕೇವಲ ತ್ಯಾಗದ ಲಕ್ಷಣವಲ್ಲದೆ ಮತ್ತೇನು? ಇರಲಿ, ಇಂಥ ಪವಿತ್ರ ಬ್ರಾಹ್ಮಣವರ್ಗದಲ್ಲಿ ಜನಿಸಿದ ಈ ಮಾಧವನಿಗೆ ಈಗ ನೀನು ವಿಪುಲ ಧನಪ್ರಾಪ್ತಿಗಾಗಿ ಜನ್ಮಾಂತರವನ್ನು ಹೊಂದು ಎಂದು ಹೇಳುತ್ತೀ; ಈ ಮಾಧವನಂತು ಇದೇ ಜನ್ಮದಲ್ಲಿ ನಿನ್ನ ಕೃಪೆಯಿಂದ ಕರ್ನಾಟಕವನ್ನು ಉದ್ಧರಿಸಬೇಕೆನ್ನುವನು. ಈ ಜನ್ಮದಲ್ಲಿಯೇ ಜನ್ಮಾಂತರದ ಯೋಗ ಪಡೆಯುವ ಉಪಾಯವೆಂದರೆ, ಸನ್ಯಾಸಗ್ರಹಣವು. ಕರ್ನಾಟಕದ ಉದ್ಧಾರಕ್ಕಾಗಿ ಮಾಧವನು ಅದಕ್ಕೂ ಹಿಂದೆಮುಂದೆ ನೋಡುವದಿಲ್ಲ; ಅದಕ್ಕೇನು ತಡವಾಗಬೇಕಾಗಿದೆ? ಕಾಷಾಯ-ದಂಡ-ಕಮಂಡಲಗಳು ಅನಾಯಾಸವಾಗಿ ದೊರೆಯುವವು. ಆದರೆ ಜನನಿ, ಇನ್ನು ನಿನ್ನ ಅವಶ್ಯಕತೆ ನನಗಿರುವದಿಲ್ಲಾದ್ದರಿಂದ ನೀನು ಹೋಗಬಹುದು.

ಸನ್ಯಾಸಗ್ರಹಣಾಧಿಕಾರಿಯಾದ ಮಾಧವನು ಈಗ ಸ್ಪಷ್ಟವಾಗಿ ಹೇಳುವದನ್ನು ಇನ್ನೊಮ್ಮೆ ಕೇಳು; ಮತ್ತು ತಟ್ಟನೆ ಇಲ್ಲಿಂದ ಹೊರಟುಹೋಗು! ಸುಮ್ಮನೆ ನಿಂತು ಆಯಾಸಪಡಬೇಡ.

ಮಾತರ್ಲಕ್ಷ್ಮೀ ಭಜಸ್ವ ಕಂಚಿದಪರಂ ಮತ್ಕಾಂಕ್ಷಿಣೀ ಮಾಸ್ಮಭೂಃ।
ಭೋಗೇಭ್ಯಃಸ್ಪೃಹಯಾಲವಸ್ತವವಸೇ ಕಾನಿಸ್ಪೃಹಾಣಾಮಸಿ।
ಸದ್ಯಃಸೂತ ಪಲಾಶಪತ್ರಪುಟಕೇ ಪಾತ್ರೇ ಪವಿತ್ರೀಕೃತೇ।
ಭಿಕ್ಷಾಸಕ್ತುಭಿರೇವ ಸಂಪ್ರತಿವಯಂ ವೃತ್ತಿಂ ಸಮಿಹಾಮಹೇ ।।

''ತಾಯೀ, ಲಕ್ಷ್ಮೀದೇವೀ, ನೀನು ಇನ್ನು ಬೇರೆ ಯಾರ ಬಳಿಗಾದರೂ ಹೋಗು; ನನ್ನಲ್ಲಿ ಕಾಂಕ್ಷೆಯುಳ್ಳವಳಾಗಬೇಡ. ಭೋಗದಲ್ಲಿ ಇಚ್ಛೆಯುಳ್ಳವರು ನಿನ್ನ ವಶವರ್ತಿಗಳಾಗಿರುವರಲ್ಲದೆ, ನಿಸ್ಪೃಹಿಗಳಿಗೆ ನೀನು ಯಾರು? ಸದ್ಯಕ್ಕೆ ನಾವು ಹಚ್ಚಿದ ಎಲೆಯ ಪವಿತ್ರಕರ ಪಾತ್ರದಲ್ಲಿ ಭಿಕ್ಷೆಬೇಡಿ, ಬರುವ ಹಿಟ್ಟಿನಿಂದ ಉಪಜೀವಿಸುವ ವೃತ್ತಿಯನ್ನು ವಹಿಸಿರುವೆವು.''

ಈ ಮೇರೆಗೆ ನುಡಿದು ಮಾಧವಾಚಾರ್ಯರು ಸನ್ಯಾಸಗ್ರಹಣಕ್ಕಾಗಿ ಎದ್ದು ಗುಹೆಯ ಹೊರಗೆ ಹೋಗುತ್ತಿರಲು, ಜಗಜ್ಜನನಿಯು ಜಗ್ಗನೆ ಮುಂದಕ್ಕೆ ಬಂದು, ಆಚಾರ್ಯರ ಕೈಯನ್ನು ಹಿಡಿದಳು! ಆಗ ಭಗವತಿ ಮಾಧವಿಯ ಮುಗುಳುನಗೆಯ ದಂತಪಂಕ್ತಿಗಳ ಪ್ರಕಾಶದಿಂದ ಗುಹೆಯು ಬೆಳಗಿತು. ಹೆಜ್ಜೆ ಇಡುವಾಗ ಉಂಟಾದ ಆಕೆಯ ನೂಪುರಗಳ ಮಂಜುಲಧ್ವನಿಯು ಗುಹೆಯಲ್ಲಿ ಹಿಡಿಸದೆ ಹೊರಬಿದ್ದಿತು! ಅಹಹ! ಲೋಕಮಾತೆಯು ತನ್ನ ಲೋಕ ಶಿಕ್ಷಕ ಮಗನ ಕೈ ಹಿಡಿದು ತಡೆದ ಈಗಿನ ಶೋಭೆಯನ್ನೇನು ವರ್ಣಿಸುವದು? ತಾಯಿಯ ಈ ವಾತ್ಸಲ್ಯಕ್ಕಾಗಿ ಕೋಮಲಹೃದಯದ ಮಾಧವಾಚಾರ್ಯರ ಕಣ್ಣುಗಳೊಳಗಿಂದ ಆನಂದಭಾಷ್ಪಗಳು ಪಳಪಳನೆ ಸುರಿದವು. ಅವರು ಗದ್ಗದಕಂಠದಿಂದ– ''ಮಾತೆ'' ಎಂದು ಬಹುಕಷ್ಟದಿಂದ ನುಡಿಯುತ್ತಿರಲು, ಶ್ರೀ ಭಾರ್ಗವಿಯು–ವತ್ಸಾ, ಮಾಧವಾ, ಸಾಕು, ಇನ್ನು ಮಾತಾಡಿ ದಣಿಯಬೇಡ, ಮೊದಲೇ ಕಠಿಣ ತಪಸ್ಸಿನಿಂದ ಕ್ಷೀಣನಾಗಿದ್ದ ನೀನು ಈಗ ಮಾತಾಡಿ ಮಾತಾಡಿ ಆಯಾಸಪಟ್ಟಿರಲು, ಈಗ ಪುನಃ ಮಾತಾಡುವ ಆಯಾಸ ಮಾಡಿಕೊಳ್ಳಬೇಡ. ನಿನ್ನ ಬಿಚ್ಚಿದ್ದ ಹೃದಯವು ನನ್ನ ಕಣ್ಣೆದುರಿಗಿರುತ್ತದೆ. ಬ್ರಾಹ್ಮಣಶ್ರೇಷ್ಠಾ, ಕರ್ನಾಟಕ ಕುಲದೀಪಕಾ, ನಿನ್ನ ಆ ಸನ್ಯಾಸವೃತ್ತಿಯ ಬಿಚ್ಚಿದ ಹೃದಯವನ್ನು ನಾನು ಚೆನ್ನಾಗಿ ಪರೀಕ್ಷಿಸಿದೆನು. ನೀನು ಆಗಲೆ ಹೇಳಿದಂತೆ ನಾನು ನಿನ್ನಂಥ ಸನ್ಯಾಸವೃತ್ತಿಯ ಬ್ರಾಹ್ಮಣರ ಜಿಹ್ವಾಗ್ರಹದಲ್ಲಿರುವೆನೆಂಬದಿಷ್ಟೇ ಅಲ್ಲ, ಅಂಥವರನ್ನು ದಾಸಾನು ದಾಸಳಾಗಿ ಸೇವಿಸುವೆನು! ವಿಪ್ರಕುಲಭೂಷಣಾ, ಮಾಧವಾ, ನನ್ನ ಪಾಡೇನು? ನಿಮ್ಮಂಥ ನಿಸ್ಪೃಹ ವೃತ್ತಿಯ ಭಕ್ತರನ್ನು ನನ್ನ ಪತಿಯು ಕೂಡ ಸೇವಕನಾಗಿ ಆರಾಧಿಸುತ್ತಿರುವನು! ಆ ಸರ್ವೋತ್ತಮನಾದ ಶ್ರೀಹರಿಯನ್ನು ವಾಮನನಾಗಿ ಮಾಡಿ ತನ್ನ ಮನೆಯ ಬಾಗಿಲು ಕಾಯಹಚ್ಚಿದ ಬಲಿಚಕ್ರವರ್ತಿಯು ಭಕ್ತಶ್ರೇಷ್ಠನೇ ಅಲ್ಲವೇ? ಕೃಷ್ಣಾವತಾರ ತಾಳಿದ ಆ ಭಗವಂತನನ್ನು ಸಾರಥಿಯಾಗಿಮಾಡಿದ ಅರ್ಜುನನು ಭಕ್ತಶ್ರೇಷ್ಠನೇ ಅಲ್ಲವೇ? ಷಡ್ಗುಣೈಶ್ವರ್ಯ ಸಂಪನ್ನನಾದ ಆ ಶ್ರೀಹರಿಯು ರಣದಲ್ಲಿ ದಣಿದ ಅರ್ಜುನನ ಕುದುರೆಗಳ ಮೈ ತೊಳೆಯಲಿಕ್ಕೆ

ಸಹ ಹಿಂದೆ ಮುಂದೆ ನೋಡಲಿಲ್ಲ! ಮಾಧವಾ, ಹೆಚ್ಚಿಗೆಯೇನು ಹೇಳಲಿ? ಆ ನನ್ನ ಪತಿಯು ಪಾಂಡವರ ಮನೆಯಲ್ಲಿ ತನ್ನ ನಾಲ್ಕೂ ತೋಳುಗಳಿಂದ ಎಂಜಲ ಬಳಿದದ್ದು ನಿನಗೆ ಗೊತ್ತಿಲ್ಲವೇ? ಅಂದಬಳಿಕ ಷಡ್ಗುಣೈಶ್ವರ್ಯ ಸಂಪನ್ನನೂ ವ್ಯಕ್ತಾವ್ಯಕ್ತ ರೂಪಗಳಿಂದ ಜಗತ್ತಿಗೇ ಆರಾಧ್ಯನೂ, ಭಕ್ತಕಾಮನಾಕಲ್ಪದ್ರುಮವೂ ಆದ ಆ ಮಹಾವಿಷ್ಣುವಿನ ಚರಣಕಮಲಗಳನ್ನು ಧ್ಯಾನಿಸಿ, ವಿಷ್ಣುಪತ್ನಿ ಯೆನಿಸಿ ಧನ್ಯತೆಪಡೆದ ನಾನು ಭಕ್ತಶಿರೋಮಣಿಯಾದ ನಿನ್ನ ವಶವರ್ತಿಯಾಗುವಲ್ಲಿ ಆಶ್ಚರ್ಯವೇನು? ನಾನು ಈವರೆಗೆ ನಿನ್ನನ್ನು ಬಳಲಿಸಿದ್ದೇ ಸಾಕು. ಮಾಧವಾ, ನಿನ್ನ ಯೋಗ್ಯತೆಯು ಸಾಮಾನ್ಯವಲ್ಲವಪ್ಪಾ! ಇನ್ನುಮೇಲೆ ಪ್ರಕಟವಾಗುವ ನಿನ್ನ ರಾಜಕಾರಣಪಟುತ್ವದ ತೇಜಸ್ಸಿ ನಿಂದಲೂ, ಜ್ಞಾನಪ್ರಭಾವಪುಂಜದಿಂದಲೂ ಜಗತ್ತಿನ ಕಣ್ಣುಗಳು ನಿಶ್ಚಯವಾಗಿ ಕುಕ್ಕುವವು! ನಿನ್ನಂಥ ಮಹಾತೇಜಸ್ವಿಯಾದ ಭಕ್ತಶ್ರೇಷ್ಠನ ಕುಲದೈವತ ವೆನಿಸಿಕೊಳ್ಳುವ ನಾನು ಧನ್ಯಳೇ ಸರಿ! ಇನ್ನು ನೀನು ಸನ್ಯಾಸಗ್ರಹಣ ಮಾಡಲವಶ್ಯವಿಲ್ಲ. ನಿನ್ನ ಹೃದಯವು ಯಾವಾಗೋ ಸನ್ಯಾಸ್ತವಾಗಿ ಹೋಗಿರುವದರಿಂದ, ಅದರ ಲಾಂಛನವೆಂದು ಶಿಖಾ–ಯಜ್ಞೋಪವೀತಗಳನ್ನು ತೆಗೆದಿಟ್ಟು ಕಾಷಾಯ ದಂಡಗಳನಿಷ್ಟು ಧರಿಸಬೇಕಾಗಿದೆ; ಆದರೆ ಈಗ ಬಾಹ್ಯಸನ್ಯಾಸಗ್ರಹಣಕ್ಕೆ ನನ್ನನ್ನು ಕಾರಣಳಾಗಿಮಾಡಿ "ನನ್ನ ಮಗನನ್ನು ಸನ್ಯಾಸಿಯಾಗಮಾಡಿದಳೆ"ಂದು ನಿನ್ನ ತಾಯಿ–ತಂದೆಗಳೂ, "ನನ್ನ ಪತಿಯನ್ನು ಸನ್ಯಾಸಿಯಾಗ ಮಾಡಿದಳೆ"ಂದು ನಿನ್ನ ಹೆಂಡತಿಯೂ ನಿಷ್ಕಾರಣ ನನ್ನನ್ನು ದೂರೀಕರಿಸಿಕೊಳ್ಳುವಂತೆ ಮಾಡಬೇಡ! ಕಾಷಾಯ ದಂಡಮಾತ್ರದಿಂದ ಸನ್ಯಾಸಿಗಳೆನಿಸಿ ಕೊಳ್ಳುವ ಸನ್ಯಸ್ತಹೃದಯರಲ್ಲದ ವೇಷಧಾರಿಗಳಾದ ಸನ್ಯಾಸಿಗಳು ಈ ಕಲಿಯುಗದಲ್ಲಿ ಮಿಷ್ಟಾನ್ನದ ಆಶೆಯಿಂದ ಹಲವರು ಅಲ್ಲಲ್ಲಿ ಸಂಚರಿಸುತ್ತಿರಬಹುದು. ಆದರೆ ಮಾಧವಾ, ನೀನು ಅವರೊಳಗಿನವನಲ್ಲ ಸರ್ವಥಾ ಅಲ್ಲ! ನೀನು ಗೃಹಸ್ಥಾಶ್ರಮಿಯ ವೇಷದಿಂದ ಜಗತ್ತನ್ನು ದ್ಧರಿಸಲು ಅವತಾರ ತಾಳಿದ ಯತಿ ಪುಂಗವನಾಗಿರುತ್ತೀ? ವಿದ್ವನ್ಮಣಿಯೇ, ಸನ್ಯಸ್ತಹೃದಯದ ಗೃಹಸ್ಥಾಶ್ರಮಿಗಳೂ, ಗೃಹಸ್ಥಾಶ್ರಮಿಗಳ ವಿಷಯದ ಅನುಕಂಪವುಳ್ಳ ಯತಿಗಳೂ ಮಾತ್ರ ಲೋಕವನ್ನುದ್ಧರಿಸಲು ಸಮರ್ಥರಾಗುವರು ! ಆದ್ದರಿಂದ ನೀನು ಸನ್ಯಾಸದ ಲಾಂಛನಧಾರಣ ವಿಧಿಯನ್ನು ಈಗಲೇ ಮಾಡಿಕೊಳ್ಳಬೇಡ. ಮೊದಲು ಕರ್ನಾಟಕದ ಸಿಂಹಾಸನವನ್ನು ಸ್ಥಾಪಿಸು; ನಿನ್ನ ಸೇವಕರಾದ ಮೂವರು ರಾಯರ ಆಳಿಕೆಯ ನೆವದಿಂದ ಕರ್ನಾಟಕದ ಕಲ್ಯಾಣದ ಕಾರ್ಯಗಳನ್ನು ಎಪ್ಪತ್ತು ವರ್ಷದವನಾಗುವವರೆಗೆ ನೀನು ಜರುಗಿಸು; ಈ ಅವಧಿಯಲ್ಲಿ ವಿದ್ಯಾನಗರವೆಂಬ ಹೆಸರಿನ ಲೋಕವಿಖ್ಯಾತ ರಾಜಧಾನಿಯು ನಿನ್ನಿಂದ ಸ್ಥಾಪಿಸಲ್ಪಡಲಿ! ಮಾಧವಾ, ನೀನು ಕೇವಲ ಅಮಾತ್ಯ ಮಾಧವನೆಂಬ ಹೆಸರಿನಿಂದಲೇ ಪ್ರಸಿದ್ಧನಾಗುವದಿಲ್ಲ. ವಿದ್ವದ್ವರ್ಯ ನಾದ ನೀನು ಗುರ್ವನುಗ್ರಹದಿಂದ ವಿವಿಧವಾದ ವಿಪುಲ ಗ್ರಂಥಗಳಿಂದ ಸಂಸ್ಕೃತ ವಾಙ್ಮಯದ ಗೌರವವನ್ನು ಹೆಚ್ಚಿಸಿ, ವಿದ್ಯಾರಣ್ಯನೆಂಬ ಬಿರುದನ್ನು ಪಡೆಯುತ್ತೀ! ಮಾಧವಾ, ಇಷ್ಟಕ್ಕೇ ನಿನ್ನ ವೈಭವದ ಪರಿಪೂರ್ತಿಯಾಗಲಿಲ್ಲ. ಕಡೆಗೆ ನೀನು ಅಧ್ಯಾತ್ಮಸಾಮ್ರಾಜ್ಯದ ಚಕ್ರವರ್ತಿಯಾಗಲು, ಶೃಂಗೇರಿಯ ಜಗದ್ಗುರು ಪೀಠವನ್ನು ಏರಿ ಜಗದ್ಗುರು ಮಾಧವನೆಂಬ ಬಿರುದನ್ನು ಪಡೆದು, ಅದೇ ಪ್ರತಿಫಲವಾಗಿಯೇ ಅನ್ನುವಂತೆ, ಜಗದ್ಗುರು ಪೀಠದ

ಆಚಾರ್ಯವರ್ಯರನ್ನು ''ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ'' ರೆಂದು ಅಪೂರ್ವ ಬಿರುದಿನಿಂದ ಅಲಂಕರಿಸುವೆ! ಹೀಗೆ ನೀನು ಜಗದ್ಗುರು ಪೀಠವನ್ನು ಅಲಂಕರಿಸುವಾಗ ಕಾಷಾಯ–ದಂಡಗಳನ್ನು ನಿರ್ಬಾಧವಾಗಿ ಧರಿಸುವೆಯಂತೆ! ವತ್ಸಾ, ಬಿಡು, ನಿನ್ನ ಈಗಿನ ಸನ್ಯಾಸಗ್ರಹಣೇಚ್ಛೆಯನ್ನು ಬಿಟ್ಟುಬಿಡು. ಇನ್ನು ಮೇಲೆ ಧನ್ಯವಾದ ನೀನು ಮನೆಗೆ ಹೋಗಿ ಮಾತಾಪಿತೃಗಳ ಚರಣಗಳ ಮೇಲೆ ಮಸ್ತಕವನ್ನಿಡಲು, ರೋಮಾಂಚಿತರಾದ ಅವರ ಕಣ್ಣುಗಳಿಂದ ಆನಂದ ಬಾಷ್ಪಗಳುದುರಲಿ! ನಿನ್ನ ಪ್ರಿಯ ಬಂಧುಗಳಾದ ಸಾಯಣ– ಭೋಗನಾಥರು, ನನ್ನ ಪ್ರಸಾದದಿಂದ ತುಷ್ಟನಾದ ನಿನ್ನನ್ನು ಭಕ್ತಿಯಿಂದ ವಂದಿಸಿ ಧನ್ಯರಾಗಲಿ! ನಿನ್ನ ವಿರಹತಾಪದಿಂದ ತಪ್ತಳಾಗಿದ್ದ ನಿನ್ನ ಪ್ರೀತಿಯ ಪತ್ನಿಯಾದ ವೈತಿಹೋತ್ರಿಯು ನನ್ನ ಪ್ರಸಾದದಿಂದ ಶಾಂತನಾದ ನಿನ್ನನ್ನು ಆಲಿಂಗಿಸಿ ಶಾಂತಳಾಗಲಿ! ಮಾತೃಭೂಮಿಯೆನಿಸುವ ಈ ಕರ್ನಾಟಕವು, ತನ್ನ ಉದ್ಧಾರದ ಕಾರ್ಯದ ಅವಸರದಲ್ಲಿ ದೇಹದ ಪರಿವೆ ಕೂಡ ಇಲ್ಲದೆ ಸಂಚರಿಸುವ ನಿನ್ನ ಚರಣಾಘಾತದಿಂದ ರೋಮಾಂಚಿತವಾಗಲಿ!! ಮಾಧವಾ, ಅಗೋ ಅತ್ತ ನೋಡು, ಯದುಕುಲೋತ್ಪನ್ನನಾದ ಕ್ಷತ್ರಿಯವೀರನು ನಿನ್ನ ಪ್ರಸಾದದ ಇಚ್ಛೆಯಿಂದ ಧ್ಯಾನಸ್ಥನಾಗಿ ಕುಳಿತಿದ್ದಾನೆ; ಆದ್ದರಿಂದ ಆತನ ಮುಖಾಂತರ ನೀನು ಕರ್ನಾಟಕ ಸಿಂಹಾಸನದ ಪ್ರತಿಷ್ಠಾಪನೆ ಮಾಡು; ಅದಕ್ಕಾಗಿ ನಿನಗೆ ನಾನೇನು ವರಪ್ರದಾನ ಮಾಡಲಿ ಬೇಗನೆ ಹೇಳು.

ಹೀಗೆ ತನ್ನೊಡನೆ ಹುಕ್ಕರಾಜನಿಗೂ ವರಪ್ರದಾನ ಮಾಡಿ ನುಡಿಯುವ ಲೋಕಮಾತೆಯ ವಾತ್ಸಲ್ಯದ ವರದವಾಣಿಗಳನ್ನು ಕೇಳಿ ಮಾಧವಾಚಾರ್ಯರು ಕೃತಜ್ಞತೆಯಿಂದ ಕೈಜೋಡಿಸಿ– ತಾಯೀ, ಇದಕ್ಕೂ ಹೆಚ್ಚಿನ ವರಪ್ರದಾನವು ನನಗಾಗಲಿ, ಹುಕ್ಕರಾಜನಿಗಾಗಲಿ, ಕರ್ನಾಟಕ ಭೂಮಾತೆಗಾಗಲಿ ಏನು ಬೇಕಾಗಿದೆ? ನಿನ್ನ ಈ ವರಪ್ರದಾನದಿಂದ ನಾವು ಮೂವರೂ ಸಂತುಷ್ಟ ರಾಗಿರುವೆವು; ಆದರೆ ಲೋಕಜನನೀ, ನಿನ್ನ ಮಹಾಮಹಿಮೆಯು ಜಗತ್ತಿಗೆ ಗೊತ್ತಾಗುವದಕ್ಕಾಗಿ, ಇಗೋ, ಈ ವಿದ್ಯಾನಗರದ ವಸತಿಸ್ಥಾನದ ಮೇಲೆ ನಾನು ನೆನಸಿದಾಗ ಮೂರುಮುಕ್ಕಾಲು ಗಳಿಗೆಗಳವರೆಗೆ ಸುವರ್ಣವೃಷ್ಟಿಯಾಗಬೇಕು; ಮತ್ತು ಆಪದ್ಧನವೆಂದು ನನಗೊಂದು ಗುಪ್ತನಿಧಿಯು ದೊರೆಯಬೇಕು; ಎಂದು ಬೇಡಿಕೊಳ್ಳಲು ''ತಥಾಸ್ತು'' ಎಂಬ ಗಂಭೀರಧ್ವನಿಯು ಗುಹೆಯನ್ನು ತುಂಬಿ ಹೊರಬಿದ್ದಿತು! ಈ ಅವರಸರದಲ್ಲಿ ಲೋಕಮಾತೆಯ ಮನೋಹರರೂಪವು ಗುಪ್ತವಾಗಿ ಪ್ರಕಾಶವು ಅಡಗಲು, ಹುಕ್ಕನು ಮೆಟ್ಟಿಬಿದ್ದು ಕಣ್ಣುತೆರೆದನು. ಆಗ ಬೆಳಗಿನ ತಂಗಾಳಿಯಿಂದ ಆತನ ಮೈ ಗುಗ್ಗರಿಗಟ್ಟಿತು. ಶಿಷ್ಯರು ಸ್ನಾನಕ್ಕೆ ಹೋಗುವ ಅವಸರದಲ್ಲಿದ್ದರು. ಚಿನ್ನಮ್ಮನು ಗುರುಮಹಿಮೆಯ ಪದಗಳನ್ನು ಮನೋಹರವಾಗಿ ಅನ್ನುತ್ತ ಗುಹಾ ಪ್ರದೇಶದ ಕಸಗುಡಿಸತೊಡಗಿದ್ದಳು. ಅಷ್ಟರಲ್ಲಿ ಅರುಣೋದಯವಾಗಿ ಮೂಡಲು ಕೆಂಪೇರತೊಡಗಿತು. ಈ ಅರುಣೋದಯದ ಸಂಗಡ ಕರ್ನಾಟಕದ ವೈಭವದ ಅರುಣೋದಯವೂ ಆಯಿತೆಂದು ಸೂಚಿಸುವದಕ್ಕಾಗಿಯೇ ಅನ್ನುವಂತೆ, ಹುಕ್ಕನ ಠಾಣ್ಯದೊಳಗಿಂದ ಜೋಡು ಕೋಳಿಗಳು ''ಕುಕೂಕೋ'' ಎಂದು ಒಮ್ಮೆಲೆ ಏಕಸ್ವರದಿಂದ ಕೂಗಿದವು!

# ದೇವರಾಯನ ದರ್ಬಾರ

ಮುಂಜಾವಿನ ಸಮಯವು. ಆನೆಗುಂದಿಯ ಜನರಲ್ಲಿ ವಿಲಕ್ಷಣ ಗೊಂದಲವೆದ್ದಿದೆ. ವ್ಯಗ್ರ ಚಿತ್ತರಾಗಿದ್ದವರಿಂದ ಅವರ ದಿನದ ಕೆಲಸಗಳೂ ಸುಸೂತ್ರವಾಗಿ ಸಾಗದಾಗಿವೆ. ಅವರ ಇಂದ್ರಿಯಗಳು ಕೆಲಸದಲ್ಲಿ ತೊಡಗಿದ್ದರೂ, ಮನಸ್ಸು ದರ್ಬಾರದ ಕಡೆಗೆ ಹೋದದ್ದರಿಂದ ಹಿರಿಯರಿಲ್ಲದ ಮನೆಯಂತೆಯೂ, ಗುರುಗಳಿಲ್ಲದ ಮಠದಂತೆಯೂ ನೋಡಿದತ್ತ ಔದಾಸೀನ್ಯವೂ, ಅವ್ಯಸ್ಥೆಯೂ ತಲೆದೋರುತ್ತಲಿವೆ. ಚಿತ್ತ ಒತ್ತಟ್ಟಿಗೆ, ಲಕ್ಷ ಒತ್ತಟ್ಟಿಗೆ ಅನ್ನುವಂತೆ ಆಗಿ, ಜನರ ವ್ಯವಹಾರಗಳು ತಾಳಗೆಟ್ಟು ಹೋಗಿವೆ. ಪ್ರಾತಃಕಾಲದ ಪೂಜೆಪುರಸ್ಕಾರ ಮಾಡುವವರು, ತಾವು ಎಲ್ಲಿ ಮರೆತೆವೋ ಎಂಬ ಭ್ರಾಂತಿಯಿಂದ ಆಗಾಗ್ಗೆ ತಿರುತಿರುಗಿ ಮಂತ್ರಗಳನ್ನು ಅನ್ನತೊಡಗಿದ್ದಾರೆ; ಮಾಡಿದ ಕರ್ಮಗಳನ್ನು ಪುನಃಪುನಃ ಮಾಡತೊಡಗಿದ್ದಾರೆ. ತಮ್ಮ ತಮ್ಮ ನಿತ್ಯದ ಕೆಲಸಗಳನ್ನಾರಂಭಿಸುವ ವಿಷಯದಲ್ಲಿ ಜನರು ಉತ್ಸಾಹಹೀನರಾಗಿ, ''ಹಾಳು ಕೆಲಸವು ಯಾರಿಗೆ ಬೇಕಾಗಿದೆ'' ಎಂದು ಉದಾಸೀನರಾಗಿ ಸುಮ್ಮನೆ ಕೂಡತೊಡಗಿದ್ದಾರೆ. ಹೆಣ್ಣುಮಕ್ಕಳು ಬಗೆಹರಿಯದ ಆಲೋಚನೆಯಲ್ಲಿ ಮುಳುಗಿ, ಉಸುರುಹಾಕುತ್ತ ಏನು ಪ್ರಸಂಗ ಒದಗುವದೋ ಎಂದು ಚಿಂತಿಸುವಾಗ ಕೈಯೊಳಗಿನ ಕೆಲಸ ಮರೆತು, ಉದ್ದೇಶವಿಲ್ಲದೆ ಎತ್ತಕಡೆಗೋ ಏಕಾಗ್ರದೃಷ್ಟಿಯಿಂದ ನೋಡುತ್ತ ಪಕ್ಕನೆ ನೆನಪಾದಕೂಡಲೆ, ಬಡ ಬಡ ಕೆಲಸಗಳನ್ನು ಮಾಡತೊಡಗಿರುತ್ತಾರೆ. ಹುಡುಗರು ಮನೆಯವರ ಭಯಪ್ರದವಾದ ಈ ಔದಾಸೀನ್ಯದ ಸ್ಥಿತಿಯನ್ನು ನೋಡಿ, ಉತ್ಸಾಹಹೀನರಾಗಿ ಸಣ್ಣ ಮೋರೆ ಮಾಡಿಕೊಂಡು ಹಿರಿಯರ ಬಳಿಯಲ್ಲಿ ಮೌನದಿಂದ ನಿಂತುಕೊಂಡಿದ್ದಾರೆ. ವೃದ್ಧರಾದವರು ತಮ್ಮ ಜಂಬುಕೇಶ್ವರರಾಯನ ಕಾಲದ ಚೆಂದವನ್ನೂ, ವೈಭವವನ್ನೂ ಸುಖ-ಸಂಪತ್ತುಗಳನ್ನೂ ಸ್ಮರಿಸಿ, ''ಎಂಥ ಭಯಂಕರ ಕಾಲವು ಒದಗಿತಲ್ಲ! ಕಾಲಗತಿಯು ವಿಲಕ್ಷಣವಾದದ್ದು. ಈ ಜಗತ್ತಿನಲ್ಲಿ ಯಾವದೂ ಸ್ಥಿರವಲ್ಲ'' ಎಂದು, ಉಸುರ್ಗರೆಯುತ್ತ ತಮ್ಮ ತಮ್ಮ ಇಷ್ಟದೇವತೆಗಳನ್ನು ಸ್ಮರಿಸತೊಡಗಿದ್ದಾರೆ. ಅಲ್ಲಲ್ಲಿ ಜನರು ಗುಂಪುಗೂಡಿ ಭಯದಿಂದ ಏನೇನೋ ಮಾತಾಡತೊಡಗಿದ್ದಾರೆ. ಯಾರು ತಮ್ಮಲ್ಲಿ ಇದ್ದ ಬಿದ್ದದ್ದನ್ನು ಬಚ್ಚಿಡತೊಡಗಿದ್ದಾರೆ; ಯಾರು ಪ್ರಿಯಕರ ವಸ್ತುಗಳನ್ನು ಮರೆಮಾಡತೊಡಗಿದ್ದಾರೆ; ಯಾರು ತಮ್ಮ ಮನೆಯೊಳಗಿನ ತರುಣ ಸ್ತ್ರೀಯರನ್ನು ಸಿಕ್ಕಹಾಗೆ ಹೊರಗೆ ಹೋಗದಂತೆ ಪ್ರತಿಬಂಧಿಸತೊಡಗಿದ್ದಾರೆ; ಯಾರು ತಮ್ಮ ವಂಶರಕ್ಷಣದ ಆಶೆಯಿಂದ ಇದ್ದ ಒಬ್ಬನೇ ಒಬ್ಬ ಮಗನನ್ನು ಪರಸ್ಥಳಕ್ಕೆ ಕಳಿಸತೊಡಗಿದ್ದಾರೆ; ಕೆಲವರು ಪುಕ್ಕರು ತಮ್ಮ ಗಂಟುಬಟ್ಟೆಗಳನ್ನು ಕಟ್ಟಿಕೊಂಡು ಏನೋ ಒಂದು ನೆವಹೇಳಿ, ಪ್ರಯಾಣವನ್ನು ಬೆಳೆಸಹತ್ತಿದ್ದಾರೆ ''ಯವನರ ಪ್ರಾಬಲ್ಯವಾಯಿತು, ರಕ್ಷಕರಿಲ್ಲದೆಹೋಯಿತು, ಯಾವ ಕಾಲಕ್ಕೆ ಎಂಥ ಪ್ರಸಂಗ ಬಂದೀತೆಂಬದನ್ನು ಹೇಳಲಿಕ್ಕೆ ಬಾರದಾಯಿತು'' ಎಂದು ಅಲ್ಲಲ್ಲಿ ನಿರಾಶೆಯ ಉದ್ಗಾರಗಳು ಹೊರಡಹತ್ತಿವೆ. ಅಷ್ಟರದಲ್ಲಿ ತಾಸುಹೊತ್ತು ಏರಿ ದಿನಮಣಿಯು ಮೇಲಕ್ಕೆ ಬರತೊಡಗಿರಲು, ಯವನ ರಾವುತರ ಬೆಟ್ಟದಂಥ ಕುದುರೆಗಳು ತಮ್ಮ ಖುರಗಳ ಆಘಾತದಿಂದ ಕರ್ನಾಟಕ

ಭೂಮಾತೆಯನ್ನೇ ಅಲ್ಲ, ತಮ್ಮ ದರ್ಪದಿಂದ ಕನ್ನಡಿಗರ ದುರ್ಬಲ ಹೃದಯವನ್ನು ಕೂಡ ನಡುಗಿಸುತ್ತ ಅರಮನೆಯ ಕಡೆಗೆ ಸಾಗಹತ್ತಿದ್ದವು. ಆ ರಾವುತರ ಕ್ರೂರ ಮುದ್ರೆಗಳನ್ನೂ, ಅವರ ಭವ್ಯ ಶರೀರಗಳನ್ನೂ ಅವರು ಧರಿಸಿದ ವಿವಿಧಾಸ್ತ್ರಗಳನ್ನೂ ನೋಡಿ ಪುಕ್ಕಜನರು ಅಂಜಿ ಮನೆಯನ್ನು ಸೇರಹತ್ತಿದರು; ಬೀದಿಯಲ್ಲಿ ಗದ್ದಲವು ಕಡಿಮೆಯಾಗಹತ್ತಿತು; ಮನೆಯ ಬಾಗಿಲುಗಳು ಇಕ್ಕಹತ್ತಿದವು; ಸುಂದರ ಸ್ತ್ರೀಯರ ಸದ್ದು ಅಡಗಹತ್ತಿತು; ವ್ಯಾಪಾರ ಉದ್ದಿಮೆಗಳು ನಿಂತವು. ಇಂದು ತಮ್ಮ ರಾಜಧಾನಿಗೆ ಪ್ರಳಯಕಾಲವೇ ಒದಗಿತೋ ಎಂದು ಜನರು ಚಿಂತಾಕ್ರಾಂತರಾಗಿರಲು, ತುಂಬಿದ ರಾಜಮಾರ್ಗವು ಕ್ಷಣದಲ್ಲಿ ಹಾಳುಸುರಿಯಹತ್ತಿತು..

ಹೀಗೆ ಆನೆಗುಂದಿಯ ಆಬಾಲವೃದ್ಧರು ಚಿಂತಾಕ್ರಾಂತವಾಗಿರುವಾಗ ಭವ್ಯಾಕಾರದ ಒಬ್ಬ ಯವನ ವೀರನು ಅಶ್ವಾರೂಢನಾಗಿ ರಾಜಮಾರ್ಗವಿಡಿದು ಸಾವಕಾಶ ಬರತೊಡಗಿದನು. ಆತನ ಹಿಂದು–ಮುಂದು–ಮಗ್ಗಲುಗಳಲ್ಲಿ ಅಂಗರಕ್ಷಕರಾದ ತೀಕ್ಷ್ಣಶಸ್ತ್ರದ ಹಲವು ಯವನ ವೀರರು ಅಶ್ವಾರೂಢರಾಗಿ ತಮ್ಮ ಒಡೆಯನ ಚಲನವಲನದಲ್ಲಿ ಸಂಪೂರ್ಣ ದೃಷ್ಟಿಯನ್ನಿಟ್ಟು ಬಹು ಜಾಗರೂಕತೆಯಿಂದ ಸಾಗಿಬರುತ್ತಲಿದ್ದರು. ಆ ಘನವಂತನಾದ ಯವನ ವೀರನ ಮೈಬಣ್ಣ ಕೆಂಪು; ಮುಖಮುದ್ರೆ ಉಗ್ರ; ಮೈಕಟ್ಟು ಹವಣೆಯದು. ಆತನ ಇಡಿಯ ಮೂರ್ತಿಯ ದರ್ಶನವು ಮನೋಹರವಾಗಿದ್ದರೂ, ಅತ್ಯಂತ ಭಯಪ್ರದವಾಗಿತ್ತು! ವಿಲಕ್ಷಣ ಉಡಿಗೆ–ತೊಡಿಗೆಯ ಈ ಕ್ರೂರಪುರುಷನು ಸಿಟ್ಟಿಗೆದ್ದರೆ, ಕ್ಷಣದಲ್ಲಿ ಆನೆಗುಂದಿಗೆ ಆನೆಗುಂದಿಯನ್ನೇ ಮಣ್ಣುಗೂಡಿಸ ಬಹುದೆನ್ನುವಹಾಗೆ ನಮ್ಮ ಅಳ್ಳೆದೆಯ ಕನ್ನಡಿಗರಿಗೆ ತೋರಹತ್ತಿತು; ಯಾಕಂದರೆ ಆ ರಾಕ್ಷಸಸ್ವಭಾವದ ಘನವಂತನ ಕ್ರೂರತನದ ಹಲವು ಚರಿತ್ರಗಳನ್ನು ಕೇಳಿ ಕೇಳಿ ಅವರ ದುರ್ಬಲ ಹೃದಯಗಳು ಹಣ್ಣುಹಣ್ಣಾಗಿ ಹೋಗಿದ್ದವು! ಆ ಭವ್ಯಪುರುಷನು ತನ್ನ ಕೆಂಪಡರಿದ ಕಣ್ಣುಗಳಿಂದ ರಾಜಬೀದಿಯ ಬದಿಗಳನ್ನು ನೋಡುತ್ತ ಸಾಗಿರಲು, ಆತನ ಉಗ್ರನೋಟಕ್ಕೆ ಗುರಿಯಾಗ ಲಾರದೆ, ಕೆಲವರು ತಮ್ಮ ದೃಷ್ಟಿಗಳನ್ನು ಹೊರಳಿಸುವರು. ಕೆಲವು ಮರೆಯಾಗುವರು; ಕೆಲವರು ಮನೆಯನ್ನು ಸೇರುವರು; ಆದರೂ ಆ ಲೋಕೋತ್ತರ ಪುರುಷನನ್ನು ನೋಡುವ ಜನರ ಕುತೂಹಲವು ಮಾತ್ರ ಕಡಿಮೆಯಾಗಲೊಲ್ಲದು. ದಿಟ್ಟರಾದವರು ನಿರ್ಭಯದಿಂದ ಆತನನ್ನು ನೋಡುತ್ತ ನಿಂತುಕೊಂಡಿದ್ದರು. ಪುಕ್ಕರಲ್ಲಿ ಕೆಲವರು ತಮ್ಮ ಮನೆಯ ಬಾಗಿಲ ಮರೆಗೆ, ಕೆಲವರು ಕಿಡಿಕೆಯ ಮರೆಗೆ ನಿಂತು ಆತನನ್ನು ನೋಡಹತ್ತಿದರು. ಹೆಣ್ಣುಮಕ್ಕಳು ಮನಸ್ಸು ನಿಲ್ಲದೆ ತಮ್ಮ ಮನೆಯ ಇಂಥ ಪುಕ್ಕ ಗಂಡಸರ ಮರೆಗೆ ನಿಂತು ಅಂಜುತ್ತಂಜುತ್ತ ಆ ಲೋಕವಿಲಕ್ಷಣ ಪುರುಷನನ್ನು ನೋಡತೊಡಗಿದರು. ಆಗ ಕೋಮಲಹೃದಯದ ಆರ್ಯ ಸುಂದರಿಯರ ಮುಖದಲ್ಲಿ ಭಯ–ಕೌತುಕಗಳ ಕಳೆಯು ಉಕ್ಕುತ್ತಿರಲು, ಆ ಕ್ರೂರನ ಕ್ರೌರ್ಯಾಚರಣೆಗಳ ಸ್ಮರಣದಿಂದ ಅವರ ಹೃದಯಗಳು ಕಂಪಿಸಿ, ಅವರ ಮುಖದಲ್ಲಿ ಬೆವರ ಹನಿಗಳು ಒಪ್ಪಹತ್ತಿದವು! ಆಗ ಕೆಂಪು ಛಾಯದ ಬೆವತ ಗಲ್ಲಗಳ ಆ ಸುಂದರಿಯರ ಮುಖಶೋಭೆಯು ಬಹು ಮನೋಹರವಾಯಿತು! ಆ ಧೀರಪುರುಷನು ಇದನ್ನಾವದನ್ನೂ ಲಕ್ಷಿಸದೆ, ತಾನು ಸಾಗುವಹಾಗೆ ಮುಂದಕ್ಕೆ ಸಾಗಿಬಿಟ್ಟಿದನು. ಹೀಗೆ ಹತವೀರ್ಯ ಕನ್ನಡಿಗರ ಮನೋಭೂಮಿಗಳನ್ನು ಮನಸೋಕ್ತವಾಗಿ ತುಳಿದು ಹುಡಿಮಾಡುತ್ತ

ಸಾಗಿಬರುತ್ತಿರುವ ಆ ಯವನ ವೀರರ ತಂಡವು ಅರಮನೆಯ ಸನಿಯಕ್ಕೆ ಬರುತ್ತಿರಲು, ಗಾಯನದ ಇಂಪಾದ ಸ್ವರವು ಕೇಳತೊಡಗಿತು! ಪ್ರತ್ಯಕ್ಷ ಕೃತಾಂತನಂತೆ ಸಾಗಿಬರುತ್ತಿರುವ ಆ ಯವನ ವೀರನ ದರ್ಪಕ್ಕೆ ಅಂಜಿಯೋ ಅನ್ನುವಂತೆ, ಪ್ರತ್ಯಕ್ಷ ದಿನಮಣಿಯು ಕೂಡ ಆ ಕ್ರೂರನ ಕಣ್ಣಿಗೆ ಬೀಳಲಾರದೆ ಸೌಮ್ಯ ಕಿರಣಗಳುಳ್ಳವನಾಗಿ ರಾಜಧಾನಿಯ ಭವ್ಯ ಪ್ರಾಸಾದಗಳ ಮರೆಮರೆಯಿಂದ ಬರುತ್ತಿರಲು, ಹೀಗೆ ನಿರ್ಭಯದಿಂದ ಹಾಡುವ ಎದೆಗಾರರಾರಿರಬಹುದೆಂದು ಜನರು ಕೌತುಕಪಡತೊಡಗಿದರು. ಆಗ ಗಾಯನದ ಇಂಚರದಿಂದ ಆ ಯವನ ವೀರನ ಚಿತ್ತವೂ ಚಂಚಲವಾದಂತೆ ತೋರಿತು; ಯಾಕಂದರೆ, ಆತನ ಮುಖಮುದ್ರೆಯಲ್ಲಿ ಪ್ರಸನ್ನತೆಯ ಝುಳುಕು ತೋರಹತ್ತಿತು. ಆತನು ಗಾಯನಧ್ವನಿಯು ಕೇಳಬರುವ ದಿಕ್ಕಿನ ಕಡೆಗೆ ನೋಡತೊಡಗಿದನು. ಆ ನಿಶ್ಶಬ್ದ ಪ್ರದೇಶದಲ್ಲಿ ಗಾಯನದ ಧ್ವನಿಯು ಬಲು ಎದ್ದು ಕೇಳಿಸಹತ್ತಿತು. ಆ ಯವನ ಪರಿವಾರವು ಸ್ವಲ್ಪ ಮುಂದಕ್ಕೆ ಹೋಗುತ್ತಿರಲು, ಗಾಯನಮಾಡುವ ವ್ಯಕ್ತಿಯು ಒಂದು ಅಡ್ಡ ಓಣಿಯೊಳಗಿಂದ ಹಾದು ರಾಜ ಮಾರ್ಗದ ಕಡೆಗೆ ಸಾಗಿ ಬರತೊಡಗಿತು. ಅದನ್ನು ನೋಡಿದ ಕೂಡಲೆ ಯವನ ವೀರನ ಚಿತ್ತಹರಣವಾಗಿ ಹೋಗಿ, ಆತನು ತನ್ನ ಕುದುರೆಯನ್ನು ನಿಲ್ಲಿಸಿದನು. ಕೂಡಲೆ ಅವನ ಅಂಗರಕ್ಷಕರೂ ತಮ್ಮ ಕುದುರೆಗಳನ್ನು ನಿಲ್ಲಿಸಿದರು; ಆದರೆ ಗಾಯನಮಾಡುವ ವ್ಯಕ್ತಿಯು ಇದನ್ನಾವದನ್ನೂ ನೋಡದಿದ್ದಂತೆ ಗಾಯನಮಾಡುತ್ತ ರಾಜಬೀದಿಗೆ ಬಂದಿತು.

ಆ ಗಾಯನ ಮಾಡುವ ವ್ಯಕ್ತಿಯು ಒಬ್ಬ ತರುಣ ಸುಂದರಿಯಾಗಿದ್ದಳು. ಆಕೆಯ ವಯಸ್ಸು ಹದಿನಾರು ವರ್ಷಗಳ ಮೇಲೆ ಇಪ್ಪತ್ತು ವರ್ಷಗಳ ಒಳಗೆ ಇರಬಹುದು. ಆಕೆಯ ಸುಂದರ ಜಟಾಮಂಡಲ ಕೇವೆಯಬಣ್ಣದ ಮನೋಹರವಾದ ಕಪನಿ, ಕೊರಳೊಳಗಿನ ರುದ್ರಾಕ್ಷಮಾಲೆ, ಬಗಲಿಗೆ ಹಾಕಿದ ಜೋಳಿಗೆ, ಕೈಯೊಳಗಿನ ಏಕತಾರಿಯ ವಾದ್ಯ ಇವು ಆಕೆಯ ಗೌರಕಾಯಕ್ಕೆ ಬಹಳವಾಗಿ ಒಪ್ಪುತ್ತಿದ್ದವು. ಆ ಸುಂದರಿಯು ಸರ್ವಾಂಗಕ್ಕೆ ಭಸ್ಮವನ್ನು ಬಳಿದಿದ್ದಳು. ತನ್ನ ಮುಖದಲ್ಲಿ ಉಕ್ಕಿ ಹೊರಸೂಸುವ ತಪಃಕಾಂತಿಯ ತೀವ್ರತೆಯು ಕಡಿಮೆಯಾಗಬೇಕೆಂದು ಆಕೆಯು ಮುಖಕ್ಕೆ ಭಸ್ಮ ಹಚ್ಚಿಕೊಂಡಂತೆ ತೋರುತ್ತಿತ್ತು; ಆದರೆ ವಿನಯಶಾಲಿಯಾದ ಶ್ರೀಮಂತನು ತನ್ನ ಐಶ್ವರ್ಯದ ಪ್ರಭಾವವನ್ನು ಮುಚ್ಚಿಕೊಳ್ಳುವದಕ್ಕಾಗಿ ಬಡತನದ ಸ್ವಚ್ಛವಾದ ಉಡಿಗೆ–ತೊಡಿಗೆಗಳನ್ನು ಧರಿಸಿಕೊಳ್ಳಲು, ಅದರಿಂದ ಆತನ ಐಶ್ವರ್ಯದ ಪ್ರಭಾವವು ಮತ್ತಿಷ್ಟು ಹೆಚ್ಚುವಂತೆ, ಆ ತರುಣಿಯ ದಿವ್ಯ ತೇಜಸ್ಸಿನ ಪ್ರಭಾವವು ಪವಿತ್ರ ವಿಭೂತಿಧಾರಣದಿಂದ ಮತ್ತಿಷ್ಟು ಹೆಚ್ಚಾಗಿತ್ತು. ಈಕೆಯು ಸರ್ವಸಾಮಾನ್ಯ ಭಿಕ್ಷುಕಿಯಲ್ಲೆಂಬುದನ್ನು ಆಕೆಯ ಮುಖಮುದ್ರೆಯು ವ್ಯಕ್ತಗೊಳಿಸುತ್ತಿತ್ತು. ಆಕೆಯು ಬಹು ಗಾಂಭೀರ್ಯದ ಹಾವಭಾವಗಳಿಂದ ಗಾಯನಮಾಡುತ್ತ ರಾಜಬೀದಿಯನ್ನು ಹಿಡಿದು ಬರತೊಡಗಿದಳು. ಮೊದಲೇ ಆಕೆಯ ಕಂಠವು ಅತ್ಯಂತ ಮಂಜುಲ; ಅದರಲ್ಲಿ ಸುಂದರರರೂಪದ ತರುಣಿಯು; ಮೇಲೆ ಗಾಯನದ ಕೌಶಲ್ಯವೂ, ಪದ್ಯಗಳ ಅರ್ಥಗೌರವವೂ ಅವಕ್ಕೆ ಸಹಾಯಕಾರಿಯಾದವುಗಳು! ಅಂದಬಳಿಕ ಕೇಳುವದೇನು? ಆಕೆಯ ಗಾಯನವು ಅತ್ಯಂತ ಚಿತ್ತಾಕರ್ಷಕವೂ, ಮೋಹಕವೂ ಆಯಿತು. ಅಂಥ ಕ್ರೂರ ಸ್ವಭಾವದ ಯವನ ವೀರನನ್ನೂ ತಟಸ್ಥವಾಗಿ ಮಾಡಿದ ಆ ಗಾಯಕಿಯ ಗಾಯನದ ಗೌರವವನ್ನು ಗಾಯನ

ತಲೆಯರಿಯದ ನಾವು ಏನೆಂದು ವರ್ಣಿಸೋಣ? ಆ ಯವನ ವೀರನು ಕ್ರೂರನಿದ್ದರೂ ನಮ್ಮ ಹಾಗೆ ಕಲಾಹೀನನಿದ್ದಿಲ್ಲ. ಅವನು ಹಲವು ವಿದ್ಯೆಗಳಲ್ಲಿಯೂ, ಕಲೆಗಳಲ್ಲಿಯೂ ನಿಪುಣನಾಗಿದ್ದನು. ಗಾಯನಕಲೆಯ ಮರ್ಮವು ಆತನಿಗೆ ಚೆನ್ನಾಗಿ ಗೊತ್ತಿತ್ತು. ಇದಲ್ಲದೆ ಗಾಯಕಿಯು ಹಾಡುವ ಹಿಂದುಸ್ತಾನಿಯ ಹಾಡಿನ ಅರ್ಥವು ಆತನಿಗೆ ಚೆನ್ನಾಗಿ ತಿಳಿಯುತ್ತಿತ್ತು; ಆದ್ದರಿಂದ ಆತನು ಪ್ರಸನ್ನವದನನಾಗಿ ಆನಂದದಿಂದ ತಲೆಯಲ್ಲಾಡಿಸಹತ್ತಿದನು. ಇದನ್ನು ಕುಶಲಳಾದ ಗಾಯಕಿಯು ಸೂಕ್ಷ್ಮರೀತಿಯಿಂದ ತಿಳಿದು, ತನ್ನ ಗಾಯನದ ಕೌಶಲ್ಯವನ್ನು ಹೆಚ್ಚು ಹೆಚ್ಚು ಪ್ರಕಟಿಸಹತ್ತಿದಳು. ಆಕೆಯು ಮಂದಗಮನದಿಂದ ಸನಿಸನಿಯಕ್ಕೆ ಸಾಗಿಬರುತ್ತ ಸ್ತ್ರೀಜಾತಿಗೆ ಒಪ್ಪುವ ಸಾತ್ವಿಕವಾದ ಅಭಿನಯದಿಂದ ಕಣ್ಣು ಮುಚ್ಚಿಕೊಂಡು ಗಿರಡಿಯಮೇಲೆ ಗಿರಡಿ ಹೊರಳಿಸಿ ಹಾಡುವದನ್ನು ನೋಡಿ ಆ ಯವನ ವೀರರಷ್ಟೇ ಅಲ್ಲ, ರಾಜಬೀದಿಯ ಮನೆಯೊಳಗಿನ ಜನರೂ ಮೆಲ್ಲಮೆಲ್ಲನೆ ಮುಂದಕ್ಕೆ ಬಂದು ಆ ಸೊಬಗಿನ ಗಾಯನದ ಸುಂದರಿಯನ್ನು ಕಣ್ಣು ತುಂಬ ನೋಡಿ ಪರವಶರಾಗತೊಡಗಿದರು. ಈ ಮೊದಲು ಕ್ರೂರ ಯವನರ ಭಯದಿಂದ ನಿರ್ಮಾನುಷ ವಾಗಿದ್ದಂತೆ ತೋರುತ್ತಿದ್ದ ರಾಜಬೀದಿಯು ಮೆಲ್ಲಮೆಲ್ಲನೆ ಮನುಷ್ಯರ ಸುಳುವುಳ್ಳದ್ದಾಯಿತು. ಅತ್ತ ಆ ಯವನ ವೀರನಂತೂ ತೀರ ಪರವಶನಾಗಿ ಹೋಗಿದ್ದನು. ಆ ಕಾಫಿರ ಜಾತಿಯ ಹೆಣ್ಣುಮಗಳ ಯೋಗ್ಯತೆಯು ಎಷ್ಟು ಘನವಾದದ್ದೆಂಬ ವಿಚಾರವು ಮೇಲೆ ಮೇಲೆ ಆತನ ಮನಸ್ಸಿನಲ್ಲಿ ಬರತೊಡಗಿತು. ಆತನ ಸ್ವಭಾವವು ಲೋಕ ವಿಲಕ್ಷಣವಾದದ್ದಿತ್ತು. ಯಾವದೊಂದನ್ನು ಅತಿ ಮಾಡುವದು ಆತನ ಶೀಲವೇ ಆಗಿಹೋಗಿತ್ತು. ಕ್ರೂರತನದಲ್ಲಿ ಅತಿ, ದಯಾಗುಣದಲ್ಲಿ ಅತಿ, ಔದಾರ್ಯದಲ್ಲಿ ಅತಿ ಹೀಗೆ ಆತನ ಅತಿ ಪ್ರಸಂಗದ ಮೂಲಕ ಆತನನ್ನು ಜನರು ಹುಚ್ಚನೆಂದು ಕರೆಯುತ್ತಿದ್ದರು. ಹೀಗೆ ಆತನೂ ಆತನ ಪರಿವಾರದವರೂ ಅತ್ಯಂತ ಲುಬ್ಧರಾಗಿ ಗಾಯನ ಕೇಳುತ್ತ ಕುದುರೆಯಮೇಲೆ ಕುಳಿತಿರುವಾಗ, ಚಡಪಡಿಸುವ ಆ ಉನ್ನತಾಕಾರದ ಕುದುರೆಗಳ ಖುರಗಳ ಆಘಾತದಿಂದ ಎಚ್ಚತ್ತವಳಂತೆ ಆ ತರುಣ ಗಾಯಕಿಯು ಮೆಟ್ಟಿಬಿದ್ದು ಎಚ್ಚತ್ತು ತಟ್ಟನೆ ತನ್ನ ಗಾಯನವನ್ನು ನಿಲ್ಲಿಸಿದಳು; ಕೂಡಲೆ ತಟಸ್ಥವಾಗಿದ್ದ ಎಲ್ಲರ ಚಿತ್ತವೃತ್ತಿಗಳೂ ಮೆಟ್ಟಿಬಿದ್ದು ಎಚ್ಚತ್ತವು! ಅಷ್ಟರಲ್ಲಿ ಆ ವಿಶಾಲಾಕ್ಷಿಯು ಬೆದರಿದ ಎರಳೆಯಂತೆ ಬಿರಿಬಿರಿ ಕಣ್ಣು ಬಿಡುತ್ತ ಆ ಯವನ ವೀರನನ್ನು ನೋಡಿ ವಿನಯದಿಂದ ಮುಜುರೆ ಮಾಡಿ ಮಗ್ಗಲಿಗೆ ಸರಿದುನಿಂತಳು. ಆಗ ಹುಚ್ಚನಾದ ಆ ಯವನ ವೀರನು ತಟ್ಟನೆ ಕುದುರೆಯಿಂದಿಳಿದು ಆ ಗಾಯಕಿಯ ಬಳಿಗೆ ಹೋಗಿ— "ದೇವಾಂಗನೆಯೇ, ನೀನಾರು? ನೀನು ಮನುಷ್ಯಳಲ್ಲೆಂಬಂತೆ ನನಗೆ ತೋರುತ್ತದೆ. ಗುಣಲುಬ್ಧನಾದ ಈ ತಘಲಕಮಹಮ್ಮದನು ನಿನಗಿಂತ ಹೆಚ್ಚಿನ ಗಾಯಕಿಯರನ್ನು ನೋಡಿರುವನು; ಆದರೆ ನಿನ್ನಲ್ಲಿಯ ಈ ದೈವೀ ತೇಜಸ್ಸನ್ನು ಮಾತ್ರ ಆತನು ಎಂದು ನೋಡಿದ್ದಿಲ್ಲ. ಇದ್ದರೆ ನೀನು ದೇವಾಂಗನೆಯಿರಬೇಕು. ಇಲ್ಲದಿದ್ದರೆ ಮನುಷ್ಯರಲ್ಲಿಯ ಮನುಷ್ಯತ್ವವನ್ನು ಹೋಗಲಾಡಿಸಿ ಅದರ ಸ್ಥಳದಲ್ಲಿ ದೇವತ್ವವನ್ನು ಸ್ಥಾಪಿಸಲು ಸಮರ್ಥನಾದ ಯಾವನೊಬ್ಬ ಮಹಾಪುರುಷನ ಸೇವಾಸಂಭ್ರಮದಿಂದ ನೀನು ಕೃತಾರ್ಥಳಾಗಿರಬೇಕು. ಪುಣ್ಯವಂತಳೇ, ಇಂದಿನ ದರ್ಬಾರದಲ್ಲಿ ನೀನು ಇರು; ಪ್ರಸಂಗ ವಿಶೇಷದಲ್ಲಿ ನಿನ್ನ ಮಧುರ ಗಾಯನದಿಂದ ನನ್ನನ್ನು ಸಂತೋಷ

ಗೊಳಿಸುವೆಯಂತೆ. ದರ್ಬಾರವಾದರೂ ನೀನಿದ್ದ ಈ ಬೀದಿಯಲ್ಲಿಯೇ ನೆರೆಯಲಿ. ಆ ಕೃತಘ್ನ ದೇವರಾಯನ ಅರಮನೆಯ ದರ್ಬಾರವು ನನಗೆ ಬೇಕಾಗಿಲ್ಲ'' ಎಂದು ಮಹಾಜ್ಞಾನಿಯಂತೆ ನುಡಿದು, ದೇವರಾಜನಿಗೆ ಹಾಗೆ ಹೇಳುವಂತೆ ಬಳಿಯಲ್ಲಿಯ ಒಬ್ಬ ಅಂಗರಕ್ಷಕನನ್ನು ಆಜ್ಞಾಪಿಸಿದನು. ಕೂಡಲೆ ಆ ಅಂಗರಕ್ಷಕನು, ಸಮೀಪದಲ್ಲಿಯೇ ಇದ್ದ ಅರಮನೆಗೆ ಹೋಗಿ, ಬಾದಶಹನ ಹಾದಿಯನ್ನು ನೋಡುತ್ತ ಕುಳಿತಿದ್ದ ದೇವರಾಯನಿಗೆ ಅದನ್ನು ಹೇಳಲು, ಆ ವೃದ್ಧ ರಾಜನೂ, ನೆರೆದ ದರ್ಬಾರದವರೂ ಅಂಜಿ, ಮುಂದುಗಾಣದಾದರು. ಆ ವೃದ್ಧ ರಾಜನು ಬಾದಶಹನು ನಿಂತಲ್ಲಿಯೇ ಸರ್ವಸನ್ನಾಹಗಳನ್ನು ಅತಿ ತ್ವರೆಯಾಗಿ ಒದಗಿಸಲು ಕೂಡಲೆ ತನ್ನ ಸೇವಕರಿಗೆ ಆಜ್ಞಾಪಿಸಿ, ತಾನು ಗಂಗಾಧರಭಟ್ಟನೆಂಬ ಬಾದಶಹನ ಪ್ರೀತಿಯ ಬ್ರಾಹ್ಮಣನೊಡನೆ ಬಾದಶಹನ ದರ್ಶನಕ್ಕೆ ಹೊರಟನು.

''ಸೆಟ್ಟಿ ಇಳಿದಲ್ಲಿ ಪಟ್ಟಣ''ವೆಂಬ ಮಾತು ಸುಳ್ಳಲ್ಲ. ಅದರಲ್ಲಿ ಹುಚ್ಚು ಮಹಮ್ಮದನು ಬರಿಯ ಶೆಟ್ಟಿಯೇ ಅಲ್ಲ, ಯಾರ ಮಾತೂ ಕೇಳದ ಎಟ್ಟಿಯೂ ಆಗಿದ್ದನು. ಆತನು ಮುನಿದರೆ ಕೃತಾಂತನೆಂಬದು ಎಲ್ಲರಿಗೂ ಗೊತ್ತಿತ್ತು; ಆದ್ದರಿಂದ ದರ್ಬಾರದ ಸಿದ್ಧತೆಯು ಬಲು ಒತ್ತರದಿಂದ ನಡೆಯಿತು. ಈ ಹುಚ್ಚ ದೊರೆಯು ಸಾಮಾನ್ಯ ವ್ಯಕ್ತಿಯಲ್ಲ; ದಿಲ್ಲಿಯ ರಾಜಧಾನಿಯ ಜನರನ್ನೆಲ್ಲ ದೌಲತಾಬಾದಿಗೆ ಮೂರು ದಿವಸಗಳಲ್ಲಿ ಹೊರಡಿಸಿದವನು! ಇಂಥ ಕ್ರೂರನ ಕೆಲಸದಲ್ಲಿ ತಡಮಾಡಿದರೆ ಯಾರಿಗೆ ಏನು ಶಿಕ್ಷೆಯಾಗುವುದೋ ಎಂಬ ಅಂಜಿಕೆಯು ಪ್ರತಿಯೊಬ್ಬನಿಗೆ ಇತ್ತು; ಆದ್ದರಿಂದ ಪ್ರತಿಯೊಬ್ಬನು ಮುಗಿಬಿದ್ದು ಕೆಲಸ ಮಾಡತೊಡಗಿದನು. ಇಂದಿನ ದರ್ಬಾರದಲ್ಲಿ ಬಂಡುಗಾರನಾದ ಬಹಾಉದ್ದೀನನ, ಹಾಗು ಅವನ ಸಂಗಡಿಗರ ವಿಚಾರಣೆಯಾಗತಕ್ಕದ್ದಿತ್ತು ಹಿಂದಕ್ಕೆ ಬಹಾಉದ್ದೀನನು, ಹೆಗ್ಗನೆಂದು ಕರೆಯಲ್ಪಡುತ್ತಿದ್ದ ಹುಕ್ಕನ ಅನುಮತಿಯಿಂದ ಮಲ್ಲಸರ್ಜನನೇ ಮೊದಲಾದವರೊಡನೆ ದ್ವಾರಸಮುದ್ರದ ಬಲ್ಲಾಳನ ಆಶ್ರಯಕ್ಕೆ ಹೋದದ್ದು ವಾಚಕರ ಸ್ಮರಣದಲ್ಲಿರಬಹುದು; ಆದರೆ ಬಲ್ಲಾಳರಾಜನು ಹುಚ್ಚಮಹಮ್ಮದನ ಅಂಜಿಕೆಯಿಂದ ತನ್ನ ಕ್ಷಾತ್ರಧರ್ಮವನ್ನು ಮರೆತು, ಶರಣಾಗತನಾದ ಬಹಾಉದ್ದೀನನನ್ನೂ, ಅವನ ಸಂಗಡಿಗರನ್ನೂ ಸೆರೆಹಿಡಿದು ಮಹಮ್ಮದನಿಗೆ ಒಪ್ಪಿಸಿಬಿಟ್ಟನು; ಯಾಕಂದರೆ, ಈ ಬಹಾಉದ್ದೀನನ ಬೆನ್ನುಕಟ್ಟಿದ್ದ ಕಂಪಲಿಯ ಅರಸನ ಗತಿಯೇನಾಯಿತೆಂಬುದು ಬಲ್ಲಾಳರಾಜನಿಗೆ ಗೊತ್ತಿತ್ತು. ಆ ಸೆರೆಯಾಳುಗಳು ತಿಂಗಳುಗಟ್ಟಲೆ ಸೆರೆಮನೆಯಲ್ಲಿ ಕೊಳೆಯುತ್ತಲಿದ್ದರು. ಮೇಲೆ ಹೇಳಿದಂತೆ ಆ ಎಲ್ಲ ಸೆರೆಯಾಳುಗಳನ್ನು ದಂಡಿಸುವ ಕೆಲಸವು ಇಂದಿನ ದರ್ಬಾರದಲ್ಲಿ ಜರುಗತಕ್ಕದ್ದಿತ್ತು. ಬಹಾಉದ್ದೀನನು ಆನೆಗುಂದಿಯ ಶೂರ ಅರಸನ, ಹಾಗು ಅಲ್ಲಿಯ ಕೆಲವು ಶೂರ ಜನರ ಸಹಾಯದಿಂದ ಬಹುದಿನ ಕೈಗೆ ಸಿಗದೆ ಮಹಮ್ಮದನಿಗೆ ತೊಂದರೆಕೊಟ್ಟಿದ್ದನು. ಅದರಿಂದ ಆನೆಗುಂದಿಯವರ ಮೇಲೆ ಮಹಮ್ಮದನ ಸಿಟ್ಟು ವಿಶೇಷವಾಗಿ ಇತ್ತು. ಮಹಮ್ಮದನ ಕ್ರೂರತನದ ಆಳಿಕೆಯ ಮೂಲಕ ಆತನ ರಾಜ್ಯದಲ್ಲಿ ಬಂಡಾಯಗಳ ಮೇಲೆ ಬಂಡಾಯಗಳು ಏಳುತ್ತಿದ್ದವು. ಒಂದು ಸ್ಥಳದ ಬಂಡಾಯ ಮುರಿಯುವದರೊಳಗೆ ಮತ್ತೊಂದು ಸ್ಥಳದಲ್ಲಿ ಬಂಡಾಯವೇಳುತ್ತಿತ್ತು. ಈ ಬಂಡಾಯಗಳನ್ನು ಮುರಿಯುವದಕ್ಕಾಗಿ ಮಹಮ್ಮದನು ಒಂದು ಪ್ರಾಂತದಿಂದ ಮತ್ತೊಂದು

ಪ್ರಾಂತಕ್ಕೆ ಆಗಾಗ್ಗೆ ಓಡಬೇಕಾಗುತ್ತಿತ್ತು, ಹೀಗಿರಲು, ಈಗ ಅನಾಯಾಸವಾಗಿ ಸೆರೆಯಲ್ಲಿ ಸಿಕ್ಕಿದ್ದ ಬಹಾಉದ್ದೀನನನ್ನೂ, ಅವರ ಸಂಗಡಿಗರನ್ನೂ ಆನೆಗುಂದಿಯಲ್ಲಿ ಕ್ರೂರತನದಿಂದ ಶಿಕ್ಷಿಸಿದರೆ, ಅಲ್ಲಿಯ ಜನರಿಗೆ ಅಂಜಿಕೆ ಕುಳಿತು ಕರ್ನಾಟಕದಲ್ಲಿ ಬಂಡಾಯವೇಳಲಿಕ್ಕೆ ಪ್ರತಿಬಂಧವಾದೀತೆಂದು ಭಾವಿಸಿ ಮಹಮ್ಮದನು ಬುದ್ಧಿಪೂರ್ವಕವಾಗಿ ಈಗ ಆನೆಗುಂದಿಗೆ ಬಂದಿದ್ದನು. ಹೀಗೆ ಸ್ವದೇಶಿಯರಿಂದ ತಮಗೆ ತೊಂದರೆಯಾಗಬಾರದೆಂತಲೂ, ಅವರಿಗೆ ತನ್ನ ಬೆದರಿಕೆ ಕೊಡಬೇಕೆಂತಲೂ ಮಿತಿಮೀರಿ ಜನಸಂಹಾರ ಮಾಡುವದು ಪ್ರಾಚೀನ ದಾಳಿಗಾರರ ಪದ್ಧತಿಯಾಗಿತ್ತೆಂದು ಹೇಳಬಹುದು. ಇಂಥ ದಾಳಿಗಾರರಲ್ಲಿ ಜಂಗಿಜಖಾನ–ತೈಮೂರ್ಲಿಂಗರು ಪ್ರಸಿದ್ಧರಾದವರು. ಹುಚ್ಚ ಮಹಮ್ಮದನಾದರೂ ಈ ಮನುಷ್ಯ ಸಂಹಾರದ ಕಾರ್ಯದಲ್ಲಿ ಸುಪ್ರಸಿದ್ಧನು! ಈ ಕ್ರೂರನು ಉತ್ತರ ಹಿಂದುಸ್ತಾನದಲ್ಲಿ ಮನುಷ್ಯರ ಬೇಟೆಯಾಡಿ ಊರಿಗೆ ಊರು ಹಾಳಗೆಡವಿದ್ದನ್ನು ದಕ್ಷಿಣದವರು ಕೇಳಿದ್ದರು! ಆದ್ದರಿಂದಲೇ ಈಗಿನ ಪ್ರಸಂಗದಲ್ಲಿ ತಮ್ಮ ಪರಿಣಾಮವೇನಾಗುವದೋ ಎಂದು ಆ ಪ್ರಾಚೀನ ರಾಜಧಾನಿಯ ಆಬಾಲವೃದ್ಧರು ಹಿಂದೆ ಹೇಳಿದಂತೆ ಚಿಂತಾಕ್ರಾಂತರಾಗಿದ್ದರು !

ಮಹಮ್ಮದನು ನಿಂತನಿಂತಿರುವಾಗಲೇ ಆ ರಾಜಬೀದಿಗೆ ರಾಜದರ್ಬಾರದ ಸ್ವರೂಪವು ಪ್ರಾಪ್ತವಾಯಿತು. ಮೊದಲು ಬಾದಶಹನಿಗಾಗಿ ಉಚ್ಚಾಸನವು ಮಂಡಿಸಲ್ಪಟ್ಟಿತು. ಉಳಿದವರು ಮಾನಾಪಮಾನಗಳಿಗೆ ಲಕ್ಷಗೊಡದೆ ಇದ್ದದ್ದರಲ್ಲಿ ಸಮಾಧಾನಮಾಡಿಕೊಂಡು ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಂಡರು. ಆಸನದಲ್ಲಿ ಕುಳಿತಕೂಡಲೆ ಆ ಕ್ರೂರನ ಕಣ್ಣುಗಳು ಕೆಂಡದಂತಾದವು. ಅವನ ಮುಖವು ಉಗ್ರವಾಯಿತು. ಆತನ ಸುತ್ತು ಅಂಗರಕ್ಷಕರು ಬಿಚ್ಚುಗತ್ತಿಗಳನ್ನು ಹಿಡಿದು, ತಮ್ಮ ಒಡೆಯನಲ್ಲಿ ದೃಷ್ಟಿಯನ್ನಿಟ್ಟು, ಆತನ ಆಜ್ಞಾಪಾಲನತತ್ಪರರಾಗಿ ನಿಂತುಕೊಂಡಿದ್ದರು. ಆಗ ಆ ಬಟ್ಟಬಯಲ ದರ್ಬಾರದಲ್ಲಿ ಭಯಾನಕ ರಸವು ತುಂಬಿ ಹೊರಸೂಸುತ್ತಿತ್ತು. ಪ್ರಿಯ ವಾಚಕರೇ, ನಾವು ಈ ಪ್ರಕರಣವನ್ನು ''ದೇವರಾಯನ ದರ್ಬಾರವೆಂದು ಕರೆದಿದ್ದೇವೆ; ಆದರೆ ಎಲ್ಲಿಯ ದೇವರಾಯನು? ಸಿಟ್ಟಿನಿಂದ ಎಚ್ಚರದಪ್ಪಿದ್ದ ಕ್ರೂರ ತಘಲಕನ ಮುಂದೆ ದೇವರಾಯನನ್ನು ಯಾರು ಕೇಳಬೇಕು? ಪಾಪ! ಆ ವೃದ್ಧರಾಜನು ಮಹಮ್ಮದನ ಒಂದು ಬದಿಯಲ್ಲಿ, ತನ್ನ ಗತಿ ಏನಾಗುವದೋ ಎಂದು ಭಯಗ್ರಸ್ತನಾಗಿ ಕುಳಿತುಕೊಂಡಿದ್ದನು! ಆದ್ದರಿಂದ ಈ ದರ್ಬಾರವನ್ನು ದೇವರಾಯನ ದರ್ಬಾರವೆಂದು ಕರೆಯದೆ, ಮಹಮ್ಮದನ ದರ್ಬಾರವೆಂದು ಕರೆದಿದ್ದರೆ ಯೋಗ್ಯವಾಗುತ್ತಿತ್ತು!'' ಇರಲಿ, ಸಿಟ್ಟಿನಿಂದ ಉರಿಯಹತ್ತಿದ್ದ ಮಹಮ್ಮದನೊಡನೆ ಮಾತಾಡುವ ಧೈರ್ಯವು ಯಾರಿಗೂ ಆಗಲೊಲ್ಲದು! ಮಾತಾಡುವ ಧೈರ್ಯವು ಹೋಗಲಿ, ಎದ್ದು ಒಬ್ಬನೂ ಮುಜುರೆ ಮಾಡಲೊಲ್ಲನು; ಸ್ತುತಿಪಾಠಕನು ಸ್ತುತಿಪರ ಶಬ್ದಗಳನ್ನು ಉಚ್ಚರಿಸಲೊಲ್ಲನು. ಇಡಿಯ ದರ್ಬಾರವು ನಿಶ್ಯಬ್ಧವಾಗಿತ್ತು, ಜನರು ಕಣ್ಣುರೆಪ್ಪೆಗಳನ್ನು ಕೂಡ ಗಟ್ಟಿಯಾಗಿ ಬಡಿಯದೆ, ಈ ಕ್ರೂರನ ಮುಖದಿಂದ ಏನು ಅಪ್ಪಣೆ ಹೊರಡುವದೋ ಎಂದು ಭಯವಿಹ್ವಲರಾಗಿ ಯೋಚಿಸುತ್ತ ಮೋರೆ ತಗ್ಗಿಸಿಕೊಂಡು ಕುಳಿತಿದ್ದರು. ದರ್ಬಾರದ ಜನರ ಸುತ್ತಲು ಕ್ರೂರಮುದ್ರೆಯ ಯವನ ಸೈನಿಕರು ನಿಂತುಕೊಂಡಿದ್ದರು. ದೇವರಾಯನ ಸೈನ್ಯವು ಕನ್ನಡಿಗರ ದೌರ್ಬಲ್ಯವನ್ನೆಲ್ಲ

ಒಟ್ಟುಗೂಡಿಸಿ ವ್ಯಕ್ತಗೊಳಿಸುವಂತೆ, ಒತ್ತಟ್ಟಿಗೆ ಹೆಸರಿಗೆ ನಿಂತುಕೊಂಡಿತ್ತು. ಈ ಭಯಂಕರ ಸ್ಥಿತಿಯನ್ನು ನೋಡುತ್ತ ರಾಜಬೀದಿಯೊಳಗಿನ ಮನೆಯೊಳಗಿನ ದಿಟ್ಟ ಜನರು ಮಾತ್ರ ತಮ್ಮ ಮನೆಗಳ ಮುಂದುಗಡೆಯಲ್ಲಿ ನಿಂತುಕೊಂಡಿದ್ದರು. ಹೀಗಿರುವಾಗ ಆ ತಘಲಕನು ತನ್ನ ಒಬ್ಬ ಅಂಗರಕ್ಷಕನ ಕಡೆಗೆ ನೋಡಿ—"ಆ ಬದಮಾಷ ಬಹಾಉದ್ದೀನನೆಲ್ಲಿ?" ಎಂದು ಕೇಳಲು, ಕೂಡಲೆ ಆ ಅಂಗರಕ್ಷಕನು— "ಜೀ ಹುಜೂರ" ಎಂದು ತಲೆವಾಗಿ ನುಡಿದು ಪ್ರತ್ಯುತ್ತರವಾಗಿ ಬಹಾಉದ್ದೀನನನ್ನು ಮುಹಮ್ಮದನ ಮುಂದೆ ತಂದು ನಿಲ್ಲಿಸಿದನು!

ಬಹಾಉದ್ದೀನನು ವಾಚಕರಿಗೆ ತೀರ ಅಪರಿಚಿತನಲ್ಲ. ಫಕೀರನ ವೇಷದಿಂದ ಆತನು ಹೆಗ್ಗನ, ಅಂದರೆ ಈಗ ಹುಕ್ಕನೆಂದು ಕರೆಸಿಕೊಳ್ಳುವವನ ಗುಪ್ತ ಭಾವಣಿಯಲ್ಲಿ ಬಂದಾಗ ಆತನ ಪರಿಚಯವು ವಾಚಕರಿಗೆ ತಕ್ಕಮಟ್ಟಿಗೆ ಆಗಿರುತ್ತದೆ. ಬಹಾಉದ್ದೀನನು ಕ್ರೂರ ತಘಲಕನ ಪ್ರತಿಸ್ಪರ್ಧಿಯೆನಿಸಿಕೊಳ್ಳಲಿಕ್ಕೆ ತಕ್ಕ ಕ್ರೂರ ಕಲಿಯಾಗಿರದಿದ್ದರೂ, ಆತನು ಧೀರಗಂಭೀರ ವೀರಪುರುಷನಾಗಿದ್ದನು. ಆತನಲ್ಲಿ ಶೌರ್ಯವನ್ನಲಂಕರಿಸುವ ದಯಾಗುಣವು ಪೂರ್ಣವಾಗಿ ವಾಸಿಸುತ್ತಿತ್ತು. ಆತನಲ್ಲಿ ಸೌಜನ್ಯಕ್ಕೂ ಕೊರತೆಯಿದ್ದಿಲ್ಲ. ತನ್ನ ಕ್ರೂರ ಕಕ್ಕನಿಂದ ಲೋಕಕ್ಕಾಗುವ ತಾಪವನ್ನು ತಪ್ಪಿಸುವ ಮನಸ್ಸಿನಿಂದ ಆತನು ತನ್ನ ಕಕ್ಕನ ವಿರುದ್ಧವಾಗಿ ದಕ್ಷಿಣದಲ್ಲಿ ಬಂಡಾಯವೆಬ್ಬಿಸಿದಂತೆ ಆಗಿತ್ತು; ಆದರೆ ಆತನ ಯತ್ನವು ಸಫಲವಾಗದೆ ಕ್ರೂರ ಕಕ್ಕನ ಕ್ರೂರತನಕ್ಕೆ ಆ ಸುಜನನು ಬಲಿಯಾಗುವ ಪ್ರಸಂಗವು ಒದಗಿತು. ಹಿಂದಕ್ಕೆ ಹೆಗ್ಗನ ಭಾವಣಿಯಲ್ಲಿ ಬಂದಾಗ ಬಹಾಉದ್ದೀನನು ತೀರ ಅಂಜಿಕೊಂಡವನಂತೆ ಆಚರಿಸಿದ್ದು ವಾಚಕರ ಸ್ಮರಣದಲ್ಲಿರಬಹುದು, ಆದರೆ ಈಗ ಆತನ ಮುಖದಲ್ಲಿ ಅಂಜಿಕೆಯ ಲಕ್ಷಣವು ಲೇಶವಾದರೂ ತೋರುತ್ತಿದ್ದಿಲ್ಲ. ತನ್ನ ಕಕ್ಕನಿಂದ ಮರಣವನ್ನು ತಪ್ಪಿಸಿಕೊಳ್ಳಬೇಕೆಂಬ ಯೋಚನೆಯಲ್ಲಿದ್ದಾಗ ಆತನನ್ನು ಸ್ವಾರ್ಥಮೂಲವಾದ ಅಂಜಿಕೆಯು ಆವರಿಸಿದ್ದು ಸ್ವಾಭಾವಿಕವು; ಆದರೆ ಈಗ ಪ್ರತ್ಯಕ್ಷ ಯಮನ ದವಡೆಯಲ್ಲಿ ಸಿಕ್ಕಂತೆ ಆಗಿರಲು, ಜೀವಿಸುವ ಆಸೆಯು ತಪ್ಪಿಹೋಗಿ ಸ್ವಾರ್ಥರಾಹಿತ್ಯ ಸ್ಥಿತಿಯೊದಗಿರುವಾಗ ಆ ಧೀರಗಂಭೀರನು ಯಾಕೆ ಅಂಜುವನು? ಕುಲಗೆಟ್ಟರೂ ಸುಖಪಡಬೇಕೆಂಬ ನುಡಿಯಂತೆ, ದೈನ್ಯ ತೋರಿಸಿದ್ದಕ್ಕೆ ಪ್ರಾಣವಾದರೂ ಉಳಿಯುವ ಹಾಗಿದ್ದರೆ, ಕಾರ್ಯಸಾಧನಕ್ಕೋಸ್ಕರ ಆತನು ದೈನ್ಯವನ್ನು ಪ್ರಕಟಿಸಿದ್ದರೂ ಪ್ರಕಟಿಸಬಹುದಾಗಿತ್ತು; ಆದರೆ ಅಲ್ಪ ಸ್ವಲ್ಪ ವಿರೋಧ ತೋರಿಸದ ಕೂಡಲೆ ಸಿಟ್ಟಿನಿಂದ ಹುಚ್ಚಾಗಿ ರಕ್ತ ಸುರಿಸುವ ಕ್ರೂರನ ಮುಂದೆ ದೈನ್ಯದಿಂದೇನು ಪ್ರಯೋಜನವಾಗುವಹಾಗಿತ್ತು? ಆದ್ದರಿಂದ ಅತ್ಯಂತ ಸಂತಾಪದಿಂದ ನೋಡುವ ಮುಹಮ್ಮದನ ಮುಂದೆ ಬಹಾಉದ್ದೀನನು ಸೌಜನ್ಯದ ಗಂಭೀರಮುದ್ರೆಯಿಂದ ತಲೆಬಾಗಿಸಿ ನಿಂತುಕೊಂಡಿದ್ದನು. ಈ ನಿರ್ಲ್ಲೋಣವು ತಮೋಗುಣದ ಅಬ್ಬರಕ್ಕೆ ಎದುರಿಸಿ ಸತ್ವಗುಣವು ಗಾಂಭೀರ್ಯದಿಂದ ನಿಂತುಕೊಂಡಂತೆ ಆಗಿತ್ತು. ಸ್ಪಷ್ಟವಾಗಿ ಹೇಳಬೇಕಾದರೆ, ಮುಹಮ್ಮದನ ತಮೋಗುಣಕ್ಕೂ, ಬಹಾಉದ್ದೀನನ ಸತ್ವಗುಣಕ್ಕೂ ಗುಪ್ತ ಸಂಗರವು ಒದಗಿತ್ತೆಂದು ಹೇಳಬಹುದು. ಈ ಉಭಯ ಗುಣವಿಶಿಷ್ಟ ವ್ಯಕ್ತಿಗಳೆರಡೇ ಪರಸ್ಪರ ಪ್ರಸಿದ್ಧ ರೀತಿಯಿಂದ ಹೋರಾಡಿದ್ದರೆ ಅವುಗಳ ಶಕ್ತಿಯ ಸಮತ್ವದ ಮೂಲಕ ಯಾರಿಗೆ

ಜಯವಾಗುತ್ತಿತ್ತೆಂಬದನ್ನು ಹೇಳಲಿಕ್ಕೆ ಬರುವ ಹಾಗಿದ್ದಿಲ್ಲ. ಅಥವಾ ಆ ಮಹಮ್ಮದ - ಬಹಾಉದ್ದೀನರಿಬ್ಬರೂ ಮಲ್ಲಯುದ್ಧಸನ್ನದ್ಧರಾಗಿದ್ದರೆ, ಯಾರು ಬೀಳುವರು ಯಾರು ಏಳುವರು ಎಂಬದನ್ನೂ ನಿಶ್ಚಯಿಸುವ ಹಾಗಿದ್ದಿಲ್ಲ. ಇಂಥ ಹೋರಾಟಕ್ಕೆ ಅಥವಾ ಮಲ್ಲಯುದ್ಧಕ್ಕೆ ಬಹಾಉದ್ದೀನನು ಸರ್ವಥಾ ಹಿಂಜರಿಯುವಂತೆಯೂ ಇದ್ದಿಲ್ಲ; ಆದರೆ ಮಹಮ್ಮದನ ತಾಮಸ ಮನೋಬಲಕ್ಕೆ ಹಲವು ಸೈನಿಕರ ಮನೋಬಲಗಳು ಅಂಕಿತವಾಗಿದ್ದರಿಂದ ಮಹಮ್ಮದನು ಅತ್ಯಂತ ಬಲಿಷ್ಠನಾಗಿ, ಆತನ ಮುಂದೆ ಬಹಾಉದ್ದೀನನು ತೀರ ನಿರ್ಬಲನಾಗಿಹೋಗಿದ್ದನು! ಒಬ್ಬ ಬಹಾಉದ್ದೀನನೇ ಏಕೆ ಇಡಿಯ ಕರ್ನಾಟಕವೇ ಮಹಮ್ಮದನ ಈ ಸಂಕಲಿತ ಬಲಕ್ಕೆ ಅಂಜಿ ತತ್ತರಿಸುತ್ತಿತ್ತೆಂದು ಹೇಳಬಹುದು!

ಪ್ರಿಯವಾಚಕರೇ, ಮಹಮ್ಮದನೆಂಬ ಒಬ್ಬ ವ್ಯಕ್ತಿಯು ಕೋಟ್ಯಂತರ ಜನರ ಹೃದಯ ಗಳನ್ನು ನಡುಗಿಸಲಿಕ್ಕೆ ಕಾರಣವಾದದ್ದು ವಿಲಕ್ಷಣವಲ್ಲವೆ? ಒಂದು ವ್ಯಕ್ತಿಯ ಕೇವಲ ಶಾರೀರಬಲದ ದೃಷ್ಟಿಯಿಂದ ಇದು ವಿಲಕ್ಷಣವಾಗಿ ತೋರಿದರೂ, ಆ ವ್ಯಕ್ತಿಯಲ್ಲಿ ವಾಸಿಸ ಬಹುದಾದ ಅತ್ಯಂತ ಪ್ರಬಲ ಮನೋಬಲದ ದೃಷ್ಟಿಯಿಂದ ಇದರಲ್ಲಿ ವೈಲಕ್ಷಣ್ಯವೇನೂ ಇರುವದಿಲ್ಲ. ಒಂದು ವ್ಯಕ್ತಿಯ ಪ್ರಬಲ ಮನೋಬಲವು ಹಲವು ವ್ಯಕ್ತಿಗಳ ಮನೋಬಲಗಳನ್ನು ಹೆಚ್ಚಿಸಿ ಅವನ್ನು ತನ್ನ ಕಡೆಗೆ ಆಕರ್ಷಿಸಿಕೊಳ್ಳಲು ಸಮರ್ಥವಾಗುವದು; ಯಾಕಂದರೆ ಮನಸ್ಸೆಂಬ ಸೂಕ್ಷ್ಮತತ್ವದ ಪರಸ್ಪರ ಸಂಬಂಧವು ಬಹು ಬೇಗ ಆಗುತ್ತದೆ. ಹೀಗೆ ಹಲವು ಸಬಲ ದುರ್ಬಲ ಮನೋವೃತ್ತಿಗಳ ಪರಸ್ಪರಾಕರ್ಷದಿಂದುಂಟಾಗುವ ಸಂಕಲಿತ ಪ್ರಚಂಡ ಮನೋಬಲವನ್ನೇ ಸಂಘಶಕ್ತಿಯೆಂದು ಕರೆಯತಕ್ಕದ್ದು. ಮನೋಬಲಕ್ಕೆ ಶರೀರಬಲವು ಅಂಕಿತವಾಗಿರುವದರಿಂದ, ಸಂಘಶಕ್ತಿಯ ಮುಖಾಂತರ ಹಲವು ಶಾರೀರಿಕ ಶಕ್ತಿಗಳ ಏಕೀಕರಣವಾಗಿ ಅದರಿಂದ ಒಂದು ಪ್ರಚಂಡಕಾರ್ಯವು ಸಾಧಿಸುವದು. ಹೀಗೆ ಒಬ್ಬ ವ್ಯಕ್ತಿಯು ತನ್ನ ಪ್ರಚಂಡ ಮನೋಬಲದ ಯೋಗದಿಂದ ಹಲವು ವ್ಯಕ್ತಿಗಳ ಮನಸ್ಸುಗಳನ್ನು ಆಕರ್ಷಿಸಿಕೊಳ್ಳುತ್ತ ಪರ್ಯಾಯದಿಂದ ತನ್ನ ಶಾರೀರಿಕ ಬಲವನ್ನು ಹೆಚ್ಚಿಸಿಕೊಳ್ಳುತ್ತ ಹೋದಂತೆ, ಅವನ ಅಲೌಕಿಕತೆಯು ಹೆಚ್ಚುತ್ತಹೋಗಿ ಅವರಿಂದ ಅವನ ಶಕ್ತಿಸಂಚಯದ ಸಾಮರ್ಥ್ಯವೂ ಉತ್ತರೋತ್ತರ ಹೆಚ್ಚುತ್ತಹೋಗುವದು. ಒಬ್ಬ ಸಾಮಾನ್ಯ ವ್ಯಕ್ತಿಯು ಉತ್ತರೋತ್ತರ ಘನತೆಗೇರುವ ಮಾರ್ಗವು ಇದೇ ಎಂದು ಹೇಳಬಹುದು. ಹೀಗೆ ಉತ್ತರೋತ್ತರ ತನ್ನ ಬಲವನ್ನು ಹೆಚ್ಚಿಸಿಕೊಂಡಿದ್ದ ಮಹಮ್ಮದನು ತನ್ನಲ್ಲಿ ''ನಾನು ಮಹಾಬಲಿಷ್ಠನು, ಜಗತ್ತನ್ನು ನಡುಗಿಸಬಲ್ಲೆನು'' ಎಂದು ಭಾವಿಸುತ್ತಿದ್ದನು. ಅದರಂತೆ ಅವನ ಸೈನಿಕರು ಅವನ ಮನೋಬಲದಿಂದ ಪ್ರೇರಿತರಾಗಿ— ''ನಾವು ಮಹಾಬಲಿಷ್ಠರು, ಜಗತ್ತನ್ನು ನಡುಗಿಸಬಲ್ಲೆವು'' ಎಂದು ಭಾವಿಸುತ್ತಿದ್ದರು. ಅವರ ಈ ಭಾವನೆಗನುಸರಿಸಿ ಜಗತ್ತು ನಡುಗುವಂಥ ಕ್ರೂರ ಕರ್ಮಗಳು ಅವರಿಂದ ಜರುಗಿದವು. ಆದ್ದರಿಂದಲೇ ''ಭಾವವೇ ಬಲವೆ''ಂಬ ಮಾತು ಪ್ರಸಿದ್ಧವಾಗಿರುವದು! ಕನ್ನಡಿಗರಲ್ಲಿ ಇಂಥ ಉಚ್ಚ ಭಾವನೆ ಇಲ್ಲದ್ದರಿಂದ ಅವರು ಮುಸಲ್ಮಾನರಿಗೆ ಅಡಿಯಾಳಾಗಿದ್ದರು. ವೃದ್ಧ ದೇವರಾಯನು ಅತ್ಯಂತ ಪ್ರಬಲನಾದ ಮಹಮ್ಮದನಿಗೆ ಅಂಜಿ– ''ನಾನು ಬಲಹೀನನು, ಮಹಮ್ಮದನಿಗೆ ನಾನು ಈಡಾಗಲಾರೆನು'' ಎಂದು ಭಾವಿಸುತ್ತಿದ್ದನು.

ಅವನಂತೆ ಅವನ ಮನೋಬಲದ ಅನುಸರಣ ಮಾಡುವ ಸೈನಿಕರೂ– ''ನಾವು ಬಲಹೀನರು; ಮುಹಮ್ಮದನಿಗೆ ಈಡಾಗಲಾರೆವು'' ಎಂದು ಭಾವಿಸುತ್ತಿದ್ದರು; ಹೀಗೆ ಸಂರಕ್ಷಕನಾದ ರಾಜನೂ, ಅವನ ಸೈನಿಕರೂ ತಾವು ಹೀನಬಲರೆಂದು ಭಾವಿಸಿ ಮುಸಲ್ಮಾನರಿಗೆ ಅಂಜಹತ್ತಿದ ಬಳಿಕ, ಅವರಿಂದ ರಕ್ಷಿತವಾದ ಪ್ರಜಾಜನವೂ ತಾವು ಹೀನಬಲವೆಂಬ ಭಾವನೆಯಿಂದ ಮುಸಲ್ಮಾನರನ್ನು ಕಂಡು ಅಂಜುತ್ತಿದ್ದದ್ದು ಆಶ್ಚರ್ಯವೇನು? ಹೀಗಾಗಿ ಮುಸಲ್ಮಾನರ ಅಬ್ಬರದ ತುಳಿತಕ್ಕೆ ಕರ್ನಾಟಕ ಭೂಮಾತೆಯು, ತನಗೆ ರಕ್ಷಕರಿಲ್ಲದಾಯಿತೆಂದು ಗಡಗಡನೆ ನಡುಗಹತ್ತಿದಳು! ಪ್ರಿಯವಾಚಕರೇ, ನೋಡಿರಿ, ಹೀನ ಭಾವನೆಯ ದುಷ್ಪರಿಣಾಮವು ಎಷ್ಟರಮಟ್ಟಿಗೆ ಆಯಿತು! ಸದ್ಯಕ್ಕೆ ಕರ್ನಾಟಕಕ್ಕೆ ಬೇಕಾಗಿದ್ದರೆ, ಕನ್ನಡಿಗರ ಈ ಹೀನಭಾವನೆಯನ್ನು ಹೋಗಲಾಡಿಸಿ, ಪ್ರಬಲ ಭಾವನೆಯನ್ನುಂಟು ಮಾಡುವ ಪ್ರತಾಪಶಾಲಿಯೊಬ್ಬನು ಬೇಕಾಗಿದ್ದನು. ಅಂಥವನ ಹಾದಿಯನ್ನೇ ಕರ್ನಾಟಕ ಭೂಮಾತೆಯು ಆತುರದಿಂದ ನೋಡುತ್ತಿದ್ದಳು! ಉಳಿದ ಎಲ್ಲ ಮಾತಿನ ಅನುಕೂಲತೆಯಿದ್ದು, ಇದೊಂದು ಮಾತಿನ ಅನುಕೂಲತೆಯಿಲ್ಲದ್ದರಿಂದ ಕನ್ನಡಿಗರು ಕೈಮುಚ್ಚಿಕೊಂಡು ಕುಳಿತಂತೆ ಆಗಿತ್ತು, ಇರಲಿ.

ಹೀಗೆ ಸಂತಾಪದಿಂದ ನೋಡುತ್ತಲಿದ್ದ ಮುಹಮ್ಮದನು ಬಹಾಉದ್ದೀನನನ್ನು ಕುರಿತು ಒಮ್ಮೆಲೆ– ಏ ಬದಮಾಷ, ನಿನ್ನ ಕೃತಕರ್ಮದ ಪ್ರಾಯಶ್ಚಿತ್ತವನ್ನು ಭೋಗಿಸು. ತಫಲಕ ಮುಹಮ್ಮದನೊಡನೆ ವಿರೋಧ ಬಳಿಸಿದವನ ಗತಿಯು ಏನಾಗುತ್ತದೆಂಬದನ್ನು ಜನರು ನೋಡಿ ಎಚ್ಚರಪಡಲಿ ! ಎಂದು ಎರಡನೇ ಮಾತುಗಳನ್ನಾಡಿ, ತನ್ನ ಅಂಗರಕ್ಷಕರಲ್ಲಿ ಒಬ್ಬನನ್ನು ಕುರಿತು– ''ಹೋಗು, ಈ ನೀಚನನ್ನು ಹಿಡಿದೆಳೆದು ಈ ನೆರೆದ ದರ್ಬಾರದಲ್ಲಿ ಇವನ ಮೈದೊಗಲು ಸುಲಿಸು'' ಎಂದು ಅಜ್ಞಾಪಿಸಿದನು. ಈ ಕ್ರೂರನ ಅಪ್ಪಣೆಗೆ ವಿರುದ್ಧವಾಗಿ ನಡೆದುಕೊಳ್ಳುವ ಧೈರ್ಯವು ಯಾರಿಗಿರುವದು? ಕೂಡಲೆ ಸೇವಕರು ಮುಂದುವರಿದು ಬಹಾಉದ್ದೀನನನ್ನು ಹಿಡಿದೆಳೆದರು. ಇದನ್ನು ನೋಡಿ ದರ್ಬಾರದ ಜನರ, ವಿಶೇಷವಾಗಿ ಕೋಮಲಾಂತಃಕರಣದ ಕನ್ನಡಿಗರ ಮೈಗೂದಲುಗಳು ನೆಟ್ಟಗಾದವು! ಎಷ್ಟೋ ಜನರ ಹೃದಯಗಳು ಭಯದಿಂದ ಹಾರಹತ್ತಿದವು; ಕೆಲವರ ಕಣ್ಣುಗಳಲ್ಲಿ ನೀರುಗಳು ಬಂದವು. ಕೆಲವರು ಕುಳಿತಲ್ಲಿ ಕಣ್ಣುಗಳನ್ನು ಮುಚ್ಚಿ ತಲೆಯನ್ನು ತಗ್ಗಿಸಿದರು. ಬೀದಿಯಲ್ಲಿ ನೆರೆದಿದ್ದ ಬಹು ಜನರು ಭಯದಿಂದ ತಮ್ಮ ಮನೆಗಳನ್ನು ಸೇರಿದರು. ದಯಾಶೂನ್ಯನ ಈ ಕ್ರೂರಕರ್ಮಗಳನ್ನು ನೋಡಲಾರದೆ ಯಾರಾದರೂ ಎದ್ದು ಹೋಗಬೇಕೆಂದರೆ, ಅವನ ದುಸ್ಸಹವಾದ ದರ್ಪವು ಅವರನ್ನು ಮೇಲಕ್ಕೇಳ ಗೊಡಲೊಲ್ಲದು! ಎಲ್ಲ ಜನರು ಚಿತ್ರದ ಗೊಂಬೆಗಳಂತೆ ನಿಂತಲ್ಲಿ ನಿಂತುಬಿಟ್ಟಿದ್ದರು, ಹಾಗು ಕುಳಿತಲ್ಲಿ ಕುಳಿತುಬಿಟ್ಟಿದ್ದರು! ಆ ದರ್ಬಾರದಲ್ಲಿ ಬಹಾಉದ್ದೀನನ ಮಿತ್ರರೂ, ಪರಿಚಯದವರೂ ಹಲವರಿದ್ದರು; ಆದರೆ ಅವರಿಗೆ ಏನು ಮಾಡಲಿಕ್ಕೆ ಬರುವ ಹಾಗಿತ್ತು? ಇವನು ಬಹಾಉದ್ದೀನನ ಪಕ್ಷದವನೆಂದಿಷ್ಟು ಗೊತ್ತಾದರೆ ಅವನನ್ನೇನು ಆ ಕ್ರೂರನು ನಿಲ್ಲಿಸಿ ಸುಡಿಸುತ್ತಿದ್ದನೋ, ತಗ್ಗು ತೋಡಿಸಿ ಹುಗಿಸುತ್ತಿದ್ದನೋ, ಗೋಡೆಯಲ್ಲಿ ಸೇರಿಸಿ ಮೆತ್ತಿಸುತ್ತಿದ್ದನೋ, ನಿಲ್ಲಿಸಿ ರುಂಡವನ್ನು ತುಂಡರಿಸುತ್ತಿದ್ದನೋ, ಇನ್ನೂ ಏನೇನು ಮಾಡಿಸುತ್ತಿದ್ದನೋ ಅವನಿಗೇ ಗೊತ್ತು! ಇಂಥ

ದುಸ್ಸಹವಾದ ಶಿಕ್ಷೆಯ ಭಯದಿಂದ ಯಾರೊಬ್ಬರೂ ಪಿಟ್ಟೆಂದು ಮಾತಾಡದೆ ಸುಮ್ಮನೆ ತಲೆತಗ್ಗಿಸಿಕೊಂಡು ಕುಳಿತಿದ್ದರು. ಸ್ವತಃ ದೇವರಾಯನೂ ಬಹಾಉದ್ದೀನನ ಮಿತ್ರನಾಗಿದ್ದನು. ತನ್ನ ಮಿತ್ರನಿಗೆ ಈ ಕ್ರೂರ ಶಿಕ್ಷೆಯನ್ನು ವಿಧಿಸಿದ್ದನ್ನು ನೋಡಿ ಆತನಿಗೆ ಸ್ವಲ್ಪ ಸಂತಾಪವೂ ಆಯಿತು. ಆ ಸಂತಾಪದ ಭರದಲ್ಲಿ ಆತನು ತನ್ನ ಸೈನಿಕರ ಕಡೆಗೆ ನೋಡಿ ಏನೋ ಆಜ್ಞಾಪಿಸುವ ಹವಣಿಕೆಯಲ್ಲಿದ್ದನು; ಅಷ್ಟರಲ್ಲಿ ತಮ್ಮ ಜಂಬುಕೇಶ್ವರರಾಯನ ದುರವಸ್ಥೆಯು ಅವನ ಕಣ್ಣಿಗೆ ಕಟ್ಟಿ ತನ್ನ ಪ್ರಿಯ ಪುತ್ರಿಯಾದ ಪದ್ಮಿನಿಯ ಸ್ಮರಣವಾಗಲು, ಆ ವೃದ್ಧ ರಾಜನು ತನ್ನ ಸಂತಾಪವನ್ನು ತನ್ನೊಳಗೇ ನುಂಗಿಕೊಂಡು ಬಳಿಯಲ್ಲಿ ಕುಳಿತಿದ್ದ ಗಂಗಾಧರಭಟ್ಟನನ್ನು ನೋಡಿ ಒಮ್ಮೆ ಉಸುರ್ಗರೆದನು. ಮಹಮ್ಮದನ ಇಂಥ ಹಲವು ಕ್ರೂರಕರ್ಮಗಳನ್ನು ನೋಡಿ ನೋಡಿ ಮನಸ್ಸು ಕಲ್ಲಾಗಿದ್ದ ಗಂಗಾಧರಭಟ್ಟನು ತಾನೂ ಒಮ್ಮೆ ಉಸುರ್ಗರೆದು ದುಃಖವನ್ನು ಪ್ರಕಟಿಸಿದನು ! ಮುಸಲ್ಮಾನ ಸೈನ್ಯದ ಪ್ರತಾಪಕ್ಕೆ ಅಂಜಿ ತತ್ತಿಯ ಹಾಕುತ್ತಿದ್ದ ಕನ್ನಡ ಸೈನಿಕರಿಗೆ ದೇವರಾಯನ ಈ ಹೇಡಿತನದಿಂದ ಸಮಾಧಾನವೇ ಆಯಿತು. ಅತ್ತ ಈ ಭಯಂಕರ ಪ್ರಸಂಗವನ್ನು ನೋಡುತ್ತಿದ್ದ ಅತ್ಯಂತ ಸಾತ್ವಿಕ ಸ್ವಭಾವದ ನಮ್ಮ ತರುಣ ಗಾಯಕಿಯ ಕೋಮಲ ಹೃದಯವು ಕಮರಿಹೋಗಿ, ಆಕೆಯು ಕಣ್ಣೀರು ಸುರಿಸುತ್ತ ಮೂಢಳಂತೆ ಸುಮ್ಮನೆ ನೋಡುತ್ತ ಕುಳಿತುಕೊಂಡಿದ್ದಳು. ಜನ್ಮದಲ್ಲಿ ಇಂಥ ಕ್ರೂರತನದ ಚಿತ್ರವು ಆಕೆಯ ಕಣ್ಣಿಗೆ ಬಿದ್ದಿದ್ದಿಲ್ಲ! ಪಾಪ! ಸತ್ಸಮಾಗಮದಿಂದ ಧನ್ಯಳಾಗಿದ್ದ ಆ ಪುಣ್ಯವಂತಳಿಗೆ ಇಂಥ ಕ್ರೂರಕರ್ಮವು ಹ್ಯಾಗೆ ಸಂಬಂಧಿಸುವದು?

ಹೀಗೆ ಸರ್ವತ್ರ ಶೋಕ–ಭಯಾನಕ ರಸಗಳು ಉತ್ಪನ್ನವಾಗಿ ದಯಾವಂತರ ಹೃದಯಗಳು ತಲ್ಲಣಿಸುತ್ತಿರಲು, ನಾಲ್ಕುತಾಸು ಹೊತ್ತು ಏರಿ ಬಿಸಿಲ ತಾಪವು ಹೆಚ್ಚಹತ್ತಿತು. ಸೇವಕರು ಬಹಾಉದ್ದೀನನನ್ನು ನಿರ್ದಯದಿಂದ ಹಿಡಿದು ಎಳೆಯುವಾಗ, ಕನ್ನಡಿಗರ ಹೆಣ್ಣುಗರಳಿನ ಹೃದಯಗಳು ಕಂಪಿಸಿ, ಈ ಕ್ರೂರನಿಂದ ತಮಗೇನು ಉಪಹತಿಯು ತಟ್ಟುವದೋ ಎಂಬ ಚಿಂತೆಯು ಅವರನ್ನು ಬಾಧಿಸಹತ್ತಿತು. ಮೇಲೆ ಬಿಸಿಲತಾಪ, ಅಂತರಂಗದಲ್ಲಿ ಶೋಕದ ತಾಪ, ಎದುರಿಗೆ ಪ್ರತ್ಯಕ್ಷ ಮಾರಿಯಂತೆ ನರಬಲಿಯಾಗಿ ಕುಳಿತಿದ್ದ ಕ್ರೂರನ ದರ್ಶನದ ತಾಪ. ಹೀಗೆ ತಾಪತ್ರಯಗಳಿಂದ ಪೀಡಿತರಾಗಿ ಜನರು ತಳಮಳಿಸುತ್ತಿರಲು, ಮೈದೊಗಲು ಸುಲಿಯುವ ಸರ್ವಸಾಧನಗಳು ಬಹಾಉದ್ದೀನನ ಬಳಿಯಲ್ಲಿ ಬಂದುಬಿದ್ದವು. ಅವನ್ನು ನೋಡಿ ಇಂಥ ಕ್ರೂರತನದ ಸುದ್ದಿಯರಿಯದ ಕನ್ನಡಿಗರ ಮೈಗೂದಲುಗಳು ನೆಟ್ಟಗಾದವು. ಇಷ್ಟಾದರೂ ಬಹಾಉದ್ದೀನನ ಗಾಂಭೀರ್ಯವು ಅಳಿದಿದ್ದಿಲ್ಲ, ಅವನು ತನ್ನ ಕಕ್ಕನನ್ನು ಪ್ರಾರ್ಥಿಸಲೂ ಇಲ್ಲ; ತಿರಸ್ಕರಿಸಲು ಇಲ್ಲ, ಎದುರಿಗೆ ಬಂದುನಿಂತಿದ್ದ ಮೃತ್ಯುದೇವತೆಯನ್ನು ಆಲಿಂಗಿಸುವದಕ್ಕಾಗಿ ಆತನು ಸಜ್ಜಾಗಿ ನಿಂತಿದ್ದನು. ಈ ಪ್ರಸಂಗದಲ್ಲಿ ಆತನಿಗೆ ಹೆಗ್ಗನ ನೆನಪಾಯಿತು. ಹೆಗ್ಗನು ಬಲ್ಲಾಳರಾಜನ ಆಶ್ರಯಕ್ಕೆ ಹೋಗಬೇಡೆಂದು ಹೇಳಿದ್ದನ್ನು ಸ್ಮರಿಸಿ ಆತನು ಮರುಗಿದನು. ಹೆಗ್ಗನ ದೊಡ್ಡ ಮನಸ್ಸನ್ನು ನೆನಿಸುವಾಗ ಆತನ ಕಣ್ಣೀರುಗಳು ಉದುರುವ ಹವಣಿಕೆಯಲ್ಲಿದ್ದವು; ಆದರೆ ಆ ಗಂಭೀರನು ಅವನ್ನು ಧೈರ್ಯದಿಂದ ತಡೆದು, ತನ್ನೊಡನೆ ಸೆರೆಯಾಳಾಗಿ ಬಂದಿದ್ದ ಮಲ್ಲಸರ್ಜನನ ಗತಿಯು ಏನಾಗುವದೋ ಎಂದು ವ್ಯಸನಪಟ್ಟನು. ಕನ್ನಡಿಗರ ದೊಡ್ಡಮನಸ್ಸು, ಅವರ ಸ್ವಜನಾಭಿಮಾನ,

ಸೌಜನ್ಯ, ಸಭ್ಯಾಚರಣೆ, ಪಾಪಭೀರುತೆ, ಕೋಮಲಹೃದಯ ಮೊದಲಾದವುಗಳ ಅನುಭವವು ಬಹಾಉದ್ದೀನನಿಗೆ ಚೆನ್ನಾಗಿ ಆಗಿತ್ತು; ಯಾಕಂದರೆ ಆತನ ಬಳಿಕೆಯು ಕುಲೀನ ಜನರೊಡನೆಯೇ ವಿಶೇಷವಾಗಿ ಆಗಿತ್ತು. ಈ ಪ್ರಸಂಗದಲ್ಲಿ ಉದಾರಾಂತಃಕರಣದ ನಮ್ಮ ಹೆಗ್ಗಣ್ಣನು ಬಂದಿರಬಹುದೇ? ಎಂದು ಆತನು ನಾಲ್ಕೂ ಕಡೆಗೆ ನೋಡಿದನು; ಆದರೆ ದುರ್ದೈವವು ಕೈ ತೊಳೆದು ಬೆನ್ನು ಹತ್ತಿರುವಾಗ ದೇವರೇ ಆತನ ಪಾಲಿಗೆ ಮರೆಯಾಗುತ್ತಿರಲು, ಹೆಗ್ಗಣ್ಣನಾದರೂ ಹೊತ್ತಿಗೆ ಬರುವ ಬಗೆಯೇನು? ಹೀಗೆ ನಾಲ್ಕೂಕಡೆಗೆ ನೋಡುವ ಬಹಾಉದ್ದೀನನ ಕಣ್ಣಿಗೆ ದುಃಖದಿಂದ ಕಣ್ಣೀರು ಸುರಿಸುವ ಕನ್ನಡಿಗರ ಮುಖಗಳೇ ಕಂಡವಲ್ಲದೆ, ಅನ್ಯಾಯದ ಆಚರಣೆಗಾಗಿ ಕ್ರೋಧಸಂತಪ್ತವಾದ ಹುಬ್ಬುಗಂಟಿಕ್ಕಿದ ಹೆಗ್ಗಣ್ಣನ ಉಗ್ರ ಮುಖದರ್ಶನವಾಗಲಿಲ್ಲ! ಅತ್ತ ದೇವರಾಜನ ಕಡೆಗೆ ನೋಡಲು, ಆತನು ಮೋರೆ ತಗ್ಗಿಸಿ ಕುಳಿತಿದ್ದನು: ಬಳಿಕ ಆತನು ಕನ್ನಡ ಸೈನಿಕರ ಕಡೆಗೆ ನೋಡಲು, ಅವರು ಬಹಾಉದ್ದೀನನನ್ನು ನೋಡಲಾರದೆ ನಾಚಿಕೆಯಿಂದ ತಮ್ಮ ದೃಷ್ಟಿಗಳನ್ನು ಹೊರಳಿಸಿದರು; ಆಮೇಲೆ ದರ್ಬಾರದ ಸುತ್ತುಗಟ್ಟಿ ನಿಂತಿದ್ದ ತನ್ನ ಕಕ್ಕನ ಮುಸಲ್ಮಾನ ಸೈನ್ಯವನ್ನು ನೋಡಲು, ಅವರು ನಿಮ್ಮ ಈ ಕ್ರೂರ ಕಕ್ಕನ ಮುಂದೆ ನಮ್ಮ ಆಟವೇನೂ ನಡೆಯದೆಂಬ ಭಾವವನ್ನು ಪ್ರಕಟಿಸಿದರು. ಎದುರಿಗೆ ಕುಳಿತಿರುವ ಕಕ್ಕನನ್ನು ನೋಡಲು, ಆತನು ಕೃತಾಂತನಂತೆ ತೋರುತ್ತಿದ್ದನು. ಹೀಗೆ ನೋಡಿದತ್ತ ಶೋಕವಾಗಲಿ, ಲಜ್ಜೆಯಾಗಲಿ, ಪರಾಧೀನತೆಯಾಗಲಿ, ಕ್ರೌರ್ಯವಾಗಲಿ ಕಣ್ಣಿಗೆ ಬಿದ್ದವಲ್ಲದೆ, ಅನಾಥ ರಕ್ಷಣದ ನಿಸ್ಪೃಹವಾದ ಪ್ರತಾಪದ ಸುಳುವು ಎಲ್ಲಿಯೂ ಕಾಣಲಿಲ್ಲ. ಹೀಗೆ ಆತನು ನಿರಾಶೆಯಿಂದ ಬೇರೊಂದು ಕಡೆಗೆ ನೋಡಲು, ನಮ್ಮ ತರುಣ ಬೈರಾಗಿಣಿಯ ಕೃದ್ಧಮೂರ್ತಿಯು ಆತನ ಕಣ್ಣಿಗೆ ಬಿದ್ದು, ಒಟ್ಟು ಅಬಲೆಯಲ್ಲಿಯೇ ಆಗಲೊಲ್ಲದೇಕೆ, ಪವಿತ್ರಗುಣದ ಅಂಕುರವು ತೋರಿತೆಂದು ಆತನು ಸಮಾಧಾನಪಟ್ಟನು.

ಹೀಗೆ ಎಲ್ಲಕಡೆಗೂ ನೋಡುವದಾದಮೇಲೆ ಬಹಾಉದ್ದೀನನು ಆಕಾಶದ ಕಡೆಗೆ ಮುಖವೆತ್ತಿ ದೇವರನ್ನು ಮರೆಹೊಕ್ಕು– ''ಅಲ್ಲಾ, ಪರವರದಿಗಾರ, ಈ ಪಾಪಿಯ ಅನಂತ ಅಪರಾಧಗಳನ್ನು ಕ್ಷಮಿಸು. ಹ್ಯಾಗಿದ್ದರೂ ಕಕ್ಕನ ಮೇಲೆ ನಾನು ತಿರುಗಿಬಿದ್ದದ್ದು ಅಪರಾಧವೇ ಸರಿ. ಅಂತೇ ಈ ಅಪರಾಧಕ್ಕೆ ತಕ್ಕ ಶಾಸನವು ಈಗ ನನಗೆ ಆಗುತ್ತಿರುವದು! ದೇವಾ, ನೀನು ಅತ್ಯಂತ ಕ್ಷಮಾಶೀಲನು. ಅಂತೇ ನಿನ್ನ ಪರಮಾನುಗ್ರಹಕ್ಕೆ ಪಾತ್ರರಾದ ಮಹಮ್ಮದ ಪೈಗಂಬರರು, ತಮ್ಮ ಕೆನ್ನೆಗೆ ಹೊಡೆದ ತಮ್ಮ ಕಕ್ಕಂದಿರ ಪೆಟ್ಟನ್ನು ಶಾಂತ ಮನಸ್ಸಿನಿಂದ ತಾಳಿಕೊಂಡರು. ಅದರಂತೆ, ಆ ಮಹಾತ್ಮರು ತಮ್ಮನ್ನು ನಿಷ್ಕಾರಣವಾಗಿ ಪೀಡಿಸಿ, ಅಪರಾಧಿಗಳಾದವರ ಅಪರಾಧಗಳನ್ನು ಕ್ಷಮಿಸಿ, ಅವರಿಗೆ ಸದ್ಬುದ್ಧಿಯನ್ನು ಕೊಡೆಂದು ನಿನ್ನನ್ನು ಪ್ರಾರ್ಥಿಸಿದರು. ದೇವಾ, ನಿನ್ನ ಭಕ್ತರ ಈ ಕ್ಷಮಾಶೀಲತೆಯೆತ್ತ? ನನ್ನಂಥ ಲೌಕಿಕಾಧಮರ ರಾಜ್ಯತೃಷ್ಣೆಯೆತ್ತ? ನಿನ್ನನ್ನು ಹೆಚ್ಚು ಕಾಲ ಪ್ರಾರ್ಥಿಸುವದಕ್ಕೂ ನನಗೆ ಈಗ ಅವಕಾಶವಿಲ್ಲ; ಆದ್ದರಿಂದ ಕಟ್ಟಕಡೆಯ ನನ್ನ ಈ ಪ್ರಾರ್ಥನೆಯಲ್ಲಿ ನಿನಗೆ ವಂದನೆಗಳನ್ನು ಸಮರ್ಪಿಸಿ, ಹೇಳತಕ್ಕ ಹಿತದ ಮಾತುಗಳನ್ನು ಇವರೆಲ್ಲರಿಗೂ ಹೇಳಿಬಿಡುವೆನು. ಮೃತ್ಯುವಿನ ಬಾಯಲ್ಲಿ ಕಾಲಿಟ್ಟಿರುವ ನನಗೆ ಯಾವ ಲೌಕಿಕರ

ಭಯವೂ ಉಳಿದಿರುವದಿಲ್ಲ'' ಎಂದು ಪ್ರಾರ್ಥಿಸಿ, ಕನ್ನಡಿಗರನ್ನು ಕುರಿತು— ''ಕನ್ನಡಿಗರೇ, ಇಲ್ಲಿಗೆ ನಿಮ್ಮ ಹೇಡಿತನವನ್ನು ಸಾಕುಮಾಡಿರಿ. ನೀವು ನನಗೆ ಆಶ್ರಯಕೊಟ್ಟು ಕೆಲಕಾಲ ನನ್ನನ್ನು ಸಂರಕ್ಷಿಸಿರುವದರಿಂದ ನನ್ನ ಮೇಲೆ ನಿಮ್ಮ ಅನಂತ ಉಪಕಾರವಾಗಿರುವದು. ನನ್ನ ಸಲುವಾಗಿ ಆತ್ಮಾರ್ಪಣ ಮಾಡಿದ ಜಂಬುಕೇಶ್ವರರಾಯರ ಋಣದೊಳಗಿಂದಂತೂ ನಾನು ನಿಶ್ಚಯವಾಗಿ ಮುಕ್ತನಾಗುವದಿಲ್ಲ, ಹೀಗೆ ನಿಮ್ಮ ಋಣಭಾರದಿಂದ ಬಗ್ಗಿದ ನಾನು ಇನ್ನೊಮ್ಮೆ ಹೇಳುತ್ತೇನೆ, ಇಲ್ಲಿಗೆ ನಿಮ್ಮ ಹೇಡಿತನವನ್ನು ಸಾಕುಮಾಡಿರಿ. ಪ್ರಿಯ ದೋಸ್ತರೇ, ನಿಮ್ಮ ನೀಚ ಸ್ವಾರ್ಥದ ಮಿತಿಯು ಮೀರಿದ್ದರಿಂದ ನೀವು ವಿವೇಕಭ್ರಷ್ಟ ರಾಗಿರುವಿರಿ. ನಿಮ್ಮ ಮೈಮೇಲಿನ ಎಚ್ಚರವು ತಪ್ಪಿದಂತಾಗಿರುವದು. ಈ ವಿಪನ್ನ ಸ್ಥಿತಿಯಲ್ಲಿ ನಿಮ್ಮನ್ನು ಜಾಗೃತಗೊಳಿಸುವಂಥ ಒಬ್ಬ ಪ್ರತಾಪಿಯು ಉದಯವಾಗಿರುವನು. ಆ ಪುಣ್ಯಾತ್ಮನಿಂದ ಸ್ವಲ್ಪ ದಿವಸಗಳಲ್ಲಿ ನಿಮ್ಮ ಉದ್ಧಾರವಾಗುವದು. ಮರಣೋನ್ಮುಖನಾಗಿರುವ ನನ್ನ ಈ ಭವಿಷ್ಯವನ್ನು ಮರೆಯಬೇಡಿರಿ. ಖುದಾನು ನಿಮಗೆ ಸಮೃದ್ಧಿಯನ್ನುಂಟುಮಾಡಲಿ!''

ಈ ಮೇರೆಗೆ ನುಡಿದಬಳಿಕ ತನ್ನ ಕಕ್ಕನ ಕಡೆಗೆ ನೋಡಿ ಸ್ಪಷ್ಟ ವಾಣಿಯಿಂದ – ''ಯಾಕೆ? ತಡವೇಕೆ? ಉಗ್ರಶಾಸನ ಮಾಡುವಲ್ಲಿ ಅಗ್ರೇಸರನೆನಿಸಿದ ಮಹಮ್ಮದ ತಘಲಕನ ಅಪ್ಪಣೆಯು ಅಮಲಿನಲ್ಲಿ ಬರಲಿಕ್ಕೆ ಇಷ್ಟು ತಡವೇಕೆ? ಕಕ್ಕಾ, ಅಪರಾಧಿಯಾದ ಮಗನು ಶಿಕ್ಷೆಯನ್ನು ಅನುಭವಿಸಲು ಸಿದ್ಧನಾಗಿದ್ದಾನೆ. ಯಾವಾಗಾದರೂ ಮರಣಯಾತನೆಯು ಪ್ರಾಣಿಗಳಿಗೆ ತಪ್ಪಿಲ್ಲವಷ್ಟೇ? ಸುಲಿಸು, ಬೇಗನೇ ನನ್ನ ಮೈದೊಗಲನ್ನು ಸುಲಿಸು! ನೀಚ ವಿಷಯ ಸೇವನದಿಂದ ಕೊಬ್ಬಿರುವ ಈ ಶರೀರದ ಚರ್ಮವನ್ನು ಸುಲಿಯುವಾಗ ಆಗುವ ವ್ಯಥೆಯನ್ನು ಸಹಿಸಲು ನಾನು ಸಿದ್ಧನಾಗಿರುವೆನು! ಐಹಿಕ ಕ್ಷುದ್ರ ಭೋಗ ಪುಷ್ಟ ದೇಹಧಾರಣವು ಪ್ರಸಂಗವಶಾತ್ ಎಷ್ಟು ದುಃಖ ದಾಯಕವಾಗುವದೆಂಬದನ್ನು ಈ ದರ್ಬಾರದವರು ನೋಡಿ, ತಮ್ಮ ದೇಹಾಭಿಮಾನ ವನ್ನು ಕೆಲಮಟ್ಟಿಗಾದರೂ ಕಡಿಮೆ ಮಾಡಿಕೊಳ್ಳಲಿ; ಆದರೆ ಕಕ್ಕಾ, ನಿನ್ನ ಕ್ರೂರತನಕ್ಕೆ ಮೇರೆಯೇ ಇಲ್ಲವೆ? ನಿನ್ನ ಹೃದಯದಲ್ಲಿ ಭೂತದಯೆಯ ಗಂಧವೂ ಇರುವದಿಲ್ಲವೆ? ಯಾರ ಮೈದೊಗಲು ಸುಲಿಸುತ್ತ ಯಾರ ಕಾಲುಹಿಡಿದು ದರದರ ಎಳೆಯುತ್ತ, ಯಾರ ಒಂದೊಂದೇ ಅವಯವವನ್ನು ಕಡಿಸಿ ಅವರಿಂದ ತಿನಿಸುತ್ತ, ಯಾರನ್ನು ನೆಲದಲ್ಲಿ ಹುಗಿಸುತ್ತ ಇನ್ನೂ ಯಾವ ಯಾವವೋ ಎಣಿಸಲಿಕ್ಕೆ ಬಾರದ ಕ್ರೂರ ಕರ್ಮಗಳನ್ನೆಸಗುತ್ತ ಭೂಲೋಕದ ಯಮನಂತೆ ವರ್ತಿಸುತ್ತಿರುವ ನೀನು ಶಾಶ್ವತನೆಂದು ಭಾವಿಸುತ್ತಿರುವೆಯಾ? ಇಂಥ ಉಗ್ರ ಶಾಸನಗಳ ಭಯದಿಂದ ಮನುಷ್ಯ ಜಾತಿಯನ್ನೇ ಅಂಕಿತವಾಗಿ ಮಾಡಿಕೊಳ್ಳಬಹುದೆಂಬ ನಂಬಿಗೆಯು ನಿನ್ನಲ್ಲಿರುವದೋ? ಧರ್ಮಜ್ಞನೂ, ಧರ್ಮದಲ್ಲಿ ಅತ್ಯಂತ ಶ್ರದ್ಧೆಯುಳ್ಳವನೂ ಎಂದು ಜನರಿಂದ ಹೊಗಳಿಸಿ ಕೊಳ್ಳುತ್ತಿರುವ ನಿನಗೆ, ನಮ್ಮ ಪವಿತ್ರ ಕುರಾಣಶಾಸ್ತ್ರವು ಇಂಥ ಕ್ರೂರ ಕರ್ಮಗಳಿಂದಲೇ ಜನರನ್ನು ಅಂಕಿತವಾಗಿ ಮಾಡಿಕೊಳ್ಳಬೇಕೆಂದು ನಿನಗೆ ಹೇಳುತ್ತಿರುವದೇ? ಕಕ್ಕಾ, ನೀನೇನೋ ತಿಳಿದಿರಬಹುದು, ನಾನು ಮನುಷ್ಯ ಜಾತಿಯನ್ನೇ ಹಣ್ಣು ಮಾಡಿದೆನೆಂದೂ, ಕಾಲಲ್ಲಿ ಮೆಟ್ಟಿ ತುಳಿದಿರುವೆನೆಂದೂ ಆದರೆ ಇದು ಕೇವಲ ನಿನ್ನ ಭ್ರಾಂತಿಯೆಂದು ತಿಳಿದುಕೋ. ಕಕ್ಕಾ,

ಸರ್ವಸಂಹಾರ ಸಾಮರ್ಥ್ಯವೂ, ವಶೀಕರಣ ಸರ್ವಸ್ವವೂ ಸರ್ವೇಶ್ವರನಾದ ದೇವರಿಗೊಬ್ಬ ನಿಗಲ್ಲದೆ ಅನ್ಯರಿಗಿರುವದಿಲ್ಲ. ನಿನ್ನ ಕ್ರೂರತನಕ್ಕಾಗಿ ಭರತ ಭೂಮಿಯು ಹಣ್ಣಾಗ್ಗಿರುವದರ ಬದಲು ಬಡಿದು ಎಬ್ಬಿಸಿದಂತೆ ಜಾಗೃತ ಮಾತ್ರ ಆಗಿರುತ್ತದೆ. ಯಾಕಂದರೆ ಮನುಷ್ಯಮಾತ್ರರಲ್ಲಿ ಉಜ್ವಲ ಗುಣಗಳು ಮೂಲತಃ ಇದ್ದೇ ಇರುತ್ತವೆ; ಇಲ್ಲದ ಗುಣಗಳನ್ನು ಹೊಸದಾಗಿ ಯಾವನು ಹಾಕುವ ಹಾಗಿಲ್ಲ; ಆದರೆ ಆ ಗುಣಗಳು ಪಾಪವಿಶೇಷದಿಂದಾಗಲಿ, ಹೀನ ಪರಿಸ್ಥಿತಿ ಸಹವಾಸಗಳ ಯೋಗದಿಂದಾಗಲಿ ಚಲನಹೀನವಾಗಿರುತ್ತವೆ. ಹೀಗಿರುವಾಗ ನಿನ್ನ ಕ್ರೂರಕೃತ್ಯಗಳ ಪ್ರಚಂಡ ಆಘಾತವಾದಕೂಡಲೆ ಆ ಗುಣಗಳು ಚೇತರಿಸಿ ಪ್ರಕಟವಾಗುವವು; ಆದ್ದರಿಂದ ಜನರ ಮಲಗಿದ ಸದ್ಗುಣಗಳು ಪ್ರಕಟವಾಗುವದಕ್ಕೆ ಅಥವಾ ಮನುಷ್ಯನ ಉದ್ಧಾರಕ್ಕೆ ಬಾಹ್ಯದ ಸೌಮ್ಯ ಪರಿಸ್ಥಿತಿಗಿಂತ ಉಗ್ರ ಪರಿಸ್ಥಿತಿಯು ಹೆಚ್ಚು ಅನುಕೂಲವಾದದ್ದೆಂದು ತಿಳಿದುಕೊ. ನಿನ್ನ ಕ್ರೂರತನದ ಕೃತ್ಯಗಳ ಆಘಾತದಿಂದ ಜನರ ಮನೋಭೂಮಿಗಳು ಕಂಪಿಸಿ ಸಡಿಲುತ್ತಿರುವಾಗ, ಅವುಗಳಲ್ಲಿ ನಿನ್ನ ವಿಷಯದ ದ್ವೇಷಭಾವನಾ ರೂಪ ಬೀಜಗಳು ಬಿತ್ತಿದವು. ಹೀಗೆ ಬಿತ್ತಿಹೋದ ಬೀಜಗಳಿಗೆ ಜಲದ ಅವಶ್ಯಕತೆಯಾಯಿತು; ಆದರೆ ''ಸಮಾನಶೀಲ ವ್ಯಸನೇಷು ಸಖ್ಯಂ'' ಎಂಬ ಸಂಸ್ಕೃತೋಕ್ತಿಯಂತೆ, ಭಾರತೀಯರು ನಿನ್ನ ಪೀಡಾರೂಪ ಸಮಾನ ವ್ಯಸನದಿಂದ ತಮ್ಮ ಕ್ಷುದ್ರ ಅಂತಃಕಲಹಗಳನ್ನು ಮರೆತು ಪರಸ್ಪರ ಸಖ್ಯವುಳ್ಳವರಾಗಹತ್ತಲು, ಆ ಬೀಜಗಳಿಗೆ ಈ ಪ್ರೇಮಜಲದ ಸಂಸರ್ಗವಾಗಿ ಅವು ಮೊಳೆತು ಸಸಿಗಳಾದವು!

ಈ ಮೇರೆಗೆ ನುಡಿದು ಬಹಾಉದ್ದೀನನು ಕಣ್ಣುಮುಚ್ಚಿ ಆಕಾಶದ ಕಡೆಗೆ ಮುಖವೆತ್ತಿ ನಿಂತುಕೊಂಡನು. ಆಗ ದರ್ಬಾರವು ಸ್ತಬ್ಧವಾಗಿತ್ತು. ಜನರಿಗೆ ಪ್ರಂಚಂಡ ಸೂರ್ಯಕಿರಣಗಳ ತಾಪದ ಅನುಭವವೂ ಬಾರದೆಹೋಗಿ ಅವರು ಬಹಾಉದ್ದೀನನ ಸಹವಾಸದಿಂದ ಪರವಶರಾಗಿ ಕುಳಿತುಕೊಂಡಿದ್ದರು. ಅತ್ತ ಮುಹಮ್ಮದನ ಕ್ರೋಧವು ಶಾಂತವಾಗಹತ್ತಿತ್ತು, ಅವನ ಮಗನ ಮಾತುಗಳನ್ನು ಲಕ್ಷಪೂರ್ವಕವಾಗಿ ಕೇಳುತ್ತಿದ್ದನು. ತಾನು ವಿಧಿಸಿದ ಕ್ರೂರ ಶಿಕ್ಷೆಯಂತೆ ಮಗನ ಮೈದೊಗಲು ಸುಲಿಸುವ ಮನಸ್ಸು ಆತನಿಗೆ ಆಗಲೊಲ್ಲದು. ಈತನು ಮಹಾಜ್ಞಾನಿಯಂತೆ ಇಷ್ಟು ದಿಟ್ಟನತದಿಂದ ನನ್ನ ಮುಂದೆ ಹೇಳುವದಾದರೂ ಏನು, ಅದನ್ನು ಸಂಪೂರ್ಣವಾಗಿ ಕೇಳಬೇಕೆಂದು ಆತನು ನಿಶ್ಚಯಿಸಿದನು. ಅಷ್ಟರಲ್ಲಿ ಬಹಾಉದ್ದೀನನು ಕಣ್ಣುಗಳನ್ನು ತೆರೆದೆ ತನ್ನ ಕಕ್ಕನನ್ನು ನೋಡುತ್ತ– ''ಕಕ್ಕಾ, ಇವು ಅಪರಾಧಿಯಾದ ನಿನ್ನ ಮಗನ ಮಾತುಗಳೆಂದು ನೀನು ನಿರಾಕರಿಸಬೇಡ. ಕೇವಲ ಮರಣೋನ್ಮುಖನಾದದ್ದರಿಂದ ಸರ್ವಸಂಗಪರಿತ್ಯಾಗ ಮಾಡಿದ ವನೆನಿಸುವ ನಿನ್ನ ಮಗನನ್ನು ಈಗ ಮಗನೆಂದು ತಿಳಿಯದೆ ನಿರುಪಾಧಿಕ ಸದ್ಬೋಧಕನೆಂದು ತಿಳಿ. ಮೃತ್ಯುವಿಗೆ ತುತ್ತಾಗಿರುವಾಗ ಹೀಗೆ ಮಾತುಗಳ ಹೊರಡುವದುಂಟೇ? ಆದರೆ ಕೇವಲ ಅಂತರಾತ್ಮನ ಪವಿತ್ರ ಪ್ರೇರಣೆಯಿಂದ ಈ ಮಾತುಗಳನ್ನು ನಾನು ಆಡುತ್ತಿರುವೆನು. ಕಕ್ಕಾ, ದ್ವೇಷಬೀಜಗಳು ಪ್ರೇಮಜಲದ ಸಂಸರ್ಗದಿಂದ ಮೊಳೆತವೆಂಬ ಮಾತು ಆಕ್ಷೇಪಾರ್ಹವೆಂದು ನಿನ್ನಂಥ ವಿದ್ವಾಂಸನು ಭಾವಿಸಲಿಕ್ಕಿಲ್ಲ. ಪ್ರೇಮ–ದ್ವೇಷಗಳೆಂಬವು ಪರಿಸ್ಥಿತ್ಯನುರೂಪವಾಗಿ ಉಂಟಾದ ಮನಸ್ಸಿನ ವೃತ್ತಿಗಳಿರುತ್ತವೆ. ಒಂದೇ ಮನಸ್ಸು ತನಗೆ ಅನುಕೂಲ ಸಂಗತಿಗಳ

ಯೋಗವಿದ್ದಾಗ ಪ್ರೇಮರೂಪದಿಂದ ಪರಿಣಮಿಸುವದು; ಪ್ರತಿಕೂಲ ಸಂಗತಿಗಳ ಯೋಗವಿದ್ದಾಗ ದ್ವೇಷರೂಪದಿಂದ ಪರಿಣಮಿಸುವದು. ಭಾರತೀಯರಲ್ಲಿ ಸಮಾನ ವ್ಯಸನದಿಂದುಂಟಾದ ಪರಸ್ಪರ ಪ್ರೇಮಭಾವವೇ, ಅವರಿಗೆ ಪ್ರತಿಕೂಲನಾದ ನಿನ್ನ ವಿಷಯದಲ್ಲಿ ದ್ವೇಷರೂಪವಾಗಿ ಪರಿಣಮಿಸಿ, ಅದು ನಿನ್ನ ವಿಷಯದ ದ್ವೇಷ ಭಾವನೆಗೆ ಉತ್ತೇಜಕವಾಯಿತು; ಆದ್ದರಿಂದಲೇ ದ್ವೇಷಬೀಜವು ಭಾರತೀಯರ ಪರಸ್ಪರ ಪ್ರೇಮಜಲದಿಂದ, ಅಂದರೆ ನಿನ್ನ ವಿಷಯದ ದ್ವೇಷದಿಂದ ಮೊಳೆತು ಸಸಿಯಾಯಿತೆಂದು ಅಲಂಕಾರವಾಗಿ ಹೇಳಿದೆನು. ಕಕ್ಕಾ ಆ ಸಸಿಯ ಅಭಿವೃದ್ಧಿಗೆ ಗೊಬ್ಬರವೂ, ಅನುಕೂಲವಾಯುವೂ, ತಕ್ಕ ಗೆಯ್ತವೂ ಬೇಕಾಗಿರುವವಷ್ಟೇ? ಅವೂ ಒದಗಿಬಂದಿರುವವು ; ಹೇಳುತ್ತೇನೆ ಕೇಳು. ಭಾರತೀಯರ ಪರಸ್ಪರ ಸಖ್ಯದ ಮೂಲಕ ಅವರಲ್ಲಿ– ''ನಾವೆಲ್ಲರೂ ಭರತ ಭೂಮಿಯವರು, ಭರತಭೂಮಿಯ ಗೌರವ ಕಾಯುವದು ನಮ್ಮ ಕರ್ತವ್ಯವಾಗಿರುತ್ತದೆ'' ಎಂಬ ದೇಶಾಭಿಮಾನವು ಉತ್ಪನ್ನವಾಗಿರುವದು. ಈ ದೇಶಾಭಿಮಾನವನ್ನೇ ನಿನ್ನ ವಿಷಯದ ದ್ವೇಷಭಾವದ ಬೆಳವಣಿಗೆಗೆ ತಕ್ಕ ಗೊಬ್ಬರವೆಂದು ತಿಳಿ. ಅದರಂತೆ ನಿನ್ನ ಕ್ರೂರತನದ ಕೃತಿಗಳಿಂದ ಜನರ ವಿತ್ತಜೀವಿತಗಳು ಸುರಕ್ಷಿತವಾಗದೆ ಹೋಗಿರುವದರಿಂದ ಸ್ವಾರ್ಥತ್ಯಾಗವು ತಾನಾಗಿಯೇ ಅವರಲ್ಲಿ ಉಂಟಾಗಿರುವದು. ಈ ಸ್ವಾರ್ಥತ್ಯಾಗವನ್ನೇ ದ್ವೇಷ ವೃಕ್ಷದ ಬೆಳವಣಿಗೆಯ ಅನುಕೂಲವಾಯುವೆಂದು ತಿಳಿದುಕೋ. ಭಾರತೀಯರು ದೇಶಾಭಿಮಾನ ಪ್ರೇರಿತರಾಗಿ ನಿನ್ನ ಅಯೋಗ್ಯ ಕೃತಿಗಳಿಗೆ ಪ್ರತಿಕ್ರಿಯೆಗಳನ್ನು ಮಾಡಹತ್ತಲು, ನೀನು ಮತ್ತಿಷ್ಟು ಕ್ರೂರತನದ ಉಪಾಯಗಳನ್ನು ಯೋಚಿಸುವೆ; ಇದರಿಂದ ಭಾರತೀಯರ ಮನೋಭೂಮಿಯು ವಿಶೇಷವಾಗಿ ಕಂಪಿಸಿ ಸಡಿಲಾಗಲು, ಸಸಿಗೆ ತಕ್ಕ ಗೆಯ್ತವು ಒದಗಿದಂತಾಗುವದು. ಹೀಗೆ ನಿನ್ನ ವಿಷಯದ ದ್ವೇಷವೃಕ್ಷಕ್ಕೆ ಎಲ್ಲ ಬಗೆಯ ಅನುಕೂಲತೆಗಳು ಒದಗಿದ್ದರಿಂದ ಅದು ದಿನದಿನಕ್ಕೆ ಬೆಳೆಯಹತ್ತಿ, ಈಗ ನೀನು ಅದರ ನಾಶಕಾರಕ ಉಗ್ರಫಲಗಳನ್ನು ಭಕ್ಷಿಸುತ್ತಿರುವೆ! ಕಕ್ಕಾ, ಅದು ಹ್ಯಾಗೆಂಬದನ್ನು ಹೇಳುತ್ತೇನೆ ಕೇಳು. ಈಗ ನೀನು ಇತ್ತಕಡೆಯಲ್ಲಿರುತ್ತಿರಲು ಅತ್ತಕಡೆಯಲ್ಲಿ, ಅತ್ತ ಕಡೆಯಲ್ಲಿರುವಾಗ ಇತ್ತಕಡೆಯಲ್ಲಿ, ನೀನು ಅತ್ತಿಂದಿತ್ತ ಇತ್ತಿಂದತ್ತ ಅಲೆದಾಡುತ್ತಿರುವಾಗ ಬೇರೊಂದು ಕಡೆಯಲ್ಲಿ ಬಂಡಾಯಗಳು ಏಳುತ್ತಿರುವವಲ್ಲ? ಅವು ದ್ವೇಷವೃಕ್ಷ, ನಾಶಕಾರಕ ಫಲಗಳಲ್ಲದೆ ಬೇರೆ ಏನು? ಆದ್ದರಿಂದ ಕಕ್ಕಾ, ಸೆರಗಿಗೆ ಗಂಟುಹೊಡೆದುಕೋ. ಈಗ ನಾನು ನಿನ್ನ ಕ್ರೋಧಾಗ್ನಿಗೆ ಆಹುತಿಯಾದರೆ, ಸ್ವಲ್ಪ ದಿವಸಗಳಲ್ಲಿ ನಿನ್ನ ಆಹುತಿಯು ಭಾರತೀಯರ ದ್ವೇಷಾಗ್ನಿ ಯಲ್ಲಿ ನಿಶ್ಚಯವಾಗಿ ಆಗುವದು!!''

ಈ ಮೇರೆಗೆ ನುಡಿದು ಬಹಾಲುದ್ದೀನನು ಪುನಃ ಕಣ್ಣುಗಳನ್ನು ಮುಚ್ಚಿ ಆಕಾಶದ ಕಡೆಗೆ ಮುಖವೆತ್ತಿ ಗಾಂಭೀರ್ಯದಿಂದ– ''ಯಾ ಅಲ್ಲಾ!'' ಎಂದು ನುಡಿದು ಸುಮ್ಮನಾದನು. ಹೀಗೆ ಕಣ್ಣುಮುಚ್ಚಿರುವಾಗ ಆತನ ಕಣ್ಣಿಗೆ ಹುಕ್ಕನಿಂದೊಡಗೂಡಿದ ಒಬ್ಬ ತಪೋಧನನ ದಿವ್ಯಮೂರ್ತಿಯು ಕಾಣಿಸಿತು. ಅಲ್ಲಾನೇ ಈ ರೂಪದಿಂದ ತನ್ನ ಅಂತ್ಯಕಾಲದಲ್ಲಿ ದರ್ಶನ ಕೊಟ್ಟನೆಂಬ ಭಾವನೆಯುಂಟಾಗಿ ಬಹಾಲುದ್ದೀನನ ಕಣ್ಣುಗಳೊಳಗಿಂದ ಒಂದೇಸವನೆ ನೀರುಗಳು ಹೋಗಹತ್ತಿದವು! ಆತನ ಮುಖದಲ್ಲಿ ವಿಲಕ್ಷಣವಾದ ದೈವೀತೇಜಸ್ಸು ಪ್ರಕಟವಾಯಿತು.

ಅದನ್ನು ನೋಡಿ ದರ್ಬಾರದ ಜನರ ಕಣ್ಣುಗಳೊಳಗಿಂದಲೂ ನೀರುಗಳು ಬರತೊಡಗಿದವು. ವಿಶೇಷವಾದ ಆಶ್ಚರ್ಯದ ಸಂಗತಿಯೆಂದರೆ, ಅತ್ಯಂತ ಕ್ರೂರನೆನಿಸಿದ ಮಹಮ್ಮದನ ಕಣ್ಣುಗಳೊಳಗಿಂದಲೂ ನೀರುಗಳು ಬರತೊಡಗಿದವು; ಅಷ್ಟರಲ್ಲಿ ಒಬ್ಬ ಮುಸಲ್ಮಾನ ರಾವುತನು ಕುದುರೆಯನ್ನೋಡಿಸುತ್ತ ಮಹಮ್ಮದನ ಬಳಿಗೆ ಬಂದು ಒಂದು ಥೈಲಿಯನ್ನು ಕೊಟ್ಟನು. ಆ ಥೈಲಿಯನ್ನು ಓದುತ್ತೋದುತ್ತ ಕ್ರೋಧಸಂತಪ್ತ ಮಹಮ್ಮದನ ಕಣ್ಣೊಳಗಿನ ಜಲಧಾರೆಗಳು ತತ್‌ಕ್ಷಣ ಅಟ್ಟಿಸಿ, ಅವನ ಉಗ್ರಮುಖವು ಕೆಂಪಾಗಹತ್ತಿತು! ಆಗ ಆ ಕ್ರೂರನು ಆಸನದಿಂದೆದ್ದು ಕಾಲು ಅಪ್ಪಳಿಸಿ ಮುಂಗೈ ಕಡಿದು ದರ್ಬಾರವು ನಡುಗುವಂತೆ— ''ಹರಾಮಖೋರ, ಇಂಥ ಪುಂಡರ ಮೈದೊಗಲು ಸುಲಿಸಲೇಬೇಕು'' ಎಂದು ನುಡಿದು, ಸೇವಕರನ್ನು ಕುರಿತು— ''ಸುಲಿಯಿರಿ ಈ ನೀಚ ಬಂಡುಗಾರನ ಚರ್ಮವನ್ನು'' ಎಂದು ಆವೇಶದಿಂದ ಮುಂದಕ್ಕೆ ಬಂದು ಆಜ್ಞಾಪಿಸಲು, ಆಕಾಶದ ಕಡೆಗೆ ಮುಖವೆತ್ತಿ ನಿಂತಿದ್ದ ಬಹಾಉದ್ದೀನನ ಚರ್ಮವನ್ನು ಸೇವಕರು ಅತ್ಯಂತ ಕ್ರೂರತನದಿಂದ ಸುಲಿಯಹತ್ತಿದರು! ಆದರೆ ಪ್ರಿಯವಾಚಕರೇ, ನಮ್ಮ ಲೇಖನಿಯು ತತ್ತರಿಸುವದರಿಂದ ಈ ಕ್ರೂರಕೃತ್ಯವನ್ನು ನಾವು ವರ್ಣಿಸಲಾರೆವು. ಮಧ್ಯಾಹ್ನ ಬಿಸಿಲಲ್ಲಿ ಒದಗಿದ ಈ ಘೋರಕೃತ್ಯವನ್ನು ನೋಡಿ ದರ್ಬಾರದೊಳಗಿನ ಕೋಮಲ ಹೃದಯದ ಕನ್ನಡಿಗರು ಘೋಳೆಂದು ಅತ್ತರು! ರಕ್ತಪಾತದಿಂದ ದರ್ಬಾರದ ಭಯಂಕರತೆಯು ಮತ್ತಿಷ್ಟು ಹೆಚ್ಚಲು, ''ಹಾಹಾ!'' ಎಂಬ ರವವು ತನ್ನಿಂದ ತಾನೆ ಜನರ ಬಾಯಿಂದ ಹೊರಟಿತು! ಆದರೆ ಬಹಾಉದ್ದೀನನು ಮಿಸುಗಲಿಲ್ಲ, ಮುಸುಗುಟ್ಟಲಿಲ್ಲ! ಕಣ್ಣುಮುಚ್ಚಿ ಆಕಾಶದ ಕಡೆಗೆ ಮುಖವೆತ್ತಿ ನಿಂತವನು ನಿಂತಹಾಗೆ ನಿಂತುಬಿಟ್ಟಿದ್ದನು! ಅವನ ಕಣ್ಣೆದುರಿಗೆ ಹುಕ್ಕನಿಂದ ಸಹಿತವಾದ ಆ ತಪೋಧನನ ಮೂರ್ತಿಯು ಮಾತ್ರ ಸ್ಥಿರವಾಗಿ ಇತ್ತು, ಹೀಗೆ ನಿಂತಿರುವ ಬಹಾಉದ್ದೀನನ್ನು ನೋಡಿ ಮಹಮ್ಮದನು ಸಂತಾಪದಿಂದ ಬಂದು ಒದೆಯಲು, ಆ ದೈವಹೀನನು ನೆಲಕ್ಕೆ ಬಿದ್ದವನು ಬಿದ್ದುಹೋದನು! ಆತನ ಇಹಲೋಕದ ಯಾತ್ರೆಯು ಅಲ್ಲಿಗೇ ಮುಗಿದಂತಾಯಿತು; ಆದರೆ ಪ್ರಿಯವಾಚಕರೇ, ಈ ಪ್ರಸಂಗದಲ್ಲಿ ಬಹಾಉದ್ದೀನನು ಅತ್ಯಂತ ಯಾತನೆಯಿಂದ ಪ್ರಾಣಬಿಟ್ಟನೆಂದು ನೀವು ಹೇಳುವಿರಾ, ಅಥವಾ ತಪೋಧನನ ದರ್ಶನದಿಂದ ಆ ಪುಣ್ಯವಂತನ ಆತ್ಮವು ಅತ್ಯಂತ ಶಾಂತಿಯನ್ನು ಪಡೆಯಿತೆಂದು ಹೇಳುವಿರಾ! ನೀವು ಏನೇ ಹೇಳಿರಿ, ನನಗಂತೂ ಯಾವ ಮಾತಿನ ನಿರ್ಧಾರವೂ ಆಗಲೊಲ್ಲದು! ಆದರೆ ಈ ಭಯಂಕರ ಕೃತ್ಯವನ್ನು ನೋಡಿ ಕನ್ನಡಿಗರ ಮುಖದಿಂದ ''ಇದು ದೇವರಾಯನ ದರ್ಬಾರವೋ ಯಮನ ದರ್ಬಾರವೋ'' ಎಂಬ ವಾಣಿಯು ಹೊರಡುತ್ತಿರಲು, ಮಹಮ್ಮದನು ಅಶ್ವಾರೂಢನಾಗಿ ಅಂಗರಕ್ಷಕರು ತನ್ನನ್ನು ಸುತ್ತಿಕೊಳ್ಳಲು, ತನ್ನ ಬಿಡಾರದ ಕಡೆಗೆ ನಡೆದನು. ಅದರಿಂದ ದರ್ಬಾರದ ಕಠೋರಕಾರ್ಯವು ಮುಗಿದಂತಾಗಿ ಜನರು ಮರ ಮರ ಮರುಗುತ್ತ ಮನೆಗೆ ಹೋದರು. ಆದರೆ ಪ್ರಿಯವಾಚಕರೇ, ಹೀಗೆ ಮಹಮ್ಮದನನ್ನು ಒಮ್ಮಿಂದೊಮ್ಮೆ ಸಂತಾಪಗೊಳಿಸಿದ ಪತ್ರದಲ್ಲಿ ಏನು ಬರೆದಿರಬಹುದು?

# ಮಲಿಕನ ಮಬ್ಬು

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ದರ್ಬಾರದ ಜನರು ತಮ್ಮ ತಮ್ಮ ಮನೆಗಳಿಗೆ ಹೋದರು. ಮಹಮ್ಮದನ ಕ್ರೂರತನಕ್ಕೆ ಅಂಜಿಕೊಂಡಿದ್ದ ಕನ್ನಡಿಗರು ಕುಳಿತಾಗ, ನಿಂತಾಗ, ಉಣ್ಣುವಾಗ ಆ ದರ್ಬಾರದ ವಿಷಯವಾಗಿ ಮಾತಾಡುತ್ತಲಿದ್ದರು. ನೋಡಿದತ್ತೆಲ್ಲ ದರ್ಬಾರದ ಚರ್ಚೆಯೇ ಕೇಳಬರುತ್ತಿತ್ತಲ್ಲದೆ ಬೇರೆ ವಿಷಯಗಳ ಪ್ರಸಕ್ತಿಯು ಕೇಳಬರುತ್ತಿದ್ದಿಲ್ಲ. ಅದರಲ್ಲಿ ಮರುದಿನ ದರ್ಬಾರದೊಳಗೆ ಬಹಾಉದ್ದೀನನ ಸಹಾಯಕರಾದ ಕನ್ನಡಿಗರ ಶಾಸನವಾಗ ತಕ್ಕದಿದ್ದದ್ದರಿಂದ ಜನರ ಚರ್ಚೆಗೆ ಮತ್ತಿಷ್ಟು ಕಳೆಯೇರಿತ್ತು; ಅಂದು ಅಕಸ್ಮಾತ್ ಆ ಪತ್ರವು ಬಾರದಿದ್ದರೆ, ಆ ಕ್ರೂರ ಮಹಮ್ಮದನು ಬಹಾಉದ್ದೀನನ ಮೈದೊಗಲು ಸುಲಿಸಿದಕೂಡಲೆ ಉಳಿದ ಸೆರೆಯಾಳುಗಳ ಕೊಲೆಯನ್ನು ತನಗೆ ತೋಚಿದಂತೆ ನಿಶ್ಚಯವಾಗಿ ಮಾಡಿಸಿಬಿಡುತ್ತಿದ್ದನು; ಆದರೆ ಪಂಜಾಬದ ಬಂಡುಗಾರರು ಮಹಮ್ಮದನ ಸೈನ್ಯವನ್ನು ಸೋಲಿಸಿ, ಅವನ ಪ್ರತಿನಿಧಿಯನ್ನು ಓಡಿಸಿದರೆಂಬ ಪತ್ರವು ಬಂದದ್ದರಿಂದ ಬಂಡುಗಾರರ ವಿಷಯವಾಗಿ ಮಹಮ್ಮದನ ತಲೆ ತಿರುಗಿ ಹೋಗಿ ಆ ಆವೇಶದಲ್ಲಿ ಆತನು ಬಹಾಉದ್ದೀನನ ಪ್ರಾಣವನ್ನು ಹೀರಿ ಸಂತಾಪಾತಿಶಯದಿಂದ ಮನೆಗೆ ಹೊರಟುಹೋದನು. ಆ ಶೀಘ್ರಕೋಪಿಯು ಪಂಜಾಬದ ಜನರ ಶಾಸನ ಮಾಡುವದಕ್ಕಾಗಿ ಸೈನ್ಯದೊಡನೆ ಅಂದೇ ಹೊರಟುಹೋಗತಕ್ಕವನು; ಆದರೆ ಕನ್ನಡಿಗರ ಮೇಲೆ ತನ್ನ ದರ್ಪಕೂಡಿಸುವದಕ್ಕಾಗಿ ಅವರ ಸಮಕ್ಷ ಅವನು ಕನ್ನಡ ಸೆರೆಯಾಳುಗಳನ್ನು ಕ್ರೂರತನದಿಂದ ಶಿಕ್ಷಿಸಬೇಕಾಗಿತ್ತು, ಆದ್ದರಿಂದ ಆತನು ಮುನ್ನಾದಿನ ದರ್ಬಾರು ನೆರೆದ ಸ್ಥಳದಲ್ಲಿಯೇ ಇಂದು ದರ್ಬಾರು ನೆರೆಸಿದನು. ನಿನ್ನಿನ ದಿನಕ್ಕಿಂತ ಹೆಚ್ಚು ಜನರು ಅಂದಿನ ದರ್ಬಾರಕ್ಕೆ ಬಂದಿದ್ದರು. ಆ ಕ್ರೂರನ ಅಪ್ಪಣೆಯಿಂದ ಬಹಾಉದ್ದೀನನ ಶವವು ಬಿದ್ದಲ್ಲಿಯೇ ಬಿದ್ದಿತ್ತು. ಆ ಕ್ರೂರನ ಭಯಂಕರ ಕೃತಿಯ ದರ್ಪವಿಶೇಷದಿಂದ ಜನರ ಮನಸ್ಸನ್ನು ಬಗ್ಗು ಬಡಿಯಬೇಕೆಂದು ಆತನು ಬುದ್ಧಿ ಪೂರ್ವಕವಾಗಿಯೇ ಹಾಗೇ ಶವವನ್ನು ಬೀಳಗೊಟ್ಟು, ಕಾವಲಿಡಿಸಿದ್ದನು. ಇದರಿಂದ ಅಂದಿನ ಭಯಂಕರ ದರ್ಬಾರವು ಅಮಂಗಲ ಸುರಿಯುತ್ತಿತ್ತು. ಮಹಮ್ಮದನು ಆಸನದಲ್ಲಿ ಕುಳಿತಕೂಡಲೆ ದೇವರಾಯನನ್ನು ಕುರಿತು ಸಿಟ್ಟಿನ ಸ್ವರದಿಂದ– ''ದೇವರಾವ, ವೃದ್ಧಾಪ್ಯದ ಮೂಲಕ ನಿಮ್ಮ ಶಕ್ತಿಯು ಕ್ಷೀಣವಾದರೂ ನಿಮ್ಮ ಮಿತ್ರದ್ರೋಹದ ಕಸುವು ಕಡಿಮೆಯಾಗಿರುವದಿಲ್ಲ. ನಮ್ಮ ಶತ್ರುಗಳಿಗೆ ನಿಮ್ಮ ರಾಜ್ಯದಲ್ಲಿ ಆಶ್ರಯವೇ? ನಮ್ಮ ಪ್ರತಿನಿಧಿಯಾದ ಕಾಶಿಮನೊಡನೆ ನಿಮ್ಮ ದ್ರೋಹವೇ? ಎಲ್ಲಿರುವನು ನಿಮ್ಮ ಆ ಕುರುಬರ ಹೆಗ್ಗನೆಂಬವನು? ಅವನ ಒಳಸಂಚುಗಳೆಲ್ಲ ನಮಗೆ ತಿಳಿದಿವೆ. ದೇವರಾವ, ನಿಮ್ಮಿಂದ ನಮ್ಮ ಸಾಮ್ರಾಜ್ಯದ ಅಭಿವೃದ್ಧಿಗೆ ಸಹಾಯ ವಾಗಬೇಕೆಂದು ತಿಳಿದು ನಿಮ್ಮನ್ನು ನಾವು ಆನೆಗುಂದಿಯ ಸಿಂಹಾಸನದ ಮೇಲೆ ಕುಳ್ಳಿರಿಸಿರುತ್ತೇವೆ; ಆದರೆ ಅದರ ಉಪಯೋಗವನ್ನು ನಮ್ಮ ದ್ರೋಹ ಚಿಂತನದಲ್ಲಿ ನೀವು ಮಾಡುವಿರಾ? ಇರಲಿ, ಹಿಂದಿನಿಂದ ನೋಡೋಣವಂತೆ! ಮೊದಲು ಮಲ್ಲಸರ್ಜನನೆಂಬ ಪುಂಡನ ಸಮಾಚಾರವನ್ನು ತೆಗೆದುಕೊಳ್ಳೋಣ. ಎಂದು ಅಂಗರಕ್ಷಕರನ್ನು ನೋಡಲು ಕೂಡಲೆ ಮಲ್ಲಸರ್ಜನನನ್ನು ಬಹಾಉದ್ದೀನನ ಶವದ ಬಳಿಯಲ್ಲಿ ತಂದು ನಿಲ್ಲಿಸಿದರು.

ಮಲ್ಲಸರ್ಜನನು ವಾಚಕರಿಗೆ ಅರಿಯದವನಲ್ಲ. ಹೆಗ್ಗನ ಅಥವಾ ಹುಕ್ಕನ ಪರಮಮಿತ್ರನಾದ ಈ ಮಲ್ಲಸರ್ಜನನು ಬಹಾಉದ್ದೀನನ ಸಂಗಡ ದ್ವಾರಸಮುದ್ರಕ್ಕೆ ಹೋದದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಜಾತಿಯಿಂದ ಮಲ್ಲಸರ್ಜನನು ಕುರುಬನಾಗಿದ್ದರೂ ಶೌರ್ಯವು ಅವನ ಹುಟ್ಟುಗುಣವಾಗಿತ್ತು. ಅದರಲ್ಲಿ ಆತನಿಗೆ ಹುಕ್ಕನಂಥ ವೀರನ ಸಹವಾಸವು ಒದಗಿದ ಬಳಿಕ ಕೇಳುವದೇನು? ಆತನು ಈಗ ಕಡುಗಲಿಗಳಲ್ಲಿ ಎಣಿಸಲ್ಪಡುತ್ತಿದ್ದನು. ತಮ್ಮ ಮಿತ್ರನಾದ ಬಹಾಉದ್ದೀನನ ಅವಸ್ಥೆಯನ್ನು ನೋಡಿ ಮಲ್ಲಸರ್ಜನನಿಗೆ ಬಹಳ ವಿಷಾದವಾಗಿ, ಆತನು ಒಮ್ಮೆ ಮಹಮ್ಮದನನ್ನೂ, ಒಮ್ಮೆ ಕನ್ನಡ ಸೈನಿಕರನ್ನೂ ಸಂತಾಪದಿಂದ ನೋಡಿದನು. ಆತನ ಆಗಿನ ಉಗ್ರಮೂರ್ತಿಯನ್ನು ನೋಡಿ ಕನ್ನಡಿಗರಲ್ಲಿ ಒಂದು ಪ್ರಕಾರದ ಹೊಸ ಜೀವನದ ಸಂಚಾರವಾದಂತಾಗಿ ಅವರು ಮನಸ್ಸಿನಲ್ಲಿ— "ಏನೇ ಆಗಲಿ, ಇಂದು ಈ ವೀರನನ್ನು ಮಹಮ್ಮದನ ಕ್ರೂರತನಕ್ಕೆ ತುತ್ತಾಗಗೊಡಬಾರದು" ಎಂದು ನಿಶ್ಚಯಿಸಿಕೊಳ್ಳ ಹತ್ತಿದರು. ಅವರಿಗೆ ಮಲ್ಲಸರ್ಜನನ ಗುರುತಿದ್ದಿಲ್ಲ. ಪರಿಚಯವಿದ್ದಿಲ್ಲ; ಆದರೆ ಇವನು ಕನ್ನಡವೀರನು– ನಮ್ಮವನು, ಎಂಬ ಅಭಿಮಾನದಿಂದಲೇ ಅವರಲ್ಲಿ ಈ ಭಾವನೆಯು ಉತ್ಪನ್ನವಾಗಿತ್ತು. ನೆರೆದ ದರ್ಬಾರದಲ್ಲಿ ಮಹಮ್ಮದನು ಆಡಿದ ಅಪಮಾನದ ಮಾತುಗಳಿಂದ ದೇವರಾಜನೂ ಬಹಳವಾಗಿ ನೊಂದುಕೊಂಡಿದ್ದನು; ಆದರೆ ಹೊಟ್ಟೆಯಲ್ಲಿದ್ದ ಸಿಟ್ಟು, ರಟ್ಟೆಯಲ್ಲಿಲ್ಲವೆಂಬಂತೆ ಅವನ ಸ್ಥಿತಿಯಿದ್ದದ್ದರಿಂದ ಆ ವೃದ್ಧರಾಜನು ತನಗಾದ ಸಂತಾಪವನ್ನು ನುಂಗಿಕೊಂಡು ಸುಮ್ಮನೆ ಕುಳಿತಿದ್ದನು. ಆದರೂ ಮಲ್ಲಸರ್ಜನನ ಕ್ರೂರಮುದ್ರೆಯನ್ನೂ, ಅವನ ತೇಜಸ್ವಿತೆಯ ದಿಟ್ಟತನವನ್ನೂ ನೋಡಿ, ಆ ವೃದ್ಧದೇವರಾಜನೂ ಅವನ ವಿಷಯವಾಗಿ ಅಭಿಮಾನ ತಾಳಿದನು. ಅತ್ತ ಕನ್ನಡ ಸೈನಿಕರ ಬಾಹುಗಳು ಈ ವೀರಮಲ್ಲನ ಕ್ರೋಧಸಂತಪ್ತಮುಖದ ಸಂದರ್ಶನದಿಂದ ಸ್ಫುರಣಗೊಂಡು, ಅವರು ಮುಸಲ್ಮಾನ ಸೈನಿಕರನ್ನು ಸಿಟ್ಟಿನಿಂದ ನೋಡ ಹತ್ತಿದರು. ಹೀಗಿರುವಾಗ ಮಹಮ್ಮದನು ಮಲ್ಲಸರ್ಜನನನ್ನು ಕುರಿತು–

ಮಹಮ್ಮದ–ನೀನು ಆ ದುಷ್ಟ ಬಹಾಉದ್ದೀನನ ಸಂಗಡಿಗನಲ್ಲವೇ?

ಮಲ್ಲಸರ್ಜ–ಹೌದು, ಸಜ್ಜನನಾದ ಬಹಾಉದ್ದೀನನ ಸಂಗಡಿಗನು ನಾನು ಹೌದು.

ಮಹಮ್ಮದ–ಹಾಗಾದರೆ, ಈಗ ಬಹಾಉದ್ದೀನನು ಹಿಡಿದಿರುವ ಮಾರ್ಗವನ್ನು ಹಿಡಿದು ಹೋಗಲು ನೀನು ಸಿದ್ಧನಾಗು.

ಮಲ್ಲಸರ್ಜ–ನೀನು ಬಲಾತ್ಕಾರದಿಂದ ಕಳಿಸಲು ಆತುರಪಡುತ್ತಿರುವಾಗ ನನ್ನ ಸಿದ್ಧತೆಯ ಹಾದಿಯನ್ನು ಯಾಕೆ ನೋಡುತ್ತೀ? ಹೇಳು ನನಗಾಗಿ ಯಾವ ಕ್ರೂರಶಿಕ್ಷೆಯನ್ನು ಹೇಳುತ್ತೀ ಹೇಳು. ನಿನ್ನ ಕ್ರೂರತನದಿಂದಾದರೂ ನಮ್ಮ ಕನ್ನಡಿಗರು ಜಾಗ್ರತರಾಗಲಿ.

ಮಹಮ್ಮದ–ರಾಜದ್ರೋಹಿಯೇ, ಕನ್ನಡಿಗರಲ್ಲಿ ಜಾಗ್ರತಿಯನ್ನುಂಟುಮಾಡಲು ನಿಮ್ಮ ಒಡೆಯನಾದ ಪುಂಡ ಹೆಗ್ಗನು ಯತ್ನಿಸುತ್ತಿರುವನಂತೆ! ಕನ್ನಡಿಗರಲ್ಲಿ ಅದಾವ ಗಂಡಸವನು? ನಿಮ್ಮ ಈ ಔದ್ಧತ್ಯಕ್ಕಾಗಿ ನನ್ನ ಸರ್ವಾಂಗವು ದಹಿಸುತ್ತಿರುವದು. ನಿಮ್ಮೆಲ್ಲರ ಸಾಲಡಾವಣೆ ಹೊರಡಿಸಿ ನಿಮ್ಮನ್ನು ಚಂಡಾಡಿದಾಗ ನನ್ನ ಸಿಟ್ಟು ಶಾಂತವಾಗುವದು. ಹೇಳು, ನಿನ್ನ ಆ ದುಷ್ಟ ಹೆಗ್ಗನು ಎಲ್ಲಿರುವನು ಹೇಳು?

ಮಲ್ಲಸರ್ಜ–ಕ್ರೂರ ಮಹಮ್ಮದಾ, ಯಾಕೆ ವ್ಯರ್ಥವಾಗಿ ಬೊಗಳುತ್ತಿ? ಬಾಯಿಂದ ಸುಮ್ಮನೆ ಪುಂಡ – ದುಷ್ಟ ಎಂದು ತಿರಸ್ಕರಿಸಿ ನುಡಿಯವುದರಿಂದ ಪ್ರಯೋಜನವೇನು? ನಮ್ಮ ಗಂಡುಗಲಿಯಾದ ಹೆಗ್ಗಣ್ಣನ ಸಹವಾಸದಿಂದ ಈ ಕಗ್ಗಕುರುಬ ಮಲ್ಲನಲ್ಲಿ ಯಾವ ಬಗೆಯ ಜಾಗ್ರತಿಯಾಗಿರುತ್ತದೆಂಬದನ್ನು ನೋಡುವ ಮನಸ್ಸಿದ್ದರೆ, ಇಗೋ ಸ್ವತಃ ನೀನು ಬಾ, ನಿನ್ನಲ್ಲಿ ಸಾಮರ್ಥ್ಯವಿಲ್ಲದಿದ್ದರೆ ಬೇರೆ ಬಲ್ಲಿದರಾರನ್ನಾದರೂ ಕಳಿಸು, ಅಂದರೆ ಕನ್ನಡಿಗರ ಜಾಗ್ರತಿಯ ಸವಿಯು ನಿನಗೆ ಗೊತ್ತಾಗುವದು.

ಈ ಮೇರೆಗೆ ನುಡಿದು ಮಲ್ಲಸರ್ಜನನು ತನ್ನ ಮೈಮೇಲಿನ ಅರಿವೆಗಳನ್ನು ತೆಗೆದುಚೆಲ್ಲಿ ರಾಜಬೀದಿಯ ಪ್ರಾಸಾದದಲ್ಲಿ ಪ್ರತಿಧ್ವನಿಯುಂಟಾಗುವ ಹಾಗೆ ಸಡ್ಡುಹೊಡೆಯುತ್ತಿರಲು, ಅವನ ಕಣ್ಣುಗಳು ಕೆಂಡದಂತಾದವು! ಕನ್ನಡ ವೀರನ ಈ ವೈಭವವನ್ನು ನೋಡಿ ಕನ್ನಡಿಗರ ಬಾಹುಗಳು ಸ್ಫುರಣಹೊಂದಿದವು. ಆಗ ಅವರ ಹೃದಯದ ಪವಿತ್ರತರ ಸ್ವಜನಾಭಿಮಾನವು ಜಾಗ್ರತವಾಗಲು, ಅವರ ಶರೀರಗಳು ಪುಲಕಿತವಾದವು. ಆಗ ಮಲ್ಲಸರ್ಜನನು ಧೀರ ಗಂಭೀರಧ್ವನಿಯಿಂದ ಮಹಮ್ಮದನಿಗೆ– ''ಯವನ ವೀರಾ, ಎಲೈ ರಕ್ತಸುರಿಸಲಿಕ್ಕೆ ಮೆಚ್ಚಿದ ಯವನವೀರಾ, ಬಾ, ಸಾಮರ್ಥ್ಯವಿದ್ದರೆ ಈ ಕಗ್ಗಮಲ್ಲನ ಕುರಿಹಾಲು ಉಂಡ ತುಂಡ ದೇಹವನ್ನು ಕೈಮುಟ್ಟಿ ಹಿಂಡಿ ರಕ್ತ ಸುರಿಸು! ಅಂಥ ಸಾಮರ್ಥ್ಯವಿಲ್ಲದಿದ್ದರೆ ಸುಮ್ಮನೆ ನನ್ನ ಒಡೆಯನನ್ನು ''ಪುಂಡ ದುಷ್ಟ'' ಎಂದು ಬಾಯಿಗೆಬಂದಂತೆ ತಿರಸ್ಕರಿಸಬೇಡ! ದುಷ್ಟ ಮಹಮ್ಮದಾ, ಹೀಗೆ ಪ್ರತ್ಯಕ್ಷ ಅಣ್ಣನಮಗನ ಮೈದೊಗಲು ಸುಲಿಸುವ ನೀನು ರಾಕ್ಷಸನಲ್ಲದೆ ಮನುಷ್ಯನೇ? ಡಾವಣಿಹೊಡೆದು ನಮ್ಮ ಚಂಡುಗಳನ್ನು ತುಂಡರಿಸಲಿಕ್ಕೆ ನಮ್ಮನ್ನೇನು ಕುರಿಗಳೆಂದು ಭಾವಿಸುವೆಯಾ? ಶ್ರೀರಾಮನ ಅಮೋಘ ಬಾಣವನ್ನು ಕೂಡ ಅನಾಯಾಸವಾಗಿ ಕೈಯಿಂದ ಹಿಡಿದು ನಿಲ್ಲಿಸಿದ ಗಂಡುಗಲಿ ವಾಲಿಯ ಗಂಡುಮೆಟ್ಟಿನ ಭೂಮಿಯಲ್ಲಿರುವ ನಮ್ಮ ಕನ್ನಡಿಗರನ್ನು ಕುರಿಗಳೆಂದು ತಿಳಿದಿರುವೆಯಾ? ಎಂದು ನುಡಿದು, ಕನ್ನಡಿಗರ ಆಹವಸ್ಫೂರ್ತಿಯು ಜಾಗ್ರತವಾಗುವಂತೆ ಪುನಃ ಮಲ್ಲನು ಸಡ್ಡುಗಳನ್ನು ಹೊಡೆದನು!

ಮಲ್ಲಸರ್ಜನನ ಈ ಉದ್ದಾಮತನವನ್ನು ನೋಡಿ ಮಹಮ್ಮನು ಕ್ರೋಧ ಸಂತಪ್ತ ನಾದರೂ, ಒಮ್ಮೆಲೆ ಆತನಿಗೆ ಶಿಕ್ಷೆಯನ್ನು ವಿಧಿಸಲಿಕ್ಕೆ ಅವನ ಮನಸ್ಸು ದುಡುಕಲೊಲ್ಲದು. ಈತನಿಗೆ ಯಾವ ಶಿಕ್ಷೆಯನ್ನು ವಿಧಿಸಬೇಕೆಂದು ಆ ಯವನನು ಆಲೋಚಿಸತೊಡಗಿದನು. ಅಷ್ಟರಲ್ಲಿ ಗಾಯನದ ಮಂಜುಲ ಸ್ವರವು ದರ್ಬಾರದ ರುಕ್ಷಪ್ರದೇಶದಲ್ಲಿ ಹಬ್ಬಿ ಹರಿಬಿದ್ದು ಜನರ ಮನಸ್ಸಿನ ಕಠೋರತನವನ್ನು ಕಡಿಮೆಮಾಡಹತ್ತಿತು. ಎಲ್ಲರ ದೃಷ್ಟಿಗಳು ಗಾಯನಧ್ವನಿಯು ಬರುವ ದಿಕ್ಕಿನಕಡೆಗೆ ಹೊರಳಿದವು. ಆಗ ಗಾಯನ ಮಾಡುವ ತರುಣಿಯ ಮನೋಹರರೂಪವು ಅವರ ಕಣ್ಣಿಗೆ ಬಿದ್ದಿತು! ಗಾಯಕಿಯು ಮಹಮ್ಮದನ ಗುಣವರ್ಣನದ ಹಿಂದುಸ್ತಾನಿಯ ಪದವನ್ನು ಮನೋಹರವಾಗಿ ಹಾಡುತ್ತಿದ್ದಳು. ಪ್ರಿಯವಾಚಕರೇ, ಗಾಯಕಿಯು ನಿಮ್ಮ ಗುರುತಿನವಳೇ ಇರುವಳು. ಮೊದಲನೆಯ ದಿನ ಮಹಮ್ಮದನು ದರ್ಬಾರಕ್ಕೆ ಉರಿಯುತ್ತ ಬರುತ್ತಿರಲು, ಅವನನ್ನು

ಗಾಯನದಿಂದ ಶಾಂತಗೊಳಿಸಿದವಳು ಈಕೆಯೇ! ಮುಹಮ್ಮದನು ತನ್ನ ಪೂರ್ವಪರಿಚಿತ ಗಾಯನವನ್ನು ಕೇಳಿ, ಗಾಯಕಿಯ ಆ ಪೂರ್ವಪರಿಚಿತ ಮನೋಹರಮೂರ್ತಿಯನ್ನು ನೋಡಿ ಶಾಂತನಾಗತೊಡಗಿದನು. ತನ್ನ ಗುಣಾನುವಾದದ ಪದ್ಯವು ಹೃದಯದಲ್ಲಿ ನಡುವ ಹಾಗೆ ಗಾಯಕಿಯು ಮಾರ್ಮಿಕರೀತಿಯಿಂದ ಹಾಡಿಹಾಡಿದಂತೆ ಮುಹಮ್ಮದನು ಶಾಂತನಾಗುತ್ತಿದ್ದನು. ದರ್ಬಾರದ ಜನರು ಒಮ್ಮೆ ಗಾಯಕಿಯನ್ನೂ ಒಮ್ಮೆ ಮುಹಮ್ಮದನನ್ನೂ ನೋಡಿ ಕೌತುಕಪಡ ತೊಡಗಿದರು. ಬರಬರುತ್ತ ಮುಹಮ್ಮದನು ತೀರ ಶಾಂತನಾಗಿ, ಅವನ ಮುಖವು ಪ್ರಸನ್ನವಾಯಿತು. ಆ ಕಲಾನಿಪುಣನೂ, ಘನವಿದ್ವಾಂಸನೂ, ಪರಮೋದಾರನೂ ಆದ ತಘಲಕನು ಗಾಯಕಿಯನ್ನು ಕುರಿತು ಅತ್ಯಂತ ಗೌರವದಿಂದ–

ಮುಹಮ್ಮದ–ದೇವಾಂಗನೆಯೆ, ಧನ್ಯಳು, ಕ್ರೋಧಸಂತಪ್ತ ಕ್ರೂರ ಮುಹಮ್ಮದನ ಕ್ರೋಧವನ್ನು ಶಾಂತಗೊಳಿಸುವ ನೀನು ಪರಮ ಧನ್ಯಳು! ನಿನ್ನ ಪವಿತ್ರಮುಖವನ್ನು ನೋಡುವ ನನ್ನ ಕಣ್ಣುಗಳೂ, ನಿನ್ನ ಲಲಿತ ಗಾಯನವನ್ನು ಕೇಳುವ ನನ್ನ ಕಿವಿಗಳೂ ಕೃತಾರ್ಥವಾಗಿ, ನಿನ್ನ ವಿಷಯದಲ್ಲಿ ಅತ್ಯಂತವಾದ ಪೂಜ್ಯಭಾವವು ನನ್ನಲ್ಲಿ ಉತ್ಪನ್ನವಾಗಿರುವದು. ಆದ್ದರಿಂದ ಸುಶೀಲೆಯೇ ಕೇಳಿಕೋ ನಿನಗೆ ಏನುಬೇಕು ಕೇಳಿಕೋ ? ನಿನ್ನ ಗುಣಲುಬ್ಧನಾದ ಮುಹಮ್ಮದನು ಸುಪ್ರಸನ್ನನಾಗಿರುವನು; ಬೇಕಾದದ್ದನ್ನು ಬೇಗನೇ ಕೇಳು.

ಹೀಗೆ ನುಡಿಯುವ ಮುಹಮ್ಮದನ ಮಾತುಗಳನ್ನು ಕೇಳಿ ಗಾಯಕಿಯು ಮಲ್ಲಸರ್ಜನನ ಕಡೆಗೆ ತನ್ನ ದೃಷ್ಟಿಗಳನ್ನು ಹೊರಳಿಸಿದಳು. ಆಗ ಆ ಮಲ್ಲಸರ್ಜನನ ಗಂಭೀರದೃಷ್ಟಿಗಳೂ, ಗಾಯಕಿಯ ಮನೋಹರ ದೃಷ್ಟಿಗಳೂ ಒಂದಕ್ಕೊಂದು ತಾಕಲಾಡಿ ತಟ್ಟನೆ ಅವು ಸಿಡಿದು ಹಿಂದಕ್ಕೆ ಸರಿದವು. ಈ ದೃಷ್ಟಿ ಸಮ್ಮೇಲನದ ಆಘಾತದಿಂದ ಗಾಯಕಿಯ ಮೈ ಜುಮ್ಮೆಂದು ಅದು ಪುಳಕಿತವಾಯಿತು; ಆಕೆಯ ಮುಖವು ನಸುಗೆಂಪೇರಿ ಗಲ್ಲಗಳು ಬೆವತವು. ಪ್ರಿಯ ವಾಚಕರೇ, ಪವಿತ್ರವೇಷದ ಗಾಯಕಿಯ ಪವಿತ್ರತರ ಮುಖವು ಮಲ್ಲಸರ್ಜನನ ಮುಖಾವಲೋಕನ ಮಾತ್ರದಿಂದ ಹೀಗೆ ವಿಕೃತವಾದದ್ದು ಸೋಜಿಗವೇ ಸರಿ! ನಮಗಂತೂ ಅದರ ರಹಸ್ಯವು ತಿಳಿಯಲೊಲ್ಲದು. ಸ್ವಲ್ಪ ಮಟ್ಟಿಗೆ ತಿಳಿದ ಹಾಗೆ ಆದರೂ ಅದನ್ನು ಈಗ ಹೇಳುವ ಮನಸ್ಸು ನಮಗೆ ಆಗಲೊಲ್ಲದು ಇರಲಿ, ಪ್ರಸಂಗಬಂದಾಗ ನೋಡೋಣವಂತೆ. ಸದ್ಯಕ್ಕೆ ಗಾಯಕಿಯು ಮುಹಮ್ಮದನನ್ನು ಏನು ಕೇಳಿಕೊಳ್ಳುವಳೋ ನೋಡೋಣ. ಈಗ ದರ್ಬಾರದ ಜನರ ದೃಷ್ಟಿಗಳೂ, ಲಕ್ಷವೂ ಗಾಯಕಿಯಲ್ಲಿ ನೆಟ್ಟುಹೋಗಿದ್ದವು. ದರ್ಬಾರವು ನಿಶ್ಶಬ್ದವಾಗಿತ್ತು. ಮಲ್ಲಸರ್ಜನನಿಗೆ ಗಾಯಕಿಯನ್ನು ನೋಡುವ ಇಚ್ಛೆಯಾದರೂ, ಪರಸ್ತ್ರೀಯೆಂಬ ಭಯದಿಂದ ಆತನು ತಿರುಗಿ ಗಾಯಕಿಯ ಕಡೆಗೆ ತನ್ನ ದೃಷ್ಟಿಗಳನ್ನು ಹೊರಳಿಸದಾದನು. ಆಗ ಗಾಯಕಿಯು ಮುಹಮ್ಮದನನ್ನು ಕುರಿತು–

ಗಾಯಕಿ–ಪ್ರತಾಪಿಯೇ, ನನ್ನಂಥ ಭಿಕ್ಷುಕಿಯು ನಿನ್ನಂಥ ಸಾರ್ವಭೌಮರಾಜನನ್ನು ಏನು ಕೇಳಿಕೊಳ್ಳಬೇಕು? ಹಣಕಾಸು–ಭೂಮಿಕಾಣಿಗಳ ಅವಶ್ಯಕತೆಯಂತೂ ನನಗಿರುವದಿಲ್ಲ. ನನಗೆ ಬೇಕಾದದ್ದು ಭೂತದಯವು!

ಮಹಮ್ಮದ–ಉದಾರಚರಿತಳೇ, ಸುಪ್ರಸನ್ನನಾದ ಮಹಮ್ಮದನಲ್ಲಿ ಭೂತದಯಕ್ಕೂ ಕೊರತೆಯಿರುವದಿಲ್ಲ! ಆದ್ದರಿಂದ ಹೇಳು, ನಿನ್ನ ಸಲುವಾಗಿ ನಾನು ಭೂತದಯೆಯ ಯಾವ ಕಾರ್ಯ ಮಾಡಲಿ ಹೇಳು?

ಗಾಯಕಿ–ದಯಾರಾಶಿಯೇ, ನಿನ್ನ ಔದಾರ್ಯದ ಕೀರ್ತಿಯನ್ನು ನಾನು ಬಹಳವಾಗಿ ಕೇಳಿದ್ದೇನೆ. ನನ್ನಂಥ ಬಡ ಗಾಯಕಿಯ ಮನಸ್ಸನ್ನು ಸಂತೋಷಪಡಿಸಿ ಪರಮೌದಾರ್ಯವನ್ನು ತೋರಿಸುವ ಇಚ್ಛೆ ನಿನಗಿದ್ದರೆ, ಇಗೋ, ಈ ಕನ್ನಡ ವೀರನನ್ನೂ, ಈತನ ಅನುಯಾಯಿಗಳನ್ನೂ ಬಂಧಮುಕ್ತಮಾಡಿ ಬಿಟ್ಟುಬಿಡು.

ಗಾಯಕಿಯ ಈ ಮಾತುಗಳನ್ನು ಕೇಳಿ ಮಹಮ್ಮದನಿಗೆ ಬಹಳ ಸಮಾಧಾನವಾಯಿತು. ಔದಾರ್ಯವನ್ನು ಪ್ರಕಟಿಸುವ ಪ್ರಸಂಗ ಒದಗಿದಾಗ ಉದಾರ ಮನುಷ್ಯನಿಗೆ ಆಗುವ ಆನಂದವು ಈ ಮಹಮ್ಮದನಿಗೂ ಆಗಿತ್ತು. ಅದರಲ್ಲಿಯೂ, ತನಗೆ ಒಬ್ಬ ಭಿಕ್ಷುಕಿಯ ಮಾತು ನಡಿಸುವ ಯೋಗ ಒದಗಿದ್ದಕ್ಕಾಗಿಯಂತೂ ಆತನಿಗೆ ಹಿಡಿಸಲಾರದಷ್ಟು ಸಂತೋಷವಾಗಿತ್ತು. ಮಹಮ್ಮದನು ವಿಲಕ್ಷಣ ಪುರುಷನಾಗಿದ್ದನು. ಎಲ್ಲ ಗುಣಗಳು ಆತನಲ್ಲಿ ಅತಿಯಾಗಿದ್ದವೆಂದು ನಾವು ಆಗಾಗ್ಗೆ ಹೇಳುತ್ತ ಬಂದಿದ್ದೇವೆ; ಸಿಟ್ಟುಬಂದಾಗ ಆತನು ಕ್ರೂರನಾಗಿರುವಷ್ಟೇ ಅವನು ಸುಪ್ರಸನ್ನನಾಗಿರುವಾಗ ಉದಾರನೂ ಆಗಿರುತ್ತಿದ್ದನು. ಈಗ ಗಾಯಕಿಯ ಯೋಗದಿಂದ ಸುಪ್ರಸನ್ನನಾಗಿದ್ದ ಆತನು ಗಾಯಕಿಯನ್ನು ಕುರಿತು– ''ಗುಣಸುಂದರಿಯೇ,, ನಿನ್ನ ಬೇಡಿಕೆಯನ್ನು ಕೇಳಿ ನನಗೆ ಬಹಳ ಸಂತೋಷವಾಯಿತು. ಅದರಂತೆ ಈ ಕನ್ನಡ ವೀರನನ್ನೂ, ಈತನ ಅನುಯಾಯಿಗಳನ್ನೂ ಈಗ ಬಂಧಮುಕ್ತಮಾಡಿ ಬಿಟ್ಟುಬಿಟ್ಟಿದ್ದೇನೆ; ಅವರು ಬೇಕಾದಲ್ಲಿಗೆ ಹೋಗಲಿ. ನನಗೆ ಇಂಥ ಔದಾರ್ಯದ ಪ್ರಸಂಗವನ್ನು ಒದಗಿಸಿಕೊಟ್ಟದ್ದಕ್ಕಾಗಿ ನಿನ್ನ ಉಪಕಾರವನ್ನು ಸ್ಮರಿಸುವೆನು.''

ಈ ಮೇರೆಗೆ ನುಡಿದು ಮಹಮ್ಮದನು ತನ್ನ ಸೇವಕರನ್ನು ಆಜ್ಞಾಪಿಸಿ ಎಲ್ಲ ಸೆರೆಯವರನ್ನು ಬಿಡಿಸಲು, ಮಲ್ಲಸರ್ಜನನ ಹೊರತಾಗಿ ಉಳಿದವರೆಲ್ಲರು ಗಾಯಕಿಯ ವಿಷಯವಾಗಿ ಅತ್ಯಂತ ಕೃತಜ್ಞತೆ ತಾಳಿ ಮಲ್ಲಸರ್ಜನನ ಬಳಿಯಲ್ಲಿ ಬಂದುನಿಂತುಕೊಂಡರು. ಆಗ ಮಲ್ಲಸರ್ಜನನು ಕೃತಜ್ಞತೆಯಿಂದ ಮಹಮ್ಮದನಿಗೆ — ''ಯವನವೀರಾ, ನಿನ್ನ ಈ ಔದಾರ್ಯವು ನಿನ್ನ ಶೌರ್ಯಕ್ಕೆ ವಿಶೇಷವಾಗಿ ಒಪ್ಪುತ್ತದೆ; ಅದರಲ್ಲಿಯೂ ಸರ್ವಸಾಮಾನ್ಯಳಾದ ಒಬ್ಬ, ಗಾಯಕಿಯ ಮಾತಿನಿಂದ ಪ್ರಕಟವಾದ ನಿನ್ನ ಔದಾರ್ಯದಲ್ಲಿಯಂತೂ ನಿನ್ನ ಸರಳತನವೂ, ನಿಸ್ಪೃಹತೆಯೂ ಬಹಳ ಚೆನ್ನಾಗಿ ವ್ಯಕ್ತವಾಗುತ್ತಿರುವವು! ಪರಸ್ಪರ ವಿರುದ್ಧ ಗುಣಗಳ ಪ್ರಕಟನೆಯ ವಿಷಯದಲ್ಲಿ ಅತ್ಯಂತ ಪ್ರಸಿದ್ಧನಾದ ನೀನು ಸುಪ್ರಸನ್ನನಾಗಿದ್ದಾಗ ಪ್ರಕಟಿಸಿದ ಈ ಔದಾರ್ಯಕ್ಕಿಂತ, ಗಾಯಕಿಯು ನಮ್ಮ ಬಂಧವಿಮೋಚನೆಯ ವಿಷಯವಾಗಿ ತೋರಿಸಿದ ಔದಾರ್ಯವೂ ಅತ್ಯಂತ ಶ್ಲಾಘನೀಯ ವಾದದ್ದಲ್ಲದೆ, ಆಕೆಯ ನಿರಕ್ಷೇಪಬುದ್ಧಿಯು ಬಣ್ಣಿಸತಕ್ಕದ್ದಾಗಿರುತ್ತದೆ; ಆದರೆ ಹೆಗ್ಗನ ಅನುಯಾಯಿಯೆನಿಸಿದ ನಾನು ಬಾಯಿಂದ ದೊಡ್ಡ ದೊಡ್ಡ ಮಾತುಗಳನ್ನಾಡಿ ಒಬ್ಬ ಹೆಂಗಸಿನ ದಯಾಗುಣದ ಆಶ್ರಯದಿಂದ ಪಾರಾಗಿ ಹೋಗಲಾರೆನು. ನಮ್ಮ ಮಿತ್ರನೆನಿಸುವ ಬಹಾಉದ್ದೀನನು ಮೃತಿಹೊಂದಿಬಿದ್ದಿರಲು, ಆತನ ಸಲುವಾಗಿ ನಿನ್ನ ಕಡೆಯ ಒಬ್ಬ ವೀರನ

ಪ್ರಾಣವನ್ನಾದರೂ ಆಹುತಿಯಾಗಿ ತಕ್ಕೊಳ್ಳದೆ ಇರುವದು, ಅಥವಾ ಹಾಗೆ ಆಹುತಿ ತಕ್ಕೊಳ್ಳುವ ಪ್ರಸಂಗದಲ್ಲಿ ನಮ್ಮ ಆ ಮಿತ್ರನ ಸಲುವಾಗಿ ನನ್ನ ದೇಹವನ್ನರ್ಪಿಸದೆ ಇರುವದು ಹೇಡಿತನದ ಮಾತಾಗಿರುವದು! ನಿನ್ನ ಕ್ಷಮಾಶೀಲತೆಯ ಫಲವನ್ನು ನನ್ನ ಅನುಯಾಯಿಗಳು ಸಂತೋಷ ದಿಂದ ಭೋಗಿಸಲಿ; ಆದರೆ ನನ್ನೊಡನೆ ಶಸ್ತ್ರಯುದ್ಧಕ್ಕಾಗಲಿ, ಮಲ್ಲಯುದ್ಧಕ್ಕಾಗಲಿ ನಿನ್ನ ಕಡೆಯ ಒಬ್ಬ ವೀರನು ಈಗ ಎದುರಾಗಲೇಬೇಕು. ಹಾಗಾಗದಿದ್ದರೆ ನಾನು ಬಂಧಮುಕ್ತನಾಗಲು ಇಚ್ಛಿಸುವದಿಲ್ಲ. ಒಬ್ಬ ಹೆಂಗಸು ನಿರ್ನಿಮಿತ್ತ ನನ್ನ ಸಲುವಾಗಿ ಅನುಕಂಪವನ್ನು ತೋರಿಸುತ್ತಿರಲು, ನನ್ನ ಮಿತ್ರನ ಮರಣದ ವಿಷಯವಾಗಿ ನಾನು ಅನುಕಂಪವನ್ನು ತೋರಿಸದಿರುವದು ಹೀನತನವಲ್ಲವೇ? ಸದ್ಗುಣಿಯಾದ ಮಹಮ್ಮದನೇ, ನಾನು ಆಗಲೇ ಹೇಳಿದಂತೆ ಹೆಗ್ಗನ ಸಹವಾಸದಿಂದ ಕನ್ನಡಿಗನಾದ ನನ್ನಲ್ಲಿ ಯಾವ ಬಗೆಯ ಜಾಗ್ರತಿಯಾಗಿರುವದನ್ನು ನೀನು ನನ್ನ ಸಮಕ್ಷ ನಮ್ಮ ಈ ಕನ್ನಡಿಗರೂ ನೋಡಲಿ! ಇತ್ತ ನೋಡು, ನನ್ನ ಈ ಬಾಹುಗಳು ಮಲ್ಲಯುದ್ಧಕ್ಕೋಸ್ಕರ ಹ್ಯಾಗೆ ಸ್ಫುರಣಹೊಂದುತ್ತಿರುವವು! ಎಂದು ನುಡಿದು ಮಲ್ಲಸರ್ಜನನು ಪುನಃ ಸಡ್ಡುಹೊಡೆದನು. ಹೀಗೆ ಸಡ್ಡು ಹೊಡೆಯುವಾಗ ಆತನ ಕೆಂಪಡರಿದ ಕಣ್ಣುಗಳು ಕಾಸೀಮನ ಕಡೆಗೆ ಕೆಕ್ಕರಿಸಿದವು!

ಕಾಸೀಮನು ವಾಚಕರಿಗೆ ಅಪರಿಚಿತನಲ್ಲ. ಈತನು ಹುಚ್ಚುಮಹಮ್ಮದನ ಪ್ರತಿನಿಧಿಯಾಗಿ ಕಂಪಲಿಯ ಕೋಟೆಯಲ್ಲಿ ಇರುತ್ತಿದ್ದನು. ಕಾಸೀಮನು ಮಹಾಬುದ್ಧಿಶಾಲಿಯು ಆದರೆ ಅತ್ಯಂತ ಸ್ತ್ರೀಲಂಪಟನು. ತನ್ನ ಹೆಂಡತಿಯನ್ನು ಓಡಿಸಿಕೊಂಡು ಹೋಗುವದರಲ್ಲಿ ಈ ಕಾಸೀಮನ ಅಂಗವಿತ್ತೆಂಬ ಸಂಶಯವು ಮಲ್ಲಸರ್ಜನನಿಗೆ ಬಂದದ್ದಲ್ಲದೆ, ದೇವರಾಯನ ಮಗಳನ್ನು ಅಪಹರಿಸುವ ಉದ್ಯೋಗವನ್ನು ಕಾಸೀಮನೇ ಮಾಡಿರುವನೆಂಬದು ಆತನಿಗೆ ಗೊತ್ತಾಗಿತ್ತು; ಹಿಂದಕ್ಕೆ ಹೆಗ್ಗನ ಸಹಾಯದಿಂದ ಮಲ್ಲಸರ್ಜನನು ದೇವರಾಯನ ಮಗಳಾದ ಆ ಪದ್ಮಿನಿಯನ್ನು ಬಿಡಿಸಿಕೊಂಡು ಬಂದದ್ದನ್ನು ವಾಚಕರು ಇಷ್ಟರಲ್ಲಿ ಮರೆತಿರಲಿಕ್ಕಿಲ್ಲ. ಇಂಥ ಪರಸ್ತ್ರೀಲಂಪಟನಾದ ನೀಚನನ್ನು ದ್ವಂದ್ವಯುದ್ಧದಲ್ಲಿ ಕೊಂದು ಸೇಡುತೀರಿಸಿಕೊಳ್ಳಬೇಕೆಂದು ಮಲ್ಲಸರ್ಜನನು ಆತುರಪಡತೊಡಗಿದನು. ಅವನ ಈ ಮನೋದಯವು ಕಾಸೀಮನಿಗೆ ಗೊತ್ತಾಗಿ, ಆ ವೀರನೂ ಆವೇಶಗೊಂಡನು. ಕೈಗೆ ಸಿಕ್ಕುಹೋಗಿದ್ದ ಪದ್ಮಿನಿಯು ಈ ಮಲ್ಲನ ಕಾಲಲ್ಲಿಯೇ ಅಂತರಿಸಿದಳೆಂಬ ಸಿಟ್ಟು, ಕಾಸೀಮನಿಗೆ ವಿಶೇಷವಾಗಿತ್ತು; ಆದ್ದರಿಂದ ಅನಾಯಾಸವಾಗಿ ಈಗ ಪ್ರಸಂಗವು ಒದಗಿರುವಾಗ ಮಲ್ಲನ ರಕ್ತವನ್ನು ಹಿಂಡಬೇಕೆಂದು ಕಾಸೀಮನು ನಿಶ್ಚಯಿಸಿದ್ದು ಆಶ್ಚರ್ಯವಲ್ಲ. ಜಯಶಾಲಿಗಳಾದ ಮುಸಲ್ಮಾನರಿಗೆ ಹಿಂದೂಜನರ ಲಕ್ಷವಿದ್ದಿಲ್ಲ. ಕನ್ನಡಿಗರನ್ನು ಕೈಲಾಗದ ಹೇಡಿಗಳೆಂದು ಅವರು ತಿಳಿದಿದ್ದರು; ಅವರಿಗೆ ತಮ್ಮ ಬಲದ ಗರ್ವವು ವಿಶೇಷವಾಗಿ ಇತ್ತು. ಕ್ಷಣಮಾತ್ರದಲ್ಲಿ ಮಲ್ಲನ ಚಂಡುತಿರುಪಿ ಒಗೆಯುವೆನೆಂದು ಕಾಸೀಮನು ಭಾವಿಸುತ್ತಿದ್ದನು. ಕಾಸೀಮನ ಈ ಭಾವನೆಯು ನಿರರ್ಥಕವಾದದ್ದಂತಲೂ ಹೇಳುವಹಾಗಿದ್ದಿಲ್ಲ. ಆತನು ಅತ್ಯಂತ ಬಲಶಾಲಿಯೆಂದು ನಾವು ಮೇಲೆ ಹೇಳಿದ್ದೇವೆ. ಕಾಸೀಮನು ಕಬ್ಬಿಣದ ದೊಡ್ಡ ದೊಡ್ಡ ಹಾರಿ ಗಳನ್ನು ಅನಾಯಾಸವಾಗಿ ಮಣಿಸುವನು, ಮೊಣಕೈಯಿಂದ ತಿವಿದು ಗೋಡೆಗಳಿಗೆ ದೊಡ್ಡ

ದೊಡ್ಡ ತಗ್ಗುಗಳನ್ನು ಕೆಡವುವನು, ಮನೆಯ ಕಂಬಗಳನ್ನಂತೂ ಆತನು ಸುಲಭವಾಗಿ ಎತ್ತುತ್ತಿದ್ದನು. ಒಟ್ಟಿಗೆ ಆಗಿನ ಕಾಲದಲ್ಲಿ ಕಾಸೀಮನು ಅತ್ಯಂತ ಬಲಶಾಲಿಯೆಂದು ಪ್ರಸಿದ್ಧನಾಗಿದ್ದು, ಜನರು ಅವನನ್ನು ಕಂಡರೆ ಗದಗುಟ್ಟಿ ನಡುಗುತ್ತಿದ್ದರು. ಇಂಥ ಬಲಶಾಲಿಯಾದ ಕಾಸೀಮನು ಪುಡಿ ಆಳಾಗಿ ತೋರುವ ಮಲ್ಲನೊಡನೆ ಕಾದಲಿಕ್ಕೆ ಯಾಕೆ ಹಿಂಜರಿದಾನು? ಆ ವೀರನೂ ಕೆಂಪಡರಿದ ಕಣ್ಣುಗಳಿಂದ ಮಲ್ಲನನ್ನು ಸುಟ್ಟು ಸೂರೆಮಾಡುವಂತೆ ಬಿರಿಬಿರಿ ನೋಡಹತ್ತಿದನು; ಇದನ್ನು ನೋಡಿ ದರ್ಬಾರದ ಯಾವತ್ತು ಜನರು, ಇನ್ನು ಕಾಸೀಮನಿಗೂ ಮಲ್ಲನಿಗೂ ದ್ವಂದ್ವಯುದ್ಧವಾಗುವದು ನಿಶ್ಚಯವೆಂದು ತಿಳಿದರು.

ಈ ಮಾತು ಹುಚ್ಚ ಮಹಮ್ಮದನ ಮನಸ್ಸಿಗೆ ಬರಲಿಲ್ಲ. ಕಾಸೀಮನಂಥ ಕುಲೀನನು ಸರ್ವಸಾಮಾನ್ಯನಾದ ಮಲ್ಲನೊಡನೆ ಮಲ್ಲಯುದ್ಧ ಮಾಡುವದು ಆತನಿಗೆ ಪ್ರಶಸ್ಥವಾಗಿ ತೋರಲಿಲ್ಲ. ಇದಲ್ಲದೆ ಪ್ರಸಂಗವಶಾತ್ ಕಾಸೀಮನಂಥ ದೊಡ್ಡ ಅಧಿಕಾರಿಯು ಪರಾಜಿತನಾದರೆ, ತನ್ನ ಅಧಿಕಾರದ ಕಸುವು ಕಡಿಮೆಯಾಗಬಹುದೆಂದು ಅವನು ಭಾವಿಸಿದನು; ಆದರೂ ಮಲ್ಲಯುದ್ಧದ ಸಂಭ್ರಮಕ್ಕೆ ಮೆಚ್ಚಿದ ಮಹಮ್ಮದನು ಮಲ್ಲನ ಮಲ್ಲಯುದ್ಧದ ಚಾತುರ್ಯ ವೆಷ್ಟಿರುವದೆಂಬುದನ್ನು ನೋಡಲು ಉತ್ಸುಕನಾಗಿದ್ದನು. ಆತನು ಕಾಸೀಮನನ್ನು ಕುರಿತು— "ಖಾನಸಾಹೇಬ, ಈ ಕೆಲಸವು ನಿಮ್ಮತನಕ ಬರತಕ್ಕದ್ದಲ್ಲ. ಇಂಥ ಮೂರು ಜನ ಕನ್ನಡ ಮಲ್ಲರೊಡನೆ ದ್ವಂದ್ವ ಯುದ್ಧ ಮಾಡಲು ನಮ್ಮಲ್ಲಿ ಜನರಿರುವರು; ನಮ್ಮ ಮಲಿಕನಾಯಕನು ಈತನೊಡನೆ ಮಲ್ಲಯುದ್ಧ ಮಾಡಲು ತಕ್ಕವನಾಗಿದ್ದಾನೆ" ಎಂದು ನುಡಿದು, ಆತನು ಮಲ್ಲಸರ್ಜನನಿಗೆ– "ಮಲ್ಲಣ್ಣಾ, ಆಗಲಿ, ನಿನ್ನ ಮಾತು ಕೇಳಿ ನಮಗೆ ಬಹಳ ಸಂತೋಷವಾಗುತ್ತದೆ. ಇಗೋ, ನಿನ್ನೊಡನೆ ಮಲ್ಲಯುದ್ಧಮಾಡಲು ತಕ್ಕ ಮಲ್ಲನನ್ನು ಕಳಿಸುವೆನು ನೋಡು" ಎಂದು ಹೇಳಿ ಮಲಿಕನ ಕಡೆಗೆ ನೋಡಲು, ಮಲಿಕನು ಉದ್ದಾಮತನದಿಂದ ಎದ್ದು ಮಹಮ್ಮದನಿಗೆ ಬಗ್ಗಿ ಸಲಾಮು ಮಾಡಿ ಮಲ್ಲನನ್ನು ತಿರಸ್ಕಾರದಿಂದ ನೋಡತೊಡಗಿದನು! ಮಲಿಕನ ಒಗರನ್ನೂ, ಆತನ ಬಲಿಷ್ಠ ದೇಹವನ್ನೂ ನೋಡಿ, ಇವನು ಮಲ್ಲನಿಗೆ ಮೀರಿದವನೆಂದು ಜನರು ಅನ್ನತೊಡಗಿದರು. ಮಲಿಕನಂತೂ ಮಲ್ಲನನ್ನು ಗಣನೆಗೇ ತರಲಿಲ್ಲ! ಹುಚ್ಚಮಹಮ್ಮದನ ಬಳಿಯಲ್ಲಿದ್ದ ಜಟ್ಟಿಗಳಲ್ಲಿ ಈ ಮಲಿಕನೇ ಮಿಗಿಲಾದವನು. ತನ್ನ ಜಟ್ಟಿಗಳು ಪರಾಭೂತರಾದರೆ ತನ್ನ ಗೌರವಕ್ಕೆ ಕೊರತೆ ಬರುವದೆಂದು ತಿಳಿದು, ಮಹಮ್ಮದನು ಶ್ರೇಷ್ಠ ಜಟ್ಟಿಯನ್ನೇ ಮುಂದೆ ಮಾಡಿದ್ದನು. ಅತ್ತ ಗಾಯಕಿಯು ಇದನ್ನೆಲ್ಲ ಬೆರಗಾಗಿ ನೋಡುತ್ತ ಭಯಗ್ರಸ್ಥಳಾದಂತೆ ತೋರುತ್ತಿದ್ದಳು. ಮಲ್ಲನು ಪರಾಕ್ರಮದಿಂದ ಮಲ್ಲಯುದ್ಧಕ್ಕೆ ಸಿದ್ಧನಾದದ್ದು ಆಕೆಗೆ ಸಂತೋಷಜನಕವಾಗಿದ್ದರೂ ಮಲಿಕನಂಥ ಮಹಾ ಬಲಿಷ್ಠನೊಡನೆ ಪ್ರಸಂಗವಿರುವದರಿಂದ ಏನಾಗುವದೋ ಎಂದು ಆಕೆಯು ಚಿಂತಿಸತೊಡಗಿದ್ದಳು. ಇತ್ತ ಕನ್ನಡಿಗರೂ ತಮ್ಮವನ ಗತಿ ಏನಾಗುವದೋ ಎಂದು ಆಲೋಚಿಸತೊಡಗಿದ್ದರು. ಹೀಗಿರುವಾಗ ಮಲ್ಲನು ಅತ್ಯಂತ ಉತ್ಸಾಹದಿಂದ ಮಹಮ್ಮದನಿಗೆ– "ಗುಣಲುಬ್ಧನಾದ ಯವನವೀರನೇ, ಬಹಳ ಸಂತೋಷವು, ನಿಮ್ಮ ಮಲಿಕ ಸಾಹೇಬನೊಡನೆ ಹೋರಾಡಲು ನಾನು ಸಿದ್ಧನಿರುವೆನು, ಆದರೆ ನಮ್ಮಿಬ್ಬರ ಯುದ್ಧವೆಂದರೆ ಒಬ್ಬರನ್ನೊಬ್ಬರು ನೆಲಕ್ಕೆ

ಕೆಡವುವದಲ್ಲ, ಒಬ್ಬರ ಜೀವವನ್ನೊಬ್ಬರು ಹಿಂಡುವದು! ಈ ಮಾತು ತಘಲಕವೀರನಿಗೆ ಸಮ್ಮತವಷ್ಟೆ? ಎಂದು ಕೇಳಲು, ಮಲಿಕನು ತಿರಸ್ಕಾರದಿಂದ ಗಹಗಹಿಸಿ ನಕ್ಕನು. ಈ ಸೊಟ್ಟ ಕನ್ನಡಿಗನನ್ನು ಯಾರು ಕೇಳಬೇಕೆಂಬ ಮಬ್ಬು ಆತನಿಗೆ ವಿಶೇಷವಾಗಿತ್ತು. ಈ ಪುಡಿ ಆಳಾದ ಮಲ್ಲನೊಡನೆ ಯಾವಾಗ ಮಲ್ಲಯುದ್ಧವಾದೀತು, ನಾನು ಅವನನ್ನು ಯಾವಾಗ ನೆಲಕ್ಕೆ ಅಪ್ಪಳಿಸೇನು ಎಂದು ಆ ಮಕಮೀಸೆಯ ಮಲಿಕನು ಆತುರಪಡತೊಡಗಿದನು. ಅಷ್ಟರಲ್ಲಿ ಗಾಯಕಿಯು ತನ್ನ ವೀಣೆಯಮೇಲೆ ಕೈಹಾಕಿ ವೀರರಸೋತ್ಪಾದಕವಾದ ಕನ್ನಡ ಪದಗಳನ್ನು ಹಾಡತೊಡಗಿದಳು. ಆ ಪದಗಳು ಮಲ್ಲಸರ್ಜನನಿಗೆ ಬರುತ್ತಿದ್ದವು. ಅವುಗಳನ್ನು ಕೇಳಿ ಯುದ್ಧಾವೇಶದಿಂದ ಅವನ ಮೈ ಉಬ್ಬತೊಡಗಿತು. ಆ ಪದಗಳನ್ನು ಕೇಳಿ ಉಳಿದ ಕನ್ನಡಿಗರೂ ಆವೇಶಗೊಂಡರು. ಆ ಕನ್ನಡ ಪದಗಳು ಹುಚ್ಚ ಮಹಮ್ಮದನಿಗೆ ತಿಳಿಯದಿದ್ದರೂ, ಗಾಯಕಿಯ ನವೀನ ಪದ್ಧತಿಯ ಗಾನಯನವನ್ನು ಆತನು ಉತ್ಸುಕತೆಯಿಂದ ಕೇಳತೊಡಗಿದ್ದನು. ಅಷ್ಟರಲ್ಲಿ ಬಿಸಿಲು ಏರಹತ್ತಿತ್ತು; ಆದರೂ ದ್ವಂದ್ವಯುದ್ಧವನ್ನು ನೋಡಬೇಕೆಂಬ ಉಬ್ಬಿನಲ್ಲಿ ದರ್ಬಾರದ ಜನರಿಗೆ ಬಿಸಿಲು ಹತ್ತದಾಯಿತು. ಅವರು ಈಗಲೇ ಯುದ್ಧವು ಆರಂಭವಾಗಿಹೋಗಲೆಂದು ಆತುರ ಪಡುತ್ತಲಿದ್ದರು. ಅಷ್ಟರಲ್ಲಿ ಮಹಮ್ಮದನು— ''ಈಗ ಹೊತ್ತು ಬಹಳವಾಯಿತು, ಮಲ್ಲಯುದ್ಧಕ್ಕೆ ಇದು ತಕ್ಕ ಸಮಯವಲ್ಲ; ಆದ್ದರಿಂದ ಮಧ್ಯಾಹ್ನದ ಬಿಸಿಲು ಇಳಿದ ಬಳಿಕ ಹತ್ತುತಾಸಿನಕಡೆಗೆ ಈ ವೀರರಿಬ್ಬರು ಮಲ್ಲಯುದ್ಧವನ್ನು ಆರಂಭಿಸಲಿ'' ಎಂದು ಹೇಳಿ ಮೇಲಕ್ಕೆ ಏಳಲು, ದರ್ಬಾರದ ಕಾರ್ಯವು ಮುಗಿದು ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋದರು; ಆದರೆ ಮಲ್ಲಸರ್ಜನನು ಮಾತ್ರ ಮನೆಗೆ ಹೋಗದೆ ಮಹಮ್ಮದನ ಸೆರೆಯಲ್ಲಿಯೇ ಉಳಿದನು; ಯಾಕಂದರೆ, ಒಬ್ಬ ಹೆಂಗಸಿನ ಮುರುವತ್ತಿನಿಂದ ಬಂಧಮುಕ್ತನಾಗುವದು ಆತನ ಮಾನಕ್ಕೆ ಸಾಲಲಿಲ್ಲ. ಹೀಗೆ ತಮ್ಮ ಒಡೆಯನು ಕಾರಾಗೃಹದಲ್ಲಿ ಉಳಿಯಲು, ಅವನ ಅನುಯಾಯಿಗಳೂ ಅವನೊಡನೆ ಕಾರಾಗೃಹದಲ್ಲಿಯೇ ಉಳಿದರು! ಕನ್ನಡಿಗರ ಈ ಉದಾತ್ತವಾದ ಆಚರಣೆಯನ್ನು ನೋಡಿ ಮಹಮ್ಮದನು ಬೆರಗಾದನು!

## ಮಲ್ಲಯುದ್ಧ

ಜನರ ಮಧ್ಯಾಹ್ನದ ಊಟ–ಉಡಿಗೆಗಳಾದವು. ಅಂದು ಆನೆಗುಂದಿಯ ಪ್ರತಿ ಒಬ್ಬನ ಮಾತಿನಲ್ಲೂ ಮಲ್ಲನ ಮಲ್ಲ ಯುದ್ಧದ ಪ್ರಸಕ್ತಿಯೇ ಪ್ರಸಕ್ತಿಯು; ಅದರ ಹೊರತು ಜನರಿಗೆ ಬೇರೆ ಕೆಲಸಗಳೇ ಇಲ್ಲದಾಗಿದ್ದವು. ತಮ್ಮವರ ಮುಂದೆ ಮಲ್ಲಸರ್ಜನನ ಧೈರ್ಯದ ಸುದ್ದಿ ಹೇಳುವದರಲ್ಲಿ ಪ್ರತಿಯೊಬ್ಬನು ತೊಡಗಿದ್ದನು. ಕನ್ನಡಿಗರು ಸಂಪೂರ್ಣವಾಗಿ ಮಲ್ಲನ ಪಕ್ಷಪಾತಿಗಳಾಗಿದ್ದರೆಂದು ಹೇಳಲವಶ್ಯವಿಲ್ಲ. ತಮ್ಮ ಮಲ್ಲಸರ್ಜನನು ಹುಚ್ಚ ಮಹಮ್ಮದನಂಥ ಕ್ರೂರನ ಸಂಗಡ ಇಷ್ಟು ತೇಜಸ್ವಿತೆಯಿಂದ ನಡೆದುಕೊಂಡಿದ್ದಕ್ಕಾಗಿಯೂ, ಗಾಯಕಿಯು ತನ್ನ ವರ್ಚಸ್ಸಿನಿಂದ ಮಹಮ್ಮದನ

ಮನಸ್ಸು ಮೆಚ್ಚಿಸಿ ಸೆರೆಯವರನ್ನು ಬಿಡಿಸಿದ್ದಕ್ಕಾಗಿಯೂ ಕನ್ನಡಿಗರು ಅಭಿಮಾನಪಡುತ್ತಿದ್ದರು. ಆದರೂ ಅವರು ಕಾಸೀಮನ ಬಲವನ್ನೂ, ಮಲಿಕನ ಶಕ್ತಿಗೌರವನ್ನೂ ವರ್ಣಿಸದೆ ಇರಲಿಲ್ಲ. ಗುಣಗ್ರಾಹಿಗಳಾದ ಸಭ್ಯಸ್ವಭಾವದ ಕನ್ನಡಿಗರು, ಅತ್ಯಂತ ಕ್ರೂರನೆನಿಸಿದ ಮಹಮ್ಮದನ ಔದಾರ್ಯಾದಿ ಸದ್ಗುಣಗಳನ್ನೂ ಮನಃಪೂರ್ವಕವಾಗಿ ಶ್ಲಾಘಿಸಿದರು. ಅವರು ಮಹಮ್ಮದನ ವಿಷಯವಾಗಿ ಆಗ ಅಂದದ್ದೇನಂದರೆ— ''ಸಿಟ್ಟಿಗೆದ್ದರೆ ಮಾತ್ರ ಮಹಮ್ಮದನು ಮನುಷ್ಯನಲ್ಲ— ರಾಕ್ಷಸನು; ಆದರೆ ಸುಪ್ರಸನ್ನನಾಗಿದ್ದರೆ ಅವನಂಥ ಮನುಷ್ಯನೇ ಇಲ್ಲ''. ಹೀಗೆ ಹಿಂದೂ ಜನರು ಮಹಮ್ಮದನ ಸದ್ಗುಣಗಳನ್ನೂ, ದುರ್ಗುಣಗಳನ್ನೂ ತೂಗಿ ನೋಡುವರು. ಅವನಲ್ಲಿಯ ಈ ಪರಸ್ಪರ ವಿರುದ್ಧವಾದ ಉಜ್ವಲ ಗುಣಗಳ ಸಡಗರವನ್ನು ಮನಸ್ಸಿನಲ್ಲಿ ತಂದೇ ಅವನನ್ನು ಅವರು ಯತಿಹೃದಯದ ರಾಕ್ಷಸನೆಂತಲೂ, ರಾಕ್ಷಸಹೃದಯದ ಯತಿಯೆಂತಲೂ ಕರೆದಿರುವರು! ಹೀಗೆ ಆ ದಿನ ಯಾರು ಮಹಮ್ಮದನನ್ನು, ಯಾರು ಗಾಯಕಿಯನ್ನು, ಯಾರು ಮಲ್ಲಸರ್ಜನನನ್ನು, ಯಾರು ಮಲಿಕನನ್ನು, ಯಾರು ಕಾಸೀಮನನ್ನು ಹೊಗಳುತ್ತಲಿದ್ದರು. ಅಂದು ಉಂಡಬಳಿಕ ಯಾರೂ ಅಡ್ಡಾಗಲಿಲ್ಲ–ಉದ್ದಾಗಲಿಲ್ಲ; ಕೆಲಸ–ಬೊಗಸೆಗಳ ಗೊಡವೆಗಂತೂ ಅವರು ಹೋಗಲೇ ಇಲ್ಲ. ಪ್ರತಿಯೊಬ್ಬನು ಯುದ್ಧದ ಸಮಯವನ್ನು ಉತ್ಸುಕತೆಯಿಂದ ನಿರೀಕ್ಷಿಸುತ್ತಲಿದ್ದರು. ಅಂದಿನ ಮಲ್ಲನ ಮಲ್ಲಯುದ್ಧದ ಸುದ್ದಿಯು ಸುತ್ತಮುತ್ತಲಿನ ಗ್ರಾಮಗಳಲ್ಲಿ ಕೂಡ ಹಬ್ಬಿತ್ತು; ಆದ್ದರಿಂದ ಜನರು ಗುಂಪುಗುಂಪಾಗಿ ಯುದ್ಧದ ಕಣದಕಡೆಗೆ ಹೊಡೆದು ಬರತೊಡಗಿದರು. ಹಳ್ಳಿಗಳ ಗೌಡರೂ, ಶಾನಭೋಗರೂ, ಶೆಟ್ಟರೂ, ಸಾವುಕಾರರೂ ತಮತಮ್ಮ ಗರಡಿಯ ಮನೆಗಳಲ್ಲಿ ಮೇಸಿದ ಹುಡುಗರೊಡನೆ ಉತ್ಸುಕತೆಯಿಂದ ಕುಸ್ತಿ ನೋಡಲಿಕ್ಕೆ ಬರುತ್ತಿದ್ದರು. ನಮ್ಮ ಹಿಂದುಸ್ತಾನದ ಜನರು ಪ್ರಾಚೀನಕಾಲದಿಂದಲೂ ಮಲ್ಲಯುದ್ಧಕ್ಕೆ ನೆಚ್ಚಿದವರು. ಮಲ್ಲಯುದ್ಧವೆಂದರೆ ಅವರ ಮೈ ಉಬ್ಬುವದು. ಮಹಮ್ಮದನ ಅಪ್ಪಣೆಯಿಂದ ಇಂದಿನ ಕುಸ್ತಿಗೆ ವಿಶಾಲವಾದ ಸ್ಥಳ ಗೊತ್ತುಮಾಡಲ್ಪಟ್ಟಿತ್ತು. ಆ ಹುಚ್ಚದೊರೆಯು ತನ್ನ ಜಟ್ಟಿಯ ಸಾಮರ್ಥ್ಯವನ್ನು ಹಿಂದೂ ಜನರಿಗೆ ತೋರಿಸಬೇಕಾಗಿತ್ತು. ಜನರು ಬಿಸಿಲು ನೋಡದೆ, ತಮಗೆ ಸ್ಥಳ ಸಿಗಲಿಕ್ಕಿಲ್ಲವೆಂಬ ಅಂಜಿಕೆಯಿಂದ ಮುಂಗಡವಾಗಿ ಹೋಗಿ ಆ ರಣಗುಟ್ಟುವ ಬಿಸಿಲಿನಲ್ಲಿಯೇ ಕಣದ ಸುತ್ತಮುತ್ತು ಕುಳಿತುಕೊಳ್ಳ ಹತ್ತಿದರು. ಒಬ್ಬ ಕನ್ನಡ ಮಲ್ಲನ ಕುಸ್ತಿಯ ನೆವದಿಂದ ಹಲವು ಜನ ಕನ್ನಡ ಮಲ್ಲರು ಕೂಡ ಸುತ್ತುಮುತ್ತುನೆರೆದರು. ಪ್ರಿಯ ವಾಚಕರೇ, ಇದೊಂದು ಸಾಮಾನ್ಯ ಕುಸ್ತಿಯೆಂದು ನೀವು ತಿಳಿಯಬೇಡಿರಿ; ಇದು ಕನ್ನಡಗರ ಮನಸ್ಸಿನ ದೌರ್ಬಲ್ಯವನ್ನು ಹೊಡೆದೋಡಿಸಿ ಅವರ ಪೌರುಷವನ್ನು ಜಾಗ್ರತಗೊಳಿಸುವ ವಿಲಕ್ಷಣತರದ ಕುಸ್ತಿಯಾಗಿತ್ತು.

ಒಂಬತ್ತುತಾಸು ಆಗುವದರೊಳಗೆ ಕುಸ್ತಿಯ ಕಣದ ಸುತ್ತುಮುತ್ತು ಮಿತಿಮೀರಿ ಜನರು ಕುಳಿತುಕೊಂಡರು. ಹುಚ್ಚ ಮಹಮ್ಮದನ ಕ್ರೂರತನಕ್ಕೆ ಬಹಳವಾಗಿ ಅಂಜುತ್ತಿದ್ದ ಜನರು, ಯಾವ ಅಂಜಿಕೆಯೂ ಇಲ್ಲದವರಂತೆ ಇಂದು ಹೀಗೆ ಬಡಬಡ ಕುಸ್ತಿಗೆ ಬಂದು ಕುಳಿತದ್ದು ಆಶ್ಚರ್ಯವೇ ಸರಿ! ಕನ್ನಡಿಗರ ಸ್ವಭಾವವು ವಿಲಕ್ಷಣವಾದದ್ದು; ಅಂಜಿದರೆ ಅವರಂಥ ಅಂಜುಬುರುಕರಿಲ್ಲ, ಬೈಲಿಗೆ ನಿಂತರೆ ಅವರಂಥ ಬಂಟರಿಲ್ಲ! ಇವರಲ್ಲಿ ಸ್ವತಂತ್ರ ವಿಚಾರ ಕಡಿಮೆ; ಒಬ್ಬರನ್ನು ನೋಡಿ ಒಬ್ಬರು

ಮಾಡುವ ಗುಣ ಹೆಚ್ಚು. ಒಬ್ಬರನ್ನೊಬ್ಬರು ನೋಡಿ ಅಂಜಿಕೆಯಿಂದ ಹಿಂದಕ್ಕೆ ಸರಿದರೆ ಸರಿದೇಬಿಟ್ಟರು; ಒಬ್ಬರನ್ನೊಬ್ಬರು ನೋಡಿ ಧೈರ್ಯದಿಂದ ಮುಂದಕ್ಕೆ ಬಿದ್ದರೆ ಬಿದ್ದೇಬಿಟ್ಟರು! ಮುಹಮ್ಮದನು ಬಹಾಉದ್ದೀನನ ಮೈದೊಗಲು ಸುಲಿದದ್ದನ್ನು ಅತಿಶಯೋಕ್ತಿಯಿಂದ ಕೇಳಿ ಅವರು ಅಂಜಿ ಎತ್ತಾದರೂ ಓಡಿಹೋಗುವ ಹವಣಿಕೆಯಲ್ಲಿದ್ದರು; ಆದರೆ ಈಗ ಮಲ್ಲನ ಶೌರ್ಯದ ಸುದ್ದಿಯನ್ನೂ, ಗಾಯಕಿಯ ವಿಲಕ್ಷಣ ತೇಜಸ್ಸಿನ ವರ್ಣನವನ್ನೂ ಅತಿಶಯೋಕ್ತಿಯಿಂದ ಕೇಳಿ, ಅವರು ಹ್ಯಾಗಿರುವರೋ ನೋಡೋಣವೆಂಬ ಉಬ್ಬಿನಿಂದ ಅವರು ಅಂಜಿಕೆಬಿಟ್ಟು ಕುಸ್ತಿಯನ್ನು ನೋಡಲಿಕ್ಕೆ ಬಂದು ಬಿಟ್ಟಿದ್ದರು; ಹೀಗೆ ಅವರು ಹುಂಬತನದಿಂದ ಕುಸ್ತಿಗೆ ಬಂದಿದ್ದರೂ ಮೈಮರೆತಿದ್ದಿಲ್ಲ, ಕ್ರೂರ ಮುಹಮ್ಮದನ ಬುದ್ಧಿಯು ಸ್ಥಿರವಲ್ಲದ್ದರಿಂದ ಯಾವಕಾಲಕ್ಕೆ ಎಂಥ ಪ್ರಸಂಗ ಬರುವದೋ ಎಂದು ತಿಳಿದು, ಅವರು ತಮ್ಮ ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ಬಂದಿದ್ದರು. ಮುಸಲ್ಮಾನರಿಗೆ ಅವರು ಅಂಜುತ್ತಿದ್ದರೂ, ಅವರು ತೀರ ಹತವೀರ್ಯರೂ, ನಿಶ್ಶಸ್ತ್ರರೂ ಆಗಿರದ್ದರಿಂದ ಪ್ರಸಂಗವಶಾತ್ ಅವರು ಕಲಿತನಕ್ಕೆ ಮನಸ್ಸು ಮಾಡುತ್ತಿದ್ದರು. ಕುಸ್ತಿಯಹೊತ್ತು ಸನಿಯಕ್ಕೆ ಬಂದ ಬಂದಂತೆ ಮುಹಮ್ಮದನ ಕಡೆಯ ಜಟ್ಟಿಗಳು ಒಗರಿನಿಂದ ಬರತೊಡಗಲು, ''ಇವರು ಯಾರು, ಇವರು ಯಾರು'' ಎಂದು ಕೌತುಕದ ಚರ್ಚೆಯಿಂದಲೂ, ಅವರವರ ಶಕ್ತಿಯ ಅತಿಶಯೋಕ್ತಿಯ ವರ್ಣನೆಗಳಿಂದಲೂ ಜನರಲ್ಲಿ ಗಲಿಬಿಲಿಯುಂಟಾಗತೊಡಗಿತ್ತು ಮುಸಲ್ಮಾನ ಜಟ್ಟಿಗಳೂ, ಪ್ರೇಕ್ಷಕರೂ ತಾವು ಜಯಶಾಲಿಗಳೆಂಬ ಹೆಮ್ಮೆಯಿಂದ ಬಂದು ತಮಗಾಗಿ ಕಾದಿಟ್ಟಿದ್ದ ಸ್ಥಳಗಳಲ್ಲಿ ಡೌಲಿನಿಂದ ಕುಳಿತುಕೊಳ್ಳಹತ್ತಿದರು. ಅವರಿಗೆ ಕನ್ನಡಿಗರ ಲಕ್ಷವಿದ್ದಂತೆ ತೋರಲಿಲ್ಲ, ಅವರನ್ನು ನೋಡಿ ಎಷ್ಟೋ ಜನ ಕನ್ನಡಿಗರು ಭಯಗ್ರಸ್ತರಾಗುತ್ತಿದ್ದರು; ಎಷ್ಟೋ ಜನರು ಹೊಟ್ಟೆಕಿಚ್ಚಿನಿಂದ ಕೈಹೊಸೆಯುತ್ತಿದ್ದರು! ಹೀಗೆ ವಿವಿಧ ಚರ್ಚೆಗಳಿಂದುಂಟಾದ ಜನಸಮೂಹದ ಸಂಕಲಿತ ಧ್ವನಿಯು, ಕರ್ನಾಟಕ ಭಾವೀ ವಿಜಯಧ್ವನಿಯ ಮಂಗಲಾಚರಣದಂತೆ ಬಹು ಗಂಭೀರವಾಗಿ ಕೇಳುತ್ತಿತ್ತು!

ಅಷ್ಟರಲ್ಲಿ ಕಾಸಿಮನು ಮಲಿಕನನ್ನು ಕೂಡಿಕೊಂಡು ಕುಸ್ತಿಯ ಕಣಕ್ಕೆ ಬಂದನು. ಇತ್ತ ಮಲ್ಲಸರ್ಜನನೂ ತನ್ನ ಅನುಯಾಯಿಗಳೊಡನೆ ಸ್ವಸಂತೋಷದ ಸೆರೆಯಾಳೆನಿಸಿಕೊಂಡು ಕುಸ್ತಿಯಕಣಕ್ಕೆ ಬಂದನು. ಆಗ ಜನರ ಗದ್ದಲವು ಕಡಿಮೆಯಾಗಿ ಆ ಇಬ್ಬರು ಜಟ್ಟಿಗಳನ್ನು ಎಲ್ಲರೂ ಕೌತುಕದಿಂದ ನೋಡತೊಡಗಿದರು. ನೋಡುವ ಭರವು ತಗ್ಗಿದಬಳಿಕ ಪುನಃ ಚರ್ಚೆಗೆ ಆರಂಭವಾಗಿ ಮತ್ತೆ ಕಲಕಲಧ್ವನಿಯು ಹೆಚ್ಚಿತು. ಕನ್ನಡಿಗರ ಸ್ವಾಭಿಮಾನವು ಉಕ್ಕೇರಿತು. ಬಹು ಬಲಿಷ್ಠನಾಗಿ ತೋರುತ್ತಿರುವ ಮಲಿಕನೊಡನೆ ಸೆರೆಮನೆಯ ಕಷ್ಟ ಸೋಸಿ ಸೊರಗಿಹೋಗಿದ್ದ ಮಲ್ಲಣ್ಣನು ಹ್ಯಾಗೆ ಕುಸ್ತಿಯನ್ನು ಹಿಡಿದಾನೆಂದು ಅವರು ಚಿಂತಿಸತೊಡಗಿದರು. ಅವರಲ್ಲಿ ಬಲಿಷ್ಠ ಜಟ್ಟಿಗಳಿದ್ದವರು ಮಲ್ಲಣ್ಣನನ್ನು ಬಿಡಿಸಿ ನಾವಾದರೂ ಮಲಿಕನೊಡನೆ ಕುಸ್ತಿಯಾಡೋಣವೇ ಎಂದು ಆಲೋಚಿಸಿ ತಮ್ಮತಮ್ಮೊಳಗೆ ಮಾತಾಡತೊಡಗಿದರು. ಮಲಿಕನಿಗಂತೂ ಮಲ್ಲನ ಲಕ್ಷವು ಸ್ವಲ್ಪವಾದರೂ ಇದ್ದಂತೆ ತೋರಲಿಲ್ಲ, ಆತನು ಮಲ್ಲನ ಕಡೆಗೂ, ಕನ್ನಡಿಗರ ಕಡೆಗೂ ನೋಡಿ ತಮ್ಮವರೊಡನೆ ನಗೆಯಾಡುತ್ತಿದ್ದನು. ಇತ್ತ ಮಲ್ಲಸರ್ಜನನು ಗಾಂಭೀರ್ಯದಿಂದ ಅದನ್ನು ಸಹಿಸಿಕೊಂಡು ಸುಮ್ಮನೆ

ಕುಳಿತಿದ್ದನು. ಆತನು ನೋಡಲಿಕ್ಕೆ ಬಂದಿದ್ದ ಕನ್ನಡಿಗರ ಹಿಂಡಿನೊಳಗಿನ ಯಾವನೋ ಒಬ್ಬ ಮನುಷ್ಯನನ್ನು ಅತ್ಯಂತ ಭಕ್ತಿಯಿಂದ ನೋಡುತ್ತಿದ್ದನು. ಆ ಗೊಂಗಡಿಯ ಮುಸುಕಿನ ಮನುಷ್ಯನು ಯಾವನೋ ನಾವರಿಯೆವು. ಮೋರೆಯ ಹೊರತು ಮೈತುಂಬ ಕಂಬಳಿಯ ಮುಸುಕು ಹಾಕಿಕೊಂಡು ಮಂದಿಯ ಮರೆಗೆ ಕುಳಿತಿದ್ದ ಆತನ ಗುರುತಾದರೂ ಮಂದಿಗೆ ಹ್ಯಾಗೆ ಹತ್ತಬೇಕು? ಸಿಪಾಯಿಗಳು ಜನರನ್ನು ಹಿಂದಕ್ಕೆ ಸರಿಸಿ ಸರಿಸಿ ಕಣವನ್ನು ಪ್ರಶಸ್ತಮಾಡತೊಡಗಿದರು. ಆಗ ಆ ಗೊಂಗಡಿಯ ಮನುಷ್ಯನು ಮೇಲಕ್ಕೆದ್ದು ಹಿಂದಕ್ಕೆ ಸರಿಯುತ್ತಿರಲು ಅವನ ಕಂಬಳಿಯ ಮುಸುಕು ಸ್ವಲ್ಪ ಓರೆಯಾದಂತಾಗಿ, ಆತನ ತೇಜಃಪುಂಜಮುಖವೂ, ಒಟ್ಟಿನಲ್ಲಿ ಭವ್ಯವಾಗಿ ತೋರುವ ಆತನ ದೇಹವೂ ಕಣ್ಣಿಗೆ ಬಿದ್ದವು. ಮುಸಲ್ಮಾನ ಸಿಪಾಯಿಗಳ ಉದ್ಧಟತನಕ್ಕಾಗಿ ಕನ್ನಡಿಗರು ಅಂತರಂಗದಲ್ಲಿ ಸಂತಾಪಗೊಳ್ಳುತ್ತಿದ್ದರೂ, ಆ ಸಂತಾಪವನ್ನು ಹೊರಗೆಡವಿ ಅದರ ಪ್ರತೀಕಾರ ಮಾಡಲಿಕ್ಕೆ ಅವರಿಗೆ ಧೈರ್ಯವಾಗುತ್ತಿದ್ದಿಲ್ಲ. ಮಾತಾಡಿದರೆ ಎಲ್ಲಿ ಮೈಮೇಲೆ ಬರುತ್ತದೋ ಎಂಬ ಅಂಜಿಕೆಯಿಂದ ಅವರು ಸುಮ್ಮನೆ ಸರಿಯುತ್ತಿದ್ದರು! ಹೀಗೆ ಕಣದಲ್ಲಿ ವ್ಯವಸ್ಥೆ ನಡೆದಿರುವಾಗ ದೇವರಾಜನ ಸವಾರಿಯು ಕಣಕ್ಕೆ ದಯಮಾಡಿಸಿತು. ಕೂಡಲೆ ಕನ್ನಡಿಗರು ಭಕ್ತಿಯಿಂದ ಎದ್ದುನಿಂತು ಆ ವೃದ್ಧರಾಜನನ್ನು ಮನ್ನಿಸಿದರು. ದೇವರಾಜನು ಖಿನ್ನವದನನಾಗಿ ತನ್ನ ಆಸನದಲ್ಲಿ ಕುಳಿತುಕೊಂಡು, ಒಮ್ಮೆ ಮಲಿಕನ ಕಡೆಗೂ, ಒಮ್ಮೆ ಮಲ್ಲಸರ್ಜನನ ಕಡೆಗೂ, ಒಮ್ಮೆ ಕ್ಷಣದಲ್ಲಿ ನೆರೆದಿರುವ ಕನ್ನಡಿಗರ ಕಡೆಗೂ ನೋಡಿ ಉಸುರ್ಗರೆದನು! ಕನ್ನಡ ಸೈನಿಕರೂ ತಮ್ಮ ಸ್ಥಳದಲ್ಲಿ ನಿಂತುಕೊಂಡಿದ್ದರು. ಅಷ್ಟರಲ್ಲಿ ಮಹಮ್ಮದನು ಬರುವ ಗದ್ದಲವೆದ್ದಿತು. ಆ ಅಲೌಕಿಕ ಪುರುಷನನ್ನು ನೋಡಲಿಕ್ಕೆ ಹಳ್ಳಿಯ ಜನರು ಹಾತೊರೆಯುತ್ತಿದ್ದರು. ನಾನೇಳು, ನೀನೇಳು ಎನ್ನುತ್ತ ಪ್ರೇಕ್ಷಕರೆಲ್ಲ ಎದ್ದುನಿಂತರು. ಅಷ್ಟರಲ್ಲಿ ಅಂಗರಕ್ಷಕರೊಡನೆ ಮಹಮ್ಮದನು ಬಂದು ತನ್ನ ಆಸನದಲ್ಲಿ ಕುಳಿತನು. ಆಗ ಕುಸ್ತಿಯ ಕಣವು ಸ್ತಬ್ಧವಾಯಿತು. ಪ್ರತಿಯೊಬ್ಬನು ಮಹಮ್ಮದನನ್ನು ನೋಡುವ ಸಾಹಸ ಮಾಡುತ್ತಿದ್ದನು. ಈ ಪ್ರಸಂಗದಲ್ಲಿ ಬಲಿಷ್ಠರು ದುರ್ಬಲರನ್ನು ಒತ್ತಾಯದಿಂದ ಹಿಂದಕ್ಕೆ ಸರಿಸುವದು, ಜನರನ್ನು ಬಗಿಬಗಿದು ಮುಂದಕ್ಕೆ ಬರುವದು, ಹಿಂದಿನವರ ಹಂಗಿಲ್ಲದೆ ಮುಂದಿನವರು ಎದ್ದು ನಿಲ್ಲುವದು, ಹೆಗಲಿಗೆ ಕೊಸೆದು ಕುಳಿತುಕೊಳ್ಳಿರೆಂದು ಹಿಂದಿನವರು ಮುಂದಿನವರನ್ನು ಗದ್ದರಿಸುವದು ಮುಂತಾದ ಸ್ವಾರ್ಥಸಾಧಕ ಬಲಾತ್ಕಾರದ ಕಾರ್ಯಗಳು ನಡೆದಿದ್ದವು. ಎಲ್ಲರೂ ಮಹಮ್ಮದನ ಹಾದಿಯನ್ನು ಆತುರದಿಂದ ನೋಡುತ್ತಲಿದ್ದರು. ಆ ವಿಲಕ್ಷಣ ಕೀರ್ತಿಶಾಲಿಯಾದ ಪುರುಷನನ್ನು ಎಂದೂ ನೋಡದೆಯಿದ್ದ ಜನರು, ಅವನ ರೂಪರೇಷೆಗಳ ಸಂಬಂಧದಿಂದ ಬಗೆಬಗೆಯಾಗಿ ಮನಸ್ಸಿನಲ್ಲಿ ಕಲ್ಪಿಸುತ್ತಲಿದ್ದರು. ನೆರೆದ ಜನರಲ್ಲಿ ಯಾರೋ ಒಬ್ಬರು ''ಓಹೋ ಬಾದಶಹನು ಬಂದನು'' ಎಂದು ನುಡಿದಕೂಡಲೆ ಜನರ ಚಿತ್ತ ವೃತ್ತಿಗಳೆಲ್ಲ ಒತ್ತಟ್ಟಿಗಾಗಿ, ಆ ಅಲೌಕಿಕ ಪುರುಷನನ್ನು ನೋಡಲಿಕ್ಕೆ ಅವು ಒತ್ತರಿಸಹತ್ತಿದವು; ಆದರೆ ಬಂದವನು ಬಾದಶಹನಾಗದೆ ''ಕುಂಬಳರಾಜನ ಪಟ್ಟಣದಲ್ಲಿ ಸಂಬಳದವರೆಷ್ಟೋ, ಜನರೆ''ನ್ನುಂತೆ, ಯಾವನೊಬ್ಬ ಮುಸಲ್ಮಾನ ಸರದಾರನಾಗಲು, ಜನರ ಚಿತ್ತವೃತ್ತಿಗಳು ಹಿಂಜರಿದು ವ್ಯಥಿತ ವಾಗುತ್ತಿದ್ದವು. ಎಲ್ಲ ವ್ಯವಸ್ಥೆಯಾಗಿ, ಬಾದಶಹನ ಸಿಂಹಾಸನವು ಆತನಿಂದ ಅಲಂಕೃತವಾಗುವದೊಂದು ಮಾತ್ರ ಉಳಿದಿತ್ತು,

ಮನಸ್ವಿಯಾದ ಬಾದಶಹನು ಇಂದು ಮಲ್ಲಯುದ್ಧ ನೋಡಲಿಕ್ಕೆ ಬಾರದಿದ್ದರೆ ನಾವು ಊರಿಂದೂರಿಗೆ ಬಂದ ಶ್ರಮವು ವ್ಯರ್ಥವಾಗುವದಲ್ಲ, ಎಂದು ಪರಸ್ಥಳದ ಜನರು ಚಿಂತಿಸುತ್ತಿದ್ದರು. ಜನರು ಮಲ್ಲಯುದ್ಧವನ್ನು ನೋಡಲಿಕ್ಕೆ ಅತ್ಯಂತ ಆತುರರಾದ್ದರಿಂದ, ವಿಲಂಬವಾದಂತೆ ಅವರಿಗೆ ಬೇಜಾರವಾಗಹತ್ತಿತು. ಹಿಂದೆಮುಂದೆ ಜನರ ತಿಕ್ಕಾಟ, ಮೇಲೆ ಸೂರ್ಯಕಿರಣಗಳ ಕಾಟ, ಹರಿದು ಹೊಗಬಿದ್ದು ಮುಂದಕ್ಕೆ ಹೋದೇವೆಂದರೆ ಮುಸಲ್ಮಾನ ಸಿಪಾಯಿಗಳ ಸೋಟಾ; ಹೀಗಾಗಿ ಎಷ್ಟೋ ಜನರು– ''ಸಾಕೋ ನಮ್ಮಪ್ಪಾ! ಈ ಕುಸ್ತಿಯ ಸುಖ! ಹಾದಿ ಸಿಕ್ಕರೆ ಸುಮ್ಮನೆ ಹೋದೇವೆನ್ನುತ್ತೇವೆ'' ಎಂದು ಜನಸಮ್ಮರ್ದದಿಂದ ಹೊರಬೀಳಲಿಕ್ಕೆ ಹವಣಿಸುತ್ತಿದ್ದರು. ಎದ್ದುನಿಂತವರು ಬೇಸತ್ತು ಕುಳಿತುಕೊಳ್ಳಹತ್ತಿದರು, ಹರಿಬಿದ್ದು ಹೋದವರು ಹಿಂದಕ್ಕೆ ಸರಿಯಹತ್ತಿದರು. ಎಷ್ಟೋ ಜನರು ಬೇಸತ್ತು ಚಡಪಡಿಸುತ್ತ ಮಹಮ್ಮದನನ್ನು ಬೈಯಹತ್ತಿದರು ಸಹ! ಹೀಗೆ ಹೊತ್ತಾದದ್ದರಿಂದ ಜನರು ಹೊಯ್ದು ಹೋಳಿಗೆಯಾಗುತ್ತಿರಲು, ತಫಲಕ ಬಾದಶಹನು ಬರುತ್ತಿರುವ ಸುದ್ದಿಯು ಜರಲ್ಲಿ ಮತ್ತೆ ಹಬ್ಬಿತು; ಆದರೆ ಹೀಗೆ ಹಲವು ಸಾರೆ ಸುದ್ದಿಯು ಹಬ್ಬಿ ನಿರಾಶೆಯಾದದ್ದರಿಂದ, ಜನರು ಆ ಸುದ್ದಿಗೆ ಈಗ ಮಹತ್ವವನ್ನು ಕೊಡಲಿಲ್ಲ. ''ಬಂದರೆ ಬರುತ್ತಿದ್ದಾನು ಬಿಡು, ಅವನೇನು ದೇವರಲ್ಲ'' ಎಂದು ಕೆಲವರು ತಿರಸ್ಕರಿಸತೊಡಗಿದರು. ಕೆಲವು ಆತುರ ಸ್ವಭಾವದವರು ಬಾದಶಹನನ್ನು ನೋಡಲು ತವಕಿಸಿ ತಟ್ಟನೆ ಎದ್ದುನಿಂತರು.

ಹೀಗೆ ತ್ರಿವಿಧ ಜನರ ಭಿನ್ನ ಭಿನ್ನ ರುಚಿಯು ಭಿನ್ನ ಭಿನ್ನ ವ್ಯಾಪಾರಗಳು ನಡೆದಿರಲು, ಬಾದಶಹನ ಸವಾರಿಯು ಬಂದು ಸಿಂಹಾಸನವೇರಿತು. ಆಗ ಜನರಲ್ಲುಂಟಾದ ಗಡಿ–ಬಿಡಿ ಗಲಿ–ಬಿಲಿಗಳನ್ನು ವರ್ಣಿಸಲಾಸಲ್ಲ. ಹಿಂಜರಿದು ಕುಳಿತಿದ್ದ ಜನರು ಗಡಬಡಿಸಿ ಎದ್ದರು. ಎದ್ದುನಿಂತವರು ಜನರನ್ನು ತುಳಿಯುತ್ತ ಮುಂದಕ್ಕೆ ಸಾಗಹತ್ತಿದರು. ಪ್ರತಿಯೊಬ್ಬನು ಬೀಳುತ್ತ ಏಳುತ್ತ ಜನರನ್ನು ಸರಿಸಿ ಸಾಗರಬಿದ್ದು ಬಾದಶಹನನ್ನು ನೋಡತೊಡಗಿದರು; ತಮ್ಮಿಂದ ಜನರು ನೊಂದಾರು, ಬೆಂದಾರು ಎಂಬ ಭಾವನೆಯು ಯಾರ ಮನಸ್ಸಿನಲ್ಲಿಯೂ ಉಂಟಾಗಲಿಲ್ಲ. ಮುಗಿಬಿದ್ದು ನೋಡುವ ಅವಸರದಲ್ಲಿ ಜನರ ಕಾಲತುಳತವನ್ನೂ, ನೂಕುನುಗ್ಗಲನ್ನೂ, ಹೊಡೆತ ಬಡತಗಳನ್ನೂ ಯಾರೂ ಲೆಕ್ಕಿಸಲಿಲ್ಲ. ಆಗ ಜನರ ಯೋಗ್ಯತೆಯ ತಾರತಮ್ಯವಿಲ್ಲದಾಯಿತು; ಸ್ವಕೀಯ ಪರಕೀಯ ಭಾವವು ಅಳಿದುಹೋಯಿತು; ಪ್ರತಿಯೊಬ್ಬನು ಬಾದಶಹನ ಮೂರ್ತಿಯನ್ನು ತನ್ನ ದೃಷ್ಟಿಗಳ ದ್ವಾರದಿಂದ ಆಕರ್ಷಿಸಿಕೊಳ್ಳಲಿಕ್ಕೆ ತನ್ನ ಶಕ್ತಿಮೀರಿ ಯತ್ನಿಸುತ್ತಿದ್ದನು. ಆಗ ಹುಡುಗರು–ಹುಪ್ಪಡಿಗಳು ಗದ್ದಲದಲ್ಲಿ ಸಿಕ್ಕು ಕಕ್ಕಾಬಿಕ್ಕಿಯಾಗಿ ಚೀರಹತ್ತಿದವು. ಮುದುಕರು–ತದಕರು ನೂಕು ನುಗ್ಗಲು ತಡೆಯಲಿಕ್ಕೆ ಶಕ್ತಿ ಸಾಲದೆ ಹಾಯಗುಟ್ಟಿದರು, ಅಸೂಯಾಭಾವದ ಸಮಬಲರು ಪರಸ್ಪರ ಹೊಯ್ದಾಡಹತ್ತಿದರು. ಹೀಗೆ ವಿವಿಧ ವ್ಯಾಪಾರಗಳ ಕೋಲಾಹಲವು ನಡೆದು, ಜನರ ಸಂಕಲಿತ ಧ್ವನಿಯು ಆಕಾಶಕ್ಕೆ ಧುಮುಕುವಾಗ ಜನಸಮೂಹವು ಬಾದಶಹನನ್ನು ನೋಡುವ ಭರದಲ್ಲಿ ಕುಸ್ತಿಯು ಕಣದ ಮಧ್ಯದ ಕಡೆಗೆ ಸಾಗಿರಲು, ಕ್ರೂರರಾದ ಮುಸಲ್ಮಾನ ಸಿಪಾಯಿಗಳು ಗರ್ಜಿಸಿ ಹೊಡೆದು ಜನರನ್ನು ಹಿಂದಕ್ಕೆ ಸರಿಸಹತ್ತಿದರು. ಸಿಪಾಯಿಗಳ ಆಗಿನ ಉದ್ಧಾಮತನವನ್ನು ನೋಡಿದರೆ, ಅವರಿಗೆ ಕನ್ನಡಿಗರ

ಲಕ್ಷವಿದ್ದಂತೆ ತೋರಲಿಲ್ಲ, ಅವರು ಪಶುಗಳಂತೆ ಜನರನ್ನು ನಡಿಸಿಕೊಳ್ಳ ಹತ್ತಿದರು. ಬಾಯಿಗೆ ಬಂದಹಾಗೆ ಬಯ್ಯುಹತ್ತಿದರು; ಇದನ್ನು ನೋಡಿ ಸ್ವಾಭಿಮಾನಿಗಳಾದ ಕೆಲವು ಕನ್ನಡಗಿರು ಸಂತಾಪಗೊಳ್ಳುವರು; ಕೆಲವರು ಸಂತಾಪದ ಭರದಲ್ಲಿ ಮುಸಲ್ಮಾನ ಸಿಪಾಯಿಗಳ ಕೈಯನ್ನು ಹಿಡಿದು ಅವರ ಸಮಾಚಾರ ತಕ್ಕೊಳ್ಳಲಿಕ್ಕೆ ಮುಂದುವರಿಯುತ್ತಿದ್ದರು; ಆದರೆ ಸಾಮಾನ್ಯವಾಗಿ ಕನ್ನಡಿಗರು ''ನಮಗೇಕೆ ಬೇಕು ಒಣ ಉಸಾಬರಿ'' ಎಂಬ ಮಂತ್ರವನ್ನು ಜಪಿಸುತ್ತ ಬಂದು, ಹೇಡಿತನದ ಸಿದ್ಧಿಯನ್ನು ಪಡೆದವರಾದ್ದರಿಂದ, ಸ್ವಾಭಿಮಾನದ ತಮ್ಮ ಆ ಬಂಧುಗಳ ಬೆಂಬಲಕ್ಕೆ ಹೋಗದಾದರು. ಆದರಿಂದ ಕನ್ನಡಿಗರ ಅಪರೂಪ ಸ್ವಾಭಿಮಾನಕ್ಕೆ ಪಶ್ಚಾತ್ತಾಪದ ಸೆಕೆಬಡಿದು, ಅದು ಸ್ವಜನರ ನಗೆಗೂ ಮುಸಲ್ಮಾನರ ಕೋಪಾಟೋಪದ ಅಬ್ಬರಕ್ಕೂ ಈಡಾಗಲಾರದೆ ಪೂರ್ಣ ಭಂಗಪಟ್ಟು, ಯವನರ ಹಾವಳಿಗೆ ಹಾದಿಯ ಕೊಟ್ಟಿತು. ಕ್ಷಣದಲ್ಲಿ ಜನರು ಸರಿದು ತೆಪ್ಪಗೆ ಕುಳಿತುಕೊಂಡರು! ಸ್ವಾಭಿಮಾನಶೂನ್ಯರಿಗಾಗತಕ್ಕ ಫಲವು ಇದೇ ಸರಿ. ನಾವು ಬಡಿಸಿಕೊಳ್ಳುವವರು, ಮುಸಲ್ಮಾನರು ಬಡಿಯುವವರು; ನಾವು ಒದಿಸಿಕೊಳ್ಳುವವರು, ಮುಸಲ್ಮಾನರು ಒದಿಯತಕ್ಕವರು ಎಂಬ ಭಾವನೆಯು ಕನ್ನಡಿಗರಲ್ಲಿ ಉಂಟಾಗತೊಡಗಿತ್ತು, ಅವರಲ್ಲಿ ಒಕ್ಕಟ್ಟು ಇದ್ದಿಲ್ಲ. ತಮ್ಮೊಳಗಿನವನಾವನಾದರೂ ಒಗರಿನಿಂದ ಮುಂದುವರೆದು ಭಂಗಿತನಾದರೆ ಅವರು— ''ಇವನು ಇಲ್ಲದ ಡೌಲಿನವನು, ಹತ್ತು ಜನರಂತೆ ಸುಮ್ಮನೆ ನೋಡಿಹೋದರಾಯಿತು. ನಾವೇನು ಕಾಲಕಳೆಯಲಿಕ್ಕೆ ಬಂದಿರುವೆವೆ ?'' ಎಂದು ಆಡಿಕೊಳ್ಳುವದು; ಹೀಗೆ ಆಡಿಕೊಳ್ಳುವದು ತಮ್ಮ ಜಾಣತನದ ಲಕ್ಷಣವೆಂದು ತಿಳಿದು, ಹೋದಲ್ಲಿ ತಮ್ಮ ಜಾಣತನವನ್ನು ಮೆರಿಸುವದಕ್ಕಾಗಿ ತಮ್ಮವರನ್ನು ನಿಂದಿಸತೊಡಗುವರು! ಇರಲಿ, ಹೀಗೆ ಸೋತವರಾದ ಕನ್ನಡಿಗರು ಗೆದ್ದವರಾದ ಮುಸಲ್ಮಾನರ ಬಲಾತ್ಕಾರಕ್ಕೆ ಒಳಗಾಗಿಯೂ, ಹೇಡಿತನದಿಂದ ಅದನ್ನು ಬಲಾತ್ಕಾರವೆಂದು ಭಾವಿಸದೆ, ಮುಸಲ್ಮಾನರ ವಿಲಕ್ಷಣ ಸಾಮರ್ಥ್ಯವೆಂದು ತಿಳಿಯುತ್ತಿದ್ದರು. ಹೀಗಿರುವಾಗ ಸಿಂಹಾಸನದ ಮೇಲೆ ಕುಳಿತ ಮಹಮ್ಮದನು ಕಾಸಿಮನ ಕಡೆಗೆ ನೋಡಲು, ಕಾಸಿಮನು ಉದ್ದಾಮತನದಿಂದ ಕುಸ್ತಿಯ ಕಣದಲ್ಲಿ ಬಂದು ಜನರನ್ನು ಕುರಿತು ಸೊಕ್ಕಿನಿಂದ ''ಎಚ್ಚರಿಕೆ, ಕುಸ್ತಿಯು ನಡೆದಾಗ ಯಾರಾದರೂ ಪಕ್ಷಕಟ್ಟಿ ನಡುವೆ ಎದ್ದರೆ ತುಂಡರಿಸಿಬಿಟ್ಟೇವು! ಬಾದಶಹರ ಚಿತ್ತವು ಕ್ಷೋಭಿಸದಂತೆ ಎಚ್ಚರಪಡಿರಿ. ಗದ್ದಲಗಿದ್ದಲ ಮಾಡಬೇಡಿರಿ. ನಮ್ಮ ಮಲಿಕನಾಯಕನ ಸಾಮರ್ಥ್ಯವು ಸಾಮಾನ್ಯವಾದದ್ದಲ್ಲ, ಆತನು ಕ್ಷಣದಲ್ಲಿ ಈ ಸೊಟ್ಟ ಮಲ್ಲನನ್ನು ನೆಲಕ್ಕೆ ಕೆಡವಿ ಎದೆಯಮೇಲೆ ಕುಳಿತುಕೊಳ್ಳುವನು. ಆಯುಷ್ಯವು ತುಂಬಿ ಬಂದದ್ದರಿಂದಲೆ ಮಲ್ಲನಿಗೆ ನಮ್ಮ ಮಲಿಕಸಾಹೇಬನೊಡನೆ ಕಾದುವ ದುರ್ಬುದ್ಧಿಯುಂಟಾಗಿದೆ!! ನಮ್ಮ ಮುಂದೆ ನಿಮ್ಮ ಹೇಡಿ ಹಿಂದುಗಳ ಪಾಡೇನು? ಇಂದಿನ ಮಲ್ಲಯುದ್ಧದ ವಿಶೇಷ ನಿಯಮವನ್ನು ಹೇಳುವೆನು ಕೇಳಿರಿ. ಎದೆಯಮೇಲೆ ಕುಳಿತವನು ನೆಲಕ್ಕೆ ಬಿದ್ದವನ ಎದೆಗೆ ಕಠಾರಿಯಿಂದ ಇರಿದು ಪ್ರಾಣಹರಣ ಮಾಡತಕ್ಕದ್ದು! ಈ ಮಾತಿನ ವಿಚಾರವನ್ನು ಮಾಡಿ ಮಲ್ಲನು ಈಗ ಬೇಕಾದರೆ ನಮ್ಮ ಮಲಿಕನಾಯಬನಿಗೆ ಶರಣುಹೊಡೆದು ಹೊರಟುಹೋಗಲಿ'' ಎಂದು ನುಡಿದು, ಒಂದು ಕಠಾರಿಯನ್ನು ಒಬ್ಬ ಯವನ ಸಿಪಾಯಿಯ ಕೈಯಲ್ಲಿ ಕೊಟ್ಟು ನಿಲ್ಲಿಸಿ, ತಾನು ಮಲಿಕನಾಯಬನನ್ನು ಕೈಹಿಡಿದು ಕರಕೊಂಡುಬಂದು ಕಣದಲ್ಲಿ ಬಿಟ್ಟನು.

ಮಲಿಕನಾಯಬನ ಸಾಮರ್ಥ್ಯದ ವರ್ಣನವನ್ನು ನಾವು ಹಿಂದೆ ಮಾಡೇ ಮಾಡಿರುವೆವು. ಈಗ ಆ ಯವನ ಜಟ್ಟಿಯು ಸೈಲಾದ ತೆಳ್ಳನ್ನ ನಿಲುವಂಗಿಯನ್ನು ಹಾಕಿಕೊಂಡು, ಬಕ್ಕತಲೆಯಿಂದ ಕಣದಲ್ಲಿ ಬಂದುನಿಂತಿದ್ದನು. ಆ ತರುಣನು ಜನರ ಕೌತುಕಕ್ಕೆ ಪಾತ್ರನಾದ ವೀರನಿದ್ದನೆಂದು ಒಪ್ಪಬೇಕಾಗುವದು. ಮೊದಲೇ ಮುಸಲ್ಮಾನರ ಪಕ್ಷವು ಜಯಶಾಲಿಯಾದುದು. ಆದರಲ್ಲಿ ಪ್ರತ್ಯಕ್ಷ ಬಾದಶಹನು ತನ್ನ ದರ್ಪವನ್ನು ಕನ್ನಡಿಗರ ಮೇಲೆ ಕೂಡಿಸುವದಕ್ಕಾಗಿ ಬುದ್ಧಿ ಪೂರ್ವಕವಾಗಿ ಮಲಿಕನಿಗೆ ಬೆಂಬಲವಾಗಿ ಬಂದವನು; ಅಂದ ಬಳಿಕ ಕೇಳುವದೇನು? ಮಲಿಕನ ಸಿರಿಗೆ ಸೀಮೆಯಿಲ್ಲದಾಗಿತ್ತು ನಮ್ಮ ಬಡವನಾದ ಅನಾಥ ಮಲ್ಲನ ಪಕ್ಷಗಟ್ಟಿ ಅವನನ್ನು ಇಷ್ಟು ಉದ್ದಾಮತನದಿಂದ ಯಾರು ಕರತಂದು ಕಣದಲ್ಲಿ ನಿಲ್ಲಿಸಬೇಕು ? ಎಲ್ಲ ಕನ್ನಡಿಗರು ಗೆದ್ದ ಎತ್ತಿನ ಬಾಲ ಹಿಡಿಯಲಿಕ್ಕೆ ಮೆಚ್ಚಿದವರಾಗಿದ್ದರು. ಮಲ್ಲನ ವೀರಾವೇಶದಿಂದ, ಹಾಗು ಗಾಯಕಿಯ ದಿಟ್ಟತನದ ಸ್ವಾಭಿಮಾನದಿಂದ ಕನ್ನಡಿಗರ ಆವೇಶ ಸ್ವಾಭಿಮಾನಗಳು ಏನೋ ಅಲ್ಪಸ್ವಲ್ಪ ಜಾಗ್ರತವಾದರೂ, ಅವು ಈಗಿನ ಮುಸಲ್ಮಾನರ ಪ್ರತ್ಯಕ್ಷವಾದ ಅಬ್ಬರದಲ್ಲಿ ಅಡಗಿಹೋಗಿ, ಆ ಪುಕ್ಕ ಕನ್ನಡಿಗರನ್ನು ಹೇಡಿತನವು ಮುಸುಕಿತು. ಒಬ್ಬನೂ ಮಲ್ಲನನ್ನು ಮೇಲುಗಟ್ಟಿ ಮುಂದಕ್ಕೆ ಬಾರದಾದನು. ಕಣದಲ್ಲಿ ತನ್ನ ಮಾರ್ಗವನ್ನು ನೋಡುತ್ತ ನಿಂತಿದ್ದ ತನ್ನ ಪ್ರತಿಪಕ್ಷಿಯಾದ ಮಲಿಕನಿಗೆ ಎದುರಾಗುವದಕ್ಕಾಗಿ ವೀರ ಮಲ್ಲನು ತಟ್ಟನೆ ಎದ್ದು ಇಳಗಂಬಳಿಯ ಮುಸುಕಿನಿಂದ ರಾಹುವನ್ನು ಸಾಧಿಸಿ ಯಾವಾಗೋ ಕಣದಲ್ಲಿ ನಿಂತುಕೊಂಡಿದ್ದನು. ತಮ್ಮ ಮಲಿಕನಿಗೆ ಎದುರಾಗದೆ ಹೀಗೆ ಎತ್ತೋ ಮೋರೆಮಾಡಿಕೊಂಡು ನಿಂತಿದ್ದ ಮಲ್ಲನನ್ನು ನೋಡಿ ಒಬ್ಬ ತಲೆ ತಿರುಕ ಮುಸಲ್ಮಾನನು ಕುಳಿತವನು ಎದ್ದುಬಂದು ಉದ್ಧಟತನದಿಂದ ಮಲ್ಲನ ರಟ್ಟೆಯನ್ನು ಹಿಡಿದು– ''ಏ ಬದಮಾಸ! ನೀನೇನು ಜಟ್ಟಿಯೋ ದನಕಾಯುವವನೋ? ಹೀಗೇಕೆ ನಿಂತೆ?'' ಎಂದು ಗದ್ದರಿಸಿ ಜೋಲಿಹೊಡೆಯಲು, ನೋಡಲಿಕ್ಕೆ ಕುಳಿತ ಮಂದಿಯೊಳಗಿಂದ ಒಬ್ಬ ಗೊಂಗಡಿಯ ಮುಸುಕಿನವನು ಸಿಟ್ಟಿನಿಂದ ಎದ್ದುಬಂದು ಆ ಉದ್ಧಟ ಮುಸಲ್ಮಾನನನ್ನು ಹಿಂದಕ್ಕೆ ದೂಡಿ ''ಯಾಕಲೇ ಮಂಗಾ, ನಡುವೆ ಯಾರೂ ಏಳಬಾರದೆಂದು ಹೇಳಿದ್ದರ ಅರಿವಿಲ್ಲವೆ? ಸರಿ ಹಿಂದಕ್ಕೆ; ಇಲ್ಲದಿದ್ದರೆ. ಈ ಕಠಾರಿಯು'' ಎಂದು ಕಂಬಳಿಯು ಮುಸುಕಿನೊಳಗಿಂದ ಕಠಾರಿಯನ್ನು ಎತ್ತಲು, ಮುಸಲ್ಮಾನರು ಕ್ಷೋಭಿಸಿದರು. ಇತ್ತ ಕನ್ನಡಿಗರಾದರೂ ಜಾಗರೂಕರಾಗಿ ಕುಳಿತಲ್ಲಿಂದಲೇ— ''ಏನು ನೋಡುವಿರಲೇ? ದೂಡಿರಿ ಆ ಮೂಳನನ್ನು! ಗದ್ದಲ ಮಾಡಿದರೆ ಪಾರಾಗಲಿಕ್ಕಿಲ್ಲ!'' ಎಂದು ತಮ್ಮ ತಮ್ಮ ಶಸ್ತ್ರಗಳನ್ನು ಹಿರಿದರು. ಇದನ್ನು ನೋಡಿ ಅತ್ತ ಮುಸಲ್ಮಾನ ಸೈನಿಕರು ಶಸ್ತ್ರ ಹಿರಿಯಲು, ಇತ್ತ ದೇವರಾಜನ ಸೈನಿಕರೂ ಶಸ್ತ್ರ ಹಿರಿದರು. ಒಬ್ಬನು ಹುಯ್ ಅಂದರಾಯಿತು, ಎಲ್ಲರೂ ಹುಯ್ ಎಂದು ಗಲಭೆ ಮಾಡಲಿಕ್ಕೆ ಕನ್ನಡಿಗರು ಹಿಂದೆ ಮುಂದೆ ನೋಡುವವರಲ್ಲ. ಅದರಂತೆ ಕನ್ನಡಿಗರು ಮಲ್ಲನ ಪಕ್ಷಗಟ್ಟಿ ವಿಲಕ್ಷಣ ಗೊಂದಲವೆಬ್ಬಿಸಿದರು. ಕನ್ನಡಿಗರ ಈ ದಿಟ್ಟತನವನ್ನು ನೋಡಿ ಬಾದಶಹನು ಬೆರಗಾದನು. ಆರಂಭಶೂರರ ಈ ಗೊಂದಲವು ವಿಶೇಷ ಅರ್ಥವಿಲ್ಲದ್ದಾಗಿದ್ದರೂ, ಕನ್ನಡಿಗರ ಸ್ವಭಾವವರಿಯದ ಮುಹಮ್ಮದನಿಗೆ ಅದು ಅರ್ಥವುಳ್ಳದ್ದಾಗಿ ತೋರಿತು. ಕನ್ನಡಿಗರ ಹೇಸಿ ಅಂತಃಕಲಹ, ಕ್ಷುದ್ರತನದ ಜಾತಿ ಮತ್ಸರ,

ಕೆಲಸಕ್ಕೆ ಬಾರದ ಸ್ವಾರ್ಥಪರಾಯಣತೆ, ಹುರುಳಿಲ್ಲದೆ ಶೀಘ್ರಕೋಪ ಮುಂತಾದ ಗುಣಗಳ ಪರಿಚಯವು ಮಹಮ್ಮದನಿಗಿದ್ದಿಲ್ಲ. ಆ ನಿರ್ಧಾರದ ಸ್ವಭಾವದ ಕಠಿಣ ಹೃದಯದ ವೀರನು ತನ್ನ ಸ್ವಭಾವದ ಸ್ಥಿರತೆಯನ್ನು ಕನ್ನಡಿಗರಲ್ಲಿ ಆರೋಪಿಸಿ ವಿಚಾರಕ್ಕೊಳಗಾದನು. ಮೇಲಾಗಿ ಆತನು ನ್ಯಾಯಪ್ರಿಯನೂ, ಉದಾರಚರಿತನೂ ಆಗಿದ್ದನು. ಹೀಗೆ ಉದ್ಧಟತನದಿಂದ ತಮ್ಮವನು ನಡುವೆ ಎದ್ದು ಮಲ್ಲನ ಮೇಲೆ ಹೋದದ್ದು ಆತನಿಗೆ ನ್ಯಾಯವಾಗಿ ತೋರಲಿಲ್ಲ. ಆದ್ದರಿಂದ ಆತನು ತನ್ನ ಸಿಂಹಾಸನದಿಂದ ಎದ್ದು ತನ್ನ ಜನರನ್ನು ಗದ್ದರಿಸಿ ಸುಮ್ಮನೆ ಮಾಡಿದನು. ಮಹಮ್ಮದನು ಮಹಾ ವರ್ಚಸ್ವಿಯು. ಆತನ ಆಜ್ಞೆಯ ಪರಿಣಾಮವು ಹಿಂದೂಜನರ ಮೇಲೆಯೂ ಆಯಿತು. ಎಲ್ಲರೂ ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಂಡರು. ಕುಸ್ತಿಯಾಗುವದರ ಬದಲು, ಹಿಂದೂ–ಮುಸಲ್ಮಾನರ ಕಾಳಗವೆಲ್ಲಿ ಆಗುವದೋ ಎಂದು ಎಷ್ಟೋ ಜನರು ಅಂಜಿದ್ದರು; ಆದರೆ, ಅತ್ಯಂತ ದರ್ಪಶಾಲಿಯಾದ ಮಹಮ್ಮದನ ಭಯದಿಂದ ಜನಕ್ಷೋಭವು ಅಡಗಿ, ಪುನಃ ಮಲ್ಲಯುದ್ಧದ ಕಡೆಗೆ ಜನರ ಲಕ್ಷವು ತಿರುಗಿತು.

ಇಷ್ಟು ಗದ್ದಲವಾದರೂ ಮಲ್ಲನು ರಾಹುವನ್ನು ಸಾಧಿಸಿ ನಿಂತುಕೊಂಡಿದ್ದ ತನ್ನ ಸ್ಥಳವನ್ನು ಬಿಟ್ಟು ಉಲುಕಿದ್ದಿಲ್ಲ. ಅತ್ತ ಮಲಿಕನೂ ತನ್ನ ಸ್ಥಳದಿಂದ ಕದಲದೆ ನಿಂತುಕೊಂಡಿದ್ದನು. ಹೀಗೆ ಸ್ವಲ್ಪ ಕಾಲವು ಕ್ರಮಿಸುತ್ತಿರಲು, ಮಲಿಕನು ಸಿಟ್ಟಿನಿಂದ ತನ್ನ ಅಂಗಿಯನ್ನು ತೆಗೆದು ಚೆಲ್ಲಿ ಸಡ್ಡುಹೊಡೆದು ಮಲ್ಲನ ಮುಂದೆ ಬಂದು ನಿಂತುಕೊಂಡನು. ಅಷ್ಟರಲ್ಲಿ ಮಲ್ಲನು ತನ್ನ ಗೊಂಗಡಿಯನ್ನು ದೂರ ಚೆಲ್ಲಿಕೊಟ್ಟು ಸಡ್ಡು ಹೊಡೆದು ಸಿದ್ಧನಾಗಿದ್ದನು. ಆ ಇಬ್ಬರು ಜಟ್ಟಿಗಳು ಚೆಲ್ಲಿಕೊಟ್ಟ ಅಂಗಿ–ಕಂಬಳಿಗಳನ್ನು ಅವರವರ ಅನುಯಾಯಿಗಳು ಆದರದಿಂದ ತಕ್ಕೊಂಡು ಇಟ್ಟುಕೊಂಡರು. ಕಾಸೀಮನು ನಿಲ್ಲಿಸಿದ ಒಬ್ಬ ಮುಸಲ್ಮಾನನು ಮಲಿಕನ ಸಲುವಾಗಿ ಒಂದು ಕಠಾರಿಯನ್ನು ಹಿಡಕೊಂಡು ಕಣದಲ್ಲಿ ದೂರ ನಿಂತಿದ್ದನು. ಇತ್ತ ಆ ಗೊಂಗಡಿಯವನು ಮಲ್ಲನ ಸಲುವಾಗಿ ತನ್ನ ಕಠಾರಿಯನ್ನು ಹಿಡಿದುಕೊಂಡು ಒತ್ತಟ್ಟಿಗೆ ದೂರ ನಿಂತಿದ್ದನು. ಇವರಿಬ್ಬರ ಹೊರತು ಬೇರೆ ಯಾರೂ ಕಣದಲ್ಲಿ ಸುಳಿದಾಡುತ್ತಿದ್ದಿಲ್ಲ. ಆ ಇಬ್ಬರು ಮಲ್ಲರು ಮಲ್ಲಯುದ್ಧಕ್ಕೆ ಸನ್ನದ್ಧರಾಗಿ ನಿಂತುಕೊಳ್ಳಲು, ಪ್ರೇಕ್ಷಕರಲ್ಲಿ ಎರಡು ಪಂಗಡಗಳಾದವು. ಕೆಲವರು ಮಲಿಕನ ಪಕ್ಷದವರಾದರು; ಕೆಲವರು ಮಲ್ಲನ ಪಕ್ಷದವರಾದರು. ಮಲಿಕನ ಪಕ್ಷದವರಲ್ಲಿ ಮುಸಲ್ಮಾನರು ಹೆಚ್ಚು, ಮಲ್ಲನ ಪಕ್ಷದವರಲ್ಲಿ ಹಿಂದೂಜನರು ಹೆಚ್ಚು ಎಂದು ಹೇಳುವ ಕಾರಣವಿಲ್ಲ. ಇಲ್ಲಿ ಜಾತಿಮತ್ಸರಕ್ಕೆ ಆಸ್ಪದವಿದ್ದದ್ದರಿಂದ ಹಿಂದು–ಮುಸಲ್ಮಾನರು ತಮ್ಮ ತಮ್ಮ ಜಾತಿಯ ಜಟ್ಟಿಗಳ ಪಕ್ಷಗಟ್ಟಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಕುಸ್ತಿ ಯಾಡುವವರಿಬ್ಬರೂ ನಮಗೆ ಸಂಬಂಧಿಕರಾಗಿರದಿದ್ದರೂ ಕುಸ್ತಿಯನೋಡುವ ನಮ್ಮ ಪಕ್ಷಪಾತವು ಸ್ವಾಭಾವಿಕವಾಗಿಯೇ ಯಾವನಾದರೊಬ್ಬನ ಕಡೆಗೆ ಆಗುತ್ತಿರುತ್ತದೆ; ಅಂದರೆ ಇಬ್ಬರಲ್ಲಿ ಒಬ್ಬನು ನಮ್ಮವನಾಗುತ್ತಾನೆ, ಇನ್ನೊಬ್ಬನು ಹೊರಗಿನವನಾಗುತ್ತಾನೆ. ನಮ್ಮವನು ಒಗದರೆ ನಮಗೆ ಸಮಾಧಾನ, ಬಿದ್ದರೆ ಅಸಮಾಧಾನ. ಹೀಗೆ ನಮ್ಮ ಮನಸ್ಸು ತನ್ನಷ್ಟಕ್ಕೆ ತಾನೇ ನಿರಾಲೋಚಿತವಾಗಿ ಒಂದು ಪಕ್ಷಗಟ್ಟಿ ಪೇಚಾಡಲಿಕ್ಕೆ ಹತ್ತುತ್ತದೆ. ಹೀಗಾಗಲಿಕ್ಕೆ ನಮ್ಮಲ್ಲಿಯ ನಿಸ್ಪೃಹತೆಯ ಅಭಾವವೇ ಕಾರಣವು.

ಜ್ಞಾನಿಗಳೊಬ್ಬರಿಗೆ ಮಾತ್ರ ಈ ನಿಸ್ಪೃಹತೆಯು ಸಾಧಿಸುವದು. ಸ್ಪೃಹತೆಯೇ ಅಜ್ಞಾನದ ಲಕ್ಷಣವು. ಇರಲಿ, ಮೇಲೆ ಹೇಳಿದಂತೆ ಪ್ರಾಮುಖ್ಯವಾಗಿ ಮುಸಲ್ಮಾನರು ಮಲಿಕನ ಪಕ್ಷದವರೂ, ಹಿಂದೂಜನರು ಮಲ್ಲನ ಪಕ್ಷದವರೂ ಆಗಿ, ತಮ್ಮತಮ್ಮ ಪಕ್ಷಕ್ಕೆ ಜಯವು ಹೇಗಾದೀತೆಂದು ಚಿಂತಿಸುತ್ತ ಕುಸ್ತಿಯನ್ನು ನೋಡಹತ್ತಿದರು. ಪಕ್ಷಪಾತವಿಲ್ಲದೆ ನೋಡುವವರಿಗೆ ಇಬ್ಬರು ವೀರರೂ ಶ್ಲಾಘನೀಯರಾಗಿ ತೋರುತ್ತಿದ್ದರು. ಅವರಿಗೆ ಒಬ್ಬನಲ್ಲಿ ಒಂದು ಗುಣವು ವಿಶೇಷವಾಗಿ ತೋರುತ್ತಿದ್ದರೆ, ಮತ್ತೊಬ್ಬನಲ್ಲಿ ಮತ್ತೊಂದು ಗುಣವು ವಿಶೇಷವಾಗಿ ತೋರುತ್ತಿತ್ತು. ಮಲಿಕನ ಪುಷ್ಟದೇಹವು ಮಹಾಬಲಿಷ್ಠವಾಗಿ ತೋರುತ್ತಿದ್ದರೆ, ತೆಳ್ಳನ್ನ ಮಲ್ಲನು ಮಹಾಚಪಲನಾಗಿ ತೋರುತ್ತಿದ್ದನು. ಮಲಿಕನು ತನ್ನ ಅಂಗಸಾಮರ್ಥ್ಯದಿಂದ ಮಲ್ಲನನ್ನು ಹಿಂಡಿಹಿಪ್ಪಿ ಮಾಡುವನೆಂದು ತೋರಿದರೆ, ಮಲ್ಲನು ತನ್ನ ಚಾಪಲ್ಯದ ಹಿಡಿತದಿಂದ ಸ್ಥೂಲಕಾಯದ ಮಲಿಕನನ್ನು ಚೆಂಡಿನಂತೆ ಹಾರಿಸಿ ಒಗೆಯುವನೆನ್ನುವ ಹಾಗೆ ತೋರುತ್ತಿದ್ದನು. ಮಲಿಕನು ಗೌರವಕಾಯನೂ, ಮಲ್ಲನು ನಸುಗೆಂಪು ಮೈಬಣ್ಣದವನು ಇದ್ದರೂ ಅವರ ಮುಖಕಾಂತಿಯು ಅವರ ಅಲೌಕಿಕ ಪೌರುಷವನ್ನು ಪ್ರಕಟಿಸುತ್ತಿತ್ತು. ಅವರಿಬ್ಬರು ಪರಸ್ಪರರನ್ನು ಎದುರಿಸಿ ರಭಸದಿಂದ ತೋಳು–ತೊಡೆಗಳನ್ನು ತಟ್ಟಿಕೊಂಡು ಮುಜುರೆ ಮಾಡಿ ಕೈಗೆ ಕೈಕೊಟ್ಟು ಕಾದಹತ್ತಲು, ಜನರ ಚಿತ್ತವೃತ್ತಿಗಳು ತಲ್ಲೀನವಾಗಿ ಹೋದವು. ಆ ವೀರರ ಕುಸ್ತಿ ನೋಡುವಲ್ಲಿ ಜನರು ಅನ್ಯವಿಚಾರಗಳನ್ನು ಮರೆತುಬಿಟ್ಟರು.

ಹೀಗೆ ಆ ಉಭಯವೀರರು ಜನಮನ ಆಹ್ಲಾದಕರಾಗಿಯೂ, ವೀರ ಜನಸಮ್ಮತರಾಗಿಯೂ ಕಾದುತ್ತಿರುವಾಗ ಬರಬರುತ್ತ ಮಲಿಕನ ಕಸುವು ಹೆಚ್ಚಾಗುತ್ತ ಬಂದಂತೆಯೂ, ಮಲ್ಲನ ಕಸುವು ಕಡಿಮೆಯಾಗುತ್ತ ಬಂದಂತೆಯೂ ತೋರಿತು. ಇದರಿಂದ ಮುಸಲ್ಮಾನರು ಉತ್ಸಾಹಗೊಂಡರು, ಹಿಂದೂ ಜನರು ಚಿಂತೆಗೊಳಗಾದರು. ಈ ಮಲ್ಲಯುದ್ಧದ ಜಯಾಪಜಯಗಳ ಪರಿಣಾಮಗಳು ಬಹುದೂರದವರೆಗೆ ಮುಟ್ಟತಕ್ಕವಾದದ್ದರಿಂದ, ಮಲ್ಲನ ದೌರ್ಬಲ್ಯಕ್ಕಾಗಿ ಹಿಂದೂಜನರ ಹೃದಯಗಳು ನಡುಗಹತ್ತಿದವು; ಆದರೂ ಮಲ್ಲನು ಮಲ್ಲಿಕನಿಗೆ ಸೊಪ್ಪುಹಾಕುವ ಹಾಗೆ ತೋರಲಿಲ್ಲ. ಒಂದೆರಡು ಒಳ್ಳೆಯ ಹಿಡಿತಗಳಿಂದ ಮಲಿಕನನ್ನು ಬೊಕ್ಕ ಬೋರಲು ಕೆಡವಿ ಮಲ್ಲನು ಜನರಿಂದ ಹೊಗಳಿಸಿಕೊಂಡನು. ಮಲಿಕನು ಒಂದೆರಡು ಸಾರೆ ಮಲ್ಲನನ್ನು ನಿಡಿಚಾಪಾಗಿ ಕೆಡವಿದನು. ಆ ವೀರರು ಒಬ್ಬರ ಹಿಡಿತಗಳನ್ನು ಮತ್ತೊಬ್ಬರು ತಪ್ಪಿಸಿಕೊಳ್ಳುವರು; ಒಬ್ಬನು ಮತ್ತೊಬ್ಬನನ್ನು ನೆಲಕಟ್ಟಿಸುವನು; ಒಬ್ಬನ ಕೈಯೊಳಗಿಂದ ಮತ್ತೊಬ್ಬನು ಸಳಕ್ಕನೆ ಪಾರಾಗುವನು; ಒಬ್ಬನು ಮತ್ತೊಬ್ಬನನ್ನು ನೆಲಕ್ಕಪ್ಪಳಿಸುವನು. ಹೀಗಾದರೂ ಸೋಲುಗೆಲುವುಗಳ ನಿರ್ಣಯವಾಗ ಲೊಲ್ಲದು. ಉಭಯ ವೀರರನ್ನು, ವಿಶೇಷವಾಗಿ ಮಲ್ಲಣ್ಣನನ್ನು ಜನರು ಶ್ಲಾಘಿಸಹತ್ತಿದರು; ಯಾಕಂದರೆ ಮಲ್ಲನು ನೋಡಲಿಕ್ಕೆ ಪುಡಿಯಾಳಾಗಿ ತೋರುತ್ತಿದ್ದು, ಮಲಿಕನಂಥ ಮಹಾಬಲಿಷ್ಠನೊಡನೆ ಕಾದುತ್ತಿದ್ದನು! ಹೀಗೆ ಸಮಬಲರಾಗಿ ಇಬ್ಬರೂ ಕಾದುತ್ತಿರುವಾಗ ಮಹಾಬಲಶಾಲಿಯಾದ ಮಲಿಕನು ಮಲ್ಲನನ್ನು ಹಿಡಿದು ಮಹಾಸಾಮರ್ಥ್ಯದಿಂದ ನೆಲಕ್ಕೆ ಕೆಡವಿದನು. ಇದರಿಂದ ಮಲ್ಲನ ಸತ್ವವು ಕಡಿಮೆಯಾದಂತೆ ತೋರಿತು. ಕನ್ನಡಿಗರ ಹೃದಯಗಳು ಅಧೈರ್ಯದಿಂದ ಹಾರಹತ್ತಿದವು. ಆಗ ಜನಸಮೂಹದಲ್ಲೊತ್ತಟ್ಟಿಗೆ ಕುಳಿತಿದ್ದ ಗಾಯಕಿಯು

ಮಹಾಚಿಂತೆಯಿಂದ ಮಲ್ಲನನ್ನು ನೋಡುತ್ತಿದ್ದಳು. ''ಬಿದ್ದನು ಬಿದ್ದನು, ಮಲ್ಲನು ಬಿದ್ದಹಾಗೆಯೇ ಸರಿ'' ಎಂದು ಮುಸಲ್ಮಾನರು ಕೂಗತೊಡಗಿದರು. ಮೊದಲು ಗೊತ್ತಾದಂತೆ ಮಲಿಕನ ಕೈಗೆ ಇನ್ನು ಕಠಾರಿಯನ್ನು ಕೊಡಬೇಕೆಂದು ಯವನನು ದಾರಿಯನ್ನು ನೋಡತೊಡಗಿದ್ದನು. ಮಲ್ಲನು ನಿಶ್ಚಯವಾಗಿ ಬೀಳುವನೆಂಬ ನಂಬಿಗೆಯು ಎಲ್ಲರಿಗೂ ಆಗಿಹೋಗಿತ್ತು. ಈ ಸ್ಥಿತಿಯಲ್ಲಿಯೂ ಮಲಿಕನಿಗೆ ಮಲ್ಲನು ಹಣಿಯದೆ ಬಹಳಹೊತ್ತು ತಡೆದುನಿಂತದ್ದನ್ನು ನೋಡಿ ಜನರು ಅವನನ್ನು ಕೊಂಡಾಡಹತ್ತಿದರು. ''ಇನ್ನೇನು? ಈಗ ಇವನನ್ನು ನೆಲಕ್ಕೆ ಉರುಳಿಸುವೆನು'' ಎಂಬ ಹೆಮ್ಮೆಯಿಂದ ಸೆಟೆಯುತ್ತಿದ್ದ ಮಲಿಕನು, ಪರಿಪರಿಯ ಹಿಡಿತಗಳನ್ನು ಯೋಚಿಸಿ ಕೈಸಾಗದೆ ಎಣಿಕೆ ಹಾಕಹತ್ತಿದನು; ಆದರೂ ಇನ್ನು ಮಲ್ಲನ ಏಳಿಗೆಯಾದೀತೆಂದು ಮಾತ್ರ ಯಾರಿಗೂ ತೋರುತ್ತಿದ್ದಿಲ್ಲ. ಅಷ್ಟರಲ್ಲಿ ಮಲ್ಲನು ಏನುಮಾಡಿದನೋ ತಿಳಿಯಲಿಲ್ಲ. ಆತನು ಕ್ಷಣದಲ್ಲಿ ಮಲಿಕನನ್ನು ನೆಲಕಟ್ಟಿಸಿ ತಾನು ಮೇಲೆಯಾದನು. ಕೂಡಲೆ ಕನ್ನಡಿಗರು ಚಪ್ಪಾಳೆ ಬಾರಿಸಿದರು. ಕಾದುವದರಲ್ಲಿ ಮಲ್ಲನ ಕೈ ಮೇಲಾಗಲು, ಕನ್ನಡಿಗರ ಉತ್ಸಾಹವು ಹೆಚ್ಚಿ ಅವರು ಜಯನಾದ ಮಾಡಹತ್ತಿದರು. ಮಲ್ಲನನ್ನು ಪ್ರೋತ್ಸಾಹಿಸುವ ಕೂಗುಗಳಿಂದ ಮಲ್ಲನ ಉತ್ಸಾಹವು ಹೆಚ್ಚತೊಡಗಿತು. ಆನಂದಪರವಶರಾದ ಕನ್ನಡಿಗರು ಮುಸಲ್ಮಾನರ ಗದ್ದರಿಕೆಗೆ ಸುಮ್ಮನಾಗದಾದರು. ಅವರ ಅಭಿಮಾನವು ಜಾಗ್ರತವಾಗಿ ''ಬಪ್ಪರೆ ಮಲ್ಲಸರ್ಜಾ! ಆನೆಗುಂದಿಗೆ ಕೀರ್ತಿ ತಂದೆ! ಶಾಬಾಸ! ಶಾಬಾಸ!'' ಇತ್ಯಾದಿ ಉತ್ಸಾಹ ವರ್ಧಕ ಶಬ್ದಗಳಿಂದ ಕೂಗಹತ್ತಿದರು. ಮಹಾಬಲಿಷ್ಠನಾದ ಮಲಿಕನಿಗೆ ಏನಾಯಿತೋ, ಯಾವ ಹಿಡಿತದಿಂದವನನ್ನು ಮಲ್ಲಣ್ಣನು ಹಣ್ಣುಮಾಡಿದ್ದನೋ ತಿಳಿಯದು, ಸಮರ್ಥ ಮಲಿಕನು ಬರಬರುತ್ತ ಸಪ್ಪಗಾಗುತ್ತಹೋಗಿ, ಮಲ್ಲನನ್ನು ಒಗೆಯುವದಂತು ಇರಲಿ , ಅವನು ಕೈಯೊಳಗಿಂದ ಹೇಗಾದರೂ ಪಾರಾದರೆ ಸಾಕೆಂದು ಹೆಣಗಹತ್ತಿದನು! ಈ ಗುಟ್ಟು ಮಲ್ಲನಿಗೆ ಗೊತ್ತಾಯಿತು. ಬರಬರುತ್ತ ಅವನ ಬಲವು ಹೆಚ್ಚುತ್ತಹೋಯಿತು. ಗುಣಗ್ರಾಹಿಯಾದ ಮಹಮ್ಮದ ತಘಲಕನು ಮುಕ್ತಕಂಠವಾಗಿ ಮಲ್ಲನನ್ನು ಹೊಗಳಹತ್ತಿದನು. ಇದನ್ನು ನೋಡಿ ಕಾಸಿಮನೇ ಮೊದಲಾದ ಅಸೂಯಾಭಾವದ ಜನರಿಗೆ ಕಷ್ಟವಾಗಹತ್ತಿತು. ಇನ್ನು ಮುಸಲ್ಮಾನರು ಜಗಳ ತೆಗೆಯುವ ಹವಣಿಕೆಯಲ್ಲಿದ್ದರು. ಅಷ್ಟರಲ್ಲಿ ಮಲ್ಲಸರ್ಜನನು ಜನರನ್ನು ಕುರಿತು— ''ವೀರರೇ, ಗದ್ದಲ ಮಾಡಬೇಡಿರಿ. ಇಂಥ ವೀರನೊಡನೆ ಕುಸ್ತಿಯನ್ನು ಹಿಡಿಯುವಪ್ರಸಂಗವು ಈವರೆಗೆ ನನಗೆ ಬಂದಿದ್ದಿಲ್ಲ. ಸ್ವಲ್ಪ ಸಮಾಧಾನದಿಂದ ನೋಡಿರಿ. ಬೀಳುವದು ಏಳುವದು ಯಾರ ಸ್ವತಂತ್ರವೂ ಅಲ್ಲ. ಈ ಯವನ ವೀರನನ್ನು ಮನಃಪೂರ್ವಕವಾಗಿ ನಾನು ಹೊಗಳುವೆನು. ಬಲದಲ್ಲಿ ನನಗಿಂತ ಈತನು ಶ್ರೇಷ್ಠನು' ' ಬಾದಶಹನನ್ನು ನೋಡಿ— ''ನೋಡುತ್ತಿರುವ, ಎಲೆ ಗುಣಗ್ರಾಹಿಯಾದ ತಘಲಕ ಪ್ರಭುವೇ, ನೀನೂ ಕಣ್ದೆರೆದು ನೋಡುತ್ತಿರು. ನಮ್ಮ ಒಡೆಯನಾದ ಹೆಗ್ಗಣ್ಣನು ಪುಂಡನಲ್ಲ, ತುಂಟನಲ್ಲ; ಪುಂಡ–ತುಂಟರ ಗಂಡನು. ಇದು ನೋಡು, ಈ ಹೊಡೆತವು ಹೆಗ್ಗಣ್ಣನು ಕಲಿಸಿದ್ದು'' ಎಂದು ನುಡಿದು, ವೀರ ಮಲಿಕನನ್ನು ಅನಾಯಾಸವಾಗಿ ಹೋಳಿಗೆ ತಿರುವಿಹಾಕಿದಂತೆ ನೆಲಕ್ಕೆ ಅಂಗಾತ ತಿರುವಿಹಾಕಿ ಎದೆಯಮೇಲೆ ಕುಳಿತುಕೊಂಡನು! ಕನ್ನಡಿಗರ ಆಗಿನ ಜಯಘೋಷದಿಂದ ದಶದಿಕ್ಕುಗಳು ತುಂಬಿದವು. ಆಗ ತಘಲಕ ಮಹಮ್ಮದನು ಪರಮಸಂತುಷ್ಟನಾಗಿ— ''ಶಾಬಾಸ!

ಮಲ್ಲಸರ್ಜಾ ಶಾಬಾಸ!! ಈ ತಘಲಕನಲ್ಲಿ ಗುಣಕ್ಕೆ ಮಾತ್ಸರ್ಯವಿಲ್ಲ, ಅದರಂತೆ ದ್ರೋಹಕ್ಕೆ ಅವನಲ್ಲಿ ಕ್ಷಮೆಯೂ ಇಲ್ಲ. ನಿನ್ನ ಮಹಾಸತ್ವಕ್ಕೆ ತಘಲಕ ಮಹಮ್ಮದ ಬಾದಶಹನು ಸಂತುಷ್ಟನಾಗಿದ್ದಾನೆ. ನೀನು ನಿನ್ನ ಸತ್ವಾತಿಶಯದಿಂದ ನಿನ್ನ ಬಂಧವಿಮೋಚನ ಮಾಡಿಕೊಂಡಿರುತ್ತಿ! ಶಾಬಾಸ! ನಿಜವಾದ ವೀರನು ನೀನು'' ಎಂದು ಹೊಗಳುತ್ತಿರಲು, ಆ ಗೊಂಗಡಿಯವನು ತನ್ನ ಕೈಯೊಳಗಿನ ಕಠಾರಿಯನ್ನು ಮಲ್ಲಣ್ಣನ ಕೈಗೆ ಕೊಟ್ಟನು. ಅದನ್ನು ನೋಡಿ ಮಲಿಕನ ಎದೆಯೊಡೆದು ನೀರಾಯಿತು. ಮುಸಲ್ಮಾನರಲ್ಲಿ ಹಾಹಾಕಾರ ಉಂಟಾಗಿ ಅವರು ದೊಂಬಿಯೆಬ್ಬಿಸುವ ಹವಣಿಕೆಯಲ್ಲಿದ್ದರು. ಆಗ ಪರಮೋದಾರನಾದ ತಘಲಕ ಮಹಮ್ಮದನು ಸ್ವತಃ ಸಿಂಹಾಸನದಿಂದ ಇಳಿಯುತ್ತ ಜನರನ್ನು ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಳ್ಳುವಂತೆ ಸೂಚಿಸುತ್ತ ಮಲ್ಲನ ಬಳಿಗೆ ಬಂದನು. ಆಗ ಕಾಸಿಮನೇ ಮೊದಲಾದವರು ಮಲಿಕನ ಸುತ್ತು ನೆರೆದರು. ಆಗ ಬಾದಶಹನು ಮಲ್ಲಸರ್ಜನನಿಗೆ— ''ಮಲ್ಲಣ್ಣಾ ಮೊದಲು ಗೊತ್ತಾದಂತೆ ಈಗ ನೀನು ನಿರ್ಬಾಧವಾಗಿ ಮಲಿಕನ ಪ್ರಾಣಹರಣ ಮಾಡಿ, ನೀನು ಹಿಂದಕ್ಕೆ ಹೇಳಿದಂತೆ ನಿನ್ನ ಮಿತ್ರನಾದ ಬಹಾಉದ್ದೀನನಿಗೆ ಈ ವೀರನ ಬಲಿಯನ್ನು ಅರ್ಪಿಸಕತಕ್ಕದ್ದು. ಕನ್ನಡ ವೀರನೇ, ಮಲಿಕನು ನಮ್ಮವನು, ಅವನ ಮೇಲೆ ನನ್ನ ಪ್ರೀತಿಯೂ ಬಹಳ; ಆದರೆ ಮಾತು ಯಾರ ಮನೆಯದು? ನಿನ್ನ ಕೂದಲು ಕೊಂಕದಂತೆ ನಾನು ಕಾಯುವೆನು; ನೀನು ನಿಶ್ಚಿಂತನಾಗಿ ಮಲಿಕನ ಪ್ರಾಣಹರಣ ಮಾಡು''.

ಮಹಮ್ಮದನು ಅತ್ಯಂತ ನ್ಯಾಯಪ್ರಿಯನೆಂದು ಇತಿಹಾಸಕಾರರು ಉಲ್ಲೇಖಿಸಿರುವದು ವ್ಯರ್ಥವಾದದ್ದಲ್ಲ. ಅನ್ಯಾಯ–ದ್ರೋಹಗಳಿಗಾಗಿ ಆತನು ಸಿಟ್ಟಿಗೆದ್ದು ಕ್ರೂರಕರ್ಮಗಳನ್ನು ಮಾಡಿದಂತೆಯೇ ನ್ಯಾಯ–ನೀತಿಗಳಿಗಾಗಿ ಆತನು ಸುಪ್ರಸನ್ನನಾಗಿ ಆಗಾಗ್ಗೆ ತನ್ನ ಉದಾರ ಚರಿತವನ್ನೂ ಪ್ರಕಟಿಸುತ್ತಿದ್ದನು. ಮಹಮ್ಮದನ ಈ ಔದಾರ್ಯದ ಮಾತನ್ನು ಕೇಳಿ ಮಲ್ಲಸರ್ಜನನು ಶಾಂತನಾದನು ; ಆದರೆ ಮಲಿಕನ ಸ್ಥಿತಿಯು ಮಾತ್ರ ಶೋಚನೀಯವಾಗಿತ್ತು. ಕಠಾರಿಯನ್ನು ಕೈಯಲ್ಲಿ ಹಿಡಿದುಕೊಂಡು ಎದೆಯಮೇಲೆ ಕುಳಿತಿದ್ದ ಮಲ್ಲನನ್ನು ನೋಡಿ ಮಲಿಕನ ಎದೆ ಯೊಡೆದು ನೀರಾಯಿತು. ತಲೆಗೇರಿದ ಅವನ ದುರಭಿಮಾನದ ನಂಜು ತಟ್ಟನೆ ಇಳಿದು, ಅವನು ಮರಣಭಯದಿಂದ ಕಂಪಿಸತೊಡಗಿದನು. ಮಲ್ಲನ ವೃತ್ತಿಗೂ, ಮಲಿಕನ ವೃತ್ತಿಗೂ ಬಹಳ ಅಂತರವಿತ್ತು. ಸತ್ವಶಾಲಿಯಾದ ಮಲ್ಲನು ಮರಣಕ್ಕೆ ಅಂಜದೆ, ತನ್ನ ಒಡೆಯನಾದ ಹೆಗ್ಗನ ಅಪಮಾನದ ಪರಿಮಾರ್ಜನಕ್ಕಾಗಿ ಮಲ್ಲಯುದ್ಧ ಸನ್ನದ್ಧನಾಗಿದ್ದನು; ಆದರೆ ಮಲಿಕನ ಮಾತು ಹಾಗಿದ್ದಿಲ್ಲ. ''ನಾನು ಮಹಾ ಬಲಿಷ್ಠನು, ಕುನ್ನಿ ಮಲ್ಲನ ಕೆನ್ನೆಯಮೇಲೆ ಹೊಡೆದು ಕ್ಷಣದಲ್ಲಿ ಕೊಂದು ಬಾದಶಹನ ಒಲುಮೆಯನ್ನು ಸಂಪಾದಿಸುವೆನೆಂ''ಬ ಸೊಕ್ಕಿನಿಂದ ಅವನು ಮಲ್ಲಯುದ್ಧಕ್ಕೆ ನಿಂತಿದ್ದನು. ಮಲ್ಲನು ತಾನು ತನ್ನ ಒಡೆಯನಾದ ಹೆಗ್ಗನ (ಹುಕ್ಕನ) ಪಾಮರನಾದ ಸೇವಕನೆಂದು ತಿಳಿದು ದಾಸಭಾವದಿಂದ ನಡಕೊಳ್ಳುತ್ತಿದ್ದನು; ಆದರೆ ಮಲಿಕನು ತಾನು ತನ್ನ ಒಡೆಯನಾದ ಮಹಮ್ಮದನ ಪದರಿನೊಳಗಿನ ಜಟ್ಟಿಗಳಲ್ಲಿ ಮಹಾಬಲಿಷ್ಠನೆಂಬ ಅಹಂಭಾವದಿಂದ ನಡಕೊಳ್ಳುತ್ತಿದ್ದನು. ಮಲ್ಲನು ತನ್ನ ದೇಹವನ್ನು ಸ್ವಾಮಿಕಾರ್ಯಕ್ಕಾಗಿ ಒಪ್ಪಿಸಿದವ ನಾಗಿದ್ದನು. ಮಲಿಕನು ಒಡೆಯನ ಒಲುಮೆಯ ಪ್ರಸಾದದ ಲೋಭಕ್ಕೆ ದೇಹವನ್ನರ್ಪಿ ಸಿದವನಿದ್ದನು. ಒಟ್ಟಿಗೆ ಮಲ್ಲನು ಸ್ವಾರ್ಥರಹಿತನೂ ಮಲಿಕನು ಸ್ವಾರ್ಥ ಪರಾಯಣನೂ

ಇದ್ದದ್ದರಿಂದ, ಅವರನ್ನು ಕ್ರಮವಾಗಿ ನಿರ್ಭಯ–ಭಯಗಳು ಆವರಿಸಿದ್ದವು. ತಾನು ಇನ್ನು ಸಾಯುವೆನೆಂಬ ಭಯದಿಂದ ಮಲಿಕನು ತನ್ನ ಸುಖಸರ್ವಸ್ವವನ್ನು ನೆನಿಸಿ ಮನೋವ್ಯಥೆಯಿಂದ ಮಿಡುಕಹತ್ತಿದನು, ಅವನ ಮುಖವು ನಿಸ್ತೇಜವಾಯಿತು. ಬಾಯಿಂದ ಮಾತುಗಳು ಹೊರಡಲೊಲ್ಲವು. ಅಷ್ಟರಲ್ಲಿ ಪರಮೋದಾರನಾದ ಮಲ್ಲಣ್ಣನು ತನ್ನ ಕುರುಬಜಾತಿಗೆ ಒಪ್ಪುವ ಸೌಜನ್ಯದ ಸದ್ಭಾವನೆಯಿಂದ ಮಲಿಕನ ಎದೆಯ ಮೇಲಿಂದ ಎದ್ದು, ಆತನನ್ನು ಆದರದಿಂದ ಕೈ ಹಿಡಿದು ಎಬ್ಬಿಸುತ್ತ— ''ವೀರನೇ, ಏಳು, ಸೋಲು–ಗೆಲುವು ಗಳೆರಡೂ ನಿನ್ನಂಥ ವೀರರಿಗೇ ಒಪ್ಪುವವು! ಅವುಗಳೆರಡೂ ನಿನಗೆ ಭೂಷಣವೆಂದು ತಿಳಿದುಕೋ! ಯಾಕಂದರೆ, ನಿನ್ನ ಗೆಲುವು ನಿನ್ನ ಕೀರ್ತಿಗೆ ಕಾರಣವಾಗುವಂತೆ, ನಿನ್ನ ಸೋಲು ನಮ್ಮಂಥ ಹೀನಬಲರನ್ನು ಕೀರ್ತಿಶಾಲಿಗಳಾಗಿ ಮಾಡುವದು! ಈ ಸೊಟ್ಟ ಮಲ್ಲನನ್ನು ಯಾರು ಕೇಳುತ್ತಿದ್ದರು? ಆದರೆ ಭೀಮಬಲನಾದ ನೀನು ವಿಪರೀತ ಕಾಲದೋಷದಿಂದ ಪರಾಜಿತನಾಗಲು, ನಿನ್ನ ಒಡೆಯನಾದ ಈ ಉದಾರ ಬಾದಶಹನ ಮುಂದೆ ನನ್ನ ಒಬ್ಬನ ಮಾನವೇ ಏಕೆ, ನಮ್ಮ ಒಡೆಯನ ಮಾನವೂ ಇಡಿಯ ನಮ್ಮ ಕನ್ನಡಿಗರ ಮಾನವೂ ಉಳಿದವು; ಯಾಕಂದರೆ ನಮ್ಮ ಒಡೆಯನು ಕ್ಷುದ್ರನು ಪುಂಡನು ಆಗಿದ್ದರೆ, ಆತನ ಪುಣ್ಯವು ನಿನ್ನಂಥ ವೀರನನ್ನು ಹೀಗೆ ಸಂಭಾವಿಸುವ ಸದ್ಬುದ್ಧಿಯನ್ನು ಈಗ ನನಗೆ ಕೊಡುತ್ತಿದ್ದಿಲ್ಲ. ಪ್ರಿಯದೋಸ್ತ ಮಲಿಕನಾಯಬ! ನೀನು ಬೀಳಲೊಲ್ಲೇಕೆ, ಏಳಲೊಲ್ಲೇಕೆ, ನಿನ್ನಲ್ಲಿಯ ವೀರ್ಯಕ್ಕೆ ಸರ್ವಥಾ ಕಲಂಕ ಉಂಟಾಗದು! ಶಾಬಾಸ! ಎಷ್ಟು ಬಲಶಾಲಿಯು ನೀನು! ನಿನ್ನ ಮಲ್ಲಯುದ್ಧದ ಚಾತುರ್ಯವಾದರೂ ಎಷ್ಟುದು! ನಿನ್ನ ಪಾಸಂಗಕ್ಕೆ ನಾನು ಹತ್ತಲಾರೆನು; ಆದರೆ ದೈವವಶಾತ್ ನನಗೆ ಜಯವು ಒದಗಿ, ''ಇವನು ಮಲಿಕನಾಯಬನನ್ನು ಒಗೆದ ಮಲ್ಲನು'' ಎಂಬ ಖ್ಯಾತಿಯು ನನಗೆ ಉಂಟಾಯಿತು? ಯವನವೀರಾ, ಇದಕ್ಕೆ ನಿನ್ನ ಪುಣ್ಯವೇ ಕಾರಣವಲ್ಲವೆ? ನನ್ನ ಮೇಲಾದ ನಿನ್ನ ಈ ಉಪಕೃತಿಯು ಸಾಮಾನ್ಯವಾದದ್ದಲ್ಲ. ನಿನ್ನ ಈ ಉಪಕೃತಿಗಾಗಿ ನಾನು ಅತ್ಯಂತ ಕೃತಜ್ಞನಾಗಿರುವೆನು. ಕಾಸೀಮ ಖಾನನ ನಿಯಮದಂತೆ ನಿನ್ನ ಎದೆಗೆ ಕಠಾರಿಯನ್ನು ಇರಿದು ಕೊಲ್ಲುವ ಅಧಿಕಾರವು ನನಗೆ ಬಂದಿದೆ; ಆದರೆ ನ್ಯಾಯಪಕ್ಷಪಾತಿಯೂ, ಅತ್ಯಂತ ಉದಾರನೂ ಆದ ತಘಲಕಮುಹಮ್ಮದ ಬಾದಶಹ ನಿನ್ನ ಬಳಿಯಲ್ಲಿ ನಿಂತು— ''ಇವನು ನನ್ನವನು, ಇವನ ಮೇಲೆ ನನ್ನ ಪ್ರೇಮ ಬಹಳ'' ಎಂದು ನನಗೆ ಹೇಳುತ್ತಿರುವಾಗ, ನಾನು ನಿನ್ನ ಹೃದಯದಲ್ಲಿ ಕಠಾರಿಯನ್ನು ಹೇಗೆ ಇರಿಯಲಿ! ನಮ್ಮ ಒಡೆಯನಾದ ಹೆಗ್ಗಣ್ಣನ ಉಪದೇಶವು ಬೇರೆತರದ್ದಾಗಿದೆ! ಅವನ ಉಪದೇಶದಂತೆ ಸಮರ ಸನ್ನದ್ಧನಾದವನನ್ನು ಸಮರ ವ್ಯಾಪಾರದ ಆವೇಶದಲ್ಲಿ ಕೊಲ್ಲಬಹುದು; ಆದರೆ ಹತವೀರ್ಯನಾಗಿ ನೆಲಕ್ಕೆ ಬಿದ್ದವನನ್ನು ಕ್ಷಮಿಸಿಬಿಡತಕ್ಕದ್ದು; ಆದ್ದರಿಂದ ವೀರನೇ, ಹೋಗು, ನಿನ್ನನ್ನು ನಾನು ಕೊಲ್ಲುವದಿಲ್ಲ. ನಿಮ್ಮ ಒಡೆಯನು ಪರಮೋದಾರನಾಗಿ ನನ್ನ ಸಂಗಡ ನಡೆದಿರುವನು. ಅದರ ಸಲುವಾಗಿ ನಿನ್ನನ್ನು ನಾನು ಕೊಲ್ಲಲಾರೆನು'' ಎಂದು ಕಠಾರಿಯನ್ನು ಬಿಸುಟು ಮಲಿಕನಿಗೆ ಮುಜುರೆಮಾಡಿ, ಬಾದಶಹನಿಗೂ ವಿನಯದಿಂದ ನಮಿಸಿದನು. ಇದನ್ನು ನೋಡಿ ತಘಲಕ ಬಾದಶಹನು ಸುಪ್ರಸನ್ನನಾಗಿ ಮಲ್ಲನ ದೊಡ್ಡಿಸ್ತನಕ್ಕೆ ನಾಚಿ ತನ್ನವರೊಡನೆ ಹೊರಟು ಹೋದನು. ಇತ್ತ ಕನ್ನಡಿಗರು ಜಯನಾದದಿಂದ ಮಲ್ಲಣ್ಣನನ್ನು ಸತ್ಕರಿಸಿ ಅವನನ್ನು ಸಮಾರಂಭದಿಂದ ರಾಜಧಾನಿಯಲ್ಲಿ ಮೆರೆಸುವ ಉದ್ಯೋಗ ಮಾಡಹತ್ತಿದರು.

# ಕನ್ನಡಿಗರ ಸ್ವಸ್ವರೂಪ ವಿಸ್ಮೃತಿ !

ಮಲ್ಲಸರ್ಜನನಿಗೆ ಮಲ್ಲಯುದ್ಧದಲ್ಲಾದ ಈ ಜಯದ ಪರಿಣಾಮವು ಕನ್ನಡಿಗರ ಮೇಲೆ ಬಹು ವಿಲಕ್ಷಣವಾಗಿ ಆಯಿತು. ಇದರಿಂದ ಅವರ ಸ್ವಾಭಿಮಾನವು ಜಾಗ್ರತವಾಗಿ ಆನಂದವು ಉಕ್ಕೇರಿತು; ತೀರ ಸಾಮಾನ್ಯ ಮನುಷ್ಯನಿಂದ ದೇವರಾಜನವರೆಗೆ ಯಾವತ್ತು ಜನರು ಮಲ್ಲನನ್ನು ಹೊಗಳಹತ್ತಿದ್ದರು. ಮಲ್ಲನು ಮಲಿಕನನ್ನು ಒಗೆದ ಸುದ್ದಿಯು ತಟ್ಟನೆ ಆನೆಗುಂದಿಯಲ್ಲೆಲ್ಲ ಹಬ್ಬಲು, ಅವನ ಮೆರವಣಿಗೆಯ ಸಮಾರಂಭವನ್ನು ನೋಡುವದಕ್ಕಾಗಿ ಹೆಣ್ಣು-ಗಂಡು ಹೊಡೆದು ಬಂದು ಬಿಟ್ಟಿತು. ಆ ಗೊಂಗಡಿಯ ಮುಸುಕಿನವನಂತೂ ಮಲ್ಲನ ಕೈಹಿಡಿದು ಸಾಗಿದ್ದನು. ಅವರಿಬ್ಬರ ಉತ್ಸಾಹಕ್ಕೆ ನೆಲೆಯಿದ್ದಿಲ್ಲ, ಆ ಗೊಂಗಡಿಯವನೊಡನೆ ಮಾತಾಡಬೇಕೆಂದು ಮಲ್ಲನು ಬಹು ಆತುರಪಡುತ್ತಿದ್ದನು. ಆದರೆ ಮಾತಾಡಲಿಕ್ಕೆ ಆತನಿಗೆ ಆಸ್ಪದವೇ ದೊರೆತಿದ್ದಿಲ್ಲ, ಒಂದುವೇಳೆ ಆಸ್ಪದ ದೊರೆತಿದ್ದರೂ ಅವರು ಮನಬಿಚ್ಚಿ ಮಾತಾಡುತ್ತಿದ್ದರೆಂದು ನಂಬಿಗೆಯಿಂದ ಹೇಳುವ ಹಾಗಿದ್ದಿಲ್ಲ; ಯಾಕೆಂದರೆ, ಆಗಿನ ಸೂಕ್ಷ್ಮ ಕಾಲದಲ್ಲಿ ಸ್ವದೇಶಾಭಿಮಾನದ ಸಾಹಸಿಗರಾದ ಕನ್ನಡಿಗರು ರೂಪಾಚ್ಛಾದನ ಮಾಡಿಕೊಂಡು ಬಹು ಗುಪ್ತವಾಗಿ ವ್ಯವಹರಿಸಬೇಕಾಗುತ್ತಿತ್ತು, ಆಗಿನ ಕನ್ನಡಿಗರಿಗೆ ಮುಸಲ್ಮಾನರ ಅಂಜಿಕೆ ಬಹಳ. ಅದರಲ್ಲಿ ಕ್ರೂರನಾದ ತಘಲಕ ಮಹಮ್ಮದನೊಡನೆ ವ್ಯವಹಾರವಿದ್ದದ್ದರಿಂದಂತು ಹೆಚ್ಚು ಎಚ್ಚರಪಡಬೇಕಾಗಿತ್ತು, ಆದ್ದರಿಂದ ಮಲ್ಲಸರ್ಜನನು ಬಹು ಪ್ರಯಾಸದಿಂದ ತನ್ನ ಮನಸ್ಸನ್ನು ಬಿಗಿಹಿಡಿದುಕೊಂಡು ಸುಮ್ಮನೆ ಸಾಗಿದ್ದನು. ಆ ಗೊಂಗಡಿಯವನು ಮಲ್ಲನಿಗೆ ಪೂರ್ಣ ಪರಿಚಯದವನಾಗಿ ತೋರಿದನೆಂಬುದಿಷ್ಟೇ ಅಲ್ಲ, ಅವನು ಆತನ ಅತಿ ಪೂಜ್ಯ ವ್ಯಕ್ತಿಯಾಗಿದ್ದನು. ಆದ್ದರಿಂದ ಬಹುಮಾನದ ವಂದನದ ಹೊರತು ಆತನೊಡನೆ ಮಲ್ಲನು ಹೆಚ್ಚಿನ ಮಾತು ಆಡುವ ಹಾಗಿದ್ದಿಲ್ಲ; ತನಗೆ ಪೂಜ್ಯನಾದವನು ಇಂಥ ಹೀನ ವೇಷದಿಂದ ತನಗೆ ಸಹಾಯಕನಾಗಿ ಬಂದದ್ದಕ್ಕಾಗಿ ಮಲ್ಲನು ಅತಿ ನಮ್ರನಾಗಿದ್ದನು. ತಟ್ಟನೆ ಆತನ ಚರಣಕ್ಕೆರಗಬೇಕೆಂದು ಮಲ್ಲನು ಹಾತೊರೆಯುವನು; ಆದರೆ ಅದರಿಂದ ಸಂಶಯವು ಉತ್ಪನ್ನವಾಗಿ ಹಾನಿಗೆ ಕಾರಣವಾದೀತೆಂದು ಮನಸ್ಸನ್ನು ಬಿಗಿಹಿಡಿದು ಸುಮ್ಮನೆ ಸಾಗಿದ್ದನು. ಮೂಲತಃ ಮಲ್ಲಣ್ಣನು ಕುರುಬ ಜಾತಿಗೆ ಸಾಧು ಸ್ವಭಾವಕ್ಕೆ ಒಪ್ಪುವಂತೆ ಅತಿ ಸರಳಹೃದಯದ ಮನುಷ್ಯನಾಗಿದ್ದರೂ, ಮುಸಲ್ಮಾನರ ಕುಟಿಲ ತಂತ್ರಗಳ ಅವಲೋಕನದಿಂದಲೂ, ಹೆಗ್ಗ (ಹುಕ್ಕ) ನಂಥ ವೀರನ ರಾಜಕಾರಣ ವ್ಯವಹಾರದಲ್ಲಿ ಸೇರಿದವನಾದದ್ದರಿಂದಲೂ ಆತನು ಒಂದೊಂದೇ ಕುಟಿಲ ತಂತ್ರಗಳ ಅಧ್ಯಯನ ಮಾಡಬೇಕಾಗಿತ್ತು, ಹೀಗೆ ಸಾಗಿರುವ ಆ ಸನ್ಮಾನನೀಯ ಮಲ್ಲನನ್ನು ಜನರು ಜಯಘೋಷ ಮಾಡುತ್ತ ಮುತ್ತಿದ್ದರು. ದೀಪಜ್ಯೋತಿಗಳ ಸಡಗರದಲ್ಲಿ ಆ ರಾತ್ರಿಯ ಮೆರವಣಿಗೆಯು ಬಹು ರಮ್ಯವಾಗಿ ತೋರುತ್ತಿತ್ತು, ಬಗೆಬಗೆಯ ವಾದ್ಯಗಳು ಭೋರ್ಗರೆಯುತ್ತಿದ್ದವು. ಕಾಳೆಗಳು ಹಿಡಿಯುತ್ತಿದ್ದವು. ಕೊಂಬುಗಳು ಊದುತ್ತಿದ್ದವು. ಇಂದು ಮಲ್ಲಣ್ಣನು ಎಲ್ಲರ ಮನೆಯವನಾಗಿ ಹೋದದ್ದರಿಂದ ತಮತಮಗೆ ತೋರಿದಂತೆ ಪ್ರೇಮದ ಸ್ವಯಂ ಸ್ಫೂರ್ತಿಯ ಸತ್ಕಾರದಿಂದ ಆತನನ್ನು ಎಲ್ಲರೂ ಸತ್ಕರಿಸತೊಡಗಿದರು. ಹೂಗಾರರು ತಮ್ಮ

ಬಳಿಯ ಹೂಮಾಲೆಗಳನ್ನು ಮಲ್ಲಣ್ಣನ ಕೊರಳಿಗೆ ಹಾಕಿದರು; ಮದ್ದು ಮಾಡುವವರು ತಮ್ಮಲ್ಲಿಯ ತರತರದ ಮದ್ದನ್ನು ಹಾರಿಸತೊಡಗಿದರು. ಯಾರು ಬೆಳಕು ಹೆಚ್ಚಾಗಲೆಂದು ತಮ್ಮ ಮನೆಯ ದೀವಟಿಗೆಗಳನ್ನು ಹಿಡಿದರು. ಗಾಯಕರು ಗಾಯನಮಾಡತೊಡಗಿದರು; ವಾದಕರು ವಾದ್ಯ ಬಾರಿಸತೊಡಗಿದರು. ಹೀಗೆ ವಿವಿಧ ಜನರು ವಿವಿಧೋಪಾಯಗಳಿಂದ ಮಲ್ಲಣ್ಣನನ್ನು ಅಭಿನಂದಿಸಿದ್ದರಿಂದ ಅವರ ಮೆರವಣಿಗೆಯು ಅಪೂರ್ವವಾಗಿ ಜರುಗಿತು. ಇದನ್ನು ನೋಡಿ, ಮಲ್ಲಸರ್ಜನನಲ್ಲಿ ತುಂಬಾ ಅಭಿಮಾನವುಳ್ಳ ಗಾಯಕಿಗೆ ಎಷ್ಟು ಆನಂದವಾಗಿರಬಹುದೆಂಬದನ್ನು ವಾಚಕರೇ ತರ್ಕಿಸತಕ್ಕದ್ದು.

ಹೀಗೆ ಮಲ್ಲಸರ್ಜನನ ಮೆರವಣಿಗೆಯು ಬಹು ಸಮಾರಂಭದಿಂದ ಜರುಗುತ್ತ ಅದು ಅರಮನೆಯ ಸಮೀಪಕ್ಕೆ ಬಂದಿತು. ರಾಜದರ್ಬಾರದಲ್ಲಿ ಮಲ್ಲಸರ್ಜನನ ಸತ್ಕಾರವಾಗಬೇಕೆಂದು ದೇವರಾಜನ ಕಟ್ಟಳೆಯಾಗಿತ್ತು; ಅದರಿಂದ ಕನ್ನಡ ಜಟ್ಟಿಗಳಿಗೆ ವಿಲಕ್ಷಣ ಉತ್ಸಾಹವಾಗಿ, ಅವರು ಮೆರವಣಿಗೆಯ ಮಹಾ ಜನಸಮೂಹದೊಡನೆ ದರ್ಬಾರದ ಬಾಗಿಲಿಗೆ ಬಂದರು. ತನ್ನ ಕನ್ನಡ ಮಲ್ಲನ ಇಂದಿನ ವಿಜಯದಿಂದ ದೇವರಾಜನಿಗೆ ಪರಮಾನಂದವಾಗಿತ್ತು. ಒಬ್ಬ ತರುಣ ಗಾಯಕಿಯು ತನ್ನ ವರ್ಚಸ್ಸಿನಿಂದ ಮಹಮ್ಮದನ ಮನಸ್ಸಿನ ಒಲವು ತಿರುಗಿಸಿದ್ದನ್ನು ನೋಡಿಯಂತು, ಆ ವೃದ್ಧರಾಜನ ಮನಸ್ಸಿನಲ್ಲಿ ತನ್ನ ಕನ್ನಡಿಗರ ಯೋಗ್ಯತೆಯ ವಿಷಯವಾಗಿ ಅಭಿಮಾನವು ಉತ್ಪನ್ನವಾಗಿತ್ತು. ಹೀಗೆಯೇ ತನ್ನ ಕನ್ನಡಿಗರು ಹೇಡಿತನದ ಪರೆಬಿಟ್ಟು ಹೆಡೆಯುಚ್ಚಿದ ಹಾವಿನಂತೆ ಜಾಗ್ರತರಾದರೆ ಮುಸಲ್ಮಾನರ ಮಗ್ಗಲು ಮುರಿಯುವದೇನು ಅಶಕ್ಯವೆಂಬ ವಿಚಾರವು ಆತನ ಮನಸ್ಸಿನಲ್ಲಿ ಸುಳಿಯಹತ್ತಿತು. ಹಿಂದಕ್ಕೆ ತನ್ನ ಮಗಳಾದ ಪದ್ಮಿನಿಯನ್ನು, ದುಷ್ಟ ಕಾಸಿಮನ ಜನರ ಕೈಯೊಳಗಿಂದ ಹೆಗ್ಗನೇ ಮೊದಲಾದ ಕುರುಬರು ಬಿಡಿಸಿದ್ದರ ಸ್ಮರಣವಾಗಿ ಇನ್ನು ಕನ್ನಡಿಗರ ಅಭ್ಯುದಯದ ಅರುಣೋದಯವೇ ಆಗುವದೋ ಎಂದು ಆ ವೃದ್ಧರಾಜನು ಯೋಚಿಸ ತೊಡಗಿದನು. ಬಿಂದುಮಾತ್ರ ದುಃಖವು ಪರ್ವತಾಕಾರವಾಗಿಯೂ, ಪರ್ವತಾಕಾರ ಸುಖವು ಬಿಂದುಮಾತ್ರವಾಗಿಯೂ ತೋರುವದು ಎಲ್ಲರ ಅನುಭವದ ಮಾತಾಗಿರುವದು. ಈಗಿನ ಕಾಲದಲ್ಲಿ ಕನ್ನಡಿಗರು ಅಂತರಂಗದಲ್ಲಿ ತೇಜೋಹೀನರಾಗಿದ್ದರೂ, ಬಹಿರಂಗದಲ್ಲಿ ಪಾರತಂತ್ರ್ಯದ ಪೀಡೆಯು ಅವರನ್ನು ಅದೇ ಆವರಿಸತೊಡಗಿತ್ತು. ತಘಲಕ ಮಹಮ್ಮದನು ಆನೆಗುಂದಿಯ ರಾಜರ ಸ್ವಾತಂತ್ರ್ಯಹರಣ ಮಾಡಿ ಕೆಲವು ವರ್ಷಗಳು ಮಾತ್ರ ಆಗಿರಬಹುದು; ಆದರೂ ಅಂತಸ್ಸತ್ವವಿಲ್ಲದ ಕನ್ನಡಿಗರಿಗೂ ಬಹಿರಂಗದ ಇಷ್ಟು ಕಾಲದ ಅವನತಿಯು ಕೂಡ ಪರಮಾವಧಿಯಾದ ದುಃಖಕ್ಕೆ ಕಾರಣವಾಗಿತ್ತು; ಯಾಕಂದರೆ, ಪಾರತಂತ್ರ್ಯದ ಪೀಡೆಯು ಇನ್ನೂ ಅವರ ಮೈಯುಂಡಿದ್ದಿಲ್ಲ; ಆದ್ದರಿಂದ ದೇವರಾಜನು ಕನ್ನಡಿಗರ ಅಭ್ಯುದಯವು ಯಾವಾಗಾದೀತೆಂದು ಮನಸ್ಸಿನಲ್ಲಿ ಚಡಪಡಿಸುತ್ತಿದ್ದನು. ಆತನಿಗೆ ಈಗೀಗ ಒದಗಹತ್ತಿದ ಕನ್ನಡಿಗರ ತೇಜಸ್ಸಿನ ಪ್ರಕಟನೆಯ ಒಂದೊಂದು ಪ್ರಸಂಗಗಳು ಬಹು ಮಹತ್ವದವಾಗಿ ತೋರಿದವು. ಬಹಾಉದ್ದೀನನ ಕ್ರೂರತನದ ಕೊಲೆಯಿಂದ ಹೌಹಾರಿದ ಕನ್ನಡಿಗರು, ಮಲ್ಲನ ಮಲ್ಲಯುದ್ಧದ ಪರಿಣಾಮವನ್ನು ಅತ್ಯಾತುರತೆಯಿಂದ ಎದುರು ನೋಡುತ್ತಿರುವಾಗ ಮಲ್ಲಣ್ಣನು ಸಂಪಾದಿಸಿದ ಈ ವಿಜಯವು ಸಾಮಾನ್ಯವಾದ್ದದಲ್ಲ,

ಅದು ಆನೆಗುಂದಿಯ ಆಬಾಲವೃದ್ಧರನ್ನು ಕೌತುಕಪಡಿಸಿದಂತೆ ದೇವರಾಜನ ಅಂತಃಪುರದ ಜನರನ್ನೂ ಕೌತುಕಪಡಿಸಿತು. ಇಂಥ ವೀರ ಮಲ್ಲನು ಹೇಗಿರುವನೆಂಬುದನ್ನು ನೋಡುವ ಉತ್ಕಟೇಚ್ಛೆಯು ಪದ್ಮಿನಿಯೇ ಮೊದಲಾದ ಅಂತಃಪುರದ ಜನರಿಗೂ ಆಯಿತು. ತನ್ನನ್ನು ಮುಸಲ್ಮಾನರ ಕೈಯೊಳಗಿಂದ ಬಿಡಿಸುವಾಗ ''ಮಲ್ಲ''ನೆಂಬ ಹೆಸರು ಪದ್ಮಿನಿಯ ಕಿವಿಗೆ ಬಿದ್ದದ್ದರಿಂದ, ಆಕೆಯು ಮಲ್ಲನನ್ನು ನೋಡಲು ಅತ್ಯಾತುರಪಡುತ್ತಿದ್ದಳು. ಅಂತಃಪುರದ ರಾಜಸ್ತ್ರೀಯರು ತಾವು ಪ್ರಸಂಗವಶಾತ್ ಕುಳಿತುಕೊಳ್ಳತಕ್ಕ ದರ್ಬಾರದ ಸ್ಥಳದಲ್ಲಿ ಕುಳಿತು ಕೊಂಡರು. ಅವರಿಗೆ ದರ್ಬಾರದೊಳಗಿನ ಜನರೆಲ್ಲ ಕಾಣುತ್ತಿದ್ದರೂ, ದರ್ಬಾರದ ಜನರಿಗೆ ಮಾತ್ರ ಅವರು ಕಾಣುತ್ತಿದ್ದಿಲ್ಲ, ದೇವರಾಜನು ಸಿಂಹಾಸನದ ಮೇಲೆ ಕುಳಿತುಕೊಂಡಿದ್ದನು. ಮಂತ್ರಿ–ಸೇನಾಪತಿಗಳೂ, ಸರದಾರರೇ ಮೊದಲಾದವರೂ ತಮ್ಮ ತಮ್ಮ ಸ್ಥಳದಲ್ಲಿ ಕುಳಿತು ಕೊಂಡಿದ್ದರು. ಕೆಲಜನ ಮುಸಲ್ಮಾನ ಸರದಾರರೂ ದರ್ಬಾರಕ್ಕೆ ಬಂದಿದ್ದರು. ಅಂದಿನ ದರ್ಬಾರದ ಮುಖ್ಯ ವಿಷಯವು ಮಲ್ಲಸರ್ಜನನ ಸತ್ಕಾರವಾಗಿತ್ತೆಂದು ಮತ್ತೆ ಹೇಳುವ ಕಾರಣವಿಲ್ಲ, ಮೆರವಣಿಗೆಯ ಜನರಿಂದ ದರ್ಬಾರವೆಲ್ಲ ತುಂಬಿಹೋಗಿತ್ತು, ಸ್ವತಃ ಮಂತ್ರಿ– ಸೇನಾಪತಿಗಳೇ ಮೊದಲಾದ ಪ್ರತಿಷ್ಠಿತ ಜನರು ಕನ್ನಡ ಜಟ್ಟಿಗಳನ್ನು ಸತ್ಕರಿಸತೊಡಗಿದ್ದರು. ಇದರಿಂದ ಜಟ್ಟಿಗಳು ಉತ್ಸಾಹಗೊಂಡರು. ಒಂದೊಂದು ಪ್ರಸಂಗದಲ್ಲಿ ಒಂದೊಂದು ವರ್ಗದ ಜನರಿಗೆ ಗೌರವ ಉಂಟಾಗುತ್ತಿರುತ್ತದೆ. ರಾಷ್ಟ್ರ ಕಾರ್ಯಕ್ಕೆ ಬುದ್ಧಿಬಲ–ಶರೀರಬಲಗಳ ಅವಶ್ಯಕತೆಯಿರುತ್ತದಷ್ಟೇ? ಆ ಎರಡು ಬಲಗಳಲ್ಲಿ ಶಾಂತತೆಯ ಕಾಲದೊಳಗೆ ಬುದ್ಧಿಬಲಕ್ಕೆ ವಿಶೇಷ ಗೌರವವಿರುವದೂ, ಯುದ್ಧಕಾಲದಲ್ಲಿ ಶಾರೀರಬಲಕ್ಕೆ ವಿಶೇಷ ಗೌರವವಿರುವದೂ ಸ್ವಾಭಾವಿಕವು. ಈಗ ಕರ್ನಾಟಕಕ್ಕೆ ಯುದ್ಧಕಾಲವು ಪ್ರಾಪ್ತವಾದದ್ದರಿಂದ ದೇವರಾಜನ ದರ್ಬಾರದಲ್ಲಿ ಹೀಗೆ ಶಾರೀರ ಬಲದ ಜಟ್ಟಿಗಳಿಗೆ ವಿಶೇಷ ಗೌರವವಾದದ್ದು ಆಶ್ಚರ್ಯವಲ್ಲ.

ಮಲ್ಲಸರ್ಜನನ ಗೌರವಕ್ಕಾಗಿ ವಕ್ತಾರರ ಉತ್ತೇಜನಪರ ಭಾಷಣಗಳಾಗತೊಡಗಿದವು. ಎಷ್ಟೋ ಜನರು ಸ್ವಸಂತೋಷದಿಂದ ಮಲ್ಲಣ್ಣನಿಗಾಗಿ ಉಡುಗರೆಗಳನ್ನೂ, ಪಾರಿತೋಷಕ ಗಳನ್ನೂ ತಂದಿದ್ದರು. ಗುಣಿಜನರ ಗೌರವ ಮಾಡುವದಕ್ಕಾಗಿ ಉದಾರ ಗುಣಜ್ಞರ ಮನಸ್ಸು ಹಾತೊರೆಯುತ್ತದೆಂಬದು ಸುಳ್ಳಲ್ಲ, ದೇವರಾಜನ ಸಮ್ಮುಖದಲ್ಲಿ ತಾವು ಮಲ್ಲಸರ್ಜನ ನನ್ನು ಸಂಭಾವಿಸಿ ಯಾವಾಗ ಕೃತಾರ್ಥರಾದೇವೆಂದು ಉದಾರರಾದ ಕನ್ನಡಿಗರು ಎದುರು ನೋಡುತ್ತಿದ್ದರು. ದೇವರಾಜನಂತೂ ಮಲ್ಲಣ್ಣನ ಸತ್ಕಾರವನ್ನು ದೊಡ್ಡ ಮನಸ್ಸಿನಿಂದ ಮಾಡಲು ನಿಶ್ಚಯಿಸಿದನು. ಆತನು ಮಲ್ಲಣ್ಣನ ಮುಂಗೈಗೆ ಹಾಕುವದಕ್ಕಾಗಿ ಬಂಗಾರದ ರತ್ನಕೆಚ್ಚಿದ ಕಡೆ–ತೋಡೆಗಳನ್ನೂ, ಕೊರಳಿಗೆ ಹಾಕುವದಕ್ಕಾಗಿ ಕಂಠಿ ಗೋಪುಗಳನ್ನೂ, ಬೆಲೆಯುಳ್ಳ ವಸ್ತ್ರಗಳನ್ನೂ ಸಿದ್ಧಗೊಳಿಸಿದ್ದನು. ಅಲ್ಲದೆ ಬೇರೆ ಜಟ್ಟಿಗಳನ್ನು ಸಡಿಲಗೈಯಿಂದ ಸತ್ಕರಿಸುವದಕ್ಕಾಗಿ ವಿವಿಧ ವಸ್ತ್ರಾಭರಣಗಳನ್ನು ಆತನು ಸಜ್ಜುಗೊಳಿಸಿದ್ದನು. ಇನ್ನು ಸ್ವಲ್ಪ ಹೊತ್ತಿನಲ್ಲಿ ಮಲ್ಲಸರ್ಜನನ ಸತ್ಕಾರವಾಗತಕ್ಕದ್ದಿತ್ತು, ಅಷ್ಟರಲ್ಲಿ ದ್ವಾರ ರಕ್ಷಕನೊಬ್ಬನು ಬಂದು ಕೈಜೋಡಿಸಿ ನಿಂತು '' ಜೀಯಾ, ಹೊರಗೆ ಒಬ್ಬ ಬ್ರಾಹ್ಮಣೋತ್ತಮನು ಬಂದಿರುವನು!! ಈಗಲೇ ಪ್ರಭುಗಳ ದರ್ಶನಕ್ಕೆ ಬರ

ಬೇಕಾಗಿದೆಯಂತೆ'' ಎಂದು ವಿಜ್ಞಾಪಿಸಲು, ದೇವರಾಜನು ಚಟ್ಟನೆ ಸಿಂಹಾಸನದಿಂದ ಎದ್ದು ಆ ಬ್ರಾಹ್ಮಣೋತ್ತಮನನ್ನು ಕರೆತರುವದಕ್ಕಾಗಿ ಹೊರಟನು. ಕೂಡಲೆ ದರ್ಬಾರದ ಜನರು ಎದ್ದುನಿಂತರು. ಒಬ್ಬ ಬ್ರಾಹ್ಮಣನನ್ನು ಕರೆತರುವುದಕ್ಕಾಗಿ ಸ್ವತಃ ರಾಜರೇ ಹೋಗುವದನ್ನು ನೋಡಿ ದರ್ಬಾರದ ಜನರು ಆಶ್ಚರ್ಯಪಟ್ಟರು; ವಿಚಾರದಿಂದ ನೋಡಿದರೆ, ಅವರು ಆಶ್ಚರ್ಯಪಟ್ಟದ್ದು ಆಯತಾರ್ಥವಲ್ಲ. ಗುರುತು ಪರಿಚಯವಿಲ್ಲದ ಒಬ್ಬ ಬ್ರಾಹ್ಮಣನನ್ನು ಕರೆತರುವದಕ್ಕಾಗಿ ಸ್ವತಃ ಅರಸರೇ ಹೋಗುವದೆಂದರೆ ವಿಲಕ್ಷಣವೇ ಸರಿ; ಆದರೆ ವೃದ್ಧ ದೇವರಾಜನನ್ನು ಚಟ್ಟನೆ ಸಿಂಹಾಸನದಿಂದ ಎಬ್ಬಿಸುವ ಬ್ರಾಹ್ಮಣನ ಗೂಢ ವರ್ಚಸ್ಸು ವಿಲಕ್ಷಣವಾಗಿರಲೇಬೇಕು. ಸೂರ್ಯನು ಮರೆಯಾಗಿದ್ದರೂ ಅವನ ತೇಜಸ್ಸು ನಮ್ಮ ನೇತ್ರೇಂದ್ರಿಯಕ್ಕೆ ಗೋಚರವಾಗುವಂತೆ, ಆ ಶ್ರೇಷ್ಠ ಬ್ರಾಹ್ಮಣನು ದೇವರಾಜನ ದೃಷ್ಟಿಗೆ ಬೀಳದಿದ್ದರೂ ಆ ತಪೋಧನನ ಗೂಢ ತೇಜಸ್ಸು ದೇವರಾಜನ ಗೂಢ ತತ್ವವಾದ ಆತ್ಮಕ್ಕೆ ಗೋಚರವಾಯಿತು. ಅಂತೇ ದೇವರಾಜನು ಪರಾಧೀನನಂತೆ ಆ ಬ್ರಾಹ್ಮಣನ ಬಳಿಗೆ ಹೋದನು. ಬ್ರಾಹ್ಮಣನ ತೇಜಃಪುಂಜ ಮೂರ್ತಿಯು ಕಣ್ಣಿಗೆ ಬಿದ್ದಕೂಡಲೆ ಆ ವೃದ್ಧರಾಜನು ಅತ್ಯಂತ ಲೀನನಾದನು. ಆತನ ಕರಚರಣಾದ್ಯವಯವಗಳು ಸ್ವಾಭಾವಿಕವಾಗಿಯೇ ನಮಿಸಲು, ದೇವರಾಜರನು ಬ್ರಾಹ್ಮಣನಿಗೆ ಸಾಷ್ಟಾಂಗವಾಗಿ ಎರಗಿದನು. ಕನ್ನಡಿಗರ ಜಯಸೂಚನೆಯ ಸುಯೋಗದಲ್ಲಿ ಈ ಬ್ರಾಹ್ಮಣೋತ್ತಮನು ಬಂದದ್ದು ಅಭ್ಯುದಯದ ಲಕ್ಷಣವೆಂದು ದೇವರಾಜನು ತಿಳಿದು, ಆತನು ಆ ವಿಪ್ರಶ್ರೇಷ್ಠನಿಗೆ ಕೈಕೊಟ್ಟು ವಿನಯದಿಂದ ದರ್ಬಾರಕ್ಕೆ ಕರೆತಂದನು. ಈ ಬ್ರಾಹ್ಮ–ಕ್ಷಾತ್ರತೇಜಸ್ಸುಗಳ ಸಮ್ಮೇಲನದ ವಿಲಕ್ಷಣ ನೋಟವನ್ನು ನೋಡಿ ದರ್ಬಾರದ ಜನರ ಚಿತ್ತವೃತ್ತಿಗಳು ತಟಸ್ಥವಾದವು. ರಾಜವೈಭವದಿಂದ ಮೆರೆಯುವ ದೇವರಾಜನ ಕ್ಷಾತ್ರತೇಜಸ್ಸು ಶ್ರೇಷ್ಠವೋ, ಅಥವಾ ವೈರಾಗ್ಯದಿಂದ ಒಪ್ಪುವ ಬ್ರಾಹ್ಮಣನ ಬ್ರಹ್ಮತೇಜಸ್ಸು ಹೆಚ್ಚಿನದೋ ಎಂಬದನ್ನು ನಿರ್ಣಯಿಸುವದು ದರ್ಬಾರದ ಜನರಿಗೆ ಅಸಾಧ್ಯವಾಯಿತು. ಅವರು ಜಡ ಮೂಢರಂತೆ ಆ ದಿವ್ಯ ತೇಜೋಯುಗ್ಮದ ವೈಭವವನ್ನು ನೋಡುತ್ತ ಸುಮ್ಮನೆ ನಿಂತುಕೊಂಡರು! ದೇವರಾಜನು ಹಸ್ತಲಾಘವದಿಂದ ಬ್ರಾಹ್ಮಣೋತ್ತಮನನ್ನು ಸಿಂಹಾಸನವೇರಿಸ ಹೋಗಲು, ಆ ಬ್ರಾಹ್ಮಣನು ವಿನಯದಿಂದ— ''ಭೂಪತಿಯೇ, ಸಿಂಹಾಸನವೇರಲು ನೀನೇ ಅಧಿಕಾರಿಯು. ರಾಜವೈಭವಸಂಪನ್ನನಾದ ನಿನಗೇ ಅದು ಒಪ್ಪುತ್ತದಲ್ಲದೆ, ವೈರಾಗ್ಯಶಾಲಿಗಳಾದ ಬ್ರಾಹ್ಮಣರಿಗೆ ಅದು ಒಪ್ಪುವದಿಲ್ಲ, ನಾನಂತೂ ಸಿಂಹಾಸನವೇರಲು ಅನರ್ಹನು'' ಅನ್ನಲು ದೇವರಾಜನ ಇಚ್ಛೆಯಂತೆ ಆ ಬ್ರಾಹ್ಮಣೋತ್ತಮನ ಸಲುವಾಗಿ ಮತ್ತೊಂದು ಆಸನವು ಸಿದ್ಧವಾಯಿತು. ದೇವರಾಜನ ಪ್ರಾರ್ಥನೆಯಂತೆ ಆ ಉಚ್ಚಾಸನವನ್ನು ಬ್ರಾಹ್ಮಣನು ಅಲಂಕರಿಸಲು, ದೇವರಾಜನು ತನ್ನ ಸಿಂಹಾಸನವೇರಿದನು. ಈ ಕಾಲದ ದರ್ಬಾರದ ಶೋಭೆಯು ವರ್ಣನೀಯವಾಗಿತ್ತು, ಇಷ್ಟು ಹೊತ್ತಿಗಿಲ್ಲದ ಯಾವದೋ ಒಂದು ದಿವ್ಯ ತೇಜಸ್ಸು ಈಗ ದರ್ಬಾರದಲ್ಲಿ ಪ್ರಕಟವಾದಂತಾಯಿತು. ಅಥವಾ ದರ್ಬಾರದಲ್ಲಿ ಹೊಸ ಜೀವನದ ಸಂಚಾರವಾದಂತಾಯಿತೆಂತಲೂ ಹೇಳಬಹುದು. ಕ್ಷತ್ರಿಯ ರಾಜರಲ್ಲಿ ಬ್ರಾಹ್ಮಣರು ಮಂತ್ರಿಗಳಾಗಿರುವದು ಪ್ರಾಚೀನ ಪದ್ಧತಿ ಇರುವದಷ್ಟೇ? ಅದರಂತೆ ಈಗ ಆ

ಬ್ರಾಹ್ಮಣನು ದೇವರಾಜನಿಗೆ ಮಂತ್ರಿಯಂತೆ ಒಪ್ಪಿದನು. ಅವರಿಬ್ಬರನ್ನು ನೋಡುತ್ತ ನಿಂತಿದ್ದ ಸಭಿಕರು ಬೆರಗಾಗಿ ನೋಡುತ್ತಲೆ ನಿಂತುಕೊಂಡಿದ್ದರು. ಆಗ ಆ ತೇಜಃಪುಂಜ ಬ್ರಾಹ್ಮಣನು ಸೌಮ್ಯಸ್ವರದಿಂದ— ''ಕುಳಿತುಕೊಳ್ಳಿರಿ, ತೇಜೋವಂತರಾದ ಕನ್ನಡಿಗರೇ, ನಿಮ್ಮ ಸ್ಥಳದಲ್ಲಿ ಕುಳಿತು ಕೊಳ್ಳಿರಿ'' ಅನ್ನಲು, ಸಭಿಕರು ಎಚ್ಚತ್ತು ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಂಡರು. ಬ್ರಾಹ್ಮಣನ ಇಷ್ಟೇ ಮಾತಿನಿಂದ ಸಭಿಕರ ಚಿತ್ತಹರಣವಾಗಿ ಹೋಯಿತು. ಇದಕ್ಕೆ ಆ ಬ್ರಾಹ್ಮಣನ ಸೌಮ್ಯ ಮುಖದಲ್ಲಿ ಉಕ್ಕುತ್ತಿದ್ದ ದಿವ್ಯತೇಜಸ್ಸೇ ಕಾರಣವೆಂದು ಹೇಳಬಹುದು. ಆತನ ಉಡಿಗೆ–ತೊಡಿಗೆಗಳಲ್ಲಿ ಆಡಂಬರವು ಲೇಶವಾದರೂ ಇದ್ದಿಲ್ಲ. ಆತನು ಉಟ್ಟದ್ದು ಶುಭ್ರವಸ್ತ್ರವು, ಹೊತ್ತದ್ದೂ ಶುಭ್ರವಸ್ತ್ರವೇ, ತಲೆಗೂ ಆತನು ಒಂದು ಶುಭ್ರವಸ್ತ್ರವನ್ನೇ ಸುತ್ತಿದ್ದನು. ಆತನು ಅದೇ ಸಾಯಂಸಂಧ್ಯಾಕರ್ಮವನ್ನು ತೀರಿಸಿಕೊಂಡು ಬಂದಿದ್ದನಾದ್ದರಿಂದ ಆತನ ಹಣೆಯಲ್ಲಿ ಶುಭ್ರಭಸ್ಮವು ಢಾಳಾಗಿ ಒಪ್ಪುತ್ತಿತ್ತು, ಆತನ ಕಾಲುಗಳಲ್ಲಿ ಆವುಗೆಗಳಿದ್ದವು. ಆತನು ಹೊತ್ತ ವಸ್ತ್ರವು ಜರಿದು ಸರಿದಾಗ ಆತನು ಧರಿಸಿದ ಭಸ್ಮದ ಶುಭ್ರವಾದ ಪಟ್ಟೆಗಳೂ, ರುದ್ರಾಕ್ಷ ಮಾಲೆಗಳೂ ಒಪ್ಪುತ್ತಿದ್ದವು. ಇನ್ನುಳಿದ ಒಡವೆಗಳೆಂದರೆ, ಒಂದು ಕೃಷ್ಣಾಜಿನದ ಸುರುಳಿ, ಒಂದು ಜಪದ ಗೋಮುಖಿ, ಒಂದು ತಂಬಿಗೆ! ಆಯಿತು, ಆ ವಿಪ್ರೋತ್ತಮನ ಸಾಧನಸಾಮಗ್ರಿಯು ಮುಗಿದುಹೋಯಿತು. ಇನ್ನು ಅಪ್ಪಿತಪ್ಪಿ ಉಳಿದಿದ್ದರೆ ಒಂದು ಪಂಚಪಾತ್ರೆ, ಒಂದು ಉದ್ದರಣೆ, (ತೀರ್ಥದ ಸೌಟು) ಭಸ್ಮದ್ದೊಂದು ಚೀಲ ಇವು ಜೋಳಿಗೆ ಗೀಳಿಗೆಯಲ್ಲಿ ಇದ್ದರೆ ಇರಬಹುದು.

ಈ ಚೆಂದದ ಬಡತನದ ಉಡಿಗೆ–ತೊಡಿಗೆಯ ಬ್ರಾಹ್ಮಣೋತ್ತಮನು ಎದ್ದುನಿಂತು ತನ್ನ ಹೊದ್ದ ವಸ್ತ್ರವನ್ನು ಸಾವರಿಸಿಕೊಳ್ಳುತ್ತ ಸಭಿಕರನ್ನು ಕುರಿತು ಉಚ್ಚಸ್ವರದಿಂದ ನುಡಿದನೇ ನಂದರೆ — ''ಪ್ರಿಯ ಕನ್ನಡಿಗರೇ, ನಿಮ್ಮ ಮುಖದಲ್ಲಿ ತೋರುವ ಉತ್ಸಾಹವನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ಇದಕ್ಕೆ ನಮ್ಮ ವೀರ ಮಲ್ಲಸರ್ಜನನ ಮಲ್ಲಯುದ್ಧದ ಜಯವೇ ಕಾರಣವೆಂಬದನ್ನು ನಾನು ಬಲ್ಲೆನು. ಮಲಿಕನಾಯಬನು ಸರ್ವಸಾಧಾರಣ ಜಟ್ಟಿಯಲ್ಲ, ತಘಲಕ ಬಾದಶಹನ ಜಟ್ಟಿಗಳಲ್ಲಿ ಅಗ್ರೇಸರನಾದವನು. ಆತನಿಗೆ ಎದುರಾದ ಜಟ್ಟಿಗಳೇ ಇಲ್ಲೆಂಬ ಖ್ಯಾತಿ ಇರುತ್ತಿರಲು, ನಮ್ಮ ಈ ಮಲ್ಲಣ್ಣನು ಆತನನ್ನು ಒಗೆದನಲ್ಲ! ಇದರ ಮೇಲಿಂದ ಕನ್ನಡಿಗರು ನೀವು ಸ್ವಸ್ವರೂಪವನ್ನು ನೋಡಿಕೊಳ್ಳಿರಿ. ನಿಮಗೆ ನಿಶ್ಚಯವಾಗಿ ಸ್ವಸ್ವರೂಪದ ವಿಸ್ಮೃತಿಯಾಗಿರುತ್ತದೆ. ಈ ಮಲ್ಲಸರ್ಜನನ್ನು ಸರಿಗಟ್ಟುವ, ಅದೇಕೆ, ಮಲ್ಲಸರ್ಜನನನ್ನು ಮೀರುವಂಥ ಎಷ್ಟೋ ಜಟ್ಟಿಗಳು ನಿಮ್ಮಲ್ಲಿರುವರೆಂದು ನಾನು ಹೇಳುವ ಕಾರಣವಿಲ್ಲ; ಆದರೆ ಮಾಡಬೇಕೇನು? ನಿಮ್ಮ ಸ್ವರೂಪವಿಸ್ಮೃತಿಯು ನಿಮಗೆ ಆಗಿಹೋಗಿದೆ. ನೆನಪುಮಾಡಿಕೊಳ್ಳಿರಿ, ಇದೇ ಕರ್ನಾಟಕದಲ್ಲಿ ಚಾಲುಕ್ಯ, ರಾಷ್ಟ್ರಕೂಟ, ಕದಂಬಾದಿ ಶ್ರೇಷ್ಠ ರಾಜವಂಶಗಳು ಆಳಿ ದಿಗಂತವಿಶ್ರಾಂತ ಕೀರ್ತಿಗಳಾದದ್ದನ್ನೂ, ಅವರೊಳಗಿನ 2ನೇ ಪುಲಕೇಶಿಯಂಥ ನೃಪಕೇಸರಿ ಸಾರ್ವಭೌಮನು ಉತ್ತರ ಹಿಂದುಸ್ಥಾನವನ್ನೂ ಜಯಿಸಿ ಪರಮೇಶ್ವರನೆಂಬ ಬಿರುದು ಧರಿಸಿದ್ದನ್ನೂ, ನೀವು ಚೆನ್ನಾಗಿ ನೆನಪು ಮಾಡಿಕೊಳ್ಳಿರಿ. ಆ ನರವೀರನು ಕನ್ನಡಿಗನೇ ಅಲ್ಲವೇ? ಆ ನರವೀರನ ವೀರಾಗ್ರಣಿ ದಂಡಾಳುಗಳಲ್ಲಿ ಕನ್ನಡಿಗರಾದ ನಿಮ್ಮ ಸಮಾವೇಶವೂ ಆಗಿತ್ತಲ್ಲವೆ? ಅತಿ ಪ್ರಾಚೀನೇತಿ

ಹಾಸವನ್ನು ನೆನಪುಮಾಡಿಕೊಳ್ಳಿರಿ. ನಿಮ್ಮ ನೆರೆಯಲ್ಲಿರುವ ಕಿಷ್ಕಿಂದೆಯಲ್ಲಿ ಆಳಿದ ವಾಲಿಯೆಂಬ ವಾನರಶ್ರೇಷ್ಠನು ಅಮೋಘವಾದ ರಾಮಬಾಣವನ್ನು ಹಿಡಿದು ಶ್ರೀರಾಮನನ್ನು ಬೆರಗುಗೊಳಿಸಿದ್ದನ್ನು ಮರೆತಿರಾ? ಭಕ್ತಶಿಖಾಮಣಿಯೂ, ಸ್ವಾಮಿಕಾರ್ಯದಕ್ಷನೂ, ರಾಮ ದೂತನೂ ಎನಿಸಿದ ಮಾರುತಿರಾಯನೂ ಈ ಕನ್ನಡನಾಡಿನವನಲ್ಲದೆ ಮತ್ತೆಲ್ಲಿಯವನೆಂದು ನೀವು ತಿಳಿದಿರುತ್ತೀರಿ? ಆತನ ಕೀರ್ತಿಯು ಭರತಖಂಡದಲ್ಲೆಲ್ಲ ಹಬ್ಬಿ, ಆಸೇತುಹಿಮಾಚಲ ಊರೂರಿಗೆ ಆತನ ಮೂರ್ತಿಗಳಿರುವದು ನಿಮಗೆ ಕಾಣುವದಿಲ್ಲವೆ? ಅವನು ಯಾರೆಂದು ನೀವು ತಿಳಿದಿರುತ್ತೀರಿ? ಅವನೂ ನಿಮ್ಮ ಕನ್ನಡನಾಡಿನವನೇ. ಹೀಗಿದ್ದು ನೀವು ಸ್ವಸ್ವರೂಪಜ್ಞಾನವಿಲ್ಲದೆ ನಾವು ಕೈಲಾಗದವರು, ಯವನರಿಗೆ ಹೇಗೆ ಈಡಾದೇವೆಂದು ಅಂಜುತ್ತಿರುವಿರಲ್ಲ! ಇದು ಪರಮಾಶ್ಚರ್ಯದ ಸಂಗತಿಯು. ನೋಡಿರಿ, ಒಬ್ಬ ಮಲ್ಲನು ಎಂಥ ವಿಲಕ್ಷಣತೇಜಸ್ಸನ್ನು ಪ್ರಕಟಿಸಿದನು! ಅಂಥ ಆ ಮಲ್ಲಸರ್ಜನನು ಇದಕ್ಕೂ ಮೊದಲು ಕುರಿಕಾಯುವ ಒಬ್ಬ ಸಭ್ಯ ಕುರುಬನಾಗಿ ಸ್ವಸ್ವರೂಪವಿಸ್ಮೃತಿಯಿಂದ ಕೆಲಸಕ್ಕೆ ಬಾರದವನಾಗಿ ಮುಸಲ್ಮಾನರಿಗೆ ಅಂಜುತ್ತ ಕೈಮುಚ್ಚಿಕೊಂಡು ಕುಳಿತಿದ್ದನಲ್ಲವೆ? ಅದೇ ಮಲ್ಲಣ್ಣನು ಹೆಗ್ಗನೆಂಬ ತೇಜಸ್ವಿಯಾದ ವೀರನ ಸಹವಾಸದಿಂದ ಸ್ವಸ್ವರೂಪಜ್ಞಾನವನ್ನು ಪಡೆದು ಈ ದರ್ಬಾರದಲ್ಲಿ ವೀರಾಗ್ರಣಿಯಾಗಿ ಮೆರೆಯುತ್ತಿರುವನಲ್ಲವೆ? ನಿಮ್ಮ ಸ್ಥಿತಿಯಾದರೂ ಹೀಗೆಯೇ ಇರುತ್ತದೆಂದು ತಿಳಿಯಿರಿ. ನಿಮ್ಮಂಥ ಮೀಸೆಹೊತ್ತ ಗಂಡಸರು ಹೋಗಲಿ, ಒಬ್ಬ ಗಾಯಕಿಯು ತನ್ನ ವರ್ಚಸ್ಸಿನಿಂದ ತಫಲಕ ಬಾದಶಹನನ್ನು ಬೆರಗುಗೊಳಿಸಲಿಲ್ಲವೆ? ಆಕೆಯು ಕನ್ನಡಿಗಳಲ್ಲದೆ ಮತ್ತೆ ಯಾರೆಂದು ತಿಳಿದಿರುತ್ತೀರಿ ? ತಿಳಿದುನೋಡಿರಿ, ಮಲ್ಲಣ್ಣನೇನು ಮುಗಿಲಿನಿಂದ ಇಳಿದುಬಂದಿರುವದಿಲ್ಲ, ಗಾಯಕಿಯೇನು ಗಂಧರ್ವ ಲೋಕದಿಂದ ಇಳಿದು ಬಂದಿರುವದಿಲ್ಲ, ಅವರಿಬ್ಬರೂ ನಿಮ್ಮ ಕನ್ನಡಿಗರೊಳಗಿನ ಸರ್ವಸಾಮಾನ್ಯ ಜನರಾಗಿರುವರು. ಅವರೇನು ಈ ಮೊದಲು ಲೋಕಪ್ರಸಿದ್ಧರಾಗಿದ್ದಿಲ್ಲ. ಎಲ್ಲಿಯೋ ಒಂದು ಮೂಲೆಯಲ್ಲಿ ಬಿದ್ದುಕೊಂಡಿದ್ದರು; ಆದರೆ ಸತ್ಸಹವಾಸದಿಂದ ಅವರ ಸ್ವಸ್ವರೂಪವಿಸ್ಮೃತಿಯು ಅಳಿದುಹೋಗಿ ಅವರಲ್ಲಿ ವಿಲಕ್ಷಣ ಜಾಗ್ರತಿಯುಂಟಾಗಿರುತ್ತದೆ. ಅಂಥ ಜಾಗ್ರತಿಯು ಸತ್ಸಮಾಗಮದಿಂದ ನಿಮ್ಮಲ್ಲಿ ಉಂಟಾಗಿರುವದಿಲ್ಲ, ಇಷ್ಟೇ ಅವರಿಗೂ ನಿಮಗೂ ಭೇದವಿದ್ದರೆ ಇರಬಹುದು; ಆದ್ದರಿಂದ ಪ್ರಿಯ ಕನ್ನಡಿಗರೇ, ನೀವಾದರೂ ಸತ್ಸಮಾಗಮದಿಂದ ಸ್ವಸ್ವರೂಪ ಜಾಗ್ರತಿಯನ್ನುಂಟುಮಾಡಿಕೊಳ್ಳಿರಿ.

''ಈ ಸ್ವಸ್ವರೂಪವಿಸ್ಮೃತಿಯು ನಿಮಗೇ ಆಗಿರುತ್ತದೆಂದು ನೀವು ತಿಳಿದುಕೊಳ್ಳತಕ್ಕದ್ದಲ್ಲ, ನೀಚಸ್ವಾರ್ಥದ ಪಿಡುಗಿನಿಂದ ಪೀಡಿತರಾದ ಜನರ ಸ್ವಸ್ವರೂಪವಿಸ್ಮೃತಿಯಾಗುತ್ತಾಗುತ್ತ ಅವರು ಕಡೆಗೆ ರಸಾತಳಕ್ಕೆ ಇಳಿಯುವರೆಂಬದನ್ನು ನೀವು ಚೆನ್ನಾಗಿ ನೆನಪಿನಲ್ಲಿಡಿರಿ. ಸದ್ಯಕ್ಕೆ ನಿಮ್ಮ ಕರ್ನಾಟಕದಲ್ಲಿ ಈ ಪಿಡುಗು ಅಂಟಿಕೊಂಡಿರುವದರಿಂದ ಸಂಪೂರ್ಣವಾಗಿ ನಿಮ್ಮ ಸ್ವಸ್ವರೂಪ ವಿಸ್ಮತಿಯಾಗಿ ಹೋಗಿದೆ. ಈ ಸ್ವಸ್ವರೂಪವಿಸ್ಮೃತಿಯ ಸಂಬಂಧದಿಂದ ನಿಮಗೊಂದು ಉದಾಹರಣೆ ಹೇಳುವೆನು. ಲಕ್ಷ ಗೊಟ್ಟು ಕೇಳಿರಿ. ಈ ಮೊದಲು ನಿಮ್ಮ ಮುಂದೆ ಭಕ್ತಶ್ರೇಷ್ಠನಾದ

ಮಾರುತಿರಾಯನ ಹೆಸರು ಎತ್ತಿದ್ದೆನಲ್ಲವೆ? ಆ ಭಕ್ತಶ್ರೇಷ್ಠನಿಗೆ ಸ್ವಸ್ವರೂಪವಿಸ್ಮೃತಿಯುಂಟಾದ ಕಥೆಯನ್ನು ಹೇಳುವೆನು, ಪೂರ್ಣ ಅವಧಾನವಿರಲಿ. ಹಿಂದಕ್ಕೆ ವಾಯುದೇವರ ಪರಮಾನುಗ್ರಹದಿಂದ ಕೇಸರಿಕಪಿಯ ಪತ್ನಿಯಾದ ಅಂಜನಾದೇವಿಯಲ್ಲಿ ಹನುಮಂತನೆಂಬವನೊಬ್ಬ ಶೂರಕುಮಾರನು ಜನಿಸಿದ್ದು ಸರ್ವರಿಗೂ ಪುರಾಣೇತಿಹಾಸಗಳಮೇಲಿಂದ ಗೊತ್ತಿದ್ದ ಸಂಗತಿಯಾಗಿರುತ್ತದೆ. ಆ ಬಾಲಕನು ಹುಟ್ಟಿದ ಕೂಡಲೆ ಫಲಬುದ್ಧಿಯಿಂದ ಸೂರ್ಯಬಿಂಬವನ್ನು ಹಿಡಿಯುವದಕ್ಕಾಗಿ ಸೂರ್ಯಮಂಡಲಕ್ಕೆ ಉಡ್ಡಾಣಮಾಡಿದನು; ಆದರೆ ಈ ಕುಮಾರನ ಇಂಥ ಅತಿ ಸಾಹಸವನ್ನು ಸೂರ್ಯನು ಕಂಡು, ಇಂಥ ಕಾರ್ಯವನ್ನು ಮಾಡಬಾರದೆಂದು ಉಪದೇಶಿಸುವದಕ್ಕಾಗಿ ಆ ಕುಮಾರನ ಮೋರೆಯ ಮೇಲೆ ಒಂದು ಸಾರೆ ಹೊಡೆದನು; ಅದರಿಂದ ಆಂಜನೇಯನ ಹನುವು (ಗದ್ದವು) ಕೆಳಗಿಳಿದು ಆತನು ಲೋಕದಲ್ಲಿ ಹನುಮಂತನೆಂಬ ನಾಮವನ್ನು ಧರಿಸಿದನು. ಆ ಕುಮಾರನು ಸೂರ್ಯನ ಹೊಡೆತದಿಂದ ಹಿಂದಿರುಗಿ ಭೂಲೋಕಕ್ಕೆ ಬಂದು ತನ್ನ ಉಜ್ವಲ ಸಾಮರ್ಥ್ಯದಿಂದ ತಪಃಕರ್ಮನಿರತರಾದ ಋಷಿಗಳಿಗೆಲ್ಲ ತೊಂದರೆಯನ್ನುಂಟುಮಾಡತೊಡಗಿದನು. ಆಗ ಮಹಾಜ್ಞಾನಿಗಳಾದ ಋಷಿಗಳು ಮಾರುತಿಯಿಂದ ಮುಂದೆ ಆಗಬೇಕಾಗಿರುವ ರಾಮಕಾರ್ಯವನ್ನು ನೆನೆದು ಆತನಿಗೆ ಹೆಚ್ಚಿನ ಉಪಹತಿ ಮಾಡದೆ ''ಯಾರಾದರೂ ನಿನ್ನನ್ನು ಎಚ್ಚರಿಸದ ಹೊರತು ನಿನಗೆ ಸ್ವಸ್ವರೂಪಜ್ಞಾನವಾಗಬೇಡ'' ಎಂದು ಶಾಪವನ್ನು ಕೊಟ್ಟರು. ಇದರಿಂದ ಮಾರುತಿಯು ಶಾಂತನಾಗಿ ಲೋಕೋಪದ್ರವ ಕಾರ್ಯವನ್ನು ಬಿಟ್ಟುಕೊಟ್ಟನು. ಮುಂದೆ ಈ ಮಹಾಸಮರ್ಥನು ಶ್ರೀರಾಮನ ಸೇವಕನಾಗಿ ಸೀತಾಮಾತೆಯ ಶೋಧಕ್ಕಾಗಿ ಎಲ್ಲ ವಾನರರೊಡನೆ ಸಮುದ್ರತೀರಕ್ಕೆ ಹೋಗಿದ್ದನು; ಆದರೆ ಯಾರಾದರೂ ತಿಳಿಸದ ಹೊರತು ಸ್ವಸ್ವರೂಪಜ್ಞಾನವಾಗಬಾರದೆಂದು ಋಷಿಗಳ ಶಾಪವಿದ್ದದ್ದರಿಂದ ಈತನು ಕೈಲಾಗದವನಂತೆ ಕೈಮುಚ್ಚಿಕೊಂಡು ಸುಮ್ಮನೆ ಕುಳಿತುಬಿಟ್ಟನು. ಆಗ ಕಪಿವೃದ್ಧನೂ, ಮಹಾಬಲಶಾಲಿಯೂ, ಜ್ಞಾನಿಯೂ ಆದ ಜಾಂಬುವಂತನ ಉಪದೇಶದಿಂದ ಮಾರುತಿರಾಯನಿಗೆ ಸ್ವಸ್ವರೂಪಜ್ಞಾನವನ್ನು ಮಾಡಿಕೊಡಲು, ಅದೇ ಮಾರುತಿರಾಯನ ಆಶ್ಚರ್ಯಕಾರಕ ಸಾಮರ್ಥ್ಯವು ಪ್ರಕಟವಾಗಿ, ಅದರಿಂದ ಸೀತಾಮಾತೆಯ ಶೋಧವಾಯಿತು! ಪ್ರಿಯ ಕನ್ನಡಿಗರೆ, ಈ ಕಥೆಯಿಂದ ನೀವು ಏನು ಕಲಿತುಕೊಳ್ಳಬೇಕೆಂಬದನ್ನು ಹೇಳುವೆನು ಕೇಳಿರಿ. ಹನುಮಂತನು ಶಿಶುವಾಗಿದ್ದರೂ ಆತನಿಗೆ ಸ್ವಸ್ವರೂಪಜ್ಞಾನವಿತ್ತು, ತಾನು ದೇವಾಂಶನು; ಇತರ ಜನರಂತೆ ತನ್ನ ಸಾಮರ್ಥ್ಯವು ಕಡಿಮೆಯದಲ್ಲ; ಸಕಲ ಲೋಕಗಳನ್ನೂ ಆಕ್ರಮಿಸಲು ತಾನು ಶಕ್ತನು, ಎಂದು ಆತನು ತಿಳಿದುಕೊಂಡಿದ್ದನು. ಹಾಗಲ್ಲದಿದ್ದರೆ ಆತನು ಹುಟ್ಟಿದಕೂಡಲೆ ಸೂರ್ಯಮಂಡಲಕ್ಕೆ ಹಾರಬಹುದಾಗಿತ್ತೇ? ಆದರೆ ಮಾರುತಿಯ ಈ ಸ್ವಸ್ವರೂಪಜ್ಞಾನವು ಅಹಂಭಾವಯುಕ್ತವಾದದ್ದರಿಂದ, ಅಂದರೆ ಜಗತ್ತಿಗೂ ತನಗೂ ಇರುವ ಸಂಬಂಧವನ್ನು ಮರೆತು ತನ್ನಲ್ಲಿಯೇ ತಾನು ಬೆರೆತು ನಡೆಯುವ ಸ್ಥಿತಿಯುಳ್ಳದ್ದಾದ್ದರಿಂದ, ಅದು ಸ್ವ-ಪರ ತಾಪದಾಯಕವಾಯಿತು. ಮಾರುತಿಯು ಎಷ್ಟು ಸಮರ್ಥನಾದರೂ ಆತನು ಲೋಕದ ಜನರಲ್ಲಿ ಒಬ್ಬನಲ್ಲವೇ? ಆತನಿಂದ ಸಹಿತವಾದ ಲೋಕಕ್ಕಿಂತ ಆ ಮಾರುತಿಯ ಯೋಗ್ಯತೆಯು ಕಡಿಮೆಯದಲ್ಲವೆ? ಈ ಮರ್ಮವು

ಮುಂದೆ ಮಾರುತಿಗೆ ಶ್ರೀರಾಮನ ಅನುಗ್ರಹದಿಂದ ಗೊತ್ತಾಗಲು, ಆತನು ರಾವಣ ಸಂಹಾರ ರೂಪವಾದ ಲೋಕಕಲ್ಯಾಣದ ಮಹಾಕಾರ್ಯದಲ್ಲಿ ಶ್ರೀರಾಮನಿಗೆ ಪರಮ ಸಹಾಯಕನಾಗಿ ಲೋಕಪೂಜ್ಯನಾದನು. ತಾತ್ಪರ್ಯವಿಷ್ಟೆ, ಮನುಷ್ಯನ ಅಹಂಭಾವವು ಲೋಕಕಲ್ಯಾಣ ಭಾವದಿಂದ ಸುಸಂಸ್ಕೃತವಾದರೆ, ಆ ಅಹಂಭಾವನೆ ಸ್ವ–ಪರ ತಾರಕವಾಗುವದು. ಈ ಮಾತನ್ನು ಲಕ್ಷ್ಯದಲ್ಲಿಟ್ಟು ನೀವು ಲೋಕಾರಾಧನ ತತ್ಪರರಾಗಿರಿ.

''ಪ್ರಿಯ ಕನ್ನಡಿಗರೇ, ನಿಮ್ಮ ಈಗಿನ ಹೀನಸ್ಥಿತಿಯನ್ನು ನೋಡಿ ನನಗೆ ಬಹಳ ವ್ಯಸನವಾಗುತ್ತದೆ; ಯಾಕಂದರೆ, ನೀವು ಬಾಲಮಾರುತಿಯಂತೆ ಅಹಂಭಾವಯುಕ್ತರು ಆಗಿರದೆ ನೀಚ ವಿಷಯಭಾವವುಳ್ಳವರಾಗಿರುವಿರಿ! ವಿಷಯಗಳು ನಾಶವಂತವಾದ್ದರಿಂದ ''ಭಾವವೇ ಬಲ''ವೆಂಬ ನಿಯಮದಂತೆ ನೀವು ವಿಷಯಾಧೀನರಾಗಿ ನಾಶದ ಪಂಥವನ್ನು ಹಿಡಿದಿರುವಿರಿ.. ಅಹಂಭಾವವುಳ್ಳ ಮುಸಲ್ಮಾನರು ನಿಮ್ಮನ್ನು ರಸಾತಳಕ್ಕೆ ಮೆಟ್ಟತೊಡಗಿರುವರು. ನಿಮ್ಮಂಥ ವಿಷಯಾಧೀನರನ್ನು ಹೇಡಿತನವು ಮುಸುಕುವುದು; ಅವರು ಕೆಲಸಕ್ಕೆ ಬಾರದವರಾಗಿ ಹೋಗುವರು. ಮಾರುತಿಯು ಅಹಂಭಾವದಿಂದ ಜಗತ್ತನ್ನು ತೃಣೀಕರಿಸುತ್ತಿದ್ದನು; ಆದರೆ ವಿಷಯಾಂಧರಾದ ನೀವು ನಿಮ್ಮನ್ನೇ ತಿರಸ್ಕರಿಸಿಕೊಳ್ಳುತ್ತಿರುವಿರಿ; ಯಾಕಂದರೆ, ''ನಮ್ಮಲ್ಲಿ ಅಂಥ ಯೋಗ್ಯತೆಯೇನಿದೆ ? ನಾವು ಮಹಾಕಾರ್ಯ ಮಾಡಲಿಕ್ಕೆ ಹ್ಯಾಗೆ ಸಮರ್ಥರಾದೇವು? ಇಲ್ಲದ ಉಸಾಬರಿಗೆ ಹೋದರೆ ಆಪ್ತೇಷ್ಟರಿಗೂ ಇದ್ದ ಧನದೌಲತ್ತಿಗೂ ನಾವು ಎರವಾಗಿ ಕಂಗಾಲ ರಾದೇವಲ್ಲ!'' ಎಂಬ ಅಂಜಿಕೆಯು ಯಾವಾಗಲೂ ನಿಮ್ಮನ್ನು ಬಾಧಿಸುತ್ತಿರುವದು. ಇಂಥ ಅಂಜಿಕೆಯು ಜಗತ್ತನ್ನೇ ತೃಣೀಕರಿಸುವ ಮಾರುತಿರಾಯನಿಗೆ ಇತ್ತೇ? ನೀವು ಮಾರುತಿಯಂತೆ ಜಗತ್ತನ್ನು ತೃಣೀಕರಿಸುವದಂತು ಇರಲಿ, ಜಡಕ್ಕಿಂತಲೂ ಜಡರಾಗಿ ಸ್ವಸಂರಕ್ಷಣ ಮಾಡಿ ಕೊಳ್ಳಲಿಕ್ಕೂ ಅಸಮರ್ಥರಾಗಿರುವಿರಿ. ಇಷ್ಟರವರೆಗೆ ನಿಮ್ಮ ಸ್ವಸ್ವರೂಪವಿಸ್ಮೃತಿಯ ಮಜಲು ಬಂದಬಳಿಕ, ನಿಮ್ಮ ತರುಣೋಪಾಯವು ನಿಮಗೆ ಹ್ಯಾಗೆ ತೋಚಬೇಕು? ಮಾರುತಿಯ ಅಹಂಭಾವವು ನಷ್ಟವಾಗುವದಕ್ಕಾಗಿ ಆತನು ಶ್ರೀರಾಮನನ್ನು ಆರಾಧಿಸಿದಂತೆ, ನೀವು ವಿಷಯಭಾವವು ನಷ್ಟವಾಗುವದಕ್ಕಾಗಿ ಲೋಕಾರಾಧನೆಯನ್ನು ಮಾಡಬೇಕಾಗುವದು. ಮಾರುತಿಯಂತೆ ರಾಮನನ್ನು ಆರಾಧಿಸಲಿಕ್ಕೆ ವಿಷಯಾಂಧತೆಯ ಮೂಲಕ ಅನಧಿಕಾರಿಗಳಾದ ನಿಮಗೆ ರಾಮನ ದರ್ಶನವಾಗುವ ಹಾಗಿಲ್ಲ, ಅದಕ್ಕಾಗಿ ನೀವು ಲೋಕಾರಾಧನೆಯನ್ನು ಅಂದರೆ ಲೋಕಹಿತ ಕಾರ್ಯಗಳನ್ನು ಅಹಂಭಾವದಿಂದ ಮೊದಲು ಮಾಡಬೇಕಾಗುವದು; ಇಂಥ ಮಹತ್ವದ ಏಕನಿಷ್ಠೆಯ ಲೋಕಾರಾಧನೆಯಿಂದ ನಿಮ್ಮ ವಿಷಯಭಾವವು ನಷ್ಟವಾಗಿ ನಿಮ್ಮಲ್ಲಿ ನಿಜವಾದ ಅಹಂಭಾವವು ಉತ್ಪನ್ನವಾದರೆ, ರಾಮರೂಪದರ್ಶನವಾಗಿ ಮಾರುತಿಯಂತೆ ನೀವೂ ಕೃತಾರ್ಥರಾದೀರಿ; ಆದ್ದರಿಂದ ನೀವು ಲೋಕಾರಾಧನೆಗಾಗಿ ಸರ್ವಸ್ವವನ್ನು ಅರ್ಪಿಸಲಿಕ್ಕೆ ಸಿದ್ಧರಾದ ದಿವಸವೇ ನಿಮ್ಮ ಅಭ್ಯುದಯಕ್ಕೆ ಆರಂಭವಾಯಿತೆಂದು ತಿಳಿದುಕೊಳ್ಳಿರಿ.

''ವ್ಯಕ್ತಿಶಃ ನೀವು ದೇವಾಂಶನಾದ ಮಾರುತಿಯಷ್ಟು ಸಮರ್ಥರಾಗಿರದಿದ್ದರೂ, ಸಮೂಹತ್ವೇನ ಮನುಷ್ಯಮಾತ್ರರೆನಿಸುವ ಇತರ ಜನಾಂಗದವರಷ್ಟು, ಕನ್ನಡಿಗರು ನೀವು

ನಿಶ್ಚಯವಾಗಿ ಸಮರ್ಥರಾಗಿರುವಿರಿ. ಕನ್ನಡ ದೇಶದಲ್ಲಿ ಅವತರಿಸಿದ ಮಹಾನುಭಾವನಾದ ಮಾರುತಿಯು ಮಹಾನುಭಾವರಾದ ಋಷಿಗಳ ಶಾಪದಿಂದ ಸ್ವಸಾಮರ್ಥ್ಯವನ್ನು ಮರೆತಂತೆ, ನೀಚ ವಿಷಯಲೋಲುಪತೆಯ ಮಬ್ಬಿನಿಂದ ಸ್ವಸಾಮರ್ಥ್ಯವನ್ನು ಮರೆತಿರುವ ನೀವು, ಮಾರುತಿಯಂತೆ ಶ್ರೀರಾಮನ ದಾಸರಾಗುವದನ್ನು ಬಿಟ್ಟು ನಿಮ್ಮಂತೆ ಮನುಷ್ಯರಾಗಿರುವ ಮುಸಲ್ಮಾನರಿಗೆ ದಾಸರಾಗುವ ಹಾದಿಯನ್ನು ಹಿಡಿದಿರುವಿರಿ. ಮಹಾತ್ಮನಾದ ಮಾರುತಿಯು ಶ್ರೀರಾಮನ ದಾಸನಾಗಿ ಜಗತ್ಕಲ್ಯಾಣಮಾಡಿ ಲೋಕಪೂಜ್ಯನಾದನು; ಆದರೆ ಮನುಷ್ಯರ ದಾಸರಾಗುವ ನೀವು ಜಗತ್ಕಲ್ಯಾಣದ ಬದಲು ನಿಮ್ಮ ಅಧಃಪತನವನ್ನೇ ಮಾಡಿಕೊಂಡು ಪತಿತರೆಂಬ ನಿಂದೆಗೆ ಗುರಿಯಾಗತೊಡಗಿರುವಿರಿ. ಆತ್ಮ ದೃಷ್ಟಿಯಿಂದ ಈಶ್ವರಸ್ವರೂಪರೂ, ಅಥವಾ ಈಶ್ವರನ ಸಲಿಗೆಗೆ ತಕ್ಕವರೂ ಆದ ನಿಮಗೆ ಈ ಅಧಃಪತನವು ಸರ್ವಥಾ ಭೂಷಣವಲ್ಲ; ಹಿತವಂತೂ ಅಲ್ಲವೇ ಅಲ್ಲ. ಪ್ರಿಯ ಕನ್ನಡಿಗರೇ, ವಿಷಯಮೋಹದಿಂದ ವಿವೇಕಭ್ರಷ್ಟರಾಗಿರುವ ನಿಮಗೆ ಯೋಗ್ಯ ಮಾರ್ಗದರ್ಶಕರು ಬೇಕಾಗಿರುವರೆಂಬದನ್ನು ನಾನು ಬಲ್ಲೆನು; ಆದರೆ ನೀವು ಮಾರ್ಗವನ್ನು ಕ್ರಮಿಸಹತ್ತಿದರೆ ನಿಶ್ಚಯವಾಗಿ ಮಾರ್ಗದರ್ಶಕರು ಸಿಗುವರೆಂದು ನಾನು ಕೈಯೆತ್ತಿ ಹೇಳುತ್ತೇನೆ. ನೆಲಕ್ಕೆ ಬಿದ್ದು ಗೆದ್ದಲಿ ಹಿಡಿಯುತ್ತಿರುವವರ ಬಳಿಗೆ ಮಾರ್ಗದರ್ಶಕರು ಯಾಕೆ ಬರುವರು? ಆದ್ದರಿಂದ ಶೂರರಾದ ಕನ್ನಡಿಗರೇ, ಏಳಿರಿ ಟೊಂಕ ಕಟ್ಟಿರಿ; ನಮ್ಮ ಸ್ವಾತಂತ್ರ್ಯವನ್ನು ನಷ್ಟಪಡಿಸಬಂದ ಮುಸಲ್ಮಾನರನ್ನು ಹೊಡೆದೋಡಿಸುವುದಕ್ಕಾಗಿ ಸಡ್ಡುಹೊಡೆದು ನಿಂತುಕೊಳ್ಳಿರಿ. ಮಂದಿಯ ಸ್ವಾತಂತ್ರ್ಯಹರಣ ಮಾಡುವದು ಪಾತಕವಾಗಿದ್ದರೆ, ತನ್ನ ಸ್ವಾತಂತ್ರ್ಯವನ್ನು ತಾನೇ ನಷ್ಟಪಡಿಸಿಕೊಳ್ಳುವದು ಮಹಾಪಾತಕವಾಗಿರುವದು; ಆದ್ದರಿಂದ ಪ್ರಸಂಗಜ್ಞರಾದ ಕನ್ನಡಿಗರೇ, ಇಲ್ಲದ ಸೂಕ್ಷ್ಮ ವಿಚಾರಕ್ಕೆ ನೀವು ಹೋಗಬೇಡಿರಿ; ಕೆಲಸಕ್ಕೆ ಬಾರದ ಕಾರ್ಯ–ಕಾರಣ ಭಾವದ ಬಲೆಗೆ ಬೀಳಬೇಡಿರಿ; ''ಹೀಗೆ ಮಾಡಿದರೆ ಹ್ಯಾಗಾದೀತು. ಹಾಗೆ ಮಾಡಿದರೆ ಹ್ಯಾಗಾದೀತು'' ಎಂಬ ಶುಷ್ಕವಾದ ಮಾಡುತ್ತ ಕಾಲಹರಣ ಮಾಡಬೇಡಿರಿ; ತಿಳಿದುನೋಡಿರಿ. ದೇವತೆಗಳನ್ನು ಕೂಡ ಸೆರೆಯಲ್ಲಿಟ್ಟಿದ್ದ ರಾವಣನನ್ನು ಮರ ಮರ ಹಾರುವ ಮಂಗಗಳು ಮಣ್ಣುಗೂಡಿಸಿದ್ದು ಯಾವ ಕಾರ್ಯಕಾರಣಭಾವಕ್ಕೆ ಕೂಡುವದು? ಯಾವ ಸೂಕ್ಷ್ಮವಿಚಾರಕ್ಕೆ ನಿಲುಕುವದು? ಅದರಂತೆ ಎರಡು ಕೈಯ ಒಂದು ಕೊಡಲಿಯ ಪರಶುರಾಮನು ಸಹಸ್ರಭುಜದ ಸಹಸ್ರಾಯುಧಗಳ ಕಾರ್ತಿವೀರ್ಯನನ್ನು ಸಂಹರಿಸಿದ್ದು ಯಾವ ಕಾರ್ಯ–ಕಾರಣ ಭಾವಕ್ಕೆ ಕೂಡುವದು, ಯಾವ ಸೂಕ್ಷ್ಮವಿಚಾರಕ್ಕೆ ನಿಲುಕುವದು? ''ಕ್ರಿಯಾ ಸಿದ್ಧಿಃ ಸತ್ವೇಭವತಿ ಮಹತಾಂನೋಪಕರಣೇ'' ಅಂದರೆ ಕ್ರಿಯಾಸಿದ್ಧಿಯು ಮಹಾತ್ಮರ ಸತ್ವದಿಂದಾಗುತ್ತದಲ್ಲದೆ, ಸಾಧನಗಳಿಂದ ಆಗುವದಿಲ್ಲೆಂಬುದನ್ನು ತಿಳಿದುಕೊಂಡು ನೀವೆಲ್ಲರೂ ಸತ್ವಶಾಲಿಗಳಾಗಿರಿ. ನಮ್ಮ ಮಲ್ಲಣ್ಣನ ಉದಾಹರಣವನ್ನೇ ಈಗ ನೀವು ನೋಡಿರಿ. ಆತನು ಕುರುಬನಾಗಿ ಕುರಿ ಕಾಯುತ್ತಿರುವವರೆಗೆ ಒಬ್ಬ ಸರ್ವಸಾಮಾನ್ಯ ಮನುಷ್ಯನಾಗಿದ್ದನು. ಆದರೆ ಈಗ ಹೆಗ್ಗ(ಹುಕ್ಕ) ನೆಂಬ ತನ್ನ ಪ್ರತಾಪಶಾಲಿಯಾದ ಸ್ವಾಮಿಯು ಮಾರ್ಗ ತೋರಿಸಿದಂತೆ ಲೋಕಾರಾಧನತತ್ಪರ ನಾದದ್ದರಿಂದ ಮಲಿಕನಾಯಬನಂಥ ಮಹಾಸಮರ್ಥನನ್ನು ಒಗೆದು ಈಗ ರಾಜಮಾನ್ಯನೂ,

ಲೋಕಗಣ್ಯನೂ ಆಗಿರುವನು. ಅದರಂತೆ, ತಘಲಕ ಬಾದಶಹನ ಮೇಲೆ ತನ್ನ ವರ್ಚಸ್ಸು ಕೂಡಿಸಿದ ಒಬ್ಬ ಯಃಕಶ್ಚಿತ ಗಾಯಕಿಯ ಸತ್ವವನ್ನೂ ನೀವು ವಿಚಾರಿಸತಕ್ಕದ್ದು. ಇದರಂತೆ ನೀವಾದರೂ ಲೋಕಕಲ್ಯಾಣೇಚ್ಛುಗಳಾದ ಮಹಾತ್ಮರ ಸಹವಾಸಮಾಡಿ ಅವರ ಆಜ್ಞೆಯನ್ನು ವೇದಾಜ್ಞೆಯೆಂದು ತಿಳಿದು, ಅವರು ತೋರಿಸುವ ಮಾರ್ಗವಿಡಿದು ನಿರ್ಧಾರದಿಂದ ಸಾಗಿದರೆ ನೀವು ನಿಶ್ಚಯವಾಗಿ ಕಡ್ಡಿಹೋಗಿ ಗುಡ್ಡವಾಗುವಿರಿ; ಇಲಿಹೋಗಿ ಹುಲಿಯಾಗುವಿರಿ. ನೀವು ಮಾರ್ಗದರ್ಶಕರಾದ ಮಹಾಪುರುಷರ ಆಜ್ಞಾಪಾಲನ ಮಾಡುವಾಗ ನಿಮ್ಮ ಬುದ್ಧಿವಂತಿಕೆಯನ್ನು ಆ ಮಹಾ ಪುರುಷರಿಗೆ ಒಪ್ಪಿಸಿ ಅಜ್ಞಾನಿಗಳಂತೆ ಆಚರಿಸಿರಿ. ಮಹಾಪುರುಷರ ಆಜ್ಞೆಯೇ ಮಾರ್ಗದರ್ಶಕ ದಿವ್ಯಜ್ಯೋತಿಯು. ಆ ದಿವ್ಯಜ್ಯೋತಿಯಲ್ಲಿ ನಿಮ್ಮ ಕ್ಷುದ್ರ ಜ್ಯೋತಿಗಳನ್ನು ಅಡಗಿಸಿ ಮಾರ್ಗವನ್ನು ಕ್ರಮಿಸಿರಿ. ಮಹಾಪುರುಷರ ಮಾರ್ಗದರ್ಶನವು ಜ್ಞಾನಸ್ವರೂಪವು; ಸ್ವವಿಚಾರ ಶೂನ್ಯತೆಯಿಂದ ಆ ಮಾರ್ಗವಿಡಿದು ಕ್ರಮಿಸುವದು ಅಜ್ಞಾನಸ್ವರೂಪವು. ಹೀಗೆ ಜ್ಞಾನಾಜ್ಞಾನಗಳ ಮಿಶ್ರಣವಾಗದಿದ್ದರೆ ಕಾರ್ಯವೇ ಆಗುವದಿಲ್ಲ; ಯಾಕಂದರೆ ಕೇವಲ ಜ್ಞಾನವಾಗಲಿ, ಕೇವಲ ಅಜ್ಞಾನವಾಗಲಿ ಕಾರ್ಯಕಾರಿಯಲ್ಲ; ಆದ್ದರಿಂದ ಪ್ರಿಯಕನ್ನಡಿಗರೇ, ಲೋಕಕಲ್ಯಾಣೇಚ್ಛು ಗಳಾದ ಮಹಾಪುರುಷರ ಆಜ್ಞೆಯಂತೆ ನಡೆಯಲು ನೀವು ಸಿದ್ಧರಾಗಿರಿ. ಈ ಆಜ್ಞಾಪಾಲನ ರೂಪವಾದ ಮಹಾತಪಶ್ಚರ್ಯದಲ್ಲಿ ನಿಮ್ಮ ಸರ್ವಸ್ವದ ನಾಶವಾದರೂ ಲೆಕ್ಕಿಸಲಾಗದು. ಇಂಥ ಮಹಾತಪಸ್ಸನ್ನು ನೀವು ಆಚರಿಸುತ್ತ ಹೋದಂತೆ ಲೋಕ ಜಾಗ್ರತಿಯಾಗಿ ಲೋಕಕಲ್ಯಾಣದೊಡನೆ ನಿಮ್ಮ ಕಲ್ಯಾಣವೂ ಆಗುವದು !

''ಪ್ರಿಯಕನ್ನಡಿಗರೇ, ಜ್ಞಾನಾಜ್ಞಾನಗಳ ಮಿಶ್ರಣವು ಮಾತ್ರ ಕಾರ್ಯಕಾರಿಯೆಂದು ನಾನು ಹೇಳಿದ ವಿಷಯವಾಗಿ ನಿಮ್ಮಲ್ಲಿ ಕೆಲವರಿಗೆ ಸಂಶಯ ಬಂದಿದ್ದರೂ ಬಂದಿರಬಹುದು; ಆದ್ದರಿಂದ ಹೇಳುವ ಕೈಯಲ್ಲಿ ಇನ್ನು ನಾಲ್ಕು ಮಾತುಗಳನ್ನು ಹೇಳುತ್ತೇನೆ ಲಕ್ಷಗೊಟ್ಟು ಕೇಳಿರಿ. ಈಶ್ವರನು ಜ್ಞಾನಸ್ವರೂಪನು, ಅವನ ಮಾಯೆಯು, ಅಂದರೆ ಅವನ ಕಾರ್ಯೇಚ್ಛೆಯು ಅಜ್ಞಾನ ಸ್ವರೂಪವು. ಬರಿಯ ಈಶ್ವರನಿಂದ ಕಾರ್ಯವಾಗುವದಿಲ್ಲ. ಬರಿಯ ಆತನ ಕಾರ್ಯೇಚ್ಛೆ ಯಿಂದಲೂ ಕಾರ್ಯವಾಗುವದಿಲ್ಲ. ಈಶ್ವರನು ಕಾರ್ಯೇಚ್ಛೆಯುಳ್ಳವನಾದರೆ ಸೃಷ್ಟಿಸ್ವರೂಪವಾದ ಕಾರ್ಯವಾಗಿ, ಈಶ್ವರನು ಇಚ್ಛಾಮಾತ್ರದಿಂದ ಸೃಷ್ಟಿಯನ್ನು ನಿರ್ಮಿಸಿದನೆಂಬ ಮಾತು ಸಿದ್ಧವಾಗುವದು. ಸಕಲ ಪ್ರಪಂಚದ ಸೃಷ್ಟಿಯು ಅಜ್ಞಾನದಿಂದಲೇ ಆಗಿರುವದೆಂಬ ತಾತ್ಪರ್ಯವನ್ನು ''ಅಜಾಮೇಕಾಂ ಲೋಹಿತಶುಕ್ಲ ಕೃಷ್ಣಾಂ ಬಹ್ವಿಂ ಪ್ರಜಾಂಜನಯತೀಂ ಸ್ವರೂಪಾಂ'' ಎಂದು ತೈತ್ತಿರೀಯ ಶ್ರುತಿಯು ಹೇಳುತ್ತದೆ. ಉತ್ಪತ್ತಿರಹಿತವಾಗಿಯೂ, ನನ್ನಂತೆ ಇನ್ನೊಂದಿಲ್ಲವಾಗಿಯೂ, ಸತ್ವ–ರಜ–ತಮೋಗುಣ ರೂಪವಾಗಿಯೂ ಇರುವ ಮಾಯೆಯಿಂದ ಸಕಲ ಪ್ರಜಾಸೃಷ್ಟಿಯಾಗುತ್ತದೆಂದು ಈ ಶ್ರುತಿಯ ಅರ್ಥವಿರುವದು. ಹೀಗೆ ಸೃಷ್ಟಿಯ ಮುಖ್ಯ ಕಾರಣವು ಅಜ್ಞಾನವಿರುವದರಿಂದ, ಸೃಷ್ಟಿಗೆ ಸಂಬಂಧಿಸಿದ ಅನಂತ ವ್ಯವಹಾರಗಳಿಗೆ ಅಜ್ಞಾನವು ಕಾರಣವೆಂದು ಬೇರೆ ಯಾಕೆ ಹೇಳಬೇಕು? ಈ ಅಜ್ಞಾನವೊಂದು ಆವರಿಸದಿದ್ದರೆ

ಸಮಸ್ತ ಪ್ರಾಣಿಗಳೂ ಬ್ರಹ್ಮ ಸಮಾನಗಳಾಗಿ ಈ ಸೃಷ್ಟಿಯೇ ಉದ್ಭವಿಸುತ್ತಿದ್ದಿಲ್ಲ. ಅಜ್ಞಾನದ ತಾರತಮ್ಯದಿಂದ ಪ್ರಾಣಿಗಳಲ್ಲಿ ಹೆಚ್ಚು ಕಡಿಮೆಯಾಗಿ, ಗುರುಶಿಷ್ಯ ಭಾವ, ಸೇವ್ಯಸೇವಕ ಭಾವ, ಉಪಜೀವ್ಯೋಪಜೀವಕ ಭಾವ, ಉಪದೇಶೋಪದೇಶಕ ಭಾವ ಮುಂತಾದವು ಉಂಟಾಗಿ ಈ ಪ್ರಪಂಚವು ಸುರಕ್ಷಿತವಾಗಿ ನಡೆದಿರುತ್ತದೆ. ಇದರಿಂದ ಒಂದು ಪ್ರಕಾರದ ಸೌಂದರ್ಯವೂ ಈ ಪ್ರಪಂಚಕ್ಕೆ ಬಂದಿರುವದು; ಮತ್ತು ಈ ಅಜ್ಞಾನಮೂಲವಾದ ಮರಣಭಯವು ಸಕಲ ಪ್ರಾಣಿಗಳನ್ನೂ ವ್ಯಾಪಿಸಿರುವದಿಂದ ಒಂದಕ್ಕೊಂದು ಹೆದರಿ ಅವು ಅತ್ಯಾಚಾರವನ್ನು ಮಾಡುವುದಿಲ್ಲ. ದೇಹವು ಆತ್ಮನಲ್ಲೆಂಬ ತಾತ್ಪರ್ಯವನ್ನು ಸಕಲ ಶ್ರುತಿ, ಸ್ಮೃತಿ, ಪುರಾಣೇತಿಹಾಸಗಳೂ, ಸಾಧು–ಸತ್ಪುರುಷರೂ ಹೇಳುತ್ತ ಬಂದಿದ್ದರೂ ಈ ಅಜ್ಞಾನದ ಪ್ರಾಬಲ್ಯದಿಂದ ಮನುಷ್ಯನು ದೇಹವೇ ತಾನೆಂದು ಭಾವಿಸುವಾಗ ಇತರ ಕ್ಷುದ್ರಪ್ರಾಣಿಗಳು ಹಾಗೆ ಭಾವಿಸುವದೇನು ವಿಚಿತ್ರವು? ಸೃಷ್ಟಿಯು ತನ್ನ ಲೀಲೆಯಾಗಿರುವದರಿಂದ ಅದರ ಯಥಾಯೋಗ್ಯ ರಕ್ಷಣಕ್ಕಾಗಿಯೇ ಪರಮಾತ್ಮನು ಪ್ರಾಣಿಗಳಲ್ಲಿ ಅಜ್ಞಾನವನ್ನಿಟ್ಟಿರುವನು. ಅಜ್ಞಾನವು ಹೆಚ್ಚುತ್ತಹೋದಂತೆ ಸ್ವಾರ್ಥವು ಹೆಚ್ಚುವದು, ಸ್ವಾರ್ಥವು ಹೆಚ್ಚಿದಂತೆ ಪಾರತಂತ್ರ್ಯವು ಹೆಚ್ಚುವದು, ಪಾರತಂತ್ರ್ಯವು ಹೆಚ್ಚಿದ ಮಾನದಿಂದ ದುಃಖವು ಹೆಚ್ಚಾಗುವದು. ಇದಕ್ಕೆ ವಿರುದ್ಧವಾಗಿ ಜ್ಞಾನವು ಹೆಚ್ಚಿದರೆ. ತದ್ವಾರಾಪರಾರ್ಥ ಬುದ್ಧಿಯೂ, ಆ ಪರಾರ್ಥ ಬುದ್ಧಿಯಿಂದ ಸ್ವಾತಂತ್ರ್ಯವೂ, ಆ ಸ್ವಾತಂತ್ರ್ಯದಿಂದ ಸುಖವೂ ಹೆಚ್ಚುವವು. ಉದಾಹರಣಾರ್ಥ, ಪಶುಗಳಲ್ಲಿ ಅಜ್ಞಾನವು ಪ್ರಬಲವಾಗಿದ್ದದ್ದರಿಂದ ಅವು ನೂರಾರಿದ್ದರೂ ಒಬ್ಬ ಪಶುಪಾಲಕ ಬಾಲಕನ ಆಜ್ಞಾನುಸಾರವಾಗಿ ನಡೆಯುತ್ತವೆ. ಇಷ್ಟೇ ಅಲ್ಲ ನೂರಾರು ಜನರನ್ನು ಚದರಿಸುವ ಶಕ್ತಿಯು ಒಂದೊಂದರಲ್ಲಿದ್ದರೂ ಆ ಶಕ್ತಿಯ ಪರಿಜ್ಞಾನವಿಲ್ಲದ ಮೂಲಕ ಅವು ಆ ಬಾಲಕನಿಂದ ಕಟ್ಟಿಸಿಕೊಂಡು ಬಂಧನಕ್ಕೊಳಗಾಗುತ್ತವೆ. ಅವನು ಹುಲ್ಲುಹಾಕಿ ನೀರು ಕುಡಿಸಿದರುಂಟು, ಇಲ್ಲದ್ದಿದ್ದರೆ ಕಟ್ಟಿದ ಗೂಟದಲ್ಲಿಯೇ ಪದವನ್ನು ಹೇಳುತ್ತವೆ. ಇದರಂತೆ ಮನುಷ್ಯನಲ್ಲಿ ಅಜ್ಞಾನವು ಹೆಚ್ಚಿ ಅವನು ಸ್ವಾರ್ಥಪರಾಯಣನಾದರೆ ಪರರಿಗೆ ದಾಸನಾಗಿ ದುಃಖಪಡುವನು.

''ಪ್ರಿಯಬಂಧುಗಳೇ, ಈಗಿನ ನಮ್ಮಲ್ಲಿಯ ಮುಖ್ಯ ದೋಷವನ್ನು ಹೇಳುವೆನು ಕೇಳಿರಿ. ಈಗಿನ ಕಾಲದಲ್ಲಿ ''ಪರೋಪದೇಶೀ ಪಾಂಡಿತ್ಯ''ವೆಂಬಂತೆ ಎಲ್ಲರೂ ಹೇಳುವವರೇ ಆಗಿದ್ದಾರೆ; ಆದರೆ ಹೇಳಿದವರ ಮಾತನ್ನು ಕೇಳುವವರು ತೀರ ಕಡಿಮೆ. ಇದೇ ಸ್ಥಿತಿಯು ಹೆಚ್ಚುತ್ತಹೋದರೆ ಬರಿಯ ಹೇಳುವವರೇ ಉಳಿದು, ಹೇಳಿದಂತೆ ನಡೆಯುವವರು ಇಲ್ಲದಾಗಿ ಸೃಷ್ಟಿಯದೊಂದು ಅಂಗವೇ ನಷ್ಟವಾಗಬಹುದು. ಇದು ಪರಮಘಾತಕವಾದದ್ದು. ಜಗತ್ತಿನಲ್ಲಿ ಹೇಳುವವರಿಗಿಂತ ಹೇಳಿದಂತೆ ನಡೆಯುವವರ ಯೋಗ್ಯತೆಯು ಹೆಚ್ಚಿನದೆಂದು ಯಾವಾಗಲೂ ನೆನಪಿನಲ್ಲಿಡಿರಿ. ಹೇಳುವದು ಕ್ಷಣಮಾತ್ರದಲ್ಲಿ ಮುಗಿಸಬಹುದು; ಆದರೆ ಅದರಂತೆ ಮಾಡಲಿಕ್ಕೆ ಹೆಚ್ಚು ಕಾಲ ಬೇಕಾಗುವದು. ಸಾಧಿಸತಕ್ಕದ್ದು ಮಹಾಕಾರ್ಯವಿದ್ದಲ್ಲಿ ಬಹುಕಾಲ ತಪಸ್ಸನ್ನೇ ಮಾಡಬೇಕಾದೀತು. ಒಂದಕ್ಕೆ ತ್ರೇತಾಯುಗದಲ್ಲಿ ಅರವತ್ತು ಸಾವಿರ ಸಗರರು ಕಪಿಲ ಮಹರ್ಷಿಯ ಕೋಪಾಗ್ನಿಯಿಂದ ಸುಟ್ಟು, ದುರ್ಮರಣಹೊಂದಿದಾಗ ಸ್ವರ್ಗಲೋಕದಿಂದ ಗಂಗಾನದಿಯನ್ನು ತಂದು

ಅವರನ್ನು ಉದ್ಧರಿಸಬೇಕೆಂದು ಹೇಳುವದು ಅವರ ಮುಂದಿನ ಎಷ್ಟೋ ಅರಸರಿಗೆ ಸುಲಭವಾಗಿತ್ತು; ಆದರೆ ಅದರಂತೆ ಕೆಲಸ ಮಾಡುವದು ಮಾತ್ರ ಯಾರಿಗೂ ಆಗಲಿಲ್ಲ. ಮುಂದೆ ಅದೇ ವಂಶದಲ್ಲಿ ಹುಟ್ಟಿದ ಮಹಾತ್ಮನಾದ ಭಗೀರಥನೆಂಬ ರಾಜರ್ಷಿಯು ಮಹಾಪ್ರಯತ್ನದಿಂದ ಭಾಗೀರಥಿಯನ್ನು ಭೂಲೋಕಕ್ಕೆ ತಂದು ತನ್ನ ಪೂರ್ವಜನರನ್ನಷ್ಟೇ ಉದ್ಧರಿಸಲಿಲ್ಲ, ಈಗಲೂ ಜಗದುದ್ಧಾರಕ್ಕೆ ಸಾಧನವನ್ನೊದಗಿಸಿಕೊಟ್ಟಿರುವನು; ಆದ್ದರಿಂದ ಎಲ್ಲರೂ ಜ್ಞಾನಿಗಳಾಗಿ ಉಪದೇಶ ಮಾಡಿದರೆ ಅಜ್ಞಾನಿಗಳಾಗಿ ಕೆಲಸ ಮಾಡುವವರಾರು? ''ನಾವೂ ನೀವು ನೆಂಟರು ನಮ್ಮ ಕಂಟಲಿಯಲ್ಲಿ ಕೈಹಾಕಬೇಡಿರೆ''ನ್ನುವಂತೆ, ಜ್ಞಾನಿಗಳ ಸೋಗಿನಿಂದ ಮಂಧಿಗೆ ಉದ್ದುದ್ದ ಉಪದೇಶಮಾಡಿಸಿ, ಕೆಲಸಮಾಡುವಾಗ ಆಗುವ ಕಷ್ಟನಷ್ಟಗಳನ್ನು ಸಹಿಸಲಾರದೆ ಹಿಂಜರಿಯುವ ಜನರೇ ಈಗ ಬಹಳವಾಗಿರುವರು. ಕನ್ನಡಿಗರೇ, ಇನ್ನು ನಿಮ್ಮ ಉದ್ದನಾಲಿಗೆಯು ಕಿರಿದಾಗಿ ನಿಮ್ಮ ಕೈ ಉದ್ದಾಗಲಿ. ದೀಪದ ಪ್ರಕಾಶವು ಅತಿಯಾದರೆ ಏನೂ ಕಾಣುವದಿಲ್ಲ, ಪ್ರಕಾಶವಿಲ್ಲದಂತಾದರೂ ಏನೂ ಕಾಣುವದಿಲ್ಲ; ಆದ್ದರಿಂದ ಮಧ್ಯ ಪ್ರಕಾಶವೇ ವಸ್ತು ದರ್ಶನಕ್ಕೆ ತಕ್ಕದ್ದಾಗುತ್ತದೆ. ಅದರಂತೆ ಜ್ಞಾನಾಜ್ಞಾನಗಳ ಮಿಶ್ರಣದಿಂದ ಕಾರ್ಯವಾಗುತ್ತದೆ. ನಮ್ಮ ಪೂರ್ವಜರು ಮಹಾತ್ಮರಾದ ಮಾರ್ಗದರ್ಶಕರ ಆಜ್ಞೆಯಂತೆ ನಡೆಯಲು ಬದ್ಧಕಂಕಣರಾಗಿ ಅಜ್ಞಾನಿಗಳಂತೆ ದುಡಿಯಲು ಸಿದ್ಧರಿರುತ್ತಿದ್ದದ್ದರಿಂದ ಅವರಿಂದ ಮಹಾಕಾರ್ಯಗಳಾಗಿರುವವು. ಈ ಮಾತನ್ನು ನೀವು ಲಕ್ಷದಲ್ಲಿಟ್ಟು ಯೋಗ್ಯ ಮಾರ್ಗದರ್ಶಕರ ಅನುಸರಣ ಮಾಡಿರಿ.

ಈ ಮೇರೆಗೆ ನುಡಿದು ಆ ಬ್ರಾಹ್ಮಣನು ಧ್ಯಾನಸ್ಥನಂತೆ ಕಣ್ಣು ಮುಚ್ಚಿಕೊಂಡು ನಿಂತುಕೊಂಡನು. ಆಗ ದರ್ಬಾರವು ಸ್ತಬ್ಧವಾಗಿತ್ತು. ಆ ಬ್ರಾಹ್ಮಣನ ದಿವ್ಯ ತೇಜಸ್ಸಿಗೆ ಮೊದಲೇ ಲೀನವಾಗಿದ್ದ ಇಡಿಯ ದರ್ಬಾರವು ಬ್ರಾಹ್ಮಣನ ಈ ಅಸ್ಖಲಿತವಾದ ಮಹತ್ವದ ಭಾಷಣದಿಂದ ಆ ಬ್ರಾಹ್ಮಣನ ವಿಷಯವಾಗಿ ಶಿಷ್ಯಭಾವವನ್ನು ವಹಿಸಿತು. ಆಗಿನ ದರ್ಬಾರದ ಜನರ ಮನೋವೃತ್ತಿಗಳೇ ಉಪದೇಶಗ್ರಹಣಕ್ಕೆ ತಕ್ಕವಾಗಿದ್ದವು. ಇದನ್ನರಿತೇ ಆ ಬ್ರಾಹ್ಮಣೋತ್ತಮನು ಸಮಯ ಸಾಧಿಸಿ ದರ್ಬಾರಕ್ಕೆ ಬಂದಿರಬಹುದು. ಇನ್ನು ಈ ಬ್ರಾಹ್ಮಣನ ಮುಖದಿಂದ ಏನು ಹೊರಡುವದೋ ಎಂದು ದರ್ಬಾರದ ಜನರು ಎದುರುನೋಡುತ್ತಿರಲು, ಆತನು ಕಣ್ದೆರೆದು ವಿನಯದಿಂದ— ''ಪ್ರಿಯ ಕನ್ನಡಿಗರೇ, ಒಟ್ಟಿಗೆ ಕಟ್ಟಕಡೆಯಲ್ಲಿ ಹೇಳುವದೇನೆಂದರೆ, ಮನುಷ್ಯನು ವಹಿಸಬೇಕಾಗಿರುವ ಭಾವಗಳು– ೧ ಸಮಭಾವ, ೨ ಸೇವ್ಯಭಾವ, ೩ ಸೇವಕಭಾವ, ೪ ಅಹಂಭಾವ, ೫ ವಿಷಯಭಾವ ಎಂಬ ಐದು ಭಾವಗಳಿದ್ದು, ಇವು ಸೇವಕಭಾವದಿಂದ ಉತ್ತರೋತ್ತರ ಹೀನವಾಗಿರುವವು. ಇವುಗಳಲ್ಲಿ ಸಮಭಾವವು ಕೇವಲ ಜ್ಞಾನಸ್ವರೂಪವು. ಅದು ಸತ್ವಮಯವಾಗಿರುವದು. ಈ ಭಾವದ ಮಹಾತ್ಮನು ತಾನು ಮುಕ್ತನಿದ್ದು, ಜಗತ್ತನ್ನು ಮುಕ್ತಸ್ಥಿತಿಯಲ್ಲಿಯೇ ನೋಡುವನಾದ್ದರಿಂದ ಅವನಿಗೆ ಜಗತ್ತಿನಲ್ಲಿ ಮಾಡತಕ್ಕ ಕೆಲಸಗಳಿರುವದಿಲ್ಲ. ತನ್ನಂತೆ ಜಗತ್ತನ್ನು ನೋಡುವ ಮಹಾತ್ಮರಿಗೆ ನೀಚೋಚ್ಚ ಭಾವಗಳೆಲ್ಲಿ? ಆದ್ದರಿಂದ ಕೇವಲ ಜ್ಞಾನಸ್ಥಿತಿಯಲ್ಲಿರುವ ಮಹಾತ್ಮನು ಯಾವ ಕಾರ್ಯ ಮಾಡುವದಕ್ಕೂ ಹೋಗುವದಿಲ್ಲ. ಇನ್ನು ೨

ನೆಯ ಸೇವ್ಯಭಾವವು ಸತ್ವಮಯವಾಗಿದ್ದರೂ ಜಗತ್ಕಲ್ಯಾಣಕ್ಕಾಗಿ ರಾಜಸಗುಣಾರೋಪಿಯಾಗಿರುವದು. ಸೇವ್ಯಭಾವದವನು ತಾನು ಮುಕ್ತನಾಗಿ ಜಗತ್ತು ಬಂಧನಕ್ಕೊಳಗಾದದ್ದನ್ನು ನೋಡುವನು. ಇಂಥ ಮಹಾತ್ಮರನ್ನೇ ಅವತಾರಿಕರೆಂದು ಕರೆಯುವರು. ಇದರಲ್ಲಿ ರಾಜಸಗುಣವು ಆರೋಪಿತವಾಗಿರುವದರಿಂದ ಜ್ಞಾನಾಜ್ಞಾನದ ಮಿಶ್ರಣವಾದಂತಾಗಿ ಸೇವ್ಯ ಸೇವಕರಿಂದ ಜಗತ್ಕಲ್ಯಾಣದ ಕಾರ್ಯವು ಸಾಧಿಸುವದು. ಇನ್ನು ೩ನೆಯ ಸೇವಕಭಾವವು ರಾಜಸಗುಣ ಪ್ರಧಾನವಾಗಿರುವದು. ಸೇವಕರಾದವರು ಸ್ವಸ್ವರೂಪಜ್ಞಾನಾತ್ಮಕವಾದ ಸತ್ವಗುಣವನ್ನು ತಮ್ಮ ಸೇವ್ಯರಿಗೊಪ್ಪಿಸಿ ಆ ಸೇವ್ಯರು ರಾಜಸಗುಣಪ್ರೇರಿತರಾಗಿ ಆಜ್ಞಾಪಿಸಿದಂತೆ ಆ ಸೇವಕರಾದವರು ಯಾವಾಗಲೂ ಕಾರ್ಯಮಾಡುತ್ತಿರಬೇಕಾಗುವದು. ಹೀಗೆ ಸೇವ್ಯ ಸೇವಕರೂಪ ಜ್ಞಾನಾಜ್ಞಾನದ ಮಿಶ್ರಣವಾದದ್ದರಿಂದ ಸೇವ್ಯ ಸೇವಕರಿಂದ ಲೋಕಹಿತದ ಕಾರ್ಯವು ಸಾಧಿಸುವದು. ಇನ್ನು ೪ನೆಯ ಅಹಂಭಾವವು ರಾಜಸಗುಣ ಪ್ರಧಾನವಾಗಿರುವದು. ಅಹಂಭಾವದವರ ಸ್ವಸ್ವರೂಪ ಜ್ಞಾನಾತ್ಮಕ ಸತ್ವಗುಣವು ರಾಜಸಗುಣಚ್ಛಾದಿತವಾಗಿರುವದರಿಂದ ಅವರಿಗೆ ತಮಗೂ ಜಗತ್ತಿಗೂ ಇರುವ ಸಂಬಂಧದ ಪರಿಜ್ಞಾನವಿಲ್ಲದೆ ಹೋಗುವದು; ಆದ್ದರಿಂದ ಅಹಂಭಾವದವರು ಸ್ವಪ್ರತಿಷ್ಠೆಗಾಗಿ ಮಹಾಕಾರ್ಯಗಳನ್ನು ಮಾಡಿದರೂ ಅವುಗಳಿಂದ ಜಗತ್ತಿಗೂ, ಸ್ವತಃ ಅಹಂಭಾವದವರಿಗೂ ಹಿತವಾಗುವದಿಲ್ಲ. ಇನ್ನು 5ನೆಯ ವಿಷಯಭಾವವು ತಮೋಗುಣಾತ್ಮಕವು. ಈ ವಿಷಯಭಾವದವರ ಸ್ವಸ್ವರೂಪಜ್ಞಾನಾತ್ಮಕ ಸತ್ವಗುಣವು ತಮೋಗುಣಚ್ಛಾದಿತವಾಗಿ ವಿಷಯಗಳಿಗೆ ಅರ್ಪಿಸುವರು. ಜ್ಞಾನಾಧಿಕಾರದ ಇವರಿಂದ ಮಹಾಕಾರ್ಯಗಳಾಗಲಾರವು. ಇವರ ವಿಷಯಾಸಕ್ತಿಯು ಹೆಚ್ಚಿದಂತೆ ಇವರ ಅಧಃಪತನ ವಾಗುವದು. ಪ್ರಿಯ ಕನ್ನಡಿಗರೇ, ಈ ಸಂಕ್ಷಿಪ್ತ ವರ್ಣನದಿಂದ ನೀವು ಯಾವ ಯಾವ ಭಾವದವರಿರುವಿರೆಂಬದನ್ನು ನೀವೇ ಅನುಭವದಿಂದ ತಿಳಿದುಕೊಳ್ಳಿರಿ. ಅಥವಾ ಈ ಮಾಧವನ ಮಾತಿನಿಂದ ಕರ್ನಾಟಕ ಉದ್ಧಾರಕ್ಕಾಗಿ ಲೋಕಸೇವಕ ಭಾವವನ್ನು ವಹಿಸಿರಿ.''

## ಎಲ ! ಇದೇನು ?

ಮಾಧವ ಬ್ರಾಹ್ಮಣನ ಮಾತು ಕೇಳಿ ಕನ್ನಡಿಗರು ಬಡಿದು ಎಬ್ಬಿಸಿದಂತೆ ಎಚ್ಚತ್ತರು. ಆ ಬ್ರಾಹ್ಮಣೋತ್ತಮನ ಉಪದೇಶದಿಂದ ಕನ್ನಡಿಗರಲ್ಲಿ ನವಜೀವನದ ಸಂಚಾರವಾಯಿತು. ಇಷ್ಟುದಿನ ಬಲಹೀನವಾಗಿದ್ದ ಅವರ ತೋಳುಗಳು ಅಭಿಮಾನದಿಂದ ಸ್ಫುರಿಸಹತ್ತಿದವು. ಶಸ್ತ್ರಧಾರಿಗಳಾಗಿದ್ದವರು ಆವೇಶದಿಂದ ಅವಡುಗಚ್ಚಿ ತಮ್ಮ ಶಸ್ತ್ರಗಳ ಹಿಡಿಕೆಗಳನ್ನು ಒತ್ತಹತ್ತಿದರು. ಶಸ್ತ್ರ ತಾರದೆ ಇದ್ದ ಅರಸರೂ, ಅಂಜುಬುರುಕರೂ ಕೂಡ ತಮ್ಮ ಮನೆಯೊಳಗಿನ ಶಸ್ತ್ರಗಳ ನೆನಪುಮಾಡಿಕೊಂಡು ಅವುಗಳ ಜಂಗು ಒರಿಸಿ ಸಜ್ಜುಗೊಳಿಸಲು ಆತುರಪಡತೊಡಗಿದರು.

ದೇವರಾಜನ ಉಬ್ಬಾಳುತನಕ್ಕಂತು ಮೇರೆಯಿಲ್ಲದಾಯಿತು. ಆ ವೃದ್ಧ ವೀರನ ಸ್ವಾಭಿಮಾನ, ಸ್ವಕುಲಾಭಿಮಾನ, ಸ್ವದೇಶಾಭಿಮಾನಗಳು ಒಮ್ಮೆಲೆ ಜಾಗ್ರತವಾಗಿ, ಆತನ ನೇತ್ರಗಳ ಕಾಂತಿ ಹೆಚ್ಚಾಗಿ ಮೈ ಉಬ್ಬುತ್ತಿರಲು, ಆತನು ರುದ್ಧಕಂಠದಿಂದ ಮಾಧವನನ್ನು ಪೂಜ್ಯ ಬುದ್ಧಿಯಿಂದ ನೋಡಿ, ತನ್ನ ಕನ್ನಡ ಸೈನಿಕರ ಬಲವನ್ನು ಸ್ಮರಿಸಿದನು. ಆಗ ಆತನ ಮಹಾತ್ವಾಕಾಂಕ್ಷೆಯ ಮೇರೆಯು ತಪ್ಪಿತು. ಆತನಿಗೆ ಶತ್ರುಗಳು ಕ್ಷುಪದಾರ್ಥವಾಗಿ ತೋರಹತ್ತಿದರು. ತನ್ನ ಮಾಧವ ಬ್ರಾಹ್ಮಣ, ಹೆಗ್ಗ, ಮಲ್ಲಸರ್ಜ ಗಾಯಕಿ ಮೊದಲಾದ ಸ್ವದೇಶೋದ್ಧಾರಕ ಕನ್ನಡಿಗರ ದಿವ್ಯ ಕಾಂತಿಯಲ್ಲಿ ಕರ್ನಾಟಕಕ್ಕೆ ಕರ್ನಾಟಕವೇ ಆತನಿಗೆ ತೇಜೋವಂತವಾಗಿ ತೋರಹತ್ತಿತ್ತು. ಅದರಲ್ಲಿ ಆಶ್ಚರ್ಯವಾದರೂ ಏನು? ಕರ್ನಾಟಕವೆಂಬ ಆಕಾಶಮಂಡಲದಲ್ಲಿ ಸಣ್ಣ ದೊಡ್ಡ ದೇಶೋದ್ಧಾರಕರೆಂಬ ನಕ್ಷತ್ರಗಳು ಎಷ್ಟು ಮಿನುಗುಹತ್ತಿದರೂ, ಮಾಧವಾಚಾರ್ಯರಂಥ ಉಜ್ವಲ ದೇಶಭಕ್ತರೆಂಬ ಸೂರ್ಯನ ಪ್ರಖರ ತೇಜಸ್ಸಿನಲ್ಲಿ ಆ ಎಲ್ಲ ತೇಜಸ್ಸುಗಳು ಲೀನವಾಗಿ ಕರ್ನಾಟಕರೂಪ ಆಕಾಶಮಂಡಲವು ಆ ಮಾಧವ ಸೂರ್ಯನ ಪ್ರಕಾಶದಿಂದ ಪ್ರಕಾಶಮಾನ ವಾಗುವದು ಸ್ವಾಭಾವಿಕವೇ ಸರಿ. ಹೀಗೆ ಮಾಧವನ ಮಾನನೀಯ ಬೋಧದಿಂದ ಪುರುಷ ವರ್ಗವು ಎಚ್ಚತ್ತದ್ದೇನು ಆಶ್ಚರ್ಯವಲ್ಲ. ದರ್ಬಾರಕ್ಕೆ ಬಂದಿದ್ದ ಸ್ತ್ರೀವರ್ಗದ ನಿರ್ಮಲ ಮನೋವೃತ್ತಿಯಲ್ಲಿ ಯಾವ ಬೋಧದಿಂದ ಸ್ವಾರ್ಥತ್ಯಾಗದ ಸ್ಫುರಣವಾಗಲು, ಆ ಉಜ್ವಲ ಪವಿತ್ರ ಗುಣದಿಂದ ಆವೇಶಗೊಂಡ ಸ್ತ್ರೀಯರು ತಮ್ಮ ಮೈಮೇಲಿನ ಅಲಂಕಾರಗಳನ್ನು ಬಡಬಡ ತೆಗೆದು ದೇಶೋದ್ಧಾರಕರ ನಿವಾಳಿಗಾಗಿ–''ಮಾಧವಾಚಾರ್ಯರಿಗೆ ಜಯವಾಗಲಿ'' ಎಂದು ಜಯಘೋಷ ಮಾಡುತ್ತಾ ಅವನ್ನು ದರ್ಬಾರದಲ್ಲಿ ಸುರಿದರು! ಸುಮಂಗಲೆಯರ ಈ ಸ್ವಾರ್ಥತ್ಯಾಗದ ಮೂರ್ತಸ್ವರೂಪದ ದರ್ಶನದಿಂದ ದರ್ಬಾರದ ಜನರ ಅಂತಃಕರಣಗಳು ಕಂಪಿಸಿದವು; ಅವರ ಶರೀರಗಳು ರೋಮಾಂಚಿತವಾದವು; ಅಲ್ಲಿ ವಿರಾಜಮಾನರಾಗಿದ್ದ ವೀರರು ತಮ್ಮ ತಮ್ಮ ಪ್ರಿಯತಮೆಯರನ್ನು ನೆನಿಸಿ, ಅವರ ಅಲಂಕಾರಗಳೊಡನೆ, ಸ್ವದೇಶೋದ್ಧಾರಕ್ಕಾಗಿ ಅರ್ಪಿಸತಕ್ಕ ತಮ್ಮ ದಿವ್ಯ ಸಾಧನಗಳು ಇವೆಯೇ ಎಂದು ತಮ್ಮ ಶಸ್ತ್ರಗಳನ್ನು ಒರೆಗಳಿಂದ ಹಿರಿದರು. ಅಷ್ಟರಲ್ಲಿ ದರ್ಬಾರದ್ದೊಂದು ಮೂಲೆಯೊಳಗಿಂದ ಗಾಯನದ ಮಂಜುಲಧ್ವನಿಯು ಕೇಳಹತ್ತಿ, ದರ್ಬಾರದ ಜನರ ಚಿತ್ತಹರಣ ಮಾಡಿತು. ಆನೆಗುಂದಿಯ ವೀರಾಧಿವೀರನಾದ ಜಂಬುಕೇಶ್ವರ ರಾಯನು ತನ್ನ ಮರೆಹೊಕ್ಕಿದ ಬಹಾಉದ್ದೀನನ ಸಂರಕ್ಷಣಕ್ಕಾಗಿ ತನ್ನ ಯಾವತ್ತು ಸ್ತ್ರೀ ಪರಿವಾರವನ್ನು ಅಗ್ನಿನಾರಾಯಣನಿಗರ್ಪಿಸಿ, ತಾನು ಪುತ್ರ ಮಿತ್ರಾದಿ ಪರಿವಾರ ದೊಡನೆ ಧಾರಾತೀರ್ಥದಲ್ಲಿ ಪತನಹೊಂದಿದ ವೀರರಸ ಪ್ರಧಾನವಾದ ಕನ್ನಡಿಗರ ದಿವ್ಯ ಚಾರಿತ್ರ್ಯದ ಆ ಗಾಯನವು ಕನ್ನಡಿಗರ ಕರ್ಣರಂಧ್ರವನ್ನು ಪ್ರವೇಶಿಸತೊಡಗಿತು. ಆ ಗಾಯನದ ಒಂದೊಂದು ಶಬ್ದಗಳು, ಒಂದೊಂದು ಅಕ್ಷರಗಳು ದರ್ಬಾರದವರ ಚಿತ್ತಮಾಲಿನ್ಯವನ್ನು ದೂರಮಾಡಿ ಅವರಲ್ಲಿಯ ವೀರರಸವನ್ನು ಉಕ್ಕೇರಿಸತೊಡಗಿದವು.

ಅಂದಿನ ದರ್ಬಾರದಲ್ಲಿ ನೆರೆದಿದ್ದ ಕನ್ನಡಿಗರ ಪವಿತ್ರ ಮನೋವೃತ್ತಿಗಳ ಮಹಿಮೆಯನ್ನು ವರ್ಣಿಸಲಾಸಲ್ಲ. ಆ ಮನೋವೃತ್ತಿಗಳು ಸ್ವದೇಶಾಭಿಮಾನ ಪ್ರೇರಿತವಾಗಿ ದೇಶೋದ್ಧಾರದ ವಿಚಾರದ ಗುಂಗಿನಲ್ಲಿ ಏಕಾಗ್ರವಾದವು. ಅವರು ತಾವು ಬ್ರಾಹ್ಮಣರು, ತಾವು ಲಿಂಗವಂತರು, ತಾವು ಕ್ಷತ್ರಿಯರು, ತಾವು ವೈಶ್ಯರು, ತಾವು ಶೂದ್ರರು, ತಾವು ಅತೀ ಶೂದ್ರರು ಎಂಬ ಭೇದಭಾವವನ್ನು ಮರೆತುಬಿಟ್ಟರು. ಬಹಳ ಹೇಳುವದೇನು? ದೇಶೋದ್ಧಾರದ ವಿಚಾರದ ತಾದಾತ್ಮ್ಯದಲ್ಲಿ ಅವರಿಗೆ ತಾವು ಗಂಡಸರು, ಹೆಂಗಸರು, ಹುಡುಗರು, ಮುದುಕರು, ಹರೆಯದವರು, ಬೇನೆಯವರು ಎಂಬುದರ ಸ್ಮೃತಿಯು ಕೂಡ ಉಳಿಯಲಿಲ್ಲ. ಪ್ರತಿಯೊಬ್ಬರ ಕಣ್ಣೆದುರಿಗೆ ದೇಶೋದ್ಧಾರದ ಕಾರ್ಯವೊಂದು ಕಟ್ಟಿಬಿಟ್ಟಿದ್ದರಿಂದ ಒಕ್ಕಟ್ಟಿಗೆ ಬಾಧೆತರುವ ಅವರ ಕ್ಷುದ್ರ ಭೇದಭಾವದ ವಿಚಾರಗಳೆಲ್ಲ ಅಳಿದುಹೋಗಿ, ಅವರೆಲ್ಲರು ''ತಾವು ದೇಶಬಾಂಧವರು ಕರ್ನಾಟಕ ಭೂಮಾತೆಯ ಮಕ್ಕಳು. ನಮ್ಮನ್ನು ಅನ್ಯಾಯದಿಂದ ತುಳಿದು ನೆಲಕ್ಕೊರಿಸಬಂದ ವೈರಿಗಳ ಮಗ್ಗಲು ಮುರಿಯುವವರು'' ಎಂಬ ವಿಚಾರಗಳು ಮುಪ್ಪುರಿಯ ಬಲವಾದ ಒಂದೇ ಹಗ್ಗದಿಂದ ಗಟ್ಟಿಮುಟ್ಟಾಗಿ ಕಟ್ಟಲ್ಪಟ್ಟರು. ಹೀಗೆ ದೇಶಬಾಂಧವ್ಯದ ಬಲವಾದ ರಜ್ಜುವಿನಿಂದ ಕಟ್ಟಲ್ಪಟ್ಟು ಒಕ್ಕಟ್ಟಿನ ಒಗರಿನಿಂದ ವೈರಿಗಳನ್ನು ತೃಣೀಕರಿಸುವ ದಿವ್ಯ ತೇಜಸ್ಸಿಲ್ಲದ ನಾಮಧಾರಿ ದೇಶಬಾಂಧವರಿಂದ ದೇಶೋದ್ಧಾರವಾಗಬಹುದೇ? ಹೀಗೆ ಒಗ್ಗಟ್ಟಿನಿಂದ ದೇಶೋದ್ಧಾರಕ್ಕಾಗಿ ಮುಂದುವರಿಯುವ ನಾವು— ''ನಾವು ಬ್ರಾಹ್ಮಣರು, ಅತ್ಯಂತ ಶ್ರೇಷ್ಠರು, ಯಾವತ್ತು ವರ್ಣಗಳ ಗುರುಗಳು. ಅನ್ಯವರ್ಣದವರೆಲ್ಲ ನಮಗೆ ಅಡಿ, ಅವರು ನಮಗೆ ದಾಸರು, ಅವರನ್ನು ತಲೆಯೆತ್ತಗೊಟ್ಟರೆ ನಮ್ಮ ವರ್ಚಸ್ಸು ಉಳಿಯಲಿಕ್ಕಿಲ್ಲ'' ಎಂಬ ಹುರುಳಿಲ್ಲದ ಅಹಂಭಾವದಿಂದ ಬ್ರಾಹ್ಮಣರಾದವರೂ, ಅದರಂತೆ ''ನಾವು ಬ್ರಾಹ್ಮಣೇತರರು, ಈವೊತ್ತಿಗೆ ಜಗತ್ತಿನ ಮಹಾ ಕಾರ್ಯಗಳಿಗೆಲ್ಲ ಬೆವರು ರಕ್ತಗಳನ್ನು ಸುರಿಸಿದವರು ನಾವೆಯೆ, ರಾಮ–ಕೃಷ್ಣಾದಿ ಅವತಾರಿಕರು ನಮ್ಮಲ್ಲಿಯೇ ಆಗಿರುವರು. ಠಕ್ಕ ಬ್ರಾಹ್ಮಣರು ಮೋಸದಿಂದ ನಮ್ಮ ಸರ್ವಸ್ವದ ಘಾತಮಾಡಿ ಅನ್ಯಾಯದಿಂದ ತಮ್ಮ ಶ್ರೇಷ್ಠತ್ವವನ್ನು ಮೆರಿಸುತ್ತ ಬಂದಿರುವರು; ಬಿಟ್ಟಿದ್ದು ಬಿಟ್ಟು ಮೊದಲು ಬ್ರಾಹ್ಮಣರನ್ನು ಗೊತ್ತಿಗೆ ಹಚ್ಚಲೇಬೇಕು'' ಎಂಬ ನೀಗಲಾರದ ಅಹಂಭಾವವನ್ನು ಬ್ರಾಹ್ಮಣೇತರರಾದರೂ ವಹಿಸಿ, ಲಂಡತನದಿಂದ ಪರಸ್ಪರರು ಬಡಿದಾಡಹತ್ತಿದ್ದರೆ ದೇಶೋದ್ಧಾರದ ಕಾರ್ಯವು ಎತ್ತೋ ಉಳಿದುಹೋಗುತ್ತಿತ್ತಲ್ಲವೇ? ದೇಶೋದ್ಧಾರದ ಪವಿತ್ರ ಕಾರ್ಯವು ನಡೆದಿರುವಾಗ ಶಿವಪೂಜೆಯಲ್ಲಿ ಕರಡಿಯಬಿಟ್ಟಂತೆ ಹೀಗೆ ಕನ್ನಡಿಗರು ಪರಸ್ಪರ ಅಹಂಭಾವದಿಂದ ಮಾತ್ಸರ್ಯಪ್ರೇರಿತರಾಗಿ ಬಡಿದಾಡಿದ್ದರೆ ಹಿತವಾಗುತ್ತಿತ್ತೋ ? ದೇಶಹಿತಭಾವನೆಯಲ್ಲಿ ತನ್ನ ಉಳಿದ ಭಾವನೆಗಳನ್ನು ಅಡಗಿಸಿಬಿಡದ ದೇಶೋದ್ಧಾರಕನು ಅದೆಂಥ ದೇಶೋದ್ಧಾರಕನವನು? ಹೀಗೆ ದೇಶೋದ್ಧಾರಕರ ಸೋಗಿನಿಂದ ಪರಸ್ಪರ ಕಲಹ ಬೆಳಿಸಿ ಜಗತ್ತಿನ ನಗೆಗೆ ಈಡಾಗುವವರು ಯಾರಿದ್ದರೂ ಎಂಥವರಿದ್ದರೂ ನಿಂದ್ಯರೂ, ದೇಶ ದ್ರೋಹಿಗಳೂ ಅಲ್ಲದೆ ಮತ್ತೇನು?

ಆಗಿನ ಕನ್ನಡಿಗರ ಪುಣ್ಯದಿಂದ ಇಂಥ ಜಾತಿಮತ್ಸರದ ಕ್ಷುದ್ರತನದ ಕಲಹಕ್ಕೆ ಇಂಬು ದೊರೆಯಲಿಲ್ಲ. ಯಾಕಂದರೆ, ವರ್ಣಾಶ್ರಮಗಳ ಪಾಲನವು ಆಗ ಭಕ್ತಿಪುರಸ್ಸರವಾಗಿ ಆಗುತಿತ್ತು ಅವರ ಪರಜಾತಿಗಳು ಅವರವರಿಗೆ ಹೆಚ್ಚಿನವಾಗಿದ್ದವು. ಊರಿದ್ದಲ್ಲಿ ಹೊಲಗೇರಿ ಯೆಂಬ ನಿಯಮದಂತೆ, ತಮ್ಮ ಹೋಳಿಗೆಯು ತುಪ್ಪದಲ್ಲಿ ಹೇಗೆ ಬಿದ್ದೀತೆಂಬ ವಿಚಾರದಲ್ಲಿ ದೇಶದ್ರೋಹದ ಕಾರ್ಯಕ್ಕೆ ಹೇಸದ ನೀಚರು ಆಗ ಅಲ್ಲಲ್ಲಿ ಇದ್ದರೂ ಇರಬಹುದು; ಆದರೆ ಜಾತಿ ಮಾತ್ಸರ್ಯದಿಂದ ದೇಶಕಾರ್ಯಕ್ಕೆ ವಿಘ್ನವನ್ನುಂಟುಮಾಡುವ ಅವಸಾನಘಾತಕರ ಸಮೂಹವು ಆಗಿದ್ದಿಲ್ಲ. ಬಹುತರ ದರ್ಬಾರದ ಎಲ್ಲ ಜನರು ಮಾಧವಾಚಾರ್ಯರ ವಿಷಯವಾಗಿಯೂ, ಅವರ ಬೋಧದ ವಿಷಯವಾಗಿಯೂ ಪೂಜ್ಯಬುದ್ಧಿಯನ್ನು ತಾಳಿ, ಅವರ ಅನುಯಾಯಿ ಗಳಾಗಲು ಸಿದ್ಧರಾದರು. ಎಲ್ಲ ವರ್ಣದವರು ಮಾಧವಾಚಾರ್ಯರನ್ನು ಅಭಿನಂದಿಸಿ ಧನ್ಯವಾದಮಾಡಿದರು. ದರ್ಬಾರದ ಕಾರ್ಯವು ಮುಗಿಯುವದರೊಳಗೆ ಸರಿರಾತ್ರಿಯಾಯಿತು. ಆದರೆ ಅಷ್ಟು ರಾತ್ರಿಯಾದದ್ದು ಯಾರ ಲಕ್ಷದಲ್ಲಿಯೂ ಬರಲಿಲ್ಲ. ದರ್ಬಾರವು ಮುಗಿದಕೂಡಲೆ ಎಲ್ಲರು ತಮ್ಮ ತಮ್ಮ ಮನೆಯೊಳಗೆ ಹೋದರು; ಆದರೆ ಆ ಹೋಗುವ ಗದ್ದಲದಲ್ಲಿ ಮಲ್ಲಸರ್ಜನನು ಎತ್ತಹೋದನೆಂದು ಯಾರಿಗೂ ತಿಳಿಯಲಿಲ್ಲ. ಬಹುಜನರು ಆತನನ್ನು ಆದರದಿಂದ ಮನೆಗೆ ಕರಕೊಂಡು ಹೋಗಬೇಕೆಂದು ಹುಡುಕಿದರು. ''ಮಲ್ಲಸರ್ಜನನೆಲ್ಲಿ'' ಎಂದು ಒಬ್ಬರು ಮತ್ತೊಬ್ಬರನ್ನು ಕೇಳತೊಡಗಿದರು; ಆದರೆ ಒಬ್ಬರಿಗೂ ಮಲ್ಲಣ್ಣನ ಗೊತ್ತುಹತ್ತಲಿಲ್ಲ. ರಾತ್ರಿಯು ಬಹಳವಾದ್ದರಿಂದ ಜನರು ಬಡಬಡ ತಮ್ಮ ತಮ್ಮ ಮನೆಗಳಿಗೆ ಹೋಗಿಬಿಟ್ಟರು. ದೇವರಾಜನ ಸೇವಕರೂ ಒಡೆಯನ ಅಪ್ಪಣೆಯಂತೆ ಮಲ್ಲಣ್ಣನನ್ನು ನಾಲ್ಕೂ ಕಡೆಗೆ ಹುಡುಕಿದರು; ಆದರೆ ಅದರಿಂದ ಪ್ರಯೋಜನವೇನೂ ಆಗಲಿಲ್ಲ. ಹೀಗೆ ಅರಸನಿಂದ ಸಾಮಾನ್ಯ ಜನರತನಕ ಬಹುಜನರು ಮಲ್ಲಣ್ಣನನ್ನು ಸತ್ಕರಿಸಬೇಕೆಂದು ಆಸ್ಥೆಯಿಂದ ಯತ್ನಿಸುತ್ತಿರಲು, ಮಲ್ಲಣ್ಣನು ಇಷ್ಟು ಜನರ ಕಣ್ಣು ತಪ್ಪಿಸಿ ಹೋದದ್ದು ಆಶ್ಚರ್ಯವೇ ಸರಿ! ಇದರಿಂದ ಮಲ್ಲಣ್ಣನ ವಿಷಯವಾಗಿ ಜನರ ಆದರವು ಹೆಚ್ಚಾಯಿತು. ಮತ್ತೊಬ್ಬ ಸರ್ವಸಾಮಾನ್ಯ ಮಲ್ಲನಾಗಿದ್ದರೆ ಜನರ ಆದರಕ್ಕೆ ಜೋತುಕೊಂಡು ಜನರ ಮುಂದೆ ಮುಂದೆ ಓಡಾಡ ಬಹುದಾಗಿತ್ತು, ಆತನು ರಾಜಸತ್ಕಾರಲುಬ್ಧನಾಗಿ ಉತ್ಸಾಹದಿಂದ ಅರಮನೆಗೆ ಹೋಗ ಬಹುದಾಗಿತ್ತು; ಆದರೆ ಅದಕ್ಕಾವದಕ್ಕೂ ಮಲ್ಲಣ್ಣನು ಲಕ್ಷಗೊಟ್ಟಂತೆ ತೋರಲಿಲ್ಲ. ಅವನು ದರ್ಬಾರದಲ್ಲಿ ಅದೃಶ್ಯವಾದಂತೆ ಎಲ್ಲಿಯೋ ಅಡಗಿಬಿಟ್ಟನು. ಅವನು ಹೀಗೆ ಅದೃಶ್ಯವಾದ ಸಂಬಂಧದಿಂದ ಜನರ ತರ್ಕವಿತರ್ಕಗಳು ನಡೆದವು; ಕೆಲವರು ಮಲ್ಲನು ಮಾನಮರ್ಯಾದೆಯ ಆಡಂಬರಕ್ಕೆ ಮೆಚ್ಚದ ಸಭ್ಯ ಮನುಷ್ಯನಾದದ್ದರಿಂದ, ಬುದ್ಧಿಪೂರ್ವಕವಾಗಿಯೇ ತಪ್ಪಿಸಿ ಕೊಂಡನೆಂದು ತರ್ಕಿಸಿದರು; ಕೆಲವರು, ಆತನು ಮುಸಲ್ಮಾನರ ಹೊಟ್ಟೆಕಿಚ್ಚಿಗೆ ಗುರಿಯಾಗಿ ಅವರ ಕೈಗೆಲ್ಲಿ ಸಿಕ್ಕನೋ ಎಂದು ಚಿಂತಿಸಿದರು. ಹೀಗೆ ತಮತಮಗೆ ತೋರಿದಂತೆ ಜನರು ಕಲ್ಪಿಸುತ್ತ ಮನೆಯ ಹಾದಿಯನ್ನು ಹಿಡಿಯಲು, ಸ್ವಲ್ಪ ವೇಳೆಯಲ್ಲಿಯೇ ಮೆರವಣಿಗೆಯ ಜನರ ಗದ್ದಲವಡಗಿ ಪಟ್ಟಣವು ಶಾಂತವಾಯಿತು. ಮಾಧವಾಚಾರ್ಯರು ದೇವರಾಜನ ವಿನಂತಿಯನ್ನು ಮನ್ನಿಸಿ ಅಂದು ಅರಮನೆಯಲ್ಲಿಯೇ ಉಳಿದರು.

ಮುಂದೆ ಎಂಟುತಾಸು ರಾತ್ರಿಯಾಗಿರಬಹುದು. ಅಂದು ಕೃಷ್ಣಪಕ್ಷದ ಅಷ್ಟಮಿಯ ತಿಥಿಯಾದದ್ದರಿಂದ ಹಿಂಬೆಳದಿಂಗಳು ಸ್ವಚ್ಛವಾಗಿ ಬಿದ್ದಿತ್ತು. ಚಳಿಗಾಲದ ಅಂದಿನ ನಿರಭ್ರವಾದ ಆಕಾಶದಲ್ಲಿ ತೇಜಃಪುಂಜ ನಕ್ಷತ್ರಗಳು ಪಳಪಳ ಹೊಳೆಯುತ್ತಿದ್ದವು. ಆನೆಗುಂದಿಯಂಥ ಗುಡ್ಡಗಾಡು ಪ್ರದೇಶದಲ್ಲಿ ಚಳಿಯು ವಿಶೇಷವಾಗಿ ಬಿದ್ದದ್ದು ಆಶ್ಚರ್ಯವಲ್ಲ. ಆಗಿನ ಕಟ ಗುಟ್ಟುವ ಚಳಿಯಲ್ಲಿ ಮಾರ್ಗಕ್ರಮಿಸಲಿಕ್ಕೆ ಯಾರಾದರೂ ಹಿಂಜರಿಯಬಹುದಾಗಿತ್ತು; ಆದರೆ ಆನೆಗುಂದಿಯಿಂದ ಒಂದು ಹರದಾರಿಯ ಮೇಲೆ ಇಬ್ಬರು ಮಾರ್ಗಸ್ಥರು ಅತಿ ವೇಗದಿಂದ ಕಂಪಲಿಯ ಕಡೆಗೆ ಸಾಗಿದ್ದರು. ಅವರಿಬ್ಬರೂ ಕರಿ ಕಂಬಳಿಯ ಮುಸುಕಿಟ್ಟಿದ್ದರಿಂದ ಸ್ವಚ್ಛವಾದ ಬೆಳದಿಂಗಳಲ್ಲಿ ಅವರು ಒಡೆದುಕಾಣುತ್ತಿದ್ದರು. ಅವರಲ್ಲಿ ಒಬ್ಬನೂ ಮಾತಾಡುತ್ತಿದ್ದಿಲ್ಲ. ಹಾದಿಯನ್ನು ನಡೆಯುವ ಭರದಲ್ಲಿ ಅವರಿಗೆ ಚಳಿಯಾಗುವದೊತ್ತಟ್ಟಿಗುಳಿದು, ಅವರ ಮೈಗಳು ಜೋರೆಂದು ಬೆವತಿದ್ದವು. ಹೋಗಹೋಗುತ್ತ ಮುಂದಿನ ಗೊಂಗಡಿಯವನು ಹಾದಿಯನ್ನು ಬಿಟ್ಟು ಅಡ್ಡ ಸಾಗಿದನು. ಕೂಡಲೆ ಆತನನ್ನು ಹಿಂದಿನವನು ಹಿಂಬಾಲಿಸಿದನು. ಹೀಗೆ ಅವರು ಎರಡು ತಾಸು ನಡೆದುಹೋಗಿರಬಹುದು. ಕಂಪಲಿಯ ದಾರಿಯು ಎತ್ತೋ ಉಳಿದುಹೋಯಿತು. ಅವರು ಭರದಿಂದ ಮುಂದಕ್ಕೆ ಹೋಗುತ್ತಿರಲು, ದೂರದಲ್ಲಿ ಮಿನುಗುಟ್ಟುವ ದೀಪವು ಕಾಣಿಸಹತ್ತಿತು. ಹಿಂದಿನವನು ಅದನ್ನು ನೋಡಿ ಸುಮ್ಮನಿರಲಾರದೆ ಮುಂದಿನವನಿಗೆ— "ದೇವರು, ಇದೇನು? ಕಂಪಲಿಯು ಎತ್ತೋ ಉಳಿದುಹೋಯಿತಲ್ಲ! ತಾವು ಕಂಪಲಿಗೆ ಹೋಗಬೇಕೆಂದು ಹೇಳಲಿಲ್ಲವೆ? ಮುಂದೆ ಮಿನುಗುಟ್ಟುವ ದೀಪವು ಕಾಣುವದಲ್ಲ, ಅದೇನು ಗುಡಿಯಾಗಿರಬಹುದೋ? ಗುಡಿಸಿಲವಾಗಿರಬಹುದೋ?'' ಎಂದು ನುಡಿಯುತ್ತಿರಲು, ಮುಂದಿನ ಗೊಂಗಡಿಯವನು— "ಮಲ್ಲಣ್ಣಾ, ಇಷ್ಟು ಹೊತ್ತು ಸುಮ್ಮನೆ ಬಂದಂತೆ ಇನ್ನು ಸ್ವಲ್ಪಹೊತ್ತುಬಾ. ಮೆಟ್ಟಿಗೆ ಹೋದವೆಂದರೆ ನಿನಗೆಲ್ಲ ನಾನು ಹೇಳುತ್ತೇನೆ. ಹೀಗೆ ಕಂಬಳಿಯ ಮುಸುಕಿನಿಂದ ನಾನು ಕಂಪಲಿಗೆ ಹೋಗುವಹಾಗಿಲ್ಲ. ಇರಲಿ, ಈಗ ಮಾತು ಬೆಳೆಸುವದು ಬೇಡ. ಆ ದೀಪವು ಕಾಣುತ್ತಿರುವಲ್ಲಿಗೆ ಮೊದಲು ಹೋಗೋಣ ನಡೆ'' ಎಂದು ನುಡಿಯಲು, ಮಲ್ಲಣ್ಣನು ಹೆಚ್ಚಿಗೆ ಮಾತಾಡದೆ, ಮುಂದಿನವನನ್ನು ಅನುಸರಿಸಿ ಮಾರ್ಗವನ್ನು ಕ್ರಮಿಸಹತ್ತಿದನು. ದೀಪವು ಸನಿಯದಲ್ಲಿ ಕಂಡಂತೆ ಆದರೂ ಅದು ಬೇಗನೆ ಬರಲೊಲ್ಲದು. ಅವರು ಹಾದಿಯನ್ನು ನಡೆಯುತ್ತ ಹೋದಹೋದಂತೆ ಅದು ಹಿಂದಹಿಂದಕ್ಕೆ ಹೋಗುತ್ತಿರುವಂತೆ ಮಲ್ಲಣ್ಣನಿಗೆ ತೋರುತ್ತಿತ್ತು; ನಿದ್ದೆಗಣ್ಣಿನಲ್ಲಿ ಹೀಗೆ ತೋರುತ್ತಿರಬಹುದೆಂದು ಮಲ್ಲಣ್ಣನು ಭಾವಿಸಿದನು; ಆದರೂ ಆತನಿಗೆ ದೀಪವು ಹಿಂದಹಿಂದಕ್ಕೆ ಹೋಗಹತ್ತಿದ್ದರ ಕೌತುಕವಾಗದೆ ಇರಲಿಲ್ಲ. ಅದಕ್ಕಾಗಿ ಆತನು ಪಿಟ್ಟೆಂದು ಮಾತಾಡದೆ ಮುಂದಿನವನನ್ನು ಅನುಸರಿಸಿ ಮುಂದಕ್ಕೆ ಸಾಗಿದ್ದನು. ಹೋಗ ಹೋಗುತ್ತ ಆತನಿಗೆ, ಒಂದು ದೀಪವಿದ್ದಲ್ಲಿ ನಾಲ್ಕು ದೀಪಗಳು ಕಂಡವು. ನಾಲ್ಕಿದ್ದವು ಹತ್ತಾದವು. ಅವೆಲ್ಲ ಪಕ್ಕನೆ ಶಾಂತವಾಗಿ ದೊಡ್ಡ ಉರಿಯು ಎದ್ದಿತು. ಇದನ್ನು ನೋಡಿ ಮಲ್ಲಣ್ಣನಿಗೆ ಕೊಳ್ಳಿಯ ದೆವ್ವಗಳ ನೆನಪಾಯಿತು. ಅದನ್ನು ಕುರಿತು ಮುಂದಿನವನನ್ನು ಕೇಳಬೇಕೆಂದು ಮಾಡಿದನು; ಆದರೆ ಆ ಮುಂದಿನವನು ಮಾತಾಡದೆ ಸುಮ್ಮನೆ ಬರಬೇಕೆಂದು ಹೇಳಿದ್ದರಿಂದ ಮಲ್ಲಣ್ಣನು ಮನಸ್ಸು

ಬಿಗಿಹಿಡಿದು ಸಾಗಿದನು. ಅಷ್ಟರಲ್ಲಿ ಮೊದಲಿನಂತೆ ಒಂದೇ ದೀಪವು ಕಾಣಹತ್ತಿ ಅದು ಸನಿಯಕ್ಕೆ ಬಂದಂತೆ ತೋರಿತು.

ಈ ವಿಲಕ್ಷಣ ಪ್ರಕಾರವನ್ನು ನೋಡಿ ಮಲ್ಲಣ್ಣನು ಬೆರಗಾಗಿದ್ದರೂ ಮುಂದಿನವನಿಗೆ ಅದರ ಸುದ್ದಿಯೇ ಇದ್ದಂತೆ ತೋರಲಿಲ್ಲ. ಆತನು ಸ್ವಾಭಾವಿಕವಾಗಿ ಮಾರ್ಗವನ್ನು ಕ್ರಮಿಸಹತ್ತಿದನು; ಆತನು ಸ್ವಲ್ಪ ಮುಂದಕ್ಕೆ ಹೋದಕೂಡಲೆ, ಒಂದು ಸಾಂಕೇತಿಕ ಸಿಳ್ಳುಹೊಡೆದನು. ಕೂಡಲೆ ಅದಕ್ಕೆ ಪ್ರತ್ಯುತ್ತರವಾಗಿ ದೀಪದ ಕಡೆಯಿಂದ ಒಂದು ಸಿಳ್ಳು ಕೇಳಿಸಿತು. ಬಳಿಕ ಮುಂದಿನವನು ಮತ್ತೊಂದು ಸಾಂಕೇತಿಕ ಧ್ವನಿ ಮಾಡಿದನು. ಅದಕ್ಕೆ ಪ್ರತ್ಯುತ್ತರವಾಗಿ ಮತ್ತೊಂದು ಸಾಂಕೇತಿಕ ಧ್ವನಿಯು ದೀಪದ ಕಡೆಯಿಂದ ಬಂದಿತು. ಕೂಡಲೆ ಮುಂದಿನವನು ಮಲ್ಲಣ್ಣನಿಗೆ— "ಮಲ್ಲಣ್ಣಾ ಇನ್ನುನಡೆ, ಮುಂದೆ ಕಾಣುವ ಗುಡಿಯಲ್ಲಿ ಸ್ವಸ್ಥವಾಗಿ ಕುಳಿತು ಮಾತಾಡೋಣ" ಎಂದು ನುಡಿಯಲು, ಅವರಿಬ್ಬರೂ ಗುಡಿಗೆ ಹೋದರು.

ಮಲ್ಲಣ್ಣನ ಕುಸ್ತಿಯು ನಡೆದಾಗ ಒಬ್ಬ ಗೊಂಗಡಿಯ ಮುಸುಕಿನವನ ಪ್ರಸಕ್ತಿ ತೆಗೆದದ್ದು ವಾಚಕರ ಸ್ಮರಣದಲ್ಲಿರಬಹುದು. ಅದರಂತೆ ಆ ಗೊಂಗಡಿಯ ಮುಸುಕಿನವನು ಮಲ್ಲಸರ್ಜನನ ಪಕ್ಷಗಟ್ಟಿ, ಆತನ ಸಲುವಾಗಿ ಕೈಯಲ್ಲಿ ಕಠಾರಿಯನ್ನು ಹಿಡಿದು ಕುಸ್ತಿಯ ಕಣದಲ್ಲಿ ನಿಂತಿದ್ದನ್ನಾದರೂ ವಾಚಕರು ಮರೆತಿರಲಿಕ್ಕಿಲ್ಲ. ಆ ಗೊಂಗಡಿ ಮುಸುಕಿನವನೇ ಈಗ ಮಲ್ಲಣ್ಣನನ್ನು ಗುಡಿಯೊಳಗೆ ಕರಕೊಂಡು ಹೋಗಿದ್ದನು. ಆತನನ್ನು ತನ್ನ ಪೂರ್ಣ ಪರಿಚಯದವನೆಂದು ಮಲ್ಲಣ್ಣನು ತಿಳಿದು ಕೊಂಡಿದ್ದನೆಂಬದಿಷ್ಟೇ ಅಲ್ಲ, ತನ್ನ ಪೂಜ್ಯ ದೈವತವೇ ತನ್ನ ಮೇಲಿನ ಅಭಿಮಾನದಿಂದ ಹೀಗೆ ವೇಷಾಂತರದಿಂದ ತನ್ನ ಕುಸ್ತಿ ನೋಡಲಿಕ್ಕೆ ಬಂದಿರುವನೆಂದು ತಿಳಕೊಂಡಿದ್ದನು. ಹೀಗಿದ್ದು, ಆತನು ಇಷ್ಟು ಹೊತ್ತಾದರೂ ತನ್ನೊಡನೆ ಮನಬಿಚ್ಚಿ ಮಾತಾಡದೆ ಇದ್ದದ್ದನ್ನೂ, ಗುರುತುಹತ್ತಿದ್ದ ಸುಳುವು ಕೂಡ ಹತ್ತಗೊಡದೆ ಇದ್ದದ್ದನ್ನೂ ನೋಡಿ ಮಲ್ಲಣ್ಣನಿಗೆ ಪರಮಾಶ್ಚರ್ಯವಾಗಿತ್ತು. ಹೀಗಾದದ್ದರ ಕಾರಣವು ತಿಳಿಯದ್ದರಿಂದ ಆತನಿಗೆ ಬಹಳ ಚಡಪಡಿಕೆಯಾಗಿ, ಇದರ ಕಾರಣವನ್ನು ತಾನು ಸ್ಪಷ್ಟವಾಗಿ ಒಮ್ಮೆ ಯಾವಾಗ ಕೇಳೇನೆನ್ನುವ ಹಾಗೆ ಆತನಿಗೆ ಆಗಿತ್ತು. ಗುಡಿಯಲ್ಲಿ ಹೋದ ಕೂಡಲೆ ಮಲ್ಲಸರ್ಜನನು ಗೊಂಗಡಿಯ ಮುಸುಕು ತೆಗೆದು ತನ್ನ ಪೂಜ್ಯವ್ಯಕ್ತಿ ಯೆಂದು ತಿಳಿದುಕೊಂಡಿದ್ದ ಆ ಗೊಂಗಡಿಯ ಮುಸುಕಿನವನ ಕಾಲ್ಗೆರಗಿ— "ಹೆಗಣ್ಣದೊರೆಯೇ, ನಿನ್ನ ಸೇವಕನಾದ ಈ ಮಲ್ಲನ ಗುರುತು ನಿನಗೆ ಹತ್ತಲೊಲ್ಲದೋ ಏನು? ಬಹಾಲುದ್ದೀನನನ್ನು ದ್ವಾರಸಮುದ್ರದ ಬಲ್ಲಾಳನ ಆಶ್ರಯಕ್ಕೆ ಕಳಿಸುವಾಗ ಆತನ ಬೆಂಗಾವಲಾಗಿ ಕಳಿಸಿದ ಈ ಮಲ್ಲನನ್ನು ಮರೆತುಬಿಟ್ಟೆಯಾ? ನಿನಗೆ ಶರಣುಬಂದಿದ್ದ ಬಹಾಲುದ್ದೀನನನ್ನು ದುಷ್ಟ ತಘಲಕಮುಹಮ್ಮದನು ಮೈದೊಗಲು ಸುಲಿಸಿ ಕೊಲ್ಲಿಸುವಾಗ, ಕಲ್ಲಿನಂತೆ ನಾನು ಸುಮ್ಮನೆ ಇದ್ದೆನೆಂಬ ಸಿಟ್ಟಿನಿಂದ ನನ್ನನ್ನು ನೀನು ಮಾತಾಡಿಸಲೊಲ್ಲೆಯೋ ಏನು? ಹಾಗಿದ್ದರೆ ನನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸಲಿಕ್ಕೆ ಹಿಂದೆಮುಂದೆ ಯಾಕೆ ನೋಡುವೆ? ಹೆಗ್ಗಪ್ರಭೂ, ನಿನ್ನ ಗುಪ್ತ ಛಾವಣಿಯೆತ್ತ, ಈ ಗುಡಿಯೆತ್ತ? ನಿನ್ನ ಆ ಚೆನ್ನವೆಂಕಟ, ಮಾರ, ಓಬಲ ಮೊದಲಾದ ಅನುಯಾಯಿಗಳು ಎತ್ತಹೋದರು? ನಿನ್ನ ನಂಬಿಗೆಯ ಆ ಸೈನಿಕರೆಲ್ಲಿ? ಈ ಗುಡಿಯಲ್ಲಿ ನೀನು

ಹೀಗೆ ಅಸಹಾಯನಾಗಿ ಅಡಗಿಕೊಂಡಿರುವ ಕಾರಣವೇನು? ನನ್ನ ಮೇಲಿನ ವಾತ್ಸಲ್ಯದಿಂದ ನನಗೆ ಸಹಾಯ ಮಾಡುವದಕ್ಕಾಗಿ ನನ್ನ ಒಡೆಯನು ನೀನು ಕುಸ್ತಿಯುವನ ಸೋಗಿನಿಂದ ಬಂದೆಯೆಂದು ನಾನು ಎಷ್ಟು ಉತ್ಸಾಹಗೊಂಡಿದ್ದೆನು. ಗಂಡುಗಲಿಯಾದ ನೀನು ನನ್ನ ಪಕ್ಷಗಟ್ಟಿ ಕೈಯಲ್ಲಿ ಕಠಾರಿಯನ್ನು ಹಿಡಿದು ಕುಸ್ತಿಯ ಕಣದಲ್ಲಿ ಬಂದು ನಿಂತದ್ದರಿಂದ ನನ್ನ ಮೈಯಲ್ಲಿ ಇಲ್ಲದ ಕಸುವು ಬಂದು, ನಿನ್ನ ಧೈರ್ಯದಿಂದ ನಾನು ಮಲಿಕನಂಥ ಮಹಾ ಜಟ್ಟಿಯನ್ನು ಒಗೆದು ನಿನ್ನ ಹೆಸರಿಗೆ ಕೀರ್ತಿ ತಂದೆನು. ದೊರೆಯೇ, ದೇವರಾಯನ ಮಗಳಾದ ಪದ್ಮಿನಿದೇವಿಯವರನ್ನು ದುಷ್ಟ ಕಾಸೀಮನ ಕೈಯಿಂದ ಬಿಡಿಸಿದಾಗ ನೀನು ಕುರುಬರಾದ ನಮ್ಮನ್ನು ಎಷ್ಟು ಬಣ್ಣಿಸಿದೆಯಲ್ಲ! ಪಂಪಾಸರೋವರದ ತೀರದಲ್ಲಿ ದುಷ್ಟ ಕಾಸಿಮನು ಮೋಸದಿಂದ ನಿನ್ನ ಹೆಡಮುರಿಗೆ ಕಟ್ಟಿದಾಗ, ಅಕಸ್ಮಾತ್ ನಿನ್ನ ಈ ದಾಸನು ಅಲ್ಲಿಗೆ ಬಂದೊದಗಲು, ನೀನೆಷ್ಟು ಆನಂದಪಟ್ಟೆ! ಆದರೆ, ನನ್ನ ಮೇಲಿನ ನಿನ್ನ ಅಭಿಮಾನದ ವಾತ್ಸಲ್ಯವು ಈಗ ಎಲ್ಲಿ ಹೋಯಿತು? ಹೀಗೆ ನನ್ನ ಮೇಲೆ ಸಿಟ್ಟಾಗಲಿಕ್ಕೆ ಕಾರಣವಾದರೂ ಏನು? ಹೀಗೆ ಸ್ವಾಮಿಯ ಕ್ರೋಧಕ್ಕೆ ಈಡಾದ ಈ ದೇಹವನ್ನು ಇಟ್ಟಾದರೂ ಮಾಡುವದೇನು? ಒಡೆಯಾ, ಮಲ್ಲನ ಮೋರೆಯ ಮೇಲೆ ಹೊಡೆದು ಬುದ್ಧಿಗಲಿಸುವ ಅಧಿಕಾರವು ನಿನಗಿರಲು, ಹೀಗೆ ಮುನಿಸುಗಟ್ಟುವದೇಕೆ? ಹೇಳು, ಈ ಮಲ್ಲನ ಅಪರಾಧವನ್ನು ಬೇಗನೆ ಬಾಯಿಬಿಟ್ಟು ಹೇಳು. ಇಲ್ಲದಿದ್ದರೆ ನಿನ್ನ ಕಗ್ಗ ಕುರುಬನಾದ ಮಲ್ಲನು ನಿನ್ನ ಕೈ ಬಿಟ್ಟನೆಂದು ತಿಳಿದುಕೋ; ಎಂದು ನುಡಿದು, ತನ್ನ ಟೊಂಕದೊಳಗಿನ ಕಠಾರಿಯನ್ನು ತನ್ನ ಎದೆಗವಚಿಕೊಂಡು ಕಣ್ಣೀರು ಸುರಿಸುತ್ತ ನಿಂತುಕೊಂಡನು.

ಮಲ್ಲನ ಈ ವಿಲಕ್ಷಣ ಸ್ಥಿತಿಯನ್ನು ನೋಡಿ ಆ ಗೊಂಗಡಿಯ ತರುಣನಿಗೆ ಪರಮಾಶ್ಚರ್ಯವಾಯಿತು. ಆತನು ತಟ್ಟನೆ ಮಲ್ಲಸರ್ಜನನ ಕೈಯೊಳಗಿನ ಕಠಾರಿಯನ್ನು ಕಸಿದುಕೊಂಡು ಆತನನ್ನು ಕುರಿತು— "ಮಲ್ಲಣ್ಣಾ, ನಿನ್ನ ಸ್ವಾಮಿನಿಷ್ಠೆಯು ಎಷ್ಟು ಉತ್ಕಟವಾದದ್ದು? ಸ್ವಾಮಿಯು ಗುರುತು ಹಿಡಿದು ಮಾತಾಡಿಸಲಿಲ್ಲೆಂಬದಿಷ್ಟೇ ಕಾರಣಕ್ಕಾಗಿ ವ್ಯಸನಪಟ್ಟು ನೀನು ದೇಹವನ್ನರ್ಪಿಸಲಿಕ್ಕೆ ನಿಂತೆಯಲ್ಲ! ನಿನ್ನಂಥ ಏಕನಿಷ್ಠ ಭಕ್ತನನ್ನು ಸ್ವಾಮಿಯು ತನ್ನಿಂದ ಭಿನ್ನವೆಂದು ಭಾವಿಸಬಹುದೆ? ನಿನ್ನ ಈ ಉತ್ಕಟ ನಿಷ್ಠೆಗೆ ಪಾತ್ರನಾದ ನಿನ್ನ ಸ್ವಾಮಿಯು ಮಹಾಪುರುಷನೇ ಇರಬೇಕು, ಆದರಲ್ಲಿಸಂಶಯವಿಲ್ಲ; ಆದರೆ ಮಲ್ಲಣ್ಣಾ, ನಾನು ನಿನ್ನ ಆ ಸ್ವಾಮಿಯಲ್ಲ. ನಿನ್ನ ಗುರುತು ನನಗೆ ಸರ್ವಥಾ ಹತ್ತಿರುವದಿಲ್ಲ, ನಿನ್ನನ್ನು ನಾನು ಎಂದೂ ನೋಡಿರುವದೂ ಇಲ್ಲ. ಒಟ್ಟಿಗೆ, ನನ್ನನ್ನು ಯಾರೆಂದು ನೀನು ತಿಳಿದಿರುವೆಯೋ ಆ ಪುಣ್ಯವಂತನು ನಾನು ಸರ್ವಥಾ ಅಲ್ಲ. ನನ್ನ ಹೆಸರು ಹೆಗ್ಗನಲ್ಲ. ನಾನು ಪದ್ಮಿನಿಯನ್ನು ಕಂಡವನಲ್ಲ, ಪಂಪಾಸರೋವರಕ್ಕೆ ಬಂದವನಲ್ಲ, ನೀನು ಹೇಳಿದ ಪ್ರಸಂಗಗಳಲ್ಲಿ ಒಂದರ ಸಂಬಂಧವೂ ನನಗಿರುವದಿಲ್ಲ. ಎಲ್ಲಿಯ ಹೆಗ್ಗನು, ಎಲ್ಲಿಯ ಆತನ ಅನುಯಾಯಿಗಳು, ಎಲ್ಲಿಯ ಸೈನ್ಯವು, ಎಲ್ಲಿಯ ಪದ್ಮಿನಿಯು, ಎಲ್ಲಿಯ ಪಂಪಾಸರೋವರದ ಹೆಡಮುರಿಗೆಯು ಇವುಗಳಲ್ಲಿ ಒಂದನ್ನೂ ನಾನರಿಯೆನು. ಬಹಾಉದ್ದೀನನ ಹೆಸರನ್ನು ಮಾತ್ರ ನಾನು ಕೇಳಬಲ್ಲೆನು. ಸ್ವಲ್ಪ ಮಟ್ಟಿಗೆ ಆತನ ಪರಿಚಯವು ನನಗಿರುತ್ತದೆಂದು ಹೇಳಬಹುದು. ಆತನ ಕೊಲೆ ಯಾಗುವಲ್ಲಿಗೆ ಇಂದಿನಂತೆ ವೇಷಾಂತರದಿಂದ ನಾನು

ಬಂದಿದ್ದೆನು. ಆಗಿನ ಪ್ರಸಂಗದಲ್ಲಿ ನಿನಗೂ ತಫಲಕಮಹಮ್ಮದನಿಗೂ ಆದ ವಾಗ್ವಾದವನ್ನು ಕೇಳಿದೆನು. ನಿನ್ನ ಸ್ವಾಭಿಮಾನದ ದರ್ಪೋಕ್ತಿಗಳಿಂದ ನನಗೆ ಬಹಳ ಸಂತೋಷವಾದದ್ದಲ್ಲದೆ, ನಿನ್ನ ವಿಷಯವಾಗಿ ನನ್ನಲ್ಲಿ ಪರಮಾನಂದವು ಉತ್ಪನ್ನವಾಯಿತು. ಮುಂದೆ ಮಲಿಕನೊಡನೆ ನಿನ್ನ ಮಲ್ಲಯುದ್ಧವಾಗುವ ಪ್ರಸಂಗವು ಒದಗಲು, ನಿನ್ನ ಮಲ್ಲಯುದ್ಧವನ್ನು ನೋಡುವದಕ್ಕಾಗಿಯೂ, ಅಂಥ ಪ್ರಸಂಗ ಬಂದರೆ ಜೀವದ ಹಂಗುದೊರೆದು ನಿನಗೆ ಸಹಾಯಮಾಡುವದಕ್ಕಾಗಿಯೂ ನಾನು ಹಾತೊರೆದು, ಹೀಗೆ ವೇಷಾಂತರದಿಂದ ಕುಸ್ತಿಯಕಣಕ್ಕೆ ನಿನ್ನೆ ಬಂದಿದ್ದೆನು. ಮಲ್ಲಣ್ಣಾ, ನಿನ್ನ ಯೋಗ್ಯತೆಯು ಸಾಮಾನ್ಯವಾದದ್ದಲ್ಲ. ನಿನ್ನ ಸ್ವಾಮಿಯು ಎಂಥ ಪುಣ್ಯವಂತನಿರುವನೋ ನಾನರಿಯೆನು. ಅವನ ಯೋಗ್ಯತೆಯು ನಿಶ್ಚಯವಾಗಿ ಘನವಾದದ್ದಿರಲೇಬೇಕೆಂದು ಇನ್ನೊಮ್ಮೆ ಹೇಳುತ್ತೇನೆ. ಮಲ್ಲಯುದ್ಧವಿಶಾರದನಾದ ನಿನ್ನ ಸ್ವಾಮಿಭಕ್ತಿಯು ಎಷ್ಟು ಪ್ರಖರವಾದದ್ದು, ನಿನ್ನ ನಿಸ್ವಾರ್ಥಬುದ್ಧಿಯು ಎಷ್ಟು ಉಜ್ವಲವಾದದ್ದು, ನಿನ್ನ ಮನಸ್ಸಿನ ಔದಾರ್ಯವಾದರೂ ಎಷ್ಟದು! ಮಲ್ಲಸರ್ಜಾ, ನೀನು ಇಂಥ ನಿರ್ಮಲಹೃದಯದವನಾದದ್ದರಿಂದಲೇ ಮಲಿಕನಂಥ ಮಹಾವೀರನನ್ನು ಗೆದ್ದೆ. ಇಲ್ಲಧಿದ್ದರೆ ಆ ವೀರನನ್ನು ಜಯಿಸುವದು ಅನ್ಯರಿಗೆ ಶಕ್ಯವೇ? ಆದರೆ ಈಗ ನಾನು ಎಷ್ಟು ಮಾತಾಡಿದರೂ ನಿನ್ನ ಆ ಹೆಗ್ಗಣ್ಣನು ಮಾತ್ರ ನಾನಲ್ಲವೆಂಬದನ್ನು ಚೆನ್ನಾಗಿ ನೆನಪಿನಲ್ಲಿಡು. ಒಬ್ಬರ ಹೋಲಿಕೆಯಂತೆ ಒಬ್ಬರಿರುವ ಸಂಭವವಿರುವದರಿಂದ, ಹೋಲಿಕೆಯ ಮೇಲಿಂದ ನನ್ನನ್ನು ಹೆಗ್ಗಣ್ಣನೆಂದು ನೀನು ತಿಳಿದುಕೊಂಡಂತೆ ಕಾಣುತ್ತದೆ. ನಾನು ಯಾರೇ ಇರಲಿ, ನಿನ್ನ ಹೆಗ್ಗಣ್ಣನು ಮಾತ್ರ ಅಲ್ಲವೆಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ. ದೊಡ್ಡ ಮನಸ್ಸಿನ ಮಲ್ಲಣ್ಣಾ ಮಹಾ ಬಲಶಾಲಿಯಾದ ಮಲ್ಲಸರ್ಜಾ, ನನ್ನನ್ನು ನಿನ್ನ ಜೀವದ ಗೆಳೆಯನೆಂದು ತಿಳಿ. ನಿನ್ನ ಸದ್ಗುಣಗಳಿಗೆ ನಾನು ಲುಬ್ಧನಾಗಿರುವೆನು. ಮಲಿಕನನ್ನು ಇರಿಯುವದಕ್ಕಾಗಿ ನಾನು ಕಠಾರಿಯನ್ನು ನಿನ್ನ ಕೈಯಲ್ಲಿ ಕೊಡಲು, ಮಲಿಕನ ಎದೆಯಮೇಲೆ ಕುಳಿತ ವೀರನು ನೀನು, ಕಠಾರಿಯನ್ನು ಬಿಸುಟಿ ಎಂಥ ಉದಾರಚಾರಿತ್ರ್ಯವನ್ನು ಪ್ರಕಟಿಸಿದೆಯಲ್ಲ! ಶಾಬಾಸ, ಮಲ್ಲಣ್ಣಾ ನಿನ್ನ ಹಡೆದ ತಾಯಿಯು ಧನ್ಯಳು, ನಿನಗೆ ಜನ್ಮಕೊಟ್ಟ ತಂದೆಯು ಧನ್ಯನು, ನಿನ್ನ ಜನ್ಮಭೂಮಿಯೆನಿಸುವ ಕರ್ನಾಟಕವೂ ಧನ್ಯವಾದದ್ದೇ ಸರಿ. ಬಾ, ಇತ್ತಬಾ. ನಿನ್ನ ಮಿತ್ರನಾದ ನನ್ನನ್ನು ಆಲಿಂಗಿಸಿ ನನ್ನನ್ನು ಧನ್ಯನಾಗಿಮಾಡು. ನಿನ್ನೊಡನೆ ಮನಬಿಚ್ಚಿ ಮಾತಾಡಬೇಕೆಂತಲೇ ನಾನು ಕಂಪಲಿಗೆ ಹೋಗುವದನ್ನು ಬಿಟ್ಟು. ನನ್ನ ಈ ಗೂಢಸ್ಥಾನಕ್ಕೆ ನಿನ್ನನ್ನು ಕರೆತಂದಿದ್ದೇನೆ. ಈ ದೆವ್ವನ ಗುಡಿಯಲ್ಲಿ ಇಷ್ಟು ಮಧ್ಯರಾತ್ರಿಯಲ್ಲಿ ಯಾರಿಗೆ ಬರುವ ಧೈರ್ಯವಾದೀತು? ಆದರೂ ನನ್ನನ್ನು ನಂಬಿನಿಶ್ಶಂಕೆಯಿಂದ ಇಲ್ಲಿ ಸ್ವಸ್ಥವಾಗಿ ಕುಳಿತು ನಿನ್ನ ವೃತ್ತಾಂತವನ್ನು ಹೇಳಲಿಕ್ಕೆ ಬರುವಹಾಗಿದ್ದರೆ ನನಗೆ ಹೇಳು, ಇಲ್ಲದಿದ್ದರೆ ನಾಲ್ಕು ಯೋಗಕ್ಷೇಮದ ಮಾತಾಡಿ ಸ್ವಸ್ಥ ಮಲಗಿಕೊಳ್ಳೋಣ!

ಈ ಮಾತುಗಳನ್ನು ಕೇಳಿ ಮಲ್ಲಸರ್ಜನನು ಬೆರಗಾಗಿ ಆ ಗೊಂಗಡಿಯ ಮನುಷ್ಯನನ್ನು ದಿಟ್ಟಿಸಿನೋಡಹತ್ತಿದನು; ಆದರೆ ತನ್ನ ಒಡೆಯನಾದ ಹೆಗ್ಗಣ್ಣನ ರೂಪವನ್ನು ಆತನ ರೂಪವು ಅಚ್ಚಳಿಯದೆ ಹೋಲುತ್ತಿರುವದು ಆತನಿಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಆಗ ಆತನು ಮನಸ್ಸಿನಲ್ಲಿ– ''ಎಲ, ಇದೇನು ಸೋಜಿಗವು! ನಾನು ಭ್ರಮಿಷ್ಟನಾದೆನೋ ಏನು? ಆತನು ಹೆಗ್ಗಣ್ಣನಲ್ಲೆಂದು

ನಾನು ಹ್ಯಾಗೆ ತಿಳಿಯಲಿ? ನಮ್ಮ ಹೆಗ್ಗಣ್ಣನ ದೀರ್ಘ ಬಾಹುಗಳು, ವಿಶಾಲಹೃದಯ, ಗಂಭೀರಮುಖಮುದ್ರೆ, ಭವ್ಯವಾದ ಆಕಾರ, ಚಿತ್ತಾಕರ್ಷಕಧ್ವನಿ ಇವುಗಳಲ್ಲಿ ಎಳ್ಳಷ್ಟು ಅಂತರವಿಲ್ಲವಲ್ಲ! ಅದೇ ವಯಸ್ಸು, ಅದೇ ಬಣ್ಣ ಅದೇ ನಿಲುವಿಕೆ, ಅದೇ ಮೈಮಾಟ! ಅಂದಬಳಿಕ ಈತನು ಹೆಗ್ಗಣ್ಣನು ಹ್ಯಾಗಲ್ಲ? ಇದರ ಮೇಲೆಯೂ ಈತನು ಹೆಗ್ಗಣ್ಣನಾಗಿರದಿದ್ದರೆ, ಹೆಗ್ಗಣ್ಣನ ಒಂದೇ ಹೊಟ್ಟೆಯ ಅಣ್ಣ-ತಮ್ಮನಾಗಲಿ, ಬೇರೆ ಆಪ್ತನಾಗಲಿ ಇರಲೇಬೇಕು. ಇಲ್ಲದಿದ್ದರೆ ಇಷ್ಟು ಹೋಲಿಕೆ ಹ್ಯಾಗಾದೀತು? '' ಎಂದು ಯೋಚಿಸಿ, ಆ ವೀರನನ್ನು ಕುರಿತು– ''ಪ್ರತಾಪಿಯೇ, ನೀನು ನಮ್ಮ ಹೆಗ್ಗಣ್ಣನಾಗಿರದಿದ್ದರೂ ಹೆಗ್ಗಣ್ಣನ ಸಂಬಂಧಿಕನು ನಿಶ್ಚಯವಾಗಿ ಇರಲೇಬೇಕು. ನನ್ನನ್ನು ಪರಕೀಯನೆಂದು ಭಾವಿಸದೆ ನಿನ್ನ ನಿಜವಾದ ವೃತ್ತಾಂತವನ್ನು ಹೇಳಿ ನನ್ನನ್ನು ಸಮಾಧಾನಪಡಿಸೆಂದು ಬೇಡಿಕೊಳ್ಳುವ ಸಾಹಸಮಾಡುತ್ತೇನೆ. ನಮ್ಮ ಹೆಗ್ಗಣ್ಣನು ಕುರುಬನೆನಿಸಿಕೊಂಡು ನಮ್ಮಲ್ಲಿ ವ್ಯವಹರಿಸುತ್ತಿದ್ದರೂ, ಆತನನ್ನು ನಾವು ಕುರುಬನೆಂದು ತಿಳಿದು ಕೊಂಡಿರುವದಿಲ್ಲ; ಯಾವನೋ ಒಬ್ಬ ರಾಜಪುರುಷನು ರೂಪಾಚ್ಛಾದನ ಮಾಡಿಕೊಂಡಿರ ವನೆಂದು ನಾವು ಭಾವಿಸಿರುವೆವು; ಆದ್ದರಿಂದ ಇದರ ಗೂಢವನ್ನು ಬಿಚ್ಚಿಹೇಳು. ಪುಣ್ಯಪುರುಷಾ, ನೀನು ನನ್ನ ಒಡೆಯನ ಸಂಬಂಧಿಕನಿರುವದೇ ನಿಶ್ಚಯವು; ಆದ್ದರಿಂದ ನೀನೂ ನನ್ನ ಒಡೆಯನೇ.. ಸುಮ್ಮನೆ ಈ ಮಡ್ಡಗುರುಬನನ್ನು ಮಬ್ಬಿಗೆ ಹಾಕಬೇಡ'' ಎಂದು ಕಾಲ್ಗೆರಗಲು, ಆತನು ವಿಚಾರಮಗ್ನನಾಗಿ ಮಲ್ಲನನ್ನು ನೋಡಹತ್ತಿದನು. ಆತನಿಗೂ ದೊಡ್ಡ ಗೂಢ ಬಿದ್ದಂತಾಯಿತು. ಈತನಿಗೆ ಏನು ಹೇಳಬೇಕೆಂಬದು ಆತನಿಗೆ ತೋಚದಾಯಿತು. ಒಮ್ಮೆಲೆ ನಿಜವನ್ನು ಹೇಳಲಿಕ್ಕೆ ಆತನಿಗೆ ಧೈರ್ಯವಾಗಲೊಲ್ಲದು. ನಿಜವಾದ ಹೆಸರು ಗೊತ್ತಾಗಿದ್ದರೆ ಆತನ ಸಂಶಯವು ದೂರವಾಗುತ್ತಿತ್ತು; ಆದರೆ ಆತನು ಎಂದೂ ಕೇಳದ ಹೆಗ್ಗನೆಂಬ ಹೆಸರು ಆತನ ಸಂಶಯಕ್ಕೆ ಕಾರಣವಾಯಿತು. ಆಗ ಆತನು ಮಲ್ಲನಿಗೆ— ''ಮಲ್ಲಸರ್ಜಾ, ನಿನ್ನ ಮಾತುಗಳ ಮೇಲಿಂದ ನನಗೆ ನೀನು ಹೇಳುವವನು ನನ್ನ ಅಣ್ಣನೆನ್ನುವ ಹಾಗೆ ತೋರುತ್ತದೆ; ಆದರೆ ಹೆಗ್ಗನೆಂಬ ಹೆಸರು ನನ್ನ ಸಂಶಯಕ್ಕೆ ಕಾರಣವಾಗಿರುವದು. ನಮ್ಮ ಅಣ್ಣನು ಹೆಸರು ಬದಲಿಸಿ ಹೆಗ್ಗನೆಂಬ ಹೆಸರು ಯಾಕೆ ಇಟ್ಟುಕೊಂಡಿರಬಾರದೆಂಬ ಸಂಶಯವು ಬರುತ್ತದೆ; ಆದರೂ ನಿನ್ನ ಒಡೆಯನಿಗೆ ಇನ್ನೊಂದು ಹೆಸರು ಇದ್ದರೆ, ಅಥವಾ ಅಪ್ಪಿತಪ್ಪಿ ಎಂದಾದರೂ ಬೇರೆ ಹೆಸರು ಕೇಳಿದ ಸಂಶಯವು ನಿನಗೆ ಬಂದಿದ್ದರೆ ನೆನಪು ಮಾಡಿಕೊಂಡು ಹೇಳು ನೋಡೋಣ'' ಎಂದು ಕೇಳಿದನು; ಆದರೆ ಮಲ್ಲಣ್ಣನಿಗೆ ಬೇರೆ ಹೆಸರು ಗೊತ್ತಾಗಲೊಲ್ಲದು. ಆತನು ಬಹಾಉದ್ದೀನನ ಸಂಗಡ ದ್ವಾರಸಮುದ್ರಕ್ಕೆ ಹೋಗಿಬಿಟ್ಟಂದಿನಿಂದ ಇಂದಿನವರೆಗೆ ಹೆಗ್ಗಣ್ಣನ ಭೆಟ್ಟಿಯೇ ಆತನಿಗೆ ಆಗಿದ್ದಿಲ್ಲ; ಆದ್ದರಿಂದ ಮಾಧವಾಚಾರ್ಯರು ತಮ್ಮ ಜ್ಞಾನದೃಷ್ಟಿಯಿಂದ ಹೆಗ್ಗನನ್ನು ಪಕ್ಕನೆ ಹುಕ್ಕನೆಂದು ಕರೆದು ಆತನಿಗೆ ವರಪ್ರದಾನ ಮಾಡಿದ ಸುದ್ದಿಯು ಮಲ್ಲನಿಗೆ ಹ್ಯಾಗೆ ಗೊತ್ತಾಗಬೇಕು? ಆದ್ದರಿಂದ ಆ ವೀರನ ಮಾತು ಕೇಳಿ ಮಲ್ಲಣ್ಣನು ತನಗೆ ಬೇರೆ ಹೆಸರು ಗೊತ್ತಿಲ್ಲೆಂದು ಸ್ಪಷ್ಟವಾಗಿ ಹೇಳಿದನು; ಆದರೆ ಅಷ್ಟರಲ್ಲಿ ಆತನಿಗೆ ತನ್ನ ಎದುರಿನಲ್ಲಿರುವ ತರುಣನಲ್ಲಿ ತೋರದೆಇದ್ದ ಗುರುತೊಂದು ತನ್ನ ಹೆಗ್ಗಣ್ಣನಲ್ಲಿದ್ದದ್ದು ನೆನಪಾಯಿತು. ಆಗ ಆತನು

ಆ ತರುಣ ವೀರನನ್ನು ಕುರಿತು—''ಒಡೆಯಾ, ಒಂದು ವಿಶೇಷ ಸಂಗತಿಯು ನೆನಪಾಯಿತು, ಹೇಳುತ್ತೇನೆ ಕೇಳು. ನನ್ನ ಒಡೆಯನಾದ ಹೆಗ್ಗಣ್ಣನ ಬಲಮುಂಗೈಗೆ ಶಸ್ತ್ರದ ಗಾಯವಾದ ಸ್ಪಷ್ಟ ಗುರುತೊಂದು ಇರುತ್ತದೆ. ನೋಡು, ಇಷ್ಟರಿಂದ ನಿನಗೇನಾದರೂ ಗೊತ್ತುಹತ್ತಿದರೆ ನೋಡು ಎಂದು ಹೇಳಲು, ಆ ತರುಣನು ಆನಂದಪರವಶನಾಗಿ—'' ಮಲ್ಲಣ್ಣಾ, ಆತನು ನಮ್ಮ ಅಣ್ಣನೆಂಬದು ನಿಶ್ಚಯವು. ನಿನ್ನಂಥ ಸ್ವಾಮಿನಿಷ್ಠೆಯ ಮಿತ್ರನಿಗೂ ಆತನು ತನ್ನ ನಿಜವಾದ ವೃತ್ತಾಂತವನ್ನು ಹೇಳದೆ ಇರುವ ಗೂಢವು ನನಗೆ ಗೊತ್ತಾಗಲೊಲ್ಲದು. ಹೀಗಿರುವಾಗ ನನ್ನ ಅಣ್ಣನ ಉದ್ದೇಶಕ್ಕೆ ವಿರುದ್ಧವಾಗಿ ನಾನು ನಿನಗೆ ನಮ್ಮ ನಿಜವಾದ ವೃತ್ತಾಂತವನ್ನು ಹೇಳತಕ್ಕದ್ದಲ್ಲ; ಆದರೆ ಹುಚ್ಚ ಮುಹಮ್ಮದನೊಡನೆ ಆದ ನಿನ್ನ ವ್ಯವಹಾರವನ್ನು ನಮ್ಮ ಅಣ್ಣನು ನೋಡಿದ್ದರೆ ಆತನಿಗೂ ನಿನ್ನ ನಿಜವಾದ ಯೋಗ್ಯತೆಯು ಗೊತ್ತಾಗದೆ ಇರುತ್ತಿದ್ದಿಲ್ಲ. ಏನೇ ಇರಲಿ, ನಿನ್ನ ಗುಣಗಳಿಗೆ ಲುಬ್ಧನಾಗಿದ್ದ ನಾನು ನಿನಗೆ ನಮ್ಮ ನಿಜವಾದ ವೃತ್ತಾಂತವನ್ನು ಹೇಳಿಬಿಡುವೆನು. ಹೀಗೆ ಮಾಡುವಾಗ ನಾನು ಭ್ರಾತೃದ್ರೋಹದ ದೋಷಕ್ಕೆ ಗುರಿಯಾದರೂ ಚಿಂತೆಯಿಲ್ಲ, ಮಲ್ಲಣ್ಣಾ, ನಿನ್ನಂಥ ಏಕನಿಷ್ಠೆಯ ಮಿತ್ರನಿಗಲ್ಲದೆ ಇನ್ನಾರಿಗೆ ನಮ್ಮ ಗೂಢ ವೃತ್ತಾಂತವನ್ನು ಹೇಳಬೇಕು? ಆದ್ದರಿಂದ ಮೊದಲು ನಮ್ಮ ಅಣ್ಣನ ನಿಜವಾದ ಹೆಸರನ್ನು ಹೇಳುತ್ತೇನೆ ಕೇಳು. ಆತನ ನಿಜವಾದ ಹೆಸರು ಹುಕ್ಕನು. ನಾನು ಆತನ ಒಡಹುಟ್ಟಿದ ತಮ್ಮನು. ನನ್ನನ್ನು ಬುಕ್ಕನೆಂದು ಕರೆಯುವರು. ಇಂದಿನ ದಿವಸವೇ ಸುದಿನವು. ಇಂದಿನಿಂದ ನಮ್ಮ ಐವರು ಬಂಧುಗಳಲ್ಲಿ ನೀನೊಬ್ಬನು ಆರನೆಯವನಾದೆ, ಎಂದು ನುಡಿದು ಮಲ್ಲಣ್ಣನನ್ನು ಗುಡಿಯೊಳಗೆ ಕರಕೊಂಡು ಹೋಗಿ ಅಲ್ಲಿಯ ಗುಪ್ತ ಗುಹೆಯ ಮುಖದಿಂದ ಆತನನ್ನು ಗುಹೆಯೊಳಗೆ ಕರಕೊಂಡು ನಡೆದನು. ಬುಕ್ಕನೊಡನೆ ಬಹು ಪ್ರಯಾಸದಿಂದ ಗುಹೆಯನ್ನು ಪ್ರವೇಶಿಸಿದ ಮಲ್ಲನು, ಗುಹೆಯೊಳಗೆ ಹೋದಕೂಡಲೆ— ''ಎಲ ಇದೇನು!'' ಎಂಬ ಆಶ್ಚರ್ಯೋದ್ಗಾರದಿಂದ ಹಿಂದಕ್ಕೆ ಸರಿದು ಬೆರಗಾಗಿ ನಿಂತುಕೊಂಡನು!

## ಬಪ್ಪರೆ ! ನಮ್ಮ ಹುಕ್ಕದೊರೆಯ ತಮ್ಮ ಹೌದೊ !

ಪ್ರಿಯ ವಾಚಕರೇ, ಹೀಗೆ ಮಲ್ಲನನ್ನು ಆಶ್ಚರ್ಯದಿಂದ ಹಿಂದಕ್ಕೆ ಸರಿಸುವಂಥ ಪ್ರಸಂಗವೇನು ಗುಹೆಯಲ್ಲಿ ಒದಗಿತೆಂಬದನ್ನು ತಿಳಿದುಕೊಳ್ಳುವದಕ್ಕಾಗಿ ನೀವು ಆತುರಪಡುತ್ತಿರಬಹುದು; ಆದ್ದರಿಂದ ನಿಮ್ಮ ಆತುರತೆಯನ್ನು ತೃಪ್ತಿಪಡಿಸುವದಕ್ಕಾಗಿ, ಆ ಪ್ರಸಂಗವನ್ನು ಈಗ ಹೇಳುವೆನು ಕೇಳಿರಿ. ಬುಕ್ಕನು ಮಲ್ಲನೊಡನೆ ಗುಹೆಯ ಮುಖವನ್ನು ಪ್ರವೇಶಿಸಿ ಅದರ ಸಂಕುಚಿತ ಮಾರ್ಗದಿಂದ ಒಳಗೆ ಹೋಗುವಾಗ, ಇಂಥ ಕುಟಿಲ ಕೃತಿಗಳ ಅನುಭವವಿಲ್ಲದ ಆ ಕುರುಬನಿಗೆ ಬಹು ಪ್ರಯಾಸವಾಯಿತು. ಆತನು ಹ್ಯಾಗೆ ಹ್ಯಾಗೋ ಎಡವುತ್ತ ಮುಗ್ಗುತ್ತ ಮುಂದಕ್ಕೆ ಸಾಗಿದ್ದನು. ಹೇಳಿ ಕೇಳಿ ಒಳಗೆ ಹೋಗುವವರಿಗೆ ಪ್ರಯಾಸವಾಗ ಬೇಕೆಂತಲೂ, ಭಯವುಂಟಾಗಬೇಕೆಂತಲೂ ಬುದ್ಧಿ ಪೂರ್ವಕವಾಗಿ ಅದು ಮಾಡಿದ ಬಿಕ್ಕಟ್ಟಿನ

ಮಾರ್ಗವು! ಅಂದಬಳಿಕ ಅದರಲ್ಲಿತಗ್ಗುದಿನ್ನೆಗಳೂ, ಎಡಬಲಗಳ ಗೋಡೆಗಳ ಮುಂದಕ್ಕೆ ಹಾದ ಭಾಗಗಳೂ, ಕೇವಲ ಅಡ್ಡಮಗ್ಗಲಾಗಿ ಹೋದರೆಮಾತ್ರ ಬಹು ಪ್ರಯಾಸದಿಂದ ಮುಂದಕ್ಕೆ ಸಾಗಲಿಕ್ಕೆ ಬರಬಹುದಾದ ಇಕ್ಕಟ್ಟಿನ ಸ್ಥಳಗಳೂ ಎಷ್ಟು ಇದ್ದವೆಂಬದನ್ನು ಯಾರು ಎಣಿಸಿ ಹೇಳುವರು? ಕಾಲಲ್ಲಿ ಹುಡಿ, ಮತ್ತು ಕಣ್ಣುಕಪ್ಪಡಿಯ ಹಿಕ್ಕಿಗಳು, ಮೂಗಿಗೆ ಬಡಿಯುವ ಕಣ್ಣುಕಪ್ಪಡಿಯ ಉಚ್ಚೆಯಘಾಟಿ, ಮೇಲೆ ಜೋತುಬಿದ್ದಿದ್ದ ಕಣ್ಣುಕಪ್ಪಡಿಗಳು ಭರಗುಟ್ಟುತ್ತ ಎದ್ದು ಮೈಗೆ ಬಡಿಯೋಣ, ಮುಂತಾದ ತೊಂದರೆಗಳಿಂದ ಮಲ್ಲನ ಮನಸ್ಸು ಮುಂದಕ್ಕೆ ಹೋಗಲಿಕ್ಕೆ ಬೇಸತ್ತಿತ್ತು; ಆದರೂ ನಿರ್ವಾಹವಿಲ್ಲದೆ, ಆತನು ಎಡವುತ್ತ ಮುಗ್ಗುತ್ತ ಮೈತೆರೆಸಿಕೊಳ್ಳುತ್ತ ತಲೆ ತಾಕಿಸಿಕೊಳ್ಳುತ್ತ ಸುಮಾರು ಇನ್ನೂರು ಹೆಜ್ಜೆಗಳನ್ನು ಬುಕ್ಕನ ಬೆನ್ನುಹತ್ತಿ ಹೋಗಿರಬಹುದು. ಅಷ್ಟರಲ್ಲಿ ಅವನಿಗೆ ಉಸುಲುಗಟ್ಟಿದ ಹಾಗಾಗಿ ಇನ್ನು ಹಿಂದಕ್ಕೆ ತಿರುಗಿಹೋದರೆ ನೆಟ್ಟಗಾದೀತೆಂದು ಆತನು ನೆನಸಹತ್ತಿದನು; ಆದರೆ ಬುಕ್ಕನು ಬಡಬಡ ಮುಂದಕ್ಕೆ ಹೋಗಹತ್ತಿರಲು, ತಾನು ಕೈಲಾಗದವನಂತೆ ಆತನಿಗೆ ಹಿಂದಿರುಗ ಹೇಳುವದು ಅಭಿಮಾನಿಯಾದ ಮಲ್ಲನ ಮಾನಕ್ಕೆ ಸಾಲದಾಯಿತು. ಮೇಲಾಗಿ ಒಳಗೆ ಏನು ಇರುವದೆಂಬದನ್ನು ನೋಡುವ ಕುತೂಹಲವಂತು ಆತನಿಗೆ ಇದ್ದೇ ಇತ್ತು; ಇದಲ್ಲದೆ ಬುಕ್ಕನಿಂದ ತನ್ನ ಒಡೆಯನಾದ ಹುಕ್ಕದೊರೆಯ ಎಲ್ಲ ವೃತ್ತಾಂತವನ್ನು ಕೇಳಿಕೊಳ್ಳಬೇಕೆಂಬ ಉತ್ಕಟೇಚ್ಛೆಯು ಆತನನ್ನು ಬಾಧಿಸುತ್ತಿತ್ತು. ಈ ಸ್ಥಿತಿಯಲ್ಲಿ ಆತನು ಹಿಂದಕ್ಕೆ ತಿರುಗಿ ಹೋಗೋಣವೆಂದು ಬುಕ್ಕನಿಗೆ ಹ್ಯಾಗೆ ಹೇಳಬೇಕು? ಅವರಿಬ್ಬರೂ ಹಾಗೆಯೇ ಮುಂದಕ್ಕೆ ಸಾಗುತ್ತಿರಲು, ಮುಂದೊಂದು ಅಡ್ಡ ಗೋಡೆಯು ಬಂದು ಹೋಗಲಿಕ್ಕೆ ಮಾರ್ಗವಿಲ್ಲದಾಯಿತು; ಅಂದಬಳಿಕ ಮುಂದಕ್ಕೆ ಹೋಗುವ ಬಗೆಯೇನು? ಆಗ ಬುಕ್ಕನು ಮಲ್ಲನನ್ನು ಕುರಿತು—

''ಮಲ್ಲಣ್ಣಾ, ಇಲ್ಲಿಗೆ ಮುಂದಕ್ಕೆ ಹೋಗುವದು ಕಟ್ಟಾಯಿತಲ್ಲ! ನಾನು ಹಾದಿಯನ್ನು ತಪ್ಪಿದೆನೋ ಏನು? ಒಳಗೆ ಹೋಗುವ ಬಾಗಿಲು ಇಲ್ಲಿಯೇ ಇದ್ದಂತೆ ಇತ್ತು; ಈಗ ಸಿಗಲೊಲ್ಲದು. ಬಾ, ಹೀಗೆ ಮುಂದಕ್ಕೆ ಬಾ, ಹುಡುಕಿ ನೋಡು; ಹೋಗಲಿಕ್ಕೆ ಎಲ್ಲಿಯಾದರೂ ನಿನಗೆ ಹಾದಿ ಸಿಗುತ್ತದೋ ಹೇಗೆ ನೋಡು. ಗಾಬರಿಯಾಗಬೇಡ. ಹುಳ–ಹುಪ್ಪಡಿ, ಹಾವು– ಚೇಳುಗಳೆಂದು ಅಂಜಬೇಡ, ಅಂಥ ಅಂಜಿಗೆ ಇದ್ದವರು ಇಂಥ ಗವಿಗಳನ್ನು ಯಾಕೆ ಪ್ರವೇಶಿಸುವರು? ಅವರು ಇಂಥ ಗುಹೆಗಳ ಸ್ವರೂಪವನ್ನೂ, ಅವುಗಳನ್ನು ಮಾಡಿದ ಉದ್ದೇಶವನ್ನೂ ಅರಿತುಕೊಳ್ಳದೆ ''ಇದು ಹೀಗೆಯೇ ಮಹಾಕೂಟಕ್ಕೆ ಹೋಗಿದೆ'' ''ಇನ್ನು ಹೀಗೆಯೇ ಕಾಶಿಗೆ ಹೋಗಿದೆ'' ಇತ್ಯಾದಿ ಹುರುಳಿಲ್ಲದ ಕಲ್ಪನೆಯ ಕೇಳಿಕೆಯ ಕಟ್ಟುಕಥೆಗಳನ್ನು ಹೇಳುತ್ತ, ಗುಹೆಯಲ್ಲಿ ಕಾಲಿಡಲಿಕ್ಕೂ ಹೆದರುತ್ತಿರುವರು. ಅಂಥವರಿಂದ ಸಾಹಸದ ಕಾರ್ಯಗಳು ಸರ್ವಥಾ ಆಗಲಾರವು. ನೀನು ನಮ್ಮ ಅಣ್ಣನ ಅನುಯಾಯಿಯಾಗಿರುವದರಿಂದ ಇಂಥ ಗುಹೆಗಳ ಗುಟ್ಟು ತಿಳಿದಿರುವದು ಅವಶ್ಯವಾಗಿದೆ. ಇಂಥ ಸಾಹಸದ ವ್ಯಾಪಾರಗಳು ರಾಜಕಾರಣದವರ ಗಟ್ಟಿಗತನದ ಒರೆಗಲ್ಲಾಗಿರುವವು. ನೋಡು ಇನ್ನು ಹ್ಯಾಗೆ ಮಾಡುತ್ತೀ? ಇಲ್ಲಿಗೆ ಹಾದಿಯಂತು ಕಟ್ಟಾಯಿತು. ಇನ್ನು ಹಿಂದಕ್ಕೆ ತಿರುಗಿ ಹೋಗೋಣವೋ ಹ್ಯಾಗೆ? ಬಾ, ಇತ್ತ ಬಂದು ಗೋಡೆಯ ಮೇಲೆ ಕೈಯಾಡಿಸಿ, ಎಲ್ಲಿಯಾದರೂ ಬಾಗಿಲು–ಗೀಗಿಲು ಇರುತ್ತದೋ ಹೇಗೆ ನೋಡು.''

ಈ ಮೇರೆಗೆ ನುಡಿದ ಬುಕ್ಕನ ಮಾತುಗಳನ್ನು ಕೇಳಿ ಮಲ್ಲನು—"ಬುಕ್ಕ ದೊರೆಯೇ, ನಮ್ಮಂಥ ಮಡ್ಡಗುರುಬರಿಗೆ ಇಂಥ ಜಿನಗು ಕೆಲಸದ ಗುರುತು ಸಿಗುವದಿಲ್ಲಬಿಡು. ನಾವು ಕುರುಬರು ಉರಟಹೊಡತದ ಮಂದಿ+ಲ್ಲೊಂದು ಲಂಗಟ, ಮೈಮೇಲೊಂದು ಗೊಂಗಡಿ, ತಲೆಯಮೇಲೊಂದು ಚಿಂದಿ; ಈ ಚೆಂದದಿಂದ ನಾವು ಕೈಯಲ್ಲೊಂದು ಉದ್ದ ಕೋಲು ಹಿಡಕೊಂಡು "ಟರ್‌ಹುಶ್" ಎಂದು ಕುರಿಕಾಯತಕ್ಕವರು. ನಮ್ಮ ಹೆಗ್ಗದೊರೆಯ ಅಲ್ಲ, ಅಲ್ಲ ನಮ್ಮ ಹುಕ್ಕದೊರೆಯ ಪುಣ್ಯದಿಂದ ನಾವು ಈಗೀಗ ಮನುಷ್ಯರ ಬಟ್ಟೆಯನ್ನು ತೊಡಹತ್ತಿರುವೆವು; ಆದ್ದರಿಂದ ನಮಗೆ ಇಂಥ ಹಾದಿಗೀದಿಯ ಗೊತ್ತುಹತ್ತಲಿಕ್ಕಿಲ್ಲ; ಆದರೂ ನಿನ್ನ ಅಪ್ಪಣೆಯಂತೆ ನಡೆಯುವದು ನನ್ನ ಕೆಲಸವಾದದ್ದರಿಂದ ಗೋಡೆಯಮೇಲೆ ಕೈಯಾಡಿಸಿ ನೋಡುತ್ತೇನೆ. ಛಿ ಛಿ! ಗೋಡೆಗಳೆಲ್ಲ ಮುಳ್ಳು ಅಂಡೆ! ಇದರರಲ್ಲೆಲ್ಲಿಯ ಮಾರ್ಗ ಬರಬೇಕು? ಇಲ್ಲಿಗೆ ಗವಿಯೇ ಮುಗಿದಂತೆ ಕಾಣುತ್ತದೆ. ಇಂಥ ಕವಡಕಂಟಕ ಕೆಲಸದ ಮಟ್ಟು ನಮಗೆ ತಿಳಿಯದು ಬಿಡು. ಮಾರಾಯಾ, ಕಣ್ಣುಕಪ್ಪಡಿಯ ಗಾಟದಲ್ಲಿ ನನ್ನ ಉಸಲು ಕಟ್ಟಹತ್ತಿದೆ; ಆದ್ದರಿಂದ ನನ್ನನ್ನು ಬೇಗನೆ ಮುಂದಕ್ಕಾದರೂ ಕರಕೊಂಡು ಹೋಗು, ಇಲ್ಲದಿದ್ದರೆ ಹಿಂದಕ್ಕೆ ತಿರುಗಿ ಸ್ವಲ್ಪ ಗಾಳಿಗಾದರೂ ಹೋಗಿಬರೋಣ ಅನ್ನಲು, ಬುಕ್ಕನು ಮನಸ್ಸಿನಲ್ಲಿಯೇ ನಕ್ಕು ಮಲ್ಲನಿಗೆ— "ಮಲ್ಲಣ್ಣಾ, ಮುಂದಕ್ಕಿಟ್ಟ ಕಾಲನ್ನು ಹಿಂದಕ್ಕಿಡುವದುಂಟೆ? ನಿನ್ನನ್ನು ನಾನು ಮುಂದಕ್ಕೇ ಕರಕೊಂಡು ಹೋಗುತ್ತೇನೆ; ಆದರೆ ನಿನಗೆ ಇಂಥ ಗವಿಗಳ ಗೂಢವು ಗೊತ್ತಿರಬೇಕೆಂದು ಇಷ್ಟು ಕೆದರಿ ಕೆದರಿ ನಿನಗೆ ತೋರಿಸುತ್ತೇನೆ. ನೀನು ನಮ್ಮ ಬಂಧುವರ್ಗದಲ್ಲಿ ಸೇರಿರುವದರಿಂದ ಇಂಥ ಗೂಢ ಸಂಗತಿಗಳ ಮರ್ಮವು ನಿನಗೆ ಗೊತ್ತಿರಬೇಕಾಗುವದು. ನಿಜವಾಗಿ ಈ ಎದುರಿನ ಗೋಡೆಯಲ್ಲಿ ಗವಿಯ ಹಾದಿಯೇ ಇರುವದಿಲ್ಲ, ಸುಮ್ಮನೆ ಜನರನ್ನು ಮೋಸಗೊಳಿಸುವದಕ್ಕಾಗಿ ಹೀಗೆ ಉದ್ದಕ್ಕೆ ಮಾರ್ಗವನ್ನು ತೋಡಿರುತ್ತಾರೆ. ಸಾಮಾನ್ಯ ಜನರು ಎಲ್ಲಿಯೂ ಹಾದಿ ಇಲ್ಲೆಂದು ಹಿಂದಿರುಗಿ ಹೋಗಿಬಿಡುವರು. ನೀನೆ ನೋಡು ಏನೂ ಪ್ರಯೋಜನವಿಲ್ಲದೆ ಸುಮ್ಮನೆ ಹೀಗೆ ಯಾರಾದರೂ ಕಷ್ಟಪಟ್ಟು ಹಾದಿಯನ್ನು ಮಾಡಬಹುದೇ? ಆದ್ದರಿಂದ ನಿನಗೊಂದು ಆಶ್ಚರ್ಯವನ್ನು ತೋರಿಸುತ್ತೇನೆ ನಡೆ. ಎಂದು ಹೇಳಿ ಹಿಂದಕ್ಕೆ ಐವತ್ತು ಐವತ್ತೈದು ಹೆಜ್ಜೆ ಆತನನ್ನು ಕರಕೊಂಡು ಬಂದು ಒಂದು ಸಿಳ್ಳುಹಾಕಿದನು; ಕಗ್ಗತ್ತಲೆಯ ಗುಹೆಯಲ್ಲಿ ಆ ಸಿಳ್ಳಿನ ಧ್ವನಿಯು ಪ್ರತಿಧ್ವನಿ ಗೊಂಡು ಅಕಸ್ಮಾತ್ ಕರ್ಣರಂಧ್ರವನ್ನು ಪ್ರವೇಶಿಸಿದ್ದರಿಂದ ಮಲ್ಲನು ಮೆಟ್ಟಿಬಿದ್ದನು. ಅಷ್ಟರಲ್ಲಿ ಒಂದು ಕಕ್ಕಡವನ್ನು ಹಿಡಕೊಂಡು ಯಾವನೋ ಒಬ್ಬನು ಎದುರಿಗೆ ಬರತೊಡಗಿದನು. ಈ ಎಲ್ಲ ವಿಲಕ್ಷಣ ಸ್ಥಿತಿಯು ಮಲ್ಲನಿಗೆ ಪರಮಾಶ್ಚರ್ಯಕರವಾಗಿ ತೋರಿತು. ಆತನು ಚಕಿತನಾಗಿ ಕಕ್ಕಡದ ಕಡೆಗೆ ನೋಡುತ್ತಿರಲು, ಒಬ್ಬ ಮನುಷ್ಯನು ಬುಕ್ಕನ ಕೈಯಲ್ಲಿ ಸುಮ್ಮನೆ ಕಕ್ಕಡವನ್ನು ಕೊಟ್ಟು ಹೋದನು. ಆಗ ಬುಕ್ಕನು ಮಲ್ಲನನ್ನುದ್ದೇಶಿಸಿ—"ಮಲ್ಲಣ್ಣಾ, ಇದರಲ್ಲಿ ನೀನು ಆಶ್ಚರ್ಯಪಡತಕ್ಕ ಸಂಗತಿಯೇನು ಇರುವದಿಲ್ಲ, ಇರಇರುತ್ತ ನಿನಗೆ ಎಲ್ಲ ಸಂಗತಿಯ ಗೂಢವೂ ತಿಳಿಯುವದು. ಇತ್ತ ಬಾ ! ಈ ಮಾಡದಲ್ಲಿ ಏನಿರುತ್ತದೆಂಬದನ್ನು ನೋಡು" ಎಂದು ಹೇಳಿ ಗುಹೆಯ ಮಾರ್ಗದ ಬಲಗಡೆಯ ಗೋಡೆಯ ದೊಡ್ಡ ಮಾಡದಲ್ಲಿದ್ದ ಒಂದು ಶಿವಲಿಂಗವನ್ನೂ, ಅದರ

ಮುಂದಿರುವ ಬಸವಣ್ಣನನ್ನೂ ತೋರಿಸಿದನು. ಮಲ್ಲನಿಗೆ ಅದರಲ್ಲಿ ವಿಶೇಷವೇನು ತೋರಬೇಕು? ಆ ಸರಳಹೃದಯದ ಭಾವಿಕ ಕುರುಬನು ಭಕ್ತಿಯಿಂದ ಆ ಶಿವಲಿಂಗಕ್ಕೆ ನಮಸ್ಕರಿಸಿದನು. ಇದನ್ನು ನೋಡಿ ಬುಕ್ಕನಿಗೆ ನಗೆ ಬಂದರೂ ಅದನ್ನು ಆತನು ನುಂಗಿಕೊಂಡು, ಆ ಮಲ್ಲನ ಭಾವಿಕತನದ ಶುದ್ಧಾಂತಃಕರಣಕ್ಕಾಗಿ ಆತನನ್ನು ಧನ್ಯನೆಂದು ಭಾವಿಸುತ್ತ, ಆತನನ್ನು ಕುರಿತು—''ಮಲ್ಲಣ್ಣಾ, ಏನು ಇರುವ ಕಮಾಯವೆಲ್ಲ ಈ ಶಿವಲಿಂಗದಲ್ಲಿ, ಹಾಗು ಬಸವಣ್ಣನಲ್ಲಿ ಇರುತ್ತದೆ ನೋಡು. ಮನಸ್ಸಿನಂತೆ ಮಾದೇವನೆಂಬ ಮಾತಿನಂತೆ, ಈ ಮಹಾದೇವನು ನಿಮ್ಮಂಥ ಭಾವಿಕರಿಗೆ ಮನಶ್ಶಾಂತಿಯನ್ನೂ, ನಮ್ಮಂಥ ಲೌಕಿಕ ಫಲಾಪೇಕ್ಷಿಗಳಿಗೆ ಲೌಕಿಕ ಫಲವನ್ನೂ ಕೊಡುತ್ತಿರುವನು. ಇಗೋ, ಇತ್ತ ನಿನ್ನ ಸಂಪೂರ್ಣ ಲಕ್ಷ್ಯವಿರಲಿ; ಎಂದು ಹೇಳಿ, ಶಿವಲಿಂಗವನ್ನು ಭಕ್ತಿಯಿಂದ ನಮಸ್ಕರಿಸಿ, ಮೊದಲು ಬಸವಣ್ಣನನ್ನು ಬಲಸುತ್ತಿನಿಂದ ತಿರುವಹತ್ತಿದನು. ಇದನ್ನು ಮಲ್ಲಣ್ಣನು ಅತ್ಯಂತ ಕೌತುಕದಿಂದ ನೋಡುತ್ತಿರುವಾಗ ಬಸವಣ್ಣನು ಮೆಲ್ಲಮೆಲ್ಲನೆ ಮೇಲಕ್ಕೇರಹತ್ತಿದನು. ಮಾಡವು ಬಹಳ ಎತ್ತರವಿದ್ದದ್ದರಿಂದ ಬುಕ್ಕನು ತಿರುತಿರುವಿದಂತೆ ಬಸವಣ್ಣವು ಮೇಲಕ್ಕೇರುತ್ತ ಹೋಗಿ, ಅದರ ಬುಡದಲ್ಲಿದ್ದ ಕಬ್ಬಿಣದ ಮಲಸುತ್ತು ಸ್ಪಷ್ಟವಾಗಿ ಕಾಣಿಸಹತ್ತಿತ್ತು! ಬಸವಣ್ಣನು ಮಾಡದ ತೀರ ಮೇಲ್ಭಾಗಕ್ಕೆ ಹತ್ತಿದ ಬಳಿಕ ಬುಕ್ಕನು ಅದನ್ನು ಬಿಟ್ಟು ಶಿವಲಿಂಗವನ್ನು ಎಡಸುತ್ತಿನಿಂದ ತಿರುವಹತ್ತಿದನು. ಅದೂ ಸಾವಕಾಶವಾಗಿ ಮೇಲಕ್ಕೇರಹತ್ತಿತು. ಬಸವಣ್ಣನಂತೆ ಶಿವಲಿಂಗವೂ ಮಾಡದ ಮೇಲ್ಭಾಕ್ಕೆ ಹೋದಬಳಿಕ ಬುಕ್ಕನು ಆ ಶಿವಲಿಂಗದ ಗದ್ದಿಗೆಯ ಕಲ್ಲನ್ನು ಮುಂದಕ್ಕೆ ಸರಿಸಿಕೊಂಡನು. ಕೂಡಲೆ ಅದು ಮುಂದಕ್ಕೆ ಸರಿದು, ಒಬ್ಬ ಮನುಷ್ಯನು ಇಳಿದುಹೋಗುವಷ್ಟು ಮಾರ್ಗವು ಕಾಣಿಸಿತು. ಆಗ ಬುಕ್ಕನು ಮಲ್ಲನಿಗೆ ತನ್ನ ಹಿಂದೆ ಬರಹೇಳಿ ಕಕ್ಕಡದೊಡನೆ ಆ ಮಾರ್ಗದಲ್ಲಿ ಇಳಿದನು. ಮಲ್ಲನೂ ಆತನ ಬೆನ್ನಹಿಂದೆಯೇ ನಿಶ್ಶಂಕೆಯಿಂದ ಇಳಿದುಹೋದನು; ಯಾಕೆಂದರ ಬುಕ್ಕನಮೇಲೆ ಆತನ ಸಂಪೂರ್ಣ ವಿಶ್ವಾಸವು ಕುಳಿತುಹೋಯಿತು. ಬುಕ್ಕನು ಮಲ್ಲನನ್ನು ಮಾರ್ಗದಲ್ಲಿಯ ನಾಲ್ಕು ಪಾವಟಿಗೆಗಳನ್ನು ಇಳಿಸಿ ತಾನು ಒಂದು ಪಾವಟಿಗೆಯನ್ನಿಳಿದು ನಿಂತು ಪುನಃ ಗದ್ದಿಗೆಯನ್ನು ತನ್ನ ಕಡೆಗೆ ಸರಿಸಿಕೊಂಡು ಅದರ ಸ್ಥಳದಲ್ಲಿ ಅದನ್ನು ಸರಿಯಾಗಿ ಕೂಡ್ರಿಸಿದನು. ಬಳಿಕ ಮಾಡದ ಹಿಂಬದಿಯ ಕಲ್ಲನ್ನು ಯುಕ್ತಿಯಿಂದ ಮೇಲಕ್ಕೇರಿಸಿ ಬಸವಣ್ಣನನ್ನೂ, ಶಿವಲಿಂಗವನ್ನೂ ಮೊದಲಿನ ಕ್ರಮದ ವಿರುದ್ಧಕ್ರಮದಿಂದ ತಿರುಗಿಸಿ, ಅವನ್ನು ಮೊದಲಿನಂತೆ ಅವುಗಳ ಸ್ಥಳದಲ್ಲಿ ಕೂಡ್ರಿಸಿದನು.

ಇಷ್ಟೆಲ್ಲ ವ್ಯವಸ್ಥೆಯಾದಬಳಿಕ ಬುಕ್ಕನು ಮಲ್ಲನನ್ನು ಕರಕೊಂಡು ಗುಹೆಯ ಪಾವಟಿಗೆಗಳನ್ನು ಇಳಿಯುತ್ತ ಮುಂದಕ್ಕೆ ಸಾಗಿದನು. ಕಕ್ಕಡದ ಬೆಳಕು ಇದ್ದದ್ದರಿಂದ ಗುಹೆಯಲ್ಲಿ ಹೋಗಲಿಕ್ಕೆ ಈಗ ತೊಂದರೆಯಾಗಲಿಲ್ಲ, ಮೇಲಾಗಿ ಗುಹೆಯ ಮಾರ್ಗವೂ ಮೊದಲಿನಷ್ಟು ತ್ರಾಸದಾಯಕವಿದ್ದಿಲ್ಲ, ಅಲ್ಲಿ ಕಣ್ಣುಕಪ್ಪಡಿಯ ತ್ರಾಸವೂ, ಹೊಲಸೂ ಇದ್ದಿಲ್ಲ, ಇದರಿಂದ ಮಲ್ಲನಿಗೂ ಸ್ವಲ್ಪ ಸಮಾಧಾನವಾಯಿತು. ಹೀಗೆ ಅವರು ನೂರಾರು ಹೆಜ್ಜೆಗಳನ್ನು ಹೋಗಲು, ಅವರು ಅಡ್ಡಬದಿಗಿದ್ದ ಮಾರ್ಗದಿಂದ ಮತ್ತೆ ಪಾವಟಿಗೆಗಳನ್ನು ಇಳಿಯಬೇಕಾಯಿತು. ಹೀಗೆ ಅವರು

ಅಡ್ಡತಿಡ್ಡ ಮಾರ್ಗಗಳಿಂದ ಸುಮಾರು ಐನೂರು ಹೆಜ್ಜೆಗಳನ್ನು ಹೋದಬಳಿಕ, ಅವರಿಗೆ ಒಂದು ಪ್ರಶಸ್ತವಾದ ಚೌಕಟ್ಟು ಹತ್ತಿತು; ಆದರೆ ಆ ಚೌಕಟ್ಟಿನ ಬಾಗಿಲು ಎಲ್ಲಿಯೂ ಒಂದು ಕೂದಲೆಳೆಯಷ್ಟು ಸಹ ಸಂದು ಇಲ್ಲದಂತೆ ರಿಕ್ಕಾಗಿ ಕೂಡಿಸಲ್ಪಟ್ಟಿತ್ತು, ಅದಕ್ಕೆ ಚಿಲಕವಿದ್ದಿಲ್ಲ ಲಾಲುಂಡಿಗೆಯಿದ್ದಿಲ್ಲ, ಅದನ್ನು ತೆಗೆಯಲಿಕ್ಕೆ ಆಸ್ಪದವು ಎಲ್ಲಿಯೂ ಇದ್ದಂತೆ ತೋರಲಿಲ್ಲ. ಈ ಒಂದೊಂದು ವಿಲಕ್ಷಣ ಸ್ಥಿತಿಯನ್ನು ನೋಡಿ ಮಲ್ಲನು ಆಶ್ಚರ್ಯಮಗ್ನನಾದನು. ಇನ್ನು ಬುಕ್ಕದೊರೆಯು ಬಾಗಿಲು ತೆರೆಯಲಿಕ್ಕೆ ಏನು ಹಂಚಿಕೆಮಾಡುತ್ತಾನೋ ನೋಡಬೇಕೆಂದು ಮಲ್ಲಣ್ಣನು ಲಕ್ಷಗೊಟ್ಟು ಬಾಗಿಲಕಡೆಗೆ ನೋಡುತ್ತ ನಿಂತುಕೊಂಡನು. ಬುಕ್ಕನು ಯಾರನ್ನೂ ಕೂಗಿ ಕರೆಯಲಿಲ್ಲ, ಬಾಗಿಲು ಬಡೆಯಲಿಲ್ಲ, ಹಾಗೆ ಮಾಡಿದ್ದರೆ ಪ್ರಯೋಜನವೂ ಆಗುವಂತೆ ಇದ್ದಿಲ್ಲ. ಯಾಕೆಂದರೆ, ಆ ಸಂದುಬಿಡದ ಬಲವಾದ ಕಲ್ಲುಬಾಗಿಲದೊಳಗಿಂದ ಒದರಿದ್ದೂ, ಬಾಗಿಲು ಬಡಿದದ್ದೂ ಹೊರಗಿನವರಿಗೆ ಕೇಳುವದಾದರೂ ಹೇಗೆ ? ಈ ಸ್ಥಿತಿಯಲ್ಲಿ ಬುಕ್ಕಣ್ಣನು ಏನು ಚಮತ್ಕಾರ ಮಾಡುವನೋ ನೋಡೋಣವೆಂದು ಮಲ್ಲನು ನೋಡುತ್ತಿರುವಾಗ, ಬುಕ್ಕನು ಬಾಗಿಲದ ನಾಲ್ಕೂ ಮೂಲೆಗಳ ಹತ್ತಿರ ಮುಷ್ಟಿಗೈಯಿಂದ ಕಸುವಿನಿಂದ ಒತ್ತಿ ಬಾಗಿಲ ಮಧ್ಯದಲ್ಲಿರುವ ಕಮಲಪುಷ್ಪದ ಚಿತ್ರವನ್ನು ಅದರಂತೆಯೇ ಮುಷ್ಟಿಗೈಯಿಂದ ಒತ್ತಿದನು. ಕೂಡಲೆ ಆ ದೊಡ್ಡ ಬಾಗಿಲು ಪಳಕ್ಕನೆ ತೆರೆಯಲು, ಒಳಗೆ ಒಂದು ವಿಶಾಲವಾದ ಮಂದಿರದಲ್ಲಿ ಸ್ವಚ್ಛ ಪ್ರಕಾಶದೊಳಗೆ ಸುಮಾರು ೨೦೦–೩೦೦ ಜನ ತರುಣರು ಕೂಗಿ ಕೂಗಿ ಗರಡಿಯ ಸಾಧನ ಮಾಡುತ್ತಿರುವ ಗಂಭೀರ ನೋಟವು ಅವರ ಕಣ್ಣಿಗೆ ಬಿದ್ದಿತು. ಬಾಗಿಲು ಹ್ಯಾಗೆ ತೆರೆಯುತ್ತದೋ ನೋಡಬೇಕೆಂದು ಬಾಯಿತೆರೆದು ನಿಂತಿದ್ದ ಮಲ್ಲಣ್ಣನ ಕಣ್ಣಿಗೆ ಅಕಸ್ಮಾತ್ ಈ ವೀರರ ತಂಡವು ಬಿದ್ದದ್ದರಿಂದ ಆತನು ಮೆಟ್ಟಿಬಿದ್ದು ಹಿಂದಕ್ಕೆ ಸರಿದು ನಿಲ್ಲುವಾಗ ''ಎಲ ಇದೇನು!'' ಎಂಬ ಆಶ್ಚರ್ಯೋದ್ಗಾರವು ಹೊರಬಿದ್ದದ್ದು ಅಸ್ವಾಭಾವಿಕವಲ್ಲ.

ಇಷ್ಟೆಲ್ಲ ಆಗಿ ಆ ಭವ್ಯಮಂದಿರಕ್ಕೆ ಅವರು ಹೋಗುವದರೊಳಗೆ ಬೆಳಗಾಗಲಿಕ್ಕೆ ಒಂದು ತಾಸು ರಾತ್ರಿಯು ಉಳಿದಿರಬಹುದು. ಬಾಗಿಲು ತೆರೆದು ಬುಕ್ಕನು ಒಳಗೆ ಬಂದಕೂಡಲೆ, ಆ ಕನ್ನಡ ತರುಣ ವೀರರೆಲ್ಲ ಎದ್ದುನಿಂತು ಅವನಿಗೆ ತಲೆಬಾಗಿ ವಂದಿಸಿದರು. ಬುಕ್ಕನು ಅವರಿಗೆ ಪ್ರತಿಯಾಗಿ ನಮಿಸಿ— ''ಮಿತ್ರರೇ, ನಿಮ್ಮ ಕೆಲಸವು ಸಾಗಲಿ'' ಎಂದು ಪ್ರೀತಿಯಿಂದ ನುಡಿದು ಮಲ್ಲನೊಡನೆ ಅವರ ಗರಡಿಯ ಸಾಧಕವನ್ನು ನೋಡುತ್ತ ನಿಂತುಕೊಂಡನು. ಸಾಲುಸಾಲಾಗಿ ನಿಂತಿರುವ, ಕುಂಡಿಯಚಣ್ಣದ, ಕೆಂಪು ಕಪ್ಪು ಮೈಬಣ್ಣದ ಬೆವತು ನೀರಾದ, ಮುಂಡೆದಿರುಗಿದ ಮೈಕಟ್ಟುಳ್ಳ ಆ ವೀರರ ತಂಡವು, ವೀರರ ಸ್ಫೂರ್ತಿಯನ್ನು ಹೆಚ್ಚಿಸುವಂತಹದಾಗಿತ್ತು. ಮಲ್ಲಣ್ಣನಿಗೆ ತನ್ನ ಹುಕ್ಕ ದೊರೆಯು ಹೀಗೆಯೇ ಮಾಡಿಸುತ್ತಿದ್ದ ಗರಡಿಯ ಸಾಧಕದ ನೆನಪಾಗಿ ಆತನ ಮುಖದಿಂದ ಬುಕ್ಕನನ್ನು ಕುರಿತು– ''ಬಪ್ಪರೆ! ನಮ್ಮ ಹುಕ್ಕದೊರೆಯ ತಮ್ಮ ಹೌದೋ!'' ಎಂಬ ಉದ್ಗಾರವು ಹೊರಟಿತು! ಅದನ್ನು ಕೇಳಿ ಬುಕ್ಕನ ಸ್ವಾಭಿಮಾನವು ಜಾಗ್ರತವಾಗಿ ಆತನು ಒಮ್ಮೆ ಮಲ್ಲಣ್ಣನ ಕಡೆಗೆ ನೋಡಿ ಬಹುಮಾನದಿಂದ ತಲೆಬಾಗಿಸಿದನು. ಬಳಿಕ ಆತನು ತನ್ನ ವೀರ ಅನುಯಾಯಿಗಳನ್ನು ಕುರಿತು— ''ಮಿತ್ರರೇ, ನಿಮ್ಮ ಗರಡಿಯ ಸಾಧಕವನ್ನು ನೋಡುತ್ತ

ನಿಂತಿದ್ದ ಈ ವೀರನು ಸರ್ವಸಾಧಾರಣ ಮನುಷ್ಯನಲ್ಲ. ಜಗದ್ವಿಖ್ಯಾತನಾದ ಮಲಿಕನನ್ನು ಒಗೆದ ವೀರ ಮಲ್ಲನು! ನಮ್ಮ ಪುಣ್ಯದಿಂದ ಈತನ ದರ್ಶನವಾಯಿತೆಂದು ತಿಳಿಯಿರಿ'' ಎಂದು ನುಡಿಯಲು, ಅವರೆಲ್ಲ ವೀರರು ತಮ್ಮ ಪದ್ಧತಿಯಂತೆ ನಿಂತಲ್ಲಿಂದಲೇ ಮಲ್ಲಣ್ಣನಿಗೆ ಮುಜುರೆ ಮಾಡಿದರು. ಅದನ್ನು ನೋಡಿ ನಿರಭಿಮಾನದ ಮಲ್ಲಣ್ಣನಿಗೆ ಸಂಕೋಚವಾಗಿ– ''ಇಷ್ಟು ಹೊಗಳಲಿಕ್ಕೆ ನಾನು ಯಾವ ದೊಡ್ಡ ಜಟ್ಟಿಯು! ಏನೋ ವಿಷವ್ಯಾಳ್ಯದಿಂದ ಲಾಗತಪ್ಪಿ ಮಲಿಕಜಟ್ಟಿಯು ಬಿದ್ದಿದ್ದರೆ ಬಿದ್ದಿರಬಹುದು. ಅದರಲ್ಲಿ ನನ್ನ ಹೆಚ್ಚಳವೇನು?'' ಎಂದು ನುಡಿದು, ಆ ಮಾತು ಮರೆಸುವದಕ್ಕಾಗಿ ಬುಕ್ಕನಿಗೆ— ''ಒಡೆಯಾ, ಇವರ ಗರಡಿಯ ಸಾಧಕವು ನಡೆಯಲಿ! ನಮ್ಮಿಂದ ತೊಂದರೆಯೇಕೆ? ಆ ಎದುರಿಗೆ ಕಾಣುವ ಬಲಭೀಮನ ಮೂರ್ತಿಯನ್ನು ನಮಸ್ಕರಿಸೋಣ ನಡೆ! ಅಹಹ! ಈ ಸಂಜೀವಮೂರ್ತಿಯು ಎಷ್ಟು ಭವ್ಯವಾಗಿದೆ'' ಎಂದು ನುಡಿಯಲು, ಬುಕ್ಕನು ಆತನನ್ನು ಆ ಸಂಜೀವಮೂರ್ತಿಯ ಬಳಿಗೆ ಕರಕೊಂಡು ಹೋದನು. ಅವರಿಬ್ಬರು ಭಕ್ತಿಯಿಂದ ಆ ಮೂರ್ತಿಯನ್ನು ನಮಸ್ಕರಿಸಿ, ಆ ಮೂರ್ತಿಯ ಬಳಿಯಲ್ಲಿ ಕುಳಿತುಕೊಂಡು ಆ ವೀರರ ಗರಡಿಯ ಸಾಧಕವನ್ನು ನೋಡಹತ್ತಿದರು. ತಮ್ಮ ಹುಕ್ಕದೊರೆಯ ಪದ್ಧತಿಯಂತೆಯೇ ಇಲ್ಲಿಯ ಗರಡಿಯ ಸಾಧಕದ ಪದ್ಧತಿಯು ಅಚ್ಚಳಿಯದಂತೆ ಇದ್ದದ್ದನ್ನು ನೋಡಿ ಸಂತೋಷಪಡುವಾಗ ''ಬಪ್ಪರೆ! ನಮ್ಮ ಹುಕ್ಕ ದೊರೆಯ ತಮ್ಮ ಹೌದೋ! '' ಎಂಬ ಉದ್ಗಾರವು ಮಲ್ಲಣ್ಣನ ಮುಖದಿಂದ ಮತ್ತೆ ಹೊರಟಿತು. ಬಳಿಕ ವೀರರ ಬೇರೆ ಬೇರೆ ಕಸರತ್ತುಗಳಾದವು. ಅವರು ಮೈ ತಿಕ್ಕಿಕೊಂಡು ಮಣ್ಣು ತೆಗೆಯುವ ಕೆಲಸವಾಯಿತು. ಬಳಿಕ ಅವರು ''ಜಯ ಮಾರುತಿರಾಯಾ'' ಎಂದು ಗರ್ಜಿಸಿ, ಎಲ್ಲರೂ ಸಾಷ್ಟಾಂಗವಾಗಿ ಸಂಜೀವ ಮೂರ್ತಿಗೆ ವಂದಿಸಿದರು. ಅದನ್ನು ನೋಡಿ ಭಾವಿಕನಾದ ಮಲ್ಲಣ್ಣನ ಮೈ ಜುಮ್ಮೆಂದು ಮೈಕೂದಲು ನೆಟ್ಟಗಾದವು.

ಬಿಸಿ ಹತ್ತಿದಹೊರತು ಬೆಣ್ಣೆ ಕರಗುವದಿಲ್ಲೆಂಬ ಮಾತು ಸುಳ್ಳಲ್ಲ. ಉತ್ತರ ಹಿಂದುಸ್ತಾನವು ಮುಸಲ್ಮಾನರ ಅಬ್ಬರದ ತುಳತದಿಂದ ಹುಡಿ ಎದ್ದು ಹಾರುತ್ತಿದ್ದರೂ, ಅವರ ಪ್ರವೇಶವು ದಕ್ಷಿಣದಲ್ಲಿ ಆಗದೆ ಇದ್ದದ್ದರಿಂದ, ದಕ್ಷಿಣದ ರಾಜರು ಪರಸ್ಪರ ಕಲಹ ಬೆಳಿಸಿ, ದುರ್ಬಲರಾಗುತ್ತಲಿದ್ದರು; ಆದರೆ ಈಶ್ವರ ಕೃಪೆಯಿಂದ ಮುಂದೆ ಶೂರರಾದ ಮುಸಲ್ಮಾನರ ಕೈಯು ದಕ್ಷಿಣದವರಿಗೂ ಪ್ರತ್ಯಕ್ಷ ಗೊತ್ತಾಗಲು ಆ ದಕ್ಷಿಣದವರು ಗಡಬಡಿಸಿ ಎಚ್ಚತ್ತು ಮುಂದು ಗಾಣದೆ ದಶದಿಕ್ಕುಗಳನ್ನು ನೋಡಹತ್ತಿದರು. ಮಬ್ಬು ಹರಿದು ಅವರ ಕಣ್ಣುಗಳು ನಿಚ್ಚಳವಾದದ್ದರಿಂದ ಅವರಿಗೆ ತಮ್ಮ ಆಲಸ್ಯಾದಿ ದೋಷಗಳು ತಿಳಿಯಹತ್ತಿ, ಅವರು ಬಡಬಡ ಪರಿಶುದ್ಧರಾಗುವ ಯತ್ನ ನಡಿಸಹತ್ತಿದರು. ಈ ಯತ್ನಗಳಲ್ಲಿಯೇ ಬುಕ್ಕನ ಅನುಯಾಯಿಗಳು ಇಷ್ಟು ಜಾಗರೂಕತೆಯಿಂದ ಉತ್ತರ ರಾತ್ರಿಯಲ್ಲಿ ಎದ್ದು ಮನಃಪೂರ್ವಕ ಗರಡಿಯ ಸಾಧನ ಮಾಡಹತ್ತಿದ್ದೊಂದು ಯತ್ನವಾಗಿರುತ್ತದೆ. ತಾವು ಬಲಿಷ್ಠರಾದ ಹೊರತು ಮುಸಲ್ಮಾನರಿಗೆ ಈಡಾಗಲಾರೆವೆಂಬ ಎಚ್ಚರವು ಈಗ ಈ ಕನ್ನಡಿಗರಲ್ಲಿ ಹುಟ್ಟಿತ್ತು. ಬುಕ್ಕನ ಈ ಅನುಯಾಯಿಗಳ ಚಪಲತೆಯನ್ನೂ, ತೇಜಸ್ವಿತೆಯನ್ನೂ ನೋಡಿ ಮಲ್ಲನಿಗೆ ಬಹು ಸಂತೋಷವಾಗಿ, ತನ್ನ ಒಡೆಯನ

ಅನುಯಾಯಿಗಳೂ ಹೀಗೆಯೇ ತೇಜೋವಂತರೂ, ಬಲವಂತರೂ ಆಗಿರುವದನ್ನು ಆತನು ನೆನಿಸಿ ಅಭಿಮಾನಪಟ್ಟನು. ಆ ಗುಹೆಯ ವಿಲಕ್ಷಣ ರಚನೆಯನ್ನು ನೋಡಿ ಆತನಿಗೆ ಪರಮಾಶ್ಚರ್ಯವಾಯಿತು; ಯಾಕಂದರೆ ಇಷ್ಟು ಜನರ ಎಲ್ಲ ಅನುಕೂಲತೆಗಳೂ ಆ ಗವಿಯಲ್ಲಿಯೇ ಆಗುತ್ತಿರಬಹುದೆಂದು ಆತನು ತಿಳಿದನು. ಬುಕ್ಕನ ಜನರು ಶಸ್ತ್ರಪಾಣಿಗಳಾಗಿ ಗುಹೆಯಿಂದ ಹೊರಹೊರಡಲು ಸಿದ್ಧರಾದರು. ಆಗ ಮಲ್ಲಣ್ಣನೂ ಅವರೊಡನೆ ಗುಹೆಯ ಹೊರಗೆ ಹೋಗುವ ಹವಣಿಕೆಯಲ್ಲಿರಲು ಬುಕ್ಕನು ಆತನಿಗೆ— "ಮಲ್ಲಣ್ಣಾ, ನಿನ್ನಿನಿಂದ ನಿನಗೆ ವಿಶ್ರಾಂತಿಯಿಲ್ಲ; ಮಲಿಕನೊಡನೆ ಮಲ್ಲಯುದ್ಧವೆಂಬ ಮಾತು ಸ್ವಾಭಾವಿಕವಾದದ್ದಲ್ಲ. ನೀನು ಮಹಾ ಸಮರ್ಥನಾದದ್ದರಿಂದಲೇ ಅದನ್ನು ಲೆಕ್ಕಿಸದೆ ಇರುವೆ; ಆದರೂ ಅತಿಥಿಯಾಗಿ ನಮ್ಮಲ್ಲಿಗೆ ಬಂದಿರುವ ನಿನ್ನನ್ನು ಸತ್ಕರಿಸುವದು ನಮ್ಮ ಧರ್ಮವು; ಆದ್ದರಿಂದ ನೀನು ಈಗ ಗುಹೆಯಿಂದ ಹೊರಗೆ ಹೋಗಬೇಡ, ನಾನು ಹೋಗುವದಿಲ್ಲ. ನಾವು ಸ್ನಾನಮಾಡಿ ಬಲಭೀಮನ ಪೂಜೆ ಮಾಡಿಕೊಂಡು ಉಂಡು ಸ್ವಲ್ಪ ವಿಶ್ರಾಂತಿಯನ್ನು ಹೊಂದೋಣ. ಇಳಿಹೊತ್ತಿನಲ್ಲಿ ನಾನು ನಿನ್ನನ್ನು ಕರಕೊಂಡು ಹೋಗಿ ತೋರಿಸತಕ್ಕದ್ದನ್ನೆಲ್ಲ ಒಂದೂ ಬಿಡದಂತೆ ತೋರಿಸುವೆನು. ಮಲ್ಲಣ್ಣಾ, ನೀನು ಪರಕೀಯನಲ್ಲ, ಆಪ್ತನಾದ ನಿನ್ನ ಸಂಗಡ ನಾನು ಆಡಬೇಕಾಗಿರುವ ಮಾತುಗಳು ಹಲವು ಇರುವವು. ರಾತ್ರಿ ಅಖಂಡ ನಿದ್ದೆಯಿಲ್ಲದ್ದರಿಂದ ಜೀವಕ್ಕೆ ಸೊಗಸಿಲ್ಲ. ನಿನಗಂತು ನಿದ್ದೆಗೇಡಲ್ಲದೆ ಮಲ್ಲಯುದ್ಧದ ಮಹಾಯಾಸವೂ ಆಗಿರುವದು; ಆದ್ದರಿಂದ ಏಳು, ಸ್ನಾನ ಮಾಡೋಣ, ಎಂದು ಹೇಳಿ, ಮಲ್ಲಣ್ಣನೊಡನೆ ಸ್ನಾನಮಾಡಿ ಉಂಡು ಸ್ವಸ್ಥವಾಗಿ ಮಲಗಿಕೊಂಡನು.

ನಿಜವಾಗಿ ನೋಡಿದರೆ ಮಲ್ಲಸರ್ಜನನಿಗೆ ವಿಶ್ರಾಂತಿಯ ಅವಶ್ಯಕತೆಯಿತ್ತು; ಆದರೆ ಕರ್ತವ್ಯನಿಷ್ಠರು ಪ್ರಸಂಗದಲ್ಲಿ ನಿದ್ದೆ ನೀರಡಿಕೆಗಳಿಗೆಲ್ಲಿ ಲಕ್ಷಗೊಡುವರು? ಸಂಪೂರ್ಣ ಗುಹೆಯನ್ನೂ, ಅದರ ಹೊರಗಿನ ಪ್ರದೇಶವನ್ನೂ ನೋಡಿ, ಬುಕ್ಕನಿಂದ ಎಲ್ಲ ಸಂಗತಿಯನ್ನು ಯಾವಾಗ ತಿಳಕೊಂಡೇನೆಂಬ ಕುತೂಹಲವು ಹೆಚ್ಚಾದದ್ದರಿಂದ, ಆತನು ತನಗಾಗಿದ್ದ ಶ್ರಮವನ್ನು ಲೆಕ್ಕಿಸದೆ ಗುಹೆಯಿಂದ ಹೊರಬೀಳಲು ಸಿದ್ಧನಾಗಿದ್ದನು; ಆದರೆ ಬುಕ್ಕನ ನಿರ್ಬಂಧದಿಂದ ಆತನು ವಿಶ್ರಾಂತಿಯನ್ನು ಪಡೆಯಬೇಕಾಯಿತು. ಆ ಇಬ್ಬರು ತರುಣ ವೀರರು ಮಲಗಿದ್ದೊಂದೇ ತಡ, ಅವರಿಗೆ ಗಾಢವಾದ ನಿದ್ರೆಯು ಹತ್ತಿತು. ಒಂದು ಮಗ್ಗಲು ಮಲಗಿದವರು ಎರಡನೆಯ ಮಗ್ಗಲಾಗುವದರೊಳಗೆ ಒಂಬತ್ತು ತಾಸಾಯಿತು. ಸೇವಕರು ಅವರಿಬ್ಬರನ್ನು ಎಬ್ಬಿಸಿದರು. ಬಳಿಕ ಅವರು ಎದ್ದು ಮುಖಪ್ರಕ್ಷಾಲನ ಮಾಡಿಕೊಂಡು, ಅಲ್ಪಾಹಾರವನ್ನು ಸ್ವೀಕರಿಸಿ ಪೋಷಾಕುಹಾಕಿ ಕೊಂಡು ಗುಹೆಯ ಹೊರಗೆ ಹೋಗಲು ಹೊರಟರು. ಬುಕ್ಕನ ಅಗ್ರಹಕ್ಕಾಗಿ ಆತನು ಕೊಟ್ಟಿದ್ದ ಸರದಾರಿಕೆಯ ಸಾದಾ ಪೋಷಾಕನ್ನು ಮಲ್ಲಸರ್ಜನನು ಹಾಕಿಕೊಂಡಿದ್ದನು. ಅವರಿಬ್ಬರು ಗುಹೆಯಿಂದ ಹೊರಬೀಳಲಿಕ್ಕೆ ಗುಹೆಯೊಳಗಿನ ಅಡ್ಡತಿಡ್ಡಾದ ಬಿಕ್ಕಟ್ಟಿನ ಮಾರ್ಗದಿಂದ ಅರ್ಧತಾಸು ಪ್ರಯಾಸಪಡಬೇಕಾಯಿತು. ಕಡೆಗೆ ಅವರು ಗುಹೆಯ ಮುಖಕ್ಕೆ ಮುಟ್ಟಿದರು. ಆದರೆ ಅದು ಕಲ್ಲಿನ ಗಟ್ಟಿಮುಟ್ಟಿಯಾದ ಬಾಗಿಲಿನಿಂದ ಮುಚ್ಚಿತ್ತು, ಬುಕ್ಕನು ಯುಕ್ತಿಯಿಂದ ಆ ಕಲ್ಲುಬಾಗಿಲನ್ನು ತೆಗೆದನು; ಆದರೆ ಆ ಗುಹೆಯ ಮುಖವನ್ನು ದಟ್ಟವಾದ ಪೆಳೆಗಳೂ,

ಮುಳ್ಳುಕಂಟೆಗಳೂ, ದೊಡ್ಡದೊಡ್ಡ ಗಿಡಗಳೂ ಮುಚ್ಚಿಕೊಂಡು ಬಿಟ್ಟಿದ್ದರಿಂದ ಹೊರಗೆ ಹೋಗಲಿಕ್ಕೆ ಸರ್ವಥಾ ಬರುವಹಾಗಿದ್ದಿಲ್ಲ. ಈ ಪೆಳೆಕಂಟೆ ಗಿಡಗಳ ಸಂದಣೆಯಿಂದ ಹೊರಗಿನ ಸೂರ್ಯಕಿರಣಗಳು ಸಹ ಭೇದಿಸಿ ಬರುವಹಾಗಿದ್ದಿಲ್ಲ. ಗುಹೆಯ ಮುಖದಿಂದ ಹೊರಗೆ ಹಣಿಕಿ ನೋಡಿದರೆ ಕೆಳಗೆ ದೊಡ್ಡ ಕೊಳ್ಳವಿದ್ದಂತೆ ತೋರುತ್ತಿತ್ತು. ಈ ಸ್ಥಿತಿಯಲ್ಲಿ ಬುಕ್ಕದೊರೆಯು ಗುಹೆಯಿಂದ ಹ್ಯಾಗೆ ಹೊರಬೀಳುವನೆಂಬದನ್ನು ಮಲ್ಲಣ್ಣನು ಕೌತುಕದಿಂದ ನೋಡಹತ್ತಿದನು. ಆಗ ಬುಕ್ಕನು ಮಲ್ಲನಿಗೆ— ''ಮಲ್ಲಣ್ಣಾ, ಈಗ ಈ ಕಠಿಣ ಮಾರ್ಗದಿಂದ ಇಳಿದುಹೋಗುವ ವಿಚಾರ ಬೇಡ. ಸದ್ಯಕ್ಕೆ ನಾವು ಬೇರೊಂದು ಒಳದಾರಿಯಿಂದ ಹೋಗೋಣ'' ಎಂದು ಬಳಿಯಲ್ಲಿ ಜೋತಾಡುತ್ತಿರುವ ಹಗ್ಗವನ್ನು ಒಂದು, ಎರಡು, ಮೂರು, ನಾಲ್ಕು, ಐದು ಎಂದು ಎಣಿಸಿ ಐದು ಸಾರೆ ಸಾವಕಾಶವಾಗಿ ಜಗ್ಗಿದನು. ಕೂಡಲೆ ದಾರದಲ್ಲಿ ಪೋಣಿಸಿ ಕಟ್ಟಿದ್ದೊಂದು ಲಿಂಬೆಯಹಣ್ಣು ಮೇಲಿನಿಂದ ಇಳಿಬಿದ್ದಿತು. ಆಮೇಲೆ ಬುಕ್ಕನು ಮತ್ತೆ ಹಗ್ಗವನ್ನು ಒಂದು, ಎರಡು, ಮೂರು ಎಂದು ಮೂರು ಸಾರೆ ಎಣಿಸಿ ಸಾವಕಾಶವಾಗಿ ಜಗ್ಗಿದನು. ಕೂಡಲೆ ದಾಸಾಳದ ಹೂವಿನದೊಂದು ಮಾಲೆಯು ಬಂದಿತು. ಆಮೇಲೆ ಬುಕ್ಕನು ಹಗ್ಗವನ್ನು ಒಂದುಸಾರೆ ಜಗ್ಗಿದನು. ಕೂಡಲೆ ಬಲವಾದದ್ದೊಂದು ನೂಲ ಏಣಿಯು ಇಳಿಬಿದ್ದಿತು. ಇದನ್ನೆಲ್ಲ ಆಶ್ಚರ್ಯದಿಂದ ಅರವುಗೆಟ್ಟು ನೋಡುತ್ತ ನಿಂತಿದ್ದ ಮಲ್ಲಣ್ಣನು ಇವು ಎಲ್ಲಿಂದ ಬರುತ್ತವೆಂಬದನ್ನು ಮೇಲಕ್ಕೆ ಕಣ್ಣು ಕೆಕ್ಕರಿಸಿ ಕೆಕ್ಕರಿಸಿ ನೋಡಿದನು; ಆದರೆ ಕತ್ತಲಲ್ಲಿ ಏನೂ ಕಾಣಿಸಲೊಲ್ಲದು. ಅಷ್ಟರಲ್ಲಿ ಬುಕ್ಕನು ಮಲ್ಲನಿಗೆ–''ಮಲ್ಲಸರ್ಜಾ, ನಾನು ಮೊದಲು ಮೇಲಕ್ಕೆ ಹೋಗುತ್ತೇನೆ; ಆಮೇಲೆ ನೀನು ಬಾ'' ಎಂದು ಹೇಳಲು, ಅದಕ್ಕೆ ಮಲ್ಲಸರ್ಜನನು—''ಆಗಲಿ ಬುಕ್ಕದೊರೆಯೇ, ಆದರೆ ಇಲ್ಲಿಯ ಒಂದೊಂದು ಬಂಗಾಲಿಯ ವಿದ್ಯೆಯನ್ನು ನೋಡಿ, ನನ್ನ ಮತಿಯು ಮಸಣಿಸಿಹೋಗಿದೆ; ನನಗೆ ಏನೂ ತಿಳಿಯಲೊಲ್ಲದು. ಮೊದಲು ಲಿಂಬಿಯಹಣ್ಣು, ಆಮೇಲೆ ದಾಸಾಳದ ಹೂವಿನ ಮಾಲೆ ಇವು ಬಂದಬಳಿಕ ನೂಲೇಣಿಯು ಬಂದ ಕಾರಣವೇನು? ಮೊದಲೇ ನೂಲೇಣಿ ಯಾಕೆ ಬರಲಿಲ್ಲ'' ಎಂದು ಕೇಳಲು, ಬುಕ್ಕನು—''ಮಲ್ಲಣ್ಣಾ, ಇದನ್ನೆಲ್ಲ ನಾನು ನಿನಗೆ ಹಿಂದುಗಡೆ ಹೇಳುವೆನು. ಒಂದೂ ಮಾತು ಬಚ್ಚಿಡುವದಿಲ್ಲ; ಆದರೆ ಈಗ ಮಾತಾಡುತ್ತ ಕುಳಿತರೆ ಹೊತ್ತಾಗುತ್ತದೆ, ಮೊದಲು ಹೊರಗೆ ಹೋಗೋಣ'' ಎಂದು ಹೇಳಿದನು. ಮಲ್ಲಣ್ಣನು ಅದಕ್ಕೆ ಒಪ್ಪಿಕೊಳ್ಳಲು, ಬುಕ್ಕನು ಬಡಬಡ ಏಣಿಯಿಂದ ಏರಿಹೋಗಿ, ಮಲ್ಲಣ್ಣನಿಗೆ ಏರಿ ಬರಲು ನಿಚ್ಚಣಿಕೆಯಲ್ಲಾಡಿಸಿ ಸೂಚಿಸಿದನು. ಮಲ್ಲನಿಗೆ ಇಂಥ ನೂಲೇಣಿ ಏರುವ ಅಭ್ಯಾಸವಿದ್ದಿಲ್ಲ; ಆದರೂ ಆ ಧೀರನು ನಿಶ್ಶಂಕೆಯಿಂದ ಏಣಿಯನ್ನು ಏರಿ ಮೇಲಕ್ಕೆ ಹೋದನು.

# ದೇವಿಯ ಕೊಳ್ಳವು !

ಮಲ್ಲನು ಮೇಲಕ್ಕೇರಿ ಸರಸರ ಏಣಿಯ ಬುಡಕ್ಕೆ ಹೋಗಲು, ಅಲ್ಲಿ ಗವಿಯ ಮುಖದ ಬಳಿಯಲ್ಲಿ ನಿಂತಿದ್ದ ಬುಕ್ಕನು ಆತನು ಕೈಹಿಡಿದು ಮೇಲಕ್ಕೆ ಕರಕೊಂಡನು. ಮಲ್ಲನು ಮೇಲಕ್ಕೆ ಬಂದು ನೋಡುತ್ತಾನೆ, ಒಂದು ಗಟ್ಟಿಮುಟ್ಟಿಯಾದ ಕಲ್ಲಿನ ಗುಡಿ! ಅಲ್ಲಿ ಉಗ್ರಮುದ್ರೆಯ ಶಕ್ತಿಯ ಪ್ರತಿಮೆಯೊಂದು ಗುಹೆಯ ಮುಖದ ಮುಂದುಗಡೆಯಲ್ಲಿ ವಿರಾಜಮಾನವಾಗಿದೆ. ಆ ಉಗ್ರ ಪ್ರತಿಮೆಯನ್ನು ದಾಸಾಳದ ಹೂಗಳ ಮಾಲೆಗಳಿಂದ ಬಗೆಬಗೆಯಾಗಿ ಅಲಂಕರಿಸಿದ್ದರಿಂದ ಮೂರ್ತಿಯು ಉತ್ಯುಗ್ರವಾಗಿ ತೋರುತ್ತಿತ್ತು. ಮೂರ್ತಿಯಾದರೂ ಅಷ್ಟು ಸಣ್ಣದಿದ್ದಿಲ್ಲ; ಮಧ್ಯಮತರದ ಮನುಷ್ಯರಷ್ಟು ಎತ್ತರವಾಗಿತ್ತು. ಆ ಕತ್ತಲೆಯ ಗುಡಿಯೊಳಗಿನ ಮಿಣಿಮಿಣಿ ಉರಿಯುವ ನಂದಾದೀಪದ ಮಂದ ಪ್ರಕಾಶದಲ್ಲಿ ಅಲ್ಲಿಯ ಯಾವ ಪದಾರ್ಥಗಳೂ ಸ್ಪಷ್ಟವಾಗಿ ಕಾಣುತ್ತಿದ್ದಿಲ್ಲ. ಮಲ್ಲನು ಮೂರ್ತಿಯ ಮುಂದುಗಡೆಯಲ್ಲಿ ನಿಂತು ಭಕ್ತಿಯಿಂದ ಅದಕ್ಕೆ ಪುನಃ ನಮಸ್ಕರಿಸುತ್ತಿರಲು, ಅದು ಅಲ್ಲಾಡಿದಂತೆ ಆತನಿಗೆ ಭಾಸವಾಯಿತು. ಆಗ ಆತನು ಭಯಭಕ್ತಿಯಿಂದ ಇದೇನು ಆಶ್ಚರ್ಯವೆಂದು ದಿಟ್ಟಿಸಿ ನೋಡಿದನು. ಆಗ ಮೂರ್ತಿಯು ಮೆಲ್ಲನೆ ಹಿಂದಕ್ಕೆ ಸರಿಯಹತ್ತಿತು. ಅದನ್ನು ನೋಡಿ ಮಲ್ಲಣ್ಣನು ಆಶ್ಚರ್ಯದಿಂದ ಬುಕ್ಕನ ಕಡೆಗೆ ತಿರುಗಿ ನೋಡುತ್ತಿರುವಾಗ, ಮೂರ್ತಿಯು ಸರಸರ ಹಿಂದಕ್ಕೆ ಸರಿದು, ಗುಹೆಯ ಮುಖದ ಸಂದು ಬಿಡದಂತೆ ಗಟ್ಟಿಮುಟ್ಟಿಯಾಗಿ ಕುಳಿತುಕೊಂಡುಬಿಟ್ಟಿತು! ಮಲ್ಲನಿಗೆ ಒಂದಕ್ಕಿಂತ ಒಂದು ಸಂಗತಿಗಳು ಆಶ್ಚರ್ಯಕರವಾಗಿ ತೋರಿದ್ದರಿಂದ ಯಾವದರ ಕಾರಣ ಕೇಳಬೇಕು, ಯಾವದರ ಕಾರಣ ಕೇಳದಿರಬೇಕು, ಎಂಬಂತಾಗಿ, ಕೇಳುವಾಗ ಒಮ್ಮೆಲೆ ಎಲ್ಲವನ್ನೂ ಕೇಳಿಬಿಡೋಣ, ಎಂದು ಯೋಚಿಸಿ ಆತನು ಪಿಟ್ಟೆಂದು ಮಾತಾಡದೆ ಬುಕ್ಕನನ್ನು ಅನುಸರಿಸಿ ಗುಡಿಯ ಮಧ್ಯರಂಗಕ್ಕೆ ಬಂದನು. ಅಲ್ಲಿ ದೇವಿಯ ವಾಹನಗಳಾದ ಆನೆ, ಸಿಂಹ ಮೊದಲಾದವುಗಳ ಪ್ರತಿಮೆಗಳೂ, ದೇವಿಯ ಪಲ್ಲಕ್ಕಿಯೂ, ದೇವಿಯ ವಸ್ತ್ರಾಲಂಕಾರಗಳಿಡುವ ಪೆಟ್ಟಿಗೆಯೂ ಇದ್ದವು. ಆ ಮಧ್ಯರಂಗದಿಂದ ಮಲ್ಲಣ್ಣನು ಗುಡಿಯ ಪಾತಾಳ ಅಂಗಳಕ್ಕೆ ಬಂದನು. ಅಲ್ಲಿ ಒಬ್ಬ ಶಾಕ್ತನು ಸಿದ್ಧಪತ್ರಿಯ ಅಗ್ನಿಹೋತ್ರಕುಂಡದ ಬಳಿಯಲ್ಲಿ ಕುಳಿತು ಕಸುವಿನ ಝುರುಕೆಯಿಂದ ಸಿದ್ಧಪತ್ರಿಯನ್ನು ಸೇದುತ್ತ, ಚಿಲಿಮೆಯಲ್ಲಿ ಭಗ್ಗನೆ ಉರಿ ಎಬ್ಬಿಸುವದರಲ್ಲಿ ಮಗ್ನನಾಗಿ ಹೋಗಿದ್ದನು. ಆತನು ಮಾತಾಡುತ್ತಿದ್ದಿಲ್ಲ ಕಥೆಯಾಡುತ್ತಿದ್ದಿಲ್ಲ, ಬರ ಹೋಗುವ ಜನರ ಅರಿವು ಆತನಿಗೆ ಇದ್ದಂತೆ ತೋರಲಿಲ್ಲ, ಗುಹೆಯಿಂದ ಹೊರಗೆ ಬಂದ ಬುಕ್ಕಣ್ಣನನ್ನೂ, ಮಲ್ಲಸರ್ಜನನನ್ನೂ ಆತನು ಮಾತಾಡಿಸುವದಂತೂ ಇರಲಿ, ಅವರನ್ನು ಕಣ್ಣೆತ್ತಿ ನೋಡಲಿಲ್ಲ ಸಹ! ಆ ವ್ಯಕ್ತಿಯ ಈ ವಿಲಕ್ಷಣ ಸ್ಥಿತಿಯನ್ನೂ, ಅವನ ದುರಗಮುರಗೆಯರ ಪಡಿಕಟ್ಟಿನ ಉಗ್ರರೂಪವನ್ನೂ ನೋಡಿ ಮಲ್ಲನ ಮತಿಯು ಮಸಣಿಸಿತು. ಒಂದಕ್ಕೊಂದು ಸಂಬಂಧವಿಲ್ಲದಂತೆ ತೋರುವ ಈ ಸಂಗತಿಗಳ ಸಂಬಂಧವನ್ನು ಹ್ಯಾಗೆ ಹಚ್ಚಬೇಕೆಂಬದು ಆತನಿಗೆ ತಿಳಿಯದಾಯಿತು. ಲಿಂಬಿಯ ಹಣ್ಣು ಹೂಮಾಲೆ, ನೂಲೇಣಿ ಇವುಗಳನ್ನು ಕೆಳಗೆ ಬಿಟ್ಟ ವ್ಯಕ್ತಿಯು

ಇದೇ ಇರಬಹುದೋ? ಅಥವಾ ಬೇರೆ ಯಾರಾದರೂ ಇರಬಹುದೋ? ಇದೇ ಆಗಿದ್ದರೆ ಹೊರಗೆಬಂದ ನಮ್ಮನ್ನು ಕಣ್ಣೆತ್ತಿ ಸಹ ನೋಡಬಾರದೇನು? ಇದರ ಗೂಢವೇನಿರಬಹುದು? ಎಂಬ ಆಲೋಚನೆಗೆ ಆತನು ಒಳಗಾದನು; ಆದರೆ ಆ ಸಂಬಂಧದಿಂದ ಬುಕ್ಕನನ್ನು ಕುರಿತು ಚಕಾರ ಶಬ್ದ ನುಡಿಯಲಿಲ್ಲ. ಆತನು ಬುಕ್ಕನ ಬೆನ್ನುಹತ್ತಿಸುಮ್ಮನೆ ನಡೆದನು. ಗುಡಿಯಿಂದ ಹೊರಗೆ ಬಂದಬಳಿಕ ಗುಡಿಯ ಸುತ್ತ ಮುತ್ತಲಿನ ಭಯಂಕರ ಅರಣ್ಯವನ್ನೂ, ಗುಡಿಯ ಮುಂದಿರುವ ಭಯಂಕರ ಕೊಳ್ಳವನ್ನೂ ನೋಡಿ ಬೆರಗಾದನು. ಆಗ ಬುಕ್ಕನು ಆತನನ್ನು ಕುರಿತು – "ಮಲ್ಲಣ್ಣಾ ನೀನು ಇದೇ ನಾಡಿನವನಿದ್ದು, ನಿನ್ನ ಊರಿಂದ ಸಮೀಪದಲ್ಲಿರುವ ಈ ದೇವೀ ಕೊಳ್ಳವೆಂಬ ಹೆಸರಿನ ಪ್ರಸಿದ್ಧ ಕೊಳ್ಳವನ್ನು ನೀನು ಅರಿಯೆಯಾ? ಎಲ್ಲಿಂದಲೋ ಬಂದವನಂತೆ ಎಷ್ಟು ಆಶ್ಚರ್ಯಪಡುತ್ತಿರುವೆಯಲ್ಲ!" ಅನ್ನಲು, ಮಲ್ಲಣ್ಣನು ಅಂಜಿ ಬುಕ್ಕನಿಗೆ– "ಏನಂದೀ? ಇದು ದೇವಿಯ ಕೊಳ್ಳವೆ? ಇದು ಮಹಾ ಉಗ್ರಸ್ಥಾನವೆಂದು ಪ್ರಸಿದ್ಧವಾಗಿರುವದು. ಈ ಭಯಂಕರ ಸ್ಥಾನದ ಕಡೆಗೆ ಯಾರೂ ಅಡ್ಡಹಣಕುವದಿಲ್ಲ. ಈ ಕೊಳ್ಳದ ಭಯಂಕರತೆಯನ್ನು ವ್ಯಕ್ತಗೊಳಿಸುವಂಥ ಹಲವು ಕಥೆಗಳು ಜನರಲ್ಲಿ ಹೇಳಲ್ಪಡುತ್ತಿರುವವು. ಆ ಕೊಳ್ಳದೊಳಗಿನ ಅತ್ಯುಗ್ರಳಾದ ದೇವಿಯ ಗುಡಿಯು ಇದೆಯೋ ಏನು? ಈ ಗುಡಿಯಲ್ಲಿ ಬಂದು ದೇವಿಯದರ್ಶನ ಮಾಡಿಕೊಳ್ಳುವ ಧೈರ್ಯವು ಯಾವನಿಗೂ ಇರುವದಿಲ್ಲೆಂದು ಜನರು ಹೇಳುತ್ತಿರುವದನ್ನು ನಾವು ಚಿಕ್ಕಂದಿನಿಂದ ಕೇಳುತ್ತ ಬಂದಿದ್ದೇವೆ. ಇಲ್ಲಿ ಕಾಲಿಡಲಾಗದೆಂಬ ಮಾತು ಜನರಿಗೆ ಸ್ಪಷ್ಟವಾಗಿ ಗೊತ್ತಿರುತ್ತದೆ. ಈ ಕೊಳ್ಳದಲ್ಲಿಯೂ, ದೇವಿಯ ಸ್ಥಾನದಲ್ಲಿಯೂ, ಹಲವು ಜನ ಸಿದ್ಧಪುರುಷರು ಇರುವರಂತೆ; ಆ ಸಿದ್ಧಪುರುಷರ ಅನುಗ್ರಹದಿಂದ ಒಬ್ಬಿಬ್ಬರು ಎಲ್ಲಿಯಾದರೂ ದೇವಿಯ ದರ್ಶನ ಮಾಡಿಕೊಂಡು ಬಂದರೆ, ಅವರು ಆ ದೇವಿಯ ಉಗ್ರತೆಯನ್ನೂ, ಅಲ್ಲಿಯ ಅಲೌಕಿಕತೆಯನ್ನೂ ಕೇಳುವವರ ಎದೆಯೊಡೆದು ನೀರಾಗುವಂತೆ ಹೇಳುತ್ತಿರುವರು. ಅಂದಬಳಿಕ ನಮ್ಮಂಥ ಪುಕ್ಕಸ್ವಭಾವದ ಭೋಳೆ ಭಾವಿಕ ಜನರು ಈ ದೇವಿ ಕೊಳ್ಳದ ಹೆಸರು ಕೇಳಿದ ಕೂಡಲೆ ಅಂಜಿ ಕೈಮುಗಿದು ಹಿಂದಕ್ಕೆ ಸರಿಯದೆ ಯಾಕೆ ಇರೋಣ! ಈ ಬಗೆಯ ಅಂಜಿಕೆಯು ಜನರಲ್ಲಿ ಹಬ್ಬಿರುವದರಿಂದಲೇ ಜನರು ಈ ಕೊಳ್ಳದಲ್ಲಿ ಕಾಲಿಡುವದಿಲ್ಲ; ಇದರೊಳಗಿನದೊಂದು ಕಟ್ಟಿಗೆಯ ತುಂಡು ಸಹ ಹಿಡಿಯುವದಿಲ್ಲ; ಇದರಿಂದಲೇ ಈ ಕೊಳ್ಳದ ಅಡವಿಯು ಇಷ್ಟು ಮಿತಿಮೀರಿ ಬೆಳೆದಿರುವಂತೆ ಕಾಣುತ್ತದೆ."

ಈ ಮೇರೆಗೆ ಮಲ್ಲನು ನುಡಿಯುತ್ತಿರುವಾಗ ಬುಕ್ಕನು ಒಂದು ಸೀಳದಾರಿಯನ್ನು ಹಿಡಿದು ಕೊಳ್ಳದೊಳಗೆ ಇಳಿಯಹತ್ತಲು, ಮಲ್ಲನು ಮಹಾಧೈರ್ಯದಿಂದ ಆತನನ್ನು ಅನುಸರಿಸಿದನು; ಯಾಕಂದರೆ, ಬಾಲ್ಯದಾರಭ್ಯ ಆತನ ಹೃದಯದಲ್ಲಿ ನೆಲೆಗೊಂಡಿದ್ದ ದೇವಿಯ ಕೊಳ್ಳದ ಅಂಜಿಕೆಯು ಆತನನ್ನು ವಿಶೇಷವಾಗಿ ಬಾಧಿಸಹತ್ತಿತು. ಕೊಳ್ಳದ ಸಂಬಂಧದಿಂದ, ಗುಡಿಯ ಸಂಬಂಧದಿಂದ, ದೇವಿಯ ಸಂಬಂಧದಿಂದ ಹಲವು ಭಯಪ್ರದವಾದ ಅದ್ಭುತ ಕಥೆಗಳನ್ನು ಆತನು ಕೇಳಿದ್ದನು. ಅವೆಲ್ಲ ಈಗ ಆತನ ಕಣ್ಣಿಗೆ ಕಟ್ಟಿದಂತಾದವು. ದೇವಿಯ ಕೊಳ್ಳದಲ್ಲಿ ಒಂದು ಭಯಂಕರ ಗವಿಯಿರುತ್ತದೆಂತಲೂ ಆತನು ಕೇಳಿದ್ದನು. ಆ ಗವಿಯು ತಾನು ಈಗ ನೋಡಿದ

ಗವಿಯೇ ಇರಬಹುದೆಂದು ತರ್ಕಿಸಿ ಅದರ ಅನುಭವದಿಂದ ತಾನು ಕೇಳಿದ ಕಥೆಗಳು ಸುಳ್ಳಿರಲಿಕ್ಕಿಲ್ಲೆಂಬ ಕಲ್ಪನೆಯು ಆತನಿಗೆ ಆಗಿ, ಹೃದಯವು ಭಯದಿಂದ ಹೆಚ್ಚು ಹೆಚ್ಚು ನಡುಗಹತ್ತಿತ್ತು. ಮಲ್ಲನಂಥ ಮಹಾಧೈರ್ಯಶಾಲಿಯ ಹೃದಯವು ಕೂಡ ಬಾಲ್ಯದಲ್ಲಿ ಕೇಳಿದ ಕಥೆಗಳ ಯೋಗದಿಂದ ಇಷ್ಟು ಕಂಪಿಸಹತ್ತಿದಬಳಿಕ, ಸ್ವಾಭಾವಿಕವಾಗಿಯೇ ಪುಕ್ಕರಾದವರ ಗತಿಯೇನು? ಇಂಥ ನಿರರ್ಥಕ ಭಯದ ಸುದ್ದಿಗಳನ್ನು ಸಣ್ಣ ಹುಡುಗರ ಮನಸ್ಸಿನಲ್ಲಿ ತುಂಬಿ ಇಡುವದು ನಮ್ಮ ಜನರ ಅಜ್ಞಾನದ ಕೆಟ್ಟ ಚಾಳಿಯಾಗಿದೆ. ''ಬಾವಾ ಬಂತು; ಅದು ದೆವ್ವನ ಮನೆಯು; ಆ ಸ್ಥಳಕ್ಕೆ ಮಧ್ಯಾಹ್ನ–ಮೂರುಸಂಜೆಗಳಲ್ಲಿ ಹೋಗತಕ್ಕದ್ದಲ್ಲ'' ಇತ್ಯಾದಿ ಒಂದು ತರಹವಲ್ಲ, ಎರಡು ತರಹವಲ್ಲ ಹಲವು ತರದ ಭಯದ ಭಾವನೆಗಳನ್ನು ಹುಡುಗರ ತಲೆಯಲ್ಲಿ ತುಂಬಿಬಿಡುವ ಘಾತಕ ಸಾಂಪ್ರದಾಯವು ನಮ್ಮ ಜನರಲ್ಲಿ ಮೊದಲಿನಿಂದ ನಡೆದುಬಂದಿರುತ್ತದೆ. ಈ ಭಾವನೆಗಳಲ್ಲಿ ಸತ್ಯಕ್ಕಿಂತ ಅಸತ್ಯದ ಅಂಶವೇ ವಿಶೇಷವಾಗಿರುವದು. ಊರೂರಿಗೆ ದೆವ್ವನ ಮನೆಗಳು, ಅಂಜಿಕೆ ಸ್ಥಳಗಳು ಇರುವ ವಾಡಿಕೆಯಿದೆ. ಇಂಥ ನಿರರ್ಥಕ ಭಾವನೆಗಳು ಮುಂದೆ ಪ್ರೌಢರಾದ ಬಳಿಕ ಈಗ ಮಲ್ಲಣ್ಣನಿಗೆ ಬಾಧಿಸಿದಂತೆ ಅವರನ್ನು ಬಾಧಿಸುವವು. ಇರಲಿ, ಬುಕ್ಕನ ಬೆನ್ನುಹತ್ತಿ ಮಲ್ಲಣ್ಣನು ಸುಮಾರು ಒಂದು ತಾಸಿನವರೆಗೆ ಭಯಂಕರವಾದ ಅಡವಿಯಲ್ಲಿ ಕೊಳ್ಳವಿಳಿದು ಹೋದನು. ಆ ಕೊಳ್ಳದಲ್ಲಿ ಒಂದು ಬಯಲು ಪ್ರದೇಶವಿದ್ದು, ಅಲ್ಲಿ ಒಂದು ಸೈನ್ಯದ ಬೀಡುಬಿಟ್ಟಿತ್ತು, ಅಲ್ಲಿ ಎಷ್ಟೋ ಸೈನಿಕರು ಬಗೆಬಗೆಯ ಯುದ್ಧಕಲೆಗಳ ಅಭ್ಯಾಸ ಮಾಡುತ್ತಲಿದ್ದರು. ಅವರ ಮುಖ್ಯನು ಬುಕ್ಕನನ್ನು ಅಚ್ಚಳಿಯದಂತೆ ಹೋಲುತ್ತಿದ್ದ ಮತ್ತೊಬ್ಬ ತರುಣನಾಗಿದ್ದನು. ಅದನ್ನು ನೋಡಿ ಮಲ್ಲನಿಗೆ ಮತ್ತೂ ಕೌತುಕವಾಯಿತು. ಆತನು ಮನಸ್ಸಿನಲ್ಲಿ— ''ಈ ಅಯ್ವರು ಅಣ್ಣತಮ್ಮಂದಿರ ರೂಪಗಳು ಅಚ್ಚಳಿಯದೆ ಹೀಗೆಯೇ ಒಬ್ಬರಂತೆ ಒಬ್ಬರವು ಇರುವವೊ ಏನು? ಈಗ ಮೂವರನ್ನಂತೂ ನಾನು ನೋಡಿದ ಹಾಗಾಯಿತು. ಇನ್ನು ಇಬ್ಬರು ಎಲ್ಲಿ ಇರಬಹುದು? ಒಟ್ಟಿಗೆ ಇವರು ಸಾಮಾನ್ಯ ಜನರಂತು ಅಲ್ಲವೇ ಅಲ್ಲ, ಇವರೆಲ್ಲರು ನಿಶ್ಚಯವಾಗಿ ರಾಜಪುತ್ರರಾಗಿರಬೇಕು; ಆದರೆ ಇವರು ಯಾವ ದೇಶದ ರಾಜಪುತ್ರರು? ಹೀಗೆ ದೇಶಭ್ರಷ್ಟರಾಗಿ ಒಬ್ಬರನ್ನೊಬ್ಬರು ಅಗಲಿ ಯಾಕೆ ಸಂಚರಿಸುತ್ತಿರಬಹುದು?'' ಎಂದು ಆಲೋಚಿಸುತ್ತ ಅಲ್ಲಿ ನಡೆದಿರುವ ಯುದ್ಧಶಿಕ್ಷಣವನ್ನು ಆಸ್ಥೆಯಿಂದ ನೋಡುತ್ತಿದ್ದನು. ಅಷ್ಟರಲ್ಲಿ ಸೂರ್ಯನು ಅಸ್ತಂಗತನಾಗುವ ಸಮಯವು ಒದಗಲು, ಸೈನಿಕರು ತಮ್ಮ ತಮ್ಮ ಬಿಡಾರಗಳಿಗೆ ಹೊರಟರು. ಮತ್ತೊಂದು ಆಶ್ಚರ್ಯದ ಸಂಗತಿಯೇನೆಂದರೆ–ಆ ಸೈನಿಕರಲ್ಲಿ ಗುಹೆಯೊಳಗೆ ನೋಡಿದ ಜನರಲ್ಲದೆ ಬೇರೆ ಹಿಂದೂ ಸೈನಿಕರೂ ಇರುತ್ತಿದ್ದು, ಆ ಎಲ್ಲ ಹಿಂದೂ ಸೈನಿಕರಿಗಿಂತ ಸಂಖ್ಯೆಯಿಂದ ಅಧಿಕವಾಗಿ ಮುಸಲ್ಮಾನ ಸೈನಿಕರೂ ಆ ಭಾವಣಿಯಲ್ಲಿರುತ್ತಿದ್ದರು! ಒಟ್ಟು ಸೈನಿಕರ ಸಂಖ್ಯೆಯು ಎರಡು ಸಾವಿರವಿರ ಬಹುದೆಂದು ಮಲ್ಲಣ್ಣನು ತನ್ನ ಕುರುಬ ಲೆಕ್ಕದಿಂದ ತರ್ಕಿಸಿದನು.

ಆ ಸೈನಿಕರು ಬೀಡುಬಿಟ್ಟು, ಬಹಳ ದಿವಸಗಳಾದಂತೆ ಮಲ್ಲನಿಗೆ ತೋರಲಿಲ್ಲ, ಬೀಡುಬಿಟ್ಟು ಬಹು ಸ್ವಲ್ಪ ದಿವಸಗಳಾಗಿರುವವೆಂದು ಆತನು ತರ್ಕಿಸಿದ್ದನು. ಸೈನಿಕರೆಲ್ಲ

ಡೇರೆಗಳಲ್ಲಿ ವಾಸಿಸುತ್ತಿದ್ದರು. ಬುಕ್ಕನೇ ಮೊದಲಾದ ಮುಖ್ಯಸ್ಥರ ಸಲುವಾಗಿಯಾದರೂ ಡೇರೆಗಳೇ ಇದ್ದವು; ಸೈನ್ಯದಲ್ಲಿ ಹೆಂಗಸರ ಹುಡುಗರ ಸುಳವಿದ್ದಿಲ್ಲ. ಬಾಜಾರಬುಣಗಿನವರ ಸಂಖ್ಯೆಯು ಬಹು ನಿಯಮಿತವಾಗಿತ್ತು. ಪ್ರವಾಸಕ್ಕೆ ಜಡವಾಗುವಂಥ ಒಡೆವೆಗಳ ಸಂಗ್ರಹವೂ ಅಲ್ಲಿ ಇದ್ದಂತೆ ತೋರಲಿಲ್ಲ. ಸೈನ್ಯದ ಸಂಘಟನೆಯಲ್ಲಿ ಅಚ್ಚುಕಟ್ಟುತನವೂ, ಕಾಟಕತನವೂ, ಚಟವಟಿಕೆಯೂ ಚೆನ್ನಾಗಿ ವ್ಯಕ್ತವಾಗುತ್ತಿದ್ದವು. ಅಲ್ಲಿ ಆಲಸ್ಯವು ಸುಳವಿದ್ದಿಲ್ಲ. ಅಲ್ಲಿಯ ಪ್ರತಿಯೊಬ್ಬ ಮನುಷ್ಯನು ಕಾಲಕಾಲಕ್ಕೆ ತಾನು ಮಾಡಬೇಕಾಗಿದ್ದ ಕೆಲಸಗಳಲ್ಲಿ ಮಗ್ನನಾಗಿದ್ದನು. ಇಲ್ಲದ ಆಡಂಬರಕ್ಕಂತೂ ಅಲ್ಲಿ ಆಸ್ಪದವೇ ಇದ್ದಿಲ್ಲ. ಛಾವಣಿಯಲ್ಲಿ ಕುದುರೆಗಳೂ ಇದ್ದವು; ಆದರೆ ಅವುಗಳಲ್ಲಿ ದೊಡ್ಡವುಗಳಿಗಿಂತ ಗಟ್ಟಿರಾಶಿನ ಚಪಲ ಕುದುರೆಗಳೇ ವಿಶೇಷವಾಗಿದ್ದವು. ಮಲ್ಲಣ್ಣನು ಸೈನಿಕರ ಉಡಿಗೆ ತೊಡಿಗೆಗಳನ್ನೂ, ಊಟದ ಪದಾರ್ಥಗಳನ್ನೂ, ಅವರ ಹಾಸಿಗೆ ಹುಪ್ಪಡಿ ಮೊದಲಾದ ವಿಶ್ರಾಂತಿಯ ಸಾಧನಗಳನ್ನೂ ಚೆನ್ನಾಗಿ ಪರೀಕ್ಷಿಸಿ ನೋಡಿದನು. ಅವುಗಳಲ್ಲಿ ಆಡಂಬರಕ್ಕಿಂತ ಉಪಯುಕ್ತತೆಯ ಕಡೆಗೂ, ಅಪವ್ಯಯಕ್ಕಿಂತ ಮಿತವ್ಯಯದ ಕಡೆಗೂ ಹೆಚ್ಚು ಲಕ್ಷವು ಕೊಡಲ್ಪಟ್ಟಿದ್ದು ವ್ಯಕ್ತವಾಯಿತು. ಸೈನಿಕರು ಪರಸ್ಪರ ಅತ್ಯಂತ ಪ್ರೇಮದಿಂದ ನಡಕೊಳ್ಳುತ್ತಿದ್ದರು. ಹಿಂದು ಮುಸಲ್ಮಾನರಲ್ಲಿ ದ್ವೇಷವಿದ್ದಿಲ್ಲ. ಒಟ್ಟಿಗೆ ಯಾವದೋ ಒಂದು ಮಹಾಕಾರ್ಯವನ್ನು ಸಾಧಿಸುವದಕ್ಕೋಸ್ಕರ ಆ ಸೈನಿಕರು ಮನಃ ಪೂರ್ವಕವಾಗಿ ಒಟ್ಟುಗೂಡಿರುವರೆಂಬಂತೆ ಸ್ಪಷ್ಟವಾಗಿ ತೋರುತ್ತಿತ್ತು. ಅವರು ಗೇಣುಹೊಟ್ಟೆಯನ್ನು ತುಂಬಿ ಕೊಳ್ಳುವದಕ್ಕೆ ಸರ್ವಥಾ ಕೂಡಿಕೊಂಡವರಿದ್ದಿಲ್ಲ. ಸಂಕಲ್ಪಿತ ಕಾರ್ಯವು ಸಾಧಿಸುವವರೆಗೆ ಯಾವ ಬಗೆಯ ಸುಖೋಪಭೋಗವನ್ನೂ ಭೋಗಿಸ ಲಿಕ್ಕಿಲ್ಲವೆಂದು ಅವರು ನಿಯಮ ಮಾಡಿಕೊಂಡಿರುವಂತೆ ತೋರಿತು; ಆದ್ದರಿಂದಲೇ ಅವರಲ್ಲಿ ಗದ್ದಲ–ಗೊಂದಲಗಳೂ ಅಡಮುಟ್ಟತನ– ಹುಡುಗಾಟಿಕೆಗಳೂ, ಅವ್ಯವಸ್ಥೆ–ಅವಜ್ಞೆಗಳೂ ತೋರಿಬಾರದೆ ಅಲ್ಲಿಯ ಎಲ್ಲ ಕಾರ್ಯಗಳೂ ಸುಸೂತ್ರವಾಗಿ ನಡೆದಿದ್ದವು. ಇದನ್ನು ನೋಡಿ ಮಲ್ಲಣ್ಣನಿಗೆ ಬಹಳ ಆಶ್ಚರ್ಯವಾಯಿತು. ತಮ್ಮ ಒಡೆಯನಾದ ಹುಕ್ಕದೊರೆಯೂ ತಮ್ಮಲ್ಲಿ ಈ ಗುಣಗಳು ಬರುವದಕ್ಕಾಗಿ ಎಷ್ಟು ಕಷ್ಟಪಡುತ್ತಿರುವನಲ್ಲ, ಎಂದು ಆತನು ತನ್ನ ಒಡೆಯನ ವಿಷಯವಾಗಿ ಕೃತಜ್ಞಭಾವವನ್ನು ತಾಳಿ, ತನ್ನ ಒಡೆಯನ ಘನತರವಾದ ಯೋಗ್ಯತೆಗಾಗಿ ಆತನನ್ನು ಮನಸ್ಸಿನಲ್ಲಿ ಬಹಳವಾಗಿ ಗೌರವಿಸಿದನು. ತನ್ನಂಥ ಬಹುಜನ ಕಗ್ಗರನ್ನು ಕೂಡಿಸಿ ಅವರನ್ನು ತಿದ್ದುವದಕ್ಕಾಗಿ ತನ್ನ ಹುಕ್ಕದೊರೆಯು ಪಟ್ಟ ಕಷ್ಟವು ಈಗ ಆತನ ಕಣ್ಣಿಗೆ ಕಟ್ಟಿದಂತಾಗಿತ್ತು. ತಮ್ಮಲ್ಲಿ ಕೆಲವರಿಗೆ, ತಮ್ಮ ಹುಕ್ಕದೊರೆಯು ಒಮ್ಮೊಮ್ಮೆ ನ್ಯಾಯ ನಿಷ್ಠುರನಾಗಿಯೂ, ದಯಾಶೂನ್ಯನಾಗಿಯೂ ತೋರುತ್ತಿರುವದು ಈಗ ಆತನ ಮನಸ್ಸಿನಲ್ಲಿ ಬಂದಿತು. ಕೆಲವರು ಹುಕ್ಕದೊರೆಯ ಸಂಬಂಧದಿಂದ—''ಇಂಥ ಘನವಂತನಲ್ಲಿ ಈ ನೈಷ್ಠುರ್ಯವಿರುವದೊಂದು ಕಲಂಕಪ್ರಾಯವೆ''ಂದು ಅಭಿಪ್ರಾಯಪಡುವದರ ನೆನಪೂ ಈಗ ಆತನಿಗಾಯಿತು; ಆದರೆ ಅವರ ಈ ಅಭಿಪ್ರಾಯವೂ, ವಿಚಾರಸರಣಿಯೂ ಸರ್ವಥಾ ಅಯೋಗ್ಯವಾದವೆಂತಲೂ, ಕಲ್ಲುಬಂಡೆಗಳನ್ನು ಮೂರ್ತಿ ಮಾಡುವಾಗ ಬಂಡೆಗಳು

ಚಾಣಹೊಡೆತಗಳನ್ನು ತಾಳಲಾರದೆ ಎಷ್ಟು ಕೂಗಿದರೂ ಮೂರ್ತಿಕಾರನು ಚಾಣದ ಪೆಟ್ಟುಗಳನ್ನು ದಯಾಶೂನ್ಯವಾಗಿ ಹಾಕಲೇಬೇಕಾಗುವಂತೆ, ನಮ್ಮ ಹುಕ್ಕದೊರೆಯು ನಮ್ಮನ್ನು ಮನುಷ್ಯರಾಗಿಮಾಡುವಾಗ ಪ್ರಸಂಗವಶಾತ್ ನಿಷ್ಠುರೋಪಾಯಗಳನ್ನು ಯೋಚಿಸಲೇ ಬೇಕಾಗುವದೆಂದು ಆತನು ತಿಳಿದುಕೊಂಡು, ತನ್ನ ಒಡೆಯನ ಸಮಂಜಸತನಕ್ಕಾಗಿ ಆತನನ್ನು ಮನಸ್ಸಿನಲ್ಲಿ ಕೊಂಡಾಡಿದನು. ಆತನು ತನ್ನ ಆ ಒಡೆಯನನ್ನು ಕುರಿತು ಮನಸ್ಸಿನಲ್ಲಿ—''ಶಾಬಾಶ್! ನಮ್ಮಪ್ಪಾ ಹುಕ್ಕದೊರೆಯೆ, ನಿನ್ನ ಪುಣ್ಯ ಪ್ರಭಾವದಿಂದ ನಿನ್ನ ಪರಿವಾರವೆನಿಸುವ ನಾವು, ಈ ನಮ್ಮ ಬುಕ್ಕ ದೊರೆಯ ಪರಿವಾರಕ್ಕೆ ಅಡಿಯಾದೇವೇನು? ಛೇ ಛೇ! ಹಾಗೆಂದಿಗೂ ಆಗದು. ಆದರೆ ಅವರಿಗಿಂತ ಒಂದು ತೂಕ ಹೆಚ್ಚೇ ಆದೇವು; ಆದರೆ ನಮ್ಮಪ್ಪ ಈ ಬುಕ್ಕದೊರೆಯಾದರೂ ಕಡಿಮೆಯವನಲ್ಲ! ತನ್ನ ಅಣ್ಣನ ಪಡಿಕಟ್ಟನ್ನೇ ಇಳಿಸಿರುವನು' ಎಂದು ಯೋಚಿಸುವಾಗ ಆ ನಿಸ್ಪೃಹನ ಮುಖದಿಂದ ಮತ್ತೆ—''ಭಾಪುರೆ! ನಮ್ಮ ಹುಕ್ಕದೊರೆಯ ತಮ್ಮ ಹೌದೋ!'' ಎಂಬ ಉದ್ಗಾರವು ತಟ್ಟನೆ ಹೊರಟಿತು. ಕೂಡಲೆ ಆತನು ಬದಿಗೆ ಹೊರಳಿ ಬುಕ್ಕನನ್ನು ಅಭಿಮಾನದಿಂದ ನೋಡಲು, ಆತನು ಮುಗುಳುನಗೆ ನಗುತ್ತ— ''ಯಾಕೆ ಮಲ್ಲಣ್ಣಾ, ಏನೋ ನೀನು ಮನಸ್ಸಿನಲ್ಲಿ ಎಣಿಕೆಹಾಕುವಂತೆ ತೋರುತ್ತದೆ? ನಮ್ಮ ದಂಡಿನವರನ್ನು ನೋಡಿ ನಿನಗೆ ಸಮಾಧಾನವಾಯಿತಷ್ಟೇ? ಸಮಾಧಾನವಾಗದೇನು ಮಾಡೀತು? ನಾವೆಲ್ಲರೂ ನಿನ್ನ ಹುಕ್ಕದೊರೆಯ ಗರಡಿಯ ಮನೆಯಲ್ಲಿಯೇ ಆಡಿದವರು; ಆದರೆ ಹೇಳು, ನಮ್ಮ ಅಣ್ಣನ ಕೈ ಕೆಳಗೆ ಪ್ರತ್ಯಕ್ಷವಾಗಿ ತಯಾರಾದ ನೀನು ನಮ್ಮಲ್ಲಿಯಾಗಲಿ, ನಮ್ಮವರಲ್ಲಿ ಯಾಗಲಿ ಏನಾದರೂ ದೋಷಗಳನ್ನು ಕಂಡಿದ್ದರೆ ಹೇಳು. ಆದರೆ ಇಂದೇ ಹೇಳೆಂದು ನಿನಗೆ ಆಗ್ರಹ ಮಾಡುವದಿಲ್ಲ; ಇಂದು ಹೇಳು ನಾಳೆ ಹೇಳು, ನಮ್ಮ ದೋಷಗಳು ನಿನ್ನ ಕಣ್ಣಿಗೆ ಬೀಳಲು ಬೇಕಾದಾಗ ಹೇಳು; ನಮ್ಮ ಆ ದೋಷಗಳನ್ನು ಅವಶ್ಯವಾಗಿ ನಾವು ತಿದ್ದಿಕೊಳ್ಳಬೇಕಾಗುವದು. ಮಲ್ಲಣ್ಣಾ, ಈಗಿನ ಕಾಲದಲ್ಲಿ ಕರ್ನಾಟಕದ ಉದ್ಧಾರಕ್ಕಾಗಿ ಕನ್ನಡಿಗರಾದ ನಾವು ದೇಹವನರ್ಪಿಸುವ ಪ್ರಸಂಗವಿರುವದರಿಂದ, ಆ ನಮ್ಮ ಪವಿತ್ರ ಕರ್ನಾಟಕ ಭೂಮಾತೆಗೆ ಅರ್ಪಿಸತಕ್ಕ ನಮ್ಮ ದೇಹಗಳೂ, ಆತ್ಮಗಳೂ ಪವಿತ್ರವಾಗಿಯೇ ಇರಬೇಕಾಗುವುದು. ಇಲ್ಲದಿದ್ದರೆ ಅಯೋಗ್ಯಾಚರಣೆಯ ಮಲಿನ ದೇಹಾತ್ಮಗಳ ಅರ್ಪಣದ ನಿರರ್ಥಕವಾದ ಆಯಾಸದಿಂದ ನಮ್ಮ ಕರ್ನಾಟಕ ಭೂಮಾತೆಯನ್ನು ಸಂತಾಪಗೊಳಿಸಿದ ದ್ರೋಹಕ್ಕೆ ಮಾತ್ರ ನಾವು ಗುರಿ ಯಾಗಬೇಕಾದೀತು!''

ಈ ಮೇರೆಗೆ ಬುಕ್ಕನೂ, ಮಲ್ಲಸರ್ಜನನೂ ಮಾತಾಡುತ್ತ ಒಂದು ಡೇರೆಯಲ್ಲಿ ಕುಳಿತಿದ್ದರು. ಇದ್ದದ್ದು ಇರಲಿ, ಮಲ್ಲಣ್ಣನಿಗೆ ಬುಕ್ಕದೊರೆಯ ಸಾದ್ಯಂತ ವೃತ್ತಾಂತವನ್ನು ಕೇಳುವ ಕುತೂಹಲವು ವಿಶೇಷವಾಗಿತ್ತು. ಬುಕ್ಕನಾದರೂ ತನ್ನ ವೃತ್ತಾಂತವನ್ನು ಮಲ್ಲಣ್ಣನಿಗೆ ಬೇಗನೆ ತಿಳಿಸಬೇಕೆಂದು ಮಾಡಿದ್ದನು. ಯಾಕಂದರೆ ಮಲ್ಲನು ಸಾಧಾರಣ ವ್ಯಕ್ತಿಯಲ್ಲೆಂತಲೂ, ಆತನಿಂದ ತಮ್ಮ ಕಾರ್ಯಕ್ಕೆ ಸಹಾಯವಾಗುವ ಸಂಭವವು ವಿಶೇಷವಾಗಿರುತ್ತದೆಂತಲೂ ಆತನ ಭಾವನೆಯಾಗಿತ್ತು. ಮೇಲಾಗಿ ತನ್ನ ಅಣ್ಣನಾದ ಹುಕ್ಕನ ಅನುಯಾಯಿಯಾಗಿರುವದರಿಂದ, ಇವರೆಲ್ಲರೂ ಸ್ವದೇಶೋದ್ಧಾರಕ್ಕಾಗಿ

ನೆರವಾಗತಕ್ಕವರೇ ಎಂದು ಆತನು ತಿಳಿದುಕೊಂಡನು. ಎಲ್ಲರೂ ಊಟದಲ್ಲಿ ತೊಡಗಿದರು. ನಾಲ್ಕು ತಾಸು ರಾತ್ರಿಯೊಳಗಾಗಿ ಬುಕ್ಕನು ಊಟವನ್ನು ತೀರಿಸಿಕೊಂಡು ಮಲ್ಲನೊಡನೆ ಪುನಃ ಡೇರೆಗೆ ಬಂದನು. ಅಷ್ಟರಲ್ಲಿ ಗುಹೆಗೆ ಹೋಗತಕ್ಕವರು ಹೊರಡಲು ಸಿದ್ಧರಾಗಿ ಬುಕ್ಕನನ್ನು ಕಂಡು ಹೊರಟು ಹೋದರು. ಅವರು ಇಷ್ಟು ರಾತ್ರಿಯಲ್ಲಿ ದೇವಿಯ ಕೊಳ್ಳದೊಳಗಿನ ಆ ಭಯಂಕರ ಗುಹೆಗೆ ಹೋಗುವದನ್ನು ನೋಡಿ ಮಲ್ಲಣ್ಣನು ಬೆರಗಾದನು. ಇಷ್ಟು ಜನರು ರಾತ್ರಿ ಅಲ್ಲಿಗೆ ಹೋಗುವ ಕಾರಣವೇನೆಂಬ ಗೂಢವು ಆತನಿಗೆ ತಿಳಿಯದಾಯಿತು. ಹಾದಿಯಲ್ಲಿ ಹುಳಹುಪ್ಪಡಿಗಳೇನು, ಹುಲಿಕರಡಿಗಳೇನು ಇವನ್ನಾವವನ್ನೂ ಲಕ್ಷಿಸದೆ ನಿರ್ಭಯದಿಂದ ಹೊರಟು ಹೋದವರ ಎದೆಗಾರಿಕೆಗೆ ಮಲ್ಲಣ್ಣನು ಅಚ್ಚಿಮೆಚ್ಚಿದನು. ಮಲ್ಲನ ಮನಸ್ಸಿನೊಳಗಿನ ಈ ವಿಚಾರವು ಧೂರ್ತನಾದ ಬುಕ್ಕನಿಗೆ ತಿಳಿಯದೆ ಹೋಗಲಿಲ್ಲ, ಆತನು ಮಲ್ಲಣ್ಣನನ್ನು ಕುರಿತು—

''ಮಲ್ಲಣ್ಣಾ ಇಷ್ಟು ರಾತ್ರಿಯಲ್ಲಿ ಅರಣ್ಯದೊಳಗಿನ ಗುಹೆಗೆ ಇವರು ಹೋಗುವ ಕಾರಣವನ್ನು ಕುರಿತು ನೀನು ವಿಚಾರಿಸುತ್ತಿರಬಹುದು. ಅದರೆ ಅದನ್ನು ಸ್ಪಷ್ಟವಾಗಿ ಹೇಳುತ್ತೇನೆ ಕೇಳು. ಹ್ಯಾಗೂ ಎಲ್ಲ ಸಂಗತಿಯನ್ನು ನಿನಗೆ ಹೇಳಲೇಬೇಕಾಗಿರುವದು. ಮೊದಲು ಇದನ್ನು ಹೇಳುವೆನು. ಮಲ್ಲಣ್ಣಾ ನಿನ್ನನ್ನು ನಾವು ಹೊರಗಿನವನೆಂದು ತಿಳಿದಿರುವದಿಲ್ಲಾದ್ದರಿಂದ ನಿನ್ನ ಮುಂದೆ ಯಾವ ಸಂಗತಿಯನ್ನು ಹೇಳಲಿಕ್ಕೂ ನನಗೆ ಸಂಕೋಚವಾಗುವದಿಲ್ಲ; ಮತ್ತು ನನಗೆ ಯಾವ ಸಂದೇಹವೂ ಬರುವದಿಲ್ಲ, ನಾವು ಛಾವಣಿಯನ್ನು ಬಿಟ್ಟು ಗುಹೆಯಲ್ಲಿಯೂ ಬಳಿಕೆ ಮಾಡುವ ಕಾರಣವು ಅಷ್ಟು ಸೂಕ್ಷ್ಮವೇ ಇರುವದು. ಮಲ್ಲಣ್ಣಾ, ನಮ್ಮ ಮುಖ್ಯ ಧನಸಂಚಯವೂ ಶಸ್ತ್ರ ಸಂಚಯವೂ ಗವಿಯಲ್ಲಿ ಇರುತ್ತವೆ. ಗುಹೆಯು ಅನ್ಯರಿಗೆ ದುರ್ಭೇದ್ಯವಾಗಿದ್ದರೂ ಸಾಹಸಿಗಳಿಗೆ ಅದು ದುರ್ಭೇದ್ಯವಲ್ಲ, ಆ ಗುಹೆಯ ಬಗ್ಗೆ ಜನರಲ್ಲಿ ಎಷ್ಟು ಅಜ್ಞಾನವು ಮುಸುಕಿದ್ದರೂ ಅದರ ಮೆಟ್ಟನ್ನು ಬಲ್ಲವರು ಕೆಲಜನರಾದರೂ ಇರುವರು. ಹಾಗಿಲ್ಲದಿದ್ದರೆ, ಎರಡನೆಯ ಕಡೆಯಿಂದ ಇಲ್ಲಿಗೆ ಬಂದ ಹೊಸಬರಾದ ನಮಗಾದರೂ ಈ ಗುಹೆಯ ಮರ್ಮವು ಹ್ಯಾಗೆ ತಿಳಿಯುತ್ತಿತ್ತು? ಈಗ ನನ್ನಿಂದ ಗುಹೆಯ ರಚನೆಯ ಮರ್ಮವು ನಿನಗೆ ತಿಳಿಯಲಿಲ್ಲವೆ? ಇಷ್ಟರಿಂದ ನಿನಗೆ ಎಲ್ಲ ತಿಳಿಯಬಹುದು; ರಾಜಕಾರಣಗಳು ಬಹು ಗೂಢವಾದವುಗಳು; ಅಪಘಾತಗಳ ಹೊದಿಕೆಗಳಿಂದ ಮುಚ್ಚು ಹಾಕಿದಂಥವು; ಆದ್ದರಿಂದ ರಾಜಕಾರಣ ಪಟುವು ಯಾವಾಗಲೂ ಜಾಗರೂಕನಾಗಿ, ಮುಂದೆ ಬರಬಹುದಾದ ಅಪಘಾತಗಳನ್ನು ಧೂರ್ತತನದಿಂದ ಗೊತ್ತುಹಿಡಿದು ಅವುಗಳ ನಿವಾರಣೋಪಾಯವನ್ನು ಮೊದಲೇ ಮಾಡಿಡಬೇಕಾಗುವದು. ಗುಹೆಯಿಂದ ನಾವು ಬಂದ ಮಾರ್ಗದ ಹೊರತು ಇನ್ನೊಂದು ಪ್ರಶಸ್ತವಾದ ಮಾರ್ಗವು ಗುಹೆಯೊಳಗೆ ಹೋಗಲಿಕ್ಕೆ ಇರುವದು. ಅದನ್ನು ನಾನು ಇನ್ನೊಮ್ಮೆ ನಿನಗೆ ತೋರಿಸೇನಂತೆ. ಆ ಮಾರ್ಗದಿಂದ ಸೈನಿಕರು ಗುಹೆಯೊಳಗೆ ಹೋಗುವರು. ಇಷ್ಟು ರಾತ್ರಿ ಸೈನಿಕರನ್ನು ಗುಹೆಗೆ ಕಳಿಸುವದರಲ್ಲಿ ಇನ್ನೊಂದು ಲಾಭವುಂಟು. ರಾಜಕಾರಣಗಳು ಸಾಹಸದ ಹೊರತು ಸಾಧಿಸುವದಿಲ್ಲ; ಆದ್ದರಿಂದ ಸಾಹಸದ ಕಾರ್ಯಕ್ಕೆ ಬೇಕಾದಾಗ ಸಿದ್ಧವಾಗಿರುವಷ್ಟು ಸೈನಿಕರು ಸಾಹಸಿಗಳಾಗಿರಬೇಕಾಗುವದು; ಆದ್ದರಿಂದ ಇಂಥ ಗುಹಾ

ಪ್ರವೇಶದಂಥ ಸಾಹಸಗಳಲ್ಲಿ ಯಾವಾಗಲೂ ಅವರನ್ನು ತೊಡಗಿಸಬೇಕಾಗುತ್ತದೆ. ಇರಲಿ, ನನ್ನ ವೃತ್ತಾಂತವನ್ನು ಹೇಳುತ್ತೇನೆ ಕೇಳು'' ಎಂದು ಹೇಳಿ ಬುಕ್ಕನು ತನ್ನ ವೃತ್ತಾಂತವನ್ನು ಹೇಳಲುದ್ಯುಕ್ತನಾದನು. ಅಷ್ಟರಲ್ಲಿ ಒಬ್ಬ ಸೇವಕನು ಓಡುತ್ತ ಬಂದು—''ದೊರೆಗಳೇ, ಯಾರೋ ಇಬ್ಬರು ಮುಸಲ್ಮಾನ ರಾವುತರು ನಮ್ಮ ಛಾವಣಿಯ ಕಡೆಗೆ ಬರುತ್ತಿರುವರಂತೆ'' ಎಂದು ಹೇಳಲು, ಬುಕ್ಕನು ವಿಚಾರಮಗ್ನನಾದನು.

ದೇವಿಯ ಕೊಳ್ಳದಲ್ಲಿ ಇಷ್ಟು ರಾತ್ರಿಯಲ್ಲಿ ಹೊರಗಿನವನು ಬರುವದು, ಅದರಲ್ಲಿಯೂ ವಿಶೇಷವಾಗಿ ಮುಸಲ್ಮಾನ ರಾವುತರು ಬರುವದು ಬುಕ್ಕನಿಗೆ ಆಶ್ಚರ್ಯಕರವಾಗಿ ತೋರಿತು; ಯಾಕಂದರೆ ಆ ಕೊಳ್ಳದ ವಿಷಯವಾಗಿ ಹಿಂದೆ ಹೇಳಿದಂತೆ ಹಿಂದೂ ಜನರಲ್ಲಿ ವಿಲಕ್ಷಣವಾದ ಭಯವು ವಾಸಿಸುತ್ತಿತ್ತು; ಹೊರಗಿನಿಂದ ಬಂದ ಮುಸಲ್ಮಾನರಿಗಂತು ಆ ಕೊಳ್ಳದ ಸುದ್ದಿ ಸಹ ಗೊತ್ತಿರುವ ಸಂಭವವಿದ್ದಿಲ್ಲ. ಈ ಸ್ಥಿತಿಯಲ್ಲಿ ಇಬ್ಬರು ಮುಸಲ್ಮಾನ ರಾವುತರು ಹ್ಯಾಗೆ ಬಂದರೆಂದು ಬುಕ್ಕನು ಆಲೋಚಿಸತೊಡಗಿದನು. ಅಷ್ಟರಲ್ಲಿ ಮತ್ತೊಬ್ಬ ಸೇವಕನು ಬಂದು—''ದೇವರು, ಪಾಳಯದ ಹೊರಗೆ ಇಬ್ಬರು ಮುಸಲ್ಮಾನ ಸವಾರರು ಬಂದಿದ್ದು, ಒಳಗೆ ದರ್ಶನಕ್ಕೆ ಬರಲು ಅಪ್ಪಣೆ ಕೇಳುತ್ತಿರುವರು'' ಎಂದು ಹೇಳಿದನು. ಅದಕ್ಕೆ ಬುಕ್ಕನು ಸ್ವಲ್ಪ ಆಲೋಚಿಸಿ ಏನೋ ನೆನಪಾದದ್ದರಿಂದ ಸಮಾಧಾನಪಟ್ಟು ಸೇವಕನಿಗೆ—''ಹೋಗು, ಬಖತ್ಯಾರರವರ ಕಡೆಯವರು ಏನಾದರೂ ಗುಪ್ತಾಲೋಚನೆಯ ಸಲುವಾಗಿ ಬಂದಿರಬಹುದು; ಹಾಗಿಲ್ಲದಿದ್ದರೆ ಹೀಗೆ ನಮ್ಮ ಒಪ್ಪಿಗೆ ಕೇಳುವ ಕಾರಣವೇನು? ಬೇಗನೆ ಹೋಗಿ ಅವರನ್ನು ಮರ್ಯಾದೆಯಿಂದ ಕರಕೊಂಡು ಬಾ'' ಎಂದು ಹೇಳಿದನು. ಕೂಡಲೆ ಸೇವಕನು ಓಡುತ್ತ ಹೋದನು. ಇತ್ತ ಮಲ್ಲಸರ್ಜನು ಸನ್ನೆ ತಿಳಿದು ಎರಡನೆಯ ಕಡೆಗೆ ಹೋಗಬೇಕೆಂದು ಮೇಲಕ್ಕೆ ಏಳುತ್ತಿರಲು, ಬುಕ್ಕನು ಆತನಿಗೆ — ''ಯಾಕೆ ಮಲ್ಲಣ್ಣಾ, ಎದ್ದೆಯಲ್ಲಾ! ಎತ್ತ ಹೋಗುವೆ? ಮುಸಲ್ಮಾನ ಸವಾರರು ಯಾರು ಬಂದಿರುತ್ತಾರೆ ನೋಡೋಣ. ನಿನಗೆ ತಿಳಿಯದಂಥ ಗುಪ್ತಾಲೋಚನೆಯನ್ನು ನಾವೇನು ಮಾಡಬೇಕಾಗಿದೆ ? ನೀನು ನಮ್ಮ ಬಂಧುವರ್ಗದಲ್ಲಿ ಸೇರಿದವನಾದ್ದರಿಂದ ನಿನ್ನಿಂದ ನಾವು ಏನೂ ಬಚ್ಚಿಡುವ ಹಾಗಿಲ್ಲ. ಕುಳಿತುಕೋ, ನಾವಿಬ್ಬರೂ ಆ ಸರದಾರರ ಸಮಾಚಾರವನ್ನು ತಕ್ಕೊಳ್ಳೋಣ'' ಎಂದು ನುಡಿಯಲು, ಮಲ್ಲಣ್ಣನು ತನ್ನ ಸ್ಥಳದಲ್ಲಿ ಕುಳಿತುಕೊಂಡನು. ಅವರಿಬ್ಬರು ತರುಣರು ಮುಸಲ್ಮಾನ ರಾವುತರ ಹಾದಿಯನ್ನು ಆತುರದಿಂದ ನೋಡಹತ್ತಿದರು. ಅಷ್ಟರಲ್ಲಿ ಸೇವಕನು ಆ ರಾವುತನನ್ನು ಕರೆತಂದು ಡೇರೆಯೊಳಗೆ ಕಳಿಸಿ ಹೊರಟುಹೋದರು. ರಾವುತರು ಒಳಗೆ ಬಂದ ಕೂಡಲೆ ಬುಕ್ಕನಿಗೆ ಸಲಾಮು ಮಾಡಲು, ಬುಕ್ಕನು ಎದ್ದುಹೋಗಿ ಅವರನ್ನು ಆದರದಿಂದ ಕರಕೊಂಡು ಬಂದು ಹತ್ತರ ಕುಳ್ಳಿರಿಸಿಕೊಂಡನು. ಪದ್ಧತಿಯಂತೆ ಪರಸ್ಪರರ ಯೋಗಕ್ಷೇಮದ ವಿಚಾರಣೆಯಾಯಿತು. ಆ ಇಬ್ಬರು ರಾವುತರು ಮಲ್ಲಣ್ಣನನ್ನು ಮೇಲೆ ಮೇಲೆ ನೋಡುತ್ತಲಿದ್ದರು. ಅದನ್ನರಿತು ಬುಕ್ಕನು ಆ ಸವಾರರಿಗೆ—''ಪ್ರಿಯದೋಸ್ತ ರಹಿಮಾನ ಸಾಹೇಬ, ಅಬ್ದುಲ್ ಸಾಹೇಬ, ನಮ್ಮ ಈ ಬಂಧುವಿನ ವಿಷಯವಾಗಿ ನೀವು ಸರ್ವಥಾ ಸಂಶಯ ತಕ್ಕೊಳ್ಳದೆ ನಿಶ್ಶಂಕೆಯಿಂದ ಮಾತಾಡಬೇಕು. ನಮ್ಮ ಸುಖ-ದುಃಖಗಳಿಗೆ ಪಾಲುಗಾರರಾದವರಲ್ಲಿ

ಇವರು ಇರುತ್ತಾರೆಂದು ತಿಳಿಯಿರಿ. ಇವರು ನಮ್ಮ ಅಣ್ಣಂದಿರಾದ ಹುಕ್ಕದೊರೆಗಳ ಪಟ್ಟ ಶಿಷ್ಯರಾಗಿರುವರು. ಇವರ ಪರಾಕ್ರಮದ ವಿಷಯವಾಗಿ ಹೆಚ್ಚಿಗೆ ಹೇಳುವದೇನು? ನಿಮ್ಮ ಸುಪ್ರಸಿದ್ಧ ಮಲ್ಲನಾದ ಮಲಿಕನನ್ನು ನಿನ್ನಿನ ಮಲ್ಲಯುದ್ಧದಲ್ಲಿ ಒಗೆದು, ಉದಾರ ಮನಸ್ಸಿನಿಂದ ಆತನಿಗೆ ಪ್ರಾಣದಾನಮಾಡಿದ ''ಮಲ್ಲಸರ್ಜ'' ಎಂಬ ಹೆಸರಿನ ವೀರರು ಇವರೆಯೆ'' ಎಂದು ನುಡಿಯಲು, ಆ ಇಬ್ಬರು ಸವಾರರು ಆಶ್ಚರ್ಯದಿಂದ ಮಲ್ಲಣ್ಣನ ಕಡೆಗೆ ನೋಡಿ ವಿನಯದಿಂದ ಆತನಿಗೆ ಸಲಾಮು ಮಾಡಿದರು. ಮಲ್ಲಣ್ಣನೂ ಪ್ರತಿಯಾಗಿ ಅವರನ್ನು ವಿನಯದಿಂದ ಮನ್ನಿಸಿದನು. ಹೀಗೆ ಪರಸ್ಪರರ ಪರಿಚಯವಾದಬಳಿಕ ಬುಕ್ಕನು ರಹಿಮಾನನನ್ನು ಕುರಿತು–

ಬುಕ್ಕ–ಖಾನಸಾಹೇಬ, ಬಖತ್ಯಾರರವರಿಗೆ ಕ್ಷೇಮವೆ? ಅವರು ನಮ್ಮನ್ನು ನೆನಿಸುತ್ತಿರುವರೆ? ಅವರು ನಮಗೆ ವಿಶೇಷ ಸಂಗತಿಯನ್ನೇನು ತಿಳಿಸಿರುವರು? ಕಾಸಿಮನ ನಂಬಿಗೆಯು ಅವರ ಮೇಲೆ ಯಥಾಸ್ಥಿತವಾಗಿ ಇರುವದಷ್ಟೇ?

ರಹಿಮಾನ–ಬುಕ್ಕದೊರೆಗಳೇ, ಯಾವ ಮಾತಿಗೂ ನೀವು ಚಿಂತೆ ಮಾಡಬೇಡಿರಿ, ನಿಮ್ಮ ಹಿತಚಿಂತನದಲ್ಲಿಯೂ, ಆನೆಗುಂದಿಯ ರಾಯರ ಹಿತಚಿಂತನದಲ್ಲಿಯೂ ಬಖತ್ಯಾರವರು ಯಾವಾಗಲೂ ತಲ್ಲೀನರಾಗಿರುವರು. ಯಾಕಂದರೆ ನಿಮ್ಮ ಹಿರಿಯರಾದ ಸಂಗಮರಾಜರು ಬಖತ್ಯಾರರ ಜೀವದ ಗೆಳೆಯರಾಗಿರುವರು. ಅದರಂತೆ, ಆನೆಗುಂದಿಯ ಜಂಬುಕೇಶ್ವರ ರಾಯರು, ತಮ್ಮ ಬೆನ್ನು ಬಿದ್ದಿದ್ದ ಬಹಾಉದ್ದೀನರ ಸಲುವಾಗಿ ತಮ್ಮ ಸರ್ವಸ್ವವನ್ನು ಕಳೆದುಕೊಂಡ ಉಪಕಾರವು ಬಖತ್ಯಾರರವರಿಗೆ ದುಸ್ಸಹವಾಗಿದೆ; ಯಾಕಂದರೆ, ಬಖತ್ಯಾರರು ಬಹಾಉದ್ದೀನರ ಸಂಪೂರ್ಣ ಪಕ್ಷಪಾತಿಗಳಿರುವರು. ರಾಯರ ಈ ಉಪಕಾರವು ಎಂದೂ ತೀರುವ ಹಾಗಿಲ್ಲದಿದ್ದರೂ, ರಾಯರ ಆನೆಗುಂದಿಯ ರಾಜ್ಯವು ಮುಣಗದಂತೆಯೂ, ಆ ರಾಜ್ಯದಲ್ಲಿ ಮುಸಲ್ಮಾನರ ಕಾಟವು ಉಳಿಯದಂತೆಯೂ ಯತ್ನಿಸಿ, ಕೆಲಮಟ್ಟಿಗಾದರೂ ಉಪಕಾರದ ಹೊರೆಯನ್ನು ಹಗುರಮಾಡಿಕೊಳ್ಳಬೇಕೆಂದು ಬಖತ್ಯಾರರು ಹಗಲಿರುಳು ಯತ್ನಿಸುತ್ತಿರುವರು. ಈ ಕಾರ್ಯವನ್ನು ಸಾಧಿಸುವದಕ್ಕಾಗಿ ಅವರು ಕಾಸಿಮನ ಸ್ನೇಹವನ್ನು ಕಾಯ್ದುಕೊಳ್ಳಲೇ ಬೇಕಾಗಿರುತ್ತದೆ. ಆ ಮಹಾ ಬುದ್ಧಿಶಾಲಿಗಳಾದ ಬಖತ್ಯಾರರು ಬಹು ಚಾತುರ್ಯದಿಂದ ಅವನ ಪ್ರೇಮವನ್ನು ಕಾಯ್ದು ಕೊಂಡಿರುವರೆಂಬದಿಷ್ಟೇ ಅಲ್ಲ, ದಿನದಿನಕ್ಕೆ ಕಾಸಿಮನ ಹೆಚ್ಚು ಹೆಚ್ಚು ಪ್ರೇಮಕ್ಕೆ ಅವರು ಪಾತ್ರರಾಗುತ್ತಿರುವರು. ಬುಕ್ಕಣ್ಣಾ, ಸತ್ತು ಸ್ವರ್ಗಕ್ಕೆ ಹೋಗಿದ್ದ ಸತ್ವಶಾಲಿ ಗಳಾದ ನಿಮ್ಮ ಜಂಬುಕೇಶ್ವರರಾಯರೂ ತಿರುಗಿ ಬರುವಹಾಗಿಲ್ಲ, ನಮ್ಮ ಬಹಾಉದ್ದೀನರೂ ತಿರುಗಿ ಬರುವಹಾಗಿಲ್ಲ; ಆದರೆ ಅಂಥ ಘನವಂತರನ್ನು ಅನ್ಯಾಯದಿಂದ ಮಣ್ಣುಗೂಡಿಸಿದವನ ಸೇಡನ್ನು ಕೈಸಾಧಿಸಿದಷ್ಟು ತೀರಿಸಿಕೊಳ್ಳಲೇಬೇಕೆಂದು ಬಖತ್ಯಾರರು ನಿಶ್ಚಯಿಸಿರುವರು. ಅದರಲ್ಲಿ ಅವರು ಕಾಸಿಮನ ಪ್ರಾಣವನ್ನಂತೂ ಹಿಂಡದೆ ಬಿಡುವಹಾಗಿಲ್ಲ; ಯಾಕಂದರೆ, ಬಹಾಉದ್ದೀನರ ಕೊಲೆಗೆ ಕಾಸಿಮನೇ ಮುಖ್ಯ ಕಾರಣನಾದನು.

ಬುಕ್ಕ–ಏನಂದಿರಿ! ಬಖತ್ಯಾರರು ಕಾಸಿಮನ ವಿಷಯವಾಗಿ ಇಷ್ಟು ಡಂಕು ಇಟ್ಟಿರುವರೆಯೆ? ಬಹಳ ಸಂತೋಷವು; ದುಷ್ಟ ಶಾಸನದ ವಿಷಯವಾಗಿ ಅವರು ಇಷ್ಟು ಹಟತೊಟ್ಟಿರುವದು ಅವರ ಸದಸದ್ವಿವೇಕ ಬುದ್ಧಿಗೂ, ಸದಭಿಮಾನಕ್ಕೂ ಅತ್ಯಂತ ಭೂಷಣವಾದದ್ದು; ಆದರೆ ಸ್ವತಃ ಅತ್ಯಂತ ಕ್ರೂರನಾದ ತಘಲಕ ಮಹಮ್ಮದನು ತಾನು ನಿಂತು ಬಹಾಉದ್ದೀನನ ಮೈದೊಗಲು ಸುಲಿಸಿರಲು, ಈ ಕೆಲಸದಲ್ಲಿ ಕಾಸಿಮನ ಅಂಗವೇನು ಇದ್ದ ಹಾಗಾಯಿತು?

ರಹಿಮಾನ–ಬುಕ್ಕಣ್ಣಾ, ಮಹಮ್ಮದನ ಕ್ರೂರತನದ ವಿಷಯವಾಗಿ ವಾದವಿಲ್ಲ; ಆದರೆ ಮಹಮ್ಮದನು ಕ್ರೂರನಿದ್ದಂತೆ ಪ್ರಸಂಗವಶಾತ್ ಆತನು ದಯಾಲುವೂ ಆಗುತ್ತಿದ್ದನು. ಮೇಲಾಗಿ ಆತನು ದೊಡ್ಡ ವಿದ್ವಾಂಸನು; ಸಮಾಧಾನದಿಂದಿದ್ದಾಗ ಪರರ ಗುಣಗಳನ್ನು ಗ್ರಹಿಸತಕ್ಕವನು. ಇಂಥವನು ಬಹಾಉದ್ದೀನನ ಮೈದೊಗಲು ಸುಲಿಸಲು ಅಜ್ಞಾಪಿಸಿದಾಗ ಬಹಾಉದ್ದೀನರು ಕಕ್ಕನ ಹಂಗು ಇಡದೆ ಸ್ಪಷ್ಟವಾಗಿ ಬೋಧಿಸುತ್ತಿರಲು, ಆ ಗುಣಗ್ರಾಹಿಯಾದ ಮಹಮ್ಮದನ ಮನಸ್ಸು ಕರಗಿ, ಆತನು ತನ್ನ ಮಗನಾದ ಬಹಾಉದ್ದೀನರನ್ನು ಕ್ಷಮಿಸಿಬಿಡುವ ವಿಚಾರದಲ್ಲಿದ್ದನು. ಆದರೆ ದುಷ್ಟ ಕಾಸಿಮನು ಇದನ್ನು ಸಹಿಸದೆ, ಆ ಕಾಲದಲ್ಲಿ ಮಹಮ್ಮದನ ಚಿತ್ತವು ಕ್ಷೋಭಿಸುವಂಥ ಪಂಜಾಬದ ಬಂಡಾಯದ ಪತ್ರವನ್ನು ಕೊಡಿಸಿದನು. ಕಾಸಿಮನ ಈ ನೀಚತನವನ್ನು ಬಖತ್ಯಾರರವರು ಮರೆತಿರುವದಿಲ್ಲ. ಆ ಸೇಡನ್ನು ಈಗ ಅವರು ತೀರಿಸಿಕೊಳ್ಳದೆ ಬಿಡುವಹಾಗಿಲ್ಲ, ಇರಲಿ, ಪ್ರಿಯದೋಸ್ತ ಬುಕ್ಕಣ್ಣಾ, ನಾವು ನಿಮ್ಮ ಬಳಿಗೆ ಬಂದ ಮಹತ್ವದ ಕೆಲಸವು ಹಾಗೆಯೇ ಉಳಿಯಿತಲ್ಲ?

ಬುಕ್ಕ–ಅದೇನು ಕೆಲಸವು? ಅಂಥ ಮಹತ್ವದ ಕೆಲಸವನ್ನೇನು ಬಖತ್ಯಾರರು ನಮಗೆ ಹೇಳಿರುವರು?

ರಹಿಮಾನ–ಕಾಸಿಮನು ನಿಮ್ಮ ತಂದೆಯವರಾದ ಸಂಗಮರಾಜರವರನ್ನು ಕಂಪಲಿಗೆ ಕರತಂದಿರುವನು. ನಿಮ್ಮ ತಂದೆಯವರು ಈಗ ಕಂಪಲಿಯ ಕಾರಾಗೃಹದಲ್ಲಿರುವರು.

ಬುಕ್ಕ–ಅದಂತೂ ನಮಗೆ ಗೊತ್ತೇ ಇರುವದು. ನಮ್ಮ ತಂದೆಯವರನ್ನು ಕಂಪಲಿಗೆ ತಂದದ್ದರಿಂದಲೇ, ನಾವು ನಮ್ಮ ಪರಿವಾರದೊಡನೆ ಬಖತ್ಯಾರರವರ ಸಹಾಯದಿಂದ ಈ ದೇವಿಯ ಕೊಳ್ಳದಲ್ಲಿ ಇರುತ್ತೇವೆ. ಬಖತ್ಯಾರರು ತೋರಿಸದಿದ್ದರೆ ನಮಗೆ ಈ ದೇವಿಯ ಕೊಳ್ಳವೆಲ್ಲಿ ಗೊತ್ತಾಗುತ್ತಿತ್ತು? ಅದರಂತೆ ಈ ಗುಹೆಯ ಸುದ್ದಿಯಾದರೂ ನಮಗೆಲ್ಲಿ ಹತ್ತುತ್ತಿತ್ತು? ಇದೆಲ್ಲ ಬಖತ್ಯಾರರ ಆಶ್ರಯದ ಫಲವಾಗಿರುವದು; ಆದರೆ ಬಖತ್ಯಾರರು ನಮಗೆ ಆಶ್ರಯ ಕೊಟ್ಟಿರುವಂತೆ, ಸಂಧಿಸಾಧಿಸಿ ಅವರು ನಮಗೆ ಸೂಚಿಸಿದರೆ, ನಮ್ಮ ಪ್ರಾಣವನ್ನರ್ಪಿಸಿಯಾದರೂ ತಂದೆಯ ಬಂಧ ವಿಮೋಚನವನ್ನು ಮಾಡುವೆವು. ಪ್ರಿಯದೋಸ್ತ, ತಂದೆಯನ್ನು ಬಂಧಮುಕ್ತ ಮಾಡಲಾರದ ನಾವು ಆತನ ಹೊಟ್ಟೆಯಲ್ಲಿ ಹುಟ್ಟಿಯಾದರೂ ಪ್ರಯೋಜನವೇನು?

ರಹಿಮಾನ–ಪರವರದಿಗಾರ ಅಲ್ಲಾ! ಪ್ರಿಯದೋಸ್ತ ಬುಕ್ಕರಾಜ, ನಿಮ್ಮ ಪಿತೃಭಕ್ತಿಗಾಗಿ ಈ ರಹಿಮಾನನು ಬಹಳ ಸಂತೋಷಪಡುತ್ತಾನೆ. ಮತ್ತು ಮಿತ್ರಧರ್ಮಕ್ಕನುಸರಿಸಿ ಈ

ಕಾರ್ಯದಲ್ಲಿ ಆತನು ತನ್ನ ದೇಹವನ್ನಾದರೂ ಅರ್ಪಿಸಲು ಸಿದ್ಧನಿರುತ್ತಾನೆ; ಆದರೆ ಏನು ಮಾಡಬೇಕು? ಕಾಸಿಮನು ಅತ್ಯಂತ ನೀಚವಾದ ಉಪಾಯದಿಂದ ನಿಮ್ಮ ತಂದೆಯವರನ್ನು ನಾಶಗೊಳಿಸಲು ಯೋಚಿಸುತ್ತಿರುವನು. ನೀಚರು ಸ್ವಾರ್ಥಸಾಧನಕ್ಕಾಗಿ ಎಂಥ ನೀಚತನ ಮಾಡಲಿಕ್ಕೂ ಹೇಸುವದಿಲ್ಲ.

ಬುಕ್ಕ (ಅತ್ಯಂತ ತ್ವೇಷದಿಂದ) – ರಹಿಮಾನಸಾಹೇಬ, ಆ ದುಷ್ಟನು ಅದಾವ ನೀಚೋಪಾಯವನ್ನು ಯೋಚಿಸುತ್ತಿರುವನು, ಬೇಗನೆ ಹೇಳಿರಿ, ಪುಣ್ಯಶಾಲಿಗಳಾದ ಸಂಗಮರಾಜರ ಪುಣ್ಯೋದರದಿಂದ ನಾವೈವರು ಜನಿಸಿದ್ದು ವ್ಯರ್ಥವಾಯಿತೇ? ಸದ್ಯಕ್ಕೆ ಕಂಪಣ್ಣನೂ, ನಾನೂ ನಿಮ್ಮ ಆಶ್ರಯದಲ್ಲಿರುವೆವು. ನಮ್ಮ ಇಬ್ಬರು ತಮ್ಮಂದಿರಾದ ಮುದ್ದಣ್ಣ ಮಾರಣ್ಣ ಎಂಬವರು ತಂದೆಯ ಸಂಗಡ ಸೆರೆಯಲ್ಲಿರುವರು. ನಮ್ಮ ಹಿರಿಯ ಅಣ್ಣನಾದ ಹುಕ್ಕ ದೊರೆಯು ನಮ್ಮಂತೆಯೇ ದಕ್ಷಿಣದಲ್ಲಿ ಕರ್ನಾಟಕದ ಉದ್ಧಾರಕ್ಕಾಗಿ ಯತ್ನ ನಡಿಸಿರುವನೆಂಬದು, ಆತನ ಪಟ್ಟ ಶಿಷ್ಯನಾದ ಈ ಮಲ್ಲಸರ್ಜನನ್ನು ನೋಡಿದ ಮಾತ್ರದಿಂದ ಗೊತ್ತಾಗುವದು. ಈ ಮಲ್ಲಸರ್ಜನ ಸಹಾಯದಿಂದ ಸ್ವಲ್ಪ ದಿನಗಳಲ್ಲಿಯೇ ನಾನು ಅಣ್ಣನನ್ನು ಕೂಡಿಕೊಳ್ಳುವೆನು. ಆಮೇಲೆ ನಾವು ಮೂವರು ಬಂಧುಗಳೂ ಕೂಡಿ ಬಖತ್ಯಾರರ ಸಹಾಯದಿಂದ ಕಾಸಿಮನ ಸಮಾಚಾರವನ್ನು ತಕ್ಕೊಳ್ಳುವೆವು. ಆದರೆ ರಹಿಮಾನಸಾಹೇಬ, ತಂದೆಯ ಸಲುವಾಗಿ ಇಂದೇ ಸಾಹಸಮಾಡುವ ಪ್ರಸಂಗಬಿದ್ದರೆ, ನಾವು ಬೇರೆ ಬೇರೆಯಾಗಿ ಒಬ್ಬೊಬ್ಬರೇ ಬೇಕಾದ ಸಾಹಸಮಾಡಲು ಸಿದ್ಧರಿರುವೆವು. ಆದ್ದರಿಂದ ಹೇಳಿರಿ, ಕಾಸಿಮನ ದುರಾಲೋಚನೆಯೇನಿರುವದೆಂಬದನ್ನು ಮೊದಲು ಹೇಳಿರಿ.

ರಹಿಮಾನ– ಬಖತ್ಯಾರರವರಿಗೆ ನಿಮ್ಮ ಅಣ್ಣಂದಿರಿರುವ ಸ್ಥಳವು ಗೊತ್ತಾಗಿರುವದರಿಂದ, ಈ ಮೊದಲೇ ಅತ್ತಲೂ ಅವರು ಸೂಚನೆ ಕಳಿಸಿರುವರು. ಆ ಸೂಚನೆಯ ಸಂಗಡ ನೀವಿರುವ ಸ್ಥಳವನ್ನೂ ನಿಮ್ಮ ಅಣ್ಣಂದಿರಿಗೆ ತಿಳಿಸಿರುವರು. ಬೇಗನೆ ನಿಮ್ಮಿಬ್ಬರನ್ನು ಒಟ್ಟುಗೂಡಿಸಿ ಕಾಸಿಮನ ಸಮಾಚಾರ ತೆಗೆದುಕೊಳ್ಳುವ ಹವಣಿಕೆಯಲ್ಲಿ ಅವರು ಇರುತ್ತಾರೆ. ಕಾಸಿಮನು ಮತ್ತೊಂದು ನೀಚ ಸ್ವಾರ್ಥದ ಬಲೆಗೆ ಬಿದ್ದು, ಅದಕ್ಕಾಗಿ ನಿಮ್ಮ ತಂದೆಯವರ ನಾಶದ ಉಪಾಯವನ್ನು ತೋರಿಕೆಗಾಗಿ ಯೋಚಿಸಿರುವನೆಂಬದು ಬಖತ್ಯಾರರಿಗೆ ಅಂತರಂಗದಿಂದ ಗೊತ್ತಾಗಿರುತ್ತದೆ. ಆದ್ದರಿಂದ ನಾವು ಹೇಳುವ ಮಾತು ಕೇವಲ ನಿಜವೆಂದು ತಿಳಿದು ಈಗಲೆ ಕಾಸಿಮನ ನಾಶಕ್ಕಾಗಿ ನೀವು ಯತ್ನಿಸದೆ, ನಮ್ಮಿಂದ ಸೂಚನೆಯಾದ ಕೂಡಲೆ ಸಿದ್ಧರಾಗಿರಬೇಕೆಂಬ ಉದ್ದೇಶದಿಂದ ಬಖತ್ಯಾರರವರು ನಮ್ಮನ್ನು ಈಗ ನಿಮ್ಮ ಕಡೆಗೆ ಕಳಿಸಿರುವರು.

ಬುಕ್ಕ– ಪ್ರಿಯದೋಸ್ತ ರಹಿಮಾನ, ಬಖತ್ಯಾರವರ ಉಪಕಾರವನ್ನು ನಾವು ಎಷ್ಟು ಸ್ಮರಿಸಿದರೂ ತೀರದು. ನಮ್ಮ ಹಿತದ ಸಲುವಾಗಿ ಅವರು ಎಷ್ಟು ದಕ್ಷರಾಗಿರುವರಲ್ಲ! ಅವರ ಮಾತನ್ನು ನಾವು ಅಡ್ಡಹಾಕಿ ದಾಟುವದಿಲ್ಲ, ಆ ನಿಸ್ಪ್ರಹಿಗಳಾದ ಬಖತ್ಯಾರರವರ ಮಾತು ನಮಗೆ ವೇದವಾಕ್ಯದಂತೆ ಪ್ರಮಾಣವಾಗಿರುವದು. ರಹಿಮಾನಸಾಹೇಬ, ಅವರ ಉಪಕಾರವಂತು ಇರಲಿ, ಈಗ ನೀವು, ಅಬ್ದುಲ ಖಾನರವರೂ ನಮ್ಮ ಸಲುವಾಗಿ ಕಷ್ಟಪಡುತ್ತಿರುವದು ಸಾಮಾನ್ಯ

ಉಪಕಾರವೇ? ನಿಮ್ಮಂಥ ಸಜ್ಜನರು ಕೈಹಿಡಿದದ್ದರಿಂದಲೇ ಮಹಮ್ಮದತಘಲಕನ ಕೋಪಾಗ್ನಿಗೆ ನಾವು ತುತ್ತಾಗದೆ ಇಲ್ಲಿಯವರೆಗೆ ಜೀವದಿಂದ ಬದುಕಿ ಉಳಿದಿರುತ್ತೇವೆ; ಆದರೆ ಖಾನಸಾಹೇಬ, ಕಾಸಿಮನ ದುರಾಲೋಚನೆಯನ್ನು ಕೇಳಿಕೊಳ್ಳದೆ ನನಗೆ ಸಮಾಧಾನವಾಗಲೊಲ್ಲದು. ದಯಮಾಡಿ ಅದನ್ನು ಬೇಗನೆ ಹೇಳಬೇಕು.

ರಹಿಮಾನ–ಬುಕ್ಕಣ್ಣಾ, ಹೇಳುವೆನು; ಅವನ ದುರಾಲೋಚನೆಯು ಎಷ್ಟು ಭಯಂಕರ ವಾಗಿದ್ದರೂ, ಅದನ್ನು ಕೇಳುವದರಿಂದ ಪಿತೃ ಭಕ್ತನಾದ ನಿನಗೆ ಎಷ್ಟು ಸಂತಾಪವಾಗುತ್ತಿದ್ದರೂ ಅದನ್ನು ಹೇಳಿಯೇ ಹೇಳುವೆನು. ಅದನ್ನು ಹೇಳುವದಕ್ಕಾಗಿಯೇ ಇಲ್ಲಿಗೆ ಬಂದ ನಾವು ಅದನ್ನು ಹೇಳದೆ ಹ್ಯಾಗೆ ಇರೋಣ ? ಸಂಗಮರಾಜನ ನೀವು ಮೂವರು ಮಕ್ಕಳು ಇನ್ನು ಒಂದು ತಿಂಗಳಲ್ಲಿ ತನಗೆ ಶರಣುಬಾರದಿದ್ದರೆ, ಕಾಸಿಮನು ಬಹಾಉದ್ದೀನರ ಮೈದೊಗಲು ಸುಲಿಸಿದಂತೆ ನಿಮ್ಮ ತಂದೆಯವರ ಮೈದೊಗಲು ಸುಲಿಸುವನಂತೆ! ಅಹಹ! ಎಂಥ ಅಪಮಾನಕಾರಕವಾದ ಆಲೋಚನೆಯಿದು! ಬುಕ್ಕರಾಜರೇ, ನನ್ನ ಮಾತನ್ನು ಪೂರ್ಣವಾಗಿ ಕೇಳಿಕೊಳ್ಳದೆ ಸಂತಾಪಗೊಳ್ಳಬೇಡಿರಿ. ಈ ಆಲೋಚನೆಯು ತೋರಿಕೆಯದಾಗಿರುವದೆಂಬದನ್ನು ಆಗಲೆ ಹೇಳಿರುವದನ್ನು ಮರೆಯಬೇಡಿರಿ. ತನ್ನ ತಂದೆಗೆ ಸಂಬಂಧಿಸಿದ ಇಂಥ ಅಪಮಾನಕಾರಕ ಶಬ್ದಗಳನ್ನು ಕೇಳಿ ಪಿತೃಭಕ್ತನಾದ ಯಾವ ಪುತ್ರನಾದರೂ ಸಂತಾಪಗೊಳ್ಳಬಹುದಾಗಿದೆ. ಅದರಲ್ಲಿ ನೀವಂತು ಯಾದವ ಕುಲೋತ್ಪನ್ನ ಕ್ಷತ್ರಿಯ ವೀರರು. ನಿಮ್ಮ ಮನಸ್ಸು ಕ್ಷೋಭಿಸಿ, ಅದು ಸಾಹಸಕಾರ್ಯಕ್ಕೆ ಮುಂದುವರಿಯದೆ ಹ್ಯಾಗೆ ಬಿಟ್ಟೀತು ? ಮಹಮ್ಮದತಘಲಕನ ಒಪ್ಪಿಗೆಯಿಲ್ಲದೆ, ಇಂಥ ಕ್ರೂರ ಶಿಕ್ಷೆಯನ್ನು ವಿಧಿಸುವ ಅಧಿಕಾರವು ಕಾಸಿಮನಿಗಿಲ್ಲ. ಮೇಲಾಗಿ ಕಾಂಚನಗಡದಲ್ಲಿರುವ ಮಲಿಕನಾಯಬನು ಕಾಸಿಮನ ಮೇಲಧಿಕಾರಿಯಿದ್ದು, ಆತನು ಇಂಥ ಕ್ರೂರ ಶಿಕ್ಷೆಗೆ ಸರ್ವಥಾ ಒಪ್ಪಿಕೊಳ್ಳುವದಿಲ್ಲ. ಯಾಕಂದರೆ ಇಂಥ ಕ್ರೂರ ಶಿಕ್ಷೆಗಳಿಂದ ಹಿಂದೂಜನರ ಚಿತ್ತವು ಕ್ಷೋಭಿಸಲು, ಅವರ ಮೇಲೆ ತನ್ನ ಅಧಿಕಾರ ಕೂಡಿಸುವ ಕೆಲಸವು ಅಶಕ್ಯವಾಗುವದೆಂಬ ಮಾತು ಆ ವಿವೇಕಿ ಮಲಿಕನಾಯಬನಿಗೆ ಚೆನ್ನಾಗಿ ಗೊತ್ತಿರುತ್ತದೆ; ಆದರೂ, ವಿಷಯಲಂಪಟನಾದ; ಕಾಸಿಮನು ವಿವೇಕಶೂನ್ಯನಾಗಿ ತನ್ನ ಈ ನೀಗದ ಅಪ್ಪಣೆಯನ್ನು ಪ್ರಸಿದ್ಧಗೊಳಿಸಲು ಹಿಂದೆಮುಂದೆ ನೋಡಲಿಕ್ಕಿಲ್ಲ. ಹೀಗಾದಲ್ಲಿ ನೀವು ಅದಕ್ಕೆ ಮಹತ್ವಕೊಡದೆ, ಒಬ್ಬ ಧನವಂತಳಾದ ತರುಣಿಯ ಮಾನರಕ್ಷಣೆಯ ಸುಯೋಗವು ಒದಗಿರುವದೆಂದು ಮಾತ್ರ ತಿಳಿದು, ಅದನ್ನು ಸಾಧಿಸಲು ಎಂಥ ಸಾಹಸ ಮಾಡಲಿಕ್ಕೂ ನೀವು ಸಿದ್ಧರಾಗಿರಬೇಕು. ಇದೇ ಮಾತನ್ನು ಹುಕ್ಕ ದೊರೆಗೂ ಬಖತ್ಯಾರರವರು ತಿಳಿಸಿದ್ದಾರೆ; ನಿಮಗೂ ಇದೇ ಮಾತನ್ನು ತಿಳಿಸಲಿಕ್ಕೆ ನಮ್ಮನ್ನು ಅಟ್ಟಿರುವರು. ಈ ಪ್ರಸಂಗದಲ್ಲಿ ನಾವೆಲ್ಲರೂ ಸಾಹಸ ಮಾಡಿದರೆ, ಒಬ್ಬ ಧನವಂತ ತರುಣಿಯು, ಅದೇಕೆ ಒಬ್ಬ ಸನ್ಮಾನನಿಯ ರಾಜ ಪುತ್ರಿಯ ಮಾನರಕ್ಷಣ ವಾಗುವದಲ್ಲದೆ, ಕಂಪಲಿಯ ಬಲವಾದ ಕೋಟೆಯೂ ನಮಗೆ ಸಿಗುವಹಾಗಿದೆ. ಬುಕ್ಕದೊರೆಯೇ, ಇದಕ್ಕೂ ಹೆಚ್ಚಿಗೆ ನಾನು ಈಗ ಏನೂ ಹೇಳಲಾರೆನು. ಆಗಾಗ್ಗೆ ವರ್ತಿಸುವ

ಸಂಗತಿಗಳನ್ನೂ, ಅದಕ್ಕಾಗಿ ಮಾಡುವ ಉಪಾಯಗಳನ್ನೂ ನಾವು ನಿಮಗೆ ತಿಳಿಸುತ್ತಹೋಗುವೆವು. ಫಲೋದಯ ಕಾಲವು ದಿನದಿನಕ್ಕೆ ಸಮೀಪಿಸುತ್ತಿರುವದೆಂಬದು ಮಾತ್ರ ಲಕ್ಷದಲ್ಲಿರಲಿ.

ಹೀಗೆ ಇವರ ಸಂಭಾಷಣವು ನಡೆದಿರುವದನ್ನು ಮಲ್ಲಣ್ಣನು ಚಕಿತನಾಗಿ ಕೇಳುತ್ತಲಿದ್ದನು. ಕಾಸಿಮನ ಮೇಲೆ ಆತನ ಸಿಟ್ಟು ಎಷ್ಟು ಇತ್ತೆಂಬದು ಹಿಂದಿನ ಪ್ರಸಂಗಗಳಿಂದ ವಾಚಕರಿಗೆ ಗೊತ್ತಾಗಿರಬಹುದು. ಪರಸ್ತ್ರೀಲಂಪಟನಾದ ಆ ದುಷ್ಟಕಾಸಿಮನ ಶಾಸನಮಾಡಲಿಕ್ಕೆ ಆ ಕನ್ನಡವೀರನು ಬದ್ಧಕಂಕಣನಾಗಿದ್ದನು. ಆ ನೀಚನನ್ನು ಗೊತ್ತಿಗೆಹಚ್ಚುವದೊಂದು ತನ್ನ ಆಯುಷ್ಯದಲ್ಲಿ ಮಾಡತಕ್ಕ ಪವಿತ್ರ ಕಾರ್ಯವೆಂದು ಆತನು ತಿಳಿದಿದ್ದನು. ತನ್ನ ಒಡೆಯನಾದ ಹುಕ್ಕದೊರೆಯ ತಂದೆಯ ಅಪಮಾನಕಾರಕ ಕೊಲೆಗೆ ಸಿದ್ಧನಾಗಿದ್ದ ಕಾಸಿಮನ ಗಂಟಲನ್ನು ಈಗಲೇ ಹೋಗಿ ಹಿಚುಕಲಾ, ಅನ್ನುವಹಾಗೆ ಆತನಿಗೆ ಆಗಿತ್ತು, ಸಂತಾಪದಿಂದ ಅವನ ಮೋರೆಯು ಕೆಂಪಾಯಿತು; ಸರ್ವಾಂಗವು ಕಂಪಿಸತೊಡಗಿತು. ಆ ಸ್ವಾಮಿನಿಷ್ಠನು ಅತ್ಯಂತವಾದ ಮನಸ್ಸಿನ ಉದ್ವೇಗದಿಂದ ಬುಕ್ಕನ ಕಡೆಗೆ ನೋಡಲು, ಆ ವೀರರೂ ಕಾಸಿಮನ ದುರ್ವೃತ್ತಕ್ಕಾಗಿ ಸಂತಾಪ ಗೊಂಡಿದ್ದನು. ಆತನು ಸಂತಾಪದಿಂದ ಕಂಪಣ್ಣನ ಬಳಿಗೆ ಹೋಗುವದಕ್ಕಾಗಿ ಏಳುತ್ತಿರಲು, ಕಂಪಣ್ಣನೇ ಅಲ್ಲಿಗೆ ಬಂದನು. ಆತನನ್ನು ನೋಡಿ ರಹಿಮಾನನು ಆದರದಿಂದ ಎದ್ದು ಸಲಾಮು ಮಾಡಿ, ತಾನು ಬಂದ ಕಾರಣವನ್ನು ಸ್ವಲ್ಪದರಲ್ಲಿ ನಿವೇದಿಸಿದನು. ಅದನ್ನು ಕೇಳಿ ಕಂಪಣ್ಣನು ಸಂತಾಪ ಗೊಂಡರೂ ತನ್ನ ಹಿರಿಯತನಕ್ಕೆ ಒಪ್ಪುವಂತೆ ತನ್ನ ಸಂತಾಪವನ್ನು ನುಂಗಿಕೊಂಡು ಗಾಂಭೀರ್ಯದಿಂದ ಬುಕ್ಕನಿಗೆ—''ತಮ್ಮಾ ಸುಮ್ಮನೆ ಸಂತಾಪಗೊಳ್ಳುವದರಿಂದ ಪ್ರಯೋಜನ ವೇನು? ನಮ್ಮ ತಂದೆಯವರ ಮಿತ್ರರಾದ ಬಖತ್ಯಾರರ ಆಲೋಚನೆಯಂತೆ ನಾವು ನಡೆದು ಕೊಳ್ಳೋಣ, ಅವರ ಆಶ್ರಯದಿಂದಲೇ ಈ ವರೆಗೆ ನಾವು ತಘಲಕ ಬಾದಶಹನ ಗಂಟಲಲ್ಲಿ ಇಳಿಯದೆ ಇರುವೆವು. ಅಂಥ ಪ್ರಸಂಗವೇ ಬಂದರೆ ನಾವು ಮಾಡಬಾರದ ಸಾಹಸ ಮಾಡಿ ತಂದೆಯನ್ನು ಬಂಧಮುಕ್ತನಾಗಿ ಮಾಡೋಣ! ನಾವು ಪಿತೃಬಂಧ ವಿಮೋಚನಕ್ಕಾಗಿಯೆ ಈ ದೇಹವನ್ನು ಇಟ್ಟಿರುವದರಿಂದ, ಅದನ್ನು ಸುಮ್ಮನೆ ಸಂತಾಪದಿಂದ ಕೊರಗಿಸುವಲ್ಲಿ ಲಾಭವೇನು? ಮಾಡಲಿ, ಕಾಸಿಮನು ಬೇಕಾದಂಥ ದುರಾಲೋಚನೆ ಮಾಡಲಿ. ಸಂಗಮ ಭೂಪತಿಯ ಹೊಟ್ಟೆಯಲ್ಲಿ ಪಂಚಪಾಂಡವರಂತೆ ನಾವು ಐವರು ಹುಟ್ಟಿರುವದು ವ್ಯರ್ಥವಾಗಬಹುದೇ? ನಮ್ಮ ಭುಜಗಳ ಅಮೋಘ ಬಲವು ನಷ್ಟವಾಗಿರುವದೇ? ನಮ್ಮ ವೀರರ ಪರಿವಾರದ ಶೌರ್ಯ– ಸಾಹಸಗಳು ವ್ಯರ್ಥವಾದವುಗಳೇ? ನಮ್ಮ ಸನ್ಮಾನನಿಯ ಬಖತ್ಯಾರರ ಬುದ್ಧಿ ವೈಭವವು ಕುಗ್ಗಿರುವದೇ? ಈ ರಹಿಮಾನಖಾನ–ಅಬ್ದುಲ ಖಾನರಂಥ ದೋಸ್ತರ ದೋಸ್ತಿಯು ಶಿಥಿಲವಾಗಿ ರುವದೆ? ನಮ್ಮಲ್ಲಿ ಯಾತರ ಕೊರತೆಯಿದೆ? ಮಲ್ಲಸರ್ಜನನಂಥ ವೀರರ ಸಂಗ್ರಹವು ನಮ್ಮಲ್ಲಿ ಹೊಸದಾಗಿ ಆಗಹತ್ತಿದೆ. ಬೇಗನೆ ನಾವು ಹುಕ್ಕದೊರೆಯನ್ನು ಕೂಡಿಕೊಳ್ಳುವ ಸಂಭವವಿದೆ. ಅಂಥ ಪ್ರಸಂಗಬಂದರೆ ಇಂದೇ ಕಂಪಲಿಯ ಕೋಟೆಯನ್ನು ವಶಮಾಡಿಕೊಂಡು ಕಾಸಿಮನನ್ನು ಗೊತ್ತಿಗೆಹಚ್ಚುವಷ್ಟು ಬಲವು ನಮ್ಮಲ್ಲಿದೆ. ಆದಕ್ಕೆ ಬಖತ್ಯಾರರ ಮಂತ್ರಾಲೋಚನೆಯು ಮಾತ್ರ ಜೋಡಾಗಬೇಕು; ಅಂದಬಳಿಕ ವ್ಯರ್ಥ ಚಿಂತಿಸುವದೇಕೆ? ನಾವು ಜಾಗರೂಕರಾಗಿದ್ದು,

ಬಖುತ್ಯಾರರವರು ತೋರಿಸಿದ ಮಾರ್ಗದಿಂದ ಹೋದರಾಯಿತು. ಏಳು, ನಮ್ಮ ದೋಸ್ತರು ದಣಿದುಬಂದಿರುತ್ತಾರೆ. ಮೊದಲು ಅವರ ಯೋಗಕ್ಷೇಮವನ್ನು ವಿಚಾರಿಸೋಣ. ರಾತ್ರಿಯು ಬಹಳವಾಗಿದೆ. ನಾಳೆ ಬೆಳಗಾದಬಳಿಕ ಆಲೋಚಿಸೋಣವಂತೆ. ಖಾನಸಾಹೇಬ ಹೇಳುವದರ ಮೇಲಿಂದ ಅಷ್ಟೇನು ಚಿಂತೆ ಮಾಡುವ ಕಾರಣವಿಲ್ಲ, ಅನ್ನಲು ಬುಕ್ಕನು—''ಅಣ್ಣಾ ನೀವು ಆಡುವ ಮಾತು ಒಂದೂ ತೆಗೆದುಹಾಕತಕ್ಕವಿರುವದಿಲ್ಲ. ನಿಮ್ಮ ಆಲೋಚನೆಯಂತೆ ನಡೆಯುವದಷ್ಟು ನಮ್ಮ ಕೆಲಸವು; ಆದರೆ ಪ್ರಸಂಗದಲ್ಲಿ ಹುಕ್ಕಣ್ಣನೊಬ್ಬನಿಲ್ಲದಿದ್ದರೆ ಧರ್ಮರಾಜನಿಲ್ಲದ ಪಾಂಡವರಂತೆ ನಾವು ತೇಜೋಹೀನರಾಗುವೆವು; ಆದ್ದರಿಂದ ಬಿಟ್ಟದ್ದು ಬಿಟ್ಟು ಅಣ್ಣನ ಗೊತ್ತು ಹಚ್ಚಲಿಕ್ಕೆಬೇಕು; ಈ ಪ್ರಸಂಗದಲ್ಲಿ ತಟ್ಟನೆ ನಮ್ಮನ್ನು ಅಣ್ಣನ ಬಳಿಗೆ ಯಾರು ಕರಕೊಂಡು ಹೋದಾರು? ಎಂದು ಅತ್ಯಾತುರದಿಂದ ನುಡಿಯುತ್ತಿರಲು—''ನಾನಿದ್ದೇನೆ ದೇವರು ನಿನ್ನ ಮಗ!'' ಎಂದು ನುಡಿದ ಮಂಜುಲಧ್ವನಿಯು ಡೇರೆಯ ಬಾಗಿಕಡೆಯಿಂದ ಎಲ್ಲರ ಕರ್ಣರಂಧ್ರವನ್ನು ಪ್ರವೇಶಿಸಿತು!

## ವೀರರ ಸಂಗಮ

ಇಂಥ ಭಯಂಕರವಾದ ದೇವಿಯ ಕೊಳ್ಳದಲ್ಲಿ ಇಷ್ಟು ರಾತ್ರಿ ಇವರಾರು ಬಂದು ನಿರ್ಭಯದಿಂದ ಹೀಗೆ ನಡುವೆ ಮಾತಾಡಿದರೆಂದು ಎಲ್ಲರೂ ಬಾಗಿಲ ಕಡೆಗೆ ನೋಡುತ್ತಿರಲು, ಕೊಂಗನಾಮ ಹಚ್ಚಿಕೊಂಡಿದ್ದ ಮನೋಹರಾಕಾರದ ಒಬ್ಬ ತರುಣ ದಾಸಯ್ಯನು ಒಳಗೆಬಂದು ಬುಕ್ಕನನ್ನು ವಿನಯದಿಂದ ವಂದಿಸಿ, ಆತನನ್ನು ಕುರಿತು ಮತ್ತೆ ಮಂಜುಲ ಸ್ವರದಿಂದ—''ನಾನಿದ್ದೇನೆ ದೇವರು ನಿನ್ನ ಮಗ! ತಮ್ಮನ್ನು ಹುಕ್ಕದೊರೆಗಳ ಬಳಿಗೆ ಕರಕೊಂಡು ಹೋಗುವದಕ್ಕಾಗಿಯೇ ನಾನು ಬಂದಿದ್ದೇನೆ'' ಎಂದು ಹೇಳಿ, ದಿಟ್ಟತನದಿಂದ ಮುಂದಕ್ಕೆ ಬಂದು ನಿಂತನು. ಇಷ್ಟು ಹೊತ್ತು ಡೇರೆಯೊಳಗೆ ನಡೆದ ಎಲ್ಲ ಮಾತುಕಥೆಗಳನ್ನು ಅವನು ಯಾವ ಮಾಯೆಯಿಂದ ಕೇಳಿದ್ದನೋ ಕೇಳಿದ್ದನು. ಅದರಿಂದ ಅವನ ಮನಸ್ಸಿನ ಮೇಲೆ ವಿಲಕ್ಷಣ ಪರಿಣಾಮವಾಗಿತ್ತು, ಅವನು ಸಂತಾಪಗೊಂಡಿರುವನೆಂಬದನ್ನು ಅವನ ಮುಖ ಲಕ್ಷಣವು ಹೇಳುತ್ತಿತ್ತು, ಕಾಸಿಮನ ನೀಚತನವನ್ನು ಕೇಳಿಯಂತೂ ಅವನ ಮೈಮೇಲಿನ ಎಚ್ಚರವೇ ತಪ್ಪಿದಂತಾಗಿತ್ತು, ಈ ಪ್ರಸಂಗದಲ್ಲಿ ಏನು ಹೇಳಿದರೂ ನಾನು ಮಾಡಲಿಕ್ಕೆ ಸಿದ್ಧನಿದ್ದೇನೆಂಬ ದಮ್ಮಿನಿಂದ ಅವನು ನಿಂತಿದ್ದನು. ಅವನು ನಿಲ್ಲುವ ರೀತಿಯನ್ನು ನೋಡಿ ಬುಕ್ಕನೇ ಮೊದಲಾದವರು ದಂಗುಬಡಿದು ಕುಳಿತುಕೊಂಡಿದ್ದರು. ಅವನ ವೇಷವೇನೋ ದಾಸಯ್ಯನದಿತ್ತು; ಆದರೆ ವೇಷಕ್ಕೆ ತಕ್ಕ ದಾಸವೃತ್ತಿಯು ಮಾತ್ರ ಅವನಲ್ಲಿ ಇದ್ದಂತೆ ತೋರಲಿಲ್ಲ. ಅವನ ವಯಸ್ಸು ಮೂವತ್ತರ ಹೊರಒಳಗಿರಬಹುದು. ಅವನ ಮೈಬಣ್ಣ ಸಾದಗಪ್ಪು, ಮೈ ಹುರಿಕಟ್ಟಿನದು. ಅವನ ಮೋರೆಯಮೇಲೆ ವೀರಶ್ರೀಯು ಉಕ್ಕಿಬರುವದು. ಅವನ

ಹಣೆಯಮೇಲಿನ ಥಾಳಾದ ಬಿಳಿಯ ನಾಮವು ಸ್ಪಷ್ಟವಾಗಿ ಕಾಣುತ್ತಿತ್ತು. ಅವನು ತಲೆಗೊಂದು ಕೆಂಪು ಚೌಕವನ್ನು ಸುತ್ತಿ, ಮೈಯಲ್ಲಿ ಸೈಲಾದ ಬಿಳಿಯ ಉದ್ದಂಗಿಯನ್ನು ಹಾಕಿದ್ದನು. ಅವನು ಟೊಂಕಕ್ಕೆ ಸುತ್ತಿದ್ದ ವಸ್ತ್ರವು ಕಿರು ಮಂಜಿಯ ಬಣ್ಣದ್ದಾಗಿತ್ತು. ಕಣ್ಣುಗಳು ಅತ್ಯಂತ ತೇಜಃ ಪುಂಜ, ಮತ್ತು ಮಂದಿಯ ಮರ್ಮವನ್ನು ಭೇದಿಸುವಂಥವು, ಅವನ ಬಲ ಬಗಲೊಳಗೊಂದು ಏಕತಾರೆ, ಎಡಬಗಲೊಳಗೊಂದು ಬಿದುರಿನ ಗೋಪಾಳ ಇವು ಇದ್ದವು. ಈ ವೇಷದಿಂದ ದಾಸಯ್ಯನ ಸ್ವಭಾವಿಸಿದ್ಧ ಸೌಂದರ್ಯಕ್ಕೂ, ಅವನ ಉಕ್ಕಿಬರುವ ಪ್ರತಾಪದ ವರ್ಚಸ್ಸಿಗೂ ಒಂದು ಬಗೆಯ ಶೋಭೆಯುಂಟಾಗಿತ್ತು. ಅವನ ಚಿತ್ತಾಕರ್ಷಕ ರೂಪವನ್ನು ಎಲ್ಲರೂ ಎವೆಯಿಕ್ಕದೆ ನೋಡುತ್ತಲಿದ್ದರು. ದಾಸಯ್ಯನು ಬುಕ್ಕನ ಕಡೆಗೆ ಮೋರೆಮಾಡಿ ನಿಂತಿದ್ದರೂ, ಅಲ್ಲಿ ಕುಳಿತಿರುವವರನ್ನು ವಿಶೇಷವಾಗಿ ಈ ಇಬ್ಬರು ಮುಸಲ್ಮಾನ ವೀರರನ್ನು ಆತನು ಗಾಂಭೀರ್ಯ ದಿಂದ ನೋಡುತ್ತಿದ್ದನು. ಅಲ್ಲಿ ಅವರು ಕುಳಿತಿರುವದು ಅವನಿಗೆ ಸೋಜಿಗವಾಗಿ ತೋರಿತು. ಹಿಂದೂ ಜನರನ್ನು ಕಾಫರರೆಂದು ತಿರಸ್ಕರಿಸಿ, ಅವರನ್ನು ಕಂಡರೆ ಬೆಂಕಿಯನ್ನು ಕಾರುತ್ತಿದ್ದ ಇವರು ಇಷ್ಟುರಾತ್ರಿಯಲ್ಲಿ ಬುಕ್ಕದೊರೆಯ ಬಳಿಯಲ್ಲಿ ಕುಳಿತಿದ್ದರ ರಹಸ್ಯವು ಆತನಿಗೆ ತಿಳಿಯದಾಯಿತು. ಅವನಿಗೆ ಆ ಯವನ ವೀರರ ಗುರುತು ಮಸಮಸಕಾಗಿ ಹತ್ತಿದಹಾಗಾಗುತ್ತಿತ್ತು. ತಾನು ಇವರನ್ನು ಎಲ್ಲಿನೋಡಿರಬಹುದು? ಎಂಬ ವಿಚಾರದಲ್ಲಿ ಆತನು ಮಗ್ನನಾದನು; ಆದರೆ ಆ ಧೂರ್ತನು ತನ್ನ ಆ ವಿಚಾರ ಮಗ್ನತೆಯನ್ನು ಮಂದಿಗೆ ತಿಳಿಯಗೊಡದಂತೆ ವರ್ತಿಸುತ್ತಿದ್ದನು. ಸ್ವಲ್ಪ ಹೊತ್ತಿನಮೇಲೆ ಏನೋ ಆತನ ಮನಸ್ಸಿಗೆ ಹೊಳೆಯಲು, ಆತನು ತಲೆಯಲ್ಲಾಡಿಸಿ, ಅದನ್ನು ಮುಚ್ಚಿಕೊಳ್ಳುವದಕ್ಕಾಗಿ ಬುಕ್ಕನನ್ನು ಕುರಿತು–

ದಾಸಯ್ಯ–ಸರಿ ಸರಿ! ಬುಕ್ಕದೊರೆಗಳೇ, ನಿಮ್ಮ ತಂದೆಯವರ ಚಿಂತೆಯು ನಿಮ್ಮನ್ನು ಬಾಧಿಸುತ್ತಿರುವದು ಯೋಗ್ಯವೇ ಸರಿ. ಪಾಂಡವರಂತೆ ನೀವು ಅಯ್ವರು ಸಂಗಮರಾಜರ ಹೊಟ್ಟೆಯಲ್ಲಿ ಹುಟ್ಟಿರಲು, ಅವರು ಯವನರ ಸೆರೆಯಾಳಾಗಿ ಕಷ್ಟಪಡುತ್ತಿರುವದು ಅಪಮಾನಕಾರಕವಲ್ಲದೆ ಮತ್ತೇನು? ಆದರೆ ಗೋವಿಂದಾ, ಕಾಸಿಮನ ದುಷ್ಟತನವನ್ನು ನೆನಿಸಿದಕೂಡಲೆ ನಿನ್ನ ಮಗ ದಾಸನ ಮೈ ಚಿಲಿಚಿಲಿ ಉಕ್ಕುತ್ತದೆ! ನಡೆ, ಹೀಗೆಯೇ ಹೋಗಿ ಕಂಪಲೆಯ ಕೋಟೆಯನ್ನು ಹೊಕ್ಕು ಇದ್ದಲ್ಲಿ ಕಾಸಿಮನ ಗಂಟಲನ್ನು ಹಿಚಕೋಣ!

ದಾಸನ ಈ ಆವೇಶದ ಮಾತುಗಳನ್ನು ಕೇಳಿ ಬುಕ್ಕನು ಮತ್ತೂ ಬೆರಗಾಗಿ ದಾಸನನ್ನು ನೋಡುತ್ತ ಕುಳಿತುಕೊಂಡನು. ಏನೇನೋ ವಿಚಾರಗಳು ಆತನ ಮನಸ್ಸಿನಲ್ಲಿ ಬರತೊಡಗಿದವು. ಈತನು ನಿಜವಾಗಿ ದಾಸನಾಗಿರದೆ ರೂಪಾಚ್ಛಾದನ ಮಾಡಿಕೊಂಡು ಬಂದಿರುವ ಯಾವನೋ ಒಬ್ಬ ವೀರನು ಇರಬೇಕೆಂದು ಆತನು ತರ್ಕಿಸಿದನು. ತನ್ನ ವೈರಿಗಳ ಕಡೆಯವರಾರಾದರೂ ತನ್ನ ನೆಲೆಯರಿತುಕೊಳ್ಳುವದಕ್ಕಾಗಿ ಬಂದಿರಬಹುದೆಂಬ ಸಂಶಯವೂ ಆತನನ್ನು ಬಾಧಿಸಹತ್ತಿತ್ತು; ಆದರೆ ಆ ಸಂಶಯವು ಬಹಳ ಹೊತ್ತು ನಿಲ್ಲಲಿಲ್ಲ, ಇಂಥ ತೇಜಸ್ವಿಯಾದ ಹಿಂದೂ ತರುಣನು ಸ್ವಜನಘಾತಕ್ಕೆ ಮುಂದುವರಿಯುವದು ಅಸಂಭವವೆಂದು ಅವನು ಭಾವಿಸಿದನು. ಆತನು ಬಹಳ ಹೊತ್ತು ದಾಸಯ್ಯನನ್ನು ದಿಟ್ಟಿಸಿನೋಡಿ, ನೋಡುವ ಭರವು ತಗ್ಗಿದ ಬಳಿಕ ಆತನನ್ನು ಕುರಿತು–

ಬುಕ್ಕ–ದಾಸಯ್ಯಾ, ಇಷ್ಟು ರಾತ್ರಿ ಪಾಳಯದಲ್ಲಿ ನೀನು ಹ್ಯಾಗೆ ಬಂದೆ ? ನಿನ್ನನ್ನು ಯಾರೂ ಪ್ರತಿಬಂಧಿಸಲಿಲ್ಲವೆ?

ದಾಸಯ್ಯ–ಇಲ್ಲ ಗೋವಿಂದಾ! ನನ್ನನ್ನು ಯಾರೂ ಪ್ರತಿಬಂಧಿಸಲಿಲ್ಲ. ಮೇಲಾಗಿ ನಮ್ಮಂಥ ಭಿಕ್ಷುಕರಿಗೆ ಯಾತರ ಪ್ರತಿಬಂಧ? ನಾವೇನು! ಊರಮೇಲೆ ಊಟ, ನೀರಮೇಲೆ ಚೆಲ್ಲಾಟ! ನಮ್ಮಂಥವರನ್ನು ಯಾರು ಯಾಕೆ ಪ್ರತಿಬಂಧಿಸುವರು? ಇದರ ಮೇಲೆಯೂ ಯಾರಾದರೂ ಪ್ರತಿಬಂಧಿಸಿದರೆ ಅವರಿಗೆ ಬೇಡಿಕೊಂಡು ಕೈಮುಗಿದು ಎರಡು ಪದ ಹೇಳಿಬಿಟ್ಟರೆ ತೀರಿತು! ಅಂತಃಕರಣ ಕರಗಿ ಅವರು ನಮ್ಮನ್ನು ಸುಮ್ಮನೆ ಬಿಟ್ಟುಬಿಡುವರು.

ಬುಕ್ಕ–ಇಂಥ ಮಧ್ಯರಾತ್ರಿಯಲ್ಲಿ ಸೈನ್ಯದ ಪಾಳಯದಲ್ಲಿ ನಿನ್ನ ಭಿಕ್ಷುಕನ ಕೆಲಸವೇನು? ರಾತ್ರಿ ನಿನಗೆ ಭಿಕ್ಷೆ ಯಾರು ಹಾಕುವರು? ನೀನು ನಿಜವಾದ ಭಿಕ್ಷುಕನಿರದೆ ಭಿಕ್ಷುಕ ವೇಷಧಾರಿಯಾಗಿರುವಂತೆ ತೋರುತ್ತಿ? ಆದ್ದರಿಂದ ನಿನ್ನನ್ನು ಚೆನ್ನಾಗಿ ಪರೀಕ್ಷಿಸದೆ ಇಲ್ಲಿಂದ ಹೋಗಗೊಡುವುದಿಲ್ಲ.

ದಾಸಯ್ಯ–ಹಾಗೇ ಮಾಡಿರಿ ಗೋವಿಂದಾ! ನಾನೆಲ್ಲಿ ಬೇಡವೆನ್ನುತ್ತೇನೆ? ನಮ್ಮಂಥ ಬಡದಾಸಯ್ಯಗಳು ಮುಸಲ್ಮಾನರ ಕೈಯಲ್ಲಿ ಸಿಕ್ಕು ಸುಂತಿ ಮಾಡಿಸಿಕೊಳ್ಳುವದಕ್ಕಿಂತ ನಿಮ್ಮಂಥ ವೀರರ ಆಶ್ರಯಮಾಡಿ ದಾಸಯ್ಯಗಳಾಗಿ ಉಳಿಯುವದು ಸುರಕ್ಷಿತವು. ಇದೇ ನನಗೆ ನೆಟ್ಟಗೆ ಕಾಣುತ್ತದೆ. ಏನು ಮಾಡಬೇಕು ಗೋವಿಂದಾ! ಕನ್ನಡಿಗರಲ್ಲಿ ಮುಸಲ್ಮಾನರ ಹಾವಳಿ ಮುರಿಯು ವಂಥ ಗಟ್ಟಿಗರು ಉಳಿಯಲಿಲ್ಲ; ನಮ್ಮಂಥ ಅನಾಥರನ್ನು ರಕ್ಷಿಸುವ ಪ್ರಭುಗಳೂ ಉಳಿಯಲಿಲ್ಲ. ನೋಡಿದತ್ತ ಪುಕ್ಕತನವೇ ಸುಳಿದಾಡುತ್ತದೆ. ಯಾರೊಬ್ಬರು ತಮ್ಮ ಹಿತವನ್ನು ನೋಡತೊಡಗಿದ್ದಾರಲ್ಲದೆ, ತಮ್ಮ ದೇಶದ ಸ್ವಾತಂತ್ರ್ಯವು ಮಣ್ಣುಗೂಡುತ್ತಿರುವದರ ಅರಿವು ಒಬ್ಬರಿಗೂ ಇರುವದಿಲ್ಲ. ತನ್ನ ಹೋಳಿಗೆ ತುಪ್ಪದಲ್ಲಿ ಹ್ಯಾಗೆ ಬಿದ್ದೀತೆಂದು ಪ್ರತಿಯೊಬ್ಬನು ಎಣಿಕೆ ಹಾಕುತ್ತಿರುವನು. ಮುಸಲ್ಮಾನರ ನೆನಪಾದಕೂಡಲೆ ತಮ್ಮ ಜೀವವೂ, ದುಡ್ಡುದುಗ್ಗಾಣಿಗಳೂ ಹ್ಯಾಗೆ ಉಳಿದಾವೆಂಬ ಅಂಜಿಕೆಯಿಂದ, ತಾವು ಗಂಡಸರಾಗಿದ್ದರೂ ಹೆಂಗಸರಂತೆ ಹುದುಗಿಕೊಂಡು ನಡೆಯತೊಡಗಿದ್ದಾರೆ. ಎಂಥ ಜೀವಗಳ್ಳರಿವರು! ಗೋವಿಂದಾ, ನಮ್ಮಂಥ ಬಡ ದಾಸಯ್ಯಗಳಿಗಿರುವಷ್ಟು ಧೈರ್ಯವು ಕೂಡ ಇವರಿಗಿರುವದಿಲ್ಲ. ಆದ್ದರಿಂದಲೇ ನಮ್ಮಂಥ ಭಿಕ್ಷುಕರೂ, ಅಡಿಗೆಯ ಒಲೆ ಕಾಯತಕ್ಕ ಹೆಂಗಸರೂ, ಅಡವಿ–ಗವಿಗಳಲ್ಲಿ ಸೇರಿಕೊಂಡಿರತಕ್ಕ ಸಾಧುಸಂತರೂ, ತಪೋನಿಷ್ಠ ಬ್ರಾಹ್ಮಣರೂ ತಮ್ಮತಮ್ಮ ಕೆಲಸ ಬಿಟ್ಟು ಧರ್ಮ ಸಂರಕ್ಷಣಕ್ಕಾಗಿಯೂ, ಸ್ವಾತಂತ್ರ್ಯಸಂರಕ್ಷಣಕ್ಕಾಗಿಯೂ ಬೈಲಿಗೆ ಬಂದು ನಿಮ್ಮಂಥ ಶೂರರ ಸುತ್ತಲೂ ಈಗ ನೆರೆಯಬೇಕಾಗಿದೆ! ನಿಮ್ಮ ಸಾಲಿಗೆ ನಿಲ್ಲಬೇಕಾಗಿದೆ!

ಬುಕ್ಕ–ನಿಮ್ಮಂಥ ಭಿಕ್ಷುಕರು ನಮ್ಮ ಸಾಲಿಗೆ ನಿಂತು ಮಾಡವದೇನು? ಏಕತಾರೆಯ ಮೇಲೆ ಹಾಡುತ್ತ ಬಿಕ್ಕೆಬೇಡುವದೋ?

ದಾಸಯ್ಯ–ಹೌದು ಗೋವಿಂದಾ! ಏಕತಾರೆಯ ಮೇಲೆ ಹಾಡುತ್ತ ಬಿಕ್ಕೆ ಬೇಡುವದಂತೂ ನಮ್ಮ ಕುಲಕಸಬು! ದೇಶಕಾರ್ಯದಲ್ಲಿ ನಮ್ಮ ಆ ಕಸಬನ್ನೇ ನಾವು ಬ್ರಹ್ಮಾಸ್ತ್ರದಂತೆ

ಉಪಯೋಗಿಸುವೆವು; ಯಾಕಂದರೆ ನಾವು ಈ ಏಕತಾರೆಯ ಇಂಪಾದ ದನಿಗೆ ದನಿಗೂಡಿಸಿ ಹಾಡಹತ್ತಿದರೆ, ಆ ಹಾಡು ಪ್ರಸಂಗದಲ್ಲಿ ಕೇಳುವವರ ಕಣ್ಣೀರುಗಳನ್ನುದುರಿಸೀತು; ವೀರರ ಮೈ ಉಬ್ಬಿಸಿ ಅವರ ಖಡ್ಗಗಳನ್ನು ಒರೆಗಳೊಳಗಿಂದ ಹಿರಿಸೀತು; ಕಠಿಣ ಹೃದಯದ ಕರಳುಗಳನ್ನು ಕರಗಿಸೀತು; ಬಹಳ ಹೇಳುವದರಿಂದೇನು? ಪ್ರಸಂಗದಲ್ಲಿ ಕನ್ನಡಿಗರ ಹಾಳು ಹೇಡಿತನವನ್ನು ಹೋಗಲಾಡಿಸಿ ಸ್ವದೇಶೋದ್ಧಾರಕ್ಕಾಗಿ ಅವರನ್ನು ಉರಿಯಲ್ಲಾದರೂ ಹಾರಿಸೀತು! ಬುದ್ಧೀ, ದೇಶೋದ್ಧಾರದ ಕಾರ್ಯವು ಬರಿಯ ಶೂರರಿಂದಾಗಲಿ, ಮುತ್ಸದ್ದಿಗಳಿಂದಾಗಿ ಆಗುತ್ತದೆಂದು ನಮ್ಮ ಗುರುಗಳು ಹೇಳಿರುವದಿಲ್ಲ, ಬರಿಯ ಗಂಡಸರಿಂದಲೇ ಆಗುತ್ತದೆಂತಲೂ ಅವರು ಹೇಳಿರುವದಿಲ್ಲ, ರಾಜ್ಯದೊಳಗಿನ ಬೇರೆ ಬೇರೆ ಕಸಬುದಾರರು, ಬೇರೆ ಬೇರೆ ಉದ್ಯೋಗ ದವರು, ಸುಖವಸತಿಯವರಾದ ಗಂಡಸರು, ಹೆಂಗಸರು, ಹುಡುಗರು, ಮುದುಕರು, ಬಹಳವೇಕೆ ರೋಗಿಗಳು ಕೂಡ ದೇಶೋದ್ಧಾರಕ್ಕಾಗಿ ಹೆಣಗಬೇಕಾಗುವದಂತೆ! ಪ್ರತಿಯೊಬ್ಬರು ತಮ್ಮ ಉದ್ಧಾರವನ್ನು ತಾವೇ ಮಾಡಿಕೊಳ್ಳಬೇಕಾಗುವದು. ನಿಜವಾದ ದೇಶೋದ್ಧಾರದ ಜೀವಾಳವು, ಸ್ವಾರ್ಥ ಪರಿತ್ಯಾಗಪೂರ್ವಕವಾದ ಪರಹಿತದಕ್ಷತೆಯಲ್ಲಿರುತ್ತದೆಂದು ನಮ್ಮ ಗುರುಗಳು ಹೇಳಿರುವರು.

ಬುಕ್ಕ (ಆಶ್ಚರ್ಯದಿಂದ)–ದಾಸಯ್ಯಾ, ನಿನ್ನ ಗಂಭೀರ ಭಾಷಣವು ನನಗೆ ತಿಳಿಯಲೊಲ್ಲದು ಬಿಡು!

ದಾಸಯ್ಯ–ದೇವರು, ನಮ್ಮ ಗುರುಗಳ ಬೋಧವು ನಮಗೂ ಮೊದಲು ತಿಳಿಯಲಿಲ್ಲ, ಅವರು ಸಾಕ್ಷಿಕೊಟ್ಟು ಒಡೆದುಹೇಳಿದಾಗ ತಿಳಿಯಿತು.

ಬುಕ್ಕ (ಆತುರದಿಂದ)–ನಿಮ್ಮ ಗುರುಗಳು ಯಾವ ಸಾಕ್ಷಿಕೊಟ್ಟು ಒಡೆದುಹೇಳಿದರು, ಬೇಗನೆ ಹೇಳು ನೋಡೋಣ?

ದಾಸಯ್ಯ–ಬುದ್ಧೀ, ಹೇಳುವೆನು ಕೇಳಬೇಕು. ಈಗ ಸುಮಾರು ಆರುನೂರು ಏಳುನೂರು ವರ್ಷಗಳ ಹಿಂದೆ, ಅಂದರೆ 712ನೇ ಇಸವಿಯಲ್ಲಿ ಸಿಂಧಪ್ರಾಂತದೊಳಗೆ ಬ್ರಾಹ್ಮಣಜಾತಿಯ ಚಚನೆಂಬ ಕರ್ತೃತ್ವಶಾಲಿಯಾದ ಅರಸನು ಆಗಿಹೋದನಂತೆ. ಆತನ ಮಗನಾದ ದಾದರನೆಂಬ ಬಲಾಢ್ಯ ಅರಸನು ರಾಜ್ಯವಾಳುತ್ತಿರುವಾಗ, ಮಹಮ್ಮದ ಕಾಸಿಮನೆಂಬ ಅರಬಜಾತಿಯ ಶೂರ ಘನವಂತನು ಸಿಂಧಪ್ರಾಂತದಮೇಲೆ ದಂಡೆತ್ತಿಬಂದನಂತೆ; ಈ ಮೋದಲೇ ಶೂರರಾದ ಅರಬರು ಕೆಲವು ಸಾರೆ ಸಿಂಧಪ್ರಾಂತದಮೇಲೆ ದಂಡೆತ್ತಿಬಂದದಿದ್ದರೂ, ಅವರನ್ನೆಲ್ಲ ಹಿಂದೂಜನರು ಒಕ್ಕಟ್ಟಿನಿಂದ ಕಾದಿ ಓಡಿಸಿಬಿಟ್ಟು ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಂಡರಂತೆ; ಆದರೆ ಹಾಗೆ ಕಾಸಿಮನನ್ನು ಓಡಿಸುವದು ದಾದರನಂಥ ಬಲಾಢ್ಯ ಶೂರ ಅರಸನಿಗೂ ಆಗ ಆಗಲಿಲ್ಲ; ಯಾಕಂದರೆ ಆಗಿನ ಬೌದ್ಧ ಪ್ರಜೆಗಳೂ, ವ್ಯಾಪಾರಸ್ಥರೂ, ಭಿಕ್ಷುಕರೂ, ಭಿಕ್ಷುಣಿಯರೂ ತಮ್ಮ ಜೀವಕ್ಕೂ ದ್ರವ್ಯಹಾನಿಗೂ ಅಂಜಿ ಸ್ವದೇಶದ್ರೋಹದಿಂದ ಕಾಸಿಮನಿಗೆ ಅನುಕೂಲವಾದರಂತೆ! ಅವರೆಲ್ಲರು ಹೇಡಿತನದಿಂದ ಕಡ್ಡಿಯನ್ನು ಕಚ್ಚಿ ಕಾಸಿಮನಿಗೆ ಶರಣುಹೋದರಂತೆ! ಇಂಥ ಪ್ರಸಂಗದಲ್ಲಿ ದಾದರನೂ; ಆತನ ಶೂರ ಮಗನಾದ ಜಯಸಿಂಹನೂ, ಅವನ ಶೂರ ಸೈನಿಕರೂ

ಎಷ್ಟು ಶೌರ್ಯದಿಂದ ಕಾದಿ ಏನುಮಾಡಬೇಕು? ಅದರಂತೆ ದಾದರನ ಮುತ್ಸದ್ದಿಗಳೂ ಎಂಥ ರಾಜತಂತ್ರಗಳನ್ನು ಒಡ್ಡಿ ಏನು ಲಾಭ ಪಡೆಯಬೇಕು? ಕಡೆಗೆ ದಾದರನ ರಾಜ್ಯದ ಪ್ರಜೆಗಳ ದೇಶದ್ರೋಹದ ಆಚರಣೆಯಿಂದ ಆ ವೀರರ ಸ್ವದೇಶೋದ್ಧಾರದ ಪ್ರಯತ್ನವೆಲ್ಲ ವ್ಯರ್ಥವಾಗಿ ಅವರೊಡನೆ ಸಿಂಧಪ್ರಾಂತದ ಸ್ವಾತಂತ್ರ್ಯವೂ ನಷ್ಟವಾಗಿ ಹೋಗಿ ಅಲ್ಲಿ ಅರಬರ ಅಧಿಕಾರವು ಪ್ರಸ್ಥಾಪಿತವಾಯಿತಂತೆ! ಆದ್ದರಿಂದ ಬುದ್ಧಿ, ದೇಶೋದ್ಧಾರದ ಕಾರ್ಯಕ್ಕಾಗಿ ದೇಶದ ಜನರೆಲ್ಲ ಟೊಂಕಕಟ್ಟಬೇಕಾಗುವದು; ಯಾಕಂದರೆ ದೇಶೋದ್ಧಾರವೆಂದರೆ ದೇಶದೊಳಗಿನ ಜನರ ಉದ್ಧಾರವು. ಹಾಗೆ ದೇಶದ ಜನರೆಲ್ಲ ಉದ್ಧೃತರಾಗದೆ, ಕೆಲವೊಂದು ಜಾತಿಯವರು, ಅಥವಾ ಪಂಗಡದವರು ಉದ್ಧೃತರಾದರೆ, ಅಥವಾ ಒಬ್ಬ ಅರಸನ ಆಳಿಕೆ ಹೋಗಿ ಮತ್ತೊಬ್ಬ ಅರಸನ ಆಳಿಕೆಯುಂಟಾದರೆ, ಬಹಳವೇಳೆ, ಈಗ ಮುಸಲ್ಮಾನರನ್ನು ಓಡಿಸಿ ಯಾವನೊಬ್ಬ ಹಿಂದೂರಾಜನು ಈ ಕರ್ನಾಟಕದಲ್ಲಿ ತನ್ನ ರಾಜ್ಯವನ್ನು ಸ್ಥಾಪಿಸಿದರೆ ಅಷ್ಟರಿಂದ ಕರ್ನಾಟಕದ ಉದ್ಧಾರವಾಯಿತೆಂದು ಹೇಳಲಾಗುವದಿಲ್ಲ. ದೇಶೋದ್ಧಾರವೆಂದರೆ ದೇಶದೊಳಗಿನ ಪ್ರತಿಯೊಬ್ಬ ವ್ಯಕ್ತಿಯು ಸ್ವಾರ್ಥತ್ಯಾಗಪೂರ್ವಕವಾಗಿ ಪರಹಿತದಕ್ಷರಾಗಿರುವದು! ಬುದ್ಧಿ, ಈಗ ಸ್ವಾರ್ಥ ಪರಾಯಣರಾದ ಕನ್ನಡಿಗರು ಪರಸ್ಪರ ದ್ವೇಷಾಸೂಯಪರರಾಗಿ ಒಬ್ಬರ ಕುತ್ತಿಗೆಯನ್ನೊಬ್ಬರು ಹಿಚುಕಲಿಕ್ಕೆ ನಿಂತಿರಲು, ಅವರ ಉದ್ಧಾರವನ್ನು ಮನುಷ್ಯರಂತು ಇರಲಿ, ಅದಾವ ದೇವರು ಮಾಡುವನು? ಆದ್ದರಿಂದ ಬುಕ್ಕದೊರೆಯೇ, ನೀನು ಏನಾದರೂ ಕಸರತ್ತು ಮಾಡುವ ಹಾಗಿದ್ದರೆ, ನಮ್ಮಲ್ಲಿ ಮನೆಮಾಡಿಕೊಂಡಿರುವ ಈ ಕುತ್ತಿಗೆಕೊಯ್ಯುತನವನ್ನು ಹೋಗಲಾಡಿಸಿ, ಇವರು ಉಚ್ಚರು, ಇವರು ನೀಚರು ಎಂಬ ಭೇದವನ್ನು ಎಣಿಸದೆ ನಮ್ಮೆಲ್ಲರ ಮನಸ್ಸನ್ನು ನಿನ್ನ ಕಡೆಗೆ ಎಳೆದುಕೊಂಡು ನಮ್ಮನ್ನು ತಕ್ಕ ಹಾದಿಗೆ ಹಚ್ಚು. ಇವು ಕುಂಟದಾಸನ ಮಾತುಗಳೆಂದು ಉದಾಸೀನ ಮಾಡಬೇಡ. ನನ್ನ ಶ್ರೇಷ್ಠ ಗುರುವಿನ ಕಡೆಗೆ ಲಕ್ಷಗೊಡು. ದೇಶದೊಳಗಿನ ಪ್ರತಿಯೊಬ್ಬ ವ್ಯಕ್ತಿಯು ತನ್ನ ಕರ್ತವ್ಯವನ್ನು ಕೇವಲ ಅದರ ಉತ್ಕೃಷ್ಟತೆಗಾಗಿ ಮಾಡುವದೇ ದೇಶೋದ್ಧಾರಮಾಡುವ ಸರಳಮಾರ್ಗವೆಂದು ನಮ್ಮ ಗುರುವು ಹೇಳಿದ್ದಾನೆ. ಈಗ ಸಾಧಾರಣವಾಗಿ ಪ್ರತಿಯೊಬ್ಬ ಕನ್ನಡಿಗನು ನೀಚ ಸ್ವಾರ್ಥಕ್ಕಾಗಿ ನಿರ್ವಾಹವಿಲ್ಲದೆ ಕರ್ತವ್ಯವನ್ನು ಕೈಕೊಂಡು, ಅದರಲ್ಲಿ ಆದಷ್ಟು ಮೈ ಉಳಿಸಿಕೊಳ್ಳಲಿಕ್ಕೆ ಯತ್ನಿಸುತ್ತಿರುವನು. ಕಡಿಮೆ ದಾವತಿಯಾಗಿ ಹೆಚ್ಚು ಪ್ರಯೋಜನವು ಹ್ಯಾಗಾದೀತೆಂಬದರ ಕಡೆಗೇ ಅವನ ಲಕ್ಷವಿರುವದು. ಮುಖ್ಯ, ತಮಗೆ ಲಾಭವಾದರಾಯಿತು, ಮುಂದಿ ಹಾಳಾದ ಭಾಗ್ಯವೇನೆಂಬ ವಿಚಾರದಲ್ಲಿ ಜನರಿರುವರು! ಹೀಗೆ ಕೇವಲ ಸ್ವಾರ್ಥಕ್ಕೋಸ್ಕರ ಕರ್ತವ್ಯ ಮಾಡುವದು ಹೋಗಿ ಕರ್ತವ್ಯಕ್ಕೋಸ್ಕರ ಕರ್ತವ್ಯಮಾಡುವದರ ಕಡೆಗೇ ದೇಶದ ಜನರ ಒಲವು ಆದಮಾನದಿಂದ ದೇಶೋದ್ಧಾರವಾಗುವದೆಂದು ನಮ್ಮ ಗುರುವು ಹೇಳಿರುವನು. ದೇವರು, ಗೋವಿಂದಾ, ಈ ದಾಸನನ್ನು ನಿರಾಕರಿಸಬೇಡಿರಿ. ಇವನ ವಿಷಯವಾಗಿ ಅವಿಶ್ವಾಸಪಡ ಬೇಡಿರಿ. ನಿಮಗೆ ನಮ್ಮ ಸದ್ಗುರುವಿನ ದರ್ಶನವನ್ನು ಮಾಡಿಸುವೆನು; ನಿಮ್ಮ ಅಣ್ಣಂದಿರಾದ ಹುಕ್ಕ ದೊರೆಗಳ ದರ್ಶನವನ್ನೂ ಮಾಡಿಸುವೆನು.

ಈ ಮೇರೆಗೆ ದಾಸಯ್ಯನು ಆವೇಶದಿಂದ ನುಡಿದು ಸುಮ್ಮನಾಗಲು, ಬುಕ್ಕನೇ ಮೊದಲಾದವರು ಬೆರಗಾಗಿ ಸುಮ್ಮನೆ ಕುಳಿತುಕೊಂಡರು, ಹೀಗೆ ಮಾತಾಡುವ ಯೋಗ್ಯತೆಯು ಈತನಲ್ಲಿರುತ್ತದೆಂಬದನ್ನು ದಾಸಯ್ಯನ ಮುಖದ ಮೇಲಿನ ವರ್ಚಸ್ಸೇ ಹೇಳುತ್ತಿತ್ತು. ಬಾಯಿತೆರೆದು ದಾಸಯ್ಯನ ಮಾತು ಕೇಳುತ್ತಿದ್ದ ಹತ್ಯಾರ ಬಹದ್ದರರಾದ ರಹಿಮಾನಖಾನನೂ, ಅಬ್ದುಲಖಾನನೂ ದಾಸಯ್ಯನ ಮಾತು ಮುಗಿದರೂ ತೆರೆದ ಬಾಯಿ ಮುಚ್ಚಿದ್ದಿಲ್ಲ. ಹೀಗೆ ಜನರೆಲ್ಲ ತನ್ನನ್ನು ಬೆರಗಾಗಿ ನೋಡುತ್ತ ಸ್ತಬ್ಧವಾಗಿ ಕುಳಿತುಕೊಂಡಿರಲು, ದಾಸಯ್ಯನು ಬಗಲೊಳಗಿನ ಏಕತಾರೆಯನ್ನು ತೆಗೆದು, ಅದರ ನಾದಕ್ಕೆ ತನ್ನ ಮಂಜುಲ ಸ್ವರವನ್ನು ಕೂಡಿಸಿ ''೨ನೇ ಪುಲಕೇಶಿ, ತ್ರಿಲೋಚನ ಕದಂಬ'' ಮೊದಲಾದ ಕರ್ನಾಟಕದ ಮಹಾ ಮಹಾವೀರರ ವೀರ್ಯವನ್ನು ವ್ಯಕ್ತಗೊಳಿಸುವ ಪದ್ಯಗಳನ್ನು ಅನ್ನಹತ್ತಿದನು. ಈ ಮೊದಲೇ ಆತನ ಮಾತು ಕೇಳಿ ಮನಸ್ಸು ದಣಿಯದೆ ಇದ್ದ ಅವರಿಗೆ ಈ ಹಾವಭಾವಯುಕ್ತವಾದ ಮನೋಹರ ಗಾಯನದಿಂದ ಹೊಸ ರುಚಿಯು ಉತ್ಪನ್ನವಾಗಲು, ಅವರೆಲ್ಲರು ದಾಸಯ್ಯನ ಗಾಯನಶ್ರವಣದಲ್ಲಿ ಮಗ್ನರಾದರು; ನಿದ್ರೆ ಹಾರಿ ಅವರ ಕಣ್ಣುಗಳು ಯಾವಾಗೊ ನಿಚ್ಚಳವಾಗಿಹೋಗಿದ್ದವು. ಪದ್ಯದ ಅರ್ಥವು ತಿಳಿಯದಿದ್ದರೂ, ಗಾಯನದ ಮಾಧುರ್ಯಕ್ಕೂ, ಹಾವಭಾವಗಳಿಗೂ ಮೆಚ್ಚಿ–''ಕ್ಯಾಬಾತ್! ಕ್ಯಾಬಾತ್! ಬಹುತ್ ಅಚ್ಛಾ! ಬಹುತ್ ಅಚ್ಛಾ !!'' ಎಂದು ಆನಂದೋದ್ಗಾರಗಳು ನಮ್ಮ ಮುಸಲ್ಮಾನ ವೀರರ ಮುಖದಿಂದ ಹೊರಡಹತ್ತಿದವು. ಪದ್ಯಗಳ ಅರ್ಥವು ತಿಳಿಯುತ್ತಿದ್ದ ಕನ್ನಡಿಗರ ಮೈಮೇಲಂತೂ ಎಚ್ಚರವೇ ಉಳಿಯಲಿಲ್ಲ! ಹೀಗೆ ದಾಸಯ್ಯನು ಮೂರು ಪದಗಳನ್ನು ಹೇಳಿ ಸುಮ್ಮನಾಗಿ ಏಕತಾರೆಯನ್ನು ಪುನಃ ಬಗಲಿಗೆ ಹಾಕಿ—''ದೇವರೂ, ಗೋವಿಂದಾ, ನಿಮಗೆ ನಿದ್ರೆಗೇಡಾಯಿತು. ನಮ್ಮ ದಾಸರ ಪದಗಳು– ''ದುಡ್ಡು ಕೊಡುತ್ತೇನೆ ಹಾಡು ದಾಸಯ್ಯಾ, ಎರಡು ದುಡ್ಡು ಕೊಡುತ್ತೇನೆ ಬಿಡು ದಾಸಯ್ಯಾ'' ಎಂಬಂತೆ ರಗಳೆಯವಾಗಿರುವವು. ಆದ್ದರಿಂದ ಈ ದಾಸನಿಗೆ ಅಪ್ಪಣೆಕೊಡಿಸಿರಿ ಗೋವಿಂದಾ! ನಿನ್ನ ಮಗನು ಎಲ್ಲಿಯಾದರೂ ಮಲಗಿಕೊಂಡು ರಾತ್ರಿ ಕಳೆದು ಬೆಳಗಾದಬಳಿಕ ಮತ್ತೆ ಚಾಕರಿಗೆ ಸಿದ್ಧನಾಗಿರುವೆನು. ದೇವರೂ, ನಾನು ನಿನ್ನ ಮಗನು, ನೀನು ನನ್ನ ತಂದೆಯು; ತಂದೆಮಕ್ಕಳಿಗೆ ಹ್ಯಾಗೆ ಜಿಟ್ಟೀತು? ಎಂದು ನುಡಿದು ಡೇರೆಯಿಂದ ಹೊರಗೆ ಹೋಗುವದಕ್ಕಾಗಿ ಹಿಂದಕ್ಕೆ ತಿರುಗುತ್ತಿರಲು, ಕಂಪಣ್ಣನು ಆತನನ್ನು ಕುರಿತು –''ದಾಸಯ್ಯಾ, ಕುಳಿತುಕೋ, ನಿಂತುಕೊಂಡು ಎಷ್ಟು ಹೊತ್ತಾಯಿತಲ್ಲ! ನಿನ್ನ ಗಂಭೀರರೂಪ, ಸುರಸಭಾಷಣ, ಮನೋಹರ ಗಾಯನ ಇವುಗಳ ಸವಿಯನ್ನು ಸವಿಯುವಾಗ ನಿನಗೆ ಕುಳಿತುಕೊಳ್ಳೆಂದು ಹೇಳುವ ಅರವು ಕೂಡ ಯಾರಿಗೂ ಉಳಿಯಲಿಲ್ಲ! ದಾಸಯ್ಯಾ, ನೀನು ನಿಜವಾಗಿ ದಾಸಯ್ಯನೇ ಇದ್ದೀಯಾ? ಏಕತಾರೆಯ ಮೇಲೆ ಪದಹೇಳಿ ಭಿಕ್ಷೆಬೇಡುವವರಲ್ಲಿಯೂ ಇಂಥ ಯೋಗ್ಯತೆ ಇರುವದೆಯೆ? ನಿನ್ನ ಗುರುವಾದರೂ ಯಾರಪ್ಪಾ? ಆತನ ದರ್ಶನವೂ, ಸಹವಾಸವೂ ನಮಗಾದೀತೇ? (ಯವನವೀರರ ಕಡೆಗೆ ತಿರುಗಿ ಉರ್ದುಭಾಷೆಯಿಂದ) ರಹಿಮಾನಸಾಹೇಬ, ನಮ್ಮ ಕನ್ನಡ ಮಾತು ನಿಮಗೆ ತಿಳಿದಿರಲಿಕ್ಕಿಲ್ಲ; ಆದರೆ ದಾಸಯ್ಯನು ಒಳ್ಳೇಯೋಗ್ಯತಾಸಂಪನ್ನನಿರುತ್ತಾನೆ. ಈತನು

ಭಿಕ್ಷೆಬೇಡುತ್ತಾ ಮನೆಮನೆ ತಿರುಗತಕ್ಕ ದಾಸಯ್ಯನು ಸರ್ವಥಾ ಅಲ್ಲ. ತಿರುಗಿ ಕೇಳಿದರೆ ಈತನು ದಾಸಯ್ಯನೇ ಅಲ್ಲ, ಹೊತ್ತುಬಿದ್ದರೆ ಈತನು ದಾಸಯ್ಯನೂ ಆದಾನು, ಬೇಕಾದದ್ದು ಆದಾನು! ಈತನು ಹೊಕ್ಕಲ್ಲಿ ಪಾರಾಗಿ ಬರತಕ್ಕವನೇ ಸರಿ !!''

ಈ ಮೇರೆಗೆ ಕಂಪಣ್ಣನು ನುಡಿಯುತ್ತಿರಲು, ರಹಿಮಾನನು ದಾಸಯ್ಯನನ್ನು ದಿಟ್ಟಿಸಿ ನೋಡಿ, ಏನೋ ನೆನಪುಮಾಡಿಕೊಳ್ಳುವವನಂತೆ ತಲೆ ತುರಿಸಿಕೊಳ್ಳುತ್ತ ಕೆಳಗೆ ಮೇಲೆ ನೋಡಹತ್ತಿದನು. ಈ ಒಂದೊಂದು ವಿಲಕ್ಷಣ ಪ್ರಕಾರವನ್ನು ನೋಡಿ ನಮ್ಮ ಮಲ್ಲಸರ್ಜನನು ಹೌಹಾರಿಹೋಗಿದ್ದನು. ಆ ವಿಲಕ್ಷಣ ಗುಹೆ, ಆ ಭಯಂಕರವಾದ ದೇವಿಯ ಕೊಳ್ಳ, ಅಲ್ಲಿದ್ದ ಆ ಬುಕ್ಕಣ್ಣನ ಗುಪ್ತದಂಡಿನಪಾಳಯ, ಆ ರಹಿಮಾನಖಾನರಂಥ ಹಿಂದೂ ದ್ವೇಷಿಗಳೊಡನೆ ಬುಕ್ಕದೊರೆಯ ಅಕೃತ್ರಿಮ ಸ್ನೇಹ, ಆ ಮಹಾ ತೇಜಸ್ವಿಯಾದ ದಾಸಯ್ಯನ ಅದ್ಭುತ ಬುದ್ಧಿ ಸಾಮರ್ಥ್ಯ ಇವನ್ನು ನೋಡಿ, ಆ ಸರಳಹೃದಯದ ಕುರುಬನು ಮುಂಗಾಣದೆ ಕುಳಿತಿದ್ದನು. ಅತ್ತ ದಾಸಯ್ಯನೂ ರಹಿಮಾನಖಾನನನ್ನು ಸಂಕೋಚವೃತ್ತಿಯಿಂದ ನೋಡಹತ್ತಿದನು. ಆಗ ಆ ಯವನ ವೀರನು ಕಂಪಣ್ಣನನ್ನು ಕುರಿತು– ''ಕಂಪದೊರೆಯೇ, ಈ ದಾಸಯ್ಯನನ್ನು ನಾನು ಎಲ್ಲಿಯೋ ನೋಡಿದಹಾಗೆ ಕಾಣುತ್ತದೆ; ಆದರೆ ಎಲ್ಲಿ ನೋಡಿರುವೆನೆಂಬದರ ನೆನಪು ಆಗಲೊಲ್ಲದು. ಒಟ್ಟಿಗೆ ಈತನು ದುರ್ಲಕ್ಷಿಸತಕ್ಕ ಇಸಮು ಅಲ್ಲ, ಈತನ ರೂಪ, ಈತನ ಧ್ವನಿ, ಇವುಗಳ ಗುರುತು ನನಗೆ ಚೆನ್ನಾಗಿ ಹತ್ತುವದು'' ಎಂದು ನುಡಿದು, ಮತ್ತೆ ದಾಸಯ್ಯನನ್ನು ನೋಡಹತ್ತಿದನು. ಆಗ ದಾಸಯ್ಯನು ಆತನ ಕಣ್ಣುತಪ್ಪಿಸಿ ಡೇರೆಯನ್ನು ನೋಡುವವನಂತೆ ಮೇಲೆ ಸುತ್ತುಮುತ್ತು ನೋಡಹತ್ತಿದನು. ಆಗ ರಹಿಮಾನನು ಕಂಪಣ್ಣನಿಗೆ—''ಕಂಪಣ್ಣಾ, ಕೇಳಿರಿ. ನನ್ನನ್ನು ಈ ದಾಸಯ್ಯನು ಎಲ್ಲಿಯಾದರೂ ನೋಡಿದ್ದನೋ ಹ್ಯಾಗೆ ಕೇಳಿರಿ'' ಎಂದು ಉರ್ದುಭಾಷೆಯಿಂದ ಹೇಳಲು, ಕಂಪನು ದಾಸಯ್ಯನಿಗೆ ಕನ್ನಡದಿಂದ—''ದಾಸಯ್ಯಾ, ಈ ಖಾನ ಸಾಹೇಬರಿಗೆ ನಿನ್ನ ಗುರುತು ಹತ್ತಿದಹಾಗಾಗುತ್ತದಂತೆ. ನೀನು ಎಲ್ಲಿಯಾದರೂ ಇವರನ್ನು ನೋಡಿರುವೆಯೇನು ?'' ಎಂದು ಕೇಳಲು, ದಾಸಯ್ಯನು—''ದೇವರೂ, ನಾವು ಭಿಕ್ಷಕರು ಒತ್ತಟ್ಟಿಗೆ ಇರುವವರೆಯೆ ? ಸಿಕ್ಕಲ್ಲಿ ತಿರುಗುವವರು. ಎಲ್ಲಿಯಾದರೂ ಇವರು ನನ್ನನ್ನು ನೋಡಿದ್ದಾರು; ಆದರೆ ನನಗೆ ಇವರ ಗುರುತು ಹ್ಯಾಗೆ ಉಳಿಯಬೇಕು? ಮೊದಲೇ ಮುಸಲ್ಮಾನರನ್ನು ಕಂಡರೆ ನಮಗೆ ಅಂಜಿಕೆ. ಅದರಲ್ಲಿ ಖಾನಸಾಹೇಬರ ಈ ಉಗ್ರರೂಪ! ಅಂದ ಬಳಿಕ ಇವರನ್ನು ನೋಡುವ ಧೈರ್ಯವು ನಮ್ಮಂಥ ಪುಕ್ಕ ದಾಸಯ್ಯಗಳಿಗೆ ಎಂದಿಗೂ ಆಗುವ ಸಂಭವವಿಲ್ಲ; ಆದ್ದರಿಂದ ಇವರ ಗುರುತು ನನಗೆ ಹತ್ತುವದಿಲ್ಲ; ಆದರೆ ಗೋವಿಂದಾ, ಮನುಷ್ಯರ ಹಾಗೆ ಮನುಷ್ಯರು ಇರುವದಿಲ್ಲವೆ? ಖಾನಸಾಹೇಬರು ನನ್ನ ಹೋಲಿಕೆಯವರನ್ನು ಯಾರನ್ನಾದರೂ ನೋಡಿರಬಹುದು; ಅಥವಾ ಎಲ್ಲಿಯಾದರೂ ನಾನು ಹಾಡುತ್ತ ಬಿಕ್ಕೆ ಬೇಡುತ್ತಿರುವಾಗ ನನ್ನನ್ನೇ ಇವರು ನೋಡಿರಬಹುದು; ಆದರೆ ನನಗೆ ಮಾತ್ರ ಇವರ ಗುರುತು ಇಲ್ಲ! ಬುದ್ಧಿ! ತಘಲಕಬಾದಶಹನ ಸಂಗಡ ಬಂದಿದ್ದ ಉದ್ದುದ್ದ ಗಡ್ಡದ ಗೌರವರ್ಣದ ಬಲಾಢ್ಯ ಮುಸಲ್ಮಾನರೆಲ್ಲ ನಮಗೆ ಒಂದೇಸವನೆ ಕಾಣುತ್ತಾರೆ; ಅವರ ರೂಪದಲ್ಲಿ ಭೇದವಿದ್ದದ್ದು ನಮ್ಮ ಲಕ್ಷದಲ್ಲಿ ಉಳಿಯುವದಿಲ್ಲ'' ಎಂದು ನುಡಿದು ತನ್ನ ಬಗಲೊಳಗಿನ ಗೋಪಾಳವನ್ನೂ,

ಏಕತಾರೆಯನ್ನೂ ಕೆಳಗಿಟ್ಟು, ಟೊಂಕಕ್ಕೆ ಸುತ್ತಿದ ಸೆಲ್ಲೆಯನ್ನು ಉಚ್ಚಿ ಅವುಗಳ ಮೇಲಿರಿಸಿ ಕಂಪಣ್ಣನಿಗೆ—"ಬುದ್ಧೀ, ಈಗ ಸ್ವಲ್ಪ ಹೊರಗೆ ಕಾಲುಮಡಿದು ಬರುವೆನು" ಎಂದು ಹೇಳಿ ಮುಜುರೆಮಾಡಿ ಡೇರೆಯಿಂದ ಹೊರಟುಹೋದರು. ಆಗ ಆತನನ್ನು ಪ್ರತಿಬಂಧಿಸುವ ಬುದ್ಧಿಯು ಯಾರಿಗೂ ಆಗಲಿಲ್ಲ. ದಾಸಯ್ಯನು ನಿರಾತಂಕವಾಗಿ ಹೊರಗೆ ಹೋದನು. ಇತ್ತ ರಹಿಮಾನನು ನೆನಪುಮಾಡಿಕೊಳ್ಳುತ್ತ ಸುಮ್ಮನೆ ಕುಳಿತಿದ್ದನು. ಆತನ ಮೋರೆಯನ್ನು ನೋಡುತ್ತ ಕಂಪನೂ, ಬುಕ್ಕನೂ ಕುಳಿತುಕೊಂಡಿದ್ದರು. ನಮ್ಮ ಮಲ್ಲಣ್ಣನಿಗಂತೂ ಯಾರ ಕಡೆಗೆ ನೋಡಲಿ, ಯಾರ ಕಡೆಗೆ ಬಿಡಲಿ ಅನ್ನುವಂತಾಗಿ, ಅವನ ಕಡೆಗೊಮ್ಮೆ ಇವನ ಕಡೆಗೊಮ್ಮೆ ಹೊರಗೆ ಹೋದ ದಾಸಯ್ಯನ ಹಾದಿಯ ಕಡೆಗೊಮ್ಮೆ ನೋಡುತ್ತ ಕುಳಿತು ಕೊಂಡಿದ್ದನು. ಅಷ್ಟರಲ್ಲಿ ರಹಿಮಾನನಿಗೆ ಪಕ್ಕನೆ ನೆನಪಾಗಲು ಆತನು ಆತುರದಿಂದ—"ಕಂಪಣ್ಣಾ, ಬುಕ್ಕಣ್ಣಾ ಘಾತವಾಯಿತು! ನೋಡಿರಿ, ನೋಡಿರಿ ಮೊದಲು ದಾಸಯ್ಯನು ಎತ್ತ ಹೋದನು ನೋಡಿರಿ. ಅವನು ದಾಸಯ್ಯನಲ್ಲ, ವೀರಾಗ್ರಣಿಯಾದ ಕೃಷ್ಣನಾಯಕನು! ವರಂಗಲದ ಯುದ್ಧದಲ್ಲಿ ಕೆರಳಿದ ಕೇಸರಿಯಂತೆ ಮಲಿಕಕಾಫರನ ಸೈನ್ಯದ ಮೇಲೆ ಬಿದ್ದು ಅನ್ಯಾದೃಶ ರಣಪಾಂಡಿತ್ಯವನ್ನು ತೋರಿಸಿ, ನಮ್ಮವರನ್ನು ಸರಸರ ಸವರಿ ಮಲಿಕಕಾಫರನಂಥ ವೀರನಿಂದ ಸೈ ಅನಿಸಿಕೊಂಡ ಕೃಷ್ಣನಾಯಕನಿವನೇ! ಈತನು ವರಂಗಲದ ಅರಸನಾದ ಪ್ರತಾಪರುದ್ರದೇವನ ಮಗನು! ತೋಬಾ ತೋಬಾ!! ನನಗೆ ಮೊದಲೇ ಗೊತ್ತಾಗಿದ್ದರೆ ಆತನನ್ನು ಹೊರಗೆ ಹೋಗ ಗೊಡುತ್ತಿದ್ದಿಲ್ಲ. ಬುಕ್ಕಣ್ಣಾ, ನಮ್ಮ ಕಾರ್ಯಕ್ಕೆ ಈ ವೀರನಿಂದ ಒಳಿತಾಗಿ ಸಹಾಯವಾಗುವ ಹಾಗಿರಲು, ಕೈಗೆಸಿಕ್ಕ ಇಸಮನ್ನು ಸುಮ್ಮನೆ ಬಿಟ್ಟಹಾಗಾಯಿತಲ್ಲ! ಆ ವೀರನಿಗೆ ನಮ್ಮ ಗುರುತು ಹತ್ತಿರಲೇಬೇಕು. ನಾವಿಬ್ಬರು ಸಮರದಲ್ಲಿ ಎದುರಾಗಿ ಬಹಳಹೊತ್ತು ಕಾದಿರುವೆವು; ಆದರೆ ನಾವು ವೈರಿಗಳೆಂಬ ತಪ್ಪು ತಿಳುವಳಿಕೆಯಿಂದ ಅವನೆಲ್ಲಿ ಅಡಗಿದನೋ ತಿಳಿಯದು! ತಿರುಗಿ ಕೇಳಿದರೆ ನಮ್ಮಂಥ ವೀರಧೀರರಿಗೆ ಅಂಜಿ ಹೋಗುವವನೂ ಅವನಲ್ಲ; ನಾನು ಹೋದ ಬಳಿಕೆ ತಿರುಗಿ ನಿಮ್ಮನ್ನು ಆತನು ಕಂಡೇಕಾಣುವನು. ಕೃಷ್ಣನಾಯಕನು ಅತ್ಯಂತ ದೇಶಾಭಿಮಾನಿಯು! ತನ್ನ ದೇಶದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವದಕ್ಕಾಗಿ ಆತನು ಮಾಡಿದ ಸಾಹಸವು ಅಗಾಧವಾದದ್ದು; ಆದರೆ ಸ್ವದೇಶದ್ರೋಹಿಗಳಾದ ನಿಮ್ಮವರ ಫಿತೂರಿಯಿಂದಲೇ ಕೃಷ್ಣ ನಾಯಕನು ಗತ್ಯಂತರ ಕಾಣದೆ "ಹೊತ್ತುಬಂದಾಗ ನನ್ನ ಕೈ ತೋರಿಸುವೆನು" ಎಂದು ಹೇಳಿಯೇ ಸಮರಭೂಮಿಯಿಂದ ಜಾರಿದನು. ಆ ಚಪಲನನ್ನು ಹಿಡಿಯಲು ನಾವು ಎಷ್ಟು ಯತ್ನಿಸಿದರೂ ಅವನು ನಮ್ಮ ಕೈ ಸೇರಲಿಲ್ಲ. ಮಲಿಕಕಾಫರನಂಥ ಸಾಹಸಿಯ ಕೈಯೊಳಗಿಂದ ಹೇಳಿ ಕೇಳಿ ಪಾರಾಗಿಹೋದ ಅವನ ಯೋಗ್ಯತೆಯು ಎಂತಹದೆಂಬದರ ವಿಚಾರವನ್ನು ನೀವೇ ಮಾಡಿರಿ! ಆಗಲಿ, ಇಂದಿಲ್ಲ ನಾಳೆ ಕೃಷ್ಣನಾಯಕನ ಸಮಾಗಮವು ನಿಮ್ಮ ದ್ವಾರದಿಂದ ನಮಗೆ ಆಗೇ ಆಗುವದು; ಆದರೆ ಇಂದಿನ ಸುಸಂಧಿಯು ತಪ್ಪಿತೆಂದು ಮಾತ್ರ ವ್ಯಸನವಾಗುತ್ತದೆ! ಬುಕ್ಕಣ್ಣಾ ನಿಮ್ಮಂಥ ವೀರರನ್ನು ಗೌರವಿಸುವ ಸಂಧಿಯು ವ್ಯರ್ಥವಾದದ್ದಕ್ಕಾಗಿ ವ್ಯಸನವಾಗದೇನು ಮಾಡೀತು?" ಎಂದು ನುಡಿಯುತ್ತಿರಲು, ಒಬ್ಬ ತರುಣ ಹಿಂದೂ ವೀರನು ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ಡೇರೆಯನ್ನು ಪ್ರವೇಶಿ—"ಖಾನಸಾಹೇಬ, ಈಗ ಮಾತ್ರ ನನಗೆ ನಿಮ್ಮ

ಗುರುತು ಹತ್ತಿತು! ನಿಮ್ಮಂಥ ವೀರರನ್ನು ನಾನು ದಾಸಯ್ಯನಂಥ ಭಿಕ್ಷುಕ ವೇಷದಿಂದ ಕಾಣುವದು ನಿಮಗೆ ಅಪಮಾನಕರವಲ್ಲವೆ? ಕಂಪಣ್ಣಾ, ಆಗಲೆ ನಿನ್ನ ಮುಂದೆ ನಾನು ಸುಳ್ಳು ಆಡಿದೆನೆಂದು ನೀನು ಕೋಪಿಸಲಾಗದು, ಶೂರರು ಅಸತ್ಯಕ್ಕೆ ಹೇಸುವರೆಂಬದನ್ನು ನಾನು ಬಲ್ಲೆನು. ದಾಸಯ್ಯನ ವೇಷದಿಂದ ಈ ಯವನ ವೀರಾಗ್ರಣಿಯನ್ನು ನಾನು ಸರ್ವಥಾ ಗುರುತಿಸಿದವನಲ್ಲ. ನಮ್ಮ ಕರ್ನಾಟಕದ ಸ್ವಾತಂತ್ರ್ಯವನ್ನು ಮಣ್ಣುಗೂಡಿಸಲು ಕಾರಣವಾದ ವರಂಗಲದ ಘೋರ ಸಂಗ್ರಾಮದಲ್ಲಿ ಕ್ರೋಧಸಂತಪ್ತನಾದ ನಾನು, ಕೆಂಪಡರಿದ ಕಣ್ಣುಗಳಿಂದ ಇವರನ್ನು ನೋಡಿದ್ದೆನು. ಇವರ ಗುರುತು ನನಗಿರುತ್ತದೆಂಬದಿಷ್ಟೇ ಅಲ್ಲ, ಇವರ ಅತುಲ ಪರಾಕ್ರಮದ ಗುರುತೂ ನನಗಿರುವದು. ಬುಕ್ಕಣ್ಣಾ, ಕಂಪದೊರೆಯೇ, ನಾನು ಬರುವ ಮೊದಲು ನೀವು ಡೇರೆಯಲ್ಲಿ ಮಾತಾಡಿರುವದನ್ನೆಲ್ಲ ನಾನು ಕೇಳಿದ್ದೇನೆ. ಸತ್ಪಕ್ಷಪಾತಿಗಳೂ, ತಮ್ಮ ಸ್ವಾಮಿಯ ಭಯಂಕರವಾದ ಕೊಲೆಯ ಯೋಗದಿಂದ ಸ್ವಜನರ ಮೇಲೆ ಕೆರಳಿದವರೂ ಆದ ಈ ಯವನ ವೀರರ ಸಹಾಯದಿಂದ ಕನ್ನಡಿಗರು ನಾವು ಕಳೆದುಹೋಗಿರುವ ಸ್ವಾತಂತ್ರ್ಯವನ್ನು ಪುನಃ ನಿಶ್ಚಯವಾಗಿ ಸಂಪಾದಿಸುವೆವೆಂದು ತಿಳಿದುಕೋ! ಸ್ವಜನಾಭಿಮಾನಕ್ಕಿಂತ ಸತ್ಪಕ್ಷಾಭಿಮಾನವೇ ಶ್ರೇಷ್ಠವೆಂಬ ಸಾತ್ವಿಕ ವಿಚಾರ ಪ್ರೇರಿತರಾದ ಈ ನಮ್ಮ ಪ್ರಿಯ ಯವನ ಬಂಧುಗಳನ್ನು ಮನಃಪೂರ್ವಕವಾಗಿ ನಾನು ಅಭಿನಂದಿಸುತ್ತೇನೆ'' ಎಂದು ನುಡಿದು ಕೃಷ್ಣನಾಯಕನು ಮುಂದಕ್ಕೆ ಬರುತ್ತಿರಲು, ರಹಿಮಾನಖಾನನು ಪರಮಾದರದಿಂದಲೂ, ಪೂಜ್ಯಬುದ್ಧಿಯಿಂದಲೂ ಕೃಷ್ಣನಾಯಕನನ್ನು ಅಪ್ಪಿಕೊಂಡನು! ಆ ವೀರಶಿರೋಮಣಿಗಳ ಈ ಪವಿತ್ರವಾದ ಐಕ್ಯವನ್ನು ಗಂಗಾ ಯಮುನೆಗಳ ಪವಿತ್ರ ಸಂಗಮವೆಂದು ತಿಳಿದು, ಅದರ ದರ್ಶನಮಾತ್ರದಿಂದ ಪುನೀತರಾಗಲು ತವಕಿಸುತ್ತಿರುವವರಂತೆ ಬುಕ್ಕನೇ ಮೊದಲಾದ ವೀರರು ಎದ್ದುನಿಂತು ಮುಂದಕ್ಕೆ ಸಾಗಿ ಹೋದರು! ಆ ವೀರರನ್ನು ಕೃಷ್ಣನಾಯಕನು ಆಲಿಂಗಿಸಿದನು. ಆ ವೀರರ ಪರಸ್ಪರ ಸಂಗಮದಿಂದ ಆನಂದೋದಧಿಯು ಉಕ್ಕೇರುತ್ತಿರಲು, ಎಲ್ಲರೂ ಅದೇ ಡೇರೆಯಲ್ಲಿ ಕುಳಿತು ಆಲೋಚಿಸತೊಡಗಿದರು.

## ಕರುಳಲ್ಲಿ ಕತ್ತರಿ !

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ವೀರರ ಸಂಗಮವಾದಬಳಿಕ ರಹಿಮಾನಖಾನನು ತನ್ನ ಸಂಗಡಿಗನೊಡನೆ ದೇವಿಯ ಕೊಳ್ಳದಿಂದ ಹೊರಟು ಕಂಪಲಿಗೆ ಹೋದನು. ಅವರೆಲ್ಲರು ವೀರರು ಕೂಡಿ ಏನು ಆಲೋಚಿಸಿದರೆಂಬದನ್ನು ಹೇಳಲಿಕ್ಕೆ ಇದು ಸಮಯವಲ್ಲ; ಯಾಕಂದರೆ ಅವರ ಗುಪ್ತವಾದ ಆಲೋಚನೆಯನ್ನು ಈಗ ನಾವು ಒಡೆದುಬಿಟ್ಟರೆ ಆಕಸ್ಮಾತ್ ಅವರ ಸ್ವದೇಶೋದ್ಧಾರದ ಕಾರ್ಯಕ್ಕೆ ಹಾನಿಯೊದಗಿದ ಪ್ರಸಂಗದಲ್ಲಿ ದೇಶದ್ರೋಹದ ಪಾತಕವು ನಮ್ಮನ್ನು ತಟ್ಟಿಕೊಂಡೀತು; ಆದ್ದರಿಂದ ನಾವು ಸದ್ಯಕ್ಕೆ ಅದರ ಗೊಡವಿಗೆ ಹೋಗದೆ, ಕಂಪಲಿಯ ಕೋಟೆಯಲ್ಲಿ ದುಷ್ಟ ಕಾಸಿಮನ ಕೈಯಲ್ಲಿ ಸಿಕ್ಕು ಪರಿಪರಿಯ ತಾಪಕ್ಕೊಳಗಾಗಿರುವ ಒಬ್ಬ

ಉಪವರಳಾಗಿದ್ದ ಸುಂದರಿಯ ಯೋಗಕ್ಷೇಮದ ಕಡೆಗೆ ಹೊರಳೋಣ. ಅಗೋ ಅಲ್ಲಿ ಕಾಣುವದೇ ಕಂಪಲಿಯ ಕೋಟೆಯ ಮಧ್ಯದಲ್ಲಿರುವ ಒಳಕೋಟೆಯು. ಅದರಲ್ಲಿಯೇ ಆನೆಗುಂದಿಯ ರಾಜರು ಇರುವ ಸುಂದರವಾದ ಅರಮನೆಯು ಇರುವದು. ಆ ಅರಮನೆಯ ಮುಖ್ಯ ಭಾಗದಲ್ಲಿರುವ ರಾಣಿವಾಸದೊಳಗಿನದೊಂದು ಮಂದಿರದಲ್ಲಿ ಆ ತರುಣಿಯು ಚಿಂತಾಕ್ರಾಂತಳಾಗಿ ಕುಳಿತಿರುವಳು ನೋಡಿರಿ; ಆದರೆ ಚಿಂತೆಯ ಚಿಹ್ನೆಗಳು ಆಕೆಯ ಮುಖದಲ್ಲಿ ತೋರುವದಿಲ್ಲವೆಂದು ನೀವು ಕೇಳಬಹುದು; ಅದಕ್ಕೆ ಕಾರಣವುಂಟು. ಆ ತರುಣಿಯು ದುಷ್ಟ ಕಾಸಿಮನ ಕೈಯೊಳಗಿಂದ ಪಾರಾಗಲಿಕ್ಕೆ ಹಾಗೆ ಚಿಂತೆಯ ಲಕ್ಷಣಗಳನ್ನು ಮರೆಮಾಡಿದ್ದರೆ ನಿರ್ವಾಹವಾಗುವಹಾಗಿಲ್ಲ. ಕಾಸಿಮನು ದಿನಾಲು ಆಕೆಯ ಬಳಿಗೆ ಬರುವ ನಿಯಮ ಮಾಡಿರುವನು. ಆತನು ಬಂದಾಗೆಲ್ಲ ಆ ತರುಣಿಯು ಬಹು ಚಾತುರ್ಯದಿಂದ ನಡೆದು ಕೊಂಡು ಅವನ ಮನಸ್ಸನ್ನು ಸುಪ್ರಸನ್ನವಾಗಿಟ್ಟುಕೊಳ್ಳುತ್ತ ಬಂದಿರುವಳು. ಆ ರಾಜ ಕುಲೋತ್ಪನ್ನ ತರುಣಿಯ ಪ್ರಸಂಗಾವಧಾನವೂ, ಯುಕ್ತಿ ಪ್ರಯುಕ್ತಿಗಳೂ ಬಣ್ಣಿಸುವಂಥ ವಾಗಿರುವವು. ಆಕೆಯಲ್ಲದೆ ಮತ್ತೊಬ್ಬಳಾವಳಾದರೂ ಆಗಿದ್ದರೆ ಇಷ್ಟು ಹೊತ್ತಿಗೆ ಕಾಸಿಮನ ಬಲಾತ್ಕಾರಕ್ಕಾದರೂ ಗುರಿಯಾಗುತ್ತಿದ್ದಳು, ಇಲ್ಲವೆ ಆತ್ಮಹತ್ಯವನ್ನಾದರೂ ಮಾಡಿಕೊಳ್ಳುತ್ತಿದ್ದಳು; ಆದರೆ ಆ ತರುಣಿಯು ಇವೆರಡಕ್ಕೂ ಗುರಿಯಾಗಿರದೆ, ಅಖಂಡ ಒಂದು ತಿಂಗಳಿನಿಂದ ಕಾಸಿಮನ ಮೂಗಿಗೆ ತುಪ್ಪಹಚ್ಚಿ ಕುಳ್ಳಿರಿಸಿದ ಹಾಗೆಮಾಡಿ ಆತನನ್ನು ಕುಳ್ಳಿರಿಸಿಬಿಟ್ಟಿರುವಳು. ದಿನಾಲು ಹೊರಗೆ ಒಂದು ತಾಸು ಇರುವಾಗ ಕಾಸಿಮನು ಆ ತರುಣಿಯ ಬಳಿಗೆ ಬರುವ ನಿಯಮ ಮಾಡಿರುವನು. ಈಗ ನಿಯಮಿತ ಕಾಲವು ಸಮೀಪಿಸಿದ್ದರಿಂದ ಆ ದಿಟ್ಟಳಾದ ತರುಣಿಯು ಕೂಡ ದುಷ್ಟ ಕಾಸಿಮನೊಡನೆ ವ್ಯವಹರಿಸುವ ಇಂದಿನ ಪ್ರಸಂಗವು ಯಾವಮನೆಗೆ ಬರುವದೋ ಎಂಬ ಚಿಂತೆಯ ಅಂತರ್ದಾಹದಿಂದ ಬೇಯುತ್ತಿರುವಳು! ಹೀಗೆ ಬೇಯುತ್ತಿರುವದು ದಿನಾಲು ಆಕೆಯ ಬೆನ್ನುಹತ್ತಿರುವದರಿಂದ ಆಕೆಯ ಜೀವನವು ಅತ್ಯಂತ ಕಷ್ಟದಾಯಕವಾಗಿತ್ತು. ಪ್ರಿಯ ವಾಚಕರೇ, ಆ ತರುಣಿಯು ನಿಮ್ಮ ಪರಿಚಯದವಳಿದ್ದು, ಅಪರಿಚಿತಳಂತೆ ನಟಿಸಿ ಬರೆದು ನಿಮ್ಮನ್ನು ನಾವು ಸುಮ್ಮನೆ ಯಾಕೆ ಸಂಶಯಕ್ಕೆ ಗುರಿಮಾಡಬೇಕು? ಆದ್ದರಿಂದ ಆಕೆಯ ಹೆಸರನ್ನು ಹೇಳಿಬಿಡುವೆವು. ನಾವು ಇಷ್ಟು ಬರೆಯುವದರೊಳಗೆ ಆಕೆಯ ಹೆಸರು ನಿಮ್ಮ ಮನಸ್ಸಿನಲ್ಲಿ ಹೊಳೆದಿದ್ದರೂ ಹೊಳೆದಿರಬಹುದು. ಆ ತರುಣಿಯು ಸಾಮಾನ್ಯ ಸ್ತ್ರೀಯಲ್ಲ. ಆನೆಗುಂದಿಯ ಪ್ರಕೃತದ ಅರಸನಾದ ದೇವರಾಜನ ಮಗಳು. ಆಕೆಯ ಹೆಸರು ಪದ್ಮಿನಿಯೆಂಬದನ್ನು ನಾವು ವಾಚಕರಿಗೆ ಹೇಳಲವಶ್ಯವಿಲ್ಲ. ಹಿಂದಕ್ಕೆ ನಮ್ಮ ಹುಕ್ಕದೊರೆಯು ಹೆಗ್ಗನೆಂಬ ಹೆಸರಿನ ಕುರುಬ ವೇಷದಿಂದ ಆಕೆಯನ್ನು ಯವನರ ಕೈಯೊಳಗಿಂದ ಬಿಡಿಸಿದ್ದಾದರೂ ವಾಚಕರ ಸ್ಮರಣದಲ್ಲಿರಬಹುದು. ಪ್ರತಾಪಶಾಲಿಯಾದ ಹುಕ್ಕನಲ್ಲಿ ಆ ತರುಣಿಯ ಮನಸ್ಸು ನಟ್ಟುಹೋಗಿತ್ತು. ನಾನು ಪಾಣಿಗ್ರಹಣ ಮಾಡಿದರೆ ಈ ವೀರನ ಪಾಣಿಗ್ರಹಣವನ್ನೇ ಮಾಡಬೇಕು. ಇಲ್ಲದಿದ್ದರೆ ಆಜನ್ಮ ಬ್ರಹ್ಮಚರ್ಯದಿಂದಿರಬೇಕು, ಎಂದು ಆ ನಿರ್ಧಾರ ಸ್ವಭಾವದ ಕನ್ನಿಕೆಯು ನಿಶ್ಚಯಿಸಿದ್ದಳು. ತನ್ನ ಬಂಧ ವಿಮೋಚನಮಾಡಿದ ಆ ವೀರನು

ಕುರುಬರವನಾಗಿ ತೋರಿದರೂ ಆತನ ಮುಖಚರ್ಯದಿಂದ ಆತನು ನಿಜವಾದ ಕುರುಬನಲ್ಲೆಂದು ಆ ಜಾಣೆಯು ಭಾವಿಸಿದ್ದಳು; ಆದರೂ ಆತನ ನಿಶ್ಚಿತವಾದ ವೃತ್ತಾಂತವು ತಿಳಿಯದ್ದರಿಂದ ಆಕೆಯ ಮನಸ್ಸು ಚಿಂತಾಮಗ್ನವಾಗಿತ್ತು.

ಆ ವೀರನ ನಿಜವಾದ ವೃತ್ತಾಂತವನ್ನು ತಿಳಿದುಕೊಳ್ಳುವದಕ್ಕಾಗಿ ಪದ್ಮಿನಿಯು ಹಲವು ಯತ್ನಮಾಡಿದರೂ, ಆಕೆಗೆ ಸಮಾಧಾನಕರವಾದ ಸಂಗತಿಯು ತಿಳಿಯಲಿಲ್ಲ. ಆತನ ಹೆಸರು ''ಹೆಗ್ಗ'' ಎಂದು ಇರದೆ ''ಹುಕ್ಕ'' ಎಂದು ಇರುತ್ತದೆಂತಲೂ, ಆತನು ಯಾದವ ಕುಲೋತ್ಪನ್ನ ರಾಜವಂಶದವನೆಂತಲೂ ಹಾರಿಕೆಯ ಸುದ್ದಿಯು ಹತ್ತಿದಹಾಗೆ ಆಕೆಗೆ ಸುದ್ದಿ ಹತ್ತಿತ್ತು. ಇಷ್ಟರಿಂದ ಆಕೆಗೆ ಕೆಲಮಟ್ಟಿಗೆ ಸಮಾಧಾನವಾದಂತೆಯಾದರೂ, ವಿಶ್ವಾಸನಿಯ ಸಂಗತಿಯು ಯೋಗ್ಯ ಜನರಿಂದ ತಿಳಿಯಬೇಕೆಂದು ಆಕೆಯು ಆತುರಪಡುತ್ತಿದ್ದಳು. ಹೀಗೆ ಆಕೆಯು ತನ್ನ ಉಪಕಾರಕರ್ತೃವಿನ ಪೂರ್ವವೃತ್ತವು ತಿಳಿಯಬೇಕೆಂದು ದಿನಾಲು ವ್ರತನಿಯಮಗಳನ್ನು ಮಾಡತೊಡಗಿದಳು. ಅನಾಥರ ಯೋಗಕ್ಷೇಮವನ್ನು ವಿಚಾರಿಸತೊಡಗಿದಳು. ಬಾವಾ ಬೈರಾಗಿಗಳನ್ನೂ, ಸಾಧುಸಂತರನ್ನೂ, ಭಿಕ್ಷುಕ ಬ್ರಾಹ್ಮಣರನ್ನೂ, ಜಂಗಮರನ್ನೂ, ವಿಶೇಷವೇನು? ಪ್ರತ್ಯಕ್ಷ ತಮ್ಮ ವೈರಿಗಳೆನಿಸುವ ಮುಸಲ್ಮಾನ ಫಕೀರರನ್ನೂ ಕೂಡ ಆ ಭಾವಿಕಳು ಆದರಿಸಹತ್ತಿದಳು. ಅನ್ಯರಿಗೆ ಕೈಮುಟ್ಟಿ ಸಹಾಯಮಾಡುವ ಪ್ರಸಂಗಗಳನ್ನು ಆಕೆಯು ವ್ಯರ್ಥವಾಗಿ ಹೋಗಗೊಡುತ್ತಿದ್ದಿಲ್ಲ; ಯಾರ ಪುಣ್ಯದಿದಂಲೇ ಆಗಲಿ, ತನ್ನ ಮನಸ್ಸಿನ ಸಂಶಯನಿವಾರಣವಾದರೆ ತಾನು ಧನ್ಯಳಾದೇನೆಂದು ಆಕೆಯು ಎದುರುನೋಡುತ್ತಿದ್ದಳು. ಮನುಷ್ಯನಿಗೆ ಬಡಿದ ಭಕ್ತಿಯು ಹುಟ್ಟುವುದೇ ಬಹಳ. ಸಂಕಟ ಬಂದಾಗ ವೆಂಕಟರಮಣನೆಂಬ ಗಾದೆಯು ಇದೇ ಮಾತನ್ನು ಸೂಚಿಸುತ್ತದೆ; ಆದರೆ ಪದ್ಮಿನಿಯು ಇಂಥ ಪಾಮರಭಕ್ತಿಯ ಸಾಮಾನ್ಯ ಮನುಷ್ಯರೊಳಗಿನಾಕೆ ಇದ್ದಿಲ್ಲ. ಜನ್ಮತಃ ಆಕೆಯು ಭಾವಿಕಳು. ದೇವಬ್ರಾಹ್ಮಣರಲ್ಲಿ ಆಕೆಯ ವಿಶ್ವಾಸ ಬಹಳ. ಬಡ ಬಗ್ಗರಲ್ಲಿ ಆಕೆಯ ದಯೆಯು ಹೆಚ್ಚು. ಸಾಧುಸಂತರನ್ನು ಕಂಡರೆ ಆಕೆಯ ನಯಭಯಯುಕ್ತವಾದ ಭಕ್ತಿಯು ತಟ್ಟನೆ ಪ್ರಕಟವಾಗುವದು. ದೇವಸ್ಥಾನಗಳಲ್ಲಿ ಮೂರ್ತಿಯ ದರ್ಶನವಾದಾಗ, ಅಥವಾ ಅರಮನೆಯ ದೇವಗೃಹದಲ್ಲಿಯ ಮೂರ್ತಿಗಳ ದರ್ಶನವಾದಾಗ, ಆಕೆಯ ಭಕ್ತಿಯು ಉಕ್ಕೇರಲು, ಆಯಾ ದೇವತೆಗಳ ಮಹಿಮೆಗಳ ಸ್ಮರಣವಾಗಿ ಆ ಕೋಮಲಹೃದಯದ ಭಾವಿಕಳ ದೇಹವು ರೋಮಾಂಚಿತವಾಗುತ್ತಿತ್ತು. ಭಕ್ತಿಪರವಶದಿಂದ ಆಕೆಯ ಕಂಠಬಿಗಿದು ಆನಂದ ಬಾಷ್ಪಗಳುದುರುತ್ತಿದ್ದವು. ಪ್ರಿಯವಾಚಕರೇ, ಸರ್ವ ಜನಸಾಧಾರಣವಲ್ಲದ ಈ ಪವಿತ್ರ ಭಾವಿಕಸ್ಥಿತಿಯ ಅನುಭವವು ಈಗಿನ ನಾಸ್ತಿಕ ಕಾಲದಲ್ಲಿ ಅಪರೂಪವೆಂಬದನ್ನು ನಾವು ಬಲ್ಲೆವು; ಆದರೆ ಪದ್ಮಿನಿಯಂಥ ಸಾತ್ವಿಕಸ್ವಭಾವದ ಕುಲೀನ ಆರ್ಯಬಾಲಿಕೆಯರಿಗೆ ಈ ಸ್ಥಿತಿಯ ಅನುಭವವು ಅಪರೂಪವಾದದ್ದಲ್ಲ. ಮೂಲತಃ ಇಂಥ ಭಾವಿಕಳಾಗಿದ್ದ ಪದ್ಮಿನಿಗೆ ತನ್ನ ಚಿತ್ತಹರಣ ಮಾಡಿದ ವೀರನ ವೃತ್ತಾಂತವು ಹ್ಯಾಗೆ ತಿಳಿದೀತೆಂಬ ಚಿಂತೆಯುತ್ಪನ್ನವಾದಬಳಿಕ ಕೇಳುವದೇನು? ಸ್ವಾಭಾವಿಕವಾಗಿಯೇ ದ್ರವಿಸುತ್ತಿದ್ದ ಆಕೆಯ ಭಕ್ತಿರಸಕ್ಕೆ ಚಿಂತಾಗ್ನಿಯ ಸೆಕೆ ಬಡಿದು ಅದು ಉಕ್ಕೇರತೊಡಗಿತು; ಆದ್ದರಿಂದ ಮೇಲೆ ಹೇಳಿದಂತೆ ಆಕೆಯ ಧರ್ಮಬುದ್ಧಿಯು ಹೆಚ್ಚಾಗಿ

ಆಕೆಯಿಂದ ವಿಪುಲವಾದ ಸತ್ಕೃತ್ಯಗಳಾಗತೊಡಗಿದವು. ಸಖಿಯರೊಡನೆ ಆಡುತ್ತಿದ್ದ ಆಕೆಯ ಹುಡುಗತನದ ಆಟನೋಟಗಳಡಗಿ ಆಕೆಯ ದಿನಚರ್ಯವು ದಿನದಿನಕ್ಕೆ ಗಂಭೀರವಾಗ ತೊಡಗಿತು.

ಪದ್ಮಿನಿಯ ಸ್ಥಿತಿಯು ಹೀಗಿರುವಾಗ ಅತ್ತ ಕಾಸಿಮನು ಪದ್ಮಿನಿಯ ಪ್ರಾಪ್ತಿಗಾಗಿ ಹಗಲಿರುಳು ಚಿಂತಿಸುತ್ತಿದ್ದನು. ಪದ್ಮಿನಿಯ ಧ್ಯಾನದಹೊರತು ಅನ್ಯವಿಷಯಗಳು ಅವನಿಗೆ ಬೇಸರವಾದವು. ತನ್ನ ಕೈಯಲ್ಲಿ ಸಿಕ್ಕುಹೋಗಿದ್ದ ಪದ್ಮಿನಿಯನ್ನು ಅಕಸ್ಮಾತ್ತಾಗಿ ಹೆಗ್ಗನು ಬಿಡಿಸಿದ್ದರಿಂದ ಆತನ ಆಶಾಭಂಗ ವಾದಂತಾಗಿ, ಹಸಿದವನ ಮುಂದಿನ ಎಡೆಯನ್ನು ಸೆಳೆದೊಯ್ದಂತೆ, ಪದ್ಮಿನಿಯ ವಿಷಯವಾದ ಆಸಕ್ತಿಯು ಆತನಲ್ಲಿ ಮಿತಿಮೀರಿ ಬೆಳೆಯಿತು. ಪದ್ಮಿನಿಯ ಚಿಂತೆಯಲ್ಲಿ ಆತನು ತನ್ನ ಕರ್ತವ್ಯವನ್ನು ದುರ್ಲಕ್ಷಿಸತೊಡಗಿದನು; ಆತನ ಸ್ವಾಮಿಭಕ್ತಿಯಲ್ಲಿ ಅಂತರವಾಗತೊಡಗಿತು; ತಾನು ಪರನಾಡಿನ ಪಕ್ಷಿಗಳಂತೆ ಹಿಂದುಸ್ತಾನಕ್ಕೆ ಬಂದವರಾಗಿದ್ದು, ಹಿಂದೂಜನರ ಅಪ್ರೀತಿ ಸಂಪಾದನದಿಂದ ತಮ್ಮ ರಾಜವೈಭವಗಳಿಗೆ ಕ್ಷಣ ಭಂಗುರತ್ವವು ಪ್ರಾಪ್ತವಾಗಹತ್ತಿರುವದೆಂಬದರ ಅರಿವು ಆತನಿಗೆ ಉಳಿಯಲಿಲ್ಲ. ತನ್ನ ಕೋಟೆ ಕೊತ್ತಳಗಳ ಭದ್ರತೆಗೆ ಆತನು ಲಕ್ಷಕೊಡದಾದನು; ಸೈನ್ಯದ ಸ್ಥಿತಿಗತಿ ಯನ್ನು ವಿಚಾರಿಸದಾದನು; ಅನ್ನ ಸಂಗ್ರಹವೆಷ್ಟಿರುತ್ತದೆಂಬದನ್ನು ಕಣ್ಣೆತ್ತಿ ನೋಡದಾದನು. ಹೀಗೆ ಕಾಸಿಮನು ಕೇವಲ ಸ್ತ್ರೀಲಂಪಟನಾಗಿ ತನ್ನ ನಾಶದ ಮಾರ್ಗವನ್ನು ತಾನೇ ಪ್ರಶಸ್ತಮಾಡಿಕೊಳ್ಳ ತೊಡಗಿದ್ದನು. ಪ್ರಿಯವಾಚಕರೇ, ವಿನಾಶಕಾಲವು ಒದಗಿದಾಗ ಯಾರ ಸ್ಥಿತಿಯಾದರೂ ಹೀಗೆಯೇ ಆಗುತ್ತದೆ. ಕೆಲವರು ಸ್ತ್ರೀಲಂಪಟರಾಗುವರು, ಕೆಲವರು ಅಧಿಕಾರಲಂಪಟ ರಾಗುವರು, ಕೆಲವರು ಧನಲಂಪಟರಾಗುವರು, ಕೆಲವರು ರಾಜ್ಯ ಲಂಪಟರಾಗುವರು. ಹೀಗೆ ಮನುಷ್ಯನು ತನ್ನ ಸ್ವರೂಪದ ವಿಸ್ಮೃತಿಯನ್ನು ಪಡೆದು ಬಾಹ್ಯ ವಸ್ತುಗಳಲ್ಲಿ ಲಂಪಟನಾದರೆ, ಆ ನಾಶವಂತವಾದ ಬಾಹ್ಯವಸ್ತುಗಳ ಸಹವಾಸದಿಂದ ಅವನ ಆತ್ಮಘಾತವಾಗುವದು ಆಶ್ಚರ್ಯವಲ್ಲ! ಇಂಥ ನಾಶದ ಮಾರ್ಗವನ್ನು ಸಾಮಾನ್ಯಜನರು ಹಿಡಿಯುವದಕ್ಕಿಂತ ರಾಜ್ಯಮದದಿಂದ ಮತ್ತರಾದವರು ಹಿಡಿಯುವದು ವಿಶೇಷ! ಈ ಮದಾಂಧರಿಗೆ ಅಧಿಕಾರದ ಅಮಲೇರಿ ತಮ್ಮ ಪ್ರಜಾಪಾಲನ ಕರ್ತವ್ಯದ ಅರಿವು ಉಳಿಯುವುದಿಲ್ಲ; ಪ್ರಜೆಗಳ ಮಾನದಿಂದ ತಾವು ಕಃಪದಾರ್ಥ ವೆಂಬ ತತ್ವವು ಸ್ಫುರಿಸುವದಿಲ್ಲ. ತಮ್ಮ ಚಕ್ಕಂದದ ನಡತೆಗೆ ಸ್ವಲ್ಪ ವಿಘ್ನ ಒದಗಿದರೆ ಸಾಕು, ತಾವು ಸೃಷ್ಟಿ–ಸ್ಥಿತಿ–ಲಯ ಕೃತ್ಯರ್ಗಳೆಂಬ ಅಹಂಕಾರದಿಂದ ಪ್ರಜಾಸಂಹಾರ ಮಾಡಲಿಕ್ಕೆ ಹಿಂದೆಮುಂದೆ ನೋಡುವದಿಲ್ಲ. ಪ್ರಜೆಗಳೆಂದರೆ ತಮ್ಮ ಸ್ವಚ್ಛಂದದ ಲೀಲೆಯ ಸಾಧನಗಳೆಂತಲೂ, ತಮ್ಮ ಅಧಿಕಾರಕ್ಕೊಳಪಟ್ಟ ಹೊನ್ನು, ಹೆಣ್ಣು, ಮಣ್ಣುಗಳನ್ನು ಕೇವಲ ತಮ್ಮ ಮನಸೋಕ್ತ ಉಪಭೋಗಕ್ಕಾಗಿಯೇ ಈಶ್ವರನು ಸೃಷ್ಟಿಸಿರುವನೆಂತಲೂ, ಕರ್ತಮಕರ್ತಮನ್ಯಥಾ ಕರ್ತುಂ ಸಮರ್ಥರಾದ ತಮಗೆ ಸರಿಯಾದವರಾರೂ ಇಲ್ಲೆಂತಲೂ ಇವರು ತಿಳಿದಿರುವರು; ಇಂಥ ನೀಚರ ಕಣ್ಣಿಗೆ ಪ್ರಜೆಗಳ ಕೊರತೆಗಳು ಕಾಣುವದಿಲ್ಲ. ಕಿವಿಗಳಿಗೆ ಪ್ರಜೆಗಳ ಗೋಳು ಕೇಳುವದಿಲ್ಲ. ಮನಸ್ಸಿಗೆ ಪ್ರಜಾಸಂತಾಪದ ಅರಿವು ಆಗುವದಿಲ್ಲ; ಅಂದಬಳಿಕ ಇಂಥ ನೀಚರು ಖೊಬ್ಬಟ್ಟಿನ ಬೆಂಕಿಯಂತೆ ಸುತ್ತಲೆ ಹೊತ್ತಿಸುತ್ತುವರಿದು ಬರುವ

ಪ್ರಜಾಸಂತಾಪದ ಅಗ್ನಿಯಿಂದ ಒಂದಿಲ್ಲೊಂದು ದಿನ ದಹಿಸದೆ ಯಾಕೆ ಬಿಟ್ಟಾರು? ಪ್ರಜಾಸಂತಾಪಾಗ್ನಿಯು ಎಷ್ಟು ಪ್ರಖರ ವಾದದ್ದೆಂಬದರ ಅನುಭವವು ಇಂಥ ಮದಾಂಧರಿಗೆ ವಿಚಾರದಿಂದ ಹ್ಯಾಗೆ ತಿಳಿಯಬೇಕು? ತಿಳಿದರೂ ಅಧಿಕಾರಮದದಿಂದ ಮತ್ತರಾದ ಅವರು ಅದನ್ನು ಯಾಕೆ ಲೆಕ್ಕಿಸುವರು? ಇಂಥ ಮದಾಂಧರಲ್ಲಿ ಕಾಸಿಮನು ಒಬ್ಬನಾಗಿದ್ದನು; ಆತನನ್ನು ಸ್ತ್ರೀಮೋಹವು ಸಂಪೂರ್ಣವಾಗಿ ಆವರಿಸಿಬಿಟ್ಟಿತು !

ಕಾಸಿಮನು ಪದ್ಮಿನಿಯನ್ನು ಅಪಹರಿಸುವದಕ್ಕಾಗಿ ಬಗೆಬಗೆಯ ಉಪಾಯಗಳನ್ನು ಯೋಚಿಸಿ ನಿರಾಸೆಪಟ್ಟನು. ಕಾಮಾತುರರಿಗೆ ಭಯ–ಲಜ್ಜೆಗಳಿರುವದಿಲ್ಲೆಂಬ ಮಾತು ಸುಳ್ಳಲ್ಲ. ಹೀಗೆ ಭಯ–ಲಜ್ಜೆಗಳನ್ನು ತೊರೆದದ್ದರಿಂದ ಅಂಥ ಆ ಅಸಾಧಾರಣ ವೀರನ ಯೋಗ್ಯತೆಯೂ ಕಡಮೆಯಾಗಹತ್ತಿ ಆತನ ಜನರೇ ಆತನನ್ನು ಕಂಡರೆ ಹೇಸಹತ್ತಿದರು. ಸೈನಿಕರ ಮೇಲಿನ ಆತನ ದರ್ಪವು ಕಡಿಮೆಯಾಯಿತು; ಆತನ ಮೇಲಿನ ಪರಿವಾರದವರ ವಿಶ್ವಾಸವು ಹಾರಿತು; ಆಪ್ತೇಷ್ಟರ ಮನಸ್ಸು ಸಾಶಂಕವಾದವು; ಆದರೆ ಮದಾಂಧನಾದ ಕಾಸಿಮನು ಇದನ್ನಾವದನ್ನೂ ಲಕ್ಷಿಸದೆ ಪದ್ಮಿನಿಯ ಹರಣೋಪಾಯವನ್ನು ಒಂದೇಸವನೆ ಯೋಚಿಸತೊಡಗಿದನು. ಒಂದುದಿನ ಕಾಸಿಮನು ತನ್ನ ಅಂತರ್ಗೃಹದಲ್ಲಿ ಚಿಂತಿಸುತ್ತ ಕುಳಿತುಕೊಂಡಿದ್ದಾನೆ; ತಾನು ಒಡ್ಡಿದ ಬಲೆಯಲ್ಲಿ ಬೇಟೆಯು ಬಿದ್ದಿರಬಹುದಷ್ಟೆ? ಎಂಬ ವಿಚಾರವು ಮೇಲೆ ಮೇಲೆ ಆತನ ಮನಸ್ಸಿನಲ್ಲಿ ಬರತೊಡಗಿದೆ, ಬರುವದಿವಸ ಮೀರಿಹೋಗಿದ್ದರೂ ರಣದುಲ್ಲಾನು ಇನ್ನೂ ಬರಲಿಲ್ಲವಲ್ಲ! ಕಾರ್ಯವು ಸಾಧಿಸಲಿಕ್ಕಿಲ್ಲವೆ ? ಪದ್ಮಿನಿಯ ವಿಶ್ವಾಸದ ದಾಸಿಯಾದ ಹೊನ್ನಮ್ಮನು ಹೊತ್ತಿನಲ್ಲಿ ಘಾತಮಾಡಿರಬಹುದೇನು? ಆಕೆಗೆ ರಣದುಲ್ಲಾನು ಕೈ ಸಡಿಲುಬಿಟ್ಟು ದುಡ್ಡು ಕೊಟ್ಟಿರಲಿಕ್ಕಿಲ್ಲವೇ? ಹಾಯ್ ಹಾಯ್! ಇಷ್ಟು ದೀರ್ಘಪ್ರಯತ್ನ ಮಾಡಿಯೂ ನನ್ನ ಕಾರ್ಯವು ಕೈಗೂಡದಬಳಿಕ ನಾನು ಹತಭಾಗ್ಯನೇ ಸರಿ! ಈ ಸಾರೆಯೂ ನನ್ನ ಯತ್ನವು ನಿಷ್ಫಲವಾದರೆ, ನಾನು ಆ ಸುಂದರಿಯ ಆಶೆಯನ್ನು ನಿಶ್ಚಯವಾಗಿ ಬಿಡಬೇಕಾಗುವದು; ಆದರೆ ನನ್ನ ದೇಹಪಾತವಾದಾಗಲೇ ಪದ್ಮಿನಿಯ ಹಂಬಲವು ನನ್ನನ್ನು ಬಿಡತಕ್ಕದ್ದಾದ್ದರಿಂದ ನಡುವೆ ನನ್ನನ್ನು ಅದು ಹ್ಯಾಗೆ ಬಿಡುವದು? ನೋಡಿಬರುವದಕ್ಕಾಗಿ ಯಾರನ್ನಾದರೂ ಕಳಿಸಲಾ! ಎಷ್ಟು ತಡಮಾಡಿದರಿವರು! ಇವರ ಬುದ್ಧಿಯು ಎಲ್ಲಿ ಹಾಳಾಗಿಹೋಗಿರಬಹುದು? ನಾನು ಎಷ್ಟು ಹಾದಿಯನ್ನು ನೋಡುತ್ತಿರ ಬಹುದೆಂಬದರ ಅರಿವು ಇವರಿಗಿರಲಿಲ್ಲವೆ? ಬರಲಿ, ರಣದುಲ್ಲಾನ ಸಮಾಚಾರವನ್ನು ತಕ್ಕೊಳ್ಳುವೆನು; ಹೊನ್ನಮ್ಮನನ್ನೂ ಮಾತಾಡಿಸುವೆನು. ಆ ಕಾಫರಜಾತಿಯ ಹೆಣ್ಣಂತೂ ಒಂದು ತಪರಾಕೆಯದಿರುತ್ತದೆ. ನನ್ನಂಥ ವೀರನು ಇಷ್ಟು ಹೇಳಿಕೊಂಡದ್ದರ ಅರಿವು ಆಕೆಗಿರಲಿಕ್ಕಿಲ್ಲವೆ ? ಕಾರ್ಯಘಾತಮಾಡಿದರೆ ನನ್ನ ಪರಿಣಾಮವೇನಾದೀತೆಂಬದರ ಅಂಜಿಕೆಯನ್ನು ಆಕೆಯು ಬಿಟ್ಟುಬಿಟ್ಟಿರಬಹುದೆ? ಎಂದು ತನ್ನೊಳಗೆ ತಳಮಳಿಸುತ್ತಿರಲು, ಒಬ್ಬ ಸೇವಕನು ಬಂದು— ''ಖಾವಿಂದ, ರಣದುಲ್ಲಾಖಾನನೂ, ಹೊನ್ನಮ್ಮನೂ ಬಂದಿರುತ್ತಾರೆ'' ಎಂದು ಹೇಳಿದನು. ಕೂಡಲೆ ಕಾಸಿಮನ ಕಿವಿಗಳು ನೆಟ್ಟಗಾಗಿ, ಆ ನೆಟ್ಟಗಾದ ಭರದಲ್ಲಿ ಆತನ ಮನಸ್ಸಿನೊಳಗಿನ ವಿಚಾರಗಳೆಲ್ಲ ಅಳಿದುಹೋಗಿ ಅವರನ್ನು ಯಾವಾಗ ಕಂಡೇನೆಂಬ ಆತುರವು ಆತನಲ್ಲಿ

ಉತ್ಪನ್ನವಾಯಿತು. ಕೂಡಲೆ ಆತನು ಸೇವಕನಿಗೆ—''ಹೋಗು, ಬೇಗನೆ ಅವರನ್ನು ಕರಕೊಂಡು ಬಾ'' ಎಂದು ಹೇಳಿ ತಾನು ಆತುರದಿಂದ ಅವರ ಹಾದಿಯನ್ನು ನೋಡುತ್ತ ಕುಳಿತು ಕೊಂಡನು. ಅಷ್ಟರಲ್ಲಿ ರಣದುಲ್ಲಾನೂ, ಹೊನ್ನಮ್ಮನೂ ಬಂದು ಬಹು ವಿನಯದಿಂದ ಬಾಗಿ ಮುಜುರೆ ಮಾಡಲು, ಕಾಸಿಮನು ಮುಗುಳುನಗೆ ನಗುತ್ತ ಅವರನ್ನು ಕುರಿತು ಉರ್ದು ಭಾಷೆಯಿಂದ—''ಬರಬೇಕು ಖಾನಸಾಹೇಬ, ಬಾ, ಹೊನ್ನಮ್ಮಾ ಇತ್ತ ಬಾ. ಹೋದ ಕೆಲಸವು ಆಯಿತಷ್ಟೇ ?'' ಎಂದು ಕೇಳಲು, ರಣದುಲ್ಲಾನು—''ಖಾವಿಂದ, ಕೆಲಸವು ಕೈಗೂಡಿತು. ಹೊನ್ನಮ್ಮನು ಒಳಿತಾಗಿ ಸಹಾಯ ಮಾಡಿದಳು. ಆಕೆಯ ಸಹಾಯವಿಲ್ಲದಿದ್ದರೆ ಕಾರ್ಯವು ಇಷ್ಟು ಸರಸವಾಗಿ ಸಾಧಿಸುತ್ತಿದ್ದಿಲ್ಲ, ಆನೆಗುಂದಿಯ ಆ ಮುದಿರಾಜನಂತು ಇರಲಿ, ಆನೆಗುಂದಿಗೆ ಆನೆಗುಂದಿಯೇ ಪದ್ಮಿನಿಯ ವಿಷಯವಾಗಿ ನಿರಾಸೆಪಟ್ಟು, ಹಾಡಿಹಾಡಿಕೊಂಡು ಅಳುವಂತೆ ಮಾಡಿ, ಆ ಸಂದರಿಯ ಹರಣಮಾಡಿಕೊಂಡು ಬಂದಿದ್ದೇನೆ!''

ಈ ಮೇರೆಗೆ ನುಡಿದು ರಣದುಲ್ಲಾನು ನಗುತ್ತ ಹೊನ್ನಮ್ಮನ ಕಡೆಗೆ ನೋಡಿದನು; ಆಗ ಹೊನ್ನಮ್ಮನು ಪ್ರತಿಯಾಗಿ ಮುಗುಳುನಗೆ ನಗುತ್ತ ತಲೆಯಲ್ಲಾಡಿಸಿ ಸಮ್ಮತಿಸುತ್ತ, ಕಾಸಿಮನ ಕಡೆಗೆ ಒಮ್ಮೆ ನೋಡಿ ಮೋರೆ ತಗ್ಗಿಸಿದಳು. ದ್ರವ್ಯಲೋಭದ ಬಲೆಗೆ ಬಿದ್ದು ನೀಚ ಕಾರ್ಯ ಮಾಡುವಾಗಿದ್ದ ಆಕೆಯ ಕೆಟ್ಟ ಮನಸ್ಸು, ಈಗ ಆ ನೀಚ ಕಾರ್ಯ ಮಾಡಿದಬಳಿಕ ಪಶ್ಚಾತ್ತಾಪ ದಿಂದ ಶುದ್ಧವಾಗತೊಡಗಿತ್ತು; ಆದರೆ ಇದರ ಸುಳವೂ ಕೂಡ ಕಾಸಿಮನಿಗೆ ಹತ್ತದಂತೆ ಆಕೆಯು ಎಚ್ಚರಪಡಬೇಕಾಗಿತ್ತು; ಯಾಕಂದರೆ, ಕಾಸಿಮನ ಸಹವಾಸವೆಂದರೆ ಕೃಷ್ಣಸರ್ಪದ ಸಹವಾಸವೆಂಬದು ಆಕೆಗೆ ಗೊತ್ತಿತ್ತು; ತಾನು ದ್ರವ್ಯ ಲೋಭದಿಂದ ಸ್ವಾಮಿದ್ರೋಹದ ಪಾಪ ಕಟ್ಟಿಕೊಂಡೆನೆಂಬ ವ್ಯಥೆಯು ಆಕೆಯನ್ನು ಬಾಧಿಸತೊಡಗಿತ್ತು, ಆಕೆಯು ತೋರಿಕೆಗಾಗಿ ಸಂತೋಷವನ್ನು ಪ್ರಕಟಿಸಬೇಕಾಗಿತ್ತಲ್ಲದೆ ಆಕೆಯ ಮನಸ್ಸಿಗೆ ನಿಜವಾದ ಸಂತೋಷವು ಸರ್ವಥಾ ಆಗಿದ್ದಿಲ್ಲ. ಆಕೆಯು ಮನಸ್ಸಿನಲ್ಲಿ ತನ್ನನ್ನು ಪರಿಪರಿಯಾಗಿ ಧಿಕ್ಕರಿಸಿಕೊಳ್ಳಹತ್ತಿದ್ದಳು. ಆಕೆಯ ಮುಖಭಾವವನ್ನು ಲಕ್ಷಪೂರ್ವಕವಾಗಿ ನೋಡದಿದ್ದರೆ ಯಾರಿಗಾದರೂ ಆಕೆಯ ಆ ತೋರಿಕೆಯ ಸಂತೋಷಪ್ರದರ್ಶನದ ರೀತಿಯು ಗೊತ್ತಾಗಬಹುದಾಗಿತ್ತು; ಆದರೆ ''ಹೊಳೆ ದಾಟಿದಬಳಿಕ ಅಂಬಿಗನ ಮಿಂಡ'' ಎಂಬಂತೆ ಕಾರ್ಯವಾದ ಬಳಿಕ ಈಗ ಆಕೆಯನ್ನು ಅಷ್ಟು ಯಾರು ಲಕ್ಷಿಸಿ ನೋಡಬೇಕು? ಆಕೆಯ ಮನಸ್ಸಿನ ಸ್ಥಿತಿಯು ಬದಲಾದದ್ದು ರಣದುಲ್ಲಾನಿಗೆ ಸಾಧಾರಣ ಗೊತ್ತಾದಂತೆ ಆಗಿದ್ದರೂ ಆತನು ಅದನ್ನು ಸಂಪೂರ್ಣ ದುರ್ಲಕ್ಷಿಸಿದನಲ್ಲದೆ ಆ ಮದಾಂಧನು ಉಪಹಾಸದಿಂದ ಹೊನ್ನಮ್ಮನ ಮನಸ್ಸು ನೋಯಿಸಲಿಕ್ಕೂ ಹಿಂದೆಮುಂದೆ ನೋಡಲಿಲ್ಲ. ಅದರಿಂದಂತೂ ಹೊನ್ನಮ್ಮನ ಮನಸ್ಸು ಬಹಳವಾಗಿ ನೊಂದುಕೊಂಡಿತ್ತು. ಆದರೆ ಇದಾವದೂ ಕಾಸಿಮನಿಗೆ ಬೇಕಾಗಿದ್ದಿಲ್ಲ. ಆತನು ಮೊದಲು ಪದ್ಮಿನಿಯನ್ನು ನೋಡಬೇಕಾಗಿತ್ತು; ಆದ್ದರಿಂದ ಆತನು ರಣದುಲ್ಲಾನನ್ನು ಕುರಿತು—''ಖಾನ, ಪದ್ಮಿನಿಯೆಲ್ಲಿ? ನನ್ನ ಮನಸ್ಸಿನ ಬಯಕೆಯನ್ನು ನೀವಿಬ್ಬರೂ ಪೂರ್ಣ ಮಾಡಿದ್ದರಿಂದ ನೀವಿಬ್ಬರೂ ನನ್ನ ಅನುಗ್ರಹಕ್ಕೆ ಪೂರ್ಣ ಪಾತ್ರರಿರುವಿರಿ! ಏನೂ ಚಿಂತೆಯಿಲ್ಲ. ಯೋಗ್ಯ ಸಂಭಾವನೆಯಿಂದ ನಿಮ್ಮನ್ನು ಸಂತೋಷಗೊಳಿಸಲು ಈ

ಕಾಸಿಮನು ಸಮರ್ಥನಿರುವನು; ನಡೆಯಿರಿ, ಮೊದಲು ಪದ್ಮಿನಿಯ ಬಳಿಗೆ ನನ್ನನ್ನು ಕರಕೊಂಡು ನಡೆಯಿರಿ'' ಎಂದು ನುಡಿದು ಮಲೆಕ್ಕೇಳಲು, ರಣದುಲ್ಲಾನು—''ಖಾವಿಂದ ಸ್ವಲ್ಪ ಸಮಾಧಾನ ತಾಳಬೇಕು. ಅಡವಿಯ ಹೆಣ್ಣೆರಳೆಯನ್ನು ಬೇಟೆಗಾರನು ಬಲೆಯೊಡ್ಡಿ ನಿಷ್ಕರುಣದಿಂದ ಹಿಡಿದುತಂದಂತೆ ನಾವು ಆಕೆಯನ್ನು ಹಿಡಿದುತಂದಿರುವೆವು; ಆದ್ದರಿಂದ ಆ ಮಾನಧನಳಾದ ಸುಂದರಿಯ ಎದೆಯೊಡೆದು ನೀರಾಗಿದ್ದೀತು. ಈ ಸ್ಥಿತಿಯಲ್ಲಿ ನೀವು ಹೋಗಿ ಗಾಯದ ಮೇಲೆ ಬರೆಕೊಟ್ಟಂತೆ ಮತ್ತಿಷ್ಟು ಆಕೆಯನ್ನು ನೋಯಿಸುವದು ಸರಿಯಲ್ಲ. ಸ್ವಲ್ಪ ಸಮಾಧಾನ ತಾಳಬೇಕು. ಪದ್ಮಿನಿಯನ್ನು ಅಪಹರಿಸುವಾಗ ನಮಗೆಷ್ಟು ಶ್ರಮವಾಯಿತು, ನಾವು ಆಕೆಯನ್ನು ಅಪಹರಿಸಿರುವೆವೆಂಬುದರ ವಿಚಾರವು ಕೂಡ ಯಾರ ಮನಸ್ಸಿಗೂ ಸೋಂಕದಂತೆ ನಾವೇನು ಹಂಚಿಕೆಯನ್ನು ಮಾಡಿರುವೆವು ಎಂಬದನ್ನು ಖಾವಿಂದರು ಮೊದಲು ಕೇಳಿಕೊಳ್ಳಬೇಕು. ಇದೊಂದು ದಿನ ಆ ಸುಂದರಿಗೆ ಸಂಪೂರ್ಣ ವಿಶ್ರಾಂತಿಯನ್ನಿತ್ತು. ನಾಳೆ ಯೋಗ್ಯ ಪ್ರಸಂಗವರಿತು ತಾವು ಆಕೆಯ ಬಳಿಗೆ ಹೋಗಬಹುದು. ಖಾವಿಂದ, ಪದ್ಮಿನಿಯು, ಅಲ್ಲ ಅಲ್ಲ! ಕಾವಿಂದರವರ ಬೀಬೀಸಾಹೇಬರು ಇನ್ನು ಎಲ್ಲಿ ಹೋಗುವರು? ಆಗುವತನಕ ತಡೆದು ಆರುವತನಕ ತಡೆಯಲಿಲ್ಲವೆನ್ನುವಂತೆ ಅವಸರ ಮಾಡಿ ರಸಭಂಗ ಮಾಡಿಕೊಳ್ಳಬೇಡಿರಿ; ಅವಸರದಿಂದ ಮಾಡುವ ಕಾರ್ಯವು ಕೆಡುವ ಸಂಭವವಿದೆ, ಅವರಲ್ಲಿ ಸ್ತ್ರೀಸಂಬಂಧದ ವ್ಯವಹಾರವಂತು ಅತ್ಯಂತ ಸೂಕ್ಷ್ಮವಾಗಿರುವದು; ಪಕ್ಕನೆ ಅವರ ಮನಸ್ಸು ತಿರುಗಿದರೆ ಪುನಃ ಅದನ್ನು ತಿರುಗಿಸುವದು ಕಷ್ಟ; ಆದ್ದರಿಂದ ರಸಿಕರಾದವರು ಬಹು ಎಚ್ಚರದಿಂದ ನಡೆದುಕೊಳ್ಳ ಬೇಕಾಗುವದು; ಖಾವಿಂದ, ಇಷ್ಟುದಿನ ದೇವರಾಜ ಪುತ್ರಿಯು ದುರ್ಮಿಳಳಾದದ್ದರಿಂದ ಆಕೆಯ ಮಹತ್ವವು ತಮಗೆ ವಿಶೇಷವಾಗಿತ್ತು; ಆದರೆ ಇಂದಿನ ನಮ್ಮ ಸಾಹಸದಿಂದ ಆಕೆಯ ವಿಷಯದ ದುರ್ಮಿಳತ್ವವು ನಷ್ಟವಾಗಿ, ಅನಾಯಾಸದಿಂದ ಆ ಅಪರೂಪದ ವಸ್ತುವು ನಿಮ್ಮ ಕೈ ಸೇರಿದಂತಾಗಿರುತ್ತದೆ; ಆದ್ದರಿಂದ ಸ್ವಲ್ಪ ಸಮಾಧಾನ ತಾಳಬೇಕು. ಈ ಸೇವಕನು ತಮ್ಮ ಮನೋದಯಕ್ಕೆ ವಿರುದ್ಧವಾಗಿ ನಡೆದುಕೊಳ್ಳುವನೆಂದು ಸಿಟ್ಟು ಮಾಡದೆ ನನ್ನನ್ನು ಕ್ಷಮಿಸಬೇಕು. ನಿಜವಾದ ವಿಲಾಸಿ ಪುರುಷರು ಇಷ್ಟು ಆತುರತೆಯನ್ನು ಸ್ತ್ರೀಯರ ಮುಂದೆ ತೋರಿಸದೆ, ಮನಸ್ಸು ಬಿಗಿಹಿಡಿಯುವದರಿಂದಲೇ ವಿಲಾಸಕ್ಕೆ ಕಳೆಯೇರುತ್ತಿರುತ್ತದೆ!''

ಈ ಮೇರೆಗೆ ರಣದುಲ್ಲಾನು ಬಾಯಿಗೆ ಬಂದಂತೆ ಮಾತಾಡುವದನ್ನು ನೋಡಿ ಕಾಸಿಮನಂಥ ಕಾಮಾತುರನೂ ಮನಸ್ಸಿನಲ್ಲಿ ಹೇಸಿದನು; ಆದರೆ ತನ್ನ ಗೌರವವನ್ನು ತಾನಾಗಿ ಕಳಕೊಂಡ ತಪ್ಪಿಗಾಗಿ ಆತನು ರಣದುಲ್ಲಾನ ವಿರುದ್ಧ ಈಗ ಪಿಟ್ಟೆಂದು ಮಾತಾಡುವ ಹಾಗಿದ್ದಿಲ್ಲ. ಈ ಸಂಗತಿಯನ್ನು ಧೂರ್ತನಾದ ರಣದುಲ್ಲಾನು ಸಂಪೂರ್ಣವಾಗಿ ಅರಿತಿದ್ದರಿಂದಲೇ ಹೀಗೆ ಕಾಸಿಮನ ಮುಂದೆ ಬಡಬಡ ಮಾತಾಡಿದನು. ರಣದುಲ್ಲಾನು ಹೇಳಿಕೇಳಿ ಕುಂಟಲತನದ ನೀಚ ಕೆಲಸ ಮಾಡುವ ಹೇಸಿ ಮನುಷ್ಯನು; ಇಂಥವರಿಗೆ ಮಾನಾಪಮಾನಗಳ ಪರಿವೆಯೆಲ್ಲಿಯದು? ಇಂಥವರ ಸೆಳವಿಗೆ ಸಿಕ್ಕುವವರು ಎಲ್ಲಿ ಬಡಿದು ಎಷ್ಟು ಗಾಸಿಯಾದರೆಂಬದನ್ನು ಹೇಳಲಾಗುವದಿಲ್ಲ. ಇಂಥ ನೀಚರ ಗುಣ–ಸ್ವಭಾವ–ಕುಟಿಲ ತಂತ್ರಾದಿಗಳನ್ನು ವರ್ಣಿಸುವ

ಇಚ್ಛೆಯು ನಮಗಿಲ್ಲ. ರಣದುಲ್ಲಾನ ಮಾತು ಕಾಸಿಮನ ಮನಸ್ಸಿಗೆ ಬಾರದಿದ್ದರೂ ಆ ಪತಿತನು ತೋರಿಕೆಯ ಮುಗುಳುನಗೆ ನಕ್ಕು, ಪುನಃ ತನ್ನ ಸ್ಥಳದಲ್ಲಿ ಕುಳಿತುಕೊಂಡು, ರಣದುಲ್ಲಾನನ್ನು ಕುರಿತು—''ಸರಿಸರಿ! ನೀನು ಹೇಳುವ ಮಾತು ಸರಿಯಾದದ್ದು. ನೀನಂದಂತೆಯೇ ಮಾಡೋಣ; ಆದರೆ ಪದ್ಮಿನಿಯನ್ನು ಅಪಹರಿಸಿಕೊಂಡು ಬರುವಾಗ ನೀವು ಏನೇನು ಸಾಹಸ ಮಾಡಿದಿರಿ, ಯಾವ ಯಾವ ತಂತ್ರಗಳನ್ನು ಒಡ್ಡಿದಿರಿ? ಹೇಳು ನೋಡೋಣ'' ಅನ್ನಲು ರಣದುಲ್ಲಾನು ತನ್ನ ಗಡ್ಡದಮೇಲೆ ಕೈ ಎಳೆಯುತ್ತ ಗಂಭೀರ ಮುದ್ರೆಯಿಂದ ಕಾಸಿಮನ ಕಡೆಗೆ ನೋಡುತ್ತ—''ಖಾವಿಂದ, ಈ ಕಾಫೀರರ ಹೆಣ್ಣು ಓಡಿಸಿಕೊಂಡು ಬರುವ ಕೆಲಸವು ಸುಲಭವಾದದ್ದಲ್ಲ. ಕಾಫೀರರ ಗಂಡಸರು ಅತ್ಯಂತ ಮಾನಧನರು. ಅವರು ತಮ್ಮ ಹೆಂಗಸರ ಮಾನರಕ್ಷಣಕ್ಕಾಗಿ ತಮ್ಮ ಪ್ರಾಣವನ್ನರ್ಪಿಸಲಿಕ್ಕೂ ಹಿಂದೆಮುಂದೆ ನೋಡರು. ಅವರ ಹೆಂಗಸರಿಗಾದರೂ ತಮ್ಮ ಪಾತಿವ್ರತ್ಯದ ಮಹತ್ವ ಬಹಳ. ಅವರು ತಮ್ಮ ಪವಿತ್ರ ಪಾತಿವ್ರತ್ಯದ ರಕ್ಷಣಕ್ಕಾಗಿ ಬೇಕಾದ ಸಾಹಸ ಮಾಡುವರು. ಹೀಗಿರುವಾಗ ಪ್ರತ್ಯಕ್ಷ ರಾಜಪುತ್ರಿಯಾದ ಪದ್ಮಿನಿಯನ್ನು ಹರಣ ಮಾಡಿಕೊಂಡು ಬರಲಿಕ್ಕೆ ನಮಗೆಷ್ಟು ಕಷ್ಟವಾಗಿರಬಹುದು? ಖಾವಿಂದ, ಈಗ ಅಖಂಡ ಮೂರುತಿಂಗಳಿಂದ ಯಾತಾಯಾತ ಪಟ್ಟಾಗ ನಿಮ್ಮ ಪುಣ್ಯದಿಂದಲೇ ಪದ್ಮಿನಿಯು ನಮ್ಮ ಕೈಸೇರಿದಳು; ಈ ಹೊನ್ನಮ್ಮನ ಸಹಾಯದಿಂದ ಯಾವತ್ತು ಕಾವಲುಗಾರರನ್ನು ಒಡೆದು ಕೊಳ್ಳಲಿಕ್ಕೆ ಬಹಳ ದಿವಸಗಳು ಬೇಕಾದವು. ಈ ಕೆಲಸದಲ್ಲಿ ನಾವು ದುಡ್ಡನ್ನು ನೀರಿನಂತೆ ವೆಚ್ಚ ಮಾಡಬೇಕಾಯಿತು. ನಾವು ಪದ್ಮಿನಿಯ ಹರಣಮಾಡುವೆವೆಂದು ಕಾವಲುಗಾರರಿಗೆ ಹೇಳಿದ್ದರೆ, ಅವರು ಸರ್ವಥಾ ವಶವಾಗುತ್ತಿದ್ದಿಲ್ಲ; ಆದರೆ ಹೊನ್ನಮ್ಮನು ಹಾಗೆ ಹೇಳದೆ, ಅರಮನೆಯೊಳಗಿಂದ ದ್ರವ್ಯ ತುಂಬಿದ ಎರಡು ದೊಡ್ಡ ಪೆಟ್ಟಿಗೆಗಳನ್ನು ಹರಣಮಾಡುವೆನೆಂತಲೂ, ಅವುಗಳಲ್ಲಿ ಒಂದು ಪೆಟ್ಟಿಗೆಯನ್ನು ನೀವೆಲ್ಲರೂ, ಮತ್ತೊಂದು ಪೆಟ್ಟಿಗೆಯನ್ನು ನಾನೂ ತಕ್ಕೊಳ್ಳೋಣವೆಂತಲೂ ಹೇಳಿದಳು. ಕಾವಲುಗಾರರ ಮುಖ್ಯನೊಡನೆ ಹೊನ್ನಮ್ಮನ ಸಲಿಗೆಯು ವಿಶೇಷವಾಗಿ ಇದ್ದಂತೆ ತೋರಿತು. ಈಕೆಯ ಬಲೆಯಲ್ಲಿ ಆತನು ಪೂರಾ ಸಿಕ್ಕುಹೋಗಿರುವನು. ಆತನು ದ್ರವ್ಯಲೋಭವನ್ನು ತನ್ನ ಕೈಕೆಳಗಿನವರಿಗೆ ತೋರಿಸಿ, ಅವರ ಮನಸ್ಸನ್ನು ಒಲಿಸಿಕೊಂಡನು. ಹೀಗೆ ಎಲ್ಲ ಸಿದ್ಧತೆಯಾದ ಬಳಿಕ ಈಗ ನಾಲ್ಕು ದಿನಗಳ ಹಿಂದೆ ಅಮಾವಾಸ್ಯೆಯ ರಾತ್ರಿಯಲ್ಲಿ ಆರೇಳು ತಾಸಿನ ಸಮಯಕ್ಕೆ ಹೊನ್ನಮ್ಮನು ಎರಡು ಬೆತ್ತದ ಪೆಟ್ಟಿಗೆಗಳನ್ನು ಮಹಾಬಲಿಷ್ಠರಾದ ಇಬ್ಬರು ಹಿಂದೂಜನರ ತಲೆಯಮೇಲೆ ಹೊರಿಸಿಕೊಂಡು ಬಂದಳು. ಕಾವಲುಗಾರರ ಮುಖ್ಯನು ಪೂರ್ವ ಸಂಕೇತದಂತೆ ಬಹುಜನ ಕಾವಲುಗಾರರಿಗೆ ಅಂದು ಮಿತಿಮೀರಿ ಸೆರೆ ಕುಡಿಸಿದ್ದನು. ಎಚ್ಚತ್ತಿದ್ದ ಕಾವಲುಗಾರರನ್ನು ಮೊದಲೇ ಆತನು ಒಡಕೊಂಡದ್ದರಿಂದ, ಅವರು ಹೊನ್ನಮ್ಮನ ಪೆಟ್ಟಿಗೆಗಳನ್ನು ಪ್ರತಿಬಂಧಿಸಲಿಲ್ಲ. ಹೊನ್ನಮ್ಮನು ನಿರಾತಂಕವಾಗಿ ಎರಡೂ ಪೆಟ್ಟಿಗೆಗಳನ್ನು ಹೊರಿಸಿಕೊಂಡು ಬಂದಳು. ಮಾತಾಡಿದಂತೆ ಸಂಕೇತ ಸ್ಥಳದಲ್ಲಿ ಒಂದು ಪೆಟ್ಟಿಗೆಯನ್ನು ಆಕೆಯು ಕಾವಲುಗಾರರ ಮುಖ್ಯನಿಗೆ ಒಪ್ಪಿಸಿದಳು. ಎರಡನೆಯ ಪೆಟ್ಟಿಯನ್ನು ತಾನು ಹೊರಿಸಿಕೊಂಡು ಬಂದಳು. ಮೊದಲೇ ಆಕೆಯು ಹೇಳಿದಂತೆ ಒಂದು ಗುಪ್ತ ಸ್ಥಳದಲ್ಲಿ ನಾನು

ನಮ್ಮವರೊಡನೆ ಮೇಣೆಯನ್ನು ಸಿದ್ಧಮಾಡಿಕೊಂಡು ಕುಳಿತಿದ್ದೆನು. ಹೊನ್ನಮ್ಮನು ಅಲ್ಲಿಗೆ ಬಂದಕೂಡಲೆ ಪೆಟ್ಟಿಗೆಯ ಬಾಯಿತೆರೆದು, ಅದರೊಳಗೆ ನಿಶ್ಚೇಷ್ಟಳಾಗಿ ಬಿದ್ದುಕೊಂಡಿದ್ದ ಪದ್ಮಿನಿಯನ್ನು ಮೇಣೆಯಲ್ಲಿ ಮಲಗಿಸಿದಳು. ಪದ್ಮಿನಿಯು ಕೇವಲ ಮೃತಪ್ರಾಯಳಾಗಿದ್ದಳು. ಹೊನ್ನಮ್ಮನು ಆಕೆಗೆ ಎಂಥಾ ಅಮಲಿನ ಪದಾರ್ಥ ಕೊಟ್ಟಿದ್ದಳೋ ತಿಳಿಯದು. ಮೇಣೆಯನ್ನು ಕಂಪಲಿಯ ಕೋಟೆಯೊಳಗೆ ತಂದು ಅಂತರ್ಗೃಹದಲ್ಲಿಳಿಸಿ, ಪದ್ಮಿನಿಯನ್ನು ಮೆಲ್ಲಗೆ ಮಂಚದ ಮೇಲೆ ಮಲಗಿಸಿದರೂ ಆಕೆಗೆ ಎಚ್ಚರವೇ ಆಗಲಿಲ್ಲ. ಇಷ್ಟಾಗುವದರೊಳಗೆ ಹೊರಗೆ ಎರಡುತಾಸು ರಾತ್ರಿಯುಳಿದಿರಬಹುದು. ನಾನು ನಿದ್ದೆಗೆಟ್ಟಿದ್ದರಿಂದ ಹೊನ್ನಮ್ಮನನ್ನು ಕೇಳಿ ಮಲಗಲಿಕ್ಕೆ ಹೋದೆನು. ಹೊನ್ನಮ್ಮನು ಪದ್ಮಿನಿಗೆ ಎಚ್ಚರಾಗಬೇಕೆಂದು ಏನೇನೋ ಉಪಾಯ ಮಾಡತೊಡಗಿದಳು.

''ಮರುದಿನ ಎರಡು ತಾಸು ಏರಿದ ಬಳಿಕ ನಾನು ಹೊನ್ನಮ್ಮನನ್ನು ಕಾಣಲು, ಆಕೆಯು ಪದ್ಮಿನಿಯು ಸುರಕ್ಷಿತವಾಗಿರುವದನ್ನೂ, ಆಕೆಯು ತನ್ನ ಸಂಗಡ ಎಂದಿನಂತೆ ಮಾತುಕತೆಯಾಡಿ ಕೊಂಡಿರುವ ವಿಚಿತ್ರಸ್ಥಿತಿಯನ್ನೂ ನನ್ನ ಮುಂದೆ ಹೇಳಿದಳು. ಅದನ್ನು ಕೇಳಿ ನನಗೆ ಬಹಳ ಆಶ್ಚರ್ಯವಾಯಿತು. ನಮ್ಮಿಬ್ಬರನ್ನೂ ಮುಸಲ್ಮಾನರು ಹ್ಯಾಗೋ ಮೋಸದಿಂದ ಹರಣಮಾಡಿ ಕೊಂಡು ಬಂದಿರುವರೆಂದು ಹೊನ್ನಮ್ಮನು ಪದ್ಮಿನಿಗೆ ಹೇಳಿದಳಂತೆ. ಪದ್ಮಿನಿಗೆ ಎಚ್ಚರವಾಗುವ ಸಂಧಿಯಲ್ಲಿ ಹೊನ್ನಮ್ಮನು ಮೈಮರೆತುಬಿದ್ದವಳಂತೆ ಬಿದ್ದುಬಿಟ್ಟಿದ್ದರಿಂದ ಆಕೆಯನ್ನು ಎಚ್ಚರ ಗೊಳಿಸಲಿಕ್ಕೆ ಪದ್ಮಿನಿಯೇ ಬಗೆಬಗೆಯ ಉಪಾಯಗಳನ್ನು ಮಾಡಬೇಕಾಯಿತಂತೆ! ಆಗಿನ ಪ್ರಸಂಗದಲ್ಲಿ ಈ ಚತುರೆಯಾದ ಹೊನ್ನಮ್ಮನು ಏನೂ ಅರಿಯದವಳಂತೆ ತನ್ನ ಮೈಮೇಲೆ ಹುಚ್ಚು ಹಾಕಿಕೊಂಡು, ಇನ್ನು ಮುಂದೆ ಗತಿಯೇನೆಂದು ಪದ್ಮಿನಿಯನ್ನು ತೆಕ್ಕೆಬಿದ್ದು ಹಾಡಿ ಹಾಡಿಕೊಂಡು ಅಳಹತ್ತಿದಳಂತೆ! ತನ್ನನ್ನು ಸುಮ್ಮನಿರಿಸುವದರೊಳಗೇ ಪದ್ಮಿನಿಗೆ ಸಾಕುಸಾಕಾಯಿತೆಂದು ಈ ಹೊನ್ನಮ್ಮನು ಹೇಳಿದಳು ! ಬಳಿಕ ಪದ್ಮಿನಿಯೂ, ಹೊನ್ನಮ್ಮನೂ ತಾವು ಇಲ್ಲಿಗೆ ಹ್ಯಾಗೆ ಬಂದೆವೆಂದು ಯೋಚಿಸುತ್ತ ಕುಳಿತುಕೊಂಡರಂತೆ. ಬೆಳಗಾದರೂ ಅವರ ಯೋಚನೆಯು ಬಗೆಹರಿಯಲಿಲ್ಲ. ಪದ್ಮಿನಿಯು ಮುಂದುಗಾಣದಾದಳು. ಅಷ್ಟರಲ್ಲಿ ಪದ್ಮಿನಿಯ ಯೋಗಕ್ಷೇಮಕ್ಕಾಗಿ ನಾವು ನಿಯಮಿಸಿದ ಹಿಂದೂ ಜಾತಿಯ ದಾಸಿಯಾದ ಕನಕಮ್ಮನೆಂಬವಳು ಅಲ್ಲಿಗೆ ಬಂದು ಪದ್ಮಿನಿಯನ್ನೂ, ಹೊನ್ನಮ್ಮನನ್ನೂ ಕುರಿತು–ಅವ್ವಾ, ಇನ್ನು ನೀವು ಚಿಂತೆಮಾಡಿ ಫಲವಿಲ್ಲ, ತಂತ್ರಗಾರನಾದ ಕಾಸಿಮನ ಕೈಯಲ್ಲಿ ನೀವು ಪೂರಾ ಸಿಕ್ಕು ಹೋಗಿರುವಿರಿ; ಕಡೆಗೆ ಆತನು ತನ್ನ ಕೋರಿಕೆಯನ್ನು ಕೈಗೂಡಿಸಿಕೊಂಡನು. ಇನ್ನು ಚಿಂತೆಮಾಡಿ ಏನು ಮಾಡುತ್ತೀರಿ? ಬಂದ ಪ್ರಸಂಗವನ್ನು ಅನುಭವಿಸಲೇಬೇಕು. ನಾವು ಪರಾಧೀನರು, ಮೇಲೆ ಹೆಂಗಸರು. ನಮ್ಮಿಂದೇನಾಗುವಹಾಗಿದೆ ? ಉಪಾಯವಿಲ್ಲ. ಇಲ್ಲಿ ನಿಮಗೆ ಯಾತರ ಕೊರತೆಯೂ ಬರುವಹಾಗಿಲ್ಲ. ನಿಮ್ಮ ಸೇವೆಗಾಗಿ ಬಹುಜನ ಹಿಂದೂ ದಾಸಿಯರನ್ನು ಕಾಸಿಮನು ನಿಯಮಿಸಿರುವನು. ನಿಮ್ಮ ಸುಖಕ್ಕೆ ಕೊರತೆ ಬಾರದಂತೆ ಎಲ್ಲ ಸಿದ್ಧತೆಯಿರುವದು. ಆನೆಗುಂದಿಯ ಅರಮನೆಗಿಂತ ಒಂದು ತೂಕ ಇಲ್ಲಿ ಹೆಚ್ಚು ಇರುತ್ತದೆಂತಲೇ

ನೀವು ತಿಳಿದುಕೊಳ್ಳಿರಿ; ಆದರೆ ಸ್ವಾತಂತ್ರ್ಯ ಒಂದು ಇಲ್ಲ ಏಳಿ, ದೇವರಿದ್ದಾನೆ. ಪ್ರಾತರ್ವಿಧಿ ಗಳನ್ನು ತೀರಿಸಿಕೊಂಡು ಸ್ವಸ್ಥವಾಗಿರಿ. ಮೇಲಾಗಿ ಈ ಅರಮನೆಯು ನಿಮಗೆ ಅಪರಿಚಿತ ವಾದದ್ದಲ್ಲ. ಆನೆಗುಂದಿಯ ಅರಸರ ಕೈಯಲ್ಲಿ ಇದು ಇದ್ದಾಗ ನೀವು ಎಷ್ಟೋಸಾರಿ ಇಲ್ಲಿಗೆ ಬಂದಿರುವಿರಿ, ಹೋಗಿರುವಿರಿ; ಇನ್ನು ಆದವಾತು ಬರುವ ಹಾಗಿಲ್ಲ. ಅತ್ಯಂತ ಬಲಾಢ್ಯರಾದ ಮುಸಲ್ಮಾನರ ಕೈಯೊಳಗಿಂದ ನೀವು ಪಾರಾಗುವಹಾಗಿಲ್ಲ. ನೀವು ಇಲ್ಲಿ ಇರುತ್ತೀರೆಂಬ ಸುದ್ದಿಯೇ ದೇವರಾಜರಿಗೆ ಹತ್ತುವ ಹಾಗಿಲ್ಲವೆಂದಬಳಿಕ ನಿಮ್ಮ ಬಿಡುಗಡೆಗಾಗಿ ಆ ವೃದ್ಧ ರಾಜನು ಯತ್ನಿಸುವ ಬಗೆಯೆತ್ತ? ಅವ್ವಾ, ನಮ್ಮವರಿಗೆ ಈಗ ಬಲವಿಲ್ಲ. ಎಲ್ಲ ಬಗೆಯಿಂದ ಮುಸಲ್ಮಾನರು ನಮ್ಮನ್ನು ಗೊತ್ತಿಗೆ ಹಚ್ಚಲಿಕ್ಕೆ ಬಂದಿರುವರು. ಏಳಿರವ್ವಾ ಏಳಿರಿ! ಹೊತ್ತು ಬಂದಹಾಗೆ ಕೊಡೆಹಿಡಿಯದಿದ್ದರೆ ನಿರ್ವಾಹವಿಲ್ಲ, ಎಂದು ನುಡಿದು ಕನಕಮ್ಮನು ಕಣ್ಣೀರು ಸುರಿಸುತ್ತ ಹೇಳಿದಳಂತೆ! ಪದ್ಮಿನಿಯು ಆಕೆಯ ಮಾತುಗಳನ್ನು ಕೇಳುತ್ತ ಭೇದಕದೃಷ್ಟಿಯಿಂದ ಆಕೆಯ ಮೋರೆಯನ್ನು ನೋಡುತ್ತ ಸುಮ್ಮನೆ ಕುಳಿತುಕೊಂಡಳಂತೆ! ಒಂದು ತುಟಿ ಎರಡು ಮಾಡಲಿಲ್ಲವಂತೆ! ಹೀಗೆ ಕೆಲವು ಹೊತ್ತು ಸುಮ್ಮನೆ ಕುಳಿತು ಒಮ್ಮೆ ನಿಟ್ಟುಸಿರುಬಿಟ್ಟು ಪದ್ಮಿನಿಯು ಕನಕಮ್ಮನಿಗೆ ಗಾಂಭೀರ್ಯದಿಂದ—''ಹೌದು ಕನಕವ್ವಾ, ನೀನಾಡುವ ಮಾತು ನಿಜವಾದದ್ದು. ನಾವು ಹೊತ್ತುಬಂದ ಹಾಗೆ ಹೋಗಲೇ ಬೇಕಾಗುವದು. ಆಗಲಿ, ವಿರೂಪಾಕ್ಷನ ಮನಸ್ಸಿಗೆ ಬಂದಂತೆ ಆಗಲಿ! ಜಂಬುಕೇಶ್ವರ ರಾಯರ ರಾಣಿವಾಸವು ಅಗ್ನಿಪ್ರವೇಶ ಮಾಡಿ ತನ್ನ ಮರ್ಯಾದೆಯನ್ನು ಕಾಯ್ದು ಕೊಂಡಿತಂತೆ! ನನ್ನ ಮರ್ಯಾದೆಯ ರಕ್ಷಣವು ಹ್ಯಾಗಾಗುತ್ತದೋ ಆಗಲಿ'' ಎಂದು ನುಡಿದು ತನ್ನ ಕಿರುಬೆರಳ ಹರಳುಂಗುರವನ್ನು ನೋಡಿ ಸಮಾಧಾನಪಟ್ಟು ಕನಕಮ್ಮನ ಮಾತಿನಂತೆ ತಟ್ಟನೆ ಹಾಸಿಗೆಯಿಂದ ಎದ್ದು ಆಕೆಯನ್ನು ಹಿಂಬಾಲಿಸಿ ಹೋದಳಂತೆ!

ಖಾವಿಂದ, ಏನಾದರೂ ಹೊನ್ನಮ್ಮನ ಮೇಲೆ ಮಾತ್ರ ಪದ್ಮಿನಿಯ ನಿಜವಾದ ವಿಶ್ವಾಸವು ಉಳಿದಿರುವದಿಲ್ಲವಂತೆ! ಹೌದು, ಹ್ಯಾಗೆ ಉಳಿಯಬೇಕು? ಆ ಚಾಣಾಕ್ಷಳಾದ ರಾಜಪುತ್ರಿಗೆ ಈಕೆಯ ಮೇಲೆ ಸಂಶಯವು ಯಾಕೆ ಬಂದಿರಬಾರದು? ಇನ್ನು ಸಂಶಯಪಟ್ಟು ಸುಂದರಿಯು ಮಾಡುವದಾದರೂ ಏನು? ಇರಲಿ. ಪದ್ಮಿನಿಯು ಕನಕಮ್ಮನನ್ನು ಹಿಂಬಾಲಿಸಿ ಅತ್ತ ಹೋಗುವದ ರೊಳಗೆ ಹೊನ್ನಮ್ಮನು ನನ್ನ ಬಳಿಗೆ ಬಂದು, ''ನೀನು ಈಗಲೇ ಹೋಗಿ ಆನೆಗುಂದಿಯ ಅರಮನೆಯಲ್ಲಿ ನಡೆದಿರುವ ವರ್ತಮಾನವನ್ನು ಪೂರ್ಣವಾಗಿ ತಿಳಿದುಕೊಂಡು ಬಾ, ನೀನು ಎರಡು ಮೂರು ದಿನ ಅಲ್ಲಿ ನಿಂತರೂ ಚಿಂತೆಯಿಲ್ಲ; ಅಲ್ಲಿಯ ವರ್ತಮಾನದಲ್ಲಿ ಗೂಢಾರ್ಥವಿರುವದು'' ಎಂದು ಹೇಳಲು, ನಾನು ಆಕೆಯ ಹೇಳಿಕೆಯಂತೆ ಆನೆಗುಂದಿಗೆ ಹೋದೆನು. ನಾನು ಹೋಗುವದ ರೊಳಗೆ ಪದ್ಮಿನಿಯ ವಿಷಯವಾಗಿ ಪಟ್ಟಣದಲ್ಲೆಲ್ಲ ಹಾಹಾಕಾರವೆದ್ದಿತ್ತು. ನೋಡಿದಲ್ಲೆಲ್ಲ ಜನರು ನೆರೆದು ಪದ್ಮಿನಿಯ ಸುದ್ದಿಯನ್ನು ಆಡಿಕೊಳ್ಳುತ್ತಿದ್ದರು. ಹಲವರ ಹಲವು ತರ್ಕಗಳು ನಡೆದಿದ್ದವು. ಅವಕ್ಕೆ ಲಕ್ಷಗೊಡದೆ ನಾನು ನೆಟ್ಟಗೆ ಅರಮನೆಯ ಕಡೆಗೆ ನಡೆದೆನು. ಕಾವಲುಗಾರರು ಒಳಗೆ ನನ್ನನ್ನು ಬಿಡಲೊಲ್ಲರು. ಅರಮನೆಯ ಎಲ್ಲ ಬಾಗಿಲುಗಳಿಗೆ ಬಿಗಿಯಾದ ಕಾವಲುಗಳಿದ್ದವು. ಒಳಗಿನವರು ಹೊರಗೆ ಬರಲಿಕ್ಕೂ, ಹೊರಗಿನವರು ಒಳಗೆ ಹೋಗಲಿಕ್ಕೂ ಬಹಳ ಕಷ್ಟ

ವಾಗುತ್ತಿತ್ತು. ಕಳ್ಳ ಹೊಕ್ಕ ಮನೆಗೆ ಎಣ್ಣೆ ದಂಡವೆಂಬಂತೆ, ಪದ್ಮಿನಿಯು ನಮ್ಮ ಬಳಿಯಲ್ಲಿರಲು, ಇಷ್ಟು ಬಿಗಿಯಾಗಿ ಕಾವಲಿಟ್ಟು, ಬಗೆಬಗೆಯಾಗಿ ಆಕೆಯ ಶೋಧ ಮಾಡುತ್ತಿರುವದನ್ನು ನೋಡಿ ನಾನು ಮನಸ್ಸಿನಲ್ಲಿ ನಕ್ಕೆನು. ಪದ್ಮಿನಿಯನ್ನು ಹುಡುಕದ ಸ್ಥಳ ಉಳಿದಂತೆ ತೋರಲಿಲ್ಲ. ದಿಕ್ಕುದಿಕ್ಕಿಗೆ ರಾವುತರು ಧಾವಿಸಿದರು. ನಾಲ್ಕು ಕಡೆಗೆ ಜನರು ಹರಿಬಿದ್ದರು. ಯಾರ ಜೀವಕ್ಕೂ ಸೊಗಸು ಇದ್ದಿಲ್ಲ. ಹೀಗಿರುವಾಗ ಅರಮನೆಯ ಬಾವಿಯ ಮೇಲೆ ಪದ್ಮಿನಿಯ ಹಸ್ತಾಕ್ಷರದ್ದೊಂದು ಪತ್ರವೂ, ಆಕೆಯು ಹೊದ್ದುಕೊಳ್ಳುತ್ತಿದ್ದ ಉತ್ತರಿಯವೂ ಹುಡುಕುವವರ ಕಣ್ಣಿಗೆ ಕಂಡವು. ಕೂಡಲೆ ಈ ವರ್ತಮಾನವು ದೇವರಾಜನ ಕಿವಿಗೆ ಮುಟ್ಟಿತು. ಆಗ ಆ ವೃದ್ಧರಾಜನು ಧಾವಿಸಿ ಅಲ್ಲಿಗೆ ಬಂದನು. ಖಾವಿಂದ, ಆಗಿನ ಆ ವೃದ್ಧ ರಾಜನ ಸ್ಥಿತಿಯನ್ನು ನೋಡಿ ನನ್ನಂತವನ ಮನಸ್ಸೂ ಕರಗಿತು! ರಾಜನು ಅತ್ಯಂತ ವ್ಯಾಕುಲನಾಗಿದ್ದನು. ಆತನು ಕಣ್ಣೀರು ಸುರಿಸುತ್ತ ಪತ್ರವನ್ನು ಓದತೊಡಗಿದನು. ಅದರಿಂದ ಹೊತ್ತುಕೊಂಡಿದ್ದ ಮಗಳ ಉತ್ತರಿಯದ ಪರಿವೆಕೂಡ ಆತನಿಗೆ ಉಳಿದಿದ್ದಿಲ್ಲ; ಆ ಉತ್ತರಿಯವು, ಧಾರಾಳವಾಗಿ ಸುರಿಯುತ್ತಿದ್ದ ಕಣ್ಣೀರ ಹನಿಗಳ ಸಂಗಡ ಹೆಗಲಮೇಲಿಂದ ಜಾರತೊಡಗಿತ್ತು. ರಾಜನು ಪತ್ರವನ್ನು ಓದಓದುತ್ತ ನೆಲಕ್ಕೆ ಕುಸಿದುಬಿದ್ದನು. ''ಹಾ ಮಗಳೆ, ಪದ್ಮಿನಿ, ಬಾವಿಯನ್ನು ಹಾರಿದೆಯಾ?'' ಎಂಬ ಉದ್ಗಾರವು ಹೊರಡುವದರೊಳಗೆ ಅವನ್ನು ಮೂರ್ಛಿತನಾದನು. ಅಂಗರಕ್ಷಕರು ಲಗುಬಗೆಯಿಂದ ಉಪಚರಿಸತೊಡಗಿದರು!

ಸ್ವಲ್ಪ ಹೊತ್ತಿನ ಮೇಲೆ ಅರಸನು ಎಚ್ಚತ್ತು, ತನ್ನ ಮಂತ್ರಿ ಸೇನಾಪತಿಗಳನ್ನು ಕುರಿತು- ''ಅನರ್ಥವಾಗಿಹೋಯಿತು. ನಾನೇ ನನ್ನ ಮಗಳ ಕುತ್ತಿಗೆ ಕೊಯ್ದಹಾಗಾಯಿತು'' ಎಂದು ನುಡಿದು ಪತ್ರವನ್ನು ಅವರ ಕಡೆಗೆ ಬಿಸುಟಿ ನೆಲಕ್ಕೊರಗಿದನು. ಮಂತ್ರಿಯು ಆ ಪತ್ರವನ್ನು ಓದಿಕೊಂಡ ಕೂಡಲೆ ಸೇವಕರನ್ನು ಬಾವಿಯಲ್ಲಿ ಇಳಿಯಲು ಆಜ್ಞಾಪಿಸಿದನು. ಆಗ ನಾಲ್ವರು ಸೇವಕರು ಬಾವಿಯಲ್ಲಿ ಇಳಿದು, ಇಬ್ಬರು ತರುಣಿಯರ ಹೆಣಗಳನ್ನು ಮೇಲಕ್ಕೆ ತೆಗೆದರು. ಖಾವಿಂದ, ಇದನ್ನೆಲ್ಲ ನೋಡುತ್ತಿದ್ದ ನನ್ನ ಮೈಮೇಲಿನ ಎಚ್ಚರವೂ ತಪ್ಪಿದಂತಾಯಿತು. ಪದ್ಮಿನಿಯು ನಮ್ಮ ಬಳಿಯಲ್ಲಿರುವಳೆಂಬದರ ಸ್ಮರಣವು ಉಳಿಯದೆ, ಆ ಎರಡರಲ್ಲಿಯ ಒಂದು ಶವವನ್ನು ರಾಜ ಪುತ್ರಿಯೆಂಬ ಭ್ರಾಂತಿಯಿಂದ ನಾನು ನೋಡತೊಡಗಿದೆನು. ಈ ಪ್ರಸಂಗದಲ್ಲಿ ಅಲ್ಲಿ ನೆರೆದಿದ್ದ ಹಿಂದೂ ಮುಸಲ್ಮಾನರ ಕಣ್ಣೊಳಗಿಂದಲೂ ನೀರು ಸುರಿಯುತ್ತಿದ್ದವು; ಅವರ ಸಂಗಡ ನನ್ನ ಕಣ್ಣೊಳಗಿಂದಲೂ ನೀರು ಬಂದವು. ಆ ರಾಜಪುತ್ರಿಯ ಶವದ ಮೇಲೆ ಬೆಲೆಯುಳ್ಳ ವಸ್ತ್ರಾಭರಣಗಳಿದ್ದವು; ಅವು ಪದ್ಮಿನಿಯ ವಸ್ತ್ರಾಭರಣಗಳೇ ಎಂಬ ಗುರುತು ಬಹುಜನರಿಗೆ ಹತ್ತಿ ಅವರು ಮರ ಮರನೆ ಮರುಗಿದರು. ಆ ಕಾಲದಲ್ಲಿ ಜನರು ಇಟ್ಟ ಗೋಳನ್ನು ವರ್ಣಿಸಲಾಸಲ್ಲ! ಹೀಗೆ ಜನರು ಆಕ್ರೋಶಮಾಡುತ್ತಿರಲು, ದೇವರಾಜನು ಆ ಶವಗಳಬಳಿಗೆ ಹೋಗಿ ಮಗಳ ವಸ್ತ್ರಾಭರಣಗಳಿದ್ದ ಶವವನ್ನು ದಿಟ್ಟಿಸಿ ನೋಡತೊಡಗಿದನು. ಆ ವೃದ್ಧ ರಾಜನಿಗೆ ಮಗಳ ವಸ್ತ್ರಾಭರಣಗಳ ಗುರುತಷ್ಟೇ ಸಾಕಾಯಿತು. ಮೇಲೆ ಆಕೆಯ ಹಸ್ತಾಕ್ಷರದ ಪತ್ರವನ್ನು ಓದಿದ್ದನು. ಅದರಿಂದ ಆತನು ಅದು ತನ್ನ ಮಗಳಶವವೇ ಹೌದೆಂದು ನಿಶ್ಚಯಿಸಿ, ತನ್ನ ಮಗಳು ದಾಸಿಯಾದ ಮಲ್ಲಮ್ಮನೊಡನೆ ಬಾವಿಯನ್ನು ಹಾರಿಕೊಂಡದ್ದೇ ನಿಶ್ಚಯವೆಂದು ತಿಳಿದು ಮಗಳ ಶವದಮೇಲೆ

ಬಿದ್ದು ಬಗೆಬಗೆಯಾಗಿ ಹಲುಬಿದನು. ಆತನು ಮಗಳ ಗದ್ದವನ್ನು ಹಿಡಿದು–ಅಮ್ಮಾ ಪದ್ಮಿನಿ, ನಾನು ನಿನ್ನ ಅಹಿತವಮಾಡುವೆನೆಂದು ಭಾವಿಸಿದೆಯಾ? ನಿನ್ನನ್ನು ಮುಸಲ್ಮಾನರ ಕೈಯೊಳಗಿಂದ ಬಿಡಿಸಿದ ಹೆಗ್ಗನು ಕುರುಬನಿದ್ದು, ಆತನ ವಿಷಯವಾಗಿ ನೀನು ಪ್ರೇಮತಾಳುವದು ಅಯೋಗ್ಯ ವೆಂದು ಒಮ್ಮೆ ನಾನು ನಿನ್ನ ಮುಂದೆ ಹೇಳಿದ್ದು ನಿಜವು. ಇಷ್ಟೇ ತಪ್ಪಿಗಾಗಿ ಆ ಮಾತನ್ನು ಪತ್ರಮುಖಿಯಿಂದ ತಿಳಿಸಿ ನೀನು ಹೀಗೆ ಪ್ರಾಣ ಕೊಡಬಹುದೆ? ನಿನಗೆ ಈ ಮುಪ್ಪಿನ ತಂದೆಯ ಅಂತಃಕರುಣ ಬರಲೇ ಇಲ್ಲೇನು? ನೀನು ಇಷ್ಟು ಕಠಿಣಹೃದಯದವಳು ಹ್ಯಾಗಾದೆ? ಬಾಯಿಬಿಟ್ಟು ಹೇಳಿದ್ದರೆ ಆ ಹೆಗ್ಗನನ್ನು ಇದ್ದಲ್ಲಿಂದ ಕರೆಸಿ ಇಂದೇ ಲಗ್ನಮಾಡುತ್ತಿದ್ದೆನಲ್ಲ! ಆತನ ಘನವಾದ ಯೋಗ್ಯತೆಯು ನನಗಾದರೂ ಗೊತ್ತಾಗಿದೆ. ಆತನು ಮೂಲತಃ ಕುರುಬನಿರದೆ, ಯಾವನಾದರೂ ಕ್ಷತ್ರಿಯ ವೀರನಿರಬಹುದೆಂದು ನಾನು ತರ್ಕಿಸಿ ನಿನ್ನೊಡನೆ ಆತನ ವಿವಾಹಮಾಡಿ, ಮುಂದೆ ಈ ರಾಜ್ಯಕ್ಕೆ ಅವನನ್ನೇ ಯಾಕೆ ಕೂಡಿಸಬಾರದೆಂಬ ವಿಚಾರವನ್ನು ಮನಸ್ಸಿನಲ್ಲಿ ಮಾಡತೊಡಗಿದ್ದೆನು. ಆದರೆ ಅದೆಲ್ಲ ವ್ಯರ್ಥವಾಗಿ ಹೋಗಿ ನಾನೇ ರಾಜ್ಯ ಪರಿತ್ಯಾಗದೊಡನೆ ಈ ಜಡದೇಹವನ್ನು ಬಿಡುವ ಪ್ರಸಂಗ ಬಂದಿತಲ್ಲ! ಎಂದು ನುಡಿದು, ಮಂತ್ರಿಸೇನಾಪತಿಗಳನ್ನು ನೋಡಿ ಕಣ್ಣುತುಂಬ ನೀರುತಂದು—"ಈ ವೃದ್ಧ ದೇವರಾಯನ ಅವಸ್ಥೆ ಹೀಗೆಯೇ ಆಗುವದಲ್ಲವೆ ?" ಎಂದು ನುಡಿಯುವಾಗ ಆತನಿಗೆ ಮೂರ್ಛೆಬಂದಿತು. ಖಾವಿಂದ, ನಾನು ಬಹುದಿವಸಗಳಿಂದ ದೇವರಾಜನ ಪದರಿನಲ್ಲಿದ್ದವನು; ದ್ರವ್ಯ ಮತ್ತು ಅಧಿಕಾರಗಳ ಆಸೆಯಿಂದ ಕೃತಘ್ನನಾಗಿ ಇಂಥ ದ್ರೋಹದ ಕೆಲಸವನ್ನು ಮಾಡಿ, ನಿಷ್ಕಾರಣವಾಗಿ ಅನ್ನದಾತೃವಿನ ಘೋರದುಃಖಕ್ಕೆ ಕಾರಣನಾದೆನೆಂದು ನಾನು ಮರುಗಿದೆನು. ಆದರೆ ಇದಕ್ಕಾಗಿ ಖಾವಿಂದರು ಸಿಟ್ಟಾಗಬಾರದು; ಈ ವಿಚಾರವು ನನ್ನ ಮನಸ್ಸಿನಲ್ಲಿ ಬಹಳ ಹೊತ್ತು ನಿಲ್ಲಲಿಲ್ಲ. ತಮ್ಮ ಔದಾರ್ಯವು ಮನಸ್ಸಿನಲ್ಲಿ ಬರಲು ನಾನು ಮಾಡಿರುವ ತಮ್ಮ ಸೇವೆಯು ಬಹು ಯೋಗ್ಯವಾದದ್ದೆಂದು ತಿಳಿದು ನಾನು ದೇವರಾಜನ ದುರವಸ್ಥೆಯನ್ನು ಮೋಜಿನಿಂದ ನೋಡಹತ್ತಿದೆನು.

ಇದು ಪದ್ಮಿನಿಯ ಶವವಿರಬಹುದೇ? ಎಂಬ ಸಂಶಯವು ಬಹುಜನರ ಮನಸ್ಸಿನಲ್ಲಿ ಉತ್ಪನ್ನವಾಯಿತು.; ಯಾಕಂದರೆ, ಪದ್ಮಿನಿಯ ಪ್ರೀತಿಯ ದಾಸಿಯಾದ ಮಲ್ಲಮ್ಮನ ಮೋರೆಯ ಗುರುತುಹತ್ತಿದಂತೆ ಜನರಿಗೆ ಪದ್ಮಿನಿಯ ಮೋರೆಯ ಗುರುತು ನೆಟ್ಟಗೆ ಹತ್ತಲಿಲ್ಲ. ಈ ಮಾತನ್ನು ಮಂತ್ರಿ–ಸೇನಾಪತಿಗಳೇ ಮೊದಲಾದವರು ದೇವರಾಜನಿಗೆ ಅರುಹಿದರು; ಆದರೆ ದುಃಖಪೀಡಿತ ನಾದ ರಾಜನು ಇವರು ಏನಾದರೂ ತನಗೆ ಸಮಾಧಾನ ಹೇಳುತ್ತಿರುವರೆಂದು ತಿಳಿದು, ತನ್ನ ಮಗಳು ಬಾವಿಯನ್ನು ಹಾರಿಕೊಂಡದ್ದೇ ನಿಜವೆಂದು ನಿಶ್ಚಯಿಸಿದನು. ತಮ್ಮ ಸಂಶಯದ ಸಮರ್ಥನಮಾಡಹೋದಂತೆ ರಾಜನ ದುಃಖವು ಹೆಚ್ಚಾಗುವ ಲಕ್ಷಣವನ್ನು ನೋಡಿ ದರ್ಬಾರದ ಜನರು ಅಷ್ಟಕ್ಕೆ ಸುಮ್ಮನಾಗಿ ಶವಗಳ ಅಗ್ನಿಸಂಸ್ಕಾರದ ವ್ಯವಸ್ಥೆಯಲ್ಲಿ ತೊಡಗಿದರು. ಖಾವಿಂದ, ಆಗತಕ್ಕ ಮುಂದಿನ ಕೆಲಸಗಳೆಲ್ಲ ಆದವು; ಅವುಗಳನ್ನು ಹೇಳುವ ಅವಶ್ಯಕತೆ ನನಗಿಲ್ಲ, ಅವನ್ನು ಕೇಳುವ ಅವಶ್ಯಕತೆಯು ತಮಗೂ ಇಲ್ಲ. ಅಂದಿನ ದಿನವು ಕಳೆದು ಹೋಯಿತು. ತಿರುಗಿ ಎರಡು ದಿನ ನಾನು ಆನೆಗುಂದಿಯಲ್ಲಿಯೇ ಇದ್ದೆನು. ನಾನು ಜನರ, ವಿಶೇಷವಾಗಿ ಅರಮನೆಯ

ಜನರ ಪರಿಚಯದವನಾಗಿರುವದರಿಂದ ಜನರಿಗೆ ನನ್ನ ವಿಷಯದ ವಿಕಲ್ಪವು ಉತ್ಪನ್ನ ವಾಗುವಹಾಗಿದ್ದಿಲ್ಲ. ಎರಡು ದಿನದ ಆಡಳಿತದಲ್ಲಿ ನನಗೆ ಬಂದ ಅನುಭವವನ್ನು ಈಗ ತಮ್ಮ ಮುಂದೆ ಹೇಳುವೆನು. ಸಾಮಾನ್ಯವಾಗಿ ಜನರು ಪದ್ಮಿನಿಯು ಮರಣಹೊಂದಿರುವಳೆಂದು ತಿಳಿದುಕೊಂಡಿರುವರು; ದೇವರಾಜನ ಭಾವನೆಯಾದರೂ ಹಾಗೆಯೇ ಇರುವದು. ಆದರೆ ಮಂತ್ರಿಗಳೇ ಮೊದಲಾದವರ ಮಾತಿನಿಂದ ಆ ವೃದ್ಧರಾಜನು, ತನ್ನ ಮಗಳು ಬದುಕಿದ್ದರೆ ನನ್ನ ಭಾಗ್ಯವು ತೆರೆಯುವದಲ್ಲ! ನಾನೇಕೆ ಕೆಟ್ಟ ಆಲೋಚನೆ ಮಾಡಲಿ? ನನ್ನ ಕಂದಮ್ಮನ ಮೋರೆಯನ್ನು ನೋಡುವದಕ್ಕಾಗಿ ನಾನು ಬದುಕಿ ಉಳಿಯುವೆನು. ನೀವು ಬೇಗನೆ ನನ್ನ ಕೂಸಿನ ನಿಜವಾದ ಸಂಗತಿಯನ್ನು ತಿಳಿದುಕೊಳ್ಳಿರಿ; ಎಂದು ಹೇಳಿರುವನು. ಖಾವಿಂದ, ಜನರು ನಾಲ್ಕೂ ಕಡೆಗೆ ಪದ್ಮಿನಿಯ ಶೋಧಮಾಡಬಹುದಾಗಿ ತೋರುತ್ತದೆ; ಆದರೆ ಅವಶ್ಯವಾಗಿ ಮಾಡಲಿ, ಅವರ ಅಪ್ಪ–ಅಜ್ಜ ಬಂದರೂ ಪದ್ಮಿನಿಯ ಗೊತ್ತು ಅವರಿಗೆ ಹತ್ತುವಹಾಗಿಲ್ಲ! ನಿಮ್ಮೊಡನೆ ಬೇಗನೆ ಪದ್ಮಿನಿಯ ನಿಕಾ ಆಗಿಬಿಟ್ಟರೆ ತೀರಿತು, ಆಮೇಲೆ ಗೊತ್ತುಹತ್ತಿಯಾದರೂ ಮಾಡುವದೇನು? ಎಂದು ನುಡಿದು ರಣದುಲ್ಲಾನು ಸುಮ್ಮನಾಗಲು, ಕಾಸಿಮನು—"ರಣದುಲ್ಲಾಖಾನ, ನೀವು ಬಹಳವಾಗಿ ಶ್ರಮಬಟ್ಟಿರುವಿರಿ. ಇದರಲ್ಲಿ ಹೊನ್ನಮ್ಮನ ತಂತ್ರವೂ ಹೊಗಳತಕ್ಕದ್ದೇ ಸರಿ! ಪದ್ಮಿನಿಯನ್ನು ರಮಿಸಿ ಆಕೆಯ ಮನಸ್ಸನ್ನೊಲಿಸಿಕೊಂಡು ನಿಕಾ ಮಾಡಿಕೊಳ್ಳಲಿಕ್ಕೆ ಕೆಲವು ದಿನಗಳಾದರೂ ನಮಗೆ ಬೇಕಾದಾವು. ಅಷ್ಟರಲ್ಲಿ ಏನಾದರೂ ಮರೆಮೋಸಮಾಡಿ ಪದ್ಮಿನಿಯು ನಮ್ಮ ಕೈಬಿಡಬಾರದಾಗಿದೆ. ಆ ದುಷ್ಟ ಹೆಗ್ಗನು, ಅಲ್ಲ ಅಲ್ಲ; ಸಂಗಮರಾಜಪುತ್ರನಾದ ಹುಕ್ಕನು ಪದ್ಮಿನಿಯ ಪ್ರಾಪ್ತಿಗಾಗಿ ಬೇಕಾದ ಸಾಹಸ ಮಾಡಬಹುದು; ಆದರೆ ಆತನ ಸಾಹಸಕ್ಕೆ ಈ ಮರಣಸಂಶಯವು ದೊಡ್ಡ ಪ್ರತಿಬಂಧಕವಾಗಿದೆ. ಒಮ್ಮೆ ಆಕೆಯೊಡನೆ ನನ್ನ ನಿಕಾ ಆದಬಳಿಕ ಆಮೇಲೆ ಯಾರ ಅಂಜಿಕೆಯೂ ಇಲ್ಲ; ಈ ಹಾಳು ಕನ್ನಡಿಗರನ್ನು ಯಾರು ಕೇಳಬೇಕು? ಆದರೂ ನಾವು ಬೇಗನೆ ಕಾರ್ಯವನ್ನು ಸಾಧಿಸಿಕೊಳ್ಳುವದು ಜಾಣತನವು; ಆದರೆ ಇಂದು ಪದ್ಮಿನಿಯ ಕಡೆಗೆ ಹೋಗತಕ್ಕದ್ದಲ್ಲವೆಂದು ನೀನು ನನ್ನನ್ನು ಪ್ರತಿಬಂಧಿಸುತ್ತಿರುವದರಿಂದ ನಾನು ನಿನ್ನ ಮಾತುಗಳನ್ನು ಮೀರಲಾರೆನು. ಒಳ್ಳೇದು, ಈಗ ನೀನು ಹೋಗು; ಹೊನ್ನಮ್ಮನೂ ಹೋಗಲಿ. ನಾನು ನಿಮ್ಮ ಶ್ರಮದ ಸಫಲವಾಗುವಂತೆ ಮಾಡುವೆನು. ನಿಮ್ಮ ಉಪಕಾರವನ್ನು ಜನ್ಮವಿರುವತನಕ ನಾನು ಮರೆಯಲಿಕ್ಕಿಲ್ಲ.

ಈ ಮೇರೆಗೆ ನುಡಿಯಲು, ರಣದುಲ್ಲಾನು ಹೊರಟುಹೋದನು ಹೊನ್ನಮ್ಮನೂ ಹೋಗಿಬಿಟ್ಟಳು. ಇತ್ತ ಕಾಸಿಮನಿಗೆ ಮಾತ್ರ ಸಮಾಧಾನವಾಗಲಿಲ್ಲ. ಆತನಿಗೆ ಅತ್ಯಂತ ದುರ್ಮಿಲಳಾಗಿದ್ದ ಪದ್ಮಿನಿಯನ್ನು ತಾನು ಯಾವಾಗ ನೋಡೇನೆನ್ನುವ ಹಾಗೆ ಆಯಿತು. ಆತನಿಗೆ ಪದ್ಮಿನಿಯ ಹುಚ್ಚು ಬಹಳ, ಪದ್ಮಿನಿಯಾದರೂ ತನ್ನ ರೂಪ–ಗುಣ–ಯೌವನಗಳಿಂದ ಪುರುಷ ಮಾತ್ರರಿಗೆ ಹುಚ್ಚು ಹಿಡಿಸಲು, ಮೋಹಿನೀ ಸ್ವರೂಪಳಾಗಿದ್ದಳು! ಆಕೆಯ ಚಾರಿತ್ರ್ಯದ ಖ್ಯಾತಿಯು ಬಹಳ. ಆಗಿನ ಪ್ರತಿಯೊಬ್ಬ ರಾಜಪುತ್ರನೂ, ರಾಜ ಮನೆತನಕ್ಕೆ ಸಂಬಂದಿಸಿದ ಪ್ರತಿಯೊಬ್ಬ ವೀರನೂ ಪದ್ಮಿನಿಯನ್ನು ಮದುವೆಯಾಗುವದು ಮಹದ್ಭಾಗ್ಯವೆಂದು

ಭಾವಿಸಿದ್ದರು. ಪದ್ಮಿನಿಯು ರೂಪದಲ್ಲಂತು ಅಪ್ರತಿಮಳಾಗಿದ್ದಳು; ಆದರೆ ಆಕೆಯ ಆ ರೂಪದ ಖ್ಯಾತಿಯನ್ನು ಆಕೆಯ ಸದ್ಗುಣಗಳ ಖ್ಯಾತಿಯು ಹಿಂದಕ್ಕೆ ಸರಿಸಿತ್ತು. ಪದ್ಮಿನಿಯೆಂದರೆ ಗುಣಗಳ ಖಣಿಯು, ಎಂದು ಸರ್ವತ್ರ ಪ್ರಸಿದ್ಧವಾಗಿತ್ತು. ಇಂಥ ದಿವ್ಯ ರತ್ನವು ತನ್ನ ಕೈಸೇರಿದ್ದು ತಾನು ಅದರಿಂದ ಅಲಂಕೃತನಾಗುವದೊತ್ತಟ್ಟಿಗಿರಲಿ, ಅದನ್ನು ತಟ್ಟನೆ ಹೋಗಿ ನೋಡೇನೆಂದರೆ ಬಾರದಿರುವದನ್ನು ನೋಡಿ ತರುಣ ಕಾಸಿಮನು ಚಡಪಡಿಸುತ್ತಿದ್ದನು; ಆದರೂ ರಣದುಲ್ಲಾನ ಮಾತಿನಲ್ಲಿ ಅರ್ಥವಿರುವದೆಂದು ತಿಳಿದು ಆತನು ಅಂದು ಸಮಾಧಾನಮಾಡಿಕೊಂಡು ಪದ್ಮಿನಿಯ ಬಳಿಗೆ ಹೋಗಲಿಲ್ಲ. ನಾಳೆ ಬೆಳಗಾಗುತ್ತಲೇ ಏನೇ ಆಗಲಿ, ಪದ್ಮಿನಿಯ ಬಳಿಗೆ ಹೋಗಿಯೇತೀರ ಬೇಕೆಂದು ಆತನು ನಿಶ್ಚಯಿಸಿದನು. ಆ ವೀರನಿಗೆ ಯಾರ ಅಂಜಿಕೆಯೂ ಇದ್ದಿಲ್ಲ. ಅದರಲ್ಲಿ ಆನೆಗುಂದಿಯ ವೃದ್ಧರಾಜನ ಅಂಜಿಕೆಯಂತೂ ಸರ್ವಥಾ ಇದ್ದಿಲ್ಲ. ಆತನಿಗೆ ಅಲ್ಪಸ್ವಲ್ಪ ಅಂಜಿಕೆಯಿದ್ದರೆ ಸಂಗಮ ಪುತ್ರನಾದ ಹುಕ್ಕನದಿತ್ತು. ಮೊನ್ನಿನ ಮಲ್ಲಯುದ್ಧದಲ್ಲಿ ಹುಕ್ಕನ ಅನುಯಾಯಿ ಯಾದ ಮಲ್ಲನು ಮಲಿಕನಂಥ ಬಲಾಢ್ಯ ಜಟ್ಟಿಯನ್ನು ಒಗೆದದ್ದು ಕಾಸಿಮನ ಮನಸ್ಸಿಗೆ ವಿಶೇಷವಾಗಿ ಹತ್ತಿತ್ತು. ಹುಕ್ಕನ ಜನರು ದಿನದಿನಕ್ಕೆ ಬಲಿಷ್ಠರಾಗಹತ್ತಿರುವರೆಂತಲೂ, ಅವರ ತಂತ್ರಗಳನ್ನು ದುರ್ಲಕ್ಷಿಸುವದರ ಪರಿಣಾಮವು ತಮಗೆ ಘಾತವಾದೀತೆಂತಲೂ, ಆ ಯವನ ವೀರನು ತಿಳಿದಿದ್ದನು; ಆದರೆ ಆತನಿಗೆ ಹಿಡಿದಿದ್ದ ಪದ್ಮಿನಿಯ ಹುಚ್ಚು ಆತನಿಗೆ ಯಾವ ಕೆಲಸವನ್ನೂ ಹರಿಬಿದ್ದು ಮಾಡಗೊಡುತ್ತಿದ್ದಿಲ್ಲ. ಒಮ್ಮೆ ಪದ್ಮಿನಿಯು ತನ್ನವಳಾದಳೆಂದರೆ, ಈ ಹುಕ್ಕಗಿಕ್ಕರು ಎಷ್ಟರವರು? ಕ್ಷಣದಲ್ಲಿ ಇವರನ್ನು ಗೊತ್ತಿಗೆಹಚ್ಚ ಬಹುದು; ಎಂದು ಆತನು ಕರ್ತವ್ಯಪರಾಙ್ಮುಖನಾಗಿ ಪದ್ಮಿನಿಯ ಪ್ರಾಪ್ತಿಯ ಹಾದಿಯನ್ನು ನೋಡುತ್ತ ಕಾಲಹರಣ ಮಾಡುತ್ತಿದ್ದನು. ಕಾಸಿಮನು ಅಂದಿನ ರಾತ್ರಿಯನ್ನು ಹ್ಯಾಗಾದರೂ ಕಳೆದನು. ಮರುದಿವಸ ಬೆಳಗಾಯಿತು. ಆತನು ಅವಸರದಿಂದ ಪ್ರಾತರ್ವಿಧಿಗಳನ್ನು ತೀರಿಸಿಕೊಂಡನು. ಅತನ ನವಾಜಿನ ಶಾಸ್ತ್ರವೂ ಆಯಿತು; ಅಷ್ಟರಲ್ಲಿ ಎರಡು ತಾಸು ಹೊತ್ತು ಏರಲು, ಆ ಸ್ತ್ರೀ ವ್ಯಾಮೋಹಿತನಾದ ಕಾಸಿಮನು ವಸ್ತ್ರಾಲಂಕಾರಭೂಷಿತನಾಗಿ ಪದ್ಮಿನಿಯ ಬಳಿಗೆ ಹೋಗಲು ಸಿದ್ಧನಾದನು. ಹೊರಗೆ ಆತನ ಕುದುರೆಯು ಜೀನು ಹಾಕಿ ಸಿದ್ಧವಾಗಿತ್ತು. ಆತನೇನು ಪದ್ಮಿನಿಯನ್ನು ಕಾಣುವದಕ್ಕಾಗಿ ಗ್ರಾಮಾಂತರಕ್ಕೆ ಹೋಗಬೇಕಾಗಿದ್ದಿಲ್ಲ; ಅರಮನೆಯ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಹೋಗಬೇಕಾಗಿತ್ತು; ಆದರೆ ತನ್ನ ದೊಡ್ಡಿಸ್ತನವನ್ನು ಪದ್ಮಿನಿಗೆ ತೋರಿಸಬೇಕಾದದ್ದರಿಂದ ಆತನು ಇಲ್ಲದ ಆಡಂಬರ ಮಾಡಬೇಕಾಗಿತ್ತು. ಇದಕ್ಕಾಗಿಯೇ ಕಾಸಿಮನಿಗೆ ಪದ್ಮಿನಿಯ ಹುಚ್ಚುಹಿಡಿದಿತ್ತೆಂದು ನಾವು ಮೇಲೆ ಹೇಳಿದ್ದೇವೆ. ಕಾಸಿಮನು ಹೀಗೆ ಸಿದ್ಧವಾಗುತ್ತಿರಲು, ರಣದುಲ್ಲಾನು ಬಂದನು. ಕೂಡಲೆ ಕಾಸಿಮನು ಹೆಚ್ಚಿಗೆ ಮಾತಾಡದೆ ಅವನೊಡನೆ ಪದ್ಮಿನಿಯಿರುವ ಅಂತರ್ಗೃಹದ ಹೊರಟನು. ಅತಿ ವೇಗಶಾಲಿಯಾದ ಕುದುರೆ ಏರಿ ಹೊರಟಿದ್ದ ಕಾಸಿಮನಿಗೆ ಅಂತರ್ಗೃಹವು ಬಹು ದೂರವಾಗಿದ್ದಂತೆ ತೋರಿತು. ಕಾಸಿಮನು ಅಂತರ್ಗೃಹಕ್ಕೆ ಬಾಗಿಲಹತ್ತರ ಕುದುರೆಯನ್ನು ಇಳಿದು ಒಳಗೆ ಹೋಗಲು, ಕಾವಲುಗಾರರು ಈ ಸುದ್ದಿಯನ್ನು ಪದ್ಮಿನಿಗೆ ತಿಳಿಸಿದರು. ಅಷ್ಟರಲ್ಲಿ

ಕಾಸಿಮನು ಪದ್ಮಿನಿಯು ಕುಳಿತಿದ್ದ ಕೋಣೆಯ ಬಾಗಿಲಿಗೆ ಹೋದನು. ಆಗ ಪದ್ಮಿನಿಯು ರಣದುಲ್ಲಾನನ್ನು ಕುರಿತು—''ರಣದುಲ್ಲಾ, ಇದೆಲ್ಲ ನೀವು ಕರುಳಲ್ಲಿ ಕತ್ತರಿಯಾಡಿಸಿದ್ದರ ಫಲವಾಗಿದೆ'' ಎಂದು ನುಡಿದ ಮಂಜುಲಶಬ್ದಗಳು ಕಾಸಿಮನ ಕಿವಿಗೆ ಬೀಳಲು, ಅವನ ಮೈ ಜುಮ್ಮೆಂದು ರೋಮಾಂಚನಗಳೆದ್ದವು.

## ಸಂಬಂಧ ಸೂಚನೆ

ಕಾಸಿಮನ ಕಿವಿಗೆ ಬಿದ್ದ ಈ ಮಂಜುಲಶಬ್ದಗಳ ಅರ್ಥವು ಆತನಿಗೆ ಸರ್ವಥಾ ತಿಳಿಯಲಿಲ್ಲ; ಯಾಕಂದರೆ, ಆ ಯವನವೀರನು ಕನ್ನಡವನ್ನು ಅರಿಯದವನಾಗಿದ್ದನು. ಪದ್ಮಿನಿಯ ಈ ಮಾತುಗಳ ಅರ್ಥವು ಆತನಿಗೆ ತಿಳಿಯದಿರುವದರಲ್ಲಿಯೇ ಹೆಚ್ಚು ಸ್ವಾರಸ್ಯವಿರುವದೆಂಬುದನ್ನು ನಾವು ಬಿಚ್ಚಿ ಹೇಳುವ ಕಾರಣವಿಲ್ಲ. ಅರ್ಥವು ತಿಳಿದಿದ್ದರೆ ಆ ತರುಣವೀರನ ಉತ್ಸಾಹವು ಕುಗ್ಗಿ, ಆತನ ಕಾಮುಕತನದ ಮಬ್ಬು ಕೆಲಮಟ್ಟಿಗೆ ವಿರಲವಾಗಬಹುದಾಗಿತ್ತು; ಯಾಕಂದರೆ, ಆಕೆಯ ಮಾತು ತಿಳಿದು ಪದ್ಮಿನಿಯು ತನ್ನ ಬಳಿಗೆ ಬಂದದ್ದಕ್ಕಾಗಿ ಅಸಮಾಧಾನಪಡುವಳೆಂಬದು ಆತನಿಗೆ ಗೊತ್ತಾಗಿದ್ದರೆ ಪದ್ಮಿನಿಮಯನಾಗಿ ಹೋಗಿದ್ದ ಆ ಕಾಮಾಂಧನ ಮನಸ್ಸಾದರೂ ಅಸಮಾಧಾನ ಪಡುತ್ತಿತ್ತು. ಹೀಗಿದ್ದರೆ ಪದ್ಮಿನಿಯ–ಮಾತು ಕೇಳಿ ಕಾಸಿಮನಿಗೆ ಆನಂದವಾದ ಕಾರಣವೇನೆಂದು ವಾಚಕರು ಕೇಳಬಹುದು. ಕಾಸಿಮನಿಗೆ ಆನಂದವಾದದ್ದು ಪದ್ಮಿನಿಯ ಮಾತಿನ ಅರ್ಥ ತಿಳಿದದ್ದರಿಂದಲ್ಲ, ಕೇವಲ ಆಕೆಯ ಆ ಮಾತಿನೊಳಗಿನ ಮಂಜುಲತೆಯಿಂದ! ಕಾಸಿಮನು ಬಾಗಿಲಿಗೆ ಬಂದ ವರ್ತಮಾನವನ್ನು ಕೇಳಿದಕೂಡಲೆ ಚತುರೆಯಾದ ಪದ್ಮಿನಿಯು ಜಾಗರೂಕಳಾದಳು; ಆ ಕ್ಷತ್ರಿಯ ಪುತ್ರಿಯು ಮಹಾ ಬುದ್ಧಿಶಾಲಿಯು, ಅತ್ಯಂತ ಧೂರ್ತಳು; ಪ್ರಸಂಗವರಿತು ನಡೆಯುವಲ್ಲಿ ಬಲು ಜಾಣೆಯು! ಇನ್ನು ಮದಾಂಧನಾದ ಕಾಸಿಮನ ಆಗಮನಕ್ಕೆ ವಿಲಂಬವಾಗದೆಂದು ಆಕೆಯು ತರ್ಕಿಸಿದ್ದರಿಂದ, ಮಾಡತಕ್ಕ ಎಲ್ಲ ಸಿದ್ಧತೆಯನ್ನು ಮೊದಲೇ ಮಾಡಿದ್ದಳು. ಕಾಸಿಮನು ಬಂದಕೂಡಲೆ ಆಕೆಯು ದಿಟ್ಟತನದಿಂದ ಎದ್ದುನಿಂತು ಮಂಚದಮೇಲೆ ಕುಳಿತುಕೊಳ್ಳಬೇಕೆಂದು ಆತನಿಗೆ ವಿನಯದಿಂದ ಸೂಚಿಸಿದಳು. ಪದ್ಮಿನಿಯ ಈ ಆನಂದಕಾರಕ ವರ್ತನದಿಂದ ಕಾಸಿಮನ ಕಾಮುಕತೆಯು ಹೆಚ್ಚಿ, ಆತನಿಗೆ ಸ್ವರ್ಗವು ಮೂರೇಬೆರಳು ಉಳಿಯಿತು. ತಾನು ಹೋದಕೂಡಲೆ ಪದ್ಮಿನಿಯು ತನಗೆ ಮರೆಯಾಗಿ ದುಃಖದಿಂದ ಕಣ್ಣೀರು ಸುರಿಸಬಹುದೆಂತಲೂ, ಕದಾಚಿತ್ ಇಂದು ತಾನೇ ಆಕೆಯ ಮೋರೆಯನ್ನು ಕೂಡ ನೋಡದೆ ಹಿಂದಿರುಗಿಬರಬೇಕಾಗಬಹುದೆಂತಲೂ ಆತನು ಭಾವಿಸಿದ್ದನು; ಆದರೆ ಈಗ ಹಾಗೇನೂ ಆಗದೆ ಪದ್ಮಿನಿಯು ಗಾಂಭೀರ್ಯದ ಗೌರವದಿಂದ ತನ್ನ ಸ್ವಾಗತಮಾಡಿದ್ದನ್ನು ನೋಡಿ ಅವನಿಗೆ ಆನಂದವಷ್ಟೇ ಅಲ್ಲ, ಆಶ್ಚರ್ಯವೂ ಆಯಿತು. ತನ್ನ ಸಲುವಾಗಿಯೇ ಇಷ್ಟು ಸುವ್ಯವಸ್ಥೆ ಮಾಡಿಸಿರುವದು ತನ್ನ ಮೇಲಿನ ಪದ್ಮಿನಿಯ ಪ್ರೇಮದ ಲಕ್ಷಣವೆಂದು ತಿಳಿದು, ಆತನು

ಮನಸ್ಸಿನಲ್ಲಿ ಉಬ್ಬಿದನು. ಒಬ್ಬ ಪ್ರೇಮಮುಗ್ಧಳಾದ ನವಯುವತಿಯು ತನ್ನ ಪಂಚಪ್ರಾಣವಾಗಿದ್ದ ಪತಿಯ ಸಂತೋಷಕ್ಕಾಗಿ ಮನಃಪೂರ್ವಕ ಪರಿಶ್ರಮ ಮಾಡುವಂತೆ ಪದ್ಮಿನಿಯು ಕಾಸಿಮನ ಚಿತ್ತಹರಣಕ್ಕಾಗಿ ಪರಿಶ್ರಮ ಮಾಡಿದ್ದಳು! ನೋಡುವವರಿಗೆ ಪದ್ಮಿನಿಯ ವ್ಯವಸ್ಥೆಯಲ್ಲಿ ಆಡಂಬರವು ತೋರುತ್ತಿದ್ದಿಲ್ಲ, ಆದರವು ತೋರುತ್ತಿತ್ತು. ಸೂಚನೆಯಂತೆ ಕಾಸಿಮನು ಸಂತೋಷದಿಂದ ಕುಳಿತುಕೊಳ್ಳಲು, ಪದ್ಮಿನಿಯು ದಾಸಿಯರ ಮರೆಯಲ್ಲಿ ವಿನಯದಿಂದ ಕುಳಿತುಕೊಂಡಳು. ಪದ್ಮಿನಿಯ ಈ ಸುವ್ಯವಸ್ಥೆಯ ಸೊಬಗಿನಿಂದ ಆ ಧೂರ್ತ ತರುಣಿಯ ಕೈಯಲ್ಲಿ ಕಾಸಿಮನು ಸಿಕ್ಕುಹೋದಂತಾಯಿತು. ಏನೋ ಒಂದು ಉಪಕಾರದ ಹೊರೆಯು ಕಾಸಿಮನನ್ನು ಪೀಡಿಸತೊಡಗಿತು. ಆತನು ಏನುಮಾಡಬೇಕೆಂಬದನ್ನು ತಿಳಿಯದಾದನು. ಸ್ವಲ್ಪ ಹೊತ್ತುಸುಮ್ಮನೆ ಕುಳಿತು ಯೋಚಿಸಿ ಆತನು ಕಂಪಿತ ಸ್ವರದಿಂದ ಪದ್ಮಿನಿಯನ್ನು ಕುರಿತು ಉರ್ದು ಭಾಷೆಯಲ್ಲಿ— "ದೇವರಾಜಪುತ್ರಿ, ನಿನ್ನ ಸದ್ಗುಣಗಳಿಗೆ ಲುಬ್ಧನಾದ ನಾನು, ನಿನ್ನ ಮನಸ್ಸು ನೊಂದೀತು–ಬೆಂದೀತು ಎಂಬುದರ ಅರಿವಿಲ್ಲದೆ ನಿನ್ನನ್ನು ನನ್ನ ಜನರಿಂದ ಹರಣಮಾಡಿಸಿದೆನು. ದೇವರಾಜರಿಗೆ ಒಬ್ಬಳೇ ಒಬ್ಬ ಮಗಳಾದ ನೀನು ಪರಮವಾತ್ಸಲ್ಯದಿಂದ ಪರಿಪೋಷಿಸಲ್ಪಟ್ಟಿರುವೆಯೆಂಬದನ್ನು ನಾನು ಬಲ್ಲೆನು. ನೀನು ಇಲ್ಲದಂತಾದದ್ದರಿಂದ ದೇವರಾಜರು ಇದ್ದೂ ಇಲ್ಲದಂತೆಯಾಗಿರುವರು. ನಿನ್ನ ಆ ವೃದ್ಧ ತಂದೆಯು ಇನ್ನುಮೇಲೆ ಜೀವಿಸುವನೆಂಬ ಆಸೆಯೂ ನನಗೆ ತೋರುವದಿಲ್ಲ; ಆದರೆ ಈ ಎಲ್ಲ ಅನರ್ಥಗಳಿಗೆ ಕಾರಣನಾಗಿ ನಿನ್ನ ಅನಂತ ಅಪರಾಧಗಳನ್ನು ಮಾಡಿರುವ ನನ್ನನ್ನು ನೀನು ಹೀಗೆ ದೊಡ್ಡ ಮನಸ್ಸಿನಿಂದ ಆದರಿಸುವೆಯಲ್ಲ! ಈ ಔದಾರ್ಯವು ಕ್ಷತ್ರಿಯ ಪುತ್ರಿಯಾದ ನಿನ್ನ ಕುಲೀನತೆಗೆ ಬಹಳವಾಗಿ ಒಪ್ಪುತ್ತದೆ; ಆದರೆ ದೇವಿ, ಪದ್ಮಿನಿ, ಹೇಳು, ನಿನ್ನ ಈ ದೊಡ್ಡಮನಸ್ಸಿಗಾಗಿ ನಾನೇನು ನಿನ್ನ ಹಿತಮಾಡಲಿ ಹೇಳು. ಗುಣಾಢ್ಯಳಾದ ನಿನ್ನ ಮಾತನ್ನು ನಾನು ಸರ್ವಥಾ ಮೀರುವದಿಲ್ಲ, ನಿನ್ನಲ್ಲಿ ನನ್ನ ಸಂಪೂರ್ಣ ವಾತ್ಸಲ್ಯವಿರುತ್ತದೆಂಬದನ್ನು ದೃಢವಾಗಿ ನಂಬು."

ಈ ಮೇರೆಗೆ ಕಾಸಿಮನು ಉರ್ದು ಭಾಷೆಯಲ್ಲಿ ಆಡಿದ ಸೌಜನ್ಯದ ಮಾತುಗಳು ಪದ್ಮಿನಿಗೆ ಸ್ಪಷ್ಟವಾಗಿ ತಿಳಿದವು; ಯಾಕಂದರೆ ಬಾಲ್ಯದಾರಭ್ಯ ಯವನರೊಡನೆ ಆದ ಬಳಿಕೆಯಿಂದ ಉರ್ದು ಭಾಷೆಯನ್ನು ಆಕೆಯು ಸಹಜವಾಗಿ ಅರಿತಿದ್ದಳು. ದಕ್ಷಿಣದಲ್ಲಿ ಮುಸಲ್ಮಾನರು ಬಂದು ಕೆಲವು ವರ್ಷಗಳಾಗಿದ್ದು, ಕೆಲವು ಮುಸಲ್ಮಾನರು ಆನೆಗುಂದಿಯ ಅರಸರ ಚಾಕರಿಗೂ ಬಹುದಿವಸ ಗಳಿಂದ ನಿಂತುಕೊಳ್ಳುತ್ತ ಬಂದಿದ್ದರು. ಅವರಲ್ಲಿ ರಣದುಲ್ಲಾನಂಥ ಕೊಜ್ಜೆಯರನ್ನು ಆನೆಗುಂದಿಯ ಅರಸರು ಆದರದಿಂದ ಚಾಕರಿಗೆ ಇಟ್ಟುಕೊಳ್ಳತೊಡಗಿದ್ದರು; ಆದ್ದರಿಂದಲೇ ರಣದುಲ್ಲಾನು ರಾಣೀವಾಸದ ರಕ್ಷಕನಾಗಿದ್ದನು. ಹೀಗೆ ರಾಣೀವಾಸದ ಸಂಬಂಧವಾದ ಯವನರೊಡನೆ ಚಿಕ್ಕಂದಿನಲ್ಲಿ ವ್ಯವಹರಿಸುವಾಗ ತೀಕ್ಷ್ಣಬುದ್ಧಿಯ ಪದ್ಮಿನಿಗೆ ಉರ್ದುಭಾಷೆಯು ಸಹಜವಾಗಿ ಬಂದು ಹೋಗಿತ್ತು. ಆಕೆಯು ಕಾಸಿಮನ ಮಾತುಗಳಿಂದ ಸಮಾಧಾನಪಟ್ಟಂತೆ ನಟಿಸಿ ಆತನನ್ನು ಕುರಿತು—"ಖಾನಸಾಹೇಬ, ತಮ್ಮಂಥ ದೊಡ್ಡ ಮನುಷ್ಯರ ಬಳಿಯಲ್ಲಿರುವ ನನಗೆ ಅಸಮಾಧಾನವೇಕೆ ಆಗಬೇಕು ? ನನ್ನ ಮೇಲೆ ನನ್ನ ಪೂಜ್ಯ ತಂದೆಯು ಮಾಡುತ್ತಿರುವದಕ್ಕಿಂತ

ಹೆಚ್ಚು ವಾತ್ಸಲ್ಯವನ್ನು ನೀವು ಈಗ ಮಾಡುತ್ತಿರುವದರಿಂದ ನಿಮ್ಮನ್ನು ನಾನು ತಂದೆಯಂತಲೇ ತಿಳಿಯುವೆನು. ಮುಖ್ಯವಾಗಿ ನನಗೆ ಬೇಕಾದದ್ದು ಪಿತೃವಾತ್ಸಲ್ಯವು! ಅಂಥ ವಾತ್ಸಲ್ಯವು ನಿಮ್ಮಲ್ಲಿದ್ದುದು ಕಂಡುಬರುವದರಿಂದ, ನನಗೆ ಆನೆಗುಂದಿಯ ಆ ರಾಣಿವಾಸವೇನು, ಕಂಪಲಿಯ ಈ ರಾಣಿವಾಸವೇನು? ಇಂದು ಕಂಪಲಿಯಲ್ಲಿದ್ದ ನಾನು ನಾಳೆ ಆನೆಗುಂದಿಗೆ ಹೋಗಬಹುದು; ಅದರ ಚಿಂತೆ ನನಗಿಲ್ಲ, ಖಾನಸಾಹೇಬ, ನಿಮ್ಮ ದೊಡ್ಡ ಮನಸ್ಸನ್ನೂ, ಪರನಾರೀ ಸೋದರತ್ವವನ್ನೂ ನೋಡಿ, ನನ್ನ ಹೃದಯದ ಅಂಜಿಕೆಯೆಲ್ಲ ಅಳಿದು ಹೋಯಿತು; ಕುಕಲ್ಪನೆಗಳು ದೂರಾದವು. ನನಗೆ ಇಲ್ಲಿ ಯಾವ ಮಾತಿನ ಕೊರತೆಯೂ ಇಲ್ಲ, ಮೇಲಾಗಿ ನನಗೆ ಇಲ್ಲಿ ಪರಕೀಯರು ಯಾರಿದ್ದಾರೆ? ತಾವು ನನ್ನ ತಂದೆಯ ಮಿತ್ರರು, ಈ ರಣದುಲ್ಲಾಖಾನನು ನನ್ನ ತಂದೆಯ ವಿಶ್ವಾಸದ ಪರಿವಾರದೊಳಗಿನವನು; ಈ ಹೊನ್ನಮ್ಮನಂತೂ ನನ್ನ ಪ್ರಿಯ ದಾಸಿಯು. ಮೇಲಾಗಿ ಈ ಕಂಪಲಿಯ ರಾಣಿವಾಸವು ನನ್ನ ಪೂರ್ಣ ಪರಿಚಯದ್ದು. ಅಂದಬಳಿಕ ನನಗೆ ಸಂಕೋಚವೇತರದು? ನನ್ನ ಮನೆಯಲ್ಲಿಯೇ ನಾನಿರುತ್ತೇನೆಂದು ಭಾವಿಸುತ್ತೇನೆ; ಆದರೆ ಖಾನಸಾಹೇಬ, ನನ್ನನ್ನು ನೀವು ಬಹಳವಾಗಿ ಹೊಗಳಿದಿರಿ; ಆದರೆ ಅಂತ ಗುಣಗಳೇನು ನನ್ನಲ್ಲಿರುವದಿಲ್ಲ, ಸುಮ್ಮನೆ ಸ್ತೋತ್ರ ಮಾಡಿದಹಾಗಾಯಿತು. ದೊಡ್ಡವರು ತಮ್ಮ ಹಾಗೆ ಮಂದಿಯನ್ನು ತಿಳಿಯುವದು ಅವರ ಸ್ವಭಾವಗುಣವು. ಇದು ನಿಮ್ಮ ಔದಾರ್ಯಕ್ಕೂ ಸೌಜನ್ಯಕ್ಕೂ ಪರಮಭೂಷಣವಾಗಿರುವದು. ಇಲ್ಲಿಗೆ ಬಂದದ್ದಕ್ಕಾಗಿ ನನಗೆ ಎಳ್ಳಷ್ಟು ಅಸಮಾಧಾನವಿಲ್ಲ, ನಾನು ನನ್ನ ತಂದೆಯ ಮನೆಯಲ್ಲಿದ್ದಂತೆಯೇ ಸಮಾಧಾನದಿಂದಿರುವೆನು. ತಮಗೆ ಮಾತ್ರ ನನ್ನ ಯೋಗಕ್ಷೇಮವನ್ನು ವಿಚಾರಿಸುವಲ್ಲಿ ಶ್ರಮವಾಗುವದು.''

ಈ ಮೇರೆಗೆ ಆಡಿದ ಪದ್ಮಿನಿಯ ಮಾತುಗಳನ್ನು ಕೇಳಿ ಕಾಸಿಮನಿಗೆ ಸಮಾಧಾನ ವಾಯಿತೆಂದು ಹೇಳುವದಕ್ಕಿಂತ ಅಸಮಾಧಾನವಾಯಿತೆಂದು ಹೇಳುವದೇ ಯೋಗ್ಯವು; ಯಾಕಂದರೆ, ಪದ್ಮಿನಿಯು ತನ್ನನ್ನು ತಂದೆಗೆ ಹೋಲಿಸಿಕೊಂಡದ್ದು ಆತನಿಗೆ ಅನುಚಿತವಾಗಿ ತೋರಿತು. ಆತನು ಬಹು ಶ್ರಮಪಟ್ಟು ರಣದುಲ್ಲಾನನ್ನೂ, ಹೊನ್ನಮ್ಮನನ್ನೂ ಒಡಕೊಂಡು ಪದ್ಮಿನಿಯ ಹರಣ ಮಾಡಿಸಿದ್ದನು. ಒಂದು ಪಕ್ಷದಲ್ಲಿ ಪದ್ಮಿನಿಯು ದುಃಖದಿಂದ ಕಣ್ಣೀರು ಸುರಿಸುತ್ತ ತನ್ನ ಸಂಗಡ ಮಾತಾಡದಿದ್ದರೂ, ಅಥವಾ ಮೂಲತಃ ತನ್ನ ಕಣ್ಣಿಗೆ ಬೀಳದಿದ್ದರೂ ಚಿಂತೆಯಿದ್ದಿಲ್ಲವೆಂದು ಆತನು ಭಾವಿಸಿದನು. ಪದ್ಮಿನಿಯು ತನ್ನನ್ನು ತನ್ನ ತಂದೆಗೆ ಹೋಲಿಸಿದ್ದು ಕಾಸಿಮನಿಗೆ ಸರ್ವಥಾ ಸಮಾಧಾನಕರವಾಗಲಿಲ್ಲ; ಆದರೂ ಈ ದಿನ ಹೆಚ್ಚಿನ ಪ್ರಸಕ್ತಿಗೆ ಹೋಗುವದು ಯೋಗ್ಯವಲ್ಲೆಂದು ತಿಳಿದು ಆತನು ಪದ್ಮಿನಿಗೆ—''ರಾಜಪುತ್ರಿ, ಏನೂ ಚಿಂತೆಯಿಲ್ಲ, ನೀನು ನಿಶ್ಚಿಂತೆಯಿಂದ ಇರಬಹುದು. ಈ ಕಾಸಿಮನಿಂದಲೇ ನಿನ್ನ ಕಲ್ಯಾಣವಾಗ ಬೇಕೆಂದು ಅಲ್ಲಾನ ಸಂಕೇತವಿರುವದು. ಇಲ್ಲದಿದ್ದರೆ ಆನೆಗುಂದಿಯ ಅರಮನೆಯಲ್ಲಿ ಮಲಗಿದ್ದ ನೀನು ಅನಾಯಾಸವಾಗಿ ನನ್ನ ಕೈಸೇರುತ್ತಿದ್ದಿಲ್ಲ, ಇರಲಿ, ನೀನು ಇನ್ನೆರಡು ದಿನ ವಿಶ್ರಾಂತಿಯನ್ನು ಹೊಂದು. ಮತ್ತೆ ನಾನು ನಿನ್ನನ್ನು ಕಾಣುವೆನು. ನೀನು ಚತುರಳಿರುತ್ತೀ, ಪರರ ಇಂಗಿತವನ್ನು ತಿಳಿದುಕೊಳ್ಳಲು ಸಮರ್ಥಳಿರುತ್ತಿ; ಆದ್ದರಿಂದ ನಿನ್ನನ್ನು ನಾನು ಯಾವ

ಉದ್ದೇಶದಿಂದ ಹರಣಮಾಡಿರುವೆನೆಂಬದನ್ನು ಬಾಯಿಬಿಚ್ಚಿ ಹೇಳಲವಶ್ಯವಿಲ್ಲ; ಅಂಥ ಪ್ರಸಂಗ ತರುವದು ನಿನ್ನ ಚಾತುರ್ಯಕ್ಕೆ ಒಪ್ಪುವ ಮಾತೂ ಅಲ್ಲ. ಆಗಲಿ, ನಾನು ನಾಳೆ ಮತ್ತೆ ನಿನ್ನ ಬಳಿಗೆ ಬರುವೆನು. ಆಗ ಇನ್ನೂ ಮಾತಾಡೋಣವಂತೆ'' ಎಂದು ನುಡಿದು, ರಣದುಲ್ಲಾನನ್ನು ಕುರಿತು—''ರಣದುಲ್ಲಾ, ಹೇಳು. ಪದ್ಮಿನಿಗೆ ಚೆನ್ನಾಗಿ ತಿಳಿಸಿಹೇಳೆಂದು ಹೊನ್ನಮ್ಮನಿಗೆ ಹೇಳು, ಆಕೆಯು ಇಲ್ಲಿ ಕಾಣುವದಿಲ್ಲವಲ್ಲ? ಇಷ್ಟು ಜನರಿದ್ದು ಹೊನ್ನಮ್ಮನು ಎಲ್ಲಿ ಹೋಗಿರುವಳು ? ಆಗುವ ಕಾರ್ಯದಲ್ಲಿ ವಿಲಂಬವಾಗುವದು ಸರಿಯಲ್ಲ'' ಎಂದು ನುಡಿಯುತ್ತಿರಲು, ಒಬ್ಬ ಸೇವಕನು ಬಂದು ಕಾಸಿಮನಿಗೆ—''ಖಾವಿಂದ, ಬಖತ್ಯಾರ ಖಿಲಜಿಯವರು ಬಂದಿರುವರೆಂ''ದು ಅರಿಕೆ ಮಾಡಿಕೊಂಡನು. ಈ ಪ್ರಸಂಗದಲ್ಲಿ ಬಖತ್ಯಾರನು ಬಂದದ್ದು ಕಾಸಿಮನಿಗೆ ಸಮಾಧಾನಕರವಾಗಲಿಲ್ಲ; ಯಾಕಂದರೆ, ತನ್ನ ನೀಚಕೃತ್ಯಗಳು ಬಖತ್ಯಾರನಂಥವರಿಗೆ ತಿಳಿಯಬಾರದೆಂದು ಆತನು ಇಚ್ಛಿಸುತ್ತಿದ್ದನು; ಆದರೂ ಆತನನ್ನು ಕಾಣದಿರುವದು ಅಪ್ರಶಸ್ತವೆಂದು ತಿಳಿದು, ಪದ್ಮಿನಿಯ ಯೋಗಕ್ಷೇಮವನ್ನು ಸರಿಯಾಗಿ ನೋಡಿಕೊಳ್ಳಲು ಆಜ್ಞಾಪಿಸಿ, ಆಕೆಯನ್ನು ದಕ್ಷತೆಯಿಂದ ಕಾದುಕೊಂಡಿರುವಂತೆ ಅಂತರಂಗದಿಂದ ತಿಳಿಸಿ, ಪದ್ಮಿನಿಯ ಅನುಮತಿ ಪಡೆದು ಬಖತ್ಯಾರನನ್ನು ಕಾಣುವದಕ್ಕಾಗಿ ಕಾಸಿಮನು ಹೊರಟುಹೋದನು. ಇತ್ತ ಪದ್ಮಿನಿಯು ತನ್ನ ಪರಮಾವಧಿಯಾದ ದುಃಖವನ್ನು ಬಹು ಪ್ರಯಾಸದಿಂದ ಹತ್ತಿಕ್ಕಿಕೊಂಡು, ಬಳಿಯಲ್ಲಿದ್ದವರಿಗೆ ತನ್ನ ಮನೋಭಾವವನ್ನು ತಿಳಿಯದಂತೆ ಬಹು ಜಾಗರೂಕತೆಯಿಂದ ವರ್ತಿಸತೊಡಗಿದಳು.

ಬಖತ್ಯಾರನ ಪರಿಚಯವು ವಾಚಕರಿಗಿರುವದಷ್ಟೆ? ಆತನು ಬಹಾಉದ್ದೀನನ ಮಿತ್ರನೆಂಬುದನ್ನಾದರೂ ಅವರು ಮರೆತಿರಲಿಕ್ಕಿಲ್ಲ. ತನ್ನ ಮಿತ್ರನಾದ ಬಹಾಉದ್ದೀನನ ಕೊಲೆಗೆ ಕಾರಣನಾದ ಕಾಸಿಮನ ಸೇಡು ತೀರಿಸಿಕೊಳ್ಳಬೇಕಾದದ್ದಲ್ಲದೆ, ತನ್ನ ಮಿತ್ರ ಬಹಾಉದ್ದೀನನು ಪ್ರಸಂಗವಶಾತ್ ಪದ್ಮಿನಿಯ ಮಾನರಕ್ಷಣೆ ಮಾಡುವದಕ್ಕಾಗಿಯೂ ತನಗೆ ಆಶ್ರಯಕೊಟ್ಟಿದ್ದ ಜಂಬುಕೇಶ್ವರ ರಾಯನ ರಾಜ್ಯದ ಹಿತವನ್ನು ಸಾಧಿಸುವದಕ್ಕಾಗಿಯೂ ತನ್ನನ್ನು ಆನೆಗುಂದಿಯಲ್ಲಿ ಬಿಟ್ಟುಹೋದದ್ದರಿಂದ ಆ ಕೃತಜ್ಞ ಬಖತ್ಯಾರನು ಕಾಸಿಮನ ಪ್ರತಿಯೊಂದು ಕೃತಿಯಕಡೆಗೆ ಸಂಪೂರ್ಣ ಲಕ್ಷಕೊಡುತ್ತಲಿದ್ದನು. ಮರಣಹೊಂದಿದ ಆತನ ಮಿತ್ರನ ಮಾತು ನಡೆಸುವ ವಿಷಯದಲ್ಲಿ ಆತನು ದಕ್ಷನಾಗಿರುತ್ತಿದ್ದನು. ಕಾಸಿಮನು ನೀಚತನದಿಂದ ಪದ್ಮಿನಿಯನ್ನು ಅಪಹರಿಸುವ ಯತ್ನ ನಡೆಸಿದ್ದನ್ನು ಬಖತ್ಯಾರನು ಅರಿತಿದ್ದನು. ರಾಜಪುತ್ರಿಯ ಈ ಅಪಹರಣ ಪ್ರಸಂಗವನ್ನೇ ಕಾಸಿಮನ ಸೇಡುತೀರಿಸಿಕೊಳ್ಳಲಿಕ್ಕೆ ಉಪಯೋಗಿಸಿಕೊಳ್ಳಬೇಕೆಂದು ಆ ಚತುರನು ತಂತ್ರವನ್ನು ಒಡ್ಡತೊಡಗಿದ್ದನು. ಆ ತಂತ್ರದ ಸೂಚನೆಯನ್ನು ದೇವಿಯಕೊಳ್ಳದಲ್ಲಿದ್ದ ಬುಕ್ಕನಿಗೆ ಮುಂಗಡವಾಗಿ ತಿಳಿಸಿದ್ದನ್ನು ನಾವು ಹಿಂದಿನ ''ವೀರರ ಸಂಗಮ'' ಎಂಬ ಪ್ರಕರಣದಲ್ಲಿ ಹೇಳಿ ಬಹಳಹೊತ್ತು ಆಗಿರುವದಿಲ್ಲ. ಪದ್ಮಿನಿಯ ಹರಣಕ್ಕಾಗಿ ಮಾಡುತ್ತಿದ್ದ ಕಾಸಿಮನ ಯತ್ನಗಳು ಆಗಾಗ್ಗೆ ಬಖತ್ಯಾರನಿಗೆ ಗೊತ್ತಾಗುತ್ತಿದ್ದವು. ಈ ಕಾರ್ಯಕ್ಕೆ ವಿಘ್ನವನ್ನುಂಟುಮಾಡಿ ಪದ್ಮಿನಿಯು ಕಾಸಿಮನ ಕೈಸೇರದಂತೆ ಮಾಡುವದು ಆತನಿಗೆ ಅಶಕ್ಯವಾಗಿದ್ದಿಲ್ಲ; ಆದರೆ ರಾಜಕಾರಣಪಟು

ಗಳಾದ ಮಾಧವಾಚಾರ್ಯರ ಮುಂದೆ ಈ ಪ್ರಸಂಗವನ್ನು ವಿಜ್ಞಾಪಿಸಿಕೊಂಡಾಗ ಆ ತಪೋಧನನು ಕಾಸಿಮನ ಈ ದುರಾಲೋಚನೆಯ ಉರಲನ್ನೇ ಕಾಸಿಮನಿಗೆ ಹಾಕಿ ಕಂಪಲಿಯ ಕೋಟೆಯನ್ನು ಸಹಜವಾಗಿ ಕೈವಶಮಾಡಿಕೊಳ್ಳುವ ಉಪಾಯವನ್ನು ಸೂಚಿಸಿದರು. ಅದರಂತೆ ಅವರ ತಂತ್ರಗಳೂ ನಾಲ್ಕೂಕಡೆಗೆ ನಡೆದಿದ್ದವು. ಬಖತ್ಯಾರನ ಇಬ್ಬರು ಮುಸಲ್ಮಾನ ಸವಾರರು ದೇವಿಯ ಕೊಳ್ಳದಲ್ಲಿ ಬುಕ್ಕನ ಮುಂದೆ ಹೇಳಿದ ಸಂಗಮರಾಜನ ಭಾವೀ ಕೊಲೆಯ ಸುದ್ದಿಯಾದರೂ ಈ ತಂತ್ರದೊಳಗಿನ ಒಂದು ತಂತ್ರವೇ ಆಗಿತ್ತು. ಹಾಗೆ ಬುಕ್ಕನಮುಂದೆ ಹೇಳಿ ಆತನನ್ನು ಜಾಗೃತಗೊಳಿಸುವಲ್ಲಿ ಮಾಧವಾಚಾರ್ಯರ ಗೂಢ ತಂತ್ರವಿದ್ದೇಯಿತ್ತು. ಆ ಕೊಲೆಯ ಸಂಗತಿಯು ಪ್ರತ್ಯಕ್ಷ ಕಾಸಿಮನ ಕನಸು–ಮನಸುಗಳಲ್ಲಿಲ್ಲದಿದ್ದರೂ, ಅದು ಬುಕ್ಕನ ಮನಸ್ಸಿನ ಮೇಲೆ ವಿಲಕ್ಷಣ ಪರಿಣಾಮವನ್ನುಂಟುಮಾಡಲು, ಆ ತರಣ ವೀರನೂ, ಆತನ ಅಣ್ಣನಾದ ಕಂಪಣ್ಣನೂ ಕಾಸಿಮನ ನಾಶದ ಸಿದ್ಧತೆಯನ್ನು ಆವೇಶದಿಂದ ಮಾಡತೊಡಗಿದರು! ಮಾಧವಾಚಾರ್ಯರ ತಂತ್ರದಂತೆ ಕೃತಜ್ಞನಾದ ಬಖತ್ಯಾರ ಖಿಲಜಿಯು ಸ್ವಲ್ಪವೂ ತಪ್ಪಾಗದಂತೆ ನಡೆದುಕೊಳ್ಳುತ್ತಿದ್ದನು.

ಮಾಧವಾಚಾರ್ಯರ ತೀಕ್ಷ್ಣಬುದ್ಧಿಯನ್ನೂ, ಅವರ ರಾಜತಂತ್ರ ಪ್ರಾವೀಣ್ಯವನ್ನೂ, ವಿಲಕ್ಷಣ ತೇಜಸ್ಸನ್ನೂ ನೋಡಿ ಬಖತ್ಯಾರನು ಕೇವಲ ಭಕ್ತಿಯಿಂದ ಆಚಾರ್ಯರ ಶಿಷ್ಯತ್ವವನ್ನು ಸ್ವೀಕರಿಸಿದ್ದನು. ಆಗಿನ ರಾಜತಂತ್ರಗಳ ಮೂಲಗಳೂ, ಶಾಖೋಪಶಾಖೆಗಳೂ ಮಾಧವಾಚಾರ್ಯರಿಗೆ ಸಂಪೂರ್ಣವಾಗಿ ಗೊತ್ತಿರುತ್ತಿದ್ದವು. ಬುಕ್ಕನು ದೇವಿಯ ಕೊಳ್ಳದಲ್ಲಿರುವದು ಅವರಿಗೆ ಗೊತ್ತಿತ್ತು; ತಮ್ಮ ಆಶ್ರಯಧಲ್ಲಿರುವ ಹುಕ್ಕನು ಬುಕ್ಕನ ಅಣ್ಣನೆಂಬದೂ ಅವರಿಗೆ ಗೊತ್ತಿತ್ತು; ಆದರೆ ಮಹಾ ತೇಜಸ್ವಿಯಾದ ಬುಕ್ಕನ ಸ್ವಂತದ ದೀರ್ಘ ಪ್ರಯತ್ನಕ್ಕೆ ತಮ್ಮ ಹಾಗು ಹುಕ್ಕರಾಜನ ಆಶ್ರಯದ ಒತ್ತಾಸೆಯಿಂದ ಶೈಥಿಲ್ಯ ಉಂಟಾಗಬಾರದೆಂದು ಆ ಗಂಭೀರವೃತ್ತಿಯ ಬ್ರಾಹ್ಮಣನು ಒಬ್ಬರ ಗೊತ್ತು ಒಬ್ಬರಿಗೆ ಹತ್ತಗೊಟ್ಟಿದ್ದಿಲ್ಲ. ತೀರ ಸ್ವಲ್ಪ ದಿನಗಳ ಹಿಂದೆ ಹುಕ್ಕನಿಗೆ ಬುಕ್ಕನಿರುವ ಸ್ಥಳವನ್ನು ಮಾಧವಾಚಾರ್ಯರೇ ಹೇಳಿದ್ದರು. ಬಖತ್ಯಾರ ಖಿಲಜಿಯ ಮುಖಾಂತರವಾಗಿ ಬುಕ್ಕನಿಗೆ ದೇವಿಯಕೊಳ್ಳದ ಗುಹೆಯ ಆಶ್ರಯವನ್ನು ಒದಗಿಸಿಕೊಟ್ಟವರು ಮಾಧವಾಚಾರ್ಯರೇ. ಇಂಥ ಎಷ್ಟೋ ಗುಪ್ತ ಸ್ಥಳಗಳ ಗೊತ್ತು ಮಾಧವಾಚಾರ್ಯರಿಗಿತ್ತು. ಅವರು ಚಾರರ ಮುಖದಿಂದ ಇಂಥ ಹಲವು ಗೂಢ ಸ್ಥಳಗಳನ್ನೂ, ಗೂಢ ಸಂಗತಿಗಳನ್ನೂ, ಶತ್ರುಗಳ ಕಡೆಯ ವರ್ತಮಾನಗಳನ್ನೂ ತಿಳಕೊಳ್ಳುವ ವಿಷಯದಲ್ಲಿ ದಕ್ಷರಾಗುತ್ತಿದ್ದರು. ಇವರು ಮನುಕಾಮಂದಕ ಮೊದಲಾದವರ ರಾಜನೀತಿಗಳ ತತ್ವವನ್ನು ಸಂಪೂರ್ಣವಾಗಿ ಅರಿತಿದ್ದರಲ್ಲದೆ, ಚಾಣಕ್ಯ ನೀತಿಯಂಥ ಕುಟಿಲನೀತಿಗಳ ಪರಿಜ್ಞಾನವು ಅವರಿಗಿತ್ತು. ವರಂಗಲದ ಶೂರ ಕೃಷ್ಣನಾಯಕನು ಆಶ್ರಯವನ್ನು ಹುಡುಕುತ್ತ ಗುಪ್ತರೀತಿಯಿಂದ ಅತ್ತಿತ್ತ ಅಲೆದಾಡುತ್ತಿರುವದನ್ನು ಚಾರರ ಮುಖದಿಂದ ತಿಳಿದುಕೊಂಡು ಮಾಧವಾಚಾರ್ಯರು ಆತನನ್ನು ಕರೆಸಿಕೊಂಡಿದ್ದರು. ಆ ಕೃಷ್ಣ ನಾಯಕನು ಕೊಂಗದಾಸಯ್ಯನ ವೇಷದಿಂದ ಬುಕ್ಕನನ್ನು ಕಂಡದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಅದಕ್ಕೂ ಮಾಧವಾಚಾರ್ಯರೇ ಕಾರಣರು. ಆ ರಾತ್ರಿ ಬಖತ್ಯಾರನ ಇಬ್ಬರು ಯವನ ರಾವುತರು ಬುಕ್ಕನಬಳಿಗೆ ಬಂದದ್ದಾದರೂ

ಮಾಧವಾಚಾರ್ಯರ ತಂತ್ರದಿಂದಲೇ. ಹೀಗೆ ಯಾವದೊಂದು ಗೂಢವಾದ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು, ಅವರವರ ಶಕ್ತಿ-ಯುಕ್ತಿಗಳ ಬೆಳವಣಿಗೆಗೆ ಆಲಸ್ಯ-ಪರಾವಲಂಬನ ಬಾಧೆ ತಗಲದಂತೆ ಮಾಡಿ ಅವನ್ನು ಸಂಪೂರ್ಣವಾಗಿ ಬೆಳೆಸಲು ತಕ್ಕ ಉಪಾಯಗಳನ್ನು ಆ ಬ್ರಾಹ್ಮಣಶ್ರೇಷ್ಠನು ಯೋಚಿಸಿ, ಕರ್ನಾಟಕದ ಪ್ರತಿಯೊಂದು ನಾಡಿಯೂ ಸಶಕ್ತವೂ ಸತೇಜವೂ ಆಗುವ ಕಾರ್ಯವನ್ನು ಅವಶ್ಯವಾಗಿ ನಡೆಸಿದ್ದನು. ಹುಕ್ಕನಿರುವನೆಂದು ಬುಕ್ಕನೂ, ಬುಕ್ಕನಿರುವನೆಂದು ಹುಕ್ಕನೂ, ಮಾಧವಾಚಾರ್ಯರಂಥ ಸಮರ್ಥ ಗುರುಗಳಿರುವರೆಂದು ಹುಕ್ಕ-ಬುಕ್ಕರೂ ತಮ್ಮ ತಮ್ಮ ಕರ್ತವ್ಯದಲ್ಲಿ ತಪ್ಪು ಮಾಡದಂತೆ ಆ ತಪೋಧನನು ಉಪಾಯಗಳನ್ನು ಯೋಚಿಸಿದ್ದನು.

ಒಟ್ಟಿಗೆ ಉತ್ತಮನಾದ ಜಟ್ಟಿಯು ತನ್ನ ಎಲ್ಲ ಅವಯವಗಳ ಶಕ್ತಿ-ಸಂಚಯನಕ್ಕೆ ತಕ್ಕ ಅನುಕೂಲತೆ ಮಾಡಿಕೊಂಡು ತನ್ನ ದೇಹವನ್ನು ಸದೃಢ ಮಾಡಿಕೊಳ್ಳುವಂತೆ, ಮಾಧವಾಚಾರ್ಯನೆಂಬ ಜಟ್ಟಿಯು ತನ್ನ ಅವಯವಗಳಂತೆ ಇರುವ ಕನ್ನಡಿಗರ ಶಕ್ತಿಸಂಚಯನಕ್ಕೆ ಅನುವು ಮಾಡಿಕೊಟ್ಟು, ಇಡಿಯ ಕರ್ನಾಟಕರೂಪವಾದ ತನ್ನ ದೇಹವನ್ನು ಸಶಕ್ತಮಾಡ ತೊಡಗಿದ್ದನು. ಆದ್ದರಿಂದ ಆಗಿನ ಪ್ರತಿಯೊಬ್ಬ ಕನ್ನಡಿಗನು ''ನನ್ನಿಂದಲೇ ದೇಶೋದ್ಧಾರವಾಗುವಂದೆ''ಬ ನಂಬಿಗೆಯಿಂದ ದೇಶಕಾರ್ಯದಲ್ಲಿ ತೊಡಗುತ್ತಿದ್ದನಲ್ಲದೆ, ''ಅಂತಿಂಥವರಿರಲು, ನನ್ನಿಂದೇನಾಗುವದು'' ಎಂಬ ಪರಾವಲಂಬನದ ಹೇಡಿತನದ ವಿಚಾರದಿಂದ ದೇಶಕಾರ್ಯಕ್ಕೆ ಕೈಹಾಕುತ್ತಿದ್ದಿಲ್ಲ. ಅದಕ್ಕಾಗಿಯೇ ನಾವು ''ಕನ್ನಡಿಗರ ವಿಲಕ್ಷಣ ಜಾಗ್ರತಿ'' ಎಂದು ಈ ಕಾದಂಬರಿಗೆ ಹೆಸರಿಟ್ಟಿದ್ದೇವೆ. ಒಂದು ತೇರು ಎಳೆಯುವದಕ್ಕಾಗಿ ಮುದುಕರು, ಹರೆಯದವರು, ಹುಡುಗರು, ಗರಡಿಮನೆಯ ಜಟ್ಟಿಗಳು, ಸಶಕ್ತರು, ಅಶಕ್ತರು ಅದರ ಹಗ್ಗ ಹಿಡಿದಿರುವರಷ್ಟೆ? ಆ ಪ್ರಸಂಗದಲ್ಲಿ ''ನಾವೇನು ಹುಡುಗರು, ನಾವೇನು ಮುದುಕರು, ನಾವೇನು ಅಶಕ್ತರು ನಮ್ಮಿಂದೇನು ತೇರು ಎಳೆಯುವದಾಗುವದು'' ಎಂದು ಉದಾಸೀನಭಾವದಿಂದ, ತೇರು ಎಳೆಯುವದನ್ನು ಬಿಟ್ಟರೆ, ಬರಿಯ ಜಟ್ಟಿಗಳೇ ತೇರನ್ನೆಳೆಯಬಹುದೇ? ಪ್ರತಿಯೊಬ್ಬ ತೇರು ಎಳೆಯುವವನು ನನ್ನಿಂದಲೇ ಈ ತೇರು ಎಳೆಯುವದೆಂಬ ಉತ್ಸಾಹದಿಂದಲೂ, ನಂಬಿಗೆಯಿಂದಲೂ, ದೃಢನಿಶ್ಚಯದಿಂದಲೂ ತೇರನ್ನು ಎಳೆದರೆಯೇ ತೇರು ಮುಂದಕ್ಕೆ ಸಾಗಿಬರುವದು. ಅದರಂತೆ, ದೇಶೋದ್ಧಾರದ ಸಲುವಾಗಿ ದೇಶದೊಳಗಿನ ಪ್ರತಿಯೊಬ್ಬ ವ್ಯಕ್ತಿಯು ಉತ್ಸಾಹದಿಂದಲೂ, ನಂಬಿಗೆಯಿಂದಲೂ, ದೃಢನಿಶ್ಚಯದಿಂದಲೂ ದೇಹದ ಪರಿವೆಯಿಲ್ಲದೆ ಯತ್ನಿಸಬೇಕಾಗುವದು. ಇದಕ್ಕೆ ಲೋಕ ಜಾಗ್ರತಿಯೆಂಬ ಹೆಸರು. ಇಂಥ ಲೋಕಜಾಗ್ರತಿಯನ್ನು ಮಾಧವಾಚಾರ್ಯರು ತಮ್ಮ ಬುದ್ಧಿ ವೈಭವದಿದಂದಲೂ, ತಪಸ್ಸಾಮರ್ಥ್ಯದಿಂದಲೂ ಕರ್ನಾಟಕದಲ್ಲಿ ಮಾಡತೊಡಗಿದ್ದರು. ಈ ಲೋಕಜಾಗ್ರತಿಯನ್ನು ಕುರಿತು ನಾವು ಈ ಕಾದಂಬರಿಯಲ್ಲಿ ಎಷ್ಟು ಸಾರೆ ಬರೆದರೂ ಅದನ್ನು ದ್ವಿರುಕ್ತಿ-ಬಹುಕ್ತಿಗಳ ದೋಷವೆಂದು ವಾಚಕರು ನಿರಾಕರಿಸಲಾಗದು; ಯಾಕಂದರೆ ಈಗಿನ ಪರಾವಲಂಬನದ ಅಭಿಮಾನವಿಲ್ಲದ ಕಾಲದಲ್ಲಿ ಈ ಲೋಕಜಾಗ್ರತಿಯನ್ನು ಕುರಿತು ಎಷ್ಟು ಸಾರೆ ಕೂಗಿ

ಹೇಳಿದರೂ ಸ್ವಲ್ಪವೇ ಇರುವದು; ಆದ್ದರಿಂದ ಲೋಕ ಜಾಗೃತಿಯೆಂದರೆ ದೇಶದೊಳಗಿನ ಪ್ರತಿಯೊಬ್ಬ ವ್ಯಕ್ತಿಯು ಜಾಗೃತಿಯಿಲ್ಲದೆ, ವಿಶಿಷ್ಟ ವ್ಯಕ್ತಿಗಳ ಅಥವಾ ಸಮಾಜಗಳ ಜಾಗೃತಿಯಲ್ಲೆಂದು ಇನ್ನೊಮ್ಮೆ ಸ್ಪಷ್ಟವಾಗಿ ಹೇಳುವೆವು.

ಒಟ್ಟಿಗೆ ಮಾಧವಾಚಾರ್ಯರು, ಕರ್ನಾಟಕದ ಪ್ರತಿಯೊಬ್ಬ ವ್ಯಕ್ತಿಯು ಎಚ್ಚತ್ತು ಸ್ವಾವಲಂಬಿಯಾಗಿ ಸ್ವಾತಂತ್ರ್ಯ ಸಂಪಾದನಕ್ಕೋಸ್ಕರ ಮುಗಿಬೀಳಬೇಕೆಂದು ಯತ್ನಿಸುತ್ತಿದ್ದರು. ಹೀಗೆ ಯತ್ನಿಸುತ್ತಿರುವ ಆ ಬ್ರಾಹ್ಮಣನಲ್ಲಿ ಹೆಚ್ಚಿನ ಆಡಂಬರದ ಸಾಧನಗಳೇನು ಇದ್ದಿಲ್ಲ. ಆತನು ಒಬ್ಬ ಕರ್ಮಶೀಲನಾದ ಶುಚಿರ್ಭೂತ ಜ್ಞಾನಸಂಪನ್ನ ಬ್ರಾಹ್ಮಣನಾಗಿದ್ದನು. ಆದರೆ ಆತನ ತಪೋಮಹಿಮೆಯು ಮಾತ್ರ ಅತರ್ಕ್ಯವಾದದ್ದಿತ್ತು. ಆಗಿನ ಜನರು ಮಾಧವಾಚಾರ್ಯರ ಉಪದೇಶ ಅವರ ಅಪ್ಪಣೆ, ಅವರ ಪ್ರತ್ಯಕ್ಷವಾದ ಆಚರಣೆ ಇವನ್ನು ಭಕ್ತಿಪುರಸ್ಸರವಾಗಿ ಆತುರದಿಂದ ಎದುರುನೋಡುತ್ತ ಅವುಗಳನ್ನು ಆಚರಿಸಲು ತತ್ಪರರಾಗಿರುತ್ತಿದ್ದರು. ಆ ತೇಜಃಪುಂಜ ಬ್ರಾಹ್ಮಣನ ಕಮಂಡಲು ಕೃಷ್ಣಾಜಿನಗಳಿಂದೊಪ್ಪುವ ದಿವ್ಯ ಮೂರ್ತಿಯನ್ನು ನೋಡಿದವರು ತಮ್ಮನ್ನು ಧನ್ಯರೆಂದು ಭಾವಿಸುತ್ತಿದ್ದರು. ಮಾಧವಾಚಾರ್ಯರ ಆಗಮನದ ಯೋಗವು ಅಪೂರ್ವವಾದದ್ದೆಂತಲೂ, ಅವರ ದಿವ್ಯ ವಾಣಿಯ ಶ್ರವಣವು ಚೇತನೋತ್ಪಾದಕವಾದದ್ದೆಂತಲೂ, ಅವರು ಮಾಡುವ ಅಭಿನಂದನವು ತುಷ್ಟಿ–ಪುಷ್ಟಿದಾಯಕವಾದದ್ದೆಂತಲೂ ಜನರು ತಿಳಿಯುತ್ತಿದ್ದರು! ಆ ಕೆಚ್ಚೆದೆಯ ನಿಸ್ಪೃಹಿ ಬ್ರಾಹ್ಮಣನ ಚಾರಿತ್ರ್ಯರೂಪವಾದ ದಿವ್ಯೌಷಧಿಯಿಂದ ಜನರ ಅಳ್ಳೆದೆಗಳು ಕೆಚ್ಚುಗಟ್ಟಿದ್ದವು. ಚಂಚಲ ಮನೋವೃತ್ತಿಗಳು ದೃಢವಾದವು, ಹೃದಯಸ್ಥ ಸಂಶಯ ಪಿಶಾಚಿಗಳು ಓಡಿಹೋದವು, ಸ್ವಾರ್ಥದ ಆಸೆಪಾಶಗಳು ಚಟಚಟನೆ ಹರಿದವು. ಆಗಿನ ಪ್ರತಿಯೊಬ್ಬ ಕನ್ನಡಿಗನ ಒಲವು, ಮಾಧವಾಚಾರ್ಯರ ಸರ್ವಸಂಗಪರಿತ್ಯಾಗಪೂರ್ವಕವಾದ ದೇಶೋದ್ಧಾರಯೋಗದ ಕಡೆಗೆ ಒಲಿಯತೊಡಗಿತ್ತು. ಒಟ್ಟಿಗೆ ಆಗಿನ ಕರ್ನಾಟಕದ ಸರ್ವಸೂತ್ರ ಚಾಲಕತ್ವವು ಮಾಧವಾಚಾರ್ಯರ ಕಡೆಗಿತ್ತು. ಎಲ್ಲರ ಕಣ್ಣು ಮಾಧವಾಚಾರ್ಯರ ಮೂರ್ತಿಯನ್ನು ನೋಡುವದರ ಕಡೆಗೆ, ಎಲ್ಲರ ಕಿವಿಗಳು ಮಾಧವಾಚಾರ್ಯರ ಮಾತು ಕೇಳುವದರ ಕಡೆಗೆ, ಎಲ್ಲರ ಲಕ್ಷ್ಯವು ಮಾಧವಾಚಾರ್ಯರ ಚಾರಿತ್ರ್ಯದ ಕಡೆಗೆ ಇದ್ದು, ಆನೆಗುಂದಿಯ ದೇವರಾಜನಂಥ ಅರಸರಾಗಲಿ, ಕಂಪಲಿಯ ಬಖತ್ಯಾರ ಖಿಲಜಿಯಂಥ ಮುತ್ಸದ್ದಿಗಳಾಗಲಿ, ವರಂಗಲದ ಕೃಷ್ಣರಾಯನಂತ ಶೂರರಾಗಲಿ, ಬೇರೆ ಯಾವನೊಬ್ಬ ಸಾಮಾನ್ಯ ವ್ಯಕ್ತಿಯೇ ಆಗಲಿ ಬಹಳ ಹೇಳುವದೇನು? ಕಾಸಿಮನಂಥ ಶತ್ರುವು ಕೂಡ ಮಾಧವಾಚಾರ್ಯರ ಮತವನ್ನು ದುರ್ಲಕ್ಷಿಸುತ್ತಿದ್ದಿಲ್ಲ. ಯಾಕಂದರೆ ಆ ಮಹಾತ್ಮನ ಮಾತುಗಳು ಅವರ ಅನುಯಾಯಿಗಳಿಗೆ ತಾರಕವಾಗಿಯೂ, ವಿರೋಧಿಗಳಿಗೆ ಮಾರಕವಾಗಿಯೂ ಇದ್ದದ್ದರಿಂದ ಅವು ಸರ್ವಾದರಣೀಯವಾಗಿದ್ದವು. ಮಾಧವಾಚಾರ್ಯರ ಆಲೋಚನೆಗಳಲ್ಲಿ ಅಥವಾ ಕೃತಿಗಳಲ್ಲಿ ಗೂಢವು ವಿಶೇಷವಾಗಿದ್ದದ್ದರಿಂದ ಅವು ಅನ್ಯರ ಬಾಧೆಗಳಿಂದ ಕುಗ್ಗದೆ ಸಾವಕಾಶವಾಗಿ ಬೆಳವಣಿಗೆಹೊಂದಿ ಫಲಿಸುತ್ತಿದ್ದವು. ಈ ಬಖತ್ಯಾರನ ಮುಖಾಂತರವಾಗಿ ಕಾಸೀಮನ ಪಾರುಪತ್ಯಕ್ಕಾಗಿ ಅವರು ಒಡ್ಡಿದ ಬಲೆಯ ರೀತಿಯು ಹೀಗೆಯೇ ಇತ್ತು. ಆ ಬಲೆಯು ಬಲಿಷ್ಠ ಕಾಸಿಮನ ಹೊಯ್ತಕ್ಕೆ ಹರಿಯದೆ ಮೆಲ್ಲಮೆಲ್ಲನೆ ಬಲಿಷ್ಠವಾಗ

ತೊಡಗಿತ್ತು. ಮಾಧವಾಚಾರ್ಯರು, ಗೊತ್ತಿದ್ದು ಪದ್ಮಿನಿಯನ್ನು ಕಾಸೀಮನಿಂದ ಅಪಹರಿಸ ಗೊಟ್ಟರು; ಆ ಅರಿಷ್ಟ ನಿವಾರಣ ಮಾಡಲಿಕ್ಕೆ ಬರವಹಾಗಿದ್ದೂ, ಅವರು ನಿವಾರಣ ಮಾಡದೇ ಹಾಗೇ ಬಿಟ್ಟರು; ಕಾಸಿಮನ ಮನೋರಾಜ್ಯವು ಕ್ಷಣದಲ್ಲಿ ಮಣ್ಣುಗೂಡಬಹುದಾಗಿತ್ತು; ಆದರೆ ಯಾವ ಉದ್ದೇಶದಿಂದಲೋ ಮಾಧವಾಚಾರ್ಯರು ಅದನ್ನು ನಡೆಯಗೊಟ್ಟರು. ಅದರಂತೆ, ಪದ್ಮಿನಿಯ ಮೋಸದ ಮರಣ, ಕಾಸಿಮನು ಆಕೆಯೊಡನೆ ನಡೆಸಿದ ದುರಾಚರಣ, ಅದನ್ನು ಲೆಕ್ಕಿಸದೆ ಪದ್ಮಿನಿಯು ಬಹು ಚಾತುರ್ಯದಿಂದ ಕಾಸಿಮನೊಡನೆ ನಡೆಸಿದ ಅನುಸರಣ ಇವೆಲ್ಲ ಮಾಧವಾಚಾರ್ಯರಿಗೆ ಗೊತ್ತಿದ್ದವು. ಅವರು ಪದ್ಮಿನಿಯ ಮಾನರಕ್ಷಣದ ಉಪಾಯಗಳನ್ನು ಮೊದಲೇ ಯೋಚಿಸಿದ್ದರು; ಆದರೆ ಅದರ ಗಂಧವು ಕೂಡ ಪದ್ಮಿನಿಗೆ ಇದ್ದಿಲ್ಲ. ದುಷ್ಟ ಕಾಸಿಮನು ಕುಭಾವದಿಂದ ತನ್ನನ್ನು ಅಪಹರಿಸಿಕೊಂಡು ಬಂದಿರುವನೆಂದು ಮಾತ್ರ ಆಕೆಯು ತಿಳಿದು ಕೊಂಡಿದ್ದಳು.

## ದೈವೀ ಪ್ರೇರಣೆ !

ಕಾಸಿಮನು ಪದ್ಮಿನಿಯ ಮನಸ್ಸನ್ನೊಲಿಸಿಕೊಳ್ಳುವದಕ್ಕಾಗಿ ಆಗಾಗ್ಗೆ ಆಕೆಯ ಬಳಿಗೆ ಹೋಗಿ, ಬಗೆಬಗೆಯ ಉಪಾಯಗಳನ್ನು ಯೋಚಿಸಿದನು; ಆದರೆ ಪದ್ಮಿನಿಯು ಅವನ ಪ್ರಾರ್ಥನೆಗೆ ಒಳಗಾಗಲಿಲ್ಲ; ಅವನು ತೋರಿಸುವ ಆಶೆಗೆ ಸೋಲಲಿಲ್ಲ; ಅವನು ಬೆದರಿಸುವ ಬೆದರಿಕೆಗೆ ಸೊಪ್ಪು ಹಾಕಲಿಲ್ಲ. ಆ ಧೂರ್ತಳಾದ ಚತುರ ಪದ್ಮಿನಿಯು ಉಪಾಯಾಂತರದಿಂದ ಕಾಸಿಮನನ್ನು ನಿರಾಶೆಗೊಳಿಸಿ ಕಳಿಸುತ್ತಿದ್ದಳು. ಬರಬರುತ್ತ ಈ ಸ್ಥಿತಿಯು ಕಾಸಿಮನಿಗೆ ದುಸ್ಸಹವಾಯಿತು. ತನ್ನನ್ನು ಲೆಕ್ಕಿಸದೆ ಬರಿಯ ಸವಿಮಾತುಗಳಿಂದ ಪದ್ಮಿನಿಯು ತನ್ನನ್ನು ಮೂಗಿಗೆ ತುಪ್ಪಹಚ್ಚಿ ಕುಳ್ಳಿರಿಸಿದಂತೆ ಕುಳ್ಳಿರಿಸಿರುವದನ್ನು ನೆನಿಸಿ ಕಾಸಿಮನು ಮನಸ್ಸಿನಲ್ಲಿ ಸಂತಾಪಗೊಳ್ಳುವನು. ಒಬ್ಬ ಯಕಃಶ್ಚಿತ ಅಬಲೆಯ ಸೂತ್ರಚಾಲನಕ್ಕೆ ತಾನು ಒಳಗಾಗಿದ್ದಕ್ಕಾಗಿ ಆತನಿಗೆ ನಾಚಿಕೆ ಬರುವದು. ತನ್ನ ಮನೆ, ತನ್ನ ಅಬಾಧಿತವಾದ ಅಧಿಕಾರ, ತನ್ನ ಅಮೋಘ ಬಲ ದೇವರಾಜನ ದೌರ್ಬಲ್ಯ ಇವನ್ನೆಲ್ಲ ಮನಸ್ಸಿನಲ್ಲಿ ತಂದು, ತಾನು ಇಷ್ಟು ದಿನ ಪದ್ಮಿನಿಯ ನಿಕಾ ಮಾಡಿಕೊಳ್ಳದೆ ಇದ್ದದ್ದು ತನ್ನ ಮರುಳುತನವೆಂದು ಆತನು ಭಾವಿಸುವನು. ಇಂದು ಈ ಮರುಳುತನಕ್ಕೆ ಹೋಗದೆ, ಪದ್ಮಿನಿಯನ್ನು ಸ್ವಾಧೀನಪಡಿಸಿಕೊಂಡೇತೀರಬೇಕೆಂಬ ನಿಶ್ಚಯದಿಂದ ಆತನು ಹೋಗುವನು; ಆದರೆ ಪದ್ಮಿನಿಯ ದರ್ಶನವಾದಕೂಡಲೆ ಕಾಳಸರ್ಪನಿಗೆ ಗರುಡನ ಗೆರೆ ತೋರಿಸಿದಂತಾಗಿ ಆತನು ಪದ್ಮಿನಿಯ ತೇಜಸ್ವಿತೆಯ ದರ್ಪಕ್ಕೂ, ಸವಿ ಮಾತಿನ ಸೊಬಗಿಗೂ ನಮ್ರನಾಗಿ ಅವನು ಹೋದಹಾಗೆ ಸುಮ್ಮನೆ ಮನೆಗೆ ತಿರುಗಿ ಬರುತ್ತಿದ್ದನು. ಹೀಗಿರುವಾಗ ಆತನ ಗುಪ್ತಚಾರರು ಬಂದು ''ಖಾವಿಂದ, ದೇವರಾಜನ ಕಡೆಯವರು ಕಂಪಲಿಯಲ್ಲಿ ಪದ್ಮಿನಿಯ ಶೋಧ ನಡೆಸಿರುವರೆಂ''ದು ಹೇಳಿದರು. ಆದರಿಂದ ಆ ಯುವನ ವೀರನ ಚಿತ್ತವು ಪದ್ಮಿನಿಯನ್ನು ಸ್ವಾಧೀನಪಡಿಸಿಕೊಳ್ಳಲು

ಆತುರಪಡತೊಡಗಿತು. ಇನ್ನು ಪದ್ಮಿನಿಯ ಪಾಣಿಗ್ರಹಣಕ್ಕಾಗಿ ವಿಲಂಬಮಾಡುವದು ಯೋಗ್ಯವಲ್ಲೆಂದು ಭಾವಿಸಿ, ಇಂದು ಪದ್ಮಿನಿಯನ್ನು ಸ್ವಾಧೀನಪಡಿಸಿಕೊಂಡೇತೀರುವೆನೆಂಬ ನಿಶ್ಚಯದಿಂದ ಆತನು ಅಂತರ್ಗೃಹಕ್ಕೆ ಹೋದನು.

ಪ್ರತಿದಿನ ಹೋಗುವದಕ್ಕಿಂತ ಸ್ವಲ್ಪ ಬೇಗನೆ ಹೋದದ್ದರಿಂದ ಕಾಸಿಮನಿಗೆ ಇಂದು ಪದ್ಮಿನಿಯ ದರ್ಶನವಾಗಲಿಲ್ಲ. ದಾಸಿಯರು ಆತನನ್ನು ಕುಳ್ಳಿರಿಸಿ ಪದ್ಮಿನಿಯನ್ನು ಕರೆ ತರುವದಕ್ಕಾಗಿ ಆಕೆಯ ಬಳಿಗೆ ಹೋದರು; ಆದರೆ ಪದ್ಮಿನಿಯು ಯಾವ ಕಾರಣದಿಂದಲೋ ಕಾಸಿಮನನ್ನು ಕಾಣಲಿಕ್ಕೆ ಬುದ್ಧಿಪೂರ್ವಕವಾಗಿ ವಿಲಂಬಮಾಡಿದಳು. ಬಹಳ ಹೊತ್ತಾದರೂ ಪದ್ಮಿನಿಯು ಬಾರದ್ದರಿಂದ ಕಾಸಿಮನು ಚಡಪಡಿಸಿದನು. ರಾಜಪುತ್ರಿಯು ತನ್ನನ್ನು ಬುದ್ಧಿಪೂರ್ವಕವಾಗಿ ದುರ್ಲಕ್ಷಿಸುವಳೆಂಬ ಭಾವನೆಯಿಂದ ಆತನಿಗೆ ಸಂತಾಪವೂ ಆಯಿತು. ಆಗ ಆತನು ತಿರಸ್ಕಾರದಿಂದ ದಾಸಿಯರನ್ನು ಕುರಿತು– ''ಎಲ್ಲಿ? ಪದ್ಮಿನಿಯು ಎಲ್ಲಿರುವಳು? ನಾನು ಬಂದು ಇಷ್ಟು ಹೊತ್ತಾದರೂ ಬರಲಿಕ್ಕೆ ಆಕೆಗೆ ಕೂಡಲೊಲ್ಲದೋ? ಇಷ್ಟು ತಡವಾಗಲಿಕ್ಕೆ ಕಾರಣವೇನು?'' ಎಂದು ಕೇಳುತ್ತಿರಲು, ಚತುರೆಯಾದ ಪದ್ಮಿನಿಯು ವಸ್ತ್ರಾಲಂಕಾರಗಳಿಂದ ಅಲಂಕೃತಳಾಗಿ, ಒಂದು ಬಂಗಾರದ ಹರಿವಾಣದಲ್ಲಿ ಉತ್ತಮವಾದ ಖಾದ್ಯ–ಪೇಯಗಳನ್ನಿಟ್ಟುಕೊಂಡು ಬಂದು ಒಮ್ಮೆ ಕಾಸಿಮನ ಕಡೆಗೆ ಹೊರಳಿ ನೋಡಿ– ''ಖಾನಸಾಹೇಬ, ಈ ದೇವರಾಜ ಪುತ್ರಿಯಮೇಲೆ ಕೋಪಿಸಬಾರದು; ಕ್ಷಮಿಸಬೇಕು. ನಾನು ಆನೆಗುಂದಿಯ ಅರಮನೆಯಲ್ಲಿರುವಾಗ ನನ್ನ ತಂದೆಯಾದ ದೇವರಾಜರ ಸಲುವಾಗಿ ಭಕ್ತಿಯಿಂದ ಕೆಲವು ಖಾದ್ಯ–ಪೇಯಗಳನ್ನು ಕೈಮುಟ್ಟಿ ಮಾಡುತ್ತಿದ್ದೆನು; ಅವನ್ನು ನಮ್ಮ ತಂದೆಯವರು ವಾತ್ಸಲ್ಯದಿಂದ ಪರಿಗ್ರಹಿಸುತ್ತಿದ್ದರು. ನೀವು ಇಂದಿನವರೆಗೆ ನನ್ನನ್ನು ಮಗಳಂತೆ ಸಂರಕ್ಷಿಸುತ್ತ ಬಂದಿದ್ದರಿಂದ ನನಗೆ ನೀವು ಪಿತೃಸಮಾನರೇ ಸರಿ. ನಿಮ್ಮ ಪವಿತ್ರ ಪಿತೃಧರ್ಮ ಪಾಲನದಿಂದ ನನ್ನ ಹೃದಯದಲ್ಲಿ ನಿಮ್ಮ ವಿಷಯದ ಪಿತೃಭಕ್ತಿಯು ಉತ್ಪನ್ನವಾಗಿದ್ದರೆ ಆಶ್ಚರ್ಯವೇನು? ನಾನು ನನ್ನ ತಂದೆಯವರಿಗೆ ಅರ್ಪಿಸುತ್ತ ಬಂದಿರುವ ಖಾದ್ಯ–ಪೇಯಗಳನ್ನು ತಮಗೂ ಭಕ್ತಿಯಿಂದ ಅರ್ಪಿಸಬೇಕೆಂದು ಹಲವುಸಾರೆ ಆತುರ ಪಟ್ಟೆನು; ಆದರೆ ಸಂಕೋಚ ವೃತ್ತಿಯು ಹೋಗಲೊಲ್ಲದು. ಹೀಗೆ ಸಂಕೋಚಪಡುವದರಲ್ಲಿಯೇ ಕೆಲವು ದಿವಸಗಳು ಕ್ರಮಿಸಿ ಹೋದವು. ತಂದೆಯವರಲ್ಲಿ ಇಂಥ ಸಂಕೋಚವೇಕೆ? ಎಂಬ ಧೈರ್ಯದಿಂದ ಇಂದು ನಾನು ಪಾಕನಿಷ್ಪತ್ತಿಯಲ್ಲಿ ತೊಡಗಿರಲು, ಯಾಕೋ ಇಂದು ದಿನಕ್ಕಿಂತ ಬೇಗನೆ ತಮ್ಮ ಆಗಮನವಾಯಿತು! ಖಾನಸಾಹೇಬ, ಕ್ಷಮಿಸಬೇಕು; ಈ ದೇವರಾಜಪುತ್ರಿಯು ತಮ್ಮನ್ನು ಕಾಣುವ ವಿಷಯದಲ್ಲಿ ಉದ್ಧಾಮತನದಿಂದ ವಿಲಂಬ ಮಾಡಿರುವದಿಲ್ಲ. ನನ್ನ ತಂದೆಯವರು ಇಂಥ ನನ್ನ ಅನಂತ ಅಪರಾಧಗಳನ್ನು ಕ್ಷಮಿಸುತ್ತ ಬಂದಂತೆ ಪಿತೃಸಮಾನರಾದ ತಾವು ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತೇನೆ. ಖಾನಸಾಹೇಬ, ನನ್ನಿಂದ ತಮಗೆ ತೊಂದರೆಯಾಯಿತು; ತಮ್ಮ ಚಿತ್ತವು ಅಸ್ವಸ್ಥವಾಯಿತು; ಆದರೆ ಈ ದೇವರಾಜ ಪುತ್ರಿಯ ಮೇಲಿನ ಅಂತಃಕರುಣದಿಂದ ಅದನ್ನೆಲ್ಲ ಕ್ಷಮಿಸಿ, ಈ ನನ್ನ ಶ್ರಮವನ್ನು ಸಫಲ ಮಾಡಬೇಕು. ಈ ಮಾಡಿತಂದ ಪದಾರ್ಥಗಳಿಗೆ ಬೆಲೆಯಿಲ್ಲ. ಆದರೆ ಈ ಪದಾರ್ಥಗಳಲ್ಲಿ ಅಡಕವಾಗಿರುವ ಭಕ್ತಿಗೆ ಬೆಲೆಯಿರುತ್ತದೆ; ಆದ್ದರಿಂದ ಈಗ ನಾನು ಭಕ್ತಿಯಿಂದ ಸಮರ್ಪಿಸುವ ಈ ಪದಾರ್ಥಗಳನ್ನು ಸ್ವೀಕರಿಸಿ ಸಂತುಷ್ಟರಾಗತಕ್ಕದ್ದು.''

ಈ ಮೇರೆಗೆ ನುಡಿದ ಪದ್ಮಿನಿಯು ಬಂಗಾರದ ಹರಿವಾಣವನ್ನು ಕಾಸಿಮನ ಮುಂದಿಟ್ಟು ಹಿಂದಕ್ಕೆ ಸರಿದು ದಾಸಿಯರ ಬಳಿಯಲ್ಲಿ ನಿಂತುಕೊಂಡಳು. ಲೋಕಸುಂದರಿಯೂ, ಸುಗುಣಮೂರ್ತಿಯೂ ಆದ ಪದ್ಮಿನಿಯ ಮುಖಾವಲೋಕನ ಮಾಡಿದಕೂಡಲೆ ಕಾಸಿಮನ ಸಿಟ್ಟು ಇಳಿಯಿತು; ಆದರೆ ಸೊಲ್ಲಿಗೊಮ್ಮೆ ಆಕೆಯು ತಂದೆಯಸಮಾನವೆಂದು ತನ್ನನ್ನು ಕುರಿತು ನುಡಿಯುವದು ಆತನಿಗೆ ಸಮಾಧಾನಕರವಾಗಲಿಲ್ಲ. ಆತನು ಪದ್ಮಿನಿಯನ್ನು ನೋಡಿ ಮುಗುಳು ನಗೆ ನಕ್ಕು– ''ದೇವರಾಜಪುತ್ರಿ, ಎಲ್ಲಸರಿ; ನಿನ್ನ ದರ್ಶನಮಾತ್ರದಿಂದಲೇ ನನ್ನ ಮನಸ್ಸು ಸಮಾಧಾನಪಡುವದು; ಆದರೆ ನೀನು ಮೇಲೆ ಮೇಲೆ ನನ್ನನ್ನು ತಂದೆಯೆಂದು ಭಾವಿಸುವದೂ, ಕರೆಯುವದೂ ನಿನ್ನ ಧೂರ್ತತನಕ್ಕೆ ಒಪ್ಪುವದಿಲ್ಲ. ರಾಜಪುತ್ರಿ ನಿನ್ನನ್ನು ನಾನು ಪುತ್ರಿಯೆಂಬ ವಾತ್ಸಲ್ಯದಿಂದ ನಡೆಸಿಕೊಳ್ಳಬೇಕಾಗಿದ್ದರೆ, ಇಷ್ಟು ಕಷ್ಟಪಟ್ಟು ನಿನ್ನನ್ನು ಆನೆಗುಂದಿಯ ಅರಮನೆಯೊಳಗಿಂದ ಇಲ್ಲಿಗೆ ಯಾಕೆ ಹೊರಡಿಸಿಕೊಂಡು ಬರಬೇಕಾಗಿತ್ತು? ನಿನ್ನ ಮೋಹಪಾಶಕ್ಕೆ ಒಳಗಾಗಿದ್ದ ನಾನು ನಿನ್ನನ್ನು ಅಪಹರಿಸುವದಕ್ಕಾಗಿ ಈ ವರೆಗೆ ಹಲವುಸಾರೆ ಯತ್ನಿಸಿರುವೆನು. ಒಮ್ಮೆ ತೀರ ನನ್ನ ಕೈಗೆ ಸಿಕ್ಕುಹೋಗಿದ್ದ ನಿನ್ನನ್ನು ಆ ದುಷ್ಟ ಹೆಗ್ಗನು, ಅಲ್ಲ–ಅಲ್ಲ, ಆ ದೇಶಭ್ರಷ್ಟನಾದ ಯಾದವ ಕುಲೋತ್ಪನ್ನ ಹುಕ್ಕನು ಕುರುಬ ವೇಷದಿಂದ ಬಂದು ನಿನ್ನನ್ನು ಬಿಡಿಸಿದನು. ಹೀಗೆ ಒಂದಿಲ್ಲೊಂದು ಕಾರಣದಿಂದ ನಿನ್ನನ್ನು ಕೈಸೇರಿಸಿಕೊಳ್ಳುವದು ನನಗೆ ಅಸಾಧ್ಯವಾಯಿತು; ಆದರೆ ಇಂದಿಗೆ ನನ್ನ ಸುದೈವದಿಂದ ನಿರಾತಂಕವಾಗಿ ನನ್ನ ಕೈಗೆ ನೀನು ಸಿಕ್ಕುಹೋಗಿರುತ್ತಿ. ಕ್ಷಣಮಾತ್ರದಲ್ಲಿ ನಿನ್ನನ್ನು ನಾನು ಹೆಂಡತಿಯಾಗಿ ಮಾಡಿಕೊಳ್ಳಬಹುದು; ಆದರೆ ನಿಷ್ಕಾರಣವಾಗಿ ನಿನ್ನನ್ನು ಬಲಾತ್ಕರಿಸಲಿಕ್ಕೆ ನನ್ನ ಮನಸ್ಸು ಒಪ್ಪದ್ದರಿಂದ ನಿನ್ನ ಮನಸ್ಸನ್ನೊಲಿಸಿಕೊಳ್ಳಲಿಕ್ಕೆ ನಾನು ಇಲ್ಲಿಯವರೆಗೆ ತಡೆದು ಬಗೆಬಗೆಯಾಗಿ ಪ್ರಾರ್ಥಿಸಿದೆನು. ಆದರೆ ಪದ್ಮಿನೀ ಇನ್ನುಮೇಲೆ ಒಂದು ದಿನವಾದರೂ ನೀನು ವಿಲಂಬಮಾಡದೆ ನನ್ನ ಅರ್ಧಾಂಗಿಯಾಗಬೇಕೆಂದು ನಾನು ಸ್ಪಷ್ಟವಾಗಿ ಹೇಳುವದನ್ನು ದುರ್ಲಕ್ಷಿಸಬೇಡ. ನಿನ್ನ ಹಾಳು ಮನೋರಾಜ್ಯಗಳಿದ್ದರೆ ಅವನ್ನು ಬದಿಗೊತ್ತಿಬಿಡು. ನಿನ್ನ ಆ ವೃದ್ಧ ತಂದೆಯ ಆಟವು ಈ ವೀರ ಕಾಸಿಮನ ಮುಂದೆ ನಡೆಯದು, ಆ ಹುಕ್ಕಗಿಕ್ಕರಂತೂ ಎತ್ತೊ ದಿಕ್ಕುಗೆಟ್ಟು ಹೋಗಿರುವರು. ಸುಂದರೀ, ಸುಮ್ಮನೆ ಬಯಲ ಕಲ್ಪನೆಗಳಿಂದ ಯಾಕೆ ಬಳಲುತ್ತೀ? ನಮ್ಮ ಮುಸಲ್ಮಾನರ ಅಬ್ಬರಕ್ಕೆ ಬೆದರಿ ನಿರ್ವೀರರಾಗಿರುವ ಕರ್ನಾಟಕದಲ್ಲಿ ನಿನ್ನ ಬೆನ್ನುಕಟ್ಟುವವರು ಯಾರಿದ್ದಾರೆ ? ಇಡಿಯ ಕರ್ನಾಟಕವು ನಮ್ಮ ಯವನವೀರರ ಖಡ್ಗದ ಪ್ರತಾಪದಿಂದ ಗೆಲ್ಲಲ್ಪಟ್ಟದ್ದರಿಂದ ಅದು ಯವನರ ಉಪಭೋಗ್ಯ ವಸ್ತುವಾಗಿರುವದು. ಅದನ್ನು ಮನಸ್ಸಿಗೆ ಬಂದಂತೆ ಉಪಯೋಗಿಸುವ ಹಕ್ಕು ನಮಗಿರುತ್ತದೆ; ಅದ್ದರಿಂದ ರಾಜಪುತ್ರಿ, ಇಷ್ಟುದಿನ ಕೈಕಾದು ನಿನ್ನನ್ನು ಗೌರವಿಸಿದ್ದರ ಉಪಕಾರವನ್ನು ನೀನು ಮರೆಯತಕ್ಕದ್ದಲ್ಲ. ಸ್ಪಷ್ಟವಾಗಿ ಹೇಳುತ್ತೇನೆ, ಇಂದಿನಿಂದ ನೀನು ನನ್ನನ್ನು ಪತಿಯೆಂದು ಭಾವಿಸಬೇಕು, ಅಂದರೆ ನೀನು ಸಿದ್ಧಮಾಡಿ ತಂದಿಟ್ಟಿರುವ ಈ ಖಾದ್ಯ–ಪೇಯಗಳನ್ನು ನಿನ್ನ ಪ್ರೇಮದ ಕುರುಹೆಂದು ತಿಳಿದು ನಾನಾದರೂ ಪ್ರೇಮಪೂರ್ವಕವಾಗಿ ಸ್ವೀಕರಿಸುವೆನು.''

ಈ ಮೇರೆಗೆ ನುಡಿದ ಕಾಸಿಮನ ಮಾತುಗಳನ್ನು ಕೇಳಿ ಪದ್ಮಿನಿಯು ಸ್ವಲ್ಪಹೊತ್ತು ಸುಮ್ಮನೆ ನಿಂತು, ಗಾಂಭೀರ್ಯದಿಂದ ಕಾಸಿಮನ ಕಡೆಗೆ ನೋಡಿ– ''ಖಾನಸಾಹೇಬ, ನಿಮ್ಮಂಥ ಕುಲೀನ ವೀರರಿಗೆ ಈ ಕಗ್ಗ ಮಾತುಗಳು ಒಪ್ಪುವದಿಲ್ಲ. ನೀವು ಕೆಟ್ಟ ಮನಸ್ಸಿನಿಂದ ನನ್ನನ್ನು ಅಪಹರಿಸಿರು ವಿರೆಂಬುದನ್ನು ತಿಳಿಯದಷ್ಟು ಮಂದಮತಿಯು ನಾನಲ್ಲ; ಸಂಭಾವಿತರಿಗೆ ಸಲ್ಲದ ನಿಮ್ಮ ಮಾತುಗಳನ್ನಂತು ನಾನು ದಿನಾಲು ಕೇಳುತ್ತಲೇ ಇರುತ್ತೇನೆ. ನಿಮ್ಮ ರಣದುಲ್ಲಾನ ಹೇಳಿಕೆಯಂತೆ ನಮ್ಮ ಹೊನ್ನಮ್ಮನು ಒಂದೇ ಸವನೆ ನನ್ನ ಡುಬ್ಬು ಕೆರೆಯುತ್ತಿರುವದನ್ನು ನಾನು ಎಂದೂ ಮರೆಯುವ ಸಂಭವವಿರುವದಿಲ್ಲ; ಆದರೂ ನಿನ್ನ ನಿಜವಾದ ಭಾವವನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದರೆ, ಸುಜನರಾದ ನಿಮ್ಮ ವಿವೇಕವು ಇಂದಿಲ್ಲ ನಾಳೆ ಜಾಗ್ರತವಾಗಿ, ದುವೃತ್ತದಿಂದ ನಿಮ್ಮ ಮನಸ್ಸು ತಿರುಗೀತೆಂಬ ಆಶೆಯಿಂದ ನಿಮ್ಮ ವಿಷಯದ ನನ್ನ ಪಿತೃಭಾವವನ್ನು ಆಗಾಗ್ಗೆ ಪ್ರಕಟಮಾಡುತ್ತ ಬಂದಿರುವೆನು. ಹೀಗಿದ್ದು ನೀವು ನಿಮ್ಮ ಗ್ರಾಮ್ಯಭಾವವನ್ನು ಬಿಡಲೊಲ್ಲಿರಲ್ಲ ! ಏನು? ಖಾನಸಾಹೇಬ, ಕರ್ನಾಟಕವು ನಿರ್ವೀರ್ಯವಾಯಿತೇ? ನನ್ನನ್ನು ಬೆನ್ನಿಗೆ ಹಾಕಿಕೊಳ್ಳುವವರು ಯಾರೂ ಇಲ್ಲವೆ? ಯಾರು ಹೋದರೂ ಹೋಗಲಿ, ನನ್ನ ಸ್ವಾಭಿಮಾನವೂ, ಸ್ವದೇಶಪ್ರೀತಿಯೂ ಹಾಳಾಗಿಹೋಗಿರುವವೋ ಏನು? ನೀವು ಯವನ ವೀರರು ಕೆಲವು ಧರ್ಮದ ಖಡ್ಗಬಲದಿಂದ ಈ ಕರ್ನಾಟಕವನ್ನು ಗೆದ್ದಿರುವಿರಲ್ಲವೇ? ಕರ್ನಾಟಕದ ದುರ್ದೈವದಿಂದುಂಟಾದ ಅಂತಃಕಲಹ ಗಳಿಂದಲೂ, ನೀಚ ಸ್ವಾರ್ಥ ಬುದ್ಧಿಯಿಂದಲೂ ನಿಮಗೊದಗಿದ ಪಿತೂರಿಯ ಲಾಭದಿಂದ ಅಧರ್ಮ ಯುದ್ಧ ಮಾಡಿ ಹ್ಯಾಗಾದರೂ ಜಯ ಸಂಪಾದಿಸುತ್ತ ಬಂದಿರುವದನ್ನು ನೀವು ಮರೆತಿರಾ ? ಹೀಗೆ ಮೋಸದಿಂದ ಸಂಪಾದಿಸಿದ ನಿಮ್ಮ ಅಧಿಕಾರ ವೈಭವಗಳು, ತಳಸೋಸದೆ ಕಟ್ಟಿದ ಮನೆಯಂತೆ ಆಕಸ್ಮಿಕ ನಾಶಹೊಂದತಕ್ಕವಾಗಿದ್ದು ಆ ಅಶಾಶ್ವತವಾದ ಅಧಿಕಾರ ವೈಭವಗಳ ಉಪಭೋಗವನ್ನು ಧರ್ಮಾಧರ್ಮ, ನ್ಯಾಯಾನ್ಯಾಯ, ಪಾಪಪುಣ್ಯಗಳ ವಿಚಾರ ವಿಲ್ಲದೆ ಮನಸೋಕ್ತವಾಗಿ ಉಪಭೋಗಿಸಹತ್ತಿದರೆ ಅವು ನಿಮಗೆ ಹ್ಯಾಗೆ ದಕ್ಕುವವು? ನೀವು ಎಷ್ಟು ಸಮರ್ಥರಿದ್ದರೂ ಎಂಥ ಅಂಜಿಕ್ಯರಾಗಿದ್ದರೂ, ನಿಮ್ಮ ತಾಮಸೀ ವ್ಯಾಪಾರಗಳಿಂದ ನಮ್ಮ ಸಾತ್ವಿಕ ಕರ್ನಾಟಕ ಭೂಮಾತೆಯು ಎಷ್ಟು ಗದಗುಟ್ಟಿ ನಡುಗುತ್ತಿದ್ದರೂ ನಿಮ್ಮ ಮರ್ಮವನ್ನು ಕೇಳಿ ಅದಕ್ಕೆ ತಕ್ಕ ಶಾಸನ ಮಾಡುವಂಥ ಪರಮೇಶ್ವರನೊಬ್ಬನು ನಮ್ಮೆಲ್ಲರ ಮೇಲಿರುತ್ತಾನೆಂಬದನ್ನು ಚೆನ್ನಾಗಿ ನೆನಪಿನಲ್ಲಿಡಿರಿ. ಎಂಥ ಅನುಚಿತವಾದ ನಿಮ್ಮ ಮಾತಿದು? ನಮ್ಮಂಥ ಅಪ್ರಬುದ್ಧ ಹೆಂಗಸರಿಗೂ ಇದು ಅಯೋಗ್ಯವಾಗಿ ಕಾಣುತ್ತಿರಲು, ನೀವು ನಿಶ್ಶಂಕೆಯಿಂದ ''ಕರ್ನಾಟಕವು ನಮ್ಮ ಉಪಭೋಗ್ಯ ವಸ್ತುವು, ಅದನ್ನು ನಾವು ಬೇಕಾದಹಾಗೆ ಉಪಯೋಗಿಸುವೆವು'' ಎಂದು ಹೇಳುವಿರಲ್ಲ? ಇದೇನು ನಿಮ್ಮ ರಾಜ್ಯಮದದ ಪ್ರಭಾವವೋ? ಅಥವಾ ಅಜ್ಞಾನದ ಆಟವೋ? ಬಹುಜೋಕೆ, ಚಾಲುಕ್ಯಾದಿ ಪ್ರತಾಪಶಾಲಿ ರಾಜವಂಶಗಳ ಪ್ರಚಂಡವಾದ ಕೀರ್ತಿಕಿರಣಗಳನ್ನು ಗರ್ಭೀಕರಿಸಿ ಕೊಂಡಿರುವ ಕರ್ನಾಟಕವನ್ನು ಉಪಭೋಗಿಸುವಾಗ, ನಿಮ್ಮ ಆತ್ಮವು ಬೆಂದು ಸುಣ್ಣವಾದೀತು, ದೇಹವು ಸುಟ್ಟು ಕರಕಿಟ್ಟೀತು, ನಿಮ್ಮ ಕೀರ್ತಿಯು ದಹಿಸುವಾಗ ಉಂಟಾಗುವ ದುರ್ಗಂಧವು ದಶದಿಕ್ಕು ಗಳನ್ನು ವ್ಯಾಪಿಸುತ್ತಿರಲು, ಲೋಕವು ಮೂಗು ಮುಚ್ಚೀತು ! ನಮ್ಮಂಥ ವೀರಪುತ್ರಿಯರು ಕರ್ನಾಟಕದಲ್ಲಿರುವವರೆಗೆ ಅದು ನಿಮ್ಮ ಉಪಭೋಗ್ಯ ವಸ್ತುವಾಗಲಾರದೆಂಬುದನ್ನು ಚೆನ್ನಾಗಿ ಲಕ್ಷ್ಯದಲ್ಲಿಡಿರಿ.''

ಈ ಮೇರೆಗೆ ನುಡಿದು ಪದ್ಮಿನಿಯು ಕಾಸಿಮನ ಮುಖವನ್ನು ನೋಡುತ್ತ ಸುಮ್ಮನೆ ನಿಂತಳು. ಆಗ ಆಕೆಯ ಗಲ್ಲಗಳು ಕೆಂಪಾಗಿದ್ದವು; ಕಣ್ಣುಗಳು ಕಾಂತಿಮಯವಾಗಿದ್ದವು; ಆಕೆಯ ಶ್ವಾಸೋಚ್ಛ್ವಾಸದ ವೇಗವು ಹೆಚ್ಚುತ್ತಲಿತ್ತು. ಆಗ ಆ ಪ್ರಮದೆಯು ಮುಖದ ಕಿರಿ ಬೆವರ ಹನಿಗಳನ್ನು ಕರವಸ್ತ್ರದಿಂದ ಒರಿಸಿಕೊಂಡು, ಮುಂದುವರಿದ ಕುರುಳುಗಳನ್ನು ಹಿಂದಕ್ಕೆ ಸರಿಸಿಕೊಳ್ಳುತ್ತ ಬಿಮ್ಮನೆ ದಣಿದವಳಂತೆ ಒಮ್ಮೆ ನಿಟ್ಟುಸಿರು ಬಿಡಲು, ಆ ದಿವ್ಯಮೂರ್ತಿಯ ಅಪೂರ್ವ ಸೌಂದರ್ಯದ ಸೊಬಗಿನಲ್ಲಿ ಕಾಸಿಮನು ಮುಂದುಗಾಣದಾದನು! ವೇಗದಿಂದ ಸಾಗಿದ್ದ ಉಗಿಬಂಡಿಯು ಗಕ್ಕನೆ ನಿಂತಂತೆ ಪದ್ಮಿನಿಯು ಸುಮ್ಮನಾಗಿರಲು, ಪದ್ಮಿನಿಯ ವಾಗ್ವಿಲಾಸದ ವೈಭವದಿಂದ ಪರವಶನಾಗಿದ್ದ ಆ ಯವನ ವೀರನು, ಈಗ ಈ ದೈವೀತೇಜಸ್ಸಿನ ತರುಣಿಯಮುಂದೆ ಏನು ಮಾತಾಡ ಬೇಕೆಂಬುದನ್ನು ಸರ್ವಥಾ ತಿಳಿಯದಾದನು. ಹೀಗೆ ಹತಬದ್ಧನಾಗಿ ಕುಳಿತಿರುವ ಕಾಸಿಮನನ್ನು ನೋಡಿ ಪುನಃ ಪದ್ಮಿನಿಯು—''ಖಾನಸಾಹೇಬ, ವಿಚಾರಮಾಡಿರಿ, ಕರ್ನಾಟಕವು ನಮ್ಮ ಕೈಸೇರಿರುವದೆಂಬ ನಿಮ್ಮ ಮಾತೇ ಭ್ರಾಂತಿಮೂಲವಾಗಿರುವದೆಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ. ಶಾಶ್ವತಳಾದ ಕರ್ನಾಟಕ ಭೂಮಾತೆಯನ್ನು ಅಶಾಶ್ವತರಾದ ನೀವು ಕೈಸೇರಿಸಿಕೊಳ್ಳಲಿಕ್ಕೆ ಎಷ್ಟರವರು? ಈ ಮೊದಲೇ ಮಹಾ ಮಹಾ ಪ್ರತಾಪಿಗಳು ಕರ್ನಾಟಕವನ್ನು ಆಳುತ್ತಿರುವಾಗ ನೀವೆಲ್ಲಿದ್ದಿರಿ? ಯಾರಾರು ಎಷ್ಟೆಷ್ಟು ದಿವಸ ಈ ಕರ್ನಾಟಕವನ್ನು ಆಳಿ ನಾಮಶೇಷರಾಗಿ ಹೋಗಿರುವರೆಂಬುದನ್ನು ವಿಚಾರಿಸುವಷ್ಟು ವಿವೇಕವು ನಿಮ್ಮಲ್ಲಿರುವದಿಲ್ಲವೆ? ಹೀಗೆ ತನ್ನ ಮೋಹಜಾಲದಿಂದ ನಿಮ್ಮಂಥ ಅಹಂಭಾವಿಗಳನ್ನು ಕ್ಷಣಹೊತ್ತು ತಕತಕನೆ ಕುಣಿಸಿ ಕಡೆಗೆ ತನ್ನಲ್ಲಿ ಅಡಗಿಸಿಕೊಳ್ಳುವ ನಮ್ಮ ಕರ್ನಾಟಕ ಭೂಮಾತೆಯು, ಭವಿಷ್ಯತ್ಕಾಲದಲ್ಲಿ ಏನು ಚಮತ್ಕಾರ ಮಾಡುವಳೆಂಬುದನ್ನು ನೋಡಲಿಕ್ಕೆ ಕ್ಷಣಭಂಗುರವಾದ ನಿಮ್ಮ ದೇಹವು ಬದುಕಿ ಉಳಿಯುವದೋ ಇಲ್ಲವೋ? ಆದ್ದರಿಂದ ನಿಮ್ಮ ಅಜ್ಞಾನದ ಮಾತುಗಳಿಗಾಗಿ ನನಗೆ ನಗೆ ಬರುತ್ತದೆ. ಕಾಲವಶದಿಂದ ಕನ್ನಡಿಗರು ನಾವು ಕೈಲಾಗದವರು ಆಗಿರಬಹುದು; ನಾವು ಪ್ರಬಲರಾದ ನಿಮಗೆ ಅಂಜಿ ಅಂಕಿತರೂ ಆಗಬಹುದು; ಆದರೆ ಅಷ್ಟಕ್ಕೆ ನೀವು ಅಹಂಕಾರಪಟ್ಟು ಹೀಗೆ ಹರಟಬಹುದೆ? ಖಾನಸಾಹೇಬ, ಮೊನ್ನೆ ನಮ್ಮ ಕನ್ನಡ ಮಲ್ಲಸರ್ಜನನು ನಿಮ್ಮ ಮಲಿಕ ಜಟ್ಟಿಯನ್ನು ಮಲ್ಲಯುದ್ಧದಲ್ಲಿ ಒಗೆದನು; ಅದರಂತೆ ಕುರುಬರ ಹೆಗ್ಗಣ್ಣನು ಅಥವಾ ಈಗ ನೀವು ಆದಂತೆ ಯಾದವ ಕುಲೋತ್ಪನ್ನನಾದ ಹುಕ್ಕದೊರೆಯು, ಹಿಂದಕ್ಕೆ ನಿಮ್ಮವರನ್ನು ಸೋಲಿಸಿರುವನು. ಈಗೂ ಪ್ರಸಂಗವಶಾತ್ ನಿಮ್ಮವರನ್ನು ಸೋಲಿಸುತ್ತಿರುವನು; ಇಷ್ಟರಿಂದ ಮುಸಲ್ಮಾನರು ಹಿಂದುಗಳ ದಾಸರಾದರೆಂದು ನೀವು ಅನ್ನಬಹುದೊ? ಶಿವಶಿವ! ನಾನಂತು ಇಂಥ ಮೂರ್ಖತನದ ಮಾತನ್ನು ಸರ್ವಥಾ ಆಡಲಾರೆನು. ಮುಸಲ್ಮಾನ ದೇಹದಿಂದೇ ಆಗಲಿ, ಹಿಂದೂ ದೇಹದಿಂದಲೇ ಆಗಲಿ, ಅಥವಾ ಮತ್ತಾವ ದೇಹದಿಂದಲೇ ಆಗಲಿ ಭೂಲೋಕಕ್ಕೆ ಜನಿಸಿ ಬಂದ ಆತ್ಮನ ಸ್ವಾತಂತ್ರ್ಯವು ಮೂಲತಃ ಅವಿನಾಶಿಯಾದದ್ದೆಂಬದನ್ನು ನಾನು ಗುರು ಮುಖದಿಂದ ಹಲವುಸಾರೆ ಕೇಳಿದ್ದೇನೆ. ಕಾಲಮಹಿಮೆಯಿಂದ ಜೀವಾತ್ಮನು ಒಮ್ಮೆ ಸ್ವಾತಂತ್ರ್ಯದ ತೇಜಸ್ಸಿನಿಂದ ಥಳಥಳಿಸುವಂತೆ ತೋರಬಹುದು. ದೇಹಧಾರಣ ಮಾತ್ರದಿಂದ ಕಾಲಾಧೀನನಾಗಿರುವ ಜೀವಾತ್ಮನು ಹೀಗೆ

ವ್ಯತ್ಯಾಸಕ್ಕೆ ಒಳಗಾದರೂ, ತಿಳಿದವರು ಅವನ ಸ್ವಭಾವಸಿದ್ಧವಾದ ಸ್ವಾತಂತ್ರ್ಯವನ್ನು ಭಂಗಗೊಳಿಸಹೋಗಿ ಪಾಪಕ್ಕೆ ಗುರಿಯಾಗತಕ್ಕದ್ದಲ್ಲ. ಸೂರ್ಯನ ಮೇಲೆ ಮಣ್ಣುತೂರಿದವನ ಕಣ್ಣಲ್ಲಿ ನಿಶ್ಚಯವಾಗಿ ಮಣ್ಣು ಬೀಳುವಂತೆ, ಒಬ್ಬ ಜೀವಾತ್ಮನ ಸ್ವಾತಂತ್ರ್ಯಹರಣ ಮಾಡಹೋದವರು ನಿಶ್ಚಯವಾಗಿ ತಮ್ಮ ಸ್ವಾತಂತ್ರ್ಯವನ್ನು ಕಳಕೊಳ್ಳುವರು. ಕೆಟ್ಟುಹೋದವರ ಸಂಗಡ ನಾವೂ ಕೆಟ್ಟುಹೋಗಬಹುದೆ? ''ಕೆಟ್ಟದ್ದನ್ನು ಅಟ್ಟವನೇ ಜಾಣನೆಂ''ಬಂತೆ, ಸ್ವಾತಂತ್ರ್ಯ ಕಳಕೊಂಡವರಿಗೆ ಪುನಃ ಸ್ವಾತಂತ್ರ್ಯವನ್ನೊದಗಿಸಿಕೊಡುವವನೇ ಪುಣ್ಯಾತ್ಮನು; ಅವನೇ ನಿಜವಾದ ವಿಜಯವನ್ನು ಸಂಪಾದಿಸಿದವನು! ಖಾನಸಾಹೇಬ, ಯಾವ ವಿಜಯದಿಂದ ವಿಜಯ ಸಂಪಾದಿಸಿದವನ ಆತ್ಮವು ಅಸಂತುಷ್ಟವಾಗುವದೋ, ಯಾವ ವಿಜಯದಿಂದ ಆ ಅಸಂತುಷ್ಟವಾದ ಆತ್ಮವು ಹೊಸಹೊಸ ಅನಾಚಾರಗಳಲ್ಲಿ ಪ್ರವರ್ತಿಸುವದೋ? ಯಾವ ವಿಜಯದಿಂದ ಆ ಅಸಂತುಷ್ಟಾತ್ಮನ ಆ ಅನಾಚಾರವೃತ್ತಿಯು, ಪತಂಗ ಹುಳದ ದೀಪ ಪತನ ವ್ಯಾಪಾರದಂತೆ ಉತ್ತರೋತ್ತರ ಹೆಚ್ಚುತ್ತಹೋಗುವದೋ ಆ ವಿಜಯವು ವಿಜಯವೇ ಅಲ್ಲ; ಅಂಥ ವಿಜಯವು ಅಪಜಯದಲ್ಲಿ ರೂಪಾಂತರಿಸತೊಡಗಿರುವದೆಂದು ತಿಳಿಯತಕ್ಕದ್ದು! ಇತಿಹಾಸವನ್ನು ಅವಲೋಕಿಸಿದರೆ, ಜೀವಾತ್ಮರ ಈ ಸ್ವಾತಂತ್ರ್ಯ–ಪಾರತಂತ್ರ್ಯಗಳ ಪುನರಾವರ್ತನದ ಪಾಠವು ಮನದಟ್ಟಾಗಿ ಗೊತ್ತಾಗಿ, ಯಾರಾದರೂ ಬುದ್ಧಿಗಲಿಯಬಹುದಾಗಿದೆ ! ಕೆಲಕಾಲ ಕೆಲ ಜನಾಂಗಗಳು ಸ್ವಾತಂತ್ರ್ಯದ ತೇಜಸ್ಸಿನಿಂದ ಬೆಳಗಿದಂತೆ ತೋರಿ, ಮುಂದೆ ಅವೆ ಜನಾಂಗಗಳು ಪಾರತಂತ್ರ್ಯದ ಪೀಡೆಗೆ ಒಳಗಾದಂತೆ ಕಾಣುವವು ! ಅಂದಬಳಿಕ ಖಾನಸಾಹೇಬ, ಆ ಜನಾಂಗಗಳ ಈ ಕ್ಷಣಭಂಗುರವಾದ ಸ್ವಾತಂತ್ರ್ಯ–ಪಾರತಂತ್ರ್ಯಗಳಿಗೆ ಮಹತ್ವಕೊಟ್ಟು, ನಾವು ಸ್ವತಂತ್ರರೆಂಬ ಅಹಂಕಾರದಿಂದ ಸೆಟೆಯುವವರೂ, ನಾವು ಪರತಂತ್ರರೆಂಬ ದುಃಖದಿಂದ ಕೊರಗುವವರೂ ಸರಿಯಾಗಿಯೇ ಪಾಮರತ್ವದ ಪದವಿಯನ್ನು ಹೊಂದಿರುವರೆಂದು ತಿಳಿಯತಕ್ಕದ್ದಲ್ಲವೆ? ನಿಮ್ಮ ಮುಸಲ್ಮಾನ ಜನಾಂಗವು ಪೈಗಂಬರರ ಪವಿತ್ರ ಧರ್ಮಪ್ರಭಾವದಿಂದ ಪ್ರಕಾಶಿತವಾಗಿದ್ದಾರಷ್ಟೇ? ಈಗೂ ನಿಜವಾದ ಸ್ವಾತಂತ್ರ್ಯದ ತೇಜಸ್ಸಿನಿಂದ ಮಿನುಗುತ್ತಿರುವದೆಂದು ನೀವು ತಿಳಿದಿರುವಿರೇನು? ಮುಂದೆ ಈ ನಿಮ್ಮ ಜನಾಂಗವು, ಒಂದಾನೊಂದು ಜನಾಂಗದಿಂದ ಹತವೀರ್ಯವಾಗಿ ಸ್ವಾತಂತ್ರ್ಯವನ್ನು ಕಳೆದುಕೊಳ್ಳಲಿಕ್ಕಿಲ್ಲವೆಂದು ನಂಬುವಿರಾ? ಛೀ ಛೀ ! ಇಂಥ ಅಭದ್ರವಾದ ಕಲ್ಪನೆಯು ನನ್ನ ಮನಸ್ಸಿನಲ್ಲಿ ಯಾಕೆ ಬರುತ್ತಿರಬಹುದು? ಈ ದೇವರಾಜ ಪುತ್ರಿಯು ಕುಮಾರಿಕೆಯಾದರೂ–ಮುಸಲ್ಮಾನರ ಕೈಯಲ್ಲಿ ಸಿಕ್ಕು ಒದ್ದಾಡುತ್ತಿದ್ದರೂ ನಿಮ್ಮ ಮುಸಲ್ಮಾನ ಜನಾಂಗದ ಸ್ವಾತಂತ್ರ್ಯಹಾನಿಯಾಗಬೇಕೆಂದು ಸರ್ವಥಾ ಇಚ್ಛಿಸುವದಿಲ್ಲ; ಯಾಕಂದರೆ, ನಮ್ಮ ಸನಾತನ ವೈದಿಕ ಧರ್ಮವು ಪತಿತರನ್ನು ಉದ್ಧರಿಸತಕ್ಕದ್ದಲ್ಲದೆ, ಉದ್ಧೃತರನ್ನು ಪತಿತರಾಗಮಾಡತಕ್ಕದ್ದಲ್ಲ; ಆದ್ದರಿಂದ ಇಂಥ ಧರ್ಮಹೀನ ವಿಚಾರವು ನನ್ನ ಮನಸ್ಸಿನಲ್ಲಿ ಬರುವದು ಕೂಡ ಪಾಪವೆಂದು ನಾನು ತಿಳಿಯುವೆನು !''

ಈ ಮೇರೆಗೆ ನುಡಿದು ಪದ್ಮಿನಿಯು ಪಾಪದ ಭಯದಿಂದ ಭೀತಳಾಗಿ ಅನ್ಯರ ಆಶ್ರಯ ಪಡೆಯುವಂತೆ ಬಳಿಯಲ್ಲಿದ್ದ ತನ್ನ ಪ್ರಿಯ ದಾಸಿಯಾದ ಕನಕಮ್ಮನ ಹೆಗಲಮೇಲೆ ತನ್ನ ಎರಡೂ ಹಸ್ತಗಳನ್ನು ಇಟ್ಟು, ಅವುಗಳ ಮೇಲೆ ತನ್ನ ಮುಖದ ಭಾರವನ್ನು ಹಾಕಿ ಸುಮ್ಮನೆ ನಿಂತುಕೊಂಡಳು.

ದೈವೀ ಪ್ರೇರಣೆಯಿಂದ ಹೀಗೆ ಅಸ್ಖಲಿತ ಭಾಷಣಮಾಡುವಾಗ ಆಕೆಗೆ ಆಯಾಸವಾದಂತೆ ತೋರಿತು ! ಆಕೆಯ ಕಣ್ಣುಗಳು ಕತ್ತಲುಗೂಡಿಸಿದಂತಾದವು, ಮೈ ಜೋರೆಂದು ಬೆವತಿತು, ಕ್ಷಣಮಾತ್ರ ಆಕೆಯ ಪ್ರಜ್ಞೆಯೂ ತಪ್ಪಿದಂತಾಯಿತು ! ಇದನ್ನು ನೋಡುವ ಕಾಸಿಮನ ಅಂತಃಕರಣ ಕರಗಿ ಆತನು ದಾಸಿಗೆ– ''ಕನಕಮ್ಮಾ ಕುಳ್ಳಿರಿಸು–ಕುಳ್ಳಿರಿಸು, ಈ ರಾಜಪುತ್ರಿಯನ್ನು ಈ ಪಲ್ಲಂಗದ ಮೇಲೆ ಸ್ವಲ್ಪ ಕುಳ್ಳಿರಿಸಿ ಗಾಳಿಯನ್ನು ಹಾಕು; ಅಥವಾ ಇತ್ತ ಬಾ, ನಾವಿಬ್ಬರೂ ಈಕೆಯನ್ನು ಮೆಲ್ಲನೆ ಪಲ್ಲಂಗದಮೇಲೆ ಮಲಗಿಸೋಣ; ಪಾಪ ! ನನ್ನಿಂದ ಈ ಕೋಮಲೆಗೆ ಎಷ್ಟು ಆಯಾಸವಾಯಿತಲ್ಲ! ಈ ಜಾಣೆಯ ದಿವ್ಯ ಭಾಷಣದಿಂದ ಈ ಕಾಸಿಮನ ಮನಸ್ಸು ಕರಗಿದರೂ, ಆ ಮನಸ್ಸಿನೊಳಗಿನ ದುಷ್ಟ ವಿಕಾರವು ಅಳಿದುಹೋಗಲೊಲ್ಲದು ! ಏನು ಮಾಡಲಿ? ಕನಕಮ್ಮಾ ನೀನಾದರೂ ನನ್ನ ಮೇಲೆ ಅಂತಃಕರಣ ಮಾಡು; ಹೀಗೆ ಬಹಳವಾಗಿ ಆಯಾಸಪಟ್ಟು ಪರಾಧೀನ ಳಾಗಿರುವ ಈ ದೇವರಾಜ ಪುತ್ರಿಯ ಕರಸ್ಪರ್ಶದಿಂದ ನಾನು ಧನ್ಯನಾಗುವಂತೆ ನನ್ನನ್ನು ಅನುಗ್ರಹಿಸು! ಇಷ್ಟು ಪುಣ್ಯಕಟ್ಟಿಕೊಳ್ಳುವೆಯಾ?'' ಎಂದು ಕಾಸಿಮನು ಪದ್ಮಿನಿಯ ಪಾಣಿಗ್ರಹಣ ಮಾಡಬೇಕೆಂದು ಮುಂದಕ್ಕೆ ಬರುತ್ತಿರಲು, ಪದ್ಮಿನಿಯು ಚಟ್ಟನೆ ದಾಸಿಯನ್ನು ಬಿಟ್ಟು ಹಿಂದಕ್ಕೆ ಸರಿದು ನಸುಗೋಪದಿಂದ ಕಾಸಿಮನನ್ನು ನೋಡಿ– ''ಖಾನಸಾಹೇಬ, ಇಂಥ ಅನರ್ಥಕಾರಕ ಕಾರ್ಯಕ್ಕೆ ನೀವು ಕೈಹಾಕತಕ್ಕದ್ದಲ್ಲ; ಹೀಗೆ ತಟ್ಟನೆ ಕೈಹಾಕುವಷ್ಟು ಚೇತನಾರಹಿತಗಳು ಈ ಪದ್ಮಿನಿಯು ಇನ್ನೂ ಆಗಿರುವದಿಲ್ಲ; ಅದರಂತೆ, ಈ ಪದ್ಮಿನಿಗೆ ಆಶ್ರಯಭೂತಳಾಗಿರುವ ಕರ್ನಾಟಕ ಭೂಮಾತೆಯ ದಿವ್ಯ ತೇಜಸ್ಸೂ ಅಷ್ಟು ಮರೆಯಾಗಿರುವದಿಲ್ಲ; ಆದ್ದರಿಂದ ನೀವು ಹಿಂದಕ್ಕೆ ಸರಿದು ನಿಮ್ಮ ಸ್ಥಳದಲ್ಲಿ ಕುಳಿತುಕೊಳ್ಳಿರಿ. ನೀವು ನಿಮ್ಮ ಸ್ಥಳದಲ್ಲಿ ಕುಳಿತುಕೊಂಡಿರುವಾಗಲೇ ಪದ್ಮಿನಿಗೆ ಹೆಚ್ಚು ಆದರಣೀಯರಾಗಿ ತೋರುತ್ತೀರಿ; ಹೀಗೆ ನೀವು ವಿವೇಕಹೀನರಾಗಿ ಹಿಂದು ಮುಂದಿನ ವಿಚಾರವಿಲ್ಲದೆ ಪರಸ್ತ್ರೀಯರ ಪ್ರಾಣಿಗ್ರಹಣ ಮಾಡಲಿಕ್ಕೆ ನೀವು ಕುಗ್ಗತಕ್ಕದ್ದು; ಯಾಕಂದರೆ, ನಮ್ಮಂಥ ವೀರಪುತ್ರಿಯರು ಕರ್ನಾಟಕದಲ್ಲಿ ಇನ್ನೂ ಜೀವಿಸುತ್ತಿರಲು, ನಮ್ಮ ಹಲವು ಕನ್ನಡ ವೀರರು ತಮ್ಮ ಶೌರ್ಯ–ಸಾಹಸಗಳಿಂದ ಆಗಾಗ್ಗೆ ಮುಸಲ್ಮಾನರ ಹೃದಯಗಳನ್ನು ನಡುಗಿಸುತ್ತಿರಲು, ಪೂಜ್ಯ ಮಾಧವಾಚಾರ್ಯರಂಥ ತಪೋಧನರ ರಾಜಕಾರಣಪಟುತ್ವದ ಧನ್ಯವಾದದಿಂದ, ಕರ್ನಾಟಕಕ್ಕೆ ಕರ್ನಾಟಕವೇ ಎಚ್ಚತ್ತು ಆಕಳಿಸಿ ಮೈ ಒಡ್ಡ ಮುರಿಯುತ್ತಿರಲು, ಹೀಗೆ ಆರ್ಯ ಸ್ತ್ರೀಯರ ಮೇಲೆ ದುಮುಕುವ ಸಾಹಸ ಮಾಡಲಿಕ್ಕೆ ನಿಮಗೆ ಸರ್ವಥಾ ಅವಸರ ದೊರೆಯಲಾರದು ! ಖಾನಸಾಹೇಬ, ಕೈಜೋಡಿಸಿ ಹೇಳುತ್ತೇನೆ, ತಲೆಬಾಗಿಸಿ ಪ್ರಾರ್ಥಿಸುತ್ತೇನೆ. ಸರಿಯಿರಿ ಹಿಂದಕ್ಕೆ, ಬಿಗಿಹಿಡಿಯಿರಿ ಮನಸ್ಸನ್ನು ! ಹೀಗೆ ದುಮುಕುವದು ನಿಮ್ಮ ನಾಶದ ಲಕ್ಷಣವಾಗಿರುವದು. ಯೋಗ್ಯತೆಯಿಂದ ನೀವು ಸಾಮಾನ್ಯ ಮನುಷ್ಯರಲ್ಲ, ವೀರರಿರುತ್ತೀರಿ, ಧೀರರಿರುತ್ತೀರಿ, ನಮ್ಮಂಥ ಅಬಲೆಯರ ಮಾನರಕ್ಷಣದ ಪಾತ್ರತೆಯಿಂದ, ನನ್ನ ಪಿತೃಸ್ಥಾನಾಪನ್ನತೆಯ ಗೌರವ ಪಡೆಯುವ ಯೋಗ್ಯತೆಯೂ ನಿಮ್ಮಲ್ಲಿರುತ್ತದೆ; ಆದ್ದರಿಂದ ನೀವು ನಿಮ್ಮ ಘನವಂತಿಕೆಯನ್ನು ಮರೆಯಬೇಡಿರಿ. ಈ ದೇವರಾಜಪುತ್ರಿಯು ಕೈಯಲ್ಲಿ ಸಿಕ್ಕಿರುವಳೆಂಬ ಭ್ರಾಂತಿಯಿಂದ ಚಕ್ಕಂದವಾಡುವದು ಸರಿಯಲ್ಲ, ನಿಜವಾದ ಆರ್ಯ ಪುತ್ರಿಯರ ಪವಿತ್ರ ಹೃದಯದ ಕೋಮಲತೆಯ ಪರಿಚಯವು,

ಕೇಳಿಯಾದರೂ ನಿಮಗೆ ಇದ್ದಂತೆ ತೋರುವದಿಲ್ಲ. ಪಾಪ ! ಪತಿ ಮರಣವಾರ್ತೆಯ ಶ್ರವಣಮಾತ್ರದಿಂದ ಅವರ ಹೃದಯಕಮಲವು ತಿಕ್ಕಿ ಒರೆಸಿ ಹೋಗಿ ಅದರೊಳಗಿನ ಜೀವಾತ್ಮನು ಹೊರಟುಹೋಗುತ್ತಿರುವದನ್ನು ನೀವೇನು ಬಲ್ಲಿರಿ? ಖಾನಸಾಹೇಬ, ಈಪ್ರೊತ್ತಿಗೆ ಈ ದೇವರಾಜಪುತ್ರಿಯ ಹಂಬಲವನ್ನು ನೀವು ಸರ್ವಥಾ ಬಿಟ್ಟುಬಿಡತಕ್ಕದ್ದು. ನೀವು ಕೇವಲ ಗಾವಿಲರಿರುವಿರೆಂಬದನ್ನು ನಿಮ್ಮ ಈ ಕೃತಿಯಿಂದ ನಾನು ತಿಳಿದಿರುವೆನು; ಆದರೆ ನಿಮ್ಮ ಹಸ್ತಸ್ಪರ್ಶವೊಂದು ಈ ದೇವರಾಜಪುತ್ರಿಯ ದೇಹಕ್ಕಾಗಲಿ, ಆಗ ಆಕೆಯ ಪವಿತ್ರಾತ್ಮನು ಈ ಕ್ಷುದ್ರ ನಾಶವಂತ ದೇಹವನ್ನು ಪರಿತ್ಯಜಿಸದೆ ಇರನು ! ಅಂದಬಳಿಕ ವ್ಯರ್ಥವಾಗಿ ಸ್ತ್ರೀಹತ್ಯದ ಅಪಕೀರ್ತಿಗೆ ನೀವು ಯಾಕೆ ಗುರಿಯಾಗಬೇಕು ?''

## ಕಾಸಿಮನ ಹಳವಂಡ

ಪದ್ಮಿನಿಯ ಮಾತಿನಿಂದ ಕಾಸಿಮನೇನೊ ಹಿಂದಕ್ಕೆ ಸರಿದು ತನ್ನ ಸ್ಥಳದಲ್ಲಿ ಕುಳಿತುಕೊಂಡನು. ಆದರೆ ತನಗಾದ ಅಪಮಾನವನ್ನು ಆ ಯುವನ ವೀರನು ಸಹಿಸಲಿಲ್ಲ; ಆದರೂ ಅವನು ವಿವೇಕದಿಂದ ತನ್ನ ಮನಸ್ಸನ್ನು ಬಿಗಿ ಹಿಡಿದು ಪದ್ಮಿನಿಯನ್ನು ಕುರಿತು– ''ರಾಜಪುತ್ರಿ, ಇನ್ನು ನಿನ್ನ ಪಾಂಡಿತ್ಯವನ್ನು ಸಾಕುಮಾಡು. ನನ್ನಂಥ ವಿವೇಕಶೂನ್ಯನ ಮುಂದೆ ನಿನ್ನ ಪಾಂಡಿತ್ಯದ ಆಟವೇನು ನಡೆಯುವದು ! ಸುಮ್ಮನೆ ಆಯಾಸಪಡಬೇಡ. ''ಕಾಮಾತುರಾಣಾಂ ನ ಭಯಂ ನ ಲಜ್ಜಾ'' ಎಂಬಂತೆ, ನನಗೆ ಯಾರ ಭಯವೂ ಇಲ್ಲ, ಯಾವ ನಾಚಿಕೆಯೂ ಇಲ್ಲ. ನಿನ್ನ ಪಾಣಿಗ್ರಹಣ ಮಾಡದೆ ಇಂದು ಇಲ್ಲಿಂದ ನಾನು ಕದಲುವಹಾಗಿಲ್ಲ. ನೋಡುವಾ, ನನ್ನ ಆ ಕಾರ್ಯಕ್ಕೆ ವಿಘ್ನ ಮಾಡುವವರಾರೆಂಬುದನ್ನು! ಪದ್ಮಿನಿ, ವೀರ ಕಾಸಿಮನು ತೋರಿಸುವ ವಿನಯಕ್ಕೆ ನಿನ್ನ ಈ ಔದ್ಧತ್ಯವೇ ಪ್ರತಿಫಲವೇನು? ಇದು ಒಳ್ಳೆಯ ಮಾತಿನ ಕಾಲವಲ್ಲ, ಮೂಗು ಹಿಡಿದರೆ ಬಾಯಿ ತೆರೆಯುವ ಕಾಲವು ! ಆದ್ದರಿಂದ ಈ ಕಾಸಿಮನ ಕೈಯನ್ನು ನಿನಗೆ ತೋರಿಸುವೆನು ನೋಡು ! ಗಯ್ಯಾಳಿ, ಸ್ಪರ್ಶಮಾತ್ರದಿಂದ ಪ್ರಾಣತ್ಯಾಗ ಮಾಡುವೆನೆಂದು ಬೆದರಿಕೆಹಾಕುತ್ತೀಯಾ ? ನನ್ನ ಮಾತು ನಡಿಸಲಾರದ ನೀನು ಈ ಭೂಲೋಕದಲ್ಲಿ ಇದ್ದಾದರೂ ಪ್ರಯೋಜನವೇನು ? ನಿನ್ನಲ್ಲಿ ವಿವೇಕವು ಉತ್ಪನ್ನವಾದೀತೆಂದು ಇಷ್ಟು ದಿನ ನಾನು ಹಾದಿಯನ್ನು ನೋಡಿದೆನು; ಆದರೆ ಬೋರ್ಗಲ್ಲಮೇಲೆ ಮಳೆಗರೆದಂತಾಯಿತು! ಕತ್ತೆಗೆ ಲತ್ತೆಯ ಪೆಟ್ಟೇ ಮದ್ದೆನ್ನುವಂತೆ, ನಿನ್ನಂಥ ಪುಂಡ ಸ್ತ್ರೀಯನ್ನು ಬಲಾತ್ಕರಿಸುವದೇ ಯೋಗ್ಯವು'' ಎಂದು ನುಡಿದು ಕಾಸಿಮನು ಮೇಲಕ್ಕೆದ್ದನು. ಆಗ ಆ ವೀರನ ಗೌರವರ್ಣದ ಮುಖವು ಆರಕ್ತವಾಯಿತು, ಕಣ್ಣುಗಳು ಕೆಂಪಡರಿದವು. ಅತ್ತ ಪದ್ಮಿನಿಯ ವೃತ್ತಿಯೂ ಬದಲಾಗಿತ್ತು. ಕಾಸಿಮನು ಆಡಿದ ದುರ್ಭಾಷಣದಿಂದ ಆ ಮರ್ಯಾದಶೀಲ ವೀರಪುತ್ರಿಯು ಸಂತಪ್ತಳಾಗಿದ್ದಳು. ಆಕೆಯ ಕೆಳದುಟಿಯು ನಡುಗುತ್ತಿತ್ತು, ಕಣ್ಣುಗಳು ಕಿಡಿಕಾರುತ್ತಿದ್ದವು. ಆಕೆಯು ತನ್ನ ಸ್ಥಳಬಿಟ್ಟು ಕದಲದೆ ಮುಸುಕಿನ ಕಠಾರಿ ಹಿಡಿದು ಎತ್ತಿ ಕಾಸಿಮನಿಗೆ ದರ್ಪದಿಂದ– ''ಶಠ,

ಸರಿ ಹಿಂದಕ್ಕೆ ! ಕ್ಷತ್ರಿಯ ಕುಮಾರಿಯ ಈ ಪವಿತ್ರ ಶಸ್ತ್ರವನ್ನು ನಿನ್ನ ನೀಚದೇಹದ ಬಲಿಯಿಂದ ಅಪವಿತ್ರಗೊಳಿಸಬೇಡ ! ಕಾಳಸರ್ಪವನ್ನು ಮೆಟ್ಟುವ ಸಾಹಸಕ್ಕೆ ಯಾಕೆ ಹೋಗುತ್ತೀ ?'' ಎಂದು ನುಡಿದು, ಕಠಾರಿಯಿಂದ ಇರಿಯ ಹೋಗಲು, ಒಬ್ಬ ಬೈರಾಗಿಣಿಯು ಅಕಸ್ಮಾತ್ತಾಗಿ ಅಲ್ಲಿಗೆ ಬಂದು ಪದ್ಮಿನಿಯ ಕೈಯನ್ನು ಹಿಡಿದು ಗಾಂಭೀರ್ಯದಿಂದ– ''ರಾಜಪುತ್ರೀ, ತಡೆ, ಈ ಕೊಲೆಗಡಕತನವು ನಿನ್ನ ಕೋಮಲಹೃದಯಕ್ಕೆ ಒಪ್ಪಲಾರದು ! ಅಮ್ಮಾ ನಿನ್ನ ಉಗ್ರರೂಪವನ್ನು ನೋಡಿ ಖಾನ ಸಾಹೇಬರೂ ಹಿಂದಕ್ಕೆ ಸರಿದು ನಿಂತಿರಲು, ನನ್ನಂಥ ಭಿಕ್ಷುಕಿಯ ಪಾಡೇನು ? ಆದರೂ ಸರ್ವಸಂಗ ಪರಿತ್ಯಾಗ ಮಾಡಿದ ನನಗೆ ನಿನ್ನ ಭಯವಿಲ್ಲ; ಭೂತದಯಕ್ಕೆ ಒಪ್ಪದ ಈ ನಿನ್ನ ಕೃತಿಯನ್ನು ನಾನು ನಿಷೇಧಿಸದೆ ಇರಲಾರೆನು ! ನಿನ್ನ ಮೋಹದಿಂದ ಅಧಃಪತನ ಹೊಂದಿದ್ದ ಈ ಖಾನಸಾಹೇಬರನ್ನು ಕೈಹಿಡಿದು ಎಬ್ಬಿಸುವದು ನಿನ್ನ ಧರ್ಮವಾಗಿದ್ದು, ಆ ನೆಲಕ್ಕೆ ಬಿದ್ದವರ ಮೇಲೆ ನಿರ್ದಯದಿಂದ ನೀನು ಶಸ್ತ್ರ ಪ್ರಯೋಗಿಸುವೆಯಲ್ಲ; ಅವಿವಾಹಿತಳಾದ ಕ್ಷತ್ರಿಯ ಕುಮಾರಿಯು ನೀನು, ಹೀಗೆ ತರುಣವೀರರ ಅವಮಾನಗೊಳಿಸುವದು ಯೋಗ್ಯವೇ ?''

ಹೀಗೆ ಬೈರಾಗಿಣಿಯು ನುಡಿಯುತ್ತಿರಲು, ಪದ್ಮಿನಿಯು ಆಕೆಯ ಕಡೆಗೆ ಹೊರಳಿ ನೋಡಿದಳು. ಅತ್ತ ಕಾಸಿಮನೂ ಬೈರಾಗಿಣಿಯನ್ನು ನೋಡಹತ್ತಿದನು. ಬೈರಾಗಿಣಿಯ ಆ ಶಾಂತವಾದ ಗಂಭೀರ ಮುಖಮುದ್ರೆ, ಮೋಹಕಸ್ವರೂಪ, ವೈರಾಗ್ಯದ ಉಡಿಗೆ–ತೊಡಿಗೆಗಳು ಇವನ್ನು ನೋಡಿ ಅವರಿಬ್ಬರ ಚಿತ್ತವೃತ್ತಿಗಳೂ ಬದಲಾದವು. ಪದ್ಮಿನಿಯು ಒಂದೇಸವನೆ ಬೈರಾಗಿಣಿಯನ್ನು ನೋಡುತ್ತಿದ್ದಳು. ಕಾಸಿಮನು ಒಮ್ಮೆ ಪದ್ಮಿನಿಯನ್ನು ಒಮ್ಮೆ ಬೈರಾಗಿಣಿಯನ್ನು ನೋಡುತ್ತ ನಿಂತುಕೊಂಡಿದ್ದನು. ಆ ವಿಲಕ್ಷಣ ಪ್ರಸಂಗದಲ್ಲಿ ಒಬ್ಬರ ಮುಖದಿಂದಲೂ ಮಾತುಗಳು ಹೊರಡದಾದವು. ಆಗ ಬೈರಾಗಿಣಿಯು ಕಾಸಿಮನ ಕಡೆಗೆ ಹೊರಳಿ ವಿನಯದಿಂದ– ''ಖಾನಸಾಹೇಬ, ತಾವು ಕುಳಿತುಕೊಳ್ಳಬೇಕು'' ಎಂದು ಹೇಳುತ್ತ ಪದ್ಮಿನಿಯ ಕೈಯೊಳಗಿನ ಕಠಾರಿಯನ್ನು ತಕ್ಕೊಂಡಳು. ಬರಬರುತ್ತ ಪದ್ಮಿನಿಯ ವೃತ್ತಿಯೂ ಶಾಂತವಾಗತೊಡಗಿತು. ಆಕೆಯು ಆಶ್ಚರ್ಯದಿಂದ ಬೈರಾಗಿಣಿಯ ಮೋರೆ ನೋಡುತ್ತ ನಿಂತುಕೊಂಡಳು. ಆಗ ಬೈರಾಗಿಣಿಯು ಪದ್ಮಿನಿಯ ಬೆನ್ನಮೇಲೆ ಕೈಯಾಡಿಸುತ್ತ– ''ದೇವರಾಜಪುತ್ರಿ, ಶಾಂತಳಾಗು–ಶಾಂತಳಾಗು, ನಿನ್ನ ಸಿಟ್ಟು ಇಳಿಯಿತಷ್ಟೇ? ಖಾನಸಾಹೇಬರ ಮೇಲೆ ನೀನು ಹೀಗೆ ಕೋಪಿಸತಕ್ಕದ್ದಲ್ಲ; ಹ್ಯಾಗಿದ್ದರೂ ನಮ್ಮಂಥ ಅಬಲೆಯರು ಅವರಿಗೆ ಈಡೇ? ಏನೋ ಅವರು ತುಸು ಕೈಕಾದರು ! ಇಲ್ಲದಿದ್ದರೆ ನಿನ್ನ ಗತಿಯೇನಾಗುತ್ತಿತ್ತು? ನಿನ್ನ ಈ ಪವಿತ್ರ ಕಠಾರಿಯು, ಮಾನಹಾನಿಯ ಪ್ರಸಂಗದಲ್ಲಿ ನಿಮ್ಮಂಥ ಕುಲೀನ ಸ್ತ್ರೀಯರ ಪ್ರಾಣಹರಣ ಮಾಡೀತಲ್ಲದೆ, ಕಾಸಿಮಖಾನರಂಥ ವೀರರ ವಜ್ರಶರೀರವನ್ನು ಭೇದಿಸಲು ಸಮರ್ಥವಾದೀತೆ ? ನೋಡು, ಭೀಮಪರಾಕ್ರಮಿಗಳಾದ ಖಾನಸಾಹೇಬರು ದೊಡ್ಡ ಮನಸ್ಸಿನಿಂದ ನಿನ್ನ ಲೀಲೆಯನ್ನು ನಡೆಯಗೊಟ್ಟಿದ್ದರ ವಿಚಾರ ಮಾಡು. ಖಾನಸಾಹೇಬರನ್ನು ಎಲ್ಲ ಯವನ ವೀರರಂತೆ ನೀನು ಭಾವಿಸಬೇಡ. ಅವರ ಘನತರವಾದ ಯೋಗ್ಯತೆಯನ್ನು ನಾನು ಬಲ್ಲೆನು. ಹಿಂದೂ ಬೈರಾಗಿಣಿಯು ನಾನು ಹೀಗೆ ಯವನರ ಪಕ್ಷಗಟ್ಟಿ ಮಾತಾಡುವದು ನಿನಗೆ ವಿಚಿತ್ರವಾಗಿ ತೋರಬಹುದು; ಆದರೆ ಗುಣಿಜನರು ಅನ್ಯರ ಗುಣಕ್ಕಾಗಿ ಮತ್ಸರಿಸಬಹುದೇ? ಘನವಂತರಾದ

ಖಾನಸಾಹೇಬರು ನಿನ್ನ ಮನಸ್ಸನ್ನೊಲಿಸಿಕೊಳ್ಳುವದಕ್ಕಾಗಿ ಎಷ್ಟು ಪರಿಶ್ರಮ ಮಾಡಿರುವರೆಂಬದನ್ನು ನೀನು ದುರ್ಲಕ್ಷಿಸಬೇಡ. ಸ್ವಲ್ಪ ಸಮಾಧಾನ ತಾಳು. ನಾನು ಖಾನಸಾಹೇಬರಿಗೂ ಹೇಳಿಕೊಳ್ಳುತ್ತೇನೆ. ಖಾನಸಾಹೇಬರು ಮಾಡಿಕೊಳ್ಳಬೇಕೆಂದರೆ, ಹಿಂದು–ಮುಸಲ್ಮಾನ ತರುಣೆಯರಿಗೇನು ಕೊರತೆ ? ಅವರದೊಂದು ಸರವನ್ನೇ ಖಾನಸಾಹೇಬರು ಹಾಕಿಕೊಳ್ಳಬಹುದು. ಆದ್ದರಿಂದ ಅವರು ನಿನ್ನ ಮೇಲೆ ಪ್ರೀತಿ ಮಾಡುತ್ತಿರುವದೊಂದು ಭಾಗ್ಯವೆಂದು ತಿಳಿಯತಕ್ಕದ್ದು ! ರಾಜಪುತ್ರಿ, ಹಿಂದೂ ಜನರಲ್ಲಿಯಾದರೂ ನಿನ್ನ ಯೋಗ್ಯತೆಗೆ ತಕ್ಕವರು ನಿನ್ನ ಪಾಣಿಗ್ರಹಣ ಮಾಡಲಿಕ್ಕೆ ಯಾರಿದ್ದಾರೆ ಹೇಳು? ಅಂದಬಳಿಕ ನೀನು ಇಲ್ಲದ ಅಭಿಮಾನಕ್ಕೆ ಹೋಗಬೇಡ. ಖಾನಸಾಹೇಬ, ನಿಮಗೆ ನನ್ನದೊಂದು ಪ್ರಾರ್ಥನೆ; ಈಗ ನೀವು ಪದ್ಮಿನಿಯ ಯಾವ ಮಾತೂ ಮನಸ್ಸಿಗೆ ಹಚ್ಚಿಕೊಳ್ಳದೆ ಸಮಾಧಾನದಿಂದ ಮನೆಗೆ ಹೋಗಿಬಿಡಿರಿ. ತರುಣೆಯರ ಹಂಬಲ ಹಿಡಿದವರಿಗೆ, ಅದರಲ್ಲಿಯೂ ಮಾರ್ಗಬಿಟ್ಟು ಹಂಬಲ ಹಿಡಿದವರಿಗೆ, ಇಂಥ ಅಪಮಾನದ ಪ್ರಸಂಗಗಳು ಬಂದೇಬರುವವು. ಅವನ್ನೆಲ್ಲ ತಾಳಿಕೊಂಡು ಜಾಣತನದಿಂದ ನಡೆಯದಿದ್ದರೆ ಕಾರ್ಯವು ಹ್ಯಾಗೆ ಸಾಧಿಸೀತು ? ನಾಳೆ ಇದೇ ಹೊತ್ತಿಗೆ ಪದ್ಮಿನಿಯ ಬಳಿಗೆ ನೀವು ಬಂದಿರೆಂದರೆ, ಆಕೆಯ ಮನಸ್ಸು ನಿಮ್ಮ ಕಡೆಗೆ ಒಲಿದದ್ದನ್ನು ನೋಡಿ ನಿಮಗೆ ಪರಮಾನಂದವಾದೀತು. ಹೋಗಿರಿ, ಎಂದೂ ಅಸತ್ಯವನ್ನಾಡದ ಈ ಬೈರಾಗಿಣಿಯು, ಎದೆ ತಟ್ಟಿಕೊಂಡು ನಂಬಿಗೆಯಿಂದ ನಿಮಗೆ ಹೇಳುತ್ತೇನೆ, ನಾಳೆ ಪದ್ಮಿನಿಯು ನಿಮ್ಮ ಮನೋದಯಕ್ಕೆ ಅನುಕೂಲಳಾಗಿ ನಡಕೊಳ್ಳುವಳು ! ಖಾನಸಾಹೇಬ, ಎಂಥ ತಿಳಿದವರಿದ್ದರೂ ಪ್ರಸಂಗವಶಾತ್ ಅವರಿಗೆ ನಾಲ್ಕು ಮಾತು ಹೇಳಲಿಕ್ಕೆ ಎರಡನೆಯವರು ಬೇಕಾಗುತ್ತದೆ. ಅಂದಬಳಿಕ ಈ ಪೋರಿ–ಪದ್ಮಿನಿಯ ಪಾಡೇನು? ಪದ್ಮಿನಿಯು ಚತುರಳಿರುವಳು ; ಕಾರ್ಯಾಕಾರ್ಯದ ಪರಿಜ್ಞಾನವೂ ಆಕೆಗಿರುತ್ತದೆ; ಆದರೆ ಆಕೆಯು ಇನ್ನೂ ಚಿಕ್ಕವಳು, ವ್ಯವಹಾರದ ಅನುಭವವಿಲ್ಲದವಳು. ಪಾಪ ! ಅರಮನೆಯಲ್ಲಿ ಅಪ್ಪನ ಅಚ್ಛೆಯಲ್ಲಿ ಬೆಳೆದಿದ್ದ ಆಕೆಗೆ ವ್ಯವಹಾರದ ಅನುಭವವಾದರೂ ಹ್ಯಾಗಾಗಬೇಕು? ಸರಳಸ್ವಭಾವವಾದದ್ದರಿಂದ ಕಟ್ಟಿಗೆ ಮುರಿದಂತೆ ಎರಡು ಮಾತು ಆಡಿಬಿಡುವಳು. ಹೊಟ್ಟೆಯಲ್ಲಿ ಕಪಟವಿಲ್ಲ. ಖಾನಸಾಹೇಬ, ನಿಮ್ಮ ಯೋಗ್ಯತೆಯು ಸಾಮಾನ್ಯವಾದದ್ದಲ್ಲ, ಅದನ್ನು ನಾನು ಕೇಳಿದ್ದರೂ ಈಗ ದೇವರಾಜ ಪುತ್ರಿಯು ಅದನ್ನು ಈಗ ಕೇಳಲಿ'' ಎಂದು ನುಡಿದು, ತನ್ನ ವೀಣೆಯ ಮಂಜುಲ ಸ್ವರಕ್ಕೆ ತನ್ನ ದನಿಗೂಡಿಸಿ ಹಿಂದಸ್ತಾನಿ ಪದಗಳಿಂದ ಕಾಸಿಮನ ಗುಣಗಳನ್ನು ಹೊಗಳಹತ್ತಿದಳು.

ಬೈರಾಗಿಣಿಯು ಅತ್ಯಂತ ಗಾಯನಚತುರಳು, ಕಾಸಿಮನೂ ಅತ್ಯಂತ ಗಾಯನಪ್ರಿಯನು, ಅದರಲ್ಲಿಯೂ ಕಾಸಿಮನ ಸ್ತುತಿಪರ ಪದ್ಯಗಳು, ಅಂದಬಳಿಕ ಕೇಳುವದೇನು ? ಕಾಸಿಮನು ಸಂತುಷ್ಟನಾದನು. ಬೈರಾಗಿಣಿಯು ಆತನಿಗೆ ಪರಮಾದರಣೀಯಳಾಗಿ ತೋರಿದಳು. ಅತ್ತ ಪದ್ಮಿನಿಯು ಶಾಂತವೃತ್ತಿಯಿಂದ ಗಾಯನ ಕೇಳುತ್ತಿರುವುದನ್ನು ನೋಡಿ ಕಾಸಿಮನಲ್ಲಿ ಆಶಾಂಕುರವು ಉದ್ಭವಿಸಿತು. ಕಾಮುಕರ ಸ್ಥಿತಿಯೇ ಹೀಗೆ. ಅವರು ನಿರಾಶೆಯಲ್ಲಿಯೂ ಆಶೆಯನ್ನು ಕಂಡು ಕೊಳ್ಳುವರು. ಪದ್ಮಿನಿಯ ಕ್ರೂರರೂಪವನ್ನೂ, ಆಕೆಯ ಕ್ರೂರವ್ಯಾಪಾರ ಪ್ರವೃತ್ತಿಯನ್ನೂ

ನೋಡಿ ಕಾಸಿಮನು ತೀರ ನಿರಾಶಪಟ್ಟಿದ್ದನು; ಆದರೆ ಈಗಿನ ಆಕೆಯ ಶಾಂತರೂಪದಲ್ಲಿ ಆತನಿಗೆ ಮತ್ತೆ ಆಶಾಂಕುರವು ಮಿನುಗಹತ್ತಿತು. ಪದ್ಮಿನಿಯು ಎಟ್ಟಿತನದಿಂದ ತಟ್ಟನೆ ಹೋಗಿಬಿಡದೆ, ತನ್ನ ಸ್ತುತಿಪರ ಪದ್ಯಗಳನ್ನು ಮನಸ್ಸುಗೊಟ್ಟು ಕೇಳಹತ್ತಿದ್ದರಿಂದ ಅವನ ಆ ಆಶಾಂಕುರಕ್ಕೆ ಪಲ್ಲವಗಳೊಡೆದು ಮೆಲ್ಲಮೆಲ್ಲನೆ ಅದು, ಮೊಳಕೆಯು ಹೋಗಿ ಅಗಿಯೂ, ಅಗಿಯು ಹೋಗಿ ಗಿಡವೂ ಆಗಹತ್ತಿತು ! ಕಾಸಿಮನ ಮನೋರಾಜ್ಯದಲ್ಲಿ ಆ ಆಶಾವೃಕ್ಷಕ್ಕೆ ಫಲಗಳು ಬಿಟ್ಟಹಾಗೆ ತೋರಿದವು ! ಇರಲಿ, ಬೈರಾಗಿಣಿಯು ಮೂರು ನಾಲ್ಕು ಪದಗಳನ್ನು ಅಂದು ವೀಣೆಯನ್ನು ಕೆಳಗಿಟ್ಟು ಮುಖದ ಬೆವರ ಹನಿಗಳನ್ನು ಒರಸಿಕೊಳ್ಳುತ್ತ ಕಾಸಿಮನನ್ನು ನೋಡಲು, ಕಾಸಿಮನು– ''ಬೈರಾಗಿಣಿ, ಗಾಯನವು ಬಹಳ ಉತ್ಕೃಷ್ಟವಾಯಿತು. ನೀನು ಒಳ್ಳೇ ಗಾಯನ ಕುಶಲಳಾಗಿರುತ್ತೀ. ಹಿಂದಕ್ಕೆ ನಮ್ಮ ತಘಲಕ ಬಾದಶಹರ ಬಳಿಯಲ್ಲಿ ಗಾಯನ ಮಾಡಿದ ಗಾಯಕಿಯೂ ನೀನೇ ಅಲ್ಲವೆ? ನಮ್ಮ ಗುಣಜ್ಞ ಬಾದಶಹರ ಮನಸ್ಸನ್ನು ಸಂಪೂರ್ಣವಾಗಿ ಆಕರ್ಷಿಸಿದ್ದನ್ನು ನಾನು ಬಲ್ಲೆನು. ನಿನ್ನ ಗುಣಗಳಿಗೆ ಲುಬ್ಧರಾಗಿದ್ದ ನಮ್ಮ ಬಾದಶಹರನ್ನು, ಮಲ್ಲಸರ್ಜನನ ಬಂಧ ವಿಮೋಚನೆಗಾಗಿ ನೀನು ಪ್ರಾರ್ಥಿಸಲಿಲ್ಲವೆ? ನಿನ್ನ ಗುರುತು ನನಗೆ ಸಂಪೂರ್ಣವಾಗಿ ಹತ್ತಿತು. ನೀನು ಮಹಾ ಕರ್ತೃತ್ವಶಾಲಿನಿಯು. ಮಹಮ್ಮದ ತಘಲಕರ ಮನಸ್ಸನ್ನೊಲಿಸಿಕೊಂಡ ನಿನಗೆ ಯಾವದು ತಾನೇ ಅಸಾಧ್ಯವು? ನೀನು ಸಹಜವಾಗಿ ಪದ್ಮಿನಿಯ ಮನಸ್ಸನ್ನೊಲಿಸಿಕೊಳ್ಳಬಹುದು? ಆದ್ದರಿಂದ ತೇಜಸ್ವಿನಿಯಾದ ಬೈರಾಗಿಣಿಯೇ, ನಿನ್ನ ಮಾತಿಗೆ ನಾನು ಹೊರಗಿಲ್ಲ, ಪದ್ಮಿನಿಗೆ ಚೆನ್ನಾಗಿ ಬುದ್ಧಿಗಲಿಸು. ಬೈರಾಗಿಣಿ, ಹೀಗೆ ಹೇಳುವಾಗ ನಿಜವಾಗಿಯೂ ನನಗೆ ನಾಚಿಕೆಬರುತ್ತದೆ; ಪದ್ಮಿನಿಯು ಅನ್ನುವಂತೆ ನಾನು ನಿಜವಾಗಿ ಗಾವಿಲನೇ ಸರಿ; ಆದರೂ ನಾನು ನನ್ನ ಮನಸ್ಸನ್ನು ಜಯಿಸಲಾರೆನು. ಪದ್ಮಿನಿಯ ಕಡೆಗೆ ಹರಿದುಹೋಗುತ್ತಿರುವ ಅದನ್ನು ಬಿಗಿಹಿಡಿಯುವದು ನನ್ನಿಂದಾಗಲೊಲ್ಲದು; ಆದ್ದರಿಂದ ಯಥೇಚ್ಛವಾಗಿ ಅದನ್ನು ಹರಿಯಬಿಟ್ಟಿದ್ದೇನೆ. ಅದು ತಾನೇ ಪೆಟ್ಟುತಿಂದು ಬುದ್ಧಿಗಲಿಯಲೊಲ್ಲದೇಕೆ ! ನೀನು ಹೇಳಿದಂತೆ ನಾನು ಯಾವ ಮಾತೂ ಮನಸ್ಸಿಗೆ ಹಚ್ಚಿಕೊಳ್ಳದೆ ಈಗ ಮನೆಗೆ ಹೋಗಿಬಿಡುವೆನು. ಈ ಪದ್ಮಿನಿಯ ಹಂಬಲದಲ್ಲಿ ನಾನು ಸುಖ ಪಡೆಯುವೆನೋ ದೆಸೆಗೆಡುವೆನೋ ಅಲ್ಲಾನೇ ಬಲ್ಲನು ! ನಾನಂತೂ ಅಯೋಗ್ಯವಾದದ್ದೆಂದು ತಿಳಿದರೂ ಪದ್ಮಿನಿಯ ಪ್ರಾಪ್ತಿಗಾಗಿ ಪ್ರಾಣಾಂತ್ಯದವರೆಗೆ ಹೆಣಗದೆ ಬಿಡುವದಿಲ್ಲ ಎಂದು ನುಡಿದು ಕಾಸಿಮನು ಮನೆಗೆ ಹೋಗಿಬಿಟ್ಟನು. ಹೋಗುವಾಗ ಪದ್ಮಿನಿಯ ಕಡೆಗೆ ಅವನು ಹೊರಳಿ ನೋಡಲು, ಕರ್ಮ–ಧರ್ಮ–ಸಂಯೋಗದಿಂದ ಅವನ ದೃಷ್ಟಿಗೆ ಪದ್ಮಿನಿಯ ದೃಷ್ಟಿಯು ಸಮ್ಮೀಲನವಾಗಿ, ಆತನು ಪರಮಸಂತುಷ್ಟನಾದನು.

ಇತ್ತ ಪದ್ಮಿನಿಯ ಕೈಹಿಡಿದುಕೊಂಡು ನಿಂತಿದ್ದ ಬೈರಾಗಿಣಿಯು ಕೈ ಹಿಡಿದುಕೊಂಡೇ ನಿಂತಿದ್ದಳು. ಬೈರಾಗಿಣಿಯ ಈ ವಿಲಕ್ಷಣ ಕೃತಿಯನ್ನು ನೋಡಿ ಪದ್ಮಿನಿಯು ಆಶ್ಚರ್ಯಮಗ್ನಳಾಗಿದ್ದಳು. ತನ್ನ ಕೈ ಬಿಡಿಸಿಕೊಳ್ಳುವ ಪ್ರಜ್ಞೆಯೂ ಆಕೆಗೆ ಉಳಿದಿದ್ದಿಲ್ಲ. ಕಾಸಿಮನು ಹೊರಟುಹೋದಕೂಡಲೆ ಬೈರಾಗಿಣಿಯು ಏನೂ ಮಾತಾಡದೆ ಪದ್ಮಿನಿಯ ಕೈಹಿಡಕೊಂಡು ಒಳಗೆ ನಡೆದಳು. ಯಾವ ದಾಸಿಯೂ ತಮ್ಮನ್ನು ಹಿಂಬಾಲಿಸಿ ಬಾರದಂತೆ ಬೈರಾಗಿಣಿಯು ನಿರ್ಬಂಧಿಸಿದಳು.

ಗುರುತಿಲ್ಲ–ಪರಿಚಯುವಿಲ್ಲ, ಬೈರಾಗಿಣಿಯು ಇಷ್ಟು ದಿಟ್ಟತನದಿಂದ ನಡೆಯುವದನ್ನು ನೋಡಿ ದಾಸಿಯರೂ ಬೆಪ್ಪಾದರು. ಅವರು ಒಬ್ಬರ ಮೋರೆಯನ್ನೊಬ್ಬರು ನೋಡುತ್ತ ನಿಂತುಬಿಟ್ಟರು. ಪದ್ಮಿನಿಯೂ ಬೈರಾಗಿಣಿಯ ಮಾತಿಗೆ ಸಮ್ಮತಿಸಿದವಳಂತೆ ಸುಮ್ಮನೆ ಹೋಗಿಬಿಟ್ಟಿದ್ದರಿಂದ, ಆ ದಾಸಿಯರಿಗೆ ಬೈರಾಗಿಣಿಯ ಅಪ್ಪಣೆಯ ವಿರುದ್ಧವಾಗಿ ಪದ್ಮಿನಿಯನ್ನು ಹಿಂಬಾಲಿಸಿ ಹೋಗುವ ಧೈರ್ಯವಾಗಲಿಲ್ಲ. ಆ ದಾಸಿಯರೆಲ್ಲರೂ ಏನೇನೋ ತರ್ಕಿಸುತ್ತ ಹೊರಗೆ ನಿಂತುಕೊಂಡರು. ಅತ್ತ ಬೈರಾಗಿಣಿಯು ಪದ್ಮಿನಿಯನ್ನು ಕರಕೊಂಡು ಏಕಾಂತ ಸ್ಥಳದಲ್ಲಿ ಹೋಗಲು, ಪದ್ಮಿನಿಯು ಬೈರಾಗಿಣಿಯನ್ನು ಕುರಿತು–

ಪದ್ಮಿನಿ–ಇದೇನು ? ಈ ಪ್ರಸಂಗದಲ್ಲಿ ನೀನು ಹೇಗೆ ಬಂದೆ ? ನಾನಿಲ್ಲಿರುವದು ನಿನಗೆ ಹ್ಯಾಗೆಗೊತ್ತಾಯಿತು ? ತೇಜಸ್ವಿನಿ, ನೀನು ಎಂಥ ಅಯೋಗ್ಯ ಮಾತುಗಳನ್ನಾಡಿದೆಯಲ್ಲ! ನೀನು ಹುಕ್ಕದೊರೆಯ ತಂಗಿಯೇ ಅಲ್ಲವೆ ?

ಬೈರಾಗಿಣಿ– ಅವ್ವನವರೆ, ಹೌದು, ನಾನು ಹುಕ್ಕದೊರೆಯ ತಂಗಿಯೇ ಹೌದು. ನಿಮಗೆ ನೆರವಾಗುವದಕ್ಕಾಗಿ ಹುಕ್ಕದೊರೆಗಳ ಗುರುಗಳೇ ನನ್ನನ್ನು ಇಲ್ಲಿಗೆ ಕಳಿಸಿದರು ! ಅಮ್ಮಾ ಆ ಮಹಾತ್ಮರಿಗೆ ಗೊತ್ತಿಲ್ಲದ ಸಂಗತಿಯು ಯಾವದಿರುವದು?

ಪದ್ಮಿನಿ–ಅವ್ವಯ್ಯಾ ! ಮಾಧವಾಚಾರ್ಯರು ನಿನ್ನನ್ನು ಕಳಿಸಿದರೆ? ಎಂಥ ಕರುಣಾ ಶಾಲಿಗಳವರು ! ನೀನು ಕಾಸಿಮನೊಡನೆ ಆಡಿದ ಮಾತುಗಳನ್ನೂ ಅವರೇ ಕಲಿಸಿಕೊಟ್ಟಿರುವರೋ ಏನು?

ಬೈರಾಗಿಣಿ–ಭಾಗ್ಯಶಾಲಿನಿಯೆ, ಎಲ್ಲಿಯಾದರೂ ಕಲಿಸಿದ ಮಾತುಗಳೂ, ಕಟ್ಟಿದ ಬುತ್ತಿಯೂ ಕಡೆ ಪೂರೈಸುವವೆ ? ಇಂಥ ಕಲಿಸಿದ ಮಾತಿನವರು ಆ ಮಹಾತ್ಮರ ನಿಜವಾದ ಶಿಷ್ಯರು ಹ್ಯಾಗಾದಾರು ? ಯಾವದೊಂದು ಕಾರ್ಯಮಾಡುವುದನ್ನು ಕುರಿತು ಆಜ್ಞಾಪಿಸುವದು ಮಹಾತ್ಮರ ಕೆಲಸವು; ಆ ಮಹಾತ್ಮಪ್ರೇರಿತ ಬುದ್ಧಿಸಾಮರ್ಥ್ಯದಂತೆ ನಿಷ್ಠೆಯಿಂದ ಕಾರ್ಯವನ್ನು ಕೊನೆಗಾಣಿಸುವದು ನಮ್ಮಂಥ ಅನುಯಾಯಿಗಳ ಕೆಲಸವು ; ಆದ್ದರಿಂದ ಕಾರ್ಯಸಾಧಕರಾದ ನಾವು ಪ್ರಸಂಗ ನೋಡಿ ಮಾತಾಡಬೇಕಾಗುತ್ತದೆ. ಅಂಥ ಮಾತಾಡುವ ಪ್ರಸಂಗ ಬಂದದ್ದರಿಂದ ನಾನು ಹಾಗೆ ಶ್ರೀಗುರು ಪ್ರೇರಣೆಯಿಂದ ಮಾತಾಡಿದೆನು.

ಪದ್ಮಿನಿ–ಆ ದುಷ್ಟ ಕಾಸಿಮನಿಗೆ ನೀನು ಏನೇನೋ ಹೇಳಿಬಿಟ್ಟೆಯಲ್ಲ ! ಎಂಥ ಕೆಟ್ಟ ಮಾತುಗಳವು !

ಬೈರಾಗಿಣಿ–ಅವ್ವಾ, ಒಂದು ಪಕ್ಷದಲ್ಲಿ ಮಾತುಗಳು ಕೆಟ್ಟವಿದ್ದರೂ ಬಾಧಕವಿಲ್ಲ; ಆದರೆ ಕೃತಿಗಳು ಮಾತ್ರ ಸರ್ವಥಾ ಕೆಟ್ಟವಿರಲಾಗದು. ಆ ಕೆಟ್ಟ ಮಾತುಗಳಿಂದ ನಾನು ಸಾಧಿಸುವ ಕೃತಿಯು ಸರ್ವಥಾ ಯೋಗ್ಯವಾದದ್ದಿರುತ್ತದೆ; ಆದ್ದರಿಂದ ನಾನು ಹೇಳಿದಂತೆ ನಾಳೆ ನೀವು ಕಾಸಿಮನಿಗೆ ಅನುಕೂಲಿಸಿ ವರ್ತಿಸಬೇಕು.

ಪದ್ಮಿನಿ–ಆ ಮಾತು ಸರ್ವಥಾ ಆಗದು. ಒಬ್ಬಳೇ ಇದ್ದಾಗ ನಾನು ಕಾಸಿಮನಿಗೆ ಖಂಡತುಂಡ ಉತ್ತರ ಹೇಳಲಿಕ್ಕೆ ಅಂಜಿದವಳಲ್ಲ; ಅಂದಬಳಿಕ ನಿನ್ನಂಥ ತೇಜಸ್ವಿನಿಯು ಬಂದು ನನ್ನನ್ನು ಇಂಥ

ಹೀನ ವೃತ್ತಿಯ ಮೋಸದ ಆಚರಣೆಗೆ ಗುರಿಮಾಡಬಹುದೇ? ಆ ದುಷ್ಟನಿಗೆ ನಾನು ಅನುಕೂಲೆಯಾಗಿ ವರ್ತಿಸುವದಂತು ಇರಲಿ, ಆತನನ್ನು ಅನುಸರಿಸಿ ನಾನು ಮಾತೂ ಆಡಲಾರೆನು.

ಈ ಮೇರೆಗೆ ನುಡಿದ ಪದ್ಮಿನಿಯ ಕಿವಿಯಲ್ಲಿ ಬೈರಾಗಿಣಿಯು ಮೆಲ್ಲನೆ ಏನೇನೋ ಹೇಳ ತೊಡಗಿದಳು; ಪದ್ಮಿನಿಯು ಆ ಮಾತುಗಳನ್ನು ಆಶ್ಚರ್ಯದಿಂದ ಕೇಳುತ್ತಲಿದ್ದಳು. ಹೇಳುವದೆಲ್ಲ ಆದಮೇಲೆ ಬೈರಾಗಿಣಿಯು ಗಟ್ಟಿಯಾಗಿ– ''ಅದಕ್ಕಾಗಿಯೇ ಇದೊಂದು ಮಾತನ್ನು ಕಾಸಿಮನ ಮುಂದೆ ನೀವು ಬಾಯಿಬಿಟ್ಟು ಹೇಳಬೇಕು. ಹೀಗೆ ಸ್ವತಃ ಪೂಜ್ಯ ಮಾಧವಾಚಾರ್ಯರೇ ಹೇಳಿದ್ದಾರೆ'' ಎಂದು ಹೇಳಲು, ಪದ್ಮಿನಿಯು– ಅವ್ವಾ, ಆಚಾರ್ಯರ ಮಾತು ವೇದವಾಣಿಯೇ ಸರಿ; ಆದರೆ ಈ ಅಮಂಗಲ ಮಾತನ್ನು ನಾನು ಬಾಯಿಬಿಟ್ಟು, ಹ್ಯಾಗೆ ಆಡಲಿ ನೀನೇ ಹೇಳು ? ಆಚಾರ್ಯರವರ ಮಾತು ನಡೆದಿರಬೇಕು, ನನ್ನ ಬಾಯಿ ಹೊಲಸೂ ಆಗಿರಬಾರದು, ಇಷ್ಟು ಮಾಡುವದು ನಿನಗೆ ಅಸಾಧ್ಯವಾದೀತೇನು ? ಕರ್ತೃತ್ವಶಾಲಿನಿಯೇ, ನೀನು ಸಾಕ್ಷಾತ್ ಮಾಧವಾಚಾರ್ಯರ ಶಿಷ್ಯಳು; ಮುಹಮ್ಮದ ತಘಲಕನಂಥ ಅಂತಕನ ಮನಸ್ಸನ್ನೂ ಕರಗಿಸಿದವಳು ! ಬಹಳ ದೂರವೇಕೆ ? ಇಂದು ಕಾಸಿಮನಿಗೆ ನೀನು ಹಾಕಿದ ಮಂತ್ರದ ಸಾಮರ್ಥ್ಯವೇನು ಸಾಮಾನ್ಯವಾದದ್ದೇ ? ಕ್ಷಣದಲ್ಲಿ ಅವನು ನಿನ್ನ ದಾಸನಾದನು; ಆದ್ದರಿಂದ ನಿನ್ನ ಚಾತುರ್ಯದಿಂದ ಈ ದೇವ ರಾಜಪುತ್ರಿಯ ಗೌರವವನ್ನಿಷ್ಟು ಕಾದು ಪುಣ್ಯಕಟ್ಟಿಕೊಳ್ಳವ್ವಾ. ಆ ದುಷ್ಟನ ಮುಖಾವಲೋಕನ ಮಾಡಲಿಕ್ಕೂ ನನ್ನ ಮನಸ್ಸು ಆಗದಿರುವಾಗ, ನಾನು ಅವನನ್ನನುಸರಿಸಿ ಮಾತಾಡುವದು ಹೇಗೆ ? ಒಂದು ಪಕ್ಷದಲ್ಲಿ ಅವನೊಡನೆ ಮಾತಾಡಿದರೂ, ಈ ಅಭದ್ರ ವಾಣಿಯನ್ನು ಮಾತ್ರ ನಾನು ಬಾಯಿಬಿಚ್ಚಿ ಆಡಲಾರೆನು. ಇದರ ಮೇಲೆ ನೀನು ನನ್ನ ಮಾನ ಕಾಯದಿದ್ದರೆ, ಪೂಜ್ಯರಾದ ಆಚಾರ್ಯರ ಮಾತನ್ನು ನಾನು ನಡೆಸಲೇಬೇಕಾಗುವದು.

ಪದ್ಮಿನಿಯ ಈ ಮಾತುಗಳನ್ನು ಕೇಳಿ ಬೈರಾಗಿಣಿಯು ಸುಮ್ಮನೆ ಕುಳಿತು ಆಲೋಚಿಸ ತೊಡಗಿದಳು. ಆದರೆ ಆಕೆಯ ತೀಕ್ಷ್ಣಬುದ್ಧಿಗೆ ಬಹಳ ಹೊತ್ತು ಆಲೋಚಿಸಬೇಕಾಗಲಿಲ್ಲ. ಆಕೆಯು ತಲೆಯಲ್ಲಾಡಿಸಿ ಮುಗುಳುನಗೆ ನಗುತ್ತ– ಅವ್ವನವರೇ, ನಮ್ಮ ಸದ್ಗುರುವು ಸಮರ್ಥನು; ನಿಮ್ಮ ಪುಣ್ಯವು ಬಲವತ್ತರವಾದದ್ದು. ಏನೂ ಚಿಂತೆಮಾಡಬೇಡಿರಿ. ನಾಳೆ ನಿಮ್ಮನ್ನು ಕಾಸಿಮನ ಕಣ್ಣಿಗೆ ಬೀಳಗೊಡದೆ ನಾನು ಎಲ್ಲ ಕೆಲಸ ಮಾಡುವೆನು; ಆದರೆ ನನ್ನದೊಂದು ಮಾತನ್ನು ಮಾತ್ರ ದಯಮಾಡಿ ನಡೆಸಬೇಕು; ನಾನು ಒಂದು ಹೂಮಾಲೆಯನ್ನು ಮಾಡಿ ಇಟ್ಟಿರುವೆನು. ನಾಳೆ ನಾನು ಕಾಸಿಮನೊಡನೆ ಮಾತಾಡುತ್ತ ಕುಳಿತಾಗ ನಿಮ್ಮ ಹೆಸರ್ಗೊಂಡು ಕರೆದ ಕೂಡಲೆ ಆ ಮಾಲೆಯನ್ನು ನೀವೇ ಕೊಟ್ಟಂತೆ ಒಬ್ಬ ದಾಸಿಯ ಕೈಯಿಂದ ಒಳಗೆ ನಿಂತು ನನಗೆ ಕೊಡಿಸಿಬಿಡಿರಿ. ಆ ದುಷ್ಟನಿಗೆ ನೀವು ಕೈಮುಟ್ಟ ಮಾಲೆಯನ್ನೂ ಮಾಡಬೇಡಿರಿ, ಕೈಮುಟ್ಟ ಮಾಲೆಯನ್ನೂ ಕೊಡಬೇಡಿರಿ. ನಾನು ಮಾಡಿದ ಹೂಮಾಲೆಯನ್ನು ದಾಸಿಯ ಕೈಯಿಂದ ಕೊಡಿಸಿದರೇನು ಚಿಂತೆಯಿಲ್ಲವಷ್ಟೆ ? ಕ್ಷತ್ರಿಯ ರಾಜಪುತ್ರಿಯರ ನಿಕಟವ್ರತದ ಸುದ್ದಿಯನ್ನು ಪ್ರಸಂಗವಶಾತ್ ಆಚಾರ್ಯರಿಂದಲೇ ನಾನು ಕೇಳಿದ್ದೇನೆ. ಆ ಮಹಾತ್ಮರು ನಿಮ್ಮ ಈ ಕಠಿಣ ವ್ರತದ ಭವಿಷ್ಯವನ್ನರಿತೇ ಆ ಮಾತನ್ನು ನನಗೆ

ಹೇಳಿದರೋ ಏನೋ ? ಅಮ್ಮಾ ಸದ್ಗುರು ಮಹಿಮೆಯು ಅಗಾಧವಾದದ್ದು! ನೋಡಿರಿ, ನಾಳೆ ಈ ಆಚಾರ್ಯ ಶಿಷ್ಯಳು ತೋರಿಸುವ ಚಾತುರ್ಯವನ್ನಾದರೂ ನೋಡಿರಿ. ಆ ತರುಣ ಕಾಸಿಮನನ್ನು ಮಾತಿನಿಂದ ಮರುಳುಮಾಡಿ ಕಾರ್ಯವನ್ನು ಸಾಧಿಸದಿದ್ದರೆ, ಮಾಧವಾಚಾರ್ಯರ ಶಿಷ್ಯಳೆನಿಸಿ ನಾನು ನಿಮ್ಮ ಸಹಾಯಕ್ಕಾಗಿ ಬಂದದ್ದರ ಪ್ರಯೋಜನವೇನಾದಂತಾಗುವದು ?

ಬೈರಾಗಿಣಿಯ ಈ ಮಾತುಗಳನ್ನು ಕೇಳಿ ಪದ್ಮಿನಿಗೆ ಬಹಳ ಸಂತೋಷವಾಯಿತು. ಆಕೆಯು ದಾಸಿಯನ್ನು ಕರೆದು ಬೈರಾಗಿಣಿಯನ್ನು ಉಪಚರಿಸಿದಳು. ಸಂತೋಷದಿಂದ ಅವರ ಊಟ–ಉಡಿಗೆಗಳಾದವು ; ಸುಖಗೋಷ್ಠಿಗಳು ನಡೆದವು. ಬೈರಾಗಿಣಿಯು ಬಂದದ್ದರಿಂದ ಪದ್ಮಿನಿಯ ಭಯವು ಅರ್ಧಕ್ಕರ್ಧ ಕಡಿಮೆಯಾದಂತಾಯಿತು. ಈ ಚತುರಳು ಏನಾದರೂ ಹಂಚಿಕೆಮಾಡಿ ತನ್ನ ಸಂಕಟವನ್ನು ದೂರಮಾಡದೆ ಬಿಡಳೆಂದು ಆಕೆಯು ಧೈರ್ಯಗೊಂಡಳು. ಅಂದಿನ ರಾತ್ರಿ ಪದ್ಮಿನಿಯ ಆನಂದಕ್ಕೆ ಭರತಿಯುಂಟಾಯಿತು ! ಎಂದೂ ಹತ್ತದಷ್ಟು ಗಾಢವಾದ ನಿದ್ರೆಯು ಆ ದಿನ ಆಕೆಗೆ ಹತ್ತಿತು; ಆದರೆ ಇತ್ತ ಕಾಸಿಮನ ಸ್ಥಿತಿಯು ಮಾತ್ರ ಇದಕ್ಕೆ ತೀರ ವಿರುದ್ಧವಾಗಿತ್ತೆಂದು ಹೇಳ ಬಹುದು. ಆತನು ಬೈರಾಗಿಣಿಯ ಮಾತು ನಂಬಿ, ಪದ್ಮಿನಿಯ ಅಂತರ್ಗೃಹದಿಂದ ಸಮಾಧಾನ ಹಚ್ಚಿಕೊಂಡು ಮನೆಗೆ ಬಂದದ್ದೇನೋ ನಿಜ; ಆದರೆ ಈ ಸಮಾಧಾನವು ಆತನಿಗೆ ಕಡೆತನಕ ಉಳಿಯಲಿಲ್ಲ; ಬೈರಾಗಿಣಿಯ ವಿಷಯವಾಗಿ ಆತನಲ್ಲಿ ಕುಕಲ್ಪನೆಯು ಉತ್ಪನ್ನವಾಯಿತು. ಹಿಂದೂ ಬೈರಾಗಿಣಿಯು ಕ್ಷತ್ರಿಯ ರಾಜಪುತ್ರಿಯನ್ನು ಯವನರ ಪಾಲುಮಾಡುವದು ತೀರ ಅಸಂಭವವೆಂತಲೂ, ಇದರಲ್ಲಿ ಏನಾದರೂ ಮೋಸವಿರಬೇಕೆಂತಲೂ ಆತನು ಭಾವಿಸಿದನು. ಬೈರಾಗಿಣಿಯು ಅಕಸ್ಮಾತ್ತಾಗಿ ಅಂತರ್ಗೃಹದೊಳಗೆ ಬಂದದ್ದರ ಗೂಢವು ಅವನಿಗೆ ತಿಳಿಯದಾಯಿತು. ತನಗೆ ಈ ಮಾತಿನ ಸಂಶಯಬಾರದೆ, ತಾನು ಬೈರಾಗಿಣಿಯ ಮಾತಿಗೆ ಮರುಳಾಗಿ ಮನೆಗೆ ಬಂದದ್ದಕ್ಕಾಗಿ ಆತನು ತನ್ನನ್ನು ಹಳಿದುಕೊಳ್ಳಹತ್ತಿದನು.

ಹೀಗೆ ತನ್ನನ್ನು ಹಳಿದುಕೊಳ್ಳುತ್ತ ಕಾಸಿಮನು ಹೈರಾಣಾಗುತ್ತಿರಲು, ಆತನಿಗೆ ಬೈರಾಗಿಣಿಯ ಮೋಹಕವಾದ ಗಾಯನದ ನೆನಪಾಯಿತು. ಬೈರಾಗಿಣಿಗೆ ನನ್ನ ವಿಷಯದಲ್ಲಿ ಪ್ರೀತಿಯಿಲ್ಲ ದಿದ್ದರೆ ನನ್ನ ಸ್ತುತಿಪರ ಪದ್ಯಗಳನ್ನು ಆಕೆ ಹಾಡಿದ ಕಾರಣವೇನು ? ಪ್ರೀತಿಯಿಲ್ಲದವರು ಹೀಗೆ ಪದ್ಯಗಳನ್ನು ಗಟ್ಟಿಮಾಡಿ ಅನ್ನುವದುಂಟೆ ? ಮೇಲಾಗಿ ಆಕೆಯ ಮುಖಲಕ್ಷಣದಿಂದ ಆಕೆಯಲ್ಲಿ ಮೋಸ ವಿದ್ದಂತೆ ನನಗೆ ತೋರುವದಿಲ್ಲ. ಏನೇ ಇರಲಿ, ನಾನು ಇಷ್ಟು ಚಿಂತಿಸುವ ಕಾರಣವಿಲ್ಲ. ಬೈರಾಗಿಣಿಯು ಮೋಸಗಾರಳಿದ್ದರೂ ನನ್ನ ಬಲೆಯಲ್ಲಿ ಸಿಕ್ಕಿದ್ದಾಳೆ, ಪದ್ಮಿನಿಯು ಕ್ರೋಧಸಂತಪ್ತ ಳಾಗಿದ್ದರೂ ನನ್ನ ಬಲೆಯಲ್ಲಿಯೇ ಸಿಕ್ಕಿದ್ದಾಳೆ; ಹೀಗೆ ಬಲೆಯಲ್ಲಿ ಸಿಕ್ಕಿರುವ ಎರಡು ಹೆಣ್ಣು ಹಕ್ಕಿಗಳ ವಿಷಯವಾಗಿ ನಾನೇಕೆ ಭಯಪಡಬೇಕು ? ಛೀ ! ಹೀಗೆ ನಾನು ಅನ್ನುವದರಲ್ಲಾದರೂ ಏನು ಅರ್ಥವಿದೆ? ಹೀಗೆ ಅನ್ನುತ್ತನ್ನುತ್ತ ಹಲವು ದಿವಸಗಳು ಕ್ರಮಿಸಿ ಹೋದವು; ಆದರೆ ನನಗೆ ಪದ್ಮಿನಿಯೇನು ವಶವಾಗಲಿಲ್ಲ. ಆಕೆಯು ಕಂಪಲಿಯ ಕೋಟೆಯಲ್ಲಿ ಬಂದಂದಿನಿಂದ ನನಗೆ ಚಳ್ಳಹಣ್ಣು ತಿನಿಸುತ್ತಿರುವಳು; ಅದಕ್ಕಾಗಿ ಆಕೆಗೆ ನಾನೇನು ಶಾಸನಮಾಡಿದ್ದೇನೆ ? ಈ ದಿನ

ಲಗ್ನವಾಗಿಯೇ ತೀರುವೆನೆಂಬ ನಿಶ್ಚಯಬುದ್ಧಿಯಿಂದ ಹೋದ ನಾನು, ಬೈರಾಗಿಣಿಯ ಮಾತಿಗೆ ಮರುಳಾಗಿ ತಿರುಗಿಬರಲಿಲ್ಲವೇ? ಬೈರಾಗಿಣಿಯು ಹೀಗೆ ಅಕಸ್ಮಾತ್ ಎಲ್ಲಿಂದ ಬಂದಳು, ಒಳಗೆ ಹೇಗೆ ಬಂದಳು ಎಂಬದನ್ನು ವಿಚಾರಿಸುವ ಎಚ್ಚರವೂ ನನಗೆ ಉಳಿಯಲಿಲ್ಲವೆಂದಬಳಿಕ, ನನ್ನ ಮರುಳುತನವನ್ನು ಎಷ್ಟೆಂದು ಹೇಳಬೇಕು ? ನನ್ನಂಥ ವೀರನನ್ನು ಅಬಲೆಯರಿಬ್ಬರು ಹೀಗೆ ಸೂತ್ರದ ಗೊಂಬೆಯಂತೆ ಕುಣಿಸುತ್ತಿರುವದರಿಂದ, ಅವರನ್ನು ಅಬಲೆಯರೆಂದು ಯಾಕೆ ಕರೆಯಲಿ ? ನನ್ನಂಥ ಬಲಾಢ್ಯನು ಇಂಥ ಅಬಲೆಯರಿಗಿಂತಲೂ ಬಲಹೀನನು ಯಾಕಾಗಿದ್ದೇನು ? ಈ ನನ್ನ ಬಲಹೀನತೆಗೆ ಕೆಟ್ಟ ಸ್ತ್ರೀ ವ್ಯಾಮೋಹವೇ ಕಾರಣವಲ್ಲವೇ ? ಅದನ್ನೊಂದು ಬಿಟ್ಟರೆ ನಿಶ್ಚಯವಾಗಿ ನಾನು ಬಲಾಢ್ಯನಾಗುವೆನು; ಆದರೆ ನನ್ನ ಈ ವಿವೇಕಕ್ಕೆ ನನ್ನ ಮನಸ್ಸು ಒಳಗಾಗಲೊಲ್ಲದಲ್ಲ! ತೀರ ಕೈಗೆ ಬಂದ ತುತ್ತನ್ನು ಬಾಯಿಯಲ್ಲಿ ಹಾಕದೆ ಬಿಡುವರೇ ಎಂದು ಹೇಳಿ ನನ್ನನ್ನು ಅದು ತನ್ನ ಎಳೆತಕ್ಕೆ ಒಳಪಡಿಸಿಕೊಳ್ಳುತ್ತಲಿದೆ. ಅಥವಾ ಅದರ ಎಳತವನ್ನಾದರೂ ಅಯೋಗ್ಯವೆಂದು ಏಕೆ ಹೇಳಬೇಕು ? ಇಷ್ಟು ಶ್ರಮಬಟ್ಟು, ಆ ಶ್ರಮದ ಫಲವು ಕೈಯಲ್ಲಿರಲು, ಆ ಫಲಭೋಗಕ್ಕೆ ನಾನು ಹಿಂಜರಿಯಬಹುದೆ ? ಮೊದಲೇ ಈ ದುರ್ವೃತ್ತಕ್ಕೆ ನಾನು ಒಳಗಾಗಬಾರದಾಗಿತ್ತು, ಈಗ ಕಾರ್ಯವು ಸಾಧಿಸುವ ಹೊತ್ತಿನಲ್ಲಿ ಈ ವಿವೇಕದ ಗೊಂದಲವೇಕೆ ? ಪದ್ಮಿನಿಯ ಪಾಣಿಗ್ರಹಣವನ್ನು ಬಲಾತ್ಕಾರದಿಂದ ಮಾಡಿದರೆ ಅದರಲ್ಲಿ ನನ್ನ ಅಪರಾಧವೇನಿದೆ ? ಆಕೆಯು ಹ್ಯಾಗೂ ಅವಿವಾಹಿತಳಿರುವಳು; ಆದರೆ ಪದ್ಮಿನಿಯ ಇಚ್ಛೆಯ ವಿರುದ್ಧ ನಡೆದದ್ದೊಂದು ಅಪರಾಧವೂ, ಪದ್ಮಿನಿಯನ್ನು ಧರ್ಮಭ್ರಷ್ಟ ಳಾಗಮಾಡಿದ್ದೊಂದು ಅಪರಾಧವೂ ನನ್ನ ಪಾಲಿಗೆ ಬರುವವು; ಬರಲಿ, ಇವೇನು ಅಷ್ಟು ದೊಡ್ಡ ಅಪರಾಧಗಳಲ್ಲ, ಇವಕ್ಕೂ ಹೆಚ್ಚಿನ ಅಪರಾಧಗಳನ್ನು ಮಾಡುವವರು ಜಗತ್ತಿನಲ್ಲಿ ಹಲವರಿರುವರು. ಮೇಲಾಗಿ ಪದ್ಮಿನಿಗೆ ನಮ್ಮ ಪವಿತ್ರ ಇಸ್ಲಾಮ ಧರ್ಮದ ದೀಕ್ಷೆಯನ್ನು ಕೊಡುವದರಿಂದ ಆಕೆಯ ಕಲ್ಯಾಣ ಮಾಡಿದಂತಾಗುವದಲ್ಲದೆ, ಕಾಫರರನ್ನು ಸನ್ಮಾರ್ಗಕ್ಕೆ ಹಚ್ಚಿದ ಪುಣ್ಯವೂ ನನಗೆ ಬರುವದು. ಆಹಹ ! ಪದ್ಮಿನಿಯೊಂದು ದುರ್ಲಭ ರತ್ನವೆಂದು ಹೇಳಬಹುದು. ಏನು ಆಕೆಯು ಯೋಗ್ಯತೆಯು ! ಇಂದಿನ ಆಕೆಯ ಮಾತುಗಳಿಗಾಗಿ ಯಾರಾದರೂ ತಲೆದೂಗಬಹುದು. ಆಕೆಯು ಸದ್ಗುಣಗಳನ್ನು ಎಷ್ಟು ವರ್ಣಿಸಿದರೂ ತೀರದು. ತನ್ನ ಧರ್ಮದಲ್ಲಿ ದೃಢಭಕ್ತಿ ಸ್ವಕುಲಾಭಿಮಾನ, ಅಚಲ ಧೈರ್ಯ, ನೀಚ ವಿಷಯವಾಸನೆಯ ಅಭಾವ ಇವೇ ಮೊದಲಾದವನ್ನು ಸ್ಮರಿಸಿದರೆ, ಎಂಥ ವಿಪತ್ತಿಗೊಳಗಾದರೂ, ಎಂಥ ಪಾಪಬಂದರೂ ಈ ಕನ್ಯಾರತ್ನವನ್ನು ನನ್ನದಾಗಿ ಮಾಡಿಕೊಳ್ಳದೆ ಬಿಡಬಾರದೆಂಬ ಹಾಗೆ ಆಗುತ್ತದೆ ! ಏನುಮಾಡಲಿ, ಈ ಕೆಟ್ಟ ರಾತ್ರಿಯು ಹೋಗಲೊಲ್ಲದಲ್ಲ ಇಂದೇ ಇದು ಇಷ್ಟು ದೀರ್ಘವೇಕೆ ಆಗಿದ್ದೀತು ? ಇಂದು ಬೆಳಗಾದರೂ ಆಗುತ್ತದೋ ಇಲ್ಲವೋ ಯಾರಿಗೆ ಗೊತ್ತು!

# ಸ್ವಪ್ನ ಸಂಭ್ರಮ

ಹೀಗೆ ಬಗೆಬಗೆಯಾಗಿ ಆಲೋಚಿಸಿ ದಣಿದು ಕಾಸಿಮನು ಒಮ್ಮೆ ಮಂಚದ ಮೇಲೆ ಮಲಗಿಕೊಳ್ಳುವನು; ಏನುಮಾಡಿದರೂ ನಿದ್ರೆಯು ಬಾರದಾಗಲು, ಕೆಲಹೊತ್ತು ಅತ್ತಿತ್ತ ಹೊರಳಾಡಿ ತಳಮಳಿಸುತ್ತಮತ್ತೆ ಎದ್ದು ಕುಳಿತುಕೊಳ್ಳುವನು. ಹೀಗೆ ಆತನು ಹಲವುಸಾರೆ ಮಲಗುತ್ತ ಏಳುತ್ತ ಇನ್ನೂ ಬೆಳಗಾಗಲೊಲ್ಲದಲ್ಲ, ಎಂದು ಸಂತಾಪಗೊಳ್ಳುತ್ತ ಕಾಲಹರಣ ಮಾಡುತ್ತಿರಲು, ಬೆಳಗುಮುಂಜಾವಿನಲ್ಲಿ ಅವನಿಗೆ ಸ್ವಲ್ಪ ಜಂಪುಹತ್ತಿದಹಾಗಾಯಿತು; ಆದರೆ ಅಸ್ವಸ್ಥಚಿತ್ತರಿಗೆ ಗಾಢನಿದ್ರೆಯು ಎಲ್ಲಿಂದ ಬರಬೇಕು ? ಕಾಸಿಮನು ಅರ್ಧ ನಿದ್ರೆ–ಅರ್ಧ ಎಚ್ಚರಿಕೆಯ ಸ್ಥಿತಿಯಲ್ಲಿರಲು, ಆತನ ಕನಸಿನಲ್ಲಿ ಪದ್ಮಿನಿಯು ಬಂದಳು ! ಕನಸಿನಲ್ಲಿಯಾದರೂ ಆ ಪವಿತ್ರಹೃದಯದ ಪ್ರಮದೆಯು ಕಾಸಿಮನಿಗೆ ಅನುಕೂಲಳಾದಳೇನು ? ಇಲ್ಲ! ಕಾಸಿಮನು ಆಕೆಯನ್ನು ಬಗೆಬಗೆಯಾಗಿ ಪ್ರಾರ್ಥಿಸುತ್ತಲಿದ್ದಾನೆ, ಪದ್ಮಿನಿಯು ಅವನನ್ನು ತಿರಸ್ಕರಿಸುತ್ತಲಿದ್ದಾಳೆ. ಹೀಗಾಗುತ್ತಾಗುತ್ತ ಕಾಸಿಮನಿಗೆ ಸಿಟ್ಟುಬಂದಿದೆ. ಆಗ ಆತನು ಕ್ರೋಧಾವೇಶದಿಂದ ಪದ್ಮಿನಿಯ ಮೇಲೆ ದುಮುಕಲು, ಕ್ರೋಧ ಸಂತಪ್ತ–ಬೈರಾಗಿಣಿಯು ಕೆರಳಿದ ಹೆಣ್ಣುಹುಲಿಯಂತೆ ಕಾಸಿಮನ ಮೇಲೆ ದುಮುಕಿ ಅವನನ್ನು ನೆಲಕ್ಕೆ ಕೆಡವಿ ಎದೆಯಮೇಲೆ ಕುಳಿತು ಅವನ ಗಂಟಲು ಹಿಚುಕತೊಡಗಿದ್ದಾಳೆ ! ದುಷ್ಟಶಾಸನಮಾಡಲು ಕ್ರುದ್ಧಳಾಗಿ, ತನ್ನ ಗಂಟಿಕ್ಕಿದ ಹುಬ್ಬುಗಳಿಂದಲೂ, ಕಿಡಿ ಸುರಿಸುವ ಕಣ್ಣುಗಳಿಂದಲೂ, ಕಸುವಿನ ಅವಡುಗಚ್ಚುವಿಕೆಯಿಂದಲೂ ವಿಕೃತವಾಗಿರುವ ಮುಖಕಮಲದ ಸೌಂದರ್ಯವು ಅನ್ಯರು ನೋಡಲಿಕ್ಕೆ ದುಸ್ಸಾಧ್ಯವಾಗಿರಲು, ತನ್ನ ಶಕ್ತಿ ಸರ್ವಸ್ವದಿಂದ ದುಷ್ಟ ಸಂಹಾರ ಮಾಡತೊಡಗಿದ ಸಾಕ್ಷಾತ್ ಆದಿಶಕ್ತಿಯಂತೆ, ಬೈರಾಗಿಣಿಯು ತನ್ನ ಗಂಟಲು ಗಟ್ಟಿಯಾಗಿ ಹಿಚುಕುತ್ತಿರುವಾಗ, ಕನಸಿನಲ್ಲಿಯೇ ಕಾಸಿಮನು ಭಯಗ್ರಸ್ತನಾಗಿ ಕೆಟ್ಟ ದನಿಯಿಂದ ಕೂಗಹತ್ತಿದನು; ಅಷ್ಟರಲ್ಲಿ ಹೊರಗೆ ಬಾಗಿಲಲ್ಲಿ ಕಾದುಕೊಂಡು ಕುಳಿತಿದ್ದದ್ದೊಂದು ವ್ಯಕ್ತಿಯು ಒಳಗೆ ಬಂದು ನಿಶ್ಶಂಕೆಯಿಂದ ಕಾಸಿಮನ ಮೈದಡವಿ – ''ಖಾನಸಾಹೇಬ–ಖಾನಸಾಹೇಬ, ಎಚ್ಚರಾಗಿರಿ– ಎಚ್ಚರಾಗಿರಿ'' ಎಂದು ಒದರತೊಡಗಿತು. ಆಗ ಕಾಸಿಮನು ಗದಗದ ನಡುಗುತ್ತ ಕಣ್ಣು ತೆರೆದು ನೋಡಲು, ಹೊರಗೆ ಬೆಳ್ಳಗೆ ಬೆಳಗಾಗಿದ್ದು, ಬಳಿಯಲ್ಲಿ ನಿಂತುಕೊಂಡಿದ್ದ ಬೈರಾಗಿಣಿಯು– ''ಯಾಕೆ ಖಾವಿಂದ, ಕೆಟ್ಟ ಕನಸು ಬಿದ್ದಿತ್ತೋ ಏನು ? ನಿಮ್ಮಂಥ ವೀರಾಧಿ ವೀರರನ್ನು ಭಯಗ್ರಸ್ತರಾಗಿಮಾಡಿದ ಕೆಟ್ಟ ಕನಸಾದರೂ ಯಾವದು? ನಿಮ್ಮನ್ನು ಅಂಜಿಸುವಂಥ ಯಾವ ವೀರನು ಉದಯಿಸಿದನು? ಕನಸಿನಲ್ಲಿಯಾದರೂ ಅಂಥ ವೀರನು ನಿಮಗೆ ಎದುರಾದದ್ದು ಆಶ್ಚರ್ಯವೇ ಸರಿ !'' ಎಂದು ಕೇಳುತ್ತಲಿದ್ದಾಳೆ; ಆದರೆ ಭಯಗ್ರಸ್ಥ ಕಾಸಿಮನಿಗೆ ಬೈರಾಗಿಣಿಯ ದರ್ಶನವು ಪುನಃ ಆದದ್ದರಿಂದ ಆಕೆಯ ಮಾತು ಕೇಳುವ ಪ್ರಜ್ಞೆಯು ಹಾರಿಹೋಗಿ, ಈಕೆಯು ಮತ್ತೆಲ್ಲಿ ನನ್ನ ಗಂಟಲು ಹಿಚುಕುವಳೋ ಎಂಬ ಅಂಜಿಕೆಯಿಂದ ಆತನು ಪುನಃ ಕಣ್ಣುಮುಚ್ಚಿ ಕೊಂಡು– ''ಬೈರಾಗಿಣಿಯು–ಬೈರಾಗಿಣಿಯು'' ಎಂದು ಕೆಟ್ಟ ದನಿಯಿಂದ ಒದರುತ್ತ ತನ್ನ ಸೇವಕರನ್ನು ಕೂಗಹತ್ತಿದನು! ಅದನ್ನು ನೋಡಿ ಬೈರಾಗಿಣಿಗೆ

ಆಶ್ಚರ್ಯವಾದದ್ದಲ್ಲದೆ, ನಗೆಯೂ ಬಂದಿತು. ಆಕೆಯು ಬಹು ಪ್ರಯಾಸದಿಂದ ತನ್ನ ನಗೆಯನ್ನು ಬಿಗಿಹಿಡಿದು ಹಿಂದಕ್ಕೆ ಸರಿಯುತ್ತಿರಲು, ಕಾಸಿಮನ ಸೇವಕರು ಕಾಸಿಮನನ್ನು ಎಬ್ಬಿಸಿದರು.

ಆಗ ಕಾಸಿಮನು ಸೇವಕರನ್ನು ನೋಡಿ ಧೈರ್ಯಗೊಂಡು ದೇವರನ್ನು ಸ್ಮರಿಸುತ್ತ ಎದ್ದು ಕುಳಿತು ತನ್ನ ಸೇವಕರಿಗೆ – ''ರಹಿಮಾನ, ಆ ಕ್ರೂರ ಬೈರಾಗಿಣಿಯು ಇಲ್ಲಿ ಇಲ್ಲವಷ್ಟೆ? ಆ ಬೈರಾಗಿಣಿಯು ಹೋದರೂ, ಆಕೆಯ ಸಂಬಂಧದ ನನ್ನ ಹೃದಯದೊಳಗಿನ ಅಂಜಿಕೆಯು ಹೋಗಲೊಲ್ಲದಲ್ಲ! ಎಂಥ ಉಗ್ರರೂಪವದು ! ಎಂಥ ಭಯಂಕರ ವ್ಯಾಪಾರವದು ! ಎಂದು ನುಡಿಯುತ್ತಿರಲು, ಬೈರಾಗಿಣಿಯು ಕೈಜೋಡಿಸಿಕೊಂಡು ಕಾಸಿಮನ ಎದುರಿಗೆ ಬಂದು ನಿಂತುಕೊಂಡು– ''ಖಾವಿಂದ, ಯಾವ ಬೈರಾಗಿಣಿಯಾಕೆಯು? ತಮ್ಮನ್ನು ಕರೆದುಕೊಂಡು ಹೋಗುವದಕ್ಕಾಗಿ ಪದ್ಮಿನಿಯ ಬಳಿಯಿಂದ ಬಂದಿರುವ ತಮ್ಮ ಈ ಬೈರಾಗಿಣಿಯು ಆಕೆಯಲ್ಲವಷ್ಟೆ? ಕನಸಿನಲ್ಲಿ ನಾವು ನೋಡಬಾರದ್ದನ್ನು ನೋಡಬಹುದು; ಅನುಭವಿಸಬಾರದ್ದನ್ನು ಅನುಭವಿಸಬಹುದು; ಆದರೆ ಹ್ಯಾಗಿದ್ದರೂ ಅದು ಕನಸೇ ಆದ್ದರಿಂದ ಜಾಗ್ರತಿಯಲ್ಲಿ ಅದಕ್ಕಾಗಿ ಕೌತುಕ ಪಡುವದಕ್ಕಿಂತ ಅದಕ್ಕೆ ಹೆಚ್ಚಿನ ಮಹತ್ವ ಕೊಡಲಾಗದು. ಎಂಥ ಅದ್ಭುತ ಸಂಗತಿಗಳನ್ನಾದರೂ, ಎಂಥ ಅಶಕ್ಯ ಸಂಗತಿಗಳನ್ನಾದರೂ ಕನಸಿನಲ್ಲಿ ಕಾಣಬಹುದೆಂಬ ಮಾತು ಸುಳ್ಳಲ್ಲ. ಖಾವಿಂದ, ಕಾಸಿಮಖಾನರಂಥ ಖಂಬೀರರಿಗೆ ಕನಸಿನಲ್ಲಿಯಾದರೂ ಭಯವುಂಟಾದದ್ದು ಆಶ್ಚರ್ಯವಲ್ಲವೆ? ತಮ್ಮ ಆನೆಯಂಥ ಬಲ, ಸಿಂಹನಂಥ ಪರಾಕ್ರಮ, ಪರ್ವತಕ್ಕೆ ಸಮಾನವಾದ ಧೈರ್ಯ ಇವನ್ನು ಕನಸಿನಲ್ಲಿ ಮಾತ್ರ ಯಾರಾದರೂ ಕದಲಿಸಿದರೆ ಕದಲಿಸಬಹುದಲ್ಲವೆ, ಎಚ್ಚರಿದ್ದಾಗ ಪ್ರತ್ಯಕ್ಷ ಮೃತ್ಯುವೂ ಅವನ್ನು ಕದಲಿಸಲಾರನು ! ಜಾಗ್ರತಿಗಿಂತ ಸ್ವಪ್ನದಲ್ಲಿ ಪರಾಧೀನತೆಯು ಹೆಚ್ಚು ಇರುವದರಿಂದ ಸ್ವಪ್ನವು ಮನುಷ್ಯನನ್ನು ಅವನ ಸ್ವಾಭಾವಿಕ ಸ್ಥಿತಿಗಿಂತ ಅತ್ಯುಚ್ಚ ಸ್ಥಿತಿಗಾದರೂ ಮುಟ್ಟಿಸಬಹುದು; ಅಥವಾ ಅತ್ಯಧಮ ಸ್ಥಿತಿಗಾದರೂ ಒಯ್ಯಬಹುದು ! ಆದ್ದರಿಂದಲೇ ವಿಚಾರವಂತರು ಕನಸನ್ನು ನಂಬುವದಿಲ್ಲ. ಖಾವಿಂದ, ತಮ್ಮ ಕನಸಿನಲ್ಲಿ ಯಾವ ಬೈರಾಗಿಣಿಯೇ ಬಂದಿರಲಿ – ಯಾವ ವಿರಾಗಿಣಿಯೇ ಬಂದಿರಲಿ, ಮನಸ್ಸಿನಲ್ಲಿದ್ದದ್ದು ಕನಸಿನಲ್ಲಿ ಎನ್ನುವಂತೆ ಸದ್ಯಕ್ಕೆ ನಿಮ್ಮ ಮನಸ್ಸಿನಲ್ಲಿ ವಾಸಮಾಡಿಕೊಂಡಿರುವವರೇ ನಿಮ್ಮ ಕನಸಿನಲ್ಲಿ ಬಂದಿದ್ದರೂ ಬಂದಿರಬಹುದು; ನೀವು ಅವರ ವಿಷಯದಲ್ಲಿ ವಿಕಲ್ಪಭಾವನೆಯಿಂದ ಮಲಗಿಕೊಂಡಿರುವಾಗಲೇ ನಿದ್ರೆಹತ್ತಿ ಕನಸುಬಿದ್ದದ್ದರಿಂದ ನಿಮ್ಮ ಮನಸ್ಸಿನಲ್ಲಿದ್ದ ಆ ವ್ಯಕ್ತಿಗಳು ನಿಮಗೆ ವಿರೋಧವಾಗಿ ವರ್ತಿಸಿ ಭಯ ಉಂಟಾಗುವಂತೆ ಕನಸಿನಲ್ಲಿ ಆಚರಿಸಿರಬಹುದು; ಆದರೆ ಅದರಲ್ಲೇನು ಅರ್ಥವಿಲ್ಲ! ಇದರಂತೆಯೇ ಪದ್ಮಿನಿಗೆ ನಿನ್ನೆ ರಾತ್ರಿ ಕನಸುಬಿದ್ದದ್ದರಿಂದ, ಆಕೆಯು ಬೆಳಗಾಗುವದರೊಳಗೆ ಇನ್ನೂ ಅರುಣೋದಯ ವಾಗುತ್ತಿರಲು, ನನ್ನನ್ನು ನಿಮ್ಮ ಬಳಿಗೆ ಪ್ರೇಮದಿಂದ ಕಳಿಸಿದಳು. ಆಕೆಯು ನಿಮ್ಮನ್ನು ಬೇಗನೆ ಕರಕೊಂಡು ಬರಬೇಕೆಂದು ಆಗ್ರಹದಿಂದ ಹೇಳಿದ್ದಾಳೆ– ಅಂಗಲಾಚಿ ಹೇಳಿದ್ದಾಳೆ ! ಆದ್ದರಿಂದ ಪದ್ಮಿನಿಯ ಪಾಣಿಗ್ರಹಣ ಮಾಡುವದಕ್ಕಾಗಿ, ಅಥವಾ ನಿಮ್ಮ ಮಾತಿನಿಂದ ಹೇಳುವದೆಂದರೆ ಪದ್ಮಿನಿಯ ನಿಕಾ ಮಾಡಿಕೊಳ್ಳುವದಕ್ಕಾಗಿ ಖಾವಿಂದರು ಬೇಗನೆ ಏಳಬೇಕೆಂದು ಪ್ರಾರ್ಥಿಸುವೆನು. ನನ್ನನ್ನು ಬೇಕಾದಾಗ ಒಳಗೆ ಬಿಡಲು ಸೇವಕರನ್ನು ತಾವು ಆಜ್ಞಾಪಿಸಿದ್ದರಿಂದಲೇ ತಕ್ಕ ಸಮಯದಲ್ಲಿ

ಸನ್ನಿಧಿಗೆ ಬರಲಿಕ್ಕೆ ನನಗೆ ಅನುಕೂಲವಾಯಿತು ಎಂದು ನುಡಿದು ಧೂರ್ತಳಾದ ಬೈರಾಗಿಣಿಯು ಸುಮ್ಮನಾಗಲು, ಕಾಸಿಮನ ಚಿತ್ತವೃತ್ತಿಯು ಸಂಪೂರ್ಣವಾಗಿ ತಿರುಗಿ, ಆತನು ಬೈರಾಗಿಣಿಯ ವಿಷಯವಾಗಿ ಆದರಭಾವವನ್ನು ತಾಳಿದನು; ಆದರೆ ತನ್ನ ಅಂಜುಬುರುಕತನಕ್ಕಾಗಿ ಚತುರ ಬೈರಾಗಿಣಿಯು ಗಹಗಹಿಸಿ ನಕ್ಕಿರಬಹುದಲ್ಲವೇ ? ಎಂದು ಆತನು ಮನಸ್ಸಿನಲ್ಲಿ ನಾಚಿದನು; ಆದರೂ ಒಟ್ಟಿನಲ್ಲಿ ಆತನ ಚಿತ್ತವೃತ್ತಿಯು ಬಹುಮಟ್ಟಿಗೆ ಸಮಾಧಾನಪಟ್ಟಿತು. ಪದ್ಮಿನಿಯ ದಿವ್ಯಮೂರ್ತಿಯ ಸ್ಮರಣದಿಂದ ಅವನ ಉತ್ಸಾಹವು ಹೆಚ್ಚಿ ಆತನು ಪದ್ಮಿನಿಗೆ ಬಿದ್ದಿದ್ದ ಕನಸನ್ನು ಕೇಳಿಕೊಳ್ಳಲು ಆತುರಪಟ್ಟನು; ಆದರೆ ಬೆಳಗಿನ ಹಾಳುಮೋರೆಯಿಂದ ಧೂರ್ತ ಬೈರಾಗಿಣಿಯೊಡನೆ ಹುಚ್ಚು ಹುಚ್ಚು ಮಾತಾಡುವದು ಯೋಗ್ಯವಲ್ಲೆಂದು ತಿಳಿದು, ಬೈರಾಗಿಣಿಗೆ ಆದರದಿಂದ ಕುಳ್ಳಿರಹೇಳಿ, ತಾನು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಬರುವದಕ್ಕಾಗಿ ಹೊರಟುಹೋದನು.

ಇತ್ತ ಬೈರಾಗಿಣಿಯ ಕಲ್ಪನಾಶಕ್ತಿಯ ವ್ಯಾಪಾರವು ಸಾಗಿತು. ಈ ಭ್ರಮಿಷ್ಟನಾದ ಕಾಸಿಮನು ಮೋಹಿಸುವಂತೆ, ಪದ್ಮಿನಿಯ ಸ್ವಪ್ನವನ್ನು ಹ್ಯಾಗೆ ಕಲ್ಪಿಸಬೇಕೆಂದು ಆಕೆಯು ಆಲೋಚಿಸತೊಡಗಿದಳು. ಬೈರಾಗಿಣಿಯ ತೀಕ್ಷ್ಣಬುದ್ಧಿಗೆ ಕಾಸಿಮನಿಗೆ ಬಿದ್ದ ಸ್ವಪ್ನವು ಸೂಚಕವಾಗಲು, ಒಂದು ಸುಂದರ ಸ್ವಪ್ನವನ್ನು ಕಲ್ಪಿಸಲಿಕ್ಕೆ ಆಕೆಗೆ ತಡವಾಗಲಿಲ್ಲ. ಕಾಸಿಮನ ಸ್ವಪ್ನದಲ್ಲಿ ಬಂದಿದ್ದ ಬೈರಾಗಿಣಿಯು ತಾನೇ ಇರಬೇಕೆಂತಲೂ, ಹಾಗಲ್ಲದಿದ್ದರೆ, ತನ್ನನ್ನು ನೋಡಿದಕೂಡಲೆ ಭಯಗ್ರಸ್ಥ ಕಾಸಿಮನು ಪುನಃ ಕಣ್ಣುಮುಚ್ಚಿ ಭಯದಿಂದ ತನ್ನ ಸೇವಕರನ್ನು ಕರೆಯುತ್ತಿದ್ದಿಲ್ಲವೆಂತಲೂ, ಸೇವಕರು ಬರಲು ಖಾನನು ಎದ್ದುಕುಳಿತು ಕೂಡಲೆ– ''ಇಲ್ಲಿ ಬೈರಾಗಿಣಿಯು ಇಲ್ಲವಷ್ಟೆ'' ಎಂದು ಪ್ರಶ್ನೆಮಾಡುತ್ತಿದ್ದಿಲ್ಲವೆಂತಲೂ ಆಕೆಯು ಕಲ್ಪಿಸಿದಳು. ಹೀಗೆ ಭಯಪ್ರದಳಾಗಿ ತಾನು ಆತನ ಸ್ವಪ್ನದಲ್ಲಿ ಹೋಗಬೇಕಾದರೆ, ಸ್ವಪ್ನಬೀಳುವ ಮೊದಲು ಆತನು ತನ್ನ ವಿಷಯವಾಗಿ ಕುಭಾವನೆಯನ್ನು ತಾಳಿರಬೇಕೆಂಬ ತರ್ಕವು ಆಕೆಗೆ ಹೊಳೆಯಿತು. ಇಷ್ಟು ಕಲ್ಪನೆಯೂ, ತರ್ಕವೂ ಆಕೆಯ ಸ್ವಪ್ನದ ಕಲ್ಪನೆಗೆ ಸಾಕಾಗಿ ಉಳಿದವೆಂದು ಹೇಳಬಹುದು. ಕೂಡಲೆ ಆಕೆಯು ಒಂದು ಸ್ವಪ್ನವನ್ನು ಕಲ್ಪಿಸಿ ತನ್ನ ಬುದ್ಧಿಸಾಮರ್ಥ್ಯದಿಂದ ಅದನ್ನು ಬಗೆಬಗೆಯಾಗಿ ಬಣ್ಣಿಸಿ ಸಿದ್ಧಮಾಡಿ ಇಟ್ಟುಕೊಂಡಳು. ಇತ್ತ ಕಾಸಿಮನೂ ಕಲ್ಪನಾಮಯನಾಗಿದ್ದನು. ಪದ್ಮಿನಿಯು ತಾನಾಗಿ ಇಷ್ಟು ಆತುರದಿಂದ ಬೆಳಕುಹರಿಯುವದರೊಳಗಾಗಿ ತನ್ನನ್ನು ಕರೆಸಬೇಕಾದರೆ, ಆಕೆಗೆ ಸ್ವಪ್ನವೇನು ಬಿದ್ದಿರಬಹುದೆಂದು ಕಲ್ಪಿಸುವದರಲ್ಲಿ ಆತನು ಮುಗ್ನನಾಗಿಹೋಗಿದ್ದನು. ಆದರೆ ಆ ರಣಧುರಂಧರನ ಸ್ವಪ್ನದ ಕಲ್ಪನೆಯು, ಆತನಿಗೆ ಬಿದ್ದಿದ್ದ ಸ್ವಪ್ನದಂತೆಯೇ ಇದ್ದದ್ದು ಆಶ್ಚರ್ಯವಲ್ಲ. ಬೈರಾಗಿಣಿಯು ನನಗೆ ಭಯಪ್ರದಳಾದಂತೆ, ಪದ್ಮಿನಿಗೆ ನಾನು ಭಯಪ್ರದನಾಗಿರಬಹುದೆಂತಲೂ, ನನ್ನ ಭಯದಿಂದ ಆ ರಾಜಪುತ್ರಿಯು ಕಂಗೆಟ್ಟು ನನ್ನ ಕೈಕಾಲು ಕಟ್ಟಿಕೊಳ್ಳುವದಕ್ಕಾಗಿ ತಾನಾಗಿ ಬೈರಾಗಿಣಿಯನ್ನು ಇಷ್ಟು ಅವಸರದಿಂದ ಕಳಿಸಿರಬಹುದೆಂತಲೂ ಆತನು ತರ್ಕಿಸಿದನು. ಆದರೆ ಈ ತರ್ಕದಲ್ಲಿ ಆತನಿಗೆ ತಥ್ಯ ತೋರಲಿಲ್ಲ. ಈ ಉರುಟು ತರ್ಕವು ಪದ್ಮಿನಿಯ ಸೌಕುಮಾರ್ಯಕ್ಕೆ ಒಪ್ಪದೆಂಬ ವಿಚಾರವು ಆತನ ಮನಸ್ಸಿಗೆ ಹೊಳೆಯಿತು. ಹಾಗಾದರೆ ಪದ್ಮಿನಿಗೆ ಸ್ವಪ್ನವೇನು ಬಿದ್ದಿರಬಹುದೆಂದು ಆತನು ಮತ್ತೆ ಕಲ್ಪಿಸ

ತೊಡಗಿದನು, ಆದರೆ ಖಂಡತುಂಡ ಸ್ವಭಾವದ ಆ ವೀರನ ಮನಸ್ಸು ಕಲ್ಪನೆಗೆ ಬೇಸರಿಯಲು, ಪದ್ಮಿನಿಗೆ ಬಿದ್ದ ಸ್ವಪ್ನವನ್ನು ಬೈರಾಗಿಣಿಯು ಹ್ಯಾಗೂ ಹೇಳೇಹೇಳುವಳೆಂದು ಸಮಾಧಾನಮಾಡಿ ಕೊಂಡು, ತನ್ನ ಪ್ರಾತರ್ವಿಧಿಗಳು ತೀರಿದನಂತರ ಸ್ನಾನಮಾಡಿ ರಾತ್ರಿಯ ನಿದ್ರೆಗೇಡಿನ ಶ್ರಮವನ್ನು ಕಳೆದುಕೊಂಡನು. ಬಳಿಕ ಅವನ ಬೆಳಗಿನ ನಮಾಜು ಆಯಿತು, ಅಲ್ಪಾಹಾರವು ತೀರಿತು; ಅವನು ಉತ್ಸಾಹದಿಂದ ಸುಂದರ ಪೋಷಾಕು ಧರಿಸಿಕೊಂಡು ಬೈರಾಗಿಣಿಯ ಬಳಿಗೆ ಬಂದನು. ಅಷ್ಟರಲ್ಲಿ ಅವನ ಮೇಲೆ ಪ್ರಯೋಗಿಸತಕ್ಕಂಥ ಬೈರಾಗಿಣಿಯ ಮೋಹನಾಸ್ತ್ರವು ಸಿದ್ಧವಾಗಿತ್ತು!

ಖಾನನು ಬಂದಕೂಡಲೆ ಬೈರಾಗಿಣಿಯು ಎದ್ದುನಿಂತು ಆತನನ್ನು ಮನ್ನಿಸಿದಳು. ಆತನ ಸುಪ್ರಸನ್ನವದನವನ್ನು ನೋಡಿ ಬೈರಾಗಿಣಿಗೆ ಬಹಳ ಸಂತೋಷವಾಯಿತು; ಯಾಕಂದರೆ, ಆತನ ನಗೆ ಹೋಗಿ ಹೊಗೆಯಾಗುವದು ಆ ಕಾರ್ಯಸಾಧಕಳ ಉದ್ದೇಶವಾಗಿತ್ತು. ಖಾನನು ಸುಖಾಸನದಲ್ಲಿ ಕುಳಿತು ಆತುರದಿಂದ ಬೈರಾಗಿಣಿಯನ್ನು ಕುರಿತು –

ಕಾಸಿಮ–ನನ್ನಂತೆ ಪದ್ಮಿನಿಗೆ ನಿಜವಾಗಿಯೇ ಸ್ವಪ್ನ ಬಿದ್ದಿತ್ತೆ?

ಬೈರಾಗಿಣಿ–ಹೌದು ಸರಕಾರ, ನಿಜವಾಗಿಯೇ ಅವರಿಗೆ ಸ್ವಪ್ನವು ಬಿದ್ದಿತ್ತು; ನಾನೇಕೆ ಸುಳ್ಳುಹೇಳಲಿ? ಬೆಳಗುಮುಂಜಾನೆ ನಿದ್ರೆಹತ್ತಿ ಮಲಗಿದ ನನ್ನನ್ನು ಎಬ್ಬಿಸಿ ಆ ರಾಜಪುತ್ರಿ ಯವರೇ ನನಗೆ ಆ ಸ್ವಪ್ನವನ್ನು ಹೇಳಿದರು.

ಕಾಸಿಮ–ಆಕೆಯ ಸ್ವಪ್ನದಲ್ಲಿ ಯಾರು ಬಂದಿದ್ದರಂತೆ ?

ಬೈರಾಗಿಣಿ–ತಾವೇ ಬಂದಿದ್ದಿರಂತೆ.

ಕಾಸಿಮ–ಪದ್ಮಿನಿಗೆ ಸೇರದೆಯಿದ್ದ ನಾನು ಆಕೆಯ ಸ್ವಪ್ನದಲ್ಲಿ ಬಂದ ಬಳಿಕ ನಾನು ಆಕೆಯನ್ನು ತಿರಸ್ಕರಿಸಿರಬಹುದು, ಅಥವಾ ಗದ್ದರಿಸಿರಬಹುದು, ಇಲ್ಲವೆ ಬಲಾತ್ಕರಿಸಲೂ ಹೋಗಿರಬಹುದು.

ಬೈರಾಗಿಣಿ–ಇಲ್ಲ, ಈ ಅಯೋಗ್ಯ ಕೆಲಸಗಳಲ್ಲಿ ಒಂದನ್ನೂ ನೀವು ಮಾಡಿರುವದಿಲ್ಲ. ಹೀಗೆ ನೀವು ಮಾಡಲಿಕ್ಕೆ ನಿಮ್ಮ ವಿಷಯವಾಗಿ ಪದ್ಮಿನೀ ದೇವಿಯವರ ಮನಸ್ಸಿನಲ್ಲಿ ಈಗ ಅಪ್ರೀತಿಯು ಉಳಿದೇ ಇರುವದಿಲ್ಲ. ನಿನ್ನೆ ನೀವು ಇತ್ತ ಬಂದಬಳಿಕ ನಿಮ್ಮ ವಿಷಯದಲ್ಲಿ ಅವರನ್ನು ಬಗೆಬಗೆಯಾಗಿ ಬೋಧಿಸಿ ನಾನು ಅವರ ತಲೆಯೊಳಗಿನ ಹುಚ್ಚನ್ನೆಲ್ಲ ಬಿಡಿಸಿದೆನು; ಆಗ ಪದ್ಮಿನೀದೇವಿಯವರಿಗೆ ನಿಮ್ಮ ವಿಷಯದ ಆದರವು ಉಂಟಾಯಿತು. ಆಮೇಲೆ ಬಹಳಹೊತ್ತು ನಮ್ಮಿಬ್ಬರ ಅರೆದಾಟವಾದ ಬಳಿಕ ಒಂದೇಮಾತಿನ ಆ ರಾಜಪುತ್ರಿಯವರು– "ನಾನು ಖಾನಸಾಹೇಬರನ್ನಲ್ಲದೆ ಮತ್ತೊಬ್ಬರನ್ನು ಲಗ್ನವಾಗುವದಿಲ್ಲೆಂ"ದು ಹೇಳಿದರು. ಖಾನಸಾಹೇಬ, ಈ ಮಾತು ಸತ್ಯವೆಂಬದಕ್ಕೆ ನಿಮ್ಮ ಸೌಜನ್ಯವೇ ಸಾಕ್ಷಿಯು ! ಇರಲಿ, ಇಷ್ಟು ಆಗುವದರೊಳಗೆ ಎಂಟುತಾಸು ರಾತ್ರಿಯಾಗಿ ಹೋಯಿತು. ಆಮೇಲೆ ನಾವಿಬ್ಬರೂ ಮಲಗಿಕೊಂಡೆವು. ನನ್ನ ಮನಸ್ಸಿನಂತೆ ಕಾರ್ಯವಾ ದದ್ದರಿಂದ ನನಗೆ ಬೇಗನೆ ನಿದ್ರೆಹತ್ತಿತು, ಆದರೆ ರಾಜಪುತ್ರಿಯವರಿಗೆ ಸರ್ವಥಾ ನಿದ್ರೆ ಬರಲಿಲ್ಲವಂತೆ ! ನಿಮ್ಮ ಪಾಣಿಗ್ರಹಣಕ್ಕೋಸ್ಕರ ಆತುರರಾದ ಆ ಪದ್ಮಿನಿದೇವಿಯವರು– "ಇಷ್ಟುದಿನ ಖಾನಸಾಹೇಬರನ್ನು ಪರಿಪರಿಯಿಂದ ಕಾಡಿರಲು, ಈಗ ಅವರು ನನ್ನನ್ನು ಪರಿಗ್ರಹಿಸುವರೋ ಇಲ್ಲವೋ ಎಂಬ ಚಿಂತೆಯಿಂದ ಉಸುರು ಹಾಕುವಾಗ ಅವರಿಗೆ ನಿದ್ರೆಯೇ

ಬರಲಿಲ್ಲವಂತೆ. ಅವರಿಗೆ ತಮ್ಮ ಒಂದೊಂದೇ ಅಪರಾಧದ ಸ್ಮರಣವಾಗಲು, ದುಃಖದಿಂದ ಒಂದೇಸವನೇ ಅವರ ಕಣ್ಣೀರು ಹೋಗಹತ್ತಿದವಂತೆ ! ಖಾನಸಾಹೇಬ, ಈ ಸಂಗತಿಯನ್ನು ಪದ್ಮಿನಿದೇವಿಯವರು ನನ್ನಮುಂದೆ ಕಥೆಮಾಡಿ ಹೇಳಿದರು.

ಕಾಸಿಮ–ಪಾಪ ! ಇಷ್ಟೇಕೆ ದುಃಖಪಟ್ಟಳು? ನಾನು ಆಕೆಯ ಒಂದೂ ಅಪರಾಧವನ್ನು ಮನಸ್ಸಿನಲ್ಲಿ ಹಿಡಿದಿರುವದಿಲ್ಲ. ಆಕೆಯ ಆ ಅಪರಾಧಗಳನ್ನೆಲ್ಲ ನಾನು ಆಕೆಯ ಸದ್ಗುಣಗಳಲ್ಲಿ ಪರಿಗಣಿಸಿದ್ದೇನೆ. ಈ ಮಾತನ್ನು ನೀನು ಮರೆಯದೆ ಆ ರಾಜಪುತ್ರಿಯ ಮುಂದೆ ಹೇಳಬೇಕು ನೋಡು, ಒಳ್ಳೇದು, ಮುಂದೇನಾಯಿತು?

ಬೈರಾಗಿಣಿ–ಹೀಗೆ ಬಹಳಹೊತ್ತು ಅತ್ತು ಅತ್ತು ಆಯಾಸವಾಗಲು, ಬೆಳಗುಮುಂಜಾನೆ ಅವರಿಗೆ ಸ್ವಲ್ಪ ಕಣ್ಣಿಗೆ ಕಣ್ಣುಹತ್ತಿದಂತೆ ಆಗಿ ಸ್ವಪ್ನವು ಬಿದ್ದಿತಂತೆ. ಆಗಲೇ ಹೇಳಿದಂತೆ ನೀವೇ ಸ್ವಪ್ನದಲ್ಲಿ ಬಂದಿದ್ದಿರಂತೆ.

ಕಾಸಿಮ–ಎಲ! ನನಗೆ ಆದಂತೆ ಪದ್ಮಿನಿಗೂ ಆಗಿರುವದಲ್ಲ! ಸ್ವಪ್ನದಲ್ಲಿ ಆಕೆಯನ್ನು ನಾನೇನು ರಮಿಸಿದೆನೋ, ಬೆದರಿಸಿದೆನೋ, ಬಲಾತ್ಕರಿಸಿದೆನೋ ಏನು ಮಾಡಿದೆನು ಬೇಗನೆ ಹೇಳು. ಆಗಲೇ ಕೇಳಿದ್ದಕ್ಕೆ ನೀನು ಉತ್ತರವನ್ನೇ ಹೇಳಲಿಲ್ಲವಲ್ಲ!

ಬೈರಾಗಿಣಿ – (ನಕ್ಕು) ಖಾವಿಂದ, ಈಗ ಹೇಳುತ್ತೇನೆ. ತಾವು ಪದ್ಮಿನೀದೇವಿಯವರನ್ನು ರಮಿಸಲೂ ಇಲ್ಲವಂತೆ, ಬೆದರಿಸಲೂ ಇಲ್ಲವಂತೆ, ಬಲಾತ್ಕರಿಸಲೂ ಇಲ್ಲವಂತೆ, ಸಿಟ್ಟಾಗಿ ಸುಮ್ಮನೆ ಕುಳಿತುಬಿಟ್ಟಿದ್ದೀರೆಂದು ದೇವಿಯವರು ನನ್ನ ಮುಂದೆ ಹೇಳಿದರು!

ಕಾಸಿಮ–ಆಗ ಪದ್ಮಿನಿಯು ಏನುಮಾಡಿದಳು?

ಬೈರಾಗಿಣಿ–ಮಾಡುವದೇನು ಸರಕಾರ, ರಾಜಪುತ್ರಿಯರಂಥ ಕುಲೀನ ಅಬಲೆಯರು ನಿಮ್ಮಂಥ ವೀರರ ಮನಸ್ಸನ್ನೊಲಿಸಿಕೊಳ್ಳುವದಕ್ಕಾಗಿ ಬೇರೆ ಉಪಾಯವೇನು ಮಾಡಬೇಕು ? ಕೈಕಾಲು ಕಟ್ಟಿಕೊಳ್ಳುವದೊಂದೇ ಅವರಿಗೆ ಉಪಾಯವು. ಅದರಂತೆ ಪದ್ಮಿನೀದೇವಿಯವರು ನಿಮ್ಮ ಮನಸ್ಸನ್ನೊಲಿಸಿಕೊಳ್ಳುವದಕ್ಕಾಗಿ ಬಗೆಬಗೆಯಿಂದ ನಿಮ್ಮನ್ನು ಪ್ರಾರ್ಥಿಸಿದರಂತೆ, ನಿಮ್ಮ ಕಾಲುಬಿದ್ದರಂತೆ; ನಿಮಗೆ ಕೈಮುಗಿದರಂತೆ; ನಿಮ್ಮ ಮುಂದೆ ಕಣ್ಣೀರು ಸುರಿಸಿದರಂತೆ; ಇನ್ನು ಮೇಲೆ ಇಂಥ ತಪ್ಪುಮಾಡುವದಿಲ್ಲವೆಂದು ಕಂಡದೇವರ ಆಣೆಯಿಟ್ಟುಕೊಂಡರಂತೆ !

ಕಾಸಿಮ–ಇಷ್ಟಾದರೂ ನನ್ನ ಮನಸ್ಸು ಕರಗಲಿಲ್ಲವೆ ?

ಬೈರಾಗಿಣಿ–ಇಲ್ಲವಂತೆ, ಸರ್ವಥಾ ಮನಸ್ಸು ಕರಗಲಿಲ್ಲವಂತೆ !

ಕಾಸಿಮ–ಇದಕ್ಕಾಗಿ ನಾನು ನಿಶ್ಚಯವಾಗಿ ಕಾಲುಬಿದ್ದು ರಾಜಪುತ್ರಿಯ ಕ್ಷಮೆ ಬೇಡುವೆನು.

ಬೈರಾಗಿಣಿ–ಕ್ಷಮೆ ಬೇಡುವದು ಮುಂದಿನ ಮಾತಾಯಿತು; ಆದರೆ ರಾಜಪುತ್ರಿಯವರು ನಿನ್ನೆ ಕನಸಿನಲ್ಲಿ ಅತ್ತು ಅತ್ತು ಕಣ್ಣು ಕೆಂಪಗೆ ಮಾಡಿಕೊಂಡದ್ದನ್ನು ಯಾರೂ ತಪ್ಪಿಸಲಿಲ್ಲವಷ್ಟೇ ?

ಕಾಸಿಮ–ಇಲ್ಲ, ಯಾರೂ ತಪ್ಪಿಸಲಿಲ್ಲ, ಎಂಥ ದಯಾಶೂನ್ಯನು ನಾನು ! ಅಂತೇ ಇಂಥ ನಿರ್ಘಣನಾದ ನನ್ನನ್ನು ನಿನ್ನೆ ರಾತ್ರಿ ಕನಸಿನಲ್ಲಿ ನೀನು ಒಳಿತಾಗಿ ಬಗ್ಗುಬಡಿದೆ ! ಬೈರಾಗಿಣಿ, ಆಗಿನ ನಿನ್ನ ಉಗ್ರರೂಪವನ್ನೂ, ಕ್ರೂರಕರ್ಮವನ್ನೂ ನೆನಿಸಿದರೆ, ಈಗಲೂ ನನ್ನ ಹೃದಯವು ಕಂಪಿಸುತ್ತಿರುವದು !

ಬೈರಾಗಿಣಿ–ಖಾವಿಂದ, ದೇವಿಯವರ ಕನಸಿನಲ್ಲಿ ಸಿಟ್ಟಾಗಿ ಸುಮ್ಮನೆ ಕುಳಿತಿದ್ದ ನಿಮಗಿಂತಲೂ ನಾನು ಕ್ರೂರಳಾದೆನಲ್ಲ! ಅಂಥ ಕ್ರೂರಕರ್ಮವು ನನ್ನಿಂದ ಘಟಿಸಿದ್ದಾದರೂ ಏನು?

ಈ ಮೇರೆಗೆ ಪ್ರಶ್ನೆಮಾಡಲು, ಕಾಸಿಮನು ತನ್ನ ಸ್ವಪ್ನದ ವೃತ್ತಾಂತವನ್ನೆಲ್ಲ ಹೇಳಿದನು. ಅದನ್ನು ಕೇಳಿ ಬೈರಾಗಿಣಿಯು ಚಕಿತಳಾದಳು ! ಉನ್ಮತ್ತ ಕಾಸಿಮನನ್ನು ತಾನು ಸ್ವಪ್ನದಲ್ಲಿಯೇ ಆಗಲೊಲ್ಲದೇಕೆ. ಬಗ್ಗು ಬಡೆದದ್ದಕ್ಕಾಗಿ ಆಕೆಗೆ ಸಮಾಧಾನವಾಯಿತು. ಆಕೆಯು ಕಾಸಿಮನನ್ನು ಕುರಿತು– ಖಾನಸಾಹೇಬ, ನಿಮ್ಮ ಸ್ವಪ್ನವೇ ದುಷ್ಟವಾದದ್ದಿರಲಿ–ಪದ್ಮಿನಿ ದೇವಿಯವರ ಸ್ವಪ್ನವೇ ದುಷ್ಟವಾದದ್ದಿರಲಿ ಅವನ್ನು ಈಗ ಕಟ್ಟಿಕೊಂಡು ಮಾಡುವದೇನು ? ಸದ್ಯಕ್ಕೆ ಅವುಗಳ ವಿಚಾರವನ್ನು ಬದಿಗಿಟ್ಟು ಪದ್ಮಿನಿದೇವಿಯವರು ಈಗ ಮಾಡಿರುವ ವಿನಂತಿಯನ್ನು ಚಿತ್ತೈಸಬೇಕು. ಅವರು ನನ್ನನ್ನು ಕುರಿತು– ''ಬೈರಾಗಿಣೀ, ಸ್ವಪ್ನದಲ್ಲಿಯೇ ಆಗಲೊಲ್ಲದೇಕೆ, ಖಾನಸಾಹೇಬರು ಹೀಗೆ ನನ್ನಮೇಲೆ ಸಿಟ್ಟಾದದ್ದಕ್ಕಾಗಿ ನನಗೆ ಬಹಳ ದುಃಖವಾಗಿದೆ; ಈಗಲೇ ನೀನು ಹೋಗಿ ಅವರನ್ನು ಪ್ರಾರ್ಥಿಸಿ ಬೇಗನೆ ಕರಕೊಂಡು ಬಾ. ಸಿಟ್ಟಾದದ್ದರಲ್ಲಿ ಅವರ ಅಪರಾಧವಿಲ್ಲ, ಸಿಟ್ಟಿಗೆಬ್ಬಿಸಿದ ನಾನೇ ಅಪರಾಧಿಯು ! ಆದ್ದರಿಂದ ಬೈರಾಗಿಣಿ, ಹೋಗಮ್ಮ ಖಾನಸಾಹೇಬರಿಗೆ ನನಗಾದ ಪಶ್ಚಾತ್ತಾಪ ವನ್ನು ತಿಳಿಸಿ ಪ್ರಾರ್ಥಿಸಿ ಅವರನ್ನು ಕರಕೊಂಡು ಬಾ ಹೋಗು. ದೈವ ಕೊಟ್ಟದ್ದನ್ನು ಕರ್ಮವು ಕಚ್ಚಿಕೊಂಡು ಹೋಯಿತೆನ್ನುವಹಾಗೆ ಆಗಬಾರದು ಹೋಗು, ಬೇಗನೆ ಹೋಗು; ಅವರಿಗಾಗಿ ಮಾಡಿರುವ ಈ ಅರಳುಮಗ್ಗಿಯ ಮಲ್ಲಿಗೆಯ ಹಾರವು ಪೂರಾ ಅರಳುವದರೊಳಗಾಗಿ ಖಾನ ಸಾಹೇಬರನ್ನು ಕರಕೊಂಡು ಬಾ ಹೋಗು, ಎಂದು ಪರಿಪರಿಯಾಗಿ ಅಂಗಲಾಚಿ ಹೇಳಿಕೊಂಡದ್ದ ರಿಂದ ಅಷ್ಟು ನಸುಕಿನಲ್ಲಿ ನಾನು ಬಂದೆನು. ಕಬ್ಬಿಣವನ್ನು ಕಾವು ಬಂದಾಗಲೇ ಬಡಿಯಬೇಕೆನ್ನುವಂತೆ, ರಾಜಪುತ್ರಿಯವರು ಹೀಗೆ ಪಶ್ಚಾತ್ತಾಪದಿಂದ ತಪ್ತರಾಗಿರುವಾಗಲೇ ನೀವು ಅವರ ಪಾಣಿಗ್ರಹಣ ಮಾಡಿಬಿಡಿರಿ, ಅಥವಾ ''ನಿಶ್ಚಯವಾಗಿ ನಿನ್ನ ಪಾಣಿಗ್ರಹಣ ಮಾಡು ವೆನೆಂ''ದು ಅವರಿಗೆ ವಚನವನ್ನಾದರೂ ಕೊಡಿರಿ, ಕಾಸಿಮನು ಶಂಕಿತನಾಗಿ ಬೈರಾಗಿಣಿಯನ್ನು ಕುರಿತು–ಬೈರಾಗಿಣಿ, ನೀನು ನಿನ್ನೆ ನನ್ನ ಸ್ವಪ್ನೆದಲ್ಲಿ ಕ್ರೂರಳಾಗಿ ತೋರುತ್ತಿದ್ದಷ್ಟೇ ಈ ದಿನ ಜಾಗ್ರತಾವಸ್ಥೆಯಲ್ಲಿ ಸೌಮ್ಯಳಾಗಿ ತೋರುತ್ತಿರುವೆಯಲ್ಲ! ನಿನ್ನ ಈ ವಿಲಕ್ಷಣ ಚಾರಿತ್ರ್ಯವನ್ನು ನೋಡಿ ನನಗೆ ಏನೂ ತೋಚದಾಗಿದೆ! ನಿನ್ನೆ ಸ್ವಪ್ನದಲ್ಲಿ ನನ್ನ ಗಂಟಲು ಹಿಚುಕಿ ಕೊಲ್ಲತೊಡಗಿದ್ದ ನೀನು, ಇಷ್ಟುದಿನ ನನಗೆ ದುರ್ಮಿಳವಾಗಿ ತೋರುತ್ತಿದ್ದ ಪ್ರಿಯವಸ್ತುವನ್ನು ಇಂದು ಕೈಯಲ್ಲಿ ತಂದುಕೊಡುತ್ತಿರುವೆಯಲ್ಲ! ಏನು ಮಾಡಲಿ, ನಾನು ಈಗ ಕಣ್ಣಿಗೆ ಕಾಣುತ್ತಿರುವ ನಿನ್ನ ಈ ಸೌಮ್ಯಕೃತಿಯನ್ನು ನಿಜವೆಂದು ತಿಳಿಯಲಾ, ಅಥವಾ ನಿನ್ನಿನ ಸ್ವಪ್ನದ ಭಯಂಕರ ಕೃತಿಯನ್ನು ನಿಜವೆಂದು ತಿಳಿಯಲಾ ? ಒಂದರಿಂದೊಂದು ತೀರ ವಿರುದ್ಧವಾಗಿರುವ ಪ್ರಸಂಗಗಳ ಪರಿಣಾಮದ ವಿಷಯವಾಗಿ ನನ್ನ ಮನಸ್ಸಿನ ವಿಚಾರವು ತೀರ ಕುಂಠಿತವಾಗಿಹೋಗಿದೆ. ನಿನ್ನಿನ ಸ್ವಪ್ನದೊಳಗೆ ನನ್ನ ಶತ್ರುವಾಗಿಯೂ, ಇಂದಿನ ಜಾಗ್ರತಾವಸ್ಥೆಯಲ್ಲಿ ನನ್ನ ಮಿತ್ರಳಾಗಿಯೂ ಪರಿಣಮಿಸಿರುವ

ನೀನು, ನಿಜವಾಗಿ ನನಗೆ ಶತ್ರುವಾಗಿರುವೆಯೋ, ಮಿತ್ರಳಾಗಿರುವೆಯೋ ಎಂಬದನ್ನು ನೀನೇ ಸ್ಪಷ್ಟವಾಗಿ ಹೇಳಿಬಿಡು. ಬೈರಾಗಿಣಿ, ನಿನಗೆ ನಿನ್ನ ಮುರಲೀಧರನ ಆಣೆಯಿದೆ, ಸುಳ್ಳು ಹೇಳಬೇಡ.

ಕಾಸಿಮನ ಈ ಮಾತು ಕೇಳಿ ಬೈರಾಗಿಣಿಯು ವಿಚಾರಕ್ಕೆ ಬಿದ್ದಳು. ಸತ್ಸಮಾಗಮದಿಂದ ಪಾಪ-ಪುಣ್ಯದ ಭಯಕ್ಕೊಳಗಾಗಿದ್ದ ಆ ಸಜ್ಜನಳಿಗೆ ತಾನು ಏನು ಉತ್ತರಕೊಡಬೇಕೆಂಬದು ತಿಳಿಯದಾಯಿತು; ಆದರೂ ಆ ತಪಸ್ವಿದ್ಧ ಜಾಣಳಿಗೆ ಸದ್ಗುರುಕೃಪೆಯಿಂದ ಯೋಗ್ಯ ಉತ್ತರವು ಸ್ಫುರಿಸಲಿಕ್ಕೆ ತಡವಾಗಲಿಲ್ಲ. ಆಕೆಯು ಕೂಡಲೆ ಕಾಸಿಮನನ್ನು ಕುರಿತು ಸರಳ ಹೃದಯದಿಂದ-ಖಾನಸಾಹೇಬ, ಪಾಪಭಯದಿಂದ ಸದಾ ಸತ್ಯ ಮಾತಾಡುವವರಿಗೆ ಆಣೆ-ಚೂರಿಗಳ ಮಾತೇಕೆ? ಆಣೆ ಮಾಡುವದೂ, ಮಾಡಿಸುವದೂ ಸಂಭಾವಿತತನದ ಲಕ್ಷಣಗಳಲ್ಲ. ಸದ್ಧರ್ಮವೆಂದು ತಿಳಿದು ಸತ್ಯಕ್ಕಾಗಿಯೇ ಸತ್ಯವನ್ನಾಡಬೇಕಲ್ಲದೆ, ಸುಖಕ್ಕೆ ಸಾಧನವೆಂದು ತಿಳಿದು ದೇವರು-ದಿಂಡರ ಭಯದಿಂದ ಸತ್ಯವನ್ನಾಡಲಾಗದೆಂದು ನಮ್ಮ ಸದ್ಗುರುನಾಥನು ಹೇಳಿರುವನು. ಅಂದಬಳಿಕ ನಾನು ಮುರಲೀಧರನ ಆಣೆಯಿಂದ ಸತ್ಯಮಾತಾಡುವ ಸಾಹಸಕ್ಕೂ, ಪಾಪಕ್ಕೂ ಯಾಕೆ ಹೋಗುವೆನು? ನಾವು ಮುರಲೀಧರನನ್ನು ಸಾಕ್ಷಿಯಾಗಿ ಇಡಲಿ-ಇಡದಿರಲಿ, ಪ್ರಾಣಿಮಾತ್ರಗಳ ಕರ್ಮಗಳಿಗೆ ಸಾಕ್ಷೀ ಭೂತನಾಗಿರುವ ಆ ಪರಮಾತ್ಮನು, ನಾವು ಮಾಡುವದನ್ನೆಲ್ಲ ನೋಡೇ ನೋಡುವ ನೆಂದು ಜ್ಞಾನಿಗಳು ಹೇಳುತ್ತಿರುವರು. ಅಂದಬಳಿಕ ಬುದ್ಧಿಪೂರ್ವಕವಾಗಿ ಆತನನ್ನು ಸಾಕ್ಷಿಗೊಳಿಸ ಹೋಗುವ ನಮ್ಮ ಔದ್ಧತ್ಯವು ಅಕ್ಷಮ್ಯ ಪಾಪವಲ್ಲವೇ ? ಸತ್ಯ-ಶಮ-ದಮ-ಶಾಂತಿ ಮೊದಲಾದವು ಕಲ್ಯಾಣಕಾರಕ ಗುಣಗಳಾಗಿರುವದರಿಂದ, ಅವನ್ನು ನಮ್ಮಂಥ ಬೈರಾಗಿಣಿಯರು ಸತ್ಸಂಗ ಮೂಲವಾದ ತಪಶ್ಚರ್ಯದಿಂದ ಸಂಪಾದಿಸಲು ಸದಾ ತತ್ಪರರಾಗಿಯೇ ಇರುವೆವು ! ಅಂದಬಳಿಕ ನಾನು ಅಪ್ಪಿಷ್ಟಕ್ಕೆ ಈ ಸದ್ಗುಣಗಳನ್ನು ಪರಿತ್ಯಜಿಸಿ ಪಾಪಕ್ಕೆ ಯಾಕೆ ಗುರಿಯಾದೇನು? ಆದರೆ ನನ್ನಂಥ ಒಂದು ಕ್ಷುದ್ರ ವ್ಯಕ್ತಿಯು ಈ ಸದ್ಗುಣಗಳನ್ನು ಪರಿತ್ಯಜಿಸುವದರಿಂದ ಬಹುಜನರ ಕಲ್ಯಾಣವಾಗುವ ಹಾಗಿದ್ದರೆ, ಅದಕ್ಕಾಗಿ ನಾನು ನನ್ನ ಆ ಬರಿಯ ಸದ್ಗುಣಗಳನ್ನೇ ಏಕೆ, ನಿಸ್ಪೃಹವೃತ್ತಿಯಿಂದ ಆತ್ಮಾರ್ಪಣಮಾಡಲಿಕ್ಕೂ ಹಿಂದೆ ಮುಂದೆ ನೋಡುವದಿಲ್ಲ! ಸಮಷ್ಟಿಯ ಹಿತಸಾಧನದ ಪ್ರಸಂಗದಲ್ಲಿ ವ್ಯಷ್ಟಿಯ ಹಿತದ ಪಾಡೇನು? ಅಂಥ ಸ್ವಾರ್ಥತ್ಯಾಗದ ಪ್ರಸಂಗದಲ್ಲಿ ನಾವು ಐಹಿಕವಾದ ರಾಜದಂಡಾದಿ ಹಲವು ಯಾತನೆಗಳನ್ನೂ, ಪರಲೋಕದ ರೌರವಾದಿ ನರಕಗಳ ಯಾತನೆಗಳನ್ನೂ ಲೆಕ್ಕಿಸೇವು. ಜಗತ್ಕಲ್ಯಾಣಕ್ಕಾಗಿ ಈಶ್ವರನು ತನ್ನ ಷಡ್ಗುಣೈಶ್ವರ್ಯಸಂಪನ್ನತೆಯನ್ನು ಬಿಟ್ಟು ಹಲವು ಯೋನಿಗಳಲ್ಲಿ ಹುಟ್ಟಿ ಬಂದು ಕಷ್ಟಪಡುತ್ತಿರಲು, ಅದರಂತೆ ಸಜ್ಜನರು ತಮ್ಮ ಸದಾನಂದ ಸ್ಥಿತಿಯನ್ನು ಪರಿತ್ಯಜಿಸಿ ಪಾಮರರ ಉದ್ಧಾರಕ್ಕಾಗಿ ಪರಿಪರಿಯಾಗಿ ಲೋಕದೊಡನೆ ಕಷ್ಟಪಡುತ್ತಿರಲು, ನಮ್ಮಂಥ ಪಾಮರರ ಪಾಡೇನು? ಖಾನಸಾಹೇಬ, ನಮ್ಮಂಥ ನಿಸ್ಪೃಹಿಗಳು ನಿಮ್ಮ ಪಕ್ಷಪಾತಿಗಳೂ ಅಲ್ಲ, ಪದ್ಮಿನಿಯ ಪಕ್ಷಪಾತಿಗಳೂ ಅಲ್ಲ, ಲೋಕಹಿತ ಪಕ್ಷಪಾತಿಗಳು, ಅಥವಾ ಧರ್ಮ ಪಕ್ಷಪಾತಿಗಳೆಂದಾದರೂ ನೀವು ತಿಳಕೊಳ್ಳಬಹುದು. ಮುಖ್ಯಮಾತು, ಜಗತ್ಕಲ್ಯಾಣ ಮಾಡುವ ಯೋಗ್ಯತೆಯು ನಮ್ಮಲ್ಲಿಲ್ಲದ್ದರಿಂದೇ, ಜಗತ್ಕಲ್ಯಾಣ ಕರ್ತೃಗಳ

ಆಜ್ಞಾಪಾಲನದ ವಿಷಯವಾಗಿ ನಾವು ಅತ್ಯಂತ ತತ್ಪರರಾಗಿರುವೆವೆಂಬುದನ್ನು ಯಾವಾಗಲೂ ನೀವು ಮರೆಯತಕ್ಕದ್ದಲ್ಲ!

ಹೀಗೆ ನುಡಿದು ಬೈರಾಗಿಣಿಯು ಕ್ಷಣಮಾತ್ರ ಸುಮ್ಮನಾಗಿ ಮತ್ತೆ ಕಾಸಿಮನನ್ನು ಕುರಿತು– ''ಖಾನಸಾಹೇಬ, ನಾನು ಹೇಳುವ ಹಿತದ ಮಾತನ್ನು ದುರ್ಲಕ್ಷಿಸಬೇಡಿರಿ; ನನ್ನಲ್ಲಿ ಅವಿಶ್ವಾಸ ಮಾಡಬೇಡಿರಿ. ಸ್ವಹಿತದ ದೃಷ್ಟಿಯಿಂದ ಕೇಳಿದರೆ, ಸತ್ಯಾದಿ ಸದ್ಗುಣಗಳಿಗಾಗಿ ನಾವು ಪ್ರಾಣ ವನ್ನಾದರೂ ಕೊಟ್ಟೇವಲ್ಲದೆ, ಸ್ವಹಿತಕ್ಕಾಗಿ ಧರ್ಮವಿರುದ್ಧವಾದ ಅಯೋಗ್ಯಮಾರ್ಗವನ್ನು ಸರ್ವಥಾ ಹಿಡಿಯಲಿಕ್ಕಿಲ್ಲ; ಯಾಕಂದರೆ, ಸ್ವಧರ್ಮಪಾಲನಕ್ಕಾಗಿ ಸರ್ವಸ್ವವನ್ನು ತ್ಯಜಿಸುವದು ನಮ್ಮ ಶೀಲವೇ ಆಗಿರುವದು! ಆದರೂ ಸ್ವಧರ್ಮಪಾಲನ–ಲೋಕಹಿತಸಾಧನ ಇವೆರಡರಲ್ಲಿ ಲೋಕಹಿತಸಾಧನವು ಶ್ರೇಷ್ಠವಾದದ್ದರಿಂದ ಅದರಿಂದ ಪ್ರಸಂಗ ಬಂದರೆ ಧರ್ಮವನ್ನಾದರೂ ತ್ಯಜಿಸಲಿಕ್ಕೆ ನಾವು ಹಿಂದೆಮುಂದೆ ನೋಡಲಿಕ್ಕಿಲ್ಲ. ಅಂದಬಳಿಕ ನೀವು ನಮ್ಮನ್ನು ಪ್ರತಿಜ್ಞಾಪಾಶದಿಂದ ಬಿಗಿಯುವ ಗೊಡವೆಗೆ ಹೋಗುವದಕ್ಕಿಂತ, ನೀವು ಸ್ವತಃ ನ್ಯಾಯಾನ್ಯಾಯ–ಪಾಪಪುಣ್ಯ ಇವುಗಳ ವಿಚಾರಮಾಡಿ ಲೋಕಕ್ಕೂ, ದೇವರಿಗೂ ಅಂಜಿ ನಡೆಯುವದು ತಕ್ಕದ್ದು. ಲೋಕದೊಳಗಿನ ಏಕದೇಶಿಯರಾದ ನೀವು, ನಿಮ್ಮಮೇಲೆ ಲೋಕವೇ ತಿರುಗಿಬಿದ್ದರೆ ಅದಕ್ಕೆ ಯಾವ ಮಾತಿನಲ್ಲಿ ಈಡಾದೀರಿ? ಆದ್ದರಿಂದ ನಿಮಗೆ ಈ ಮದಾಂಧತೆಯು ಸಲ್ಲದು. ಹೊಡೆದವರನ್ನು ಹೊಡೆದೆನು, ಬಡಿದವರನ್ನು ಬಡಿದೆನು, ಒದ್ದವರನ್ನು ಒದ್ದೆನು ಇತ್ಯಾದಿ ಉನ್ಮತ್ತತನದ ಆಚರಣೆಗಳು ಸರ್ವಥಾ ನಡೆಯಲಿಕ್ಕಿಲ್ಲ. ಲೋಕವು ನಿದ್ರಾವಸ್ಥೆಯಲ್ಲಿರುವತನಕ ನಿಮ್ಮ ಈ ಲೋಕ ಕೊಲೆಯ ಆಚರಣವನ್ನು ಲೋಕವು ಸಹಿಸಿದರೆ ಸಹಿಸಬಹುದು! ಯಾಕಂದರೆ, ಅವರವರ ಕರ್ಮದ ಫಲವನ್ನು ಅವರವರು ಭೋಗಿಸುವಂತೆ ಈಶ್ವರೀತಂತ್ರವಿರುವದರಿಂದ, ಆ ಈಶ್ವರನು ಅಂಥ ದುರ್ಧರ ಪ್ರಸಂಗ ಬರುವವರೆಗೆ, ಅಂದರೆ ತಾನು ನೆಟ್ಟಗೆ ಮಾಡಿದರೆ ಮಾತ್ರ ನೆಟ್ಟಗಾಗುವಷ್ಟು ಲೋಕವು ಕೆಡುವವರೆಗೆ ಲೋಕವ್ಯವಹಾರದಲ್ಲಿ ಆತನು ಪ್ರತ್ಯಕ್ಷ ಕೈಹಾಕುವದಿಲ್ಲ. ಈಗ ದೈವೀಪ್ರೇರಣೆಯಿಂದ ಕರ್ನಾಟಕದಲ್ಲಿ ಲೋಕಜಾಗ್ರತಿಯಾಗುತ್ತಿರುವದು. ನಿಮ್ಮ ಲೋಕಹಿಂಸೆಗಾಗಿ ನಿಮ್ಮ ಶಾಸನಮಾಡುವಷ್ಟು ಶಕ್ತಿಯು ಪ್ರಕೃತಕ್ಕೆ ಲೋಕದಲ್ಲಿರದಿದ್ದರೂ ನಿಮ್ಮಿಂದ ಲೋಕಕ್ಕಾಗುತ್ತಿರುವ ಸಂತಾಪರೂಪವಾದ ತಪಶ್ಚರ್ಯದಿಂದ ಅಂಥ ಅಗಾಧಶಕ್ತಿಯ ಸಂಚಯವು ಜನರಲ್ಲಿ ಭರದಿಂದ ಆಗುತ್ತಿರುವದು. ಪ್ರಜಾಸಂತಾಪಜನಿತವಾದ ಅಗ್ನಿಯು ಸಾಮಾನ್ಯವಾದದ್ದಲ್ಲ. ''ಪ್ರಜಾಸಂತಾಪಜೋ ವಾಹ್ನಿರ್ವಜ್ರಾಗ್ನೇರಪಿ ದಾರುಣಃ। ದ್ವಿತ್ರಾನ್ದಹತಿ ವಜ್ರಾಗ್ನಿಃ ಪೂರ್ವೋರಾಜ್ಯಂ ನಿಜಂತನುಃ॥'' ಅಂದರೆ ಪ್ರಜಾಸಂತಾಪದಿಂದ ಹುಟ್ಟಿದ ಅಗ್ನಿಯು ಸಿಡಿಲಿಗಿಂತಲೂ ಕ್ರೂರವಾದದ್ದು; ಯಾಕಂದರೆ ಸಿಡಿಲು ತನ್ನ ಅಳವಿಗೆ ಸಿಕ್ಕ ಇಬ್ಬರು ಮೂವರನ್ನು ಮಾತ್ರ ಸುಡುವುದು; ಆದರೆ ಆ ಪ್ರಜಾಸಂತಾಪಜನಿತ ಅಗ್ನಿಯು ರಾಜ್ಯವನ್ನೂ, ತನ್ನವರನ್ನೂ, ತನ್ನನ್ನೂ ಸುಡುವದು ಎಂದು ನಮ್ಮ ಸ್ಕಂದಪುರಾಣದಲ್ಲಿ ಹೇಳಿರುವದೆಂದು ನಮ್ಮ ಸದ್ಗುರುವು ಹೇಳಿದ್ದನ್ನು ನಿಮ್ಮ ಮುಂದೆ ಈಗ ಹೇಳುವೆನು. ನನ್ನೊಬ್ಬಳನ್ನು ಈಗ ಪ್ರತಿಜ್ಞಾಪಾಶದಿಂದ ಬಿಗಿದು ನಿಮ್ಮ ದುರ್ವರ್ತನಕ್ಕೆ ತೊಂದರೆಬಾರದಂತೆ ನೀವು ಮಾಡಿಕೊಂಡರೂ, ಕೊಬ್ಬಟ್ಟಿನ ಬೆಂಕಿಯಂತೆ

ಒಳಗಿಂದೊಳಗೆ ಹೊತ್ತುತ್ತಿರುವ ಪ್ರಜಾಕ್ಷೋಭಜನಿತ ಅಗ್ನಿಯು ನಿಮ್ಮನ್ನು ಸುಟ್ಟು ಸೂರೆಮಾಡದೆ ಬಿಡಲಿಕ್ಕಿಲ್ಲ ! ಬೋಧಿಸುವ ಪ್ರಸಂಗದಲ್ಲಿ ನಾನು ಅಸತ್ಯವನ್ನು ಬೋಧಿಸಲಾರೆನು. ಈಗ ಕರ್ನಾಟಕವು ನಿಮ್ಮ ಅತ್ಯಾಚಾರದಿಂದ ಮೊದಲೇ ಸಂತ್ರಸ್ತವಾಗಿರುವದು. ಅದರಲ್ಲಿ ನೀವು ಪದ್ಮಿನೀದೇವಿಯವರನ್ನು ಅಪಹರಿಸಿ ಅವರನ್ನು ಬಲಾತ್ಕರಿಸಹೋಗಿ ಉರಿಯುವದರಲ್ಲಿ ಹುಲ್ಲುಹಾಕಿದಂತೆ ಮಾಡುತ್ತೀರಿ! ಇದು ನಿಮಗೆ ಸರ್ವಥಾ ಹಿತವಲ್ಲ. ನೀವು ಈಗಲೇ ಪದ್ಮಿನೀದೇವಿಯವರನ್ನು ಅವರ ತಂದೆಯಬಳಿಗೆ ಕಳಿಸಿಬಿಡಿರಿ; ಹಾಗೆ ಕಳಿಸುವ ಇಚ್ಛೆಯಿಲ್ಲ ದಿದ್ದರೆ ಪದ್ಮಿನೀದೇವಿಯವರ ಮನಸ್ಸಿನ ಒಲವನ್ನನುಸರಿಸಿ ನಡೆದು, ಅವರ ಸುಪ್ರಸನ್ನತೆ ಪಡೆದು, ನಾನು ಹೇಳುವ ಯುಕ್ತಿಯಿಂದ ಕಾರ್ಯವನ್ನಾದರೂ ಸಾಧಿಸಿರಿ. ಇಲ್ಲಿಗೆ ನಾನು ಹೇಳುವುದು ಮುಗಿಯಿತು.''

ಈ ಮೇರೆಗೆ ನುಡಿದು ಬೈರಾಗಿಣಿಯು ಮೇಲಕ್ಕೇಳುತ್ತಿರಲು, ಕಾಸಿಮನು ಪಶ್ಚಾತ್ತಾಪ ಧ್ವನಿಯಿಂದ ಆಕೆಯನ್ನು ಕುರಿತು– ''ಬೈರಾಗಿಣಿ, ನಿನ್ನ ಬೋಧವು ಯೋಗ್ಯವಾದದ್ದು; ಅದರಂತೆ ನಾನು ನಡೆಯಲು ಸಿದ್ಧನಿರುವೆನು; ಆದರೆ ಹೀಗೆ ನೀನು ನಿಷ್ಠುರಳಾಗಿ ತಟ್ಟನೆ ಎದ್ದುಹೋಗುವದು ನಿನ್ನ ಸೌಜನ್ಯಕ್ಕೆ ಒಪ್ಪುತ್ತದೆಯೋ ಹೇಗೆ, ನೀನೇ ವಿಚಾರಮಾಡಿ ನೋಡು. ನಿನ್ನಿನಿಂದ ಒಂದರಹಿಂದೊಂದು ವಿಲಕ್ಷಣ ಪ್ರಸಂಗಗಳು ಒದಗಹತ್ತಿದ್ದರಿಂದ ನನ್ನ ಚಿತ್ತವೃತ್ತಿಯು ಚಂಚಲ ವಾಗಿ ಏನೂ ತೋಚದೆಹೋಗಲು, ಒಂದುಬಗೆಯ ಸಿಟ್ಟಿನಿಂದ ನಿನ್ನ ಸಂಗಡ ನಾನು ಆಣೆ–ಚೂರಿಯ ಮಾತಾಡಿದೆನಿಷ್ಟೆ ! ಆದರೆ ನಿನ್ನ ವಿಷಯವಾಗಿ ನಾನು ಸರ್ವಥಾ ಅವಿಶ್ವಾಸ ಪಡುವದಿಲ್ಲ. ಬೈರಾಗಿಣೀ, ನಾನು ಅಷ್ಟು ಕೃತಘ್ನನಲ್ಲ. ನನ್ನ ಸಲುವಾಗಿ ನೀನು ಪಟ್ಟಿರುವ ಶ್ರಮದ ಪರಿಚಯವು ನನಗೆ ಚೆನ್ನಾಗಿರುತ್ತದೆ. ಹೋಗು ಈಗಲೇ ನೀನು ಪದ್ಮಿನಿಯ ಬಳಿಗೆ ಹೋಗಿ ನಾನು ಬಂದೆನೆಂದು ಹೇಳು. ಪದ್ಮಿನಿಗೆ ಇಸ್ಲಾಮೀ ಧರ್ಮದ ದೀಕ್ಷೆಯನ್ನು ಕೊಡುವದಕ್ಕಾಗಿ ಎಲ್ಲ ಸಿದ್ಧತೆ ಮಾಡಿಕೊಂಡು ಬರಲು ಕಾಜಿಗೆ ಆಜ್ಞಾಪಿಸಿ ಬರುವೆನು. ನೀನು ಯಾವ ಮಾತೂ ಮನಸ್ಸಿಗೆ ಹಚ್ಚಿಕೊಳ್ಳಬೇಡ, ನಾನೂ ಹಚ್ಚಿಕೊಳ್ಳುವದಿಲ್ಲ. ಇವೆಲ್ಲ ನನ್ನನಿನ್ನೊಳಗಿನ ಮಾತು. ಆದ್ದರಿಂದ ಪದ್ಮಿನಿಯ ಮುಂದೆ ಈ ಯಾವ ಮಾತೂ ತೆಗೆಯಬೇಡ. ಬೈರಾಗಿಣೀ, ನಾನು ನಿನಗೆ ಹೆಚ್ಚಿಗೆ ಹೇಳುವದೇನು ? ನೀನು ನಮ್ಮವಳೇ ಇರುತ್ತೀ. ಹೋಗು, ನಿನ್ನ ಬೆನ್ನಹಿಂದೆಯೇ ನಾನು ಬಂದೆನು; ಆದರೆ ಬೈರಾಗಿಣಿ, ಸ್ವಲ್ಪ ನಿಲ್ಲು. ನನ್ನ ಸಲುವಾಗಿ ಪರಿಪರಿಯಾಗಿ ಕಷ್ಟಪಟ್ಟಿರುವ ನಿನ್ನನ್ನು ಬರಿ ಮಾತಾಡಿ ಬರಿಗೈಯಿಂದ ಕಳಿಸುವದು ಯೋಗ್ಯವಲ್ಲ; ಇಗೋ, ಈ ವಜ್ರದ ಉಂಗುರವನ್ನು ಹಿಡಿ ಇದನ್ನು ನಿನಗೇ ನಾನು ಕೊಡುತ್ತಿದ್ದೆನು ! ಆದರೆ ನಿನ್ನಂಥ ನಿಸ್ಪೃಹರು ಅದನ್ನೇನು ಬೆಂಕಿಹಚ್ಚುವಿರಿ ? ಆದ್ದರಿಂದ ಇದನ್ನು ನನ್ನ ಪ್ರೇಮದ ಕುರುಹೆಂದು ತಿಳಿದು ಪದ್ಮಿನಿಗೆ ಕೊಡು'' ಎಂದು ಹೇಳಿ, ತನ್ನ ಬೆರಳೊಳಗಿನ ಉಂಗುರವನ್ನು ಉಚ್ಚಿ ಬೈರಾಗಿಣಿಯ ಕೈಯಲ್ಲಿ ಕೊಟ್ಟನು. ಪಾಪ ! ಆ ಉಂಗುರವೇ ಮುಂದೆ ತಮ್ಮ ಮುಸಲ್ಮಾನರ ಕರ್ನಾಟಕ ಅಧಿಕಾರದ ಪರಿಸಮಾಪ್ತಿಗೂ, ಕನ್ನಡಿಗರ ಸಾಮ್ರಾಜ್ಯದ ಪ್ರತಿಷ್ಠಾಪನೆಗೂ ಕಾರಣವಾಗುವದೆಂಬದು ಕಾಮರಾಜನ ಗುಂಗಿನಲ್ಲಿರುವ ಮರುಳ ಕಾಸಿಮನಿಗೆ ಹ್ಯಾಗೆ ಗೊತ್ತಾಗಬೇಕು ?

# ಮೋಸದ ಡಂಗುರ

ಬೈರಾಗಿಣಿಯು ಕಾಸಿಮನ ಬಳಿಯಿಂದ ಹೊರಟು ನೆಟ್ಟಗೆ ಪದ್ಮಿನಿಯ ಬಳಿಗೆ ಬಂದಳು. ಆಗ ಆ ಇಬ್ಬರು ತೇಜಸ್ವಿನಿಯರಾದ ಪ್ರಮದೆಯರ ಗುಪ್ತಾಲೋಚನೆಗಳು ನಡೆದವು. ಅವರು ಸ್ವಲ್ಪ ಕಾಲದಲ್ಲಿಯೇ ತಮ್ಮ ಆಲೋಚನೆಗಳನ್ನು ಮುಗಿಸಿಕೊಂಡು ಕಾಸಿಮನ ಚಿತ್ತ ಹರಣೋಪಾಯಗಳ ಯೋಚನೆಯಲ್ಲಿ ತೊಡಗಿದರು. ಇತ್ತ ಕಾಸಿಮನು ಮನಸ್ಸಿನಲ್ಲಿ–ಈ ಬೈರಾಗಿಣಿಯ ನೆಲೆಯೇ ನನಗೆ ಹತ್ತಲೊಲ್ಲದಲ್ಲ! ಒಮ್ಮೆ ಆಕೆಯು ನನಗೆ ಅನುಕೂಲವಾಗಿರು ವಂತೆ ನಟಿಸುವಳು, ಒಮ್ಮೆ ಪ್ರತಿಕೂಲವಾಗಿರುವಂತೆ ತೋರಿಸುವಳು, ಒಮ್ಮೆ ಅತ್ಯಂತ ನಿಸ್ಪೃಹಳಂತೆ ಇದ್ದದ್ದನ್ನು ನಿಶ್ಯಂಕೆಯಿಂದ ಹೇಳಿಬಿಡುವಳು. ಹಿಂದಕ್ಕೆ ನಾನು ಕುರುಬರ ಮಲ್ಲನ ಹೆಂಡತಿಯನ್ನು ಅಪಹರಿಸಿ ತಂದು ಇಟ್ಟುಕೊಂಡಿದ್ದೆನಲ್ಲ, ಆಕೆಯೇ ಈ ಬೈರಾಗಿಣಿಯಾಗಿರಬಹುದೇನು ? ನನಗೆ ಮಂಕುಬೂದಿಹಚ್ಚಿ ಓಡಿಬಂದ ಬಳಿಕ ಆಕೆಯು ಹೀಗೆ ಬೈರಾಗಿಣಿಯಾಗಿರಬಹುದೆ ? ರೂಪವಂತೂ ಅಚ್ಚಳಿಯದೆ ಹೋಲುತ್ತಿರುವದು, ದನಿಯು ಅದೇ ದನಿಯು, ಮುಖವರ್ಚಸ್ಸು ಮಾತ್ರ ಬೇರೆಯಾಗಿರುವದು. ಬೈರಾಗಿಣಿಯ ಮುಖದಲ್ಲಿ ಒಪ್ಪುತ್ತಿರುವ ಆ ದಿವ್ಯ ಸಾತ್ವಿಕ ತೇಜಸ್ಸಿನಿಂದ ನೋಡುವವರಲ್ಲಿ ಪೂಜ್ಯಭಾವವು ಉತ್ಪನ್ನವಾಗುತ್ತಿದ್ದರೂ, ಅದರಿಂದ ಆಕೆಯ ಸೌಂದರ್ಯಕ್ಕೆ ಕೊರತೆ ಬಾರದೆ, ಅದಕ್ಕೆ ಮತ್ತಿಷ್ಟು ಕಳೆಯೇರಿಂದತಾಗಿದೆ! ಶಾಬಾಸ, ಬೈರಾಗಿಣಿ! ಇಂಥ ವೈರಾಗ್ಯ ಸ್ಥಿತಿಯಲ್ಲಾದರೂ ನನ್ನ ಚಿತ್ತಹರಣ ಮಾಡುವೆಯಲ್ಲ! ಆ ಕುರುಬರ ತರುಣಿಯು ಇಷ್ಟು ದಿಟ್ಟತನದಿಂದ ನನ್ನ ಬಳಿಗೆ ಬರಲು ಧೈರ್ಯಗೊಳ್ಳಬಹುದೆ ? ಏನೇ ಇರಲಿ, ಇದ್ದದ್ದು ಹೊರಬೀಳದೇ ಹೋಗುವದಿಲ್ಲ, ನನಗಂತೂ ಸಂಶಯ ಉಂಟಾಗಿರುವದು. ಆಕೆಯು ಆ ಕುರುಬರ ತರುಣಿಯೇ ಇರಬೇಕು ಎಂದು ಯೋಚಿಸುತ್ತ ಬಳಿಯ ನಿಲುವುಗನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ, ತನ್ನ ತಾರುಣ್ಯದ ಭರದ ವಿಲಕ್ಷಣ ಸೌಂದರ್ಯಕ್ಕಾಗಿ ಅಭಿಮಾನಪಡುತ್ತ ಮತ್ತೆ ಮನಸ್ಸಿನಲ್ಲಿ–ಇಂಥ ಸುಂದರರೂಪಕ್ಕೆ ಆ ಇಬ್ಬರು ತರುಣಿಯರು ಮೋಹಿಸದೆ ಇರಬಹುದೆ ? ತರುಣಿಯರ ಮನಸ್ಸು ತಿರುಗುವದೇನು ತಡವೆ ? ಆ ಕುರುಬರ ಸುಂದರಿಯ ಮನಸ್ಸೇ ತಿರುಗಿ ಈ ಬೈರಾಗಿಣಿಯ ವೇಷದಿಂದ ಪದ್ಮಿನಿಯ ನೆವಮಾಡಿ ಪುನಃ ಪುನಃ ನನ್ನ ಬಳಿಗೆ ಆಕೆಯು ಬರುತ್ತಿರಬಾರದೇಕೆ ? ಇಂಥ ಎಷ್ಟೋ ಕಾಫಿರ ಸುಂದರ ತರುಣಿಯರು ನನ್ನ ರೂಪಕ್ಕೆ ಮೋಹಿತರಾಗಬಹುದಾಗಿರಲು, ಈ ಬೈರಾಗಿಣಿಯ ಪಾಡೇನು ! ಆಕೆಯು ಪದ್ಮಿನಿಯ ಮನಸ್ಸು ತಿರುಗಿಸುವ ಸಂಭವವೂ ಇರುತ್ತದೆ; ಯಾಕಂದರೆ ಏನಾದರೂ ದೊಡ್ಡ ಉಪಕಾರ ಮಾಡಿದ ಹೊರತು ನಾನು ತನ್ನನ್ನು ಆದರಿಸಲಿಕ್ಕಿಲ್ಲವೆಂಬ ಭಯವು ಬೈರಾಗಿಣಿಗೆ ಉಂಟಾಗಿರಬಹುದು ! ಇಲ್ಲದಿದ್ದರೆ ಆಕೆಯು ನನ್ನ ಸಲುವಾಗಿ ಇಷ್ಟು ಪೇಚಾಡುವ ಕಾರಣ ವೇನು ? ಆ ಬೈರಾಗಿಣಿಯು, ನನ್ನನ್ನು ಕಂಡರೆ ಸೇರದೆಯಿದ್ದ ಪದ್ಮಿನಿಯನ್ನು ಈಗ ಅರ್ಧಾಂಗಿ ಯಾಗಮಾಡತೊಡಗಿರುವಳು; ತಾನಾಗಿಯೇ ಮೇಲುಬಿದ್ದು ನನ್ನ ಬಳಿಗೆ ಬರುತ್ತಿರುವಳು; ಪರಮ ಆಪ್ತಳಂತೆ ಹಿತೋಪದೇಶ ಮಾಡುವಳು. ಪದ್ಮಿನಿಯನ್ನು ಆಕೆಯ ತಂದೆಯ ಬಳಿಗೆ ಕಳಿಸಿ ತಾನೇ

ನನ್ನ ಕೊರಳಿಗೆ ಬೀಳಬೇಕೆಂದು ಆ ಧೂರ್ತ ಬೈರಾಗಿಣಿಯ ಮನಸ್ಸಿನಲ್ಲಿರಲಿಕ್ಕಿವೆಂದು ಯಾರು ಹೇಳಬೇಕು ? ಎಲ ಎಲಾ ! ಇವೆಲ್ಲನನ್ನ ಮನೋರಾಜ್ಯಗಳಾಗಿರಬಹುದೆ ? ಅಥವಾ ಕಾಮುಕರ ಬಯಲ ಕಲ್ಪನೆಗಳಾಗಿರಬಹುದೆ ? ದಿಟ್ಟ ಬೈರಾಗಿಣಿಯು ಸ್ಪಷ್ಟವಾಗಿ ನನ್ನನ್ನು ನಿಷೇಧಿಸಿ ಬೋಧಿಸಿದ್ದನ್ನು ನೆನಿಸಿದರೆ ಇವೆಲ್ಲ ಬಯಲ ಕಲ್ಪನೆಗಳಾಗಿಯೇ ತೋರುವವು. ಏನೇ ಇರಲಿ, ಸುಮ್ಮನೆ ತರ್ಕಿಸುತ್ತ ಕುಳಿತುಕೊಳ್ಳುವದರಲ್ಲಿ ಪ್ರಯೋಜನವಿಲ್ಲ. ಪದ್ಮಿನಿಯು ನನ್ನ ಹಾದಿಯನ್ನು ನೋಡುತ್ತಿರಬಹುದು ! ಬೈರಾಗಿಣಿಯು ಇಷ್ಟು ತಡವೇಕೆ ಆಯಿತೆಂದು ಚಡಪಡಿಸುತ್ತಿರಬಹುದು. ಪೂರಾ ಕೈಯಲ್ಲಿ ಸಿಕ್ಕುಹೋಗಿರುವ ಇಬ್ಬರು ಅಬಲೆಯರ ಸಲುವಾಗಿ ನಾನು ಹೀಗೆ ತರ್ಕಿಸುತ್ತ ಕಾಲಹರಣ ಮಾಡುವದೇಕೆ ? ಎಂದು ಯೋಚಿಸಿ, ಪದ್ಮಿನಿಯ ಬಳಿಗೆ ಹೋಗುವದಕ್ಕಾಗಿ ಹೊರಟನು. ಅಷ್ಟರಲ್ಲಿ ''ಬೈರಾಗಿಣಿಯು ಹೀಗೆ ಹೊತ್ತಿಲ್ಲದ ಹೊತ್ತಿನಲ್ಲಿ ತಟ್ಟನೆ ಬಂದು ನಿಲ್ಲುವಳಲ್ಲ, ಈಕೆಯನ್ನು ಕಾವಲುಗಾರರು ಒಳಗೆ ಹ್ಯಾಗೆ ಬಿಡುತ್ತಿರಬಹುದು ? ದ್ವಾರರಕ್ಷಕರು ಈಕೆಯನ್ನು ಪ್ರತಿಬಂಧಿಸುತ್ತಿರಲಿಕ್ಕಿಲ್ಲವೆ; ನಿನ್ನೆ ಅಲ್ಲಿ ಹಾಗೆ ಬಂದಳು, ಇಂದು ಹೀಗೆ ಬಂದಳು. ಆಕೆಯೇನು ಮುಗಿಲಿನಿಂದ ಇಳಿದು ಬರುವಳೋ, ಅಥವಾ ಭೂಮಿಯಿಂದ ಎದ್ದುಬರುವಳೋ; ಬರುವಳಾದರೂ ಎಲ್ಲಿಂದ ? ಇದರ ವಿಚಾರವನ್ನು ಮೊದಲು ಮಾಡೋಣ. ''ಬೇಕಾದಾಗ ಒಳಗೆ ಬಿಡಲು ನೀವು ಸೇವಕರನ್ನು ಆಜ್ಞಾಪಿಸಿದ್ದರಿಂದ ನನಗೆ ಇಷ್ಟು ನಸುಕಿನಲ್ಲಿ ಬರಲಿಕ್ಕೆ ಅನುಕೂಲವಾಯಿತೆ''ಂದು ಆಕೆಯು ಮುಂಗಾಲು ಪುಟಿಗೆಯ ಮಾತಾಡಿದಳು. ಆದರೆ ನಾನೆಲ್ಲಿ ಸೇವಕರಿಗೆ ಹಾಗೆ ಹೇಳಿದ್ದೇನೆ ? ಇದರ ವಿಚಾರವನ್ನು ಮೊದಲು ಮಾಡೋಣ'' ಎಂದು ದ್ವಾರರಕ್ಷಕರನ್ನು ಕರೆಸಿ ಕ್ರೂರಮುದ್ರೆಯಿಂದ –

ಕಾಸಿಮ–ಅಬ್ದುಲಕಾದಿರ, ಇಂದು ನಸುಕಿನಲ್ಲಿ ಒಬ್ಬ ಬೈರಾಗಿಣಿಯು ಬಂದಿದ್ದಳೆ ?

ಅಬ್ದುಲಕಾದಿರ–ಜೀ ಸರಕಾರ, ಬಂದಿದ್ದಳು.

ಕಾಸಿಮ–ಆಕೆಯು ಎಲ್ಲಿಗೆ ಹೋದಳು ?

ಅಬ್ದುಲಕಾದಿರ–ಒಳಗೆ ತಮ್ಮ ಬಳಿಗೆ ಹೋದಳು.

ಕಾಸಿಮ–ಆಕೆಯನ್ನು ನನ್ನ ಅಪ್ಪಣೆಯಿಲ್ಲದೆ ಒಳಗೆ ಯಾಕೆ ಬಿಟ್ಟೆ ?

ಅಬ್ದುಲಕಾದಿರ–ಖಾವಿಂದ, ಈ ಗುಲಾಮನ ಅಪರಾಧವನ್ನು ಕ್ಷಮಿಸಬೇಕು. ಬೈರಾಗಿಣಿಯು ಇಂದಿನ ಸಾಂಕೇತಿಕ ಗೂಢಶಬ್ದಗಳನ್ನು ನನ್ನ ಕಿವಿಯಲ್ಲಿ ಹೇಳಿದ್ದಲ್ಲದೆ ಖಾವಿಂದರ ಹಸ್ತಾಕ್ಷರದ ಪರವಾನಿಗೆಯನ್ನು ನನಗೆ ತೋರಿಸಿದಳು. ಆ ಪರವಾನಿಗೆಯಲ್ಲಿ– ''ಇವರು ಯಾವಾಗ ಎಲ್ಲಿ ಹೋದರೂ ಯಾರೂ ಪ್ರತಿಬಂಧಿಸಲಾಗದು'' ಎಂದು ಬರೆದಿತ್ತು–ಹಾಗಿಲ್ಲದಿದ್ದರೆ ಅಷ್ಟು ನಸುಕಿನಲ್ಲಿ ನಾವೇಕೆ ಆಕೆಯನ್ನು ಬಿಡುತ್ತಿದ್ದೆವು ? ಆಕೆಯು ತಮ್ಮ ಬಳಿಗೆ ಹೋಗಿ ಬಹಳ ಹೊತ್ತಾದರೂ ಆ ಬಗ್ಗೆ ಖಾವಿಂದರವರು ನಮಗೆ ದೋಷಕೊಡಲಿಲ್ಲ. ಆ ಬೈರಾಗಿಣಿಯು ಹೊರಗೆ ಹೋದರೂ ನಮ್ಮನ್ನು ಆ ಬಗ್ಗೆ ಯಾರೂ ವಿಚಾರಿಸಲಿಲ್ಲ; ಆದ್ದರಿಂದ ಆಕೆಯು ಒಳಗೆ ಹೋದದ್ದು ಯೋಗ್ಯವೆಂದೇ ನಾವು ತಿಳಿದು ಆಕೆಯನ್ನು ಸುಮ್ಮನೆ ಹೋಗಗೊಟ್ಟೆವು. ಮೇಲಾಗಿ ತಾವು ಒಳಗೆ ಬಂದದ್ದಕ್ಕಾಗಿ ಬೈರಾಗಿಣಿಯನ್ನು ನಿಷೇಧಿಸದೆ ಆಕೆಯೊಡನೆ ಸಮಾಧಾನದಿಂದ ಮಾತಾಡಿದ್ದನ್ನೂ

ನಾವು ನೋಡಿದೆವು. ಅಂದಬಳಿಕ ನಮಗೆ ಯಾವ ಮಾತಿನ ಸಂಶಯ ಬರಬೇಕು ? ಆದರೂ ಖಾವಿಂದರವರು ಈ ಗುಲಾಮನ ಅಪರಾಧವನ್ನು ಕ್ಷಮಿಸಬೇಕು.

ಈ ಮೇರೆಗೆ ನುಡಿದು ದ್ವಾರರಕ್ಷಕನು ವಿನಯದಿಂದ ವಂದಿಸಲು, ಕಾಸಿಮನು ಆಶ್ಚರ್ಯ ಮಗ್ನನಾದನು. ಆತನು ಮನಸ್ಸಿನಲ್ಲಿ– ''ಇದೇ ಹಂಚಿಕೆಯಿಂದಲೇ ಆಕೆಯು ನಿನ್ನೆ ಪದ್ಮಿನಿಯ ಅಂತರ್ಗೃಹದಲ್ಲಿಯೂ ಅಕಸ್ಮಾತ್ತಾಗಿ ಬಂದಿರಬಹುದು; ಆದರೆ ನಾನು ಎಂಥ ಮೂರ್ಖನು ! ಆ ವಿಲಕ್ಷಣ ಸ್ತ್ರೀಯ ಆಶ್ಚರ್ಯಕಾರಕ ಕೃತಿಯನ್ನು ನೋಡಿ ದಂಗುಬಡಿದು ಹೋದದ್ದರಿಂದ ಆಕೆ ಹ್ಯಾಗೆ ಬಂದಳೆಂಬುದನ್ನು ಕುರಿತು ವಿಚಾರಿಸುವ ಎಚ್ಚರವೇ ಉಳಿಯಲಿಲ್ಲ ! ಆಗಲಿ, ಅಲ್ಲಿಗೆ ಹೋದಬಳಿಕ ಇದರ ವಿಚಾರವನ್ನು ಮೊದಲು ಮಾಡೋಣ. ನಾನು ಗೊತ್ತುಮಾಡಿದ ಅತಿ ಗೂಢವಾದ ಸಾಂಕೇತಿಕ ಶಬ್ದಗಳು ಹೀಗೆ ಬೈಲಿಗೆ ಬೀಳಹತ್ತಿದ ಬಳಿಕ ಉಳಿಯಿತೇನು? ನನ್ನ ಹಸ್ತಾಕ್ಷರದ ಪರವಾನಿಗೆಯೂ ಆಕೆಯ ಬಳಿಯಲ್ಲಿರುವದಂತೆ? ಇದೊಳ್ಳೆಯ ಆಶ್ಚರ್ಯದ ಸಂಗತಿಯು! ಈ ಬೈರಾಗಿಣಿಯು ನನ್ನ ಬಳಿಗೆ ಪರವಾನಿಗೆ ಕೇಳಲಿಕ್ಕೆ ಬಂದದ್ದೆಂದು? ನಾನು ಆಕೆಗೆ ಪರವಾನಿಗೆ ಕೊಟ್ಟದ್ದೆಂದು? ಇದರಲ್ಲೇನೋ ಮೋಸವಿರುವಂತೆ ತೋರುತ್ತದೆ; ಆದ್ದರಿಂದ ಬಿಟ್ಟದ್ದುಬಿಟ್ಟು ಮೊದಲು ಅದರ ವಿಚಾರವನ್ನು ಮಾಡತಕ್ಕದ್ದು ಎಂದು ಯೋಚಿಸಿ ಕಾಸಿಮನು ಅವಸರದಿಂದ ಪದ್ಮಿನಿಯ ಅಂತಃಪುರದ ಕಡೆಗೆ ಸಾಗಿದನು.

ಇಷ್ಟೆಲ್ಲ ಮಾಡಿ ಕಾಸಿಮನು ಅಂತಃಪುರಕ್ಕೆ ಹೋದಾಗ ಒಂದು ತಾಸು ಹೊತ್ತು ಏರಿತ್ತು. ಸೂರ್ಯನು ಅದೇ ಮೇಲಕ್ಕೇರತೊಡಗಿ ತನ್ನ ಹೊಂಬಣ್ಣದ ಕಿರಣಗಳನ್ನು ನಾಲ್ಕೂಕಡೆಗೆ ಪಸರಿಸತೊಡಗಿದ್ದನು. ನಸುಗಾಳಿಯು ಸುಗಂಧವನ್ನು ಹೊತ್ತುಕೊಂಡು ಸುಳ್ಳನೇ ಸುಳಿಯುತ್ತಿತ್ತು. ಪಕ್ಷಿಗಳು ಆಕಾಶದಲ್ಲಿ ಉಡ್ಡಾಣ ಮಾಡುತ್ತಿದ್ದವು. ದೇವಾಲಯದ ವಾದ್ಯಗಳು ಮೊಳಗುತ್ತಿದ್ದವು. ಜನರು ತಮ್ಮತಮ್ಮ ಉದ್ಯೋಗಗಳಲ್ಲಿ ಆತುರದಿಂದ ತೊಡಗುತ್ತಿದ್ದರು; ಆದರೆ ಇದಾವದರ ಕಡೆಗೂ ಕಾಸಿಮನ ಲಕ್ಷವಿದ್ದಿಲ್ಲ. ಆ ಇಬ್ಬರು ಸುಂದರ ತರುಣೆಯನ್ನು ಬೇಗನೆ ಕಾಣಬೇಕೆಂಬ ಆತುರ, ಬೈರಾಗಿಣಿಯ ಮೋಸವನ್ನು ಬೈಲಿಗೆಳೆಯಬೇಕೆಂಬ ಉತ್ಕಟೇಚ್ಛೆ ಇವುಗಳ ಸರಿಬೆರಿಕೆಯಿಂದ ಕಾಸಿಮನ ಚಿತ್ತವೃತ್ತಿಯು ವಿಲಕ್ಷಣವಾಗಿತ್ತು; ಅಂದರೆ, ಶೃಂಗಾರ–ಭಯಾನಕ ರಸಗಳ ತೆರೆಗಳ ಹೊಯ್ತದಿಂದ ಅವನು ಕಕ್ಕಾಬಿಕ್ಕಿಯಾಗಿದ್ದನು; ಆದರೆ ಅವನ ಈ ಚಂಚಲವೃತ್ತಿಯು ಪದ್ಮಿನಿಯ ಅಂತಃಪುರವನ್ನು ಪ್ರವೇಶಿಸಿದ ಬಳಿಕ ಉಳಿಯಲಿಲ್ಲ. ಮೊದಲೇ ಪದ್ಮಿನಿಯು ಮಹಾಚತುರಳು, ಅದರಲ್ಲಿ ಬೈರಾಗಿಣಿಯಂಥ ಚಾಣಾಕ್ಷಳ ಸಹವಾಸ ! ಅಂದಬಳಿಕ ಕೇಳುವದೇನು? ಕಾಸಿಮನು ಅಂತರ್ಗೃಹವನ್ನು ಪ್ರವೇಶಿಸಿದಕೂಡಲೆ ಅವನ ಚಿತ್ತಹರಣವಾಗಿ ಹೋಗಿತ್ತು. ಅಲ್ಲಿ ಅತ್ಯುತ್ತಮ ವಾದ ಸುಂದರ ವ್ಯವಸ್ಥೆ ಬೈರಾಗಿಣಿಯ ಪರಮಾವಧಿಯ ಪ್ರೇಮದರ್ಶಕ ವಿನಯ ಇವನ್ನು ನೋಡಿ ಕಾಸಿಮನು ಮೆತ್ತಗಾಗಿಹೋದನು. ಅಂತರ್ಗೃಹದಲ್ಲಿ ಕಾಲಿಟ್ಟಕೂಡಲೇ ಮೊದಲು ಬೈರಾಗಿಣಿ ಯನ್ನು ಕೇಳಬೇಕೆಂದು ಮಾಡಿದ್ದ ಆತನು ತನ್ನ ಮನಸ್ಸಿನಲ್ಲಿ–ನನ್ನ ಸಲುವಾಗಿ ಇಷ್ಟು ಕಷ್ಟಪಟ್ಟು ವ್ಯವಸ್ಥೆಮಾಡಿ ಇಷ್ಟು ವಿನಯದಿಂದ ನಡೆದುಕೊಳ್ಳುವ, ಮೇಲಾಗಿ ಪದ್ಮಿನಿಯ ಮನಸ್ಸನ್ನು ತನ್ನ ವಿಲಕ್ಷಣವಾದ ಚಾತುರ್ಯದಿಂದ ನನ್ನ ಕಡೆಗೆ ತಿರುಗಿಸಿರುವ ಈ ಚತುರ ಬೈರಾಗಿಣಿಯ

ಮನಸ್ಸನ್ನು ಒಮ್ಮೆಲೆ ಯಾಕೆ ನೋಯಿಸಬೇಕು ? ಹಿಂದುಗಡೆ ಕೇಳೋಣವಂತೆ ಇಷ್ಟು ಅವಸರವೇರೆ? ನನ್ನಂಥ ಬಲಿಷ್ಠನ ಕೈಯೊಳಗಿಂದ ಪಾರಾಗಿ ಈ ಅಬಲೆಯರು ಹೋಗುವದಾದರೂ ಎತ್ತ? ನಮ್ಮ ಕಾವಲುಗಾರರಿಗೆ ಬಿಗಿಯಾಗಿ ಕಾವಲಿಡಲು ಗುಪ್ತರೀತಿಯಿಂದ ಆಜ್ಞಾಪಿಸಿ, ನಾನು ಎಚ್ಚರದಿಂದಿದ್ದರಾಯಿತು. ಈ ತರುಣಿಯರ ಮರೆ– ಮೋಸಗಳು ಹ್ಯಾಗೆ ನಡೆಯುವವು ? ಏನೇ ಇರಲಿ, ಮೊದಲು ಪದ್ಮಿನಿಯನ್ನು ಲಗ್ನಮಾಡಿಕೊಳ್ಳೋಣ, ಆಮೇಲೆ ಮರೆ–ಮೋಸದ ವಿಚಾರ. ಭರತಭೂಮಿಯ ಈ ಪೊಳ್ಳೆದೆಯ ವೀರರನ್ನೂ ಪಾತಿವ್ರತ್ಯವು ಇಲ್ಲದ ಸೋಗಿನ ಈ ಹೆಂಗಳೆಯರನ್ನೂ ಯಾರು ಕೇಳಬೇಕು ? ನಮ್ಮ ವಿಲಕ್ಷಣ ಬಾಹುಬಲಕ್ಕೆ ಇಡಿಯ ಭರತಭೂಮಿಯೇ ತಲ್ಲಣಿಸುತ್ತಿರುವಾಗ ಸೊಟ್ಟ ಕನ್ನಡಿಗರ ಪಾಡೇನು ? ಈಗ ಸಿಟ್ಟಿನ ಭರದಲ್ಲಿ ಏನಾದರೂ ಇಲ್ಲದ್ದೊಂದು ಪ್ರಶ್ನೆಮಾಡಿ ಬೈರಾಗಿಣಿಯ ಮನಸ್ಸನ್ನು ನೋಯಿಸಿದರೆ, ಈ ಹಟಮಾರಿ ಹೆಂಗಸರ ದಡ್ಡತನದಿಂದ ಕೆಲಸವು ಕೆಟ್ಟುಹೋದೀತು ?

ಈ ಮೇರೆಗೆ ಆಲೋಚಿಸಿ ಕಾಸಿಮನು ಬೈರಾಗಿಣಿಗೆ ಏನೋ ಪ್ರಶ್ನೆ ಮಾಡಬೇಕೆನ್ನುತ್ತಿರಲು, ಧೂರ್ತಳಾದ ಬೈರಾಗಿಣಿಯು ಬಳಿಯ ತನ್ನ ವೀಣೆಯನ್ನು ತಕ್ಕೊಂಡು ಎದ್ದುನಿಂತು ವಿನಯದಿಂದ ಖಾನನಿಗೆ ಸಲಾಮು ಮಾಡಿ ಮಂಜುಲಸ್ವರದಿಂದ ಸರಸ ಗಾಯನ ಮಾಡತೊಡಗಿದಳು. ಬೈರಾಗಿಣಿಗೆ ಗಾಯನವು, ಜನರ ಚಿತ್ತಹರಣ ಮಾಡುವದೊಂದು ಅಮೋಘ ಸಾಧನವಾಗಿ ಹೋಗಿತ್ತು, ಆಕೆಯ ಗಾಯನದ ವರ್ಚಸ್ಸು ಕಾಸಿಮನ ಮನಸ್ಸಿನ ಮೇಲೆ ಸಂಪೂರ್ಣವಾಗಿ ಕುಳಿತುಹೋದದ್ದರಿಂದ, ಬೈರಾಗಿಣಿಯನ್ನು ಏನು ಕೇಳಲಿಕ್ಕೂ ಆತನು ಸಮರ್ಥನಾಗಲಿಲ್ಲ. ಪ್ರಿಯವಾಚಕರೇ, ಸ್ತ್ರೀಚಾರಿತ್ರ್ಯವು ಹ್ಯಾಗಿದೆ ನೋಡಿರಿ ! ಅವರ ಮೋಹಪಾಶದಲ್ಲಿ ಸಿಕ್ಕು ಕಾಸಿಮನಂಥ ದುರ್ಲಭ ತೇಜಸ್ವಿಯೂ ಒದ್ದಾಡುತ್ತಿರುವದನ್ನು ಮರೆಯಬೇಡಿರಿ. ಆ ಯವನ ವೀರನ ಪ್ರಶ್ನೆಯು ತುಟಿಯಮೇಲೆ ಕುಳಿತು ಅಲ್ಲಿಯೇ ಅಡಗಿಹೋಯಿತು. ಬೈರಾಗಿಣಿಯ ಮೋಹಕವಾದ ಗಾಯನದಲ್ಲಿ ಆತನು ಪರವಶನಾದನು. ಪರಮೇಶ್ವರನು ಜನ್ಮತಃ ಬೈರಾಗಿಣಿಯಲ್ಲಿ ಕೆಲವು ಅಲೌಕಿಕ ಗುಣಗಳನ್ನು ಇಟ್ಟಿದ್ದನು. ಅದರಲ್ಲಿ ಆಕೆಗೆ ಮಾಧವಾಚಾರ್ಯರಂಥ ಮಹಾತ್ಮರ ಕರುಣಾಕಟಾಕ್ಷದ ಜೋಡು ಒದಗಿತ್ತು, ಅಂದಬಳಿಕ ಕೇಳುವದೇನು ? ಆ ಗುರುಭಕ್ತಳ ಮನೋ ದಯಗಳೆಲ್ಲ ನಿರ್ವಿಘ್ನವಾಗಿ ಕೈಗೂಡುತ್ತಿದ್ದವು. ಈ ಪ್ರಸಂಗದಲ್ಲಿ ಆಕೆಯು ಸಂಪೂರ್ಣವಾಗಿ ಕಾಸಿಮನ ಚಿತ್ತಹರಣ ಮಾಡಬೇಕಾಗಿತ್ತು, ಆ ಕೆಲಸವು ತನ್ನ ಗಾಯನದಿಂದ ಅತ್ಯುತ್ತಮವಾಗಿ ಸಾಧಿಸಿದ್ದನ್ನು ನೋಡಿ ಆಕೆಗೆ ಪರಮಾನಂದವಾಯಿತು. ಆಕೆಯು ತಟ್ಟನೇ ಗಾಯನವನ್ನು ನಿಲ್ಲಿಸಿ ವೀಣೆಯನ್ನು ಕೆಳಗಿಟ್ಟು, ಪದ್ಮಿನಿಯು ಕುಳಿತಿದ್ದ ಕೋಣೆಯ ಬಾಗಿಲಕಡೆಗೆ ನೋಡಿ ಗಾಂಭೀರ್ಯ ದಿಂದ– ''ರಾಜಪುತ್ರೀ, ಸುಮಂಗಲೇ, ಖಾನಸಾಹೇಬರು ನಿನ್ನ ಮಾರ್ಗಪ್ರತೀಕ್ಷೆ ಮಾಡುತ್ತ ಕುಳಿತಿರುವರು'' ಎಂದು ನುಡಿಯುತ್ತಿರಲು, ರತ್ನಕಂಕಣಾದಿಗಳಿಂದ ಅಲಂಕೃತವಾದ ಮನೋಹರ ಹಸ್ತದೊಳಗಿದ್ದ ಹೂಮಾಲೆಯ ಸುವರ್ಣದ ತಬಕವೊಂದು ಹೊರಗೆ ಬಂದಿತು. ಕೂಡಲೇ ಬೈರಾಗಿಣಿಯು ಎದ್ದುಹೋಗಿ ಅರಳುಮಲ್ಲಿಗೆಯ ಸುಂದರ ಹೂಮಾಲೆಯಿಂದ ತುಂಬಿಹೋಗಿದ್ದ ಆ ಪ್ರಶಸ್ತತಬಕವನ್ನು ತಕ್ಕೊಂಡು ಬಂದು ಮುಗುಳುನಗೆ ನಗುತ್ತ– ''ಖಾನಸಾಹೇಬರು ಬಹು

ಭಾಗ್ಯಶಾಲಿಗಳು; ಯಾಕಂದರೆ ಕರ್ನಾಟಕಕ್ಕೆ ಅತ್ಯಂತ ಪೂಜ್ಯವಾಗಿರುವ ಆನೆಗುಂದಿಯ ಸಿಂಹಾಸನಸ್ಥ ದೇವರಾಜರ ಪುತ್ರಿಯ ಪ್ರೇಮದ ಪುಷ್ಪಹಾರವು ಈಗ ಅವರ ಕೊರಳಿಗೆ ಬೀಳುತ್ತಿರುವದು! ಖಾವಿಂದ ಎಷ್ಟೆಷ್ಟೋ ರಾಜಪುತ್ರರು ಈ ದುರ್ಮಿಲ ಹಾರವು ತಮ್ಮ ಕೊರಳಿಗೆ ಬಿದ್ದು ತಾವು ಕೃತಕೃತ್ಯರಾಗಬೇಕೆಂದು ಯತ್ನಿಸುತ್ತಿರುವರು; ಆದರೆ ಅವರ ಆ ಯತ್ನವೆಲ್ಲ ನಿಷ್ಫಲವಾಗಿಹೋಗಿ, ಹಾರವು ಖಾವಂದರ ಕೊರಳಿಗೆ ತಾನಾಗಿ ನಡೆದುಬಂದಿರುವದು! ಬ್ರಹ್ಮ ಸಂಕಲ್ಪವನ್ನು ಯಾರು ತಪ್ಪಿಸುವರು? ಎಂದು ನುಡಿಯುತ್ತ ಹಾರವನ್ನು ಕಾಸಿಮನ ಕೊರಳಿಗೆ ಹಾಕಿದಳು. ಮೊದಲು ಆ ದಿವ್ಯಹಾರವನ್ನು ನೋಡಿಯೇ ಕಾಸಿಮನು ಸಂತುಷ್ಟನಾಗಿದ್ದನು. ಅದನ್ನು ಕಟ್ಟುವದರಲ್ಲಿ ಬೈರಾಗಿಣಿಯು ವಿಲಕ್ಷಣ ಚಾತುರ್ಯವನ್ನು ಪ್ರಕಟಿಸಿದ್ದಳು. ಹೀಗೆ ಬೈರಾಗಿಣಿಯು ಹಾರವನ್ನು ಕಾಸಿಮನ ಕೊರಳಿಗೆ ಹಾಕಿ ಕೈಯಲ್ಲಿ ತುರಾಯಿಯನ್ನು ಕೊಟ್ಟು ಕುಳಿತುಕೊಳ್ಳಲು, ಅತ್ಯಂತ ನಮ್ರನಾಗಿದ್ದ ಕಾಸಿಮನು ಪರಮೋಪಕಾರ ಹೊಂದಿದವನಂತೆ ಸಂಕೋಚಪಡುತ್ತ ಪದ್ಮಿನಿಯು ಬರಲಿಲ್ಲವೆಂದು ಮನಸ್ಸಿನಲ್ಲಿಯೇ ಚಡಪಡಿಸಹತ್ತಿದನು. ಪದ್ಮಿನಿಯು ಹೊರಗೆ ಬಾರದ್ದರಿಂದ ಅವನಿಗೆ ಈ ಉಪಚಾರವೆಲ್ಲ ಶುಷ್ಕವಾಗಿ ತೋರಿತು; ಆದರೆ ಆ ಬಗ್ಗೆ ಬೈರಾಗಿಣಿಯನ್ನು ಕೇಳಲಿಕ್ಕೆ ಬಾಯಿ ಏಳದೇ ಆತನು ಅತ್ತಿತ್ತ ನೋಡುತ್ತಿರಲು, ಇಂಗಿತಜ್ಞಳಾದ ಬೈರಾಗಿಣಿಯು– "ಖಾವಿಂದ, ಪದ್ಮಿನಿ ದೇವಿಯವರನ್ನು ತಾವು ಲಗ್ನವಾಗುವದು ಎಂದು ? ಲಗ್ನವಾಗುವ ಮೊದಲು ಆಕೆಗೆ ಮುಸಲ್ಮಾನ ದೀಕ್ಷೆ ಕೊಡಬೇಕಾಗುವದಷ್ಟೇ ? ಕಾಜೀಸಾಹೇಬರು ಎಲ್ಲಿರುವರು ?" ಎಂದು ಪ್ರಶ್ನೆಗಳ ಮೇಲೆ ಪ್ರಶ್ನೆಮಾಡಲು ಕಾಸಿಮನು–

ಕಾಸಿಮ–ಪ್ರಿಯ ಬೈರಾಗಿಣಿ, ನಿನ್ನ ಉಪಕಾರವು ನನ್ನ ಮೇಲೆ ಬಹಳ ಆಯಿತು. ಪದ್ಮಿನಿಯು ಹೀಗೆ ವಿವೇಕಿಯಾಗಿ ತನ್ನ ಹಿತ ಮಾಡಿಕೊಂಡಾಳೆಂದು ನನಗೆ ತೋರಿದ್ದಿಲ್ಲ. ಇದೆಲ್ಲ ನಿನ್ನ ಪುಣ್ಯವು. ಆಗಲಿ, ನೀನು ಕರೆಯಲಿಕ್ಕೆ ಹೇಳಿದರೆ ಈಗಲೇ ಕಾಜಿಯನ್ನು ಕರೆಸುವೆನು; ಮೊದಲು ಧರ್ಮದ ದೀಕ್ಷೆಯ ಕೆಲಸವು ತೀರಿಹೋಗಲಿ.

ಬೈರಾಗಿಣಿ–ಖಾವಿಂದ, ಅನುಕೂಲಕಾಲ ಒದಗಿತೆಂದರೆ, ಹೀಗೆ ಒಂದಕ್ಕೊಂದು ಅನುಕೂಲವಾಗುತ್ತ ಹೋಗುತ್ತವೆ. ಅದರಲ್ಲಿ ನನ್ನಂಥ ಜಡ ಬೈರಾಗಿಣಿಯು ಸಹಾಯ ಮಾಡುವದೇನು? ನೀವು ಪದ್ಮಿನಿಯನ್ನು ಲಗ್ನವಾದರೆ, ಆನೆಗುಂದಿಯ ಸಿಂಹಾಸನವೂ ನಿಮ್ಮದೇ ಆಗುವದು. ವೃದ್ಧ ದೇವರಾಜನಿಗಾದರೂ ಪದ್ಮಿನಿಯ ಹೊರತು ಯಾರಿದ್ದಾರೆ ? ಪದ್ಮಿನಿಯು ಬಾವಿಯಲ್ಲಿ ಬಿದ್ದು ಸತ್ತಳೆಂದು ತಿಳಿದು ದೇವರಾಜರು ಅತ್ಯಂತ ಶೋಕಾಕುಲರಾಗಿರುವರು. ಬಾವಿಯಲ್ಲಿ ಬಿದ್ದವಳು ಪದ್ಮಿನಿಯಲ್ಲೆಂದು ಹೇಳಿ ಮಂತ್ರಿಗಳು ಆಕೆಯ ಶೋಧವನ್ನು ನಡೆಸಿದ್ದಾರೆ. ಪದ್ಮಿನಿಯನ್ನು ಯಾರು ಹುಡುಕಿಕೊಂಡು ಬರುವರೋ, ಅವರಿಗೇ ಆಕೆಯನ್ನು ಕೊಟ್ಟು ಲಗ್ನಮಾಡಿ, ಅವರನ್ನು ಆನೆಗುಂದಿಯ ಸಿಂಹಾಸನದ ಮೇಲೆ ಕುಳ್ಳಿರಿಸುವೆನೆಂದು ದೇವರಾಜರು ಹೇಳಿದ್ದಾರೆ. ಮಗಳನ್ನು ಹುಡುಕಿಕೊಂಡು ಬಂದವರು ಹಿಂದುಗಳಿರಲಿ, ಮುಸಲ್ಮಾನರಿರಲಿ ಅದನ್ನಾವದನ್ನೂ ಅವರು ನೋಡುವದಿಲ್ಲವಂತೆ ! ಯಾಕಂದರೆ, ಪದ್ಮಿನಿಯ ಮೇಲೆ ಅವರ ಅತ್ಯಂತವಾದ ಪ್ರೇಮವಿದ್ದು, ಆಕೆಯು ಬದುಕಿ ಉಳಿದಿರುವದು ಅಶಕ್ಯವೆಂದು ಅವರು

ಆಶೆದೊರೆದಿದ್ದಾರೆ. ಅಂದಬಳಿಕ ನೋಡಿರಿ, ನಿಮಗೆ ಅನುಕೂಲ ಪ್ರಸಂಗಗಳು ಒಂದರಹಿಂದೊಂದು ಒದಗುತ್ತಬಂದಿರುವವೋ ಇಲ್ಲವೋ ? ನೀವು ಮೊದಲು ಪದ್ಮಿನಿಯ ನಿಕಾ ಮಾಡಿಕೊಂಡು, ಆಮೇಲೆ ಪದ್ಮಿನಿಯು ನಮ್ಮಲ್ಲಿರುವಳೆಂದು ಆ ವೃದ್ಧರಾಜನಿಗೆ ತಿಳಿಸಿದರೆ, ಆತನು ನಿಮ್ಮನ್ನು ಸಂತೋಷದಿಂದ ಸತ್ಕರಿಸಿ, ಸಿಂಹಾಸನಾಧಿಷ್ಠಿತರನ್ನಾಗಿ ಮಾಡುವನು.

ಕಾಸಿಮ–ಅಂದಬಳಿಕ ಪದ್ಮಿನಿಯನ್ನು ಲಗ್ನವಾಗಲಿಕ್ಕೆ ವಿಲಂಬವೇಕೆ ?

ಬೈರಾಗಿಣಿ –ನಾನಾದರೂ ಎಲ್ಲಿವಿಲಂಬಮಾಡಬೇಕೆನ್ನುತ್ತೇನೆ ಸರಕಾರ! ಪದ್ಮಿನಿಯಂತೂ ಲಗ್ನಕ್ಕೆ ಸಿದ್ಧಳಾಗಿರು ವಳು. ಖಾನಸಾಹೇಬರ ಪಾಣಿಗ್ರಹಣಮಾಡಿ ಎಂದು ಕೃತಾರ್ಥಳಾದೇನೆಂದು ಆಕೆಯು ಹಾದಿಯನ್ನೇ ನೋಡುತ್ತಿರುವಳು.

ಕಾಸಿಮ–ಅಷ್ಟು ಆತುರಳಾದವಳು ನಮಗೆ ಕೈಮುಟ್ಟಿ ಮಾಲೆಯನ್ನೂ ಹಾಕ ಬಾರದೇನು? ನಾನು ಬಂದಾಗಿನಿಂದ ಆಕೆಯ ಮೋರೆ ಕೂಡ ಕಣ್ಣಿಗೆ ಬಿದ್ದಿರುವುದಿಲ್ಲ. ಬೈರಾಗಿಣಿ, ಸಿಟ್ಟಾಗಬೇಡ, ಸುಮ್ಮನೆ ವಿನೋದಕ್ಕಾಗಿ ಅನ್ನುತ್ತೇನೆ. ನೀನು ಪದ್ಮಿನಿಯ ವಕೀಲಿಯನ್ನು ಮಾಡುವ ಭರದಲ್ಲಿ ಪದ್ಮಿನಿಯ ಬದಲು ನೀನೆಲ್ಲಿ ಲಗ್ನಮಾಡಿಕೊಳ್ಳುತ್ತೀಯೋ ಎಂಬ ಸಂಶಯವು ನನಗೆ ಬರಹತ್ತಿದೆ.

ಕಾಸಿಮನ ಈ ಲಘುತ್ವದ ಮಾತುಗಳನ್ನು ಕೇಳಿ ಬೈರಾಗಿಣಿಯು ಮನಸ್ಸಿನಲ್ಲಿ ಹೇಸಿಕೊಂಡಳು. ಇದರಿಂದ ಆಕೆಗೆ ಸಂತಾಪವೂ ಆಯಿತು; ಆದರೂ ಆ ಧೂರ್ತಳು ಕಾರ್ಯಸಾಧನಕ್ಕೆ ಲಕ್ಷಕೊಟ್ಟು, ವಿನೋದಭಾವದಿಂದ ಆ ಮಾತುಗಳಿಗೆ ಮಹತ್ವಕೊಡದೆ ನಸುನಗುತ್ತಕಾಸಿಮನನ್ನು ಕುರಿತು–''ಖಾವಿಂದ, ಇದರಲ್ಲಿಮನಸ್ಸಿಗೆ ಹಚ್ಚಿಕೊಳ್ಳತಕ್ಕಂತಹದೇನೂ ಇರುವದಿಲ್ಲ, ಅಮೃತ ಪ್ರಾಪ್ತಿಯು ನಿಶ್ಚಯವಾಗಿರಲು, ಮುಂದಿರುತ್ತದೆಂದು ಹಳಸಿದ ಅಂಬಲಿಯನ್ನು ಯಾರು ಬಯಸುವರು ? ಅದರಂತೆ ಪದ್ಮಿನೀ ದೇವಿಯವರಂಥವರು ಪಾಣಿಗ್ರಹಣಕ್ಕೆಸಿದ್ಧವಾಗಿರಲು, ಹೇಳಿಕೇಳಿ ವಿರಕ್ತರಾಗಿರುವ ನಮ್ಮಂಥ ಬೈರಾಗಿಣಿಯರನ್ನು ತಾವು ಲಗ್ನವಾಗಬಹುದೇ ? ಹಾಗೆ ಲಗ್ನವಾದರೆ ಬೀದಿಯ ''ನಾಯಿಗಿಂತಲೂ ತಮ್ಮ ಯೋಗ್ಯತೆಯು ಕಡಿಮೆಯಾಗಬಹುದಲ್ಲವೇ ? ಆದ್ದರಿಂದ ನಿಮ್ಮ ವಿನೋದದ ಮಾತಿಗೆ ನಾನು ಏನೂ ಮಹತ್ವ ಕೊಡುವದಿಲ್ಲ.

ಕಾಸಿಮ–ಬೈರಾಗಿಣೀ, ನೀನು ಮಾತಿನಲ್ಲಿ ಒಳ್ಳೇ ಚತುರೆಯು ! ನಿನ್ನ ಈ ಚಾತುರ್ಯವನ್ನು ನೋಡಿ ಸಂತೋಷಪಡಲಿಕ್ಕೆ ಪದ್ಮಿನಿಯು ಇಲ್ಲಿಗೆ ಬಾರದಿರುವುದು ಕೊರತೆಯಲ್ಲವೆ ?

ಬೈರಾಗಿಣಿ–ಹೌದು, ನಿಶ್ಚಯವಾಗಿ ಕೊರತೆಯು...

ಕಾಸಿಮ–ಆ ಕೊರತೆಯನ್ನು ದೂರಮಾಡಲಿಕ್ಕೆ ಬರುವಹಾಗಿಲ್ಲವೇನು?

ಬೈರಾಗಿಣಿ–ಅದಕ್ಕೆ ತೊಂದರೆ ಇರುವದು.

ಕಾಸಿಮ–ಅದೇನು ತೊಂದರೆ?

ಬೈರಾಗಿಣಿ–ತಮ್ಮನ್ನು ಲಗ್ನವಾಗಬೇಕಾಗಿರುವದೆಂಬುದು.

ಕಾಸಿಮ–ಇದೊಳ್ಳೆಯ ತೊಂದರೆಯು ! ಬೈರಾಗಿಣಿ, ಲಗ್ನವಾಗಬೇಕಾಗಿದೆ ಎಂಬ

ಕಾರಣದಿಂದ ಪದ್ಮಿನಿಯು ನನ್ನ ಬಳಿಗೆ ಬಾರದಿದ್ದರೆ, ಆಕೆಯನ್ನು ನಾನು ಲಗ್ನವಾಗುವ ಬಗೆಯೆತ್ತ? ಇಷ್ಟೆಲ್ಲ ಆಗಿ ಕಡೆಗೆ ಕಾಸಿಮನು ನಿರಾಸೆಪಡಬೇಕಾಗುವದೋ ಏನು?

ಬೈರಾಗಿಣಿ–ಹಾಗಲ್ಲ ಸರಕಾರ, ಪದ್ಮಿನಿಯನ್ನು ಈಗ ಪ್ರೇಮಯುಕ್ತ ಲಜ್ಜಾ–ಭಯಗಳು ಬಾಧಿಸುತ್ತಿರುವವು. ನಿಮ್ಮನ್ನು ಆಕೆಯು ತಂದೆಯ ಸಮಾನವೆಂದು ತಿಳಿದಾಗ, ನಿಮ್ಮ ಸಂಗಡ ಸಂಕೋಚವಿಲ್ಲದೆ ಬೇಕಾದ ಹಾಗೆ ಮಾತಾಡಿದಳು. ಆದರೆ ಪಿತೃಭಾವನೆಯ ಬದಲು ಈಗ ಪತಿಭಾವನೆಯುಂಟಾಗಿರುವದರಿಂದ ನಿಮ್ಮನ್ನು ಕಾಣಲಿಕ್ಕೆ ಆಕೆಯು ಸಂಕೋಚಪಡುತ್ತಿರುವಳು. ನಿಮ್ಮ ಪಾಣಿಗ್ರಹಣವಾಗುವವರೆಗೆ ಸಹಸಾ ಆಕೆಯು ನಿಮ್ಮಕಣ್ಣಿಗೆ ಬೀಳಲಾರಳು. ಹೀಗೆ ನಾಚುವುದು ಹಿಂದೂ ಸ್ತ್ರೀಯರ ಶೀಲವಾಗಿರುವದು.

ಕಾಸಿಮ–ಸರಿ ಸರಿ ! ಲಗ್ನವಾಗುವವರು ಹೀಗೆ ನಾಚುವ ಸಾಂಪ್ರದಾಯವು ನಮ್ಮಲ್ಲಿ ಯಾದರೂ ಇರುತ್ತದೆ; ಆದ್ದರಿಂದ ಬೇಗನೇ ವಿಧಿಯನ್ನು ತೀರಿಸಿಬಿಡೋಣ. ಈಗ ಕಾಜಿಯನ್ನು ಕರಿಸಲಷ್ಟೆ ?

ಈ ಮೇರೆಗೆ ಕಾಸಿಮನು ನುಡಿಯುತ್ತಿರಲು ಮೊದಲೇ ಗೊತ್ತುಮಾಡಿದಂತೆ ಬೈರಾಗಿಣಿಯು ಸುಳ್ಳುಸುಳ್ಳೇ ಆಕಳಿಸಿ ''ಮುರಲೀಧರ ! ಮುರುಲೀಧರ '' ಎಂದು ದೇವರನ್ನು ನೆನೆಸುತ್ತ ಚಟುಕಿಬಾರಿಸಲು, ಒಬ್ಬ ದಾಸಿಯು ಪದ್ಮಿನಿಯ ಬಳಿಯಿಂದ ಹೊರಗೆ ಬಂದು ಒಂದು ಚೀಟಿ ಯನ್ನು ಬೈರಾಗಿಣಿಯ ಕೈಯಲ್ಲಿ ಕೊಟ್ಟು, ಒಳಗೆ ಹೋದಳು. ಆಗ ಬೈರಾಗಿಣಿಯು ಅದನ್ನು ಓದಿದಹಾಗೆ ಮಾಡಿ ನಿಟ್ಟುಸಿರುಬಿಟ್ಟು, ಸಣ್ಣ ಮೋರೆಯಿಂದ ಕಾಸಿಮನ ಕಡೆಗೆ ನೋಡಿ–

ಬೈರಾಗಿಣಿ–ಖಾನಸಾಹೇಬ, ಒಳ್ಳೆಯ ಕೆಲಸಕ್ಕೆ ವಿಘ್ನಗಳು ಬಹಳವೆಂಬ ಮಾತು ಸುಳ್ಳಲ್ಲ. ತನ್ನ ಲಗ್ನಕ್ಕೆ ಅಡ್ಡಾಗತಕ್ಕದ್ದೊಂದು ವಿಘ್ನವನ್ನು ಪದ್ಮಿನಿಯು ಇದರಲ್ಲಿ ಸೂಚಿಸಿರುವಳು. ಆ ಸುಂದರಿಯ ನಿಮ್ಮ ಮೇಲಿನ ಅಕೃತ್ರಿಮ ಪ್ರೇಮವಾದರೂ ಎಷ್ಟದು ? ಲಗ್ನವಾಗುವ ಮೊದಲು ನೀವು ನಿಷ್ಕಂಟಕರಾಗಿರಬೇಕೆಂದು ಪದ್ಮಿನಿಯು ಇಚ್ಛಿಸುವಳು.

ಕಾಸಿಮ–ನನಗಿರುವ ಅಂಥ ಪ್ರಬಲ ಕಂಟಕವಾದರೂ ಯಾವದು?

ಬೈರಾಗಿಣಿ–ಹೆಗ್ಗನೆಂಬ ವೀರನು ಮಾಧವಾಚಾರ್ಯನೆಂಬ ಬ್ರಾಹ್ಮಣನ ಆಧಿಪತ್ಯದಿಂದ ಕರ್ನಾಟಕದ ಸ್ವಾತಂತ್ರ್ಯಕ್ಕಾಗಿ ಯತ್ನಿಸುತ್ತಿರುವದು ನಿಮಗೆ ದೊಡ್ಡ ಕಂಟಕವೆಂದು ಚತುರ ಪದ್ಮಿನಿಯು ತಿಳಿದಿರುತ್ತಾಳೆ. ಖಾನಸಾಹೇಬ, ಎಷ್ಟು ಬೇಗನೇ ಪದ್ಮಿನಿಯ ಮನಸ್ಸು ತಿರುಗಿತು ನೋಡಿದಿರಾ? ನಿಮ್ಮಲ್ಲಿ ಅನುರಕ್ತಳಾದ ಆಕೆಯು ನಮ್ಮ ಹಿಂದೂ ಜನರ ಅಭಿಮಾನವನ್ನು ಬಿಟ್ಟಳೆಂಬದಿಷ್ಟೇ ಅಲ್ಲ, ಅವರ ನಾಶವನ್ನು ಸಹ ಚಿಂತಿಸುವಳು ! ಈಗ ಆಕೆಯು ನನ್ನನ್ನು ಒಳಗೆ ಕರೆದಿರುವರಿಂದ ಈಗ ಹೋಗಿಬರುತ್ತೇನೆ, ಎಂದು ಹೇಳಿದವಳೇ ಬೈರಾಗಿಣಿಯು ಒಳಗೆ ಪದ್ಮಿನಿಯ ಬಳಿಗೆ ಹೋದಳು.

ಹೀಗೆ ಪದ್ಮಿನಿಯು ಅಕಸ್ಮಾತ್ತಾಗಿ ಕಾಗದ ಕಳಿಸಿದ್ದನ್ನೂ, ಅದನ್ನು ಬೈರಾಗಿಣಿಯು ಓದಿ ಸಣ್ಣಮೋರೆ ಮಾಡಿ ಆಡಿದ ಮಾತನ್ನೂ, ಮಾತಾಡುತ್ತಾಡುತ್ತ ಆಕೆಯು ಏನೋ ಆಲೋಚಿಸಿ ಬರುವವಳಂತೆ ತಟ್ಟನೇ ಒಳಗೆ ಎದ್ದು ಹೋದದ್ದನ್ನೂ ನೋಡಿ ಕಾಸಿಮನು ಬೆರಗಾಗಿ ಕುಳಿತನು. ಈ ಹೊಯ್ಮಾಲೆಯರು ಏನೇನು ತಂತ್ರವನ್ನು ಒಡ್ಡುವರೆಂಬದು ಆತನಿಗೆ ತಿಳಿಯದಾಯಿತು.

ನಡುವೇ ಆ ದುಷ್ಟ ಹುಕ್ಕನ ಪ್ರಸಕ್ತಿಯನ್ನು ಇವರು ಏಕೆ ತೆಗೆದಿರಬಹುದು, ಅವನ ನಾಶಕ್ಕೂ ತನ್ನ ಲಗ್ನಕ್ಕೂ ಸಂಬಂಧವೇನಿರಬಹುದು ಎಂಬ ಗೂಢದ ಸ್ಪಷ್ಟೀಕರಣವು ಆತನಿಗೆ ನೆಟ್ಟಗೆ ಆಗಲೊಲ್ಲದು.ಇವರು ಈ ತಂತ್ರವನ್ನು ತನ್ನ ಹಿತಕ್ಕಾಗಿ ಒಡ್ಡುತ್ತಿರುವರೋ, ಅಥವಾ ಲಗ್ನಕ್ಕೆ ವಿಘ್ನರೂಪವಾಗಿ ಮುಂದೆ ಚಾಚುತ್ತಿರುವರೋ ಎಂಬದು ಆತನಿಗೆ ತಿಳಿಯದಾಯಿತು.ಅವನು ಹೀಗೆ ಮನಸ್ಸಿನಲ್ಲಿ ಏನೇನೋ ಆಲೋಚಿಸುತ್ತಿರಲು, ಬೈರಾಗಿಣಿಯು ಹೊರಗೆ ಬಂದು ಉಸುರ್ಗರೆದು ಸುಮ್ಮನೆ ಮೋರೆ ತಗ್ಗಿಸಿಕೊಂಡು ಕುಳಿತುಕೊಂಡಳು. ಆಕೆಯನ್ನು ನೋಡಿ ಕಾಸಿಮನು ಆತುರದಿಂದ–

ಕಾಸಿಮ–ಏಕೆ ಬೈರಾಗಿಣಿ, ಪದ್ಮಿನಿಯು ಏನು ಹೇಳಿದಳು ? ಲಗ್ನಕ್ಕೆ ಹೊಸ ವಿಘ್ನವೇನೂ ಉಂಟಾಗಿಲ್ಲವಷ್ಟೇ ?

ಬೈರಾಗಿಣಿ–ಖಾವಿಂದ, ಹೊಸ ವಿಘ್ನವೇನು ಉಂಟಾಗಬೇಕು ? ಹುಕ್ಕನ ನಾಶವಾಗದೇ ತಮ್ಮನ್ನು ಲಗ್ನವಾಗಲಿಕ್ಕಿಲ್ಲವೆಂದು ಪದ್ಮಿನಿಯು ಹಟಹಿಡಿದಿದ್ದಾಳೆ. ಹುಕ್ಕನ ಸಂಹಾರವಾದ ದಿನವೇ ಆ ದೇವರಾಜಪುತ್ರಿಯು ತಮ್ಮ ಪಾಣಿಗ್ರಹಣ ಮಾಡುವಳಂತೆ. ಆ ರಜಪೂತ ವೀರನ ನಾಶಕ್ಕಾಗಿ ಪದ್ಮಿನಿಯು ಒಂದು ಹಂಚಿಕೆಯನ್ನೂ ಸೂಚಿಸಿರುವಳು. ಆ ರಾಜಪುತ್ರಿಯ ಬುದ್ಧಿ ವೈಭವಕ್ಕಾಗಿ ನನಗೆ ಬಹಳ ಆಶ್ಚರ್ಯವಾಯಿತು.

ಕಾಸಿಮ—(ಅಸಮಾಧಾನದಿಂದ) ಬೈರಾಗಿಣೀ, ಪದ್ಮಿನಿಯ ಗುಣವರ್ಣನವು ಸಾಕು. ಆಕೆ ಹಂಚಿಕೆಯೇನು ಸೂಚಿಸಿರುವಳು ಮೊದಲು ಹೇಳು. ಬುದ್ಧಿಪೂರ್ವಕವಾಗಿ ನೀವಿಬ್ಬರೂ ಇಲ್ಲದ ವಿಘ್ನವನ್ನುಂಟುಮಾಡುವ ಹಾಗೆ ತೋರುತ್ತದೆ. ಇಂಥ ಬಲೆಗೆ ಕಾಸಿಮನು ಬೀಳಲಿಕ್ಕಿಲ್ಲವೆಂಬುದರ ನಿಶ್ಚಯವು ನಿನಗಿರಲಿ.

ಬೈರಾಗಿಣಿ–ಹಿತದ ಮಾತನ್ನು ವಿಘ್ನವೆಂದು ಭಾವಿಸಿದರೆ ಉಪಾಯವಿಲ್ಲ. ಇದ್ದ ಮಾತನ್ನು ನಿಮ್ಮ ಮುಂದೆ ಹೇಳಿದೆನು. ಇದಕ್ಕೂ ಹೆಚ್ಚಿಗೆ ನನ್ನಿಂದೇನು ಆಗುವಹಾಗಿದೆ ? ನಿಮ್ಮ ಲಗ್ನದ ಪ್ರಸಕ್ತಿಯಲ್ಲಿ ಇನ್ನು ನಾನು ಮನಸ್ಸು ಹಾಕುವದಿಲ್ಲೆಂಬದರ ನಿಶ್ಚಯವಾದರೂ ನಿಮಗಿರತಕ್ಕದ್ದು. ಇಬ್ಬರೂ ಹಟಮಾರಿಗಳಾದರೆ ಮಾಡುವದೇನು ? ಹೆಚ್ಚು ಹೇಳಿದರೆ ಇಬ್ಬರೂ ಸಿಟ್ಟಿಗೆ ಬರುವಿರಿ.

ಕಾಸಿಮ–(ಸೌಮ್ಯದಿಂದ) ಹಟವಲ್ಲ ಬೈರಾಗಿಣೀ, ನಿನ್ನ ಮಾತಿಗೆ ನಾನು ಸರ್ವಥಾ ಸಿಟ್ಟಾಗುವದಿಲ್ಲ, ಪದ್ಮಿನಿಯು ಏನು ಹಂಚಿಕೆ ಹೇಳಿರುವಳು ಬೇಗನೇ ಹೇಳು.

ಬೈರಾಗಿಣಿ–ಹುಕ್ಕನ ತಂದೆಯಾದ ಸಂಗಮರಾಜರವರು ನಿಮ್ಮ ಸೆರೆಯಲ್ಲಿರುವರಷ್ಟೇ ?

ಕಾಸಿಮ–ಬರಿಯ ಸಂಗಮರಾಜನೊಬ್ಬನೇ ಏಕೆ, ಮುದ್ದ, ಮಾರ ಎಂಬ ಆತನ ಇಬ್ಬರು ಚಿಕ್ಕಮಕ್ಕಳೂ ನನ್ನ ಸೆರೆಯಲ್ಲಿರುವರು.

ಬೈರಾಗಿಣಿ–ಹಾಗಿದ್ದರೆ ನಮ್ಮ ಚತುರ ರಾಜಪುತ್ರಿಯ ಹಂಚಿಕೆಯು ನಿಶ್ಚಯವಾಗಿ ಕೈಗೂಡುವದು. ನೀವು ಕರ್ನಾಟಕದಲ್ಲಿ ಡಂಗುರ ಮಾತ್ರ ಹೊಡೆಯಿಸತಕ್ಕದ್ದು.

ಕಾಸಿಮ–ಏನೆಂದು ಡಂಗುರ ಹೊಡೆಯಿಸಬೇಕು?

ಬೈರಾಗಿಣಿ–ನಮ್ಮ ಯವನವೀರರ ಉತ್ಕರ್ಷಕ್ಕೆ ಪ್ರತಿಬಂಧ ಮಾಡುತ್ತಿರುವ ಹುಕ್ಕನು ಇನ್ನು ಹದಿನೈದು ದಿನಗಳೊಳಗೆ ನಮಗೆ ಶರಣು ಬಾರದಿದ್ದರೆ ಇಬ್ಬರು ಮಕ್ಕಳು ಸಹಿತವಾಗಿ ಸಂಗಮ ರಾಜನನ್ನು ಶೂಲಕ್ಕೆ ಏರಿಸುವೆವೆಂದು ನಾಲ್ಕೂಕಡೆಗೆ ನೀವು ಡಂಗುರ ಹೊಡೆಯಿಸತಕ್ಕದ್ದು.

ಕಾಸಿಮ–ಇದರಿಂದೇನು ಪ್ರಯೋಜನವಾದೀತು?

ಬೈರಾಗಿಣಿ–ಹುಕ್ಕನ ಪಿತೃಭಕ್ತಿಯೂ, ಬಂಧುಪ್ರೇಮವೂ ನಿಮಗೆ ಗೊತ್ತಿಲ್ಲ. ಆತನು ನಿಮ್ಮ ಡಂಗುರವನ್ನು ಕೇಳಿ ಸುಮ್ಮನೆ ಇರಲಾರನು. ಇದ್ದಲ್ಲಿಂದ ಹೊರಬಿದ್ದು ನಿಮ್ಮ ಎದುರಿಗೆ ಬಂದು ನಿಲ್ಲುವನು, ಅಥವಾ ತಂದೆಯನ್ನು ಬಿಡಿಸುವ ಪ್ರಯತ್ನಮಾಡುವನು. ನಿಮ್ಮ ಎದುರಿಗೆ ಬಂದು ನಿಂತರಂತೂ ಸುಲಭವಾಗಿ ಕಾರ್ಯವು ಕೈಗೂಡಿದಂತಾಗುವದು. ಹಾಗೆ ಮಾಡದೆ ಹುಕ್ಕನು ತಂದೆಯನ್ನು ಬಿಡಿಸುವ ಯತ್ನಮಾಡಿದರೆ ಆತನು ನಿಮ್ಮ ಪ್ರತಾಪಕ್ಕೆ ಬಲಿಯಾಗುವನೆಂದು ನಾನು ಹೇಳುವ ಕಾರಣವಿಲ್ಲ. ಹ್ಯಾಗಾದರೂ ಆತನ ನಾಶವಾಗುವದು ನಿಶ್ಚಯವು. ಸುಮ್ಮನೆ ನೀವು ಆತನ ಗುಪ್ತ ಕಾರಸ್ಥಾನಗಳನ್ನು ನಡೆಯಗೊಟ್ಟು ಆತನನ್ನು ಬಲಿಷ್ಠನಾಗಮಾಡುವದು ನೆಟ್ಟಗಲ್ಲೆಂದು ಪದ್ಮಿನಿಯು ಹೇಳುವಳು. ಖಾವಿಂದ, ಪದ್ಮಿನಿಯ ಈ ವಿಚಾರವು ವಿಲಕ್ಷಣವಲ್ಲವೆ ? ಇದಕ್ಕೂ ಹೆಚ್ಚಿಗೆ ನಿಮ್ಮ ಹಿತವನ್ನು ಆಕೆಯೇನು ಬಯಸಬೇಕು? ಹುಕ್ಕನು ಕುರುಬರ ಹೆಗ್ಗನ ವೇಷದಿಂದಿರುವಾಗ ಒಮ್ಮೆ ನಿಮ್ಮ ಜನರ ಕೈಯೊಳಗಿಂದ ತನ್ನನ್ನು ಬಿಡಿಸಿಕೊಂಡದ್ದರ ಉಪಕಾರವನ್ನು ಕೂಡ ಪದ್ಮಿನಿಯು ಈಗ ಮರತೇಬಿಟ್ಟಿರುವಳು. ಸ್ತ್ರೀಯರ ಸ್ವಭಾವವು, ಅದರಲ್ಲಿಯೂ ಪದ್ಮಿನಿಯಂಥ ಸ್ವಚ್ಛಂದವೃತ್ತಿಯ ತರುಣಿಯರ ಸ್ವಭಾವವು ಅತ್ಯಂತ ಚಂಚಲವೆಂಬ ಮಾತು ಸುಳ್ಳಲ್ಲ. ನನ್ನ ಮಾತನ್ನು ಕೂಡ ಪದ್ಮಿನಿಯು ಈಗ ಕೇಳಲೊಲ್ಲಳು. ಖಾನಸಾಹೇಬರೊಡನೆ ಚಿರಕಾಲ ಸುಖಪಡಬೇಕಾದರೆ ಹುಕ್ಕನ ನಾಶವಾಗಲೇಬೇಕೆಂದು ಆಕೆಯು ಹಟ ಹಿಡಿದಿರುವಳು. ಆಕೆಯು ತನ್ನ ನಿಶ್ಚಯವನ್ನು ಬಿಡುವಹಾಗೆ ತೋರುವುದಿಲ್ಲ, ತಾವಾದರೂ ಆಕೆಯ ಹಿತದ ಮಾತನ್ನು ಯಾಕೆ ಅಲ್ಲಗಳೆಯ ಬೇಕು?

ಬೈರಾಗಿಣಿಯ ಈ ಮಾತನ್ನು ಕೇಳಿ ಕಾಸಿಮನು ಆಲೋಚಿಸತೊಡಗಿದನು. ಪದ್ಮಿನಿಯು ಹುಕ್ಕನ ನಾಶವನ್ನು ಚಿಂತಿಸುವದು ಆತನಿಗೊಂದು ವಿಧದಿಂದ ಸಮಾಧಾನಕರವಾಗಿ ತೋರಿತು. ಹುಕ್ಕನನ್ನು ಪದ್ಮಿನಿಯು ಪ್ರೀತಿಸದಿರುವದು ಸುಚಿಹ್ನವೆಂದು ಆತನು ತಿಳಿದನು. ಸೆರೆಯಲ್ಲಿ ಸಿಕ್ಕಿದ್ದ ಸಂಗಮರಾಜನನ್ನೂ, ಆತನ ಇಬ್ಬರು ಮಕ್ಕಳನ್ನೂ ಕೊಲ್ಲಿಸುವದು ಆತನಿಗೆ ಅಷ್ಟೊಂದು ದುಸ್ತರವಾಗಿದ್ದಿಲ್ಲ. ತನ್ನ ಮೇಲಧಿಕಾರಿಯಾದ ಕಾಂಚನಗಡದ ಮಲಿಕನಾಯಬನ ಒಪ್ಪಿಗೆ ಕೇಳುವ ಪ್ರಸಂಗವಿಲ್ಲದಿದ್ದರೆ ಪದ್ಮಿನಿಯ ಭ್ರಾಂತಿಯಿಂದ ಆ ತರುಣನು ಹಿಂದುಮುಂದಿನ ವಿಚಾರವಿಲ್ಲದೆ ಮಕ್ಕಳೊಡನೆ ಸಂಗಮರಾಜನನ್ನು ಸಹಜವಾಗಿ ಕೊಲ್ಲಿಸಲೂಬಹುದಾಗಿತ್ತು; ಆದರೆ ಸುವಿಚಾರಿಯೂ, ದೂರದರ್ಶಿಯೂ, ದಯಾವಂತನೂ ಆದ ಮಲಿಕನಾಯಬನು ಈ ಅನ್ಯಾಯದ ಕೊಲೆಗೆ ಒಪ್ಪಿಕೊಳ್ಳಲಾರನೆಂಬದು ಕಾಸಿಮನಿಗೆ ಗೊತ್ತಿತ್ತು. ಮಲಿಕನಾಯಬನ ಆಲೋಚನೆಯಂತೆಯೇ ಮಹಮ್ಮದ ತಘಲಕನು ನಡೆಯುವನೆಂಬುದನ್ನು ಕಾಸಿಮನು ಅರಿತಿದ್ದನು; ಅದ್ದರಿಂದ ಕಾಸಿಮನು ರಾಜಪರಿವಾರದ ಕೊಲೆಗೆ ಹಿಂದುಮುಂದು ನೋಡತೊಡಗಿದನು.

ಹೀಗೆ ಕಾಸಿಮನು ಅಸಮಾಧಾನದಿಂದ ಉದಾಸೀನನಾದದ್ದನ್ನು ಧೂರ್ತಳಾದ ಬೈರಾಗಿಣಿಯು ತಿಳಿದು ಆತನನ್ನು ಕುರಿತು– ''ಖಾನಸಾಹೇಬ, ಪ್ರಜಾಕ್ಷೋಭಕರವಾದ ಈ ರಾಜಪರಿವಾರದ ಕೊಲೆಯನ್ನು ನೀವು ಮಾಡದಿದ್ದರೂ ಚಿಂತೆಯಿಲ್ಲ. ಹುಕ್ಕನನ್ನು ಹಿಡಿಯುವ ಮಟ್ಟಿಗಾದರೂ ತಾವು ಈ ಹಂಚಿಕೆ ಮಾಡಬೇಕು. ಈ ಯುಕ್ತಿಯಿಂದ ಹುಕ್ಕನನ್ನು ಸೆರೆಯಲ್ಲಿಟ್ಟು ಬಿಟ್ಟರೆ ನೀವು ನಿಷ್ಕಂಟಕರಾಗುವಿರಿ. ಆಮೇಲೆ ಪದ್ಮಿನಿಯೊಡನೆ ಚಿರಕಾಲ ಸುಖಪಡುವಿರಂತೆ; ಇದು ಪುಂಡ ಹುಕ್ಕನನ್ನು ಹಿಡಿಯುವದೊಂದು ಯುಕ್ತಿಯೆಂದು ನೀವು ನಿಮ್ಮ ಮೇಲಧಿಕಾರಿಯಾದ ಮಲಿಕನಾಯಬನಿಗೆ ತಿಳಿಸಿ ಆತನ ಒಪ್ಪಿಗೆ ಪಡೆಯಿರಿ. ಆತನಿಗೆ ಏನು ಬರೆಯಬೇಕೆಂಬದನ್ನು ಸಹ ಚತುರ ಪದ್ಮಿನಿಯು ಬರೆದುಕೊಟ್ಟಿದ್ದಾಳೆ, ನೀವು ಉಪಯೋಗಿಸಿದರೆ ಉಪಯೋಗಿಸಿರಿ'' ಎಂದು ಹೇಳಿ ಪದ್ಮಿನಿಯು ಬರೆದುಕೊಟ್ಟಿದ್ದೊಂದು ಕಾಗದವನ್ನು ಕಾಸಿಮನ ಕೈಯಲ್ಲಿ ಕೊಟ್ಟಳು. ಕಾಸಿಮನು ಆತುರದಿಂದ ಅದನ್ನು ತೆರೆದು ಓದಹತ್ತಿದನು. ಓದುತ್ತಹೋದಂತೆ ಕಾಸಿಮನ ಮನಸ್ಸಿಗೆ ಸಮಾಧಾನವಾಗುತ್ತ ಹೋಯಿತು. ಆತನು ಪದ್ಮಿನಿಯ ಚಾತುರ್ಯದ ಬರಹಕ್ಕಾಗಿ ಪರಮಾಶ್ಚರ್ಯಪಟ್ಟನು. ಇಷ್ಟೆಲ್ಲ ಮನಃಪೂರ್ವಕವಾಗಿ ಮಾಡುತ್ತಿರುವ ಪದ್ಮಿನಿಯ ಮನಸ್ಸಿನಲ್ಲಿ ವಿಕಲ್ಪವಿಲ್ಲೆಂದು ಆತನು ಭಾವಿಸಹತ್ತಿದನು. ಕಾಗದ ಓದಿ ಸಮಾಧಾನಪಟ್ಟು, ಆತನು ಬೈರಾಗಿಣಿಗೆ–''ಬೈರಾಗಿಣೀ, ನೀನು ಆಗಲೆ ಅಂದಂತೆ ಪದ್ಮಿನಿಯ ಚಾತುರ್ಯಕ್ಕೆ ಜೋಡಿಲ್ಲ ಬಿಡು. ಇದರಂತೆ ಬರೆದು ಕಳಿಸಿದರೆ ಮಲಿಕನಾಯಬನು ನನ್ನ ಮಾತಿಗೆ ನಿಶ್ಚಯವಾಗಿ ಒಪ್ಪಿಕೊಳ್ಳುವನು'' ಎಂದು ಹೇಳಿ, ನಾಳೆಗೆ ಡಂಗುರ ಹೊಡೆಯಿಸತಕ್ಕದ್ದೆಂದು ನುಡಿದು ಬೈರಾಗಿಣಿಯ ಒಪ್ಪಿಗೆಯಿಂದ ಕಾಸಿಮನು ಹೊರಟುಹೋದನು.

ಪದ್ಮಿನಿಯ ವಿವಾಹದ ವಿಚಾರದಿಂದ ವಿವೇಕಭ್ರಷ್ಟನಾಗಿದ್ದ ಕಾಸಿಮನು ಮರುದಿನವೇ ಮಲಿಕನಾಯಬನಿಗೊಂದು ಪತ್ರವನ್ನು ಬರೆದು ಕಳಿಸಿದನು. ಕಾಸಿಮನ ಈ ವಿಚಾರದ ಬರಹವು ಮಲಿಕನಾಯಬನ ಮನಸ್ಸಿಗೆ ಬರಲಿಲ್ಲ. ಈ ರಾಜವಂಶದವರ ಕೊಲೆಯಿಂದ ಪ್ರಜಾಕ್ಷೋಭವಾಗುವ ಸಂಭವವು ವಿಶೇಷವಾಗಿದ್ದದ್ದರಿಂದಲೂ, ಈ ಕೃತಿಯು ರಾಜನೀತಿಗೂ– ಪ್ರಜಾನುರಾಗಕ್ಕೂ ಒಪ್ಪತಕ್ಕದ್ದಲ್ಲದ್ದರಿಂದಲೂ ಅದಕ್ಕೆ ಆಸ್ಪದ ಕೊಡುವದು ತನ್ನ ಶೀಲಕ್ಕೆ ಭೂಷಣವಲ್ಲವೆಂದು ಆತನು ಭಾವಿಸಿದನು. ಆತನು ವಿಚಾರಿಯೂ, ದೂರದರ್ಶಿಯೂ, ದಯಾವಂತನೂ ಆಗಿದ್ದನು. ಈಗ ಸದ್ಗುಣಗಳ ವರ್ಚಸ್ಸು ತಘಲಕಮಹಮ್ಮದನ ಮೇಲೆ ಚೆನ್ನಾಗಿ ಇದ್ದದ್ದರಿಂದ ಈತನ ಆಲೋಚನೆಯಿಂದಲೇ ತಘಲಕನು ಆನೆಗುಂದಿಯ ಪಟ್ಟದಮೇಲೆ ದೇವರಾಜನನ್ನು ಕೂಡಿಸಿ ಹಿಂದೂಜನರನ್ನು ಕೆಲಮಟ್ಟಿಗೆ ಸಮಾಧಾನಪಡಿಸಿದ್ದನು. ತಘಲಕನು ದಕ್ಷಿಣದ ಅಧಿರಾಜನಾಗಿದ್ದು, ಮಲಿಕನಾಯಬನು ಆನೆಗುಂದಿಯ ರಾಜ್ಯದ ಅಧಿಕಾರಿಯಾಗಿ ನಿಯಮಿಸಲ್ಪಟ್ಟಿದ್ದನು. ಬರಬರುತ್ತ ಕರ್ನಾಟಕವು ಜಾಗ್ರತವಾಗಹತ್ತಿ ಅದರ ಸ್ಥಿತಿಯು ದಿನದಿನಕ್ಕೆ ಸೂಕ್ಷ್ಮವಾಗತೊಡಗಿರುವದು ಮಲಿಕನಾಯಬನ ಕಣ್ಣಿಗೆ ಕಾಣುತ್ತಿತ್ತು. ಹೆಗ್ಗನು ತನ್ನ ಹೆಸರನ್ನೂ, ಕುರುಬನ ವೇಷವನ್ನೂ ಬಿಟ್ಟುಕೊಟ್ಟು ಹುಕ್ಕರಾಜನೆಂಬ ಹೆಸರಿನಿಂದ ಮಾಧವಾಚಾರ್ಯರ ಆಧಿಪತ್ಯದ ಕೆಳಗೆ ಸ್ವರಾಜ್ಯಸ್ಥಾಪನೆಯ ಕಾರ್ಯವನ್ನು ಪ್ರಸಿದ್ಧರೀತಿಯಿಂದ ಸಾಗಿಸಹತ್ತಿದ್ದನು. ಸಣ್ಣ

ಪುಟ್ಟ ಕೋಟೆಗಳು ಆತನ ಕೈಸೇರಿ ಆತನ ಸೇನಾಬಲವು ಭರದಿಂದ ಹೆಚ್ಚುತ್ತಲಿತ್ತು. ವಿದ್ಯಾರಣ್ಯರ ದೀರ್ಘವಾದ ದೈವೀಪ್ರಯತ್ನದಿಂದ ಕನ್ನಡಿಗರಲ್ಲಿ ವಿಲಕ್ಷಣ ಜಾಗ್ರತೆಯಾಗತೊಡಗಿ ಲೋಕ ಸಂಗ್ರಹ ವ್ಯಾಪಾರವು ಒತ್ತರದಿಂದ ಸಾಗಿತ್ತು. ಇದಕ್ಕೆ ತೀರ ವಿರುದ್ಧವಾದ ಸ್ಥಿತಿಯು ಮುಸಲ್ಮಾನರದಿತ್ತೆಂದು ಹೇಳಬಹುದು. ತಘಲಕಮಹಮ್ಮದನು ಅಸುರೀ ಸಂಪತ್ತನ್ನು ಹೆಚ್ಚಿಸುವದಕ್ಕಾಗಿ ತನ್ನ ಅಸುರೀಬಲದಿಂದ ಪ್ರಜಾಜನರನ್ನು ಬಗ್ಗುಬಡಿದು ಮೇಲಕ್ಕೆ ತಲೆ ಎತ್ತದಂತೆ ಮಾಡುವದಕ್ಕಾಗಿ ಅಮಾನುಷ ಕ್ರೂರ ವ್ಯಾಪಾರಗಳನ್ನು ಒಂದೇಸವನೆ ನಡೆಸಹತ್ತಿದನು; ಇದರಿಂದ ಕ್ರಿಯೆಗೆ ತಕ್ಕ ಪ್ರತಿಕ್ರಿಯೆಯನ್ನು ಸಿದ್ಧಾಂತದಂತೆ ನಾಲ್ಕೂಕಡೆಯಲ್ಲಿ ಬಂಡಾಯಗಳೇಳತೊಡಗಿ ತಘಲಕನ ಮುಂಗೈಜೋರಿನ ಸಂಪಾದನದ ಬಿಗುವು ಕಡಮೆಯಾಗಹತ್ತಿತ್ತು. ಇದನ್ನರಿತು ಆತನು ದ್ವೇಷದಿಂದ ಒಂದು ಕಡೆಯ ಬಂಡಾಯವನ್ನು ಮುರಿಯುವದರೊಳಗೆ ಬೇರೆಕಡೆಯಲ್ಲಿ ಬಂಡಾಯಗಳು ಏಳುತ್ತಲಿದ್ದವು. ಆತನು ಸಂಪಾದಿಸಿದ ರಾಜ್ಯಕ್ಕೆ ಸ್ಥಿರ–ಸ್ಥಾವರತೆಗಳು ಸರ್ವಥಾ ಇದ್ದಿಲ್ಲ. ಪ್ರಜಾನುರಾಗವಿಲ್ಲದೆ, ಪ್ರಜೆಗಳ ಕಲ್ಯಾಣಕ್ಕಾಗಿ ಮನಃಪೂರ್ವಕವಾಗಿ ಯತ್ನಿಸದೆ ಕೇವಲ ಸ್ವಾರ್ಥದ ಬಲೆಗೆ ಬಿದ್ದು ಕೇವಲ ಮುಂಗೈಜೋರಿನ ಹೆಮ್ಮೆಯಿಂದ ರಾಜ್ಯವಾಳುವ ಅರಸರ ಗತಿಯು ಹೀಗೆಯೇ ಸರಿ. ಇಂಥವರು ಒಂದಿಲ್ಲೊಂದು ದಿನ ರಾಷ್ಟ್ರಭ್ರಷ್ಟರಾಗಿ ನಾಶಹೊಂದುವರೆಂಬದನ್ನು ಇತಿಹಾಸವು ಸಾರಿಸಾರಿ ಹೇಳುತ್ತಿರುವದು; ಆದರೂ ರಾಜ್ಯಮದದಿಂದ ಅಂಧರಾಗಿ ಹೋಗಿರುವವರ ಕಣ್ಣುಗಳು ತೆರೆಯುವದಿಲ್ಲ; ಅಂಥವರು ಆಗಿನಿಂದ ಈಗಿನವರೆಗೂ ನಾಶ ಹೊಂದುತ್ತಲೇ ಬಂದಿರುವರು; ಮುಂದೆಯೂ ನಾಶಹೊಂದುವರು.

ವಿಚಾರವಂತನಾದ ಮಲಿಕನಾಯಬನ ಮನಸ್ಸಿನಲ್ಲಿ ಮೇಲಿನ ವಿಚಾರಗಳೆಲ್ಲ ಬಂದು ಹೋಗಿದ್ದವು. ಆತನು ಮನಸ್ಸಿನಲ್ಲಿ–ಈಗ ನಮ್ಮ ಸೆರೆಯಲ್ಲಿರುವ ಸಂಗರಾಜನನ್ನೂ, ಆತನ ಇಬ್ಬರು ಮಕ್ಕಳನ್ನೂ ಕೊಲ್ಲಿಸಬಹುದಲ್ಲದೆ, ದೀರ್ಘಪ್ರಯತ್ನದಿಂದ ಹುಕ್ಕನನ್ನು ಬೇರೆ ಹಲವು ಮುಂದಾಳುಗಳನ್ನೂ ಸೆರೆಯಲ್ಲಿಡಬಹುದು, ಆದರೆ ಇದರಿಂದ ಪ್ರಯೋಜನವೇನಾಗುವದು ? ಕಾಲಕ್ಕನುಸರಿಸಿ ಕನ್ನಡಿಗರಲ್ಲುಂಟಾಗಿರುವ ವಿಲಕ್ಷಣ ಜಾಗ್ರತಿಯು ವ್ಯಕ್ತಿನಿಷ್ಠವಾಗಿರದೆ, ಸಮಷ್ಟಿನಿಷ್ಠವಾಗಿದ್ದರೆ, ಒಬ್ಬನ ಸ್ಥಳದಲ್ಲಿ ಹತ್ತುಜನರು ಎದ್ದುಕೊಡ್ರುವ ಸಂಭವವಿರುತ್ತದೆ. ಕಾಸಿಮನೇನೋ ಒಳ್ಳೆ ಜಾಣತನದಿಂದ ಪತ್ರ ಬರೆದಿರುವನು. ಹುಕ್ಕನನ್ನು ಸೆರೆಹಿಡಿಯುವದರಿಂದ ಕನ್ನಡಿಗರ ಕಾಟವು ಕಡಿಮೆಯಾಗುವದೆಂದು ಆತನು ಬರೆಯುವದೂ ನಿರರ್ಥಕವಾದದ್ದಲ್ಲ; ಆದರೆ ಕನ್ನಡಿಗರು ಕೇವಲ ಹುಕ್ಕನಂಥ ಕೆಲವರ ಕಿಳ್ಳಿಯಿಂದ ನಮ್ಮನ್ನು ಕಾಡುವರೋ, ಅಥವಾ ನಮ್ಮನ್ನು ಪರಿಪರಿಯಾಗಿ ಕಾಡಿ ನಮ್ಮನ್ನು ಹೊರಗಟ್ಟಿ ಸ್ವತಂತ್ರರಾಗಬೇಕೆಂಬ ಓಜಸ್ವಿತೆಯು ಅವರಲ್ಲಿ ಸ್ವಾಭಾವಿಕವಾಗಿಯೇ ಉತ್ಪನ್ನವಾಗಿರುವದೋ ಎಂಬುದನ್ನು ವಿಚಾರಮಾಡ ಬೇಕಾಗುತ್ತದೆ. ಜನರಲ್ಲಿ ಅಂಥ ಓಜಸ್ವಿತೆಯು ತಾನಾಗಿ ಹುಟ್ಟಿದ್ದರೆ, ಬರಿಯ ಹುಕ್ಕನಂಥ ಮುಂದಾಳುಗಳನ್ನು ಸೆರೆಯಲ್ಲಿರಿಸುವದರಿಂದ, ಅಥವಾ ಕೊಲ್ಲಿಸುವದರಿಂದ ಪ್ರಯೋಜನ ವೇನಾಗುವದು ? ಹೀಗೆ ಮಾಡುವದರಿಂದ ಜನತಾರೂಪವೃಕ್ಷಕ್ಕೆ ಸಂತಾಪರೂಪಸಾಧನದ ಗೆಯ್ತದಿಂದ ವಿಷಯಾಸಕ್ತಿರೂಪ ಕಸ ತೆಗೆದು ಸ್ವಾರ್ಥತ್ಯಾಗರೂಪ ಕಸುವಿನ ಗೊಬ್ಬರ ಹಾಕಿ ದೊಡ್ಡ ದೊಡ್ಡ ಟೊಂಗೆಗಳ

ಕಸಿಮಾಡಿದಂತಾಗುವದು. ಇದರಿಂದ ಆ ಮುಂದಾಳುಗಳ ಓಜಸ್ವಿತೆಯು ಸಾಮಾನ್ಯ ಜನರಲ್ಲಿಯೂ ಆವಿರ್ಭವಿಸಿ ಜನತೆಯ ಉತ್ಸಾಹ ಬಲಗಳು ತಟ್ಟನೇ ಹೆಚ್ಚುವವು! ಆದ್ದರಿಂದ ನಮ್ಮ ಅಧಿರಾಜ್ಯವು ಕೆಲದಿನಗಳಾದರೂ ದಕ್ಷಿಣದಲ್ಲಿರಬೇಕೆಂದು ನಾವು ಇಚ್ಛಿಸುತ್ತಿದ್ದರೆ, ನಾವು ಪ್ರಜಾನುರಂಜನವನ್ನೇ ಮಾಡತಕ್ಕದ್ದಲ್ಲದೆ, ಪ್ರಜಾಕ್ಷೋಭವುಂಟಾಗುವಂಥ ಕ್ರೂರೋಪಾಯಗಳನ್ನು ಸರ್ವಥಾ ಯೋಚಿಸಲಾಗದು, ಎಂದು ಯೋಚಿಸಿ, ಆತನು ಕಾಸಿಮನಿಗೆ ನಿಷೇಧಿಸಿ ಪತ್ರ ಬರೆಯಬೇಕೆನ್ನುತ್ತಿರಲು, ಸ್ವತಃ ಕಾಸಿಮನೇ ಮಲಿಕನ ಬಳಿಗೆ ಬಂದನು. ಐಶ್ವರ್ಯಾದಿಗಳ ದುರಾಸೆಗೆ ಬಿದ್ದು ಬೇಕಾದಂಥ ಕ್ರೂರಕರ್ಮಗಳನ್ನು ಮಾಡಲಿಕ್ಕೆ ಹೇಸದಂಥ ನೀಚ ರಾಜ್ಯಾಧಿಕಾರಿಗಳಂತೆ, ಪದ್ಮಿನಿಯ ಪ್ರಾಪ್ತಿಯ ದುರಾಸೆಗೆ ಬಿದ್ದಿದ್ದ ಕಾಸಿಮನಂಥ ನೀಚಾಧಿಕಾರಿಯು ಎಂಥ ಅವಿಚಾರದ ಕೆಲಸ ಮಾಡಲಿಕ್ಕೂ ಹಿಂದುಮುಂದು ನೋಡುವ ಹಾಗಿದ್ದಿಲ್ಲ. ತನ್ನ ಪತ್ರವನ್ನು ಮಲಿಕನು ಮನ್ನಿಸಲಿಕ್ಕಿಲ್ಲವೆಂತಲೇ ಆ ದುಷ್ಟನು ಪತ್ರದ ಹಿಂದೆಯೇ ಧಾವಿಸಿ ಬಂದಿದ್ದನು. ಆಗ ಅವರಿಬ್ಬರ ನಡುವೆ ಬಹಳಹೊತ್ತು ಅರೆದಾಟವಾಯಿತು. ತನ್ನ ವಿಚಾರದಂತೆ ನಡೆಯದಿದ್ದರೆ ದಕ್ಷಿಣದಲ್ಲಿರುವ ನಮ್ಮ ಮುಸಲ್ಮಾನರ ಪರಿಣಾಮವು ನೆಟ್ಟಗಾಗದೆಂತಲೂ, ಕನ್ನಡಿಗರಲ್ಲಿ ತಮ್ಮ ಒಗರು ಉಳಿಯದೆಂತಲೂ, ಹೆಚ್ಚುಕಡಿಮೆಯ ಬಗ್ಗೆತಾನು ಜವಾಬುದಾರನಲ್ಲೆಂತಲೂ ಆತನು ಸ್ಪಷ್ಟವಾಗಿ ಹೇಳಿದನು. ಆಗ ಮುಸಲ್ಮಾನರ ಸ್ಥಿತಿಯು, ಕಾಸಿಮನಂಥ ವೀರರನ್ನು ನಿರಾಕರಿಸಿದರೆ ಹಿತವಾಗುವಹಾಗಿದ್ದಿಲ್ಲ; ಆದ್ದರಿಂದ ನೀತಿಗೂ ನ್ಯಾಯಕ್ಕೂ ಒಪ್ಪದ ಕಾಸಿಮನ ವಿಚಾರವನ್ನು ''ವಿನಾಶಕಾಲೇ ವಿಪರೀತ ಬುದ್ಧಿಃ'' ಎಂಬ ನಿಯಮದಂತೆ, ಮಲಿಕನಾಯಬನಂಥ ನೀತಿಜ್ಞನು ಕೂಡ ಒಪ್ಪಿಕೊಂಡು—'ಹುಕ್ಕನನ್ನು ಸೆರೆಹಿಡಿಯುವ ಉದ್ದೇಶದಿಂದ ಹಾಗೆ ಡಂಗರು ಹೊಯಿಸಬಹುದು'' ಎಂದು ಅಭಿಪ್ರಾಯ ಪಟ್ಟನು!!

## ಸೌಜನ್ಯದ ಸುಲಿಗೆ !

ದೇವಿಯಕೊಳ್ಳದ ನೆರೆಯ ಅರಣ್ಯವು. ಐದುತಾಸು ತುಂಬಿ ಆರರ ಅಮಲು ಆಗಿರಬಹುದು. ಬೇಸಿಗೆಯ ಕಾಲವಾದದ್ದರಿಂದ ಬಿಸಿಲು ರಣಗುಟ್ಟುತ್ತಿತ್ತು. ಆ ದಟ್ಟವಾದ ಅರಣ್ಯದಲ್ಲಿಯೂ ಬಿಸಿಲುತಾಪದಿಂದ ಪ್ರಾಣಿ ಮಾತ್ರಗಳು ಜರ್ಜರವಾಗುತ್ತಿದ್ದವೆಂದಬಳಿಕ, ಬೈಲುಸೀಮೆಯ ಬೇಸಿಗೆಯ ಪ್ರಖರತೆಯನ್ನು ಹೆಚ್ಚಿಗೆಯೇನು ವರ್ಣಿಸಬೇಕು ? ಬಿಸಿಲ ತಾಪವು ಹೆಚ್ಚಾದದ್ದರಿಂದ ಆ ಅರಣ್ಯದೊಳಗಿನ ಗಿಡಗಳ ನೆರಳು ತಾಪದಾಯಕವಾಗಿಹೋಗಿ, ಆ ನೆರಳಲ್ಲಿ ಹೋದರೆ ಕರಿಯ ಬಿಸಿಲು, ನೆರಳಿಲ್ಲದಲ್ಲಿ ಹೋದರೆ ಬಿಳಿಯ ಬಿಸಿಲು ಎಂಬಂತಾಗಿ ಎಲ್ಲಿಹೋದರೂ ಬಿಸಿಲೇ ಬಿಸಿಲಾಗಿ ಹೋಗಿತ್ತು. ಪಶು—ಮೃಗಗಳು ಗವಿ—ಹೊದರುಗಳಲ್ಲಿ ಸೇರಿ ಉಬ್ಬಸಪಡುತ್ತ ಹೊರಗೆ ಬರಲಾರದೆ ಕಣ್ಣುಮುಚ್ಚಿಕೊಂಡು ಸುಮ್ಮನೆ ಬಿದ್ದುಕೊಂಡು

ಬಿಟ್ಟಿದ್ದವು; ಆಹಾರದ ಪರಿವೆಯೂ ಅವಕ್ಕಿದ್ದಿಲ್ಲ. ಹಕ್ಕಿಪಕ್ಕಿಗಳು ತಮ್ಮ ಗೂಡುಗಳಲ್ಲಿರಲಾರದೆ ಚಿಗುರೆಲೆಗಳ ಸಂದಿಯಲ್ಲಿ ಸೇರಿ ಸದ್ದುಮಾಡದೆ ಮೆಲ್ಲನೆ ಕಣ್ಣು ಮುಚ್ಚುತ್ತ ತೆರೆಯುತ್ತ ಕಾಲಕಳೆಯುತ್ತಿದ್ದವು. ಹೊರಬಿದ್ದರೆ ಹುರಪಳಿಸಿಹೋದೇವೆಂಬ ಅಂಜಿಕೆಯಿಂದ ಹುಳಹುಪ್ಪಡಿಗಳೂ ಸುಳಿಯದಂತಾಗಿದ್ದವು. ಹಾದಿಕಾರರು ಜೋರನೆ ಬೆವತು ಬಾಯಾರಿ ಬಸವಳಿದು ಮುಂದಕ್ಕೆ ಹೆಜ್ಜೆಯಿಡಲಾಗದೆ ಗಾಳಿಬೀಸಿಕೊಳ್ಳುತ್ತ ಜಲಾಶಯದ ದಂಡೆಯ ಗಿಡದ ನೆರಳುಹಿಡಿದು, ಕುಳಿತುಕೊಂಡು ನೀರುಕುಡಿದು ಕುಡಿದು ಹೊಟ್ಟೆಯುಬ್ಬಿದರೂ ನೀರಡಿಕೆ ಹೋಗದಾಗಲು ಉಬ್ಬಸಪಡುತ್ತಿದ್ದರು. ನಿಂತ ನೀರು ಬೆಚ್ಚಗೆ, ಬೀಸುವ ಗಾಳಿಯು ಬೆಚ್ಚಗೆ, ಹಾಯುವ ಹಾದಿ ಬೆಚ್ಚಗೆ, ಹೊದ್ದ ಆಕಾಶ ಬೆಚ್ಚಗೆ ಹೀಗಾಗಿ ತಂಪು ಎಲ್ಲಿ ಸಿಕ್ಕೀತೆಂಬದನ್ನರಿಯದೆ ಆ ಹಾದಿಕಾರರು ಊದಿಯಾದರೂ ತಂಪುಮಾಡಿಕೊಳ್ಳಬೇಕೆಂಬ ಭ್ರಾಂತಿಯಿಂದ ಸಂತಾಪದ ತಮ್ಮ ಸುಯ್ಯಲರೂ ಬಿಸಿ ಎಂಬ ಮಾತನ್ನು ಮರೆತುಬಿಟ್ಟು ಊದಿಯೂದಿಕೊಂಡು ಆಯಾಸಪಡುತ್ತಿದ್ದರು! ಅಲ್ಲಲ್ಲಿ ಅರಣ್ಯದೊಳಗಿರುವ ಜಲಾಶಯಗಳ ನೀರೆಲ್ಲ ಕಾದುಹೋದದ್ದರಿಂದ ಅವುಗಳೊಳಗಿನ ಮೀನುಗಳು ಪುಟನೆಗೆದು ಮೇಲಕ್ಕೆ ಬರಲಾರದೆ ಜಲಾಶಯದ ಬುಡಬುಡಕ್ಕೆ ಹೋಗುತ್ತಿದ್ದವು. ದಂಡೆಯಮೇಲಿನ ಸುರಗಿ ಹೊನ್ನೆ ಮೊದಲಾದ ಹೂಗಿಡಗಳು ತಮ್ಮ ಜೀವನವನ್ನು ಅಟ್ಟಿಸಿಬಿಡಬಾರದೆಂದು ಅರ್ಕನನ್ನು ಅಂಗಲಾಚಿ ಬೇಡಿಕೊಂಡು ಭಯದಿಂದ ಅರ್ಚಿಸುವಂತೆ ಪುಷ್ಪಪರಾಗವನ್ನು ಸುರಿಸುತ್ತಿದ್ದವು. ವಸಂತ ಸಮಯವಾದದ್ದರಿಂದ ಅಲ್ಲಲ್ಲಿ ಅರಣ್ಯದೊಳಗೆ ಅರಳಿರುವ ಹೂವುಗಳ ಮಕರಂದ ರಸವು ಸುಯ್ಯನೆ ಸುಟ್ಟುಹೋಗಿರಲು, ತುಂಬಿಗಳು ತಂಡತಂಡದಿಂದ ಹೂಗೊಂಚಲುಗಳಿಗೆ ಅಂಡಲೆಯುವಾಗ ಹತ್ತಿದ ಕಾದ ಪುಷ್ಪಪರಾಗದ ಬಿಸಿಯನ್ನು ತಡೆಯಲಾರದೆ ಭುಯಗುಟ್ಟುತ್ತ ಹಿಂದಹಿಂದಕ್ಕೆ ಹಾರುತ್ತಿದ್ದವು. ಬಿಸಿಲತಾಪವು ತಾಳಲಾರದೆ ಕೆರೆ-ಕಟ್ಟೆಗಳನ್ನು ನುಗ್ಗಿದ್ದ ಕಾಡುಕೋಣಗಳು ಕಾದ ನೀರಿನಿಂದ ತಾಪದಲ್ಲಿ ಶಾಂತವಾಗದಿರಲು, ತಳದ ತಂಪು ಕೆಸರನ್ನು ಮೈಗೆ ಮೆತ್ತಿಕೊಳ್ಳುವ ಭರದಲ್ಲಿ ಕೆರೆಗಳನ್ನು ಕಲಕಿಸಿ ರಾಡಿಮಾಡುತ್ತಿದ್ದವು. ಒಟ್ಟಿಗೆ ತನ್ನ ಉದಯಾಸ್ತಗಳಿಂದ ಜಗತ್ತಿನ ಅಸ್ತಿತ್ವಕ್ಕೆ ಕಾರಣನಾಗಿದ್ದ ಸಾಕ್ಷಾತ್ ದಿನಕರನು, ತನ್ನ ಚಂಡಕಿರಣಗಳ ತೀವ್ರತೆಯಿಂದ ದಯಾಶೂನ್ಯನೆಂದು ಈಗ ಪ್ರಾಣಿಮಾತ್ರಗಳಿಂದ ದೂಷಿಸಿಕೊಳ್ಳತೊಡಗಿದನು.

ಇಂಥ ರಣಗುಟ್ಟುವ ಮಧ್ಯಾಹ್ನದ ಬಿಸಿಲಿನಲ್ಲಿ ಒಬ್ಬ ತರುಣ ಮುಸಲ್ಮಾನ ರಾವುತನು ಬಹು ವೇಗದಿಂದ ದೇವಿಯಕೊಳ್ಳದ ಅರಣ್ಯದೊಳಗಿಂದ ಸಾಗಿದ್ದನು. ವಾಯುವೇಗದಿಂದ ಸಾಗಿದ್ದ ಆತನನ್ನೂ, ಆತನ ಬೆಟ್ಟದಂಥ ಕುದುರೆಯನ್ನೂ ಸ್ವಾಭಾವಿಕವಾಗಿ ಹೊರಹೊರಗಿನಿಂದ ನೋಡಿದರೂ ಆತನ ಘನವಂತಿಕೆಯು ಚೆನ್ನಾಗಿ ವ್ಯಕ್ತವಾಗಿ ನೋಡುವವರ ಚಿತ್ತಹರಣವಾಗಿ ಹೋಗುತ್ತಿತ್ತು. ಆತನು ಸಾಗಿರುವ ಆ ರೀತಿಯನ್ನು ನೋಡಿದರೆ, ಅವನು ಸಾಗಿದ್ದನೆನ್ನುವದಕ್ಕಿಂತ, ಅವನ ಕುದುರೆಯು ಕೈಮೀರಿ ಅವನನ್ನು ಎತ್ತೊಸಾಗಿಸಿಕೊಂಡು ಹೋಗುತ್ತಿತ್ತೆಂದು ಹೇಳುವದು ಸಯುಕ್ತಿಕವಾಗಬಹುದು; ಯಾಕಂದರೆ ಆ ಯವನವೀರನು ತನ್ನ ಕುದುರೆಯನ್ನು ನಿಲ್ಲಿಸುವದಕ್ಕಾಗಿ ಮಾಡಿದ ಯತ್ನವೆಲ್ಲ ನಿಷ್ಫಲವಾಗಿ, ಅವನು ಯತ್ನ ಮಾಡಿಮಾಡಿದಂತೆ ಅವನ ಆ ಪ್ರಚಂಡ

ಕುದುರೆಯು ಆವೇಶಗೊಂಡು ಹೆಚ್ಚು ಹೆಚ್ಚು ವೇಗದಿಂದ ಓಡತೊಡಗಿತ್ತು. ಇದು ತಗ್ಗು ಇದು ದಿನ್ನೆ, ಇದು ಏರಿ ಇದು ಇಳಕಲು, ಇದು ಗಿಡ, ಇದು ನೀರು ಎಂಬದರ ಅರಿವು ಅದಕ್ಕೆ ಇದ್ದಂತೆ ತೋರಲಿಲ್ಲ. ಮೇಲೆ ಕುಳಿತುಕೊಂಡಿದ್ದ ತನ್ನ ಒಡೆಯನ ಪರಿವೆಯಂತೂ ಅದಕ್ಕೆ ಇದ್ದೇ ಇಲ್ಲ. ಬಹಳ ಹೇಳುವದೇನು ? ಹೀಗೆ ಓಡಿದರೆ ತನ್ನ ಗತಿಯೇನಾದೀತೆಂಬದರ ವಿಚಾರವೂ ಅದಕ್ಕಿದ್ದಿಲ್ಲ. ಒಟ್ಟಿಗೆ ಆವೇಶಕ್ಕೆಅಂಕಿತವಾಗಿದ್ದ ಆ ಮೂಕಪ್ರಾಣಿಯು ಕೇವಲ ಪರಾಧೀನವಾಗಿ ಯಾವ ಉದ್ದೇಶವು ಇಲ್ಲದೆ ಬಿರುಗಾಳಿಯ ಸೆಳೆತಕ್ಕೆ ಸಿಕ್ಕ ರವದೆಯು ದೆಸೆಗೆಟ್ಟು ಹಾರಿಹೋಗುತ್ತಿರುವಂತೆ ಎತ್ತೋ ಹೋಗಿಬಿಡುತ್ತಲಿತ್ತು! ದಣಿದು ಜೋರೆಂದು ಬೆವತಿದ್ದ ಆ ಪಶುವಿನ ಬಾಯೊಳಗಿಂದ ಒಂದೇಸವನೆ ಬುರುಗು ಸುರಿಯುತ್ತಿತ್ತು. ಅದರ ಮೂಗಿನ ಹೊರಳೆಗಳಲ್ಲಿ ಹಿಡಿಸದೆ ಶ್ವಾಸವು ಅತಿ ವೇಗದಿಂದ ಹೊರಬೀಳುತ್ತಿರುವಾಗ ಭುರುಭುರು ಶಬ್ದವಾಗುತ್ತಿತ್ತು. ಆ ಗಂಡು ಕಡವವು ಭರದಿಂದ ಓಡುತ್ತಿರುವಾಗ ಅದರ ಹೊಟ್ಟೆಯಲ್ಲಿ ಎಲ್ಲಿಯೋ ಆಗುತ್ತಿದ್ದ ಘುಳುಘುಳು ಶಬ್ದದ ಗುರುತಂತೂ ಯಾರಿಗೆ ಹತ್ತಬೇಕು ? ತನ್ನ ಈ ಖೊಟ್ಟಿ ಕುದುರೆಯನ್ನು ತಟ್ಟನೇ ನಿಲ್ಲಿಸಿ ತಾನು ಈ ಗಂಡಾಂತರ ದಿಂದ ಪಾರಾಗಬೇಕೆಂದು ಆ ಯವನವೀರನು ಬೇಸರಿಯದೆ ಬಗೆಬಗೆಯ ಉಪಾಯಗಳನ್ನು ಬಹಳ ಸಾರೆ ಮಾಡಿಮಾಡಿ ನೋಡಿದನು. ಅವನು ಹಲವು ಸಾರೆ ರಪ್ಪುಹಾಕಿ ರಮಿಸಿದ್ದು ವ್ಯರ್ಥವಾಯಿತು, ಚಪ್ಪರಿಸಿ ಚೇತರಿಸಿದ್ದು ಕೆಲಸಕ್ಕೆ ಬಾರದೆಹೋಯಿತು. ತೊಡೆಯಲ್ಲಿ ಔಕಿ ತಡೆಯಹೋದದ್ದು ಕಡೆಗಾಣದಾಯಿತು. ಅದರಿಂದ ಅವನ ಕ್ರೋಧವು ಹೆಚ್ಚಿ ಇದರ ಸೋಟೆ ಹರಿದರೂ ಹರಿಯಲೆಂದು ಕಡಿವಾಣವನ್ನು ಜಗ್ಗಿ ಜಗ್ಗಿ ಜಾಡಣೆ ಹೊಡೆದನು; ಆದರೆ ಅದರ ಸೋಟೆಯಿಂದ ರಕ್ತವು ಸೋರಿತಲ್ಲದೆ ಆ ಪ್ರಾಣಿಯೇನು ನಿಲ್ಲಲಿಲ್ಲ. ಅದರ ಈ ಗಟ್ಟಿಗತನವೂ, ವೀರಾವೇಶವೂ ಆ ವೀರನ ಪ್ರೇಮ ಸಂಪಾದನಕ್ಕೆ ಕಾರಣವಾಗಿದ್ದರೂ, ವಿಪರೀತಕಾಲ ಒದಗಿ ಆ ಖೊಟ್ಟಿ ಕುದುರೆಯು ಅಂಕಿತಕ್ಕೆ ಬಾರದೆಹೋಗಲು, ಅದರ ಅವೇ ಗುಣಗಳು ಆ ಯವನ ವೀರನ ಪ್ರಾಣಾಪತ್ತಿಗೆ ಈಗ ಕಾರಣವಾಗಿ ಕುಳಿತವು. ಕಡೆಗೆ ಅತ್ಯಂತ ಬಲಿಷ್ಠನಾದ ಆ ಯವನನು ಉಪಾಯ ಕುಗ್ಗಿ ಅತ್ಯಂತವಾದ ಸಂತಾಪದಿಂದ ಅವಡುಗಚ್ಚಿ ಕಡಿವಾಣಜಗ್ಗಿ ಕುದುರೆಯನ್ನು ಕಸುವಿನಿಂದ ಕೊಸೆಯಲಿಕ್ಕೂ, ಮುಂದುಗಡೆಯ ಪೆಳೆಯೊಳಗಿನದೊಂದು ಭಯಂಕರವಾದ ಹುಲಿಯು ಆರ್ಭಟಿಸಿ ಪುಟನೆಗೆದು ಅದರ ಮುಂದೆ ನಿಲ್ಲಲಿಕ್ಕೂ ಗಂಟೇಬಿದ್ದಿತು; ಆಗ ಓಡುತ್ತಿದ್ದ ಕುದುರೆಯು ಬೆದರಿ ಗಕ್ಕನೆ ಹಿಂದಕ್ಕೆ ಹಾರಲು, ಎಂದೂ ಕುದುರೆಯ ಮೇಲಿಂದ ಬೀಳದೆಯಿದ್ದ ಆ ಯವನವೀರನು ಲಾಗತಪ್ಪಿ ದೊಪ್ಪನೆ ನೆಲಕ್ಕೆ ಬಿದ್ದನು !

ಹೀಗೆ ಅಕಸ್ಮಾತ್ತಾಗಿ ಒದಗಿದ ಪ್ರಸಂಗವು ವಿಲಕ್ಷಣವಾದದ್ದೇ ಸರಿ. ಆ ಪ್ರಸಂಗದಲ್ಲಿ ಆ ಮೂರು ಪ್ರಾಣಿಗಳೂ ಸಂತಾಪದ ಭರದಲ್ಲಿ ಎಚ್ಚರದಪ್ಪಿದ್ದವು. ಯವನ ರಾವುತನು ತನ್ನ ಎಟ್ಟಿ ಕುದುರೆಯ ಹಟಮಾರಿತನಕ್ಕಾಗಿ ಸಂತಾಪಗೊಂಡು ಎಚ್ಚರದಪ್ಪಿದ್ದನು. ಕುದುರೆಯು ಅಕಸ್ಮಾತ್ತಾಗಿ ಬೆದರಿ ಪ್ರಾಣಭಯದಿಂದ ತನ್ನ ಯಜಮಾನನನ್ನು ಲೆಕ್ಕಿಸದಷ್ಟು ಎಚ್ಚರದಪ್ಪಿತ್ತು. ಅತ್ತ ಪೆಳೆಯೊಳಗಿನ ಭಯಂಕರವಾದ ಹುಲಿಯು ಯಾರಿಂದಲೋ ಅರೆಗಾಯ ಹೊಂದಿ ಗಾಯದ ವ್ಯಥೆಯಿಂದ ಸಂತಾಪಗೊಂಡು ಎಚ್ಚರದಪ್ಪಿತ್ತು; ಆದರೆ ಈ ಮೂರು ಪ್ರಾಣಿಗಳ ಈ

ಎಚ್ಚರಗೇಡಿತನವನ್ನು ತಟ್ಟನೆ ದೂರಮಾಡುವಂತಹದೊಂದು ಯವನ ಪತನರೂಪ ವಿಲಕ್ಷಣ ಪ್ರಸಂಗವು ಆ ಮೂರರ ಸಂಯೋಗದಿಂದ ಅಕಸ್ಮಾತ್ತಾಗಿ ಒದಗಲು, ಆ ಮೂರೂ ಪ್ರಾಣಿಗಳು ಎಚ್ಚೆತ್ತು ಭಯಗ್ರಸ್ತವಾದವು. ಕುದುರೆಯು ಪ್ರಾಣಭಯದಿಂದ ತನ್ನ ಯಜಮಾನನ ಲಕ್ಷವಿಲ್ಲದೆ ಭರ್ರನೆ ಎತ್ತೋ ಹೋಗಿಬಿಟ್ಟಿತು. ರಾವುತನು ನೆಲಕ್ಕೆ ಬಿದ್ದ ರಭಸಕ್ಕೆ ಹುಲಿಯು ಬೆಟ್ಟಿಬಿದ್ದು ಸರಕ್ಕನೆ ಹಿಂದಕ್ಕೆ ಸರಿದು ಪೆಳೆಯನ್ನು ಹೊಕ್ಕಿತು; ತಾನು ಮೇಲಕ್ಕೇಳಲಾರದಂತೆ ಪೆಟ್ಟುತಿಂದು ಅಸಹಾಯನಾಗಿ ಹುಲಿಯ ಮುಂದೆ ಬಿದ್ದೆನಲ್ಲ, ಎಂಬ ಭಯದಿಂದ ಯವನ, ರಾವುತನ ಕೆಚ್ಚೆದೆಯೂ ಕಂಪಿಸಿತು. ಈ ಭಯಗ್ರಸ್ತ ಸ್ಥಿತಿಯಲ್ಲಿ ಒಂದು ಕ್ಷಣವು ಕ್ರಮಿಸುತ್ತಿರಲು, ಯವನವೀರನು ಸಾವರಿಸಿಕೊಂಡು ಮೇಲಕ್ಕೇಳತೊಡಗಿದನು. ಅಷ್ಟರಲ್ಲಿ ಪೆಳೆಯನ್ನು ಸೇರಿದ್ದ ಭಯಂಕರವಾದ ಹುಲಿಯು ಆರ್ಭಟಿಸಿ, ರಾವುತನ ಮೇಲೆ ಹಾರಲು, ಅಂಥ ವಿಪನ್ನ ಸ್ಥಿತಿಯಲ್ಲಿಯೂ ಆ ಯವನವೀರನು ಅದರ ಹಾರಿಕೆಯನ್ನು ತಪ್ಪಿಸಿಕೊಂಡು ತನ್ನ ಕೈಖಡ್ಗದಿಂದ ಹುಲಿಯನ್ನು ಗಾಯಗೊಳಿಸಿದನು: ಆದರೆ ಆತನಿಗೆ ತಾನು ಹುಲಿಯ ಕೈಯೊಳಗಿಂದ ಪಾರಾದೇನೆಂಬ ಆಸೆಯು ಉಳಿಯಲಿಲ್ಲ. ತನ್ನ ಮನೋರಾಜ್ಯಗಳೆಲ್ಲ ಒಂದು ಕ್ಷಣದಲ್ಲಿ ಲಯವಾಗುವ ಪ್ರಸಂಗ ಒದಗಿದ್ದನ್ನು ಸ್ಮರಿಸಿ ಆತನು ದುಃಖಿತನಾದನು. ಆತನಿಗಿದ್ದ ಅಧಿಕಾರ–ವೈಭವಗಳಲ್ಲಿ ಈಗ ಒಂದೂ ಆತನ ಸಹಾಯಕ್ಕೆ ಬರುವಹಾಗಿದ್ದಿಲ್ಲ. ಆತನು ಬಿದ್ದ ಪೆಟ್ಟಿನಿಂದ ಗಾಸಿಯಾಗಿರದಿದ್ದರೆ ಹುಲಿಯನ್ನು ಹಿಚುಕಿ ಕೊಲ್ಲಲಿಕ್ಕೆ ಹಿಂದೆಮುಂದೆ ನೋಡುವವನಲ್ಲ; ಆದರೆ ಮಾಡುವದೇನು ಈಗ ಪೆಟ್ಟುಹತ್ತಿ ಪರಾಧೀನನಾಗಿ ಆತನು ಪೇಚಾಡುತ್ತಿದ್ದನು. ಈ ಪ್ರಸಂಗದಲ್ಲಿ ತನ್ನನ್ನು ಯಾರಾದರೂ ಈ ಹುಲಿಯ ದವಡೆಯೊಳಗಿಂದ ಬಿಡಿಸಿದರೆ, ಕೃತಜ್ಞತೆಯಿಂದ ತಾನು ಅವರ ಪ್ರಾಣಕ್ಕೆ ಪ್ರಾಣವನ್ನಾದರೂ ಕೊಡಲಿಕ್ಕೆ ಹಿಂದೆಮುಂದೆ ನೋಡಲಿಕ್ಕಿಲ್ಲವೆಂದು ಆತನು ನೆನಿಸಿದನು. ಅಂಥ ಸುಯೋಗವನ್ನು ಒದಗಿಸಿಕೊಡುವದಕ್ಕಾಗಿ ಆತನು ಮನಸ್ಸಿನಲ್ಲಿ ಅಲ್ಲಾನನ್ನು ಪ್ರಾರ್ಥಿಸ ತೊಡಗಿದನು. ಇಷ್ಟೆಲ್ಲ ಒಂದು ಕ್ಷಣದಲ್ಲಿ ಮಿಂಚಿಹೋಗುತ್ತಿರಲು, ಅಷ್ಟರಲ್ಲಿ ಆ ಭಯಂಕರವಾದ ಹುಲಿಯು ಗಾಯಹೊಂದಿದ ರೊಚ್ಚಿನಿಂದ ಆರ್ಭಟಿಸಿ ಮತ್ತೆ ಆ ಯವನ ವೀರನ ಮೇಲೆ ದುಮುಕಿತು. ಈ ಪ್ರಸಂಗದಲ್ಲಿ ಯವನ ವೀರನು ನಿಶ್ಚಯವಾಗಿ ಆ ಕ್ರೂರಮೃಗಕ್ಕೆ ತುತ್ತಾಗುತ್ತಿದ್ದನು; ಆದರೆ ಹಾಗೆ ತುತ್ತಾಗುವದು ದೇವರ ಮನಸ್ಸಿಗೆ ಬಂದಂತೆ ತೋರಲಿಲ್ಲ; ಆದ್ದರಿಂದ ಆ ಹುಲಿಯ ಅಮೋಘವಾದ ಹಾರಿಕೆಗೆ ಫಲವು ದೊರೆಯದೆ ಅದು ಹಾರಹಾರುವದರೊಳಗಾಗಿ ಯಾವನೋ ಒಬ್ಬ ಹಿಂದೂ ವೀರನು ತನ್ನ ಬರ್ಚಿಯಿಂದ ಹುಲಿಯ ಎದೆಗೆ ಇರಿದು ಅದನ್ನು ಹಿಂದಕ್ಕೆ ಕೆಡವಿದನು. ಅಷ್ಟರಲ್ಲಿ ಮತ್ತೊಬ್ಬ ಹಿಂದೂ ವೀರನು ತನ್ನ ಕೈಖಡ್ಗದಿಂದ ಹುಲಿಯ ಮರ್ಮಸ್ಥಾನಕ್ಕೆ ಹಣಿದು ಆ ಹಿಂಸ್ರ ಪ್ರಾಣಿಯನ್ನು ನೆಲಕ್ಕುರುಳಿಸಿದನು.

ಇತ್ತ ಮರಣಕ್ಕೆ ಸಿದ್ಧನಾಗಿ ಕಣ್ಣುಮುಚ್ಚಿಕೊಂಡು ಅಲ್ಲಾನನ್ನು ಪ್ರಾರ್ಥಿಸುತ್ತಿದ್ದ ಯವನ ವೀರನು, ಹುಲಿಯು ನೆಲಕ್ಕೆ ಬೀಳುವಾಗ ಆರ್ಭಟಿಸಿದ ಅಬ್ಬರಕ್ಕೆ ಕಣ್ಣುತೆರೆದು ನೋಡಲು, ಅಶ್ವಾರೂಢರಾಗಿದ್ದ ಇಬ್ಬರು ತರುಣ ಹಿಂದೂ ವೀರರು ಆತನ ಕಣ್ಣಿಗೆ ಬಿದ್ದರು. ಹಿಂದೂಜನರ

ವಿಷಯವಾಗಿ ಆ ಯವನ ವೀರನ ಮನಸ್ಸಿನಲ್ಲಿವಾಸಿಸುತ್ತಿದ್ದ ದ್ವೇಷಭಾವವು ಎಷ್ಟು ಬಲವಾದದ್ದೋ ತಿಳಿಯದು. ತನ್ನನ್ನು ಪ್ರಾಣಸಂಕಟದಿಂದ ಮುಕ್ತಮಾಡಿದ್ದಕ್ಕಾಗಿ ಆತನ ಹೃದಯದಲ್ಲಿ ಕೃತಜ್ಞತೆಯು ಉತ್ಪನ್ನವಾಗುವ ಬದಲು ''ಇವರು ಹಿಂದುಗಳೆ''ಂಬ ದ್ವೇಷಭಾವವು ಉತ್ಪನ್ನವಾಯಿತು; ಆದರೂ ಆತನು ಸದ್ಯಕ್ಕೆ ತನಗೊದಗಿರುವ ವಿಪತ್ತನ್ನು ಸ್ಮರಿಸಿ ಸೌಜನ್ಯದ ಸೋಗಿನಿಂದ ಆ ತರುಣ ರಾವುತರನ್ನು ಕುರಿತು – ''ವೀರರೇ, ನಿಮ್ಮಿಂದ ನನ್ನ ಪ್ರಾಣರಕ್ಷಣವಾದ ಉಪಕಾರವನ್ನು ನಾನು ಎಂದೂ ಮರೆಯಲಿಕ್ಕಿಲ್ಲ. ಈ ಪ್ರಸಂಗದಲ್ಲಿ ಅಲ್ಲಾನು ನಿಮ್ಮನ್ನು ಇಲ್ಲಿಗೆ ಬರಮಾಡದಿದ್ದರೆ, ನಾನು ಯಾವಾಗೋ ಹುಲಿಗೆ ತುತ್ತಾಗುತ್ತಿದ್ದೆನು. ಈಗ ನಿಮಗೆ ನಾನೊಬ್ಬ ಸಾಮಾನ್ಯ ಯವನ ದಂಡಾಳುವಾಗಿ ತೋರಬಹುದು; ಆದರೆ ನೀವು ಹಾಗೆ ಸರ್ವಥಾ ತಿಳಿಯಬಾರದು. ನೀವು ನನ್ನನ್ನು ಸುರಕ್ಷಿತವಾಗಿ ಕಂಪಲಿಗೆ ಮುಟ್ಟಿಸಿದರೆ, ಸದ್ಯದ ದಕ್ಷಿಣದ ಸುಭೇದಾರನಂತೆ ಇದ್ದ ಕಾಸಿಮನ ಮುಖಾಂತರವಾಗಿ ನಿಮ್ಮ ಉಪಕಾರದ ಹೊರೆಯನ್ನು ನಾನು ನಿಶ್ಚಯವಾಗಿ ಇಳಿಸಿಕೊಳ್ಳುವೆನು'' ಅನ್ನಲು ಆ ಹಿಂದೂ ರಾವುತರಲ್ಲಿ ಒಬ್ಬನು ಗಾಂಭೀರ್ಯದಿಂದ–''ಖಾನಸಾಹೇಬ, ತಾವು ಎಷ್ಟು ಮಾತ್ರವೂ ಚಿಂತಿಸಲಾಗದು. ನಮ್ಮ ಉಪಕಾರದ ಹೊರೆಯು ನಿಮ್ಮ ಮೇಲೆ ಆಗಲಿಕ್ಕೆ ನಾವೇನು ನಿಮಗೆ ಮಾಡಬಾರದ ಉಪಕಾರವನ್ನು ಮಾಡಿರುವದಿಲ್ಲ; ದೇವರ ಸಂಕೇತದಂತೆ ಆಗುವದು ಆಗಿರುತ್ತದೆ. ನಮ್ಮ ಯೋಗದಿಂದ ಅನಾಯಾಸವಾಗಿ ನಿಮ್ಮ ಹಿತಸಾಧಿಸಿದ್ದನ್ನು ನೋಡಿ ನಮಗೆ ಬಹಳ ಸಂತೋಷವಾಗಿದೆ; ನಾವು ಕಂಪಲಿಗೆ ಬರುವದಕ್ಕಾಗಿಯೇ ಹೊರಟಿರುವೆವು. ಮಧ್ಯದಲ್ಲಿ ಈ ಹುಲಿಯು ನಮ್ಮ ಕಣ್ಣಿಗೆ ಬಿದ್ದದ್ದರಿಂದ ಅದರ ಬೇಟೆಯ ಹಂಬಲಕ್ಕೆ ಬಿದ್ದು, ಅದನ್ನು ಗಾಯಗೊಳಿಸಿದೆವು; ಆದರೆ ಆ ಭಯಂಕರ ಪ್ರಾಣಿಯು ನಮ್ಮ ಕಣ್ಣುಮರೆಯಾಗಿ ಓಡಿದ್ದು ಎಷ್ಟು ಹುಡುಕಿದರೂ ಸಿಗಲಿಲ್ಲ. ನಾವು ನಾಲ್ಕೂ ಕಡೆಗೆ ಹುಡುಕಿ ಹುಡುಕಿ ಬೇಸತ್ತು ಇಲ್ಲಿಯೇ ಸಮೀಪದಲ್ಲಿರುವ ಒಂದು ಜಲಾಶಯದ ದಂಡೆಯಲ್ಲಿ ವಿಶ್ರಮಿಸುತ್ತಿದ್ದೆವು. ಅಷ್ಟರಲ್ಲಿ ಒಂದು ಕುದುರೆಯು ಬೆದರಿ ನಮ್ಮ ಕಡೆಗೆ ಓಡಿಬರಲು, ನಮಗೆ ಅತ್ತ ಹುಲಿಯಿದ್ದ ಸಂಶಯ ಬಂದ ಕೂಡಲೇ ಅಶ್ವಾರೂಢರಾಗಿ ಇತ್ತಕಡೆಗೆ ಬಂದೆವು. ಈಶ್ವರೀ ಸಂಕೇತವು ಯಾರಿಗೂ ತಿಳಿಯುವುದಿಲ್ಲ. ನಾವೇನು ನಿಮಗೆ ಪ್ರಾಣದಾನ ಮಾಡಬೇಕೆಂದು ಬಂದವರಲ್ಲ; ಆದರೂ ಪ್ರಾಣಸಂಕಟಕ್ಕೆ ಗುರಿಯಾದ ವೀರರಿಗೆ ಸಹಾಯ ಮಾಡುವದು ವೀರರ ಕರ್ತವ್ಯವಾಗಿದ್ದು, ಅಂಥ ಪವಿತ್ರ ಕರ್ತವ್ಯ ಮಾಡಿದ ಶ್ರೇಯಸ್ಸು ಪ್ರಾಪ್ತವಾದದ್ದಕ್ಕಾಗಿ ನಮಗೆ ಬಹಳ ಸಂತೋಷವಾಗಿದೆ. ಉಪಕಾರ–ಗಿಪಕಾರದ ಮಾತು ಇದರಲ್ಲೇನು ಇರುವುದಿಲ್ಲ. ಅನ್ಯರ ಉಪಕಾರದ ಇಚ್ಛೆಯಾಗಲಿ ಪ್ರತ್ಯುಪಕಾರದ ಇಚ್ಛೆಯಾಗಲಿ ಸದ್ಯಕ್ಕಂತೂ ನಮಗಿರುವದಿಲ್ಲ. ಹಾಗೆ ಉಪಕಾರಕ್ಕೆ ಪ್ರತ್ಯುಪಕಾರವನ್ನು ಇಚ್ಛಿಸುವ ಹೀನ ಪ್ರಸಂಗವು ನಮಗೆ ಬರಲೇಬೇಡವೆಂದು ನಾವು ದೇವರನ್ನು ಅನನ್ಯಭಾವದಿಂದ ಪ್ರಾರ್ಥಿಸುವೆವು. ವೀರ ಯವನ ಬಂಧುವೇ, ಈ ಜಗತ್ತಿನಲ್ಲಿ ವಿಪತ್ತುಗಳನ್ನು ಯಾರೂ ಗೆದ್ದಿರುವುದಿಲ್ಲ. ಆದ್ದರಿಂದ ನಿಮ್ಮ ವಿಪತ್ತಿನ ಪ್ರಸಂಗದಲ್ಲಿ ನಮ್ಮ ಸಹಾಯ ದೊರೆತದದ್ದಕ್ಕಾಗಿ ನಿಮಗೆ ಸಂತೋಷವಾಗಿರುವಂತೆ, ನಿಮ್ಮ ಸಂತೋಷಕ್ಕೆ ಅನಾಯಾಸವಾಗಿ ನಾವು ಕಾರಣವಾದದ್ದಕ್ಕಾಗಿ

ನಮಗೂ ಸಂತೋಷವಾಗಿದೆ. ಆದ್ದರಿಂದ ಉಭಯರ ಈ ಸಂತೋಷ ಪ್ರಸಂಗದಲ್ಲಿ ಪರಸ್ಪರರು ಅಕೃತ್ರಿಮ ಬಂಧುಭಾವವನ್ನು ಬೆಳಸೋಣವೆಂದರಾಯಿತು. ಇದಕ್ಕೂ ಹೆಚ್ಚಿನ ಲಾಭವು ಈ ಜಗತ್ತಿನಲ್ಲಿ ಮತ್ತೊಂದಾವುದಿರುವದು? ಯಾವದಕ್ಕೂ ಚಿಂತೆಮಾಡಬೇಡಿರಿ. ಆ ಓಡಿಹೋದ ಕುದುರೆಯು ನಿಮ್ಮದೇ ಆಗಿರಬಹುದು; ಆದರೆ ಅದು ಹೋದರೆ ಹೋಗಲೊಲ್ಲದೇಕೆ. ನಮ್ಮ ಕುದುರೆಗಳ ಸಹಾಯದಿಂದ ನಿಮ್ಮನ್ನು ನಾವು ಸುರಕ್ಷಿತವಾಗಿ ಕಂಪಲಿಗೆ ಮುಟ್ಟಿಸುವೆವು'' ಎಂದು ನುಡಿಯುತ್ತಿರಲು, ಎರಡನೆಯ ರಾವುತನು ಚಟ್ಟನೇ ತನ್ನ ಕುದುರೆಯಿಂದ ಇಳಿದು ಆ ಯವನ ರಾವುತನ ಬಳಿಯಲ್ಲಿ ಅದನ್ನು ನಿಲ್ಲಿಸಿ— ''ಏಳಬೇಕು ಖಾನಸಾಹೇಬ, ಈ ಕುದುರೆಯನ್ನು ಹತ್ತಬೇಕು. ತಮಗೆ ಪೆಟ್ಟು ಬಹಳ ಹತ್ತಿರುವಂತೆ ತೋರುತ್ತದಾದ್ದರಿಂದ ನಾನು ಮೆಲ್ಲನೆ ಕುದುರೆಯನ್ನು ಹತ್ತಿಸುವೆನು. ತಾವು ಸರ್ವಥಾ ಸಂಕೋಚಪಡಬಾರದು. ಇಲ್ಲಿಯೇ ಬಳಿಯಲ್ಲಿ ಜಲಾಶಯವಿದೆ. ಅಲ್ಲಿ ಸ್ವಲ್ಪ ವಿಶ್ರಾಂತಿಹೊಂದಿರಿ; ನಮ್ಮ ಬಳಿಯಲ್ಲಿಯ ಆಹಾರದ ಪದಾರ್ಥ ಗಳನ್ನು ಸ್ವೀಕರಿಸಿ ಕ್ಷುಧಾಶಾಂತಿಯನ್ನು ಮಾಡಿಕೊಳ್ಳಿರಿ; ಹೊತ್ತು ಬಹಳವಾಗಿದೆ. ಬಿಸಿಲು ರಣಗುಟ್ಟುತ್ತದೆ. ಸ್ವಲ್ಪ ಬಿಸಿಲು ಇಳಿದಬಳಿಕ ಕಂಪಲಿಗೆ ಹೋಗೋಣವಂತೆ! ನಮ್ಮನ್ನು ಪರಕೀಯರೆಂದು ಭಾವಿಸದೆ ಬಂಧುಗಳೆಂದು ಭಾವಿಸಿರಿ. ನಿಮ್ಮ ಯಾವ ಸೇವೆ ಮಾಡಲಿಕ್ಕೂ ನಿಮ್ಮ ಈ ಬಂಧುವು ಹಿಂದುಮುಂದೆ ನೋಡಲಾರನು. ಅನುಗ್ರಹಿಸಿ ಸೇವೆಯನ್ನು ಸ್ವೀಕರಿಸಬೇಕು.''

ಈ ಮೇರೆಗೆ ಹಿಂದೂ ತರುಣರು ಆಡಿದ ಉದಾತ್ತವಿಚಾರದ ಮಾತುಗಳನ್ನು ಕೇಳಿ ತನ್ನ ಕುಭಾವನೆಗಾಗಿ ಆ ಯವನವೀರನು ಮನಸ್ಸಿನಲ್ಲಿ ನಾಚಿದನು. ಆತನಿಗೆ ಮಿತಿಮೀರಿ ಆಯಾಸವಾದದ್ದಲ್ಲದೆ, ಕಿಡಿಕಿಡಿ ಹಸಿವೆಯೂ ಆಗಿತ್ತು. ಅರಣ್ಯದಲ್ಲಿ ಆತನಿಗೆ ಅನ್ಯರ ಸಹಾಯವು ಒದಗುವ ಸಂಭವವೂ ಇದ್ದಿಲ್ಲ. ಇವರ ಸಹಾಯವನ್ನು ಸ್ವೀಕರಿಸದಿದ್ದರೆ ಸುರಕ್ಷಿತವಾಗಿ ತಾನು ಕಂಪಲಿಗೆ ಮುಟ್ಟುವ ಆಶೆಯೂ ಆತನಿಗೆ ತೋರದಾಯಿತು; ಆದ್ದರಿಂದ ಆ ಅಭಿಮಾನಿಯಾದ ಯವನ ವೀರನು ನಿರ್ವಾಹವಿಲ್ಲದೆ ತನ್ನ ನೋವನ್ನೆಲ್ಲ ನುಂಗಿಕೊಂಡು ಕುದುರೆಯನ್ನು ಹತ್ತಲೊಪ್ಪದೆ ಜಲಾಶಯದವರೆಗೆ ನಡೆಯುತ್ತಲೇ ಬರುವೆನೆಂದು ಹೇಳಿ ಕಷ್ಟದಿಂದ ಎದ್ದುನಿಂತು ಮುಂದಕ್ಕೆ ಸಾಗತೊಡಗಿದನು. ಕೂಡಲೇ ಇನ್ನೊಬ್ಬ ಹಿಂದೂರಾವುತನು ತನ್ನ ಕುದುರೆಯಿಂದ ಇಳಿದು ಅವನನ್ನು ಹಿಂಬಾಲಿಸಿದನು. ಜಲಾಶಯವು ಅಲ್ಲಿಂದ ಬಹಳ ದೂರವಿದ್ದಿಲ್ಲ. ಆದ್ದರಿಂದ ಅವರು ಮೆಲ್ಲಗೆ ಹೋದರೂ ಸ್ವಲ್ಪಹೊತ್ತಿನಲ್ಲಿ ಜಲಾಶಯವನ್ನು ಮುಟ್ಟಿದರು. ಬಿಸಿಲತಾಪದಿಂದ ಕಂಗೆಟ್ಟಿದ್ದ ಆ ಯವನ ವೀರನು ಜಲಾಶಯದಲ್ಲಿ ಸ್ನಾನಮಾಡಿ ಸ್ವಲ್ಪ ಸಮಾಧಾನಪಟ್ಟನು. ಹಿಂದೂಜನರಿಂದ ಉಪಕೃತನಾಗುವ ವಿಷಯದಲ್ಲಿ ಆತನಿಗೆ ಪರಮಾವಧಿಯಾಗಿ ಸಂಕೋಚ ವಾಯಿತು; ಆದರೂ ಆತನು ಗತಿಗಾಣದೆ ಆ ಹಿಂದೂ ರಾವುತರು ಕೊಟ್ಟ ಪದಾರ್ಥಗಳನ್ನು ಸ್ವೀಕರಿಸಿ ಕ್ಷುಧಾಶಾಂತಿಯನ್ನು ಮಾಡಿಕೊಂಡನು. ಈ ಪ್ರಸಂಗದಲ್ಲಿ ಕಾಸಿಮನ ಹೃದಯದೊಳಗಿನ ದ್ವೇಷಾಗ್ನಿಯು ಶಾಂತವಾಗಿ ಕೃತಜ್ಞತಾಭಾವವು ಉತ್ಪನ್ನವಾಗತೊಡಗಿತ್ತು; ಆದರೆ ಇಷ್ಟುಹೊತ್ತಿನವರೆಗೆ ಆ ಹಿಂದೂ ರಾವುತರೊಡನೆ ವ್ಯವಹರಿಸುವಾಗ ಆ ಯವನ ರಾವುತನಿಗೆ ಒಂದೊಂದೇ ಸಂಶಯಗಳು ಬರತೊಡಗಿದ್ದವು. ಮೊದಲು ಮಾತಾಡಿದ ರಾವುತನನ್ನು ತಾನು ಎಲ್ಲಿಯೋ ನೋಡಿದಂತೆ ಆತನು ನೆನಪುಮಾಡಿಕೊಳ್ಳಹತ್ತಿದನು; ಆತನ ದನಿಯ ಗುರುತೂ

ಹತ್ತಿದ ಹಾಗಾಗುತ್ತಿತ್ತು; ಆದರೆ ಯಾರು ಎಂಬದು ಗೊತ್ತಾಗಲೊಲ್ಲದು. ಅವನು ವಿಚಾರಮಗ್ನನಾಗಿ ಕೆದರಿ ಕೆದರಿ ನೆನಪು ಮಾಡಿಕೊಳ್ಳತೊಡಗಿದನು. ಏನುಮಾಡಿದರೂ ನೆನಪಾಗಲೊಲ್ಲದು. ಅಷ್ಟರಲ್ಲಿ ''ನಾವು ಕಂಪಲಿಗೆ ಹೋಗುವದಕ್ಕಾಗಿಯೇ ಹೊರಟಿದ್ದೆವು'' ಎಂದು ಆ ತರುಣ ಹಿಂದೂ ರಾವುತನು ಹೇಳಿದ್ದು ನೆನಪಿಗೆ ಬಂದು, ಬಲವಾದ ಶಂಕೆಯು ಆ ಯವನ ವೀರನನ್ನು ಬಾಧಿಸತೊಡಗಿತ್ತು. ಆ ಹಿಂದೂ ರಾವುತರ ಮುಖಲಕ್ಷಣಾದಿಗಳು ಪರಸ್ಪರ ಅಚ್ಚಳಿಯದೆ ಹೋಲುತ್ತಿರುವದನ್ನು ನೋಡಿಯಂತೂ ಅವನ ಸಂಶಯವು ಮತ್ತಿಷ್ಟು ಬಲಪಟ್ಟಿತು; ಆದರೆ ತನ್ನ ಆ ಸಂಶಯದ ಭಾವವನ್ನೇನು ಹೊರಗೆಡವದೆ ಆತನು ವಿಶ್ರಾಂತಿಗೊಳ್ಳುತ್ತ ಸಹಜವಾಗಿ ಕೇಳುವವನಂತೆ ಮೊದಲು ಮಾತಾಡಿದ ಹಿಂದು ರಾವುತನನ್ನು ಕುರಿತು ಗಾಂಭೀರ್ಯದಿಂದ–

ಯವನರಾವುತ—ಮಿತ್ರರೇ, ನೀವು ಕಂಪಲಿಗೆ ಹೋಗುವವರಿರುವೆವೆಂದು ಹೇಳುವಿರಲ್ಲ, ಇಂಥ ಕೆಟ್ಟ ಬಿಸಿಲಲ್ಲಿ ಇಷ್ಟು ಅವಸರದಿಂದ ಅಲ್ಲಿಗೆ ಹೋಗುವ ಕಾರಣವೇನು ? ಹೇಳಲಿಕ್ಕೆ ಬರುವಹಾಗಿದ್ದರೆ ಹೇಳಿರಿ, ನನ್ನ ಆಗ್ರಹವಿಲ್ಲ. ಸುಮ್ಮನೆ ಕೇಳುವ ಹಾಗಾದದ್ದರಿಂದ ಕೇಳಿದೆನು. ಅದರಲ್ಲಿ ವಿಶೇಷವೇನೂ ಇಲ್ಲ.

ಹಿಂದೂರಾವುತ—ವಿಶೇಷವಿರಲಿ—ಇರದಿರಲಿ, ಶಿಷ್ಟಾಚಾರದಂತೆ ಕೇಳತಕ್ಕ ಮಾತಾದ್ದರಿಂದ ನೀವು ಕೇಳಿರುವಿರೆಂದು ನಾನು ತಿಳಿದಿರುವೆನು. ನೀವು ಕೇಳಿದ ಪ್ರಶ್ನೆಗೆ ಉತ್ತರ ಹೇಳಲಿಕ್ಕೆ ನಾವು ಸಂಕೋಚಪಡುವ ಕಾರಣವೂ ಇಲ್ಲ; ಯಾಕೆಂದರೆ ನಾವು ಕಂಪಲಿಗೆ ಹೋಗುವ ಕಾರಣವು ಕರ್ನಾಟಕದಲ್ಲೆಲ್ಲ ಪ್ರಸಿದ್ಧವಾಗಿದೆ.

ಯವನವೀರ–ಅದಾವ ಪ್ರಸಿದ್ಧ ಕಾರಣವು?

ಹಿಂದೂ ವೀರ–ಕಾಸಿಮಖಾನರು ಸಾರಿಸಿದ ಡಂಗುರವು.

ಈ ಉತ್ತರವನ್ನು ಕೇಳಿ ಯವನ ವೀರನ ಚಿತ್ತವೃತ್ತಿಯು ವಿಲಕ್ಷಣವಾಯಿತು. ಇವನ ಈ ಉತ್ತರವು ನಿಜವಾಗಿರಬಹುದೇ? ಎಂದು ಆತನು ಶಂಕಿಸಿದನು. ಈ ಕಾಫರರಿಬ್ಬರು ಹುಕ್ಕ–ಬುಕ್ಕರೇ ಇರಬಹುದೆ? ಇವರು ಎಂಥ ಧೈರ್ಯಶಾಲಿಗಳು! ಇವರ ಪಿತೃಭಕ್ತಿಯು ಎಷ್ಟು ಬಲವತ್ತರವಾದದ್ದು! ಬೈರಾಗಿಣಿಯು ಹೇಳಿದ್ದು ನಿಜವಿರಬಹುದೇನು? ಇವರೇ ಹುಕ್ಕ—ಬುಕ್ಕರಾಗಿದ್ದರೆ ಪದ್ಮಿನಿಯ ವಿವಾಹಕ್ಕೆ ಇಂದೇ ನನಗೆ ಆಸ್ಪದವು ದೊರೆತಂತಾಗುವದಲ್ಲ! ಎಂಥ ಆನಂದದ ಪ್ರಸಂಗವಿದು ! ಆನಂದದಲ್ಲಿ ನನ್ನ ಮೈನೋವು ಮರೆತುಹೋದಂತಾಯಿತು! ಶಾಬಾಸ! ತಕ್ಕ ಹಂಚಿಕೆಯನ್ನು ಹೇಳಿಕೊಟ್ಟ ಪದ್ಮಿನಿಯ ಬುದ್ಧಿಯನ್ನು ಎಷ್ಟು ಹೊಗಳಿದರೂ ಸ್ವಲ್ಪವು. ಕಾಸೀಮಾ, ನೀನೇ ಧನ್ಯನು. ಕಡೆಗೆ ನಿಷ್ಕಂಟಕನಾಗಿ ಪದ್ಮಿನಿಯ ಪಾಣಿಗ್ರಹಣ ಮಾಡಲಿಕ್ಕೆ ಪಾತ್ರನಾದೆ. ಇರಲಿ, ಇವರನ್ನು ಸ್ಪಷ್ಟವಾಗಿ ಕೇಳಿಬಿಡೋಣ, ಎಂದು ಯೋಚಿಸುವಾಗ ಆ ಹಿಂದೂ ವೀರರು, ಕಾಸಿಮನನ್ನು ಎವೆಯಿಕ್ಕದೆ ನೋಡುತ್ತಲಿದ್ದರು. ಅವರಿಗೂ ಆ ಯವನ ವೀರನ ಸಂಶಯವುಂಟಾಗಿತ್ತು, ಇವನು ಕಾಸಿಮನಿರಬಹುದೇ? ಇದ್ದರೆ ವಿಲಕ್ಷಣಯೋಗವು ಒದಗಿದಂತಾಯಿತೆಂದು ಅವರು ಸಂಶಯಪಡುತ್ತಿದ್ದರು. ಕರ್ಮ—ಧರ್ಮ ಸಂಯೋಗದಿಂದ ಅವನು ನಿಜವಾಗಿ ಕಾಸಿಮನೇ ಆಗಿದ್ದನು. ಆಗ ಕಾಸಿಮನು ಆ ಹಿಂದೂ ವೀರರಿಗೆ–

ಕಾಸಿಮು—ಏನು? ನೀವು ಹುಕ್ಕ—ಬುಕ್ಕರೇ? ಕಾಸಿಮನ ಡಂಗುರದಂತೆ ಅವನ ಸೆರೆಯುವರಾಗಲಿಕ್ಕೆ ನೀವು ಹೊರಟಿರುವಿರಾ?

ಹಿಂದೂವೀರ–ಹೌದು, ತಂದೆಯನ್ನು ಬಂಧಮುಕ್ತಮಾಡುವದಕ್ಕಾಗಿ ಸೆರೆಯಾಳಾಗಲು ನಾವು ಹೊರಟಿರುವೆವು !

ಕಾಸಿಮು—(ತಾನು ಒಬ್ಬನೇ ಇದ್ದೇನೆಂಬ ಅರಿವಿಲ್ಲದೆ ಆನಂದದಲ್ಲಿ) ನಾನೇ ಕಾಸಿಮನಾಗಿದ್ದರೆ?

ಹುಕ್ಕ–ಮತ್ತಿಷ್ಟು ನೆಟ್ಟಗಾಯಿತು, ಕಾಸಿಮನಾದ ನೀನು ಇಲ್ಲಿಯೇ ನಮ್ಮನ್ನು ಸೆರೆಹಿಡಿದು ನಮ್ಮ ತಂದೆಯನ್ನು ಬಂಧಮುಕ್ತನಾಗಿ ಮಾಡಿಬಿಡು.

ಕಾಸಿಮು–ಅದಕ್ಕಿಂತ ಕಾಸಿಮನಾದ ನನ್ನನ್ನು ನೀವು ಇಲ್ಲಿಯೇ ತುಂಡರಿಸಿಬಿಟ್ಟರೆ ನೀವೂ ನಿಷ್ಕಂಟಕರಾಗಬಹುದಲ್ಲವೆ? ನಿಮ್ಮ ಸ್ವರಾಜ್ಯ ಸ್ಥಾಪನೆಯ ಮಾರ್ಗವೂ ಸರಳವಾಗುವದು.

ಹುಕ್ಕ–ಅದೇನೋ ನಿಜ; ಆದರೆ ಇದು ನಮ್ಮ ಕ್ಷತ್ರಿಯರ ಶೀಲವಲ್ಲ. ಇಂಥ ಅನ್ಯಾಯಕ್ಕೆ ನಮ್ಮ ಗುರುವು ಮೆಚ್ಚನು. ಇಂಥ ಅನ್ಯಾಯದ ಆಚರಣೆಯಿಂದ ನಾನು ಮುಂದೆ ಅರಸನಾದರೆ ಪ್ರಜಾನುರಾಗಕ್ಕೆ ಪಾತ್ರನಾಗಲಾರೆನು. ಈಗ ನಿನ್ನನ್ನು ನಾವು ಪ್ರಾಣಸಂಕಟದಿಂದ ಮುಕ್ತನಾಗ ಮಾಡಿ ಬಂಧುವೆಂದು ಭಾವಿಸಿರುವೆವಲ್ಲವೆ? ಅಂದಬಳಿಕ ಸೂಕ್ತಾಸೂಕ್ತವಿಚಾರವಿಲ್ಲದೆ, ಕೇವಲ ಸ್ವಾರ್ಥಕ್ಕಾಗಿ ನಿನ್ನನ್ನು ಸಂಹರಿಸಲಿಕ್ಕೆ ನಾವೇನು ಕ್ರೂರ ವ್ಯಾಘ್ರವೇ?

ಈ ಮೇರೆಗೆ ನುಡಿಯುತ್ತಿರಲು, ಕಾಸಿಮನ ಅಂಗರಕ್ಷಕರು ಆತನನ್ನು ಹುಡುಕುತ್ತ ಧಾವಿಸಿ ಅಲ್ಲಿಗೆ ಬಂದರು. ಕಾಸಿಮನು ಶೂರನಿದ್ದರೂ ಸರಳ ಹೃದಯದವನಿದ್ದಿಲ್ಲೆಂಬದನ್ನು ವಾಚಕರು ಬಲ್ಲರು. ಪರಸ್ತ್ರೀಯರ ವಿಷಯದ ಅಭಿಲಾಷೆಯಿಂದ ಅವನು ಅತ್ಯಂತ ನಿಂದ್ಯನಾಗಿದ್ದನು. ಸ್ವಾರ್ಥಸಾಧನದ ವಿಷಯದಲ್ಲಿ ಅವನು ನ್ಯಾಯಾನ್ಯಾಯಗಳನ್ನು ಸರ್ವಥಾ ನೋಡುತ್ತಿದ್ದಿಲ್ಲ. ಆ ಸ್ವಾರ್ಥಪರಾಯಣನಾದ ನೀಚನು ಪದ್ಮಿನಿಯ ಹಂಬಲದಿಂದ ಸೌಜನ್ಯಕ್ಕೆ ಶರಣುಹೊಡೆದು ಕಂಪಲಿಗೆ ಹೋದಕೂಡಲೆ ಹುಕ್ಕ—ಬುಕ್ಕರನ್ನು ಬಿಕ್ಕಟ್ಟಿನ ಸೆರೆಮನೆಯಲ್ಲಿರಿಸಿ ಸಂತೋಷಪಟ್ಟನು; ಅಂದಬಳಿಕ ಇದು ಸೌಜನ್ಯದ ಸುಲಿಗೆಯಲ್ಲದಿದ್ದರೆ ಮತ್ತೇನು?

## ಸೇರಿಗೆ ಸವ್ವಾಸೇರು

ಈ ಮೇರೆಗೆ ಹುಕ್ಕ–ಬುಕ್ಕರು ಅನಾಯಾಸವಾಗಿ ತನ್ನ ಸೆರೆಯಾಳಾದದ್ದರಿಂದ ಕಾಸಿಮನಿಗೆ ಸ್ವರ್ಗವು ಮೂರೇ ಗೇಣು ಉಳಿದಂತಾಗಿ, ಆತನು ಆನಂದಸಾಗರದಲ್ಲಿ ಮುಳುಗಿಹೋದನು. ಯಾಕಂದರೆ, ಆ ಮಹಾತೇಜಸ್ವಿಗಳಿಬ್ಬರು ಕರ್ನಾಟಕದ ಉದ್ಧಾರರೂಪವಾದ ಮಹಾಕಾರ್ಯದ ಸಿದ್ಧಿಗಾಗಿ ತಾವಾಗಿಯೇ ಸೆರೆಮನೆಯನ್ನು ಸೇರಿದವರಾಗಿದ್ದರು. ತಾನು ಪದ್ಮಿನಿಯ ಬಳಿಗೆ ಯಾವಾಗ ಹೋದೇನು, ಆಕೆಯ ನಿಕಾ ಯಾವಾಗ ಮಾಡಿಕೊಂಡೇನು ಅನ್ನುವಹಾಗೆ ಕಾಸಿಮನಿಗೆ

ಆಯಿತು. ತನ್ನ ಮನೋದಯವು ಅನಾಯಾಸವಾಗಿ ಸಾಧಿಸಿದ್ದನ್ನು ನೆನಿಸಿ ನೆನಿಸಿ ಆತನು ಆಗಾಗ್ಗೆ ಆಶ್ಚರ್ಯಮಗ್ನನಾದನು. ತಾನು ಎಂಥ ಭಾಗ್ಯಶಾಲಿಯು, ಪದ್ಮಿನಿಯೊಡನೆ ಆನೆಗುಂದಿಯ ಸಿಂಹಾಸನವೂ ತನಗೆ ತಾನಾಗಿ ಸಿಗುವ ಯೋಗ ಒದಗಿತಲ್ಲ! ಇನ್ನುಮೇಲೆ ಪ್ರಸಂಗವಶಾತ್ ತಘಲಕ ಮಹಮ್ಮದನ ಅಧಿಕಾರವನ್ನು ಬದಿಗೊತ್ತಿ ತಾನು ದಕ್ಷಿಣದ ಬಾದಶಹನೂ ಆಗಬಹುದು! ಇವೆಲ್ಲ ವಿಚಾರಗಳು ಮನಸ್ಸಿನಲ್ಲಿ ಬಂದು ಮತ್ತೆ ಆತನು–ಅತ್ತ ಅಂತರ್ಗೃಹದಲ್ಲಿ ಪದ್ಮಿನಿಯೂ ಆನಂದಮಗ್ನಳಾಗಿರಬಹುದಲ್ಲವೆ? ಆ ಸುಂದರಿಯು ಎಂಥ ಬುದ್ಧಿಶಾಲಿಯು! ಬುದ್ಧಿಶಾಲಿ ಯಷ್ಟೇ ಅಲ್ಲ, ಆಕೆಯು ದೈವಶಾಲಿಯೂ ಇರುವಳು. ಅಂತೇ ಶತ್ರುವು ಇಷ್ಟು ಬೇಗನೆ ಕೈಸೇರಿದನು. ಶಾಬಾಸ! ಬಹಳ ನೆಟ್ಟಗಾಯಿತು, ನಾನು ನಿಶ್ಚಿಂತನಾದೆನು! ಹುಕ್ಕನನ್ನು ಸೆರೆಯಲ್ಲಿರಿಸದಿದ್ದರೆ ಪದ್ಮಿನಿಯು ಶಂಕಿಸಿದಂತೆ ಆತನು ನನ್ನ ಜೀವಕ್ಕೆ ಮುಳುವಾಗುವ ಸಂಭವವಿತ್ತು, ಹಿಂದೂ ಜನರ ಮರುಳುತನದ ಪಿತೃಭಕ್ತಿಯಿಂದ ನನ್ನ ಕಲ್ಯಾಣವಾದಂತಾಯಿತು. ಶಾಬಾಸ ಪದ್ಮಿನಿ, ನಿನ್ನ ಹಂಚಿಕೆಗೆ ಜೋಡಿಲ್ಲ! ಈ ಕೆಲಸದಲ್ಲಿ ಬೈರಾಗಿಣಿಯ ಕಸರತ್ತೂ ಬಹಳ ಇರುವದು. ಆಕೆಯಂಥ ಮೋಹಕ ತರುಣಿಯರು ದೊರೆಯುವದೂ ದುರ್ಲಭವೇ. ಬೈರಾಗಿಣಿಯ ವೇಷದಲ್ಲಿ ಉಕ್ಕಿಬರುವ ಸೌಂದರ್ಯದ ಸೊಬಗು ಸಾಮಾನ್ಯವಾದದ್ದಲ್ಲ. ಆಕೆಯ ಆ ಬಿಕ್ಕೆಯ ಉಡಿಗೆ–ತೊಡಿಗೆಗಳನ್ನು ಕಳಚಿ ಚೆಲ್ಲಿಸಿ ಸೊಬಗಿನ ವಸ್ತ್ರಾಲಂಕಾರಗಳಿಂದ ಆಕೆಯನ್ನು ಅಲಂಕರಿಸಿ ಆಕೆಯನ್ನು ಜನಾನಖಾನೆಯಲ್ಲಿ ಸೇರಿಸಿಕೊಂಡುಬಿಡೋಣ! ಆದರೆ ನನ್ನ ಕನಸಿನಲ್ಲಿ ಆಕೆಯು ತಾಳಿದ ಉಗ್ರರೂಪವನ್ನು ನೆನಿಸಿದರೆ ಈಗಲೂ ನನ್ನ ಹೃದಯವು ಕಂಪಿಸುತ್ತದಲ್ಲ! ಎಂದು ಆಲೋಚಿಸುತ್ತಿರಲು, ಒಬ್ಬ ವೀಣಾಧಾರಿಯಾದ ಸುಂದರ ಸ್ತ್ರೀಯು ಅಕಸ್ಮಾತ್ತಾಗಿ ಅವನ ಎದುರಿಗೆ ಬಂದು ನಿಂತುಕೊಂಡಳು. ಆ ಪ್ರಮದೆಯು ಒಳಗೆ ಬಂದಕೂಡಲೆ ಮುಗುಳುನಗೆಯಿಂದ ಕಾಸಿಮನಿಗೆ ಸಲಾಮು ಮಾಡಿ, ವೀಣೆಯ ತಂತಿಗಳ ಮೇಲೆ ತನ್ನ ಸುಂದರ ಬೆರಳು ಆಡಿಸುತ್ತ ಮಂಜುಲ ಸ್ವರದಿಂದ ಕಾಸಿಮನ ಕೀರ್ತಿಯ ಗಾಯನ ಮಾಡತೊಡಗಿದಳು. ಅದನ್ನು ನೋಡಿ ಕಾಸಿಮನು ಬೆರಗಾಗಿ ಕುಳಿತುಕೊಂಡನು. ಉತ್ತಮೋತ್ತಮ ವಸ್ತ್ರಾಲಂಕಾರ ಗಳಿಂದ ಅಲಂಕೃತಳಾದ ಆ ಸುಂದರಿಯ ದರ್ಶನದಿಂದ ಕಾಸಿಮನು ಮರುಳಾಗಿಹೋಗಿದ್ದನು. ಆ ಸುಂದರಿಯು ಒಳಗೆ ಬಂದಕೂಡಲೆ ಸಲಾಮುಮಾಡಿ ಆ ಗಾಯನವನ್ನೇ ಆರಂಭಿಸಿ ಬಿಟ್ಟಿದ್ದರಿಂದ ಆಕೆಯನ್ನು ಕುರಿತು– ''ನೀನು ಯಾರು'' ಎಂದು ಪ್ರಶ್ನೆಮಾಡಲಿಕ್ಕೂ, ''ಬಾ, ಕುಳಿತುಕೊಳ್ಳು'' ಎಂದು ಆದರಿಸಲಿಕ್ಕೂ ಅವನಿಗೆ ಅವಸರವು ದೊರೆಯಲಿಲ್ಲ, ಅವನಿಗೆ ಆಕೆಯ ಗುರುತು ಚೆನ್ನಾಗಿ ಹತ್ತದಿದ್ದರೂ ಆಕೆಯ ದನಿಯ ಗುರುತಿನ ಮೇಲಿಂದ ಈಕೆಯು ಬೈರಾಗಿಣಿ ಇರಬಹುದೇ ಎಂಬ ಸಂಶಯವು ಆತನಿಗೆ ಉತ್ಪನ್ನವಾಯಿತು. ಆಗ ಆತನು ಆಶ್ಚರ್ಯದಿಂದ ಎವೆಯಿಕ್ಕದೆ ಆ ಸ್ತ್ರೀಯನ್ನು ಮೋಹಿತನಾಗಿ ನೋಡುತ್ತಿರಲು, ಆ ತರುಣಿಯು ತನ್ನ ಮಂಜುಲಗಾಯನವನ್ನು ನಿಲ್ಲಿಸಿ ಮತ್ತೆ ಸಲಾಮುಮಾಡಿ ವೀಣೆಯನ್ನು ಬಗಲಿಗೆ ಹಾಕಿ ಕೈಜೋಡಿಸುತ್ತ—

ತರುಣಿ–(ನಗುತ್ತ) ಖಾನಸಾಹೇಬರಿಗೆ ನನ್ನ ಗುರುತು ಹತ್ತಲಿಲ್ಲೆಂಬಂತೆ ತೋರುತ್ತದೆ.

ಕಾಸಿಮ–(ಆನಂದದಿಂದ) ಓಹೋ ! ನಮ್ಮ ಪ್ರಿಯ ಬೈರಾಗಿಣಿಯು ! ಬೈರಾಗಿಣಿ, ಗುರುತು ಹತ್ತದೇನುವಮಾಡೀತು ! ನಿನ್ನ ಗುರುತು ಮರೆಯುವಂಥ ಅಧನ್ಯನು ಜಗತ್ತಿನಲ್ಲಿರಬಹುದೆಯೆ ? ನಿನ್ನ ಆ ಬಿಕ್ಕೆಯ ಬೈರಾಗಿಣಿಯ ವೇಷವನ್ನು ಕಳಚಿ ಚೆಲ್ಲಿಸಿ ಉತ್ತಮ ವಸ್ತ್ರಾಲಂಕಾರಗಳಿಂದ ನಿನ್ನನ್ನು ಅಲಂಕರಿಸಬೇಕೆಂದು ನಾನು ಇದೇ ಈಗ ಯೋಚಿಸುತ್ತಿರಲು, ನೀನೇ ಹಾಗೆ ಅಲಂಕೃತಳಾಗಿ ಚಿನ್ನದ ಪುತ್ಥಳಿಯಂತೆ ನನ್ನ ಮುಂದೆ ಬಂದು ನಿಂತೆಯಲ್ಲ! ಬೈರಾಗಿಣಿ, ನೀನೇ ನನ್ನ ಪ್ರಿಯ ಬೈರಾಗಿಣಿಯಲ್ಲವೆ?

ಈ ಮೇರೆಗೆ ನುಡಿದು ಕಾಸಿಮನು ಮೋಹಪರವಶನಾಗಿ ಆ ತರುಣಿಯ ಕೈಹಿಡಿಯ ಹೋಗಲು, ಆಕೆಯು ತಟ್ಟನೆ ಹಿಂದಕ್ಕೆ ಸರಿದು ಅಟ್ಟಹಾಸದಿಂದ.......

ತರುಣಿ–ಯವನವೀರ, ಇಷ್ಟೇಕೆ ಅವಸರವು? ನಿನ್ನ ಪ್ರಿಯ ಬೈರಾಗಿಣಿಯೇ ನಾನು! ನೀನು ಹಿಂದಕ್ಕೆ ಸರಿದು ನಿನ್ನ ಸ್ಥಳದಲ್ಲಿ ಕುಳಿತುಕೋ ನೋಡೋಣ! ಇನ್ನು ನಿನ್ನ ಬೈರಾಗಿಣಿಯು ನಿನ್ನನ್ನು ಬಿಟ್ಟು ಎಲ್ಲಿಗೂ ಹೋಗುವಹಾಗಿಲ್ಲ. ಅಂತೇ ಆಕೆಯು ತನ್ನ ವೈರಾಗ್ಯದ ಉಡುಪು–ತೊಡುಪುಗಳನ್ನು ಚೆಲ್ಲಿಕೊಟ್ಟು ನಿನ್ನ ಪಾಣಿಗ್ರಹಣಕ್ಕಾಗಿ ತಾನಾಗಿ ನಿನ್ನ ಬಳಿಗೆ ನಡೆದುಬಂದಿರುವಳು.

ಕಾಸಿಮ–(ತನ್ನ ಸ್ಥಳದಲ್ಲಿ ಕುಳಿತುಕೊಂಡು) ನೂರಜಹಾನ, ಹಾಗಾದರೆ ನೀನೂ ಇತ್ತ ಕುಳಿತುಕೊಳ್ಳಬೇಕು.

ತರುಣಿ–(ಕುಳಿತುಕೊಳ್ಳುತ್ತ) ಇನ್ನುಮೇಲೆ ನಾನು ತಮ್ಮ ಅಪ್ಪಣೆಯನ್ನು ಹ್ಯಾಗೆ ಮೀರೇನು? ಆದರೆ ನನ್ನ ಪಾಣಿಗ್ರಹಣ ಮಾಡುವದಕ್ಕಿಂತ ಮೊದಲೇ ನನಗೆ ''ನೂರಜಹಾನ'' ಎಂದು ಹೆಸರು ಇಟ್ಟುಬಿಟ್ಟಿರಲ್ಲ !

ಕಾಸಿಮ– (ಆಶ್ಚರ್ಯದಿಂದ) ಏನು? ನೀನು ನಿಜವಾಗಿಯೇ ನನ್ನ ಪಾಣಿಗ್ರಹಣ ಮಾಡುವೆಯಾ ?

ತರುಣಿ– ಆ ಸುಯೋಗವು ಒದಗಬೇಕೆಂತಲೇ ನಾನು ಇಲ್ಲಿಯವರೆಗೆ ವೈರಾಗ್ಯದಿಂದ ಕಾಲ ಹರಣ ಮಾಡಿದ್ದು! ಇಂದಿಗೆ ನನ್ನ ವೈರಾಗ್ಯದ ಪರಿಸಮಾಪ್ತಿಯಾದಂತಾಯಿತು.

ಈ ಮೇರೆಗೆ ನುಡಿದ ತರುಣಿಯ ಮಾತುಗಳನ್ನು ಕೇಳಿ ಕಾಸಿಮನು ಬೆರಗಾದನು. ಆತನ ಆನಂದವು ಉಕ್ಕೇರಿತು. ತನ್ನ ಮನೋದಯಗಳು ಒಂದರಹಿಂದೊಂದು ಅನಾಯಾಸವಾಗಿ ಕೈಗೂಡಹತ್ತಿದವೆಂದು ಆತನು ಹಿರಿಹಿರಿ ಹಿಗ್ಗಿದನು. ಆ ಸ್ತ್ರೀಲಂಪಟನಿಗೆ ಪದ್ಮಿನಿಗಿಂತಲೂ ಈ ತರುಣಿಯು ಸುಂದರಿಯಾಗಿ ತೋರಿದಳು. ಆಗ ಆತನು ಉಲ್ಲಾಸದಿಂದ–

ಕಾಸಿಮ—ಹಾಗಾದರೆ ಇಂದೇ ನಿನ್ನ ನಿಕಾ ಆಗಿಹೋಗಲಿ!

ತರುಣಿ – ನಾನೆಲ್ಲಿ ಬೇಡವೆನ್ನುತ್ತೇನೆ. ಆದರೆ ಇಂದು ರಾಜಪುತ್ರಿಯಾದ ಪದ್ಮಿನಿಯ ಪಾಣಿಗ್ರಹಣವಾಗಬೇಕಾಗಿದೆಯಲ್ಲವೆ? ಅಂದಬಳಿಕ ನನ್ನ ಪಾಣಿಗ್ರಹಣದ ಮಾತೇ?

ಕಾಸಿಮ–ಆಕೆಯ ಪಾಣಿಗ್ರಹಣವು ನಾಳೆ. ನಿನ್ನ ಪಾಣಿಗ್ರಹಣವಾದ ಬಳಿಕ ಆಕೆಯ ಪಾಣಿಗ್ರಹಣವು.

ತರುಣೆ–ಬಹಳ ಸಂತೋಷವು. ಈ ಸಂತೋಷಕ್ಕಾಗಿ ಇಂದು ಈ ಕಂಪಲಿಯ ಕೋಟೆಯೆಲ್ಲ ಉತ್ಸವಮಯವಾಗಲಿ. ಈ ಎಲ್ಲ ಸೈನಿಕರು ಚಕ್ಕಂದದ ಊಟ–ಉಡಿಗೆ, ಆಟ–ನೋಟ, ಗಾಯನ–ವಾದನ, ನಾಚು–ರಂಗು ಇವುಗಳಲ್ಲಿ ಮಗ್ನರಾಗಿಹೋಗಲಿ! ಖಾವಂದರಿಗೆ ಇಂದು ರಾತ್ರಿ ನಾನು ಕೈಮುಟ್ಟಿ ಮದ್ಯಪ್ರಾಶನಮಾಡಿಸಬೇಕಾಗಿರುವದರಿಂದಲೂ, ಖಾವಂದರವರ ಉಚ್ಛಿಷ್ಟ ಮದ್ಯಪ್ರಾಶನಮಾಡಿ ನಾನು ಧನ್ಯಳಾಗಬೇಕಾಗುವದರಿಂದಲೂ ಯಾವತ್ತೂ ಸೈನಿಕರಿಗೆ ಯಥೇಚ್ಛ ಮದ್ಯಪ್ರಾಶನಮಾಡಲು ಅಪ್ಪಣೆಯಾಗಬೇಕು. ಇಂದು ನನ್ನ ವೈರಾಗ್ಯದ ಪರಿತ್ಯಾಗವಾಗುವದರಿಂದ ಇಂದಿನ ಯಾವತ್ತೂ ಸಮಾರಂಭದ ವೆಚ್ಚವು ಸರಕಾರದಿಂದಲೇ ಆಗತಕ್ಕದ್ದು. ಉತ್ಸವದಲ್ಲಿ ಎಳ್ಳಷ್ಟೂ ಕೊರತೆಯಾಗಬಾರದು. ನಿಮ್ಮ ಪ್ರಾಪ್ತಿಯಾದರೆ ಹೀಗೆ ಸರ್ವರಿಗೆ ಸಂತೋಷವುಂಟುಮಾಡುವೆನೆಂದು ನಾನು ದೇವರಿಗೆ ಹರಕೆ ಹೊತ್ತಿದ್ದೇನೆ.

ಈ ಮೇರೆಗೆ ನುಡಿದ ತರುಣೆಯ ಮಾತಿನಲ್ಲಿ ಕಾಮಾಂಧನಾಗಿ ಕಾಸಿಮನಿಗೆ ವ್ಯತ್ಯಾಸವೇನೂ ತೋರಲಿಲ್ಲ. ಹುಕ್ಕ–ಬುಕ್ಕರು ಅನಾಯಾಸ ಪ್ರತಿಬಂಧಿಸಲ್ಪಟ್ಟಿದ್ದಕ್ಕಾಗಿ ಆತನು ಹೇಗೂ ಇಂದು ಸಮಾರಂಭವನ್ನು ಮಾಡತಕ್ಕವನೇ ಇದ್ದನು. ಅದರಲ್ಲಿ ಆ ತರುಣೆಯು ಹೇಳಿದ್ದರಿಂದ ತೂಕಡಿಸುವವನಿಗೆ ಹಾಸಿಗೆ ಹಾಸಿಕೊಟ್ಟಹಾಗಾಯಿತು. ಆಕೆಯ ಮಾತು ನಡಿಸಿ ಆಕೆಯ ಮನಸ್ಸು ಸಂತೋಷಪಡಿಸುವ ಸುಸಂಧಿಯು ಅನಾಯಾಸವಾಗಿ ಆತನಿಗೆ ಒದಗಿದಂತಾಯಿತು. ಆದ್ದರಿಂದ ಆತನು ಆ ತರುಣೆಯ ಮಾತಿಗೆ ಸಂತೋಷದಿಂದ ಒಪ್ಪಿಕೊಂಡು, ಸಮಾರಂಭಗಳು ನಡೆಯುವಂತೆ ಡಂಗುರ ಹೊಯಿಸಲು ಆಜ್ಞೆಯಿತ್ತು, ಸಮಾರಂಭಕ್ಕಾಗಿ ಸರಕಾರದ ವೆಚ್ಚದ ಅನುಕೂಲತೆಯನ್ನು ಮಾಡಿಕೊಟ್ಟನು. ತರುಣೆಯು ಮನೆಗೆ ಹೋಗುವದಕ್ಕಾಗಿ ಮೇಲಕ್ಕೆದ್ದು ಸಲಾಮುಮಾಡಲು, ಕಾಸಿಮನು– ''ನೂರಜಹಾನ, ಇಂದು ರಾತ್ರಿ ನಿನ್ನ ನಿಕಾ ಆಗತಕ್ಕದ್ದಷ್ಟೇ? ಆ ಮೊದಲು ನಿನಗೆ ಮುಸಲ್ಮಾನೀ ಧರ್ಮದ ದೀಕ್ಷೆಯನ್ನು ಕೊಡಬೇಕಾಗುವದು. ಹೀಗೆ ನನ್ನನ್ನು ಬಿಟ್ಟು ಮೊದಲು ನಿನ್ನ ಪಾಣಿಗ್ರಹಣ ಮಾಡುವದರಿಂದ ಪದ್ಮಿನಿಗೆ ಅಸಮಾಧಾನವಾಗಲಿಕ್ಕಿಲ್ಲವಷ್ಟೆ? ಆಗಲಿ, ನಾವಿಬ್ಬರೂ ಕೂಡಿ ಹ್ಯಾಗಾದರೂ ಆಕೆಯ ಸಮಾಧಾನಮಾಡೋಣವಂತೆ'' ಅನ್ನಲು, ತರುಣೆಯು ನಗುತ್ತ ಕಾಸಿಮನ ಕೊರಳಿಗೊಂದು ಮಾಲೆಯನ್ನು ಹಾಕಿ, ತನ್ನ ಮೋಹದ ಬಲೆಗೆ ಮೃಗವು ಪೂರಾಸಿಕ್ಕಿತೆಂದು ಹಿಗ್ಗುತ್ತ ಮನೆಗೆ ಹೊರಟುಹೋಗಿ ಪದ್ಮಿನಿಯ ಮುಂದೆ ನಡೆದ ಸಂಗತಿಯನ್ನು ಸಂತೋಷದಿಂದ ಸವಿಸವಿಮಾಡಿ ಹೇಳತೊಡಗಿದಳು!

ತರುಣೆಯ ಮಾತನ್ನು ಕಾಸಿಮನು ಅಕ್ಷರಶಃ ಪಾಲಿಸಿದ್ದು ಆಶ್ಚರ್ಯವೇ ಸರಿ; ಯಾಕಂದರೆ ಆಗಿನ ಕಾಲವು ಚಕ್ಕಂದದಿಂದ ಸಮಾರಂಭಕ್ಕೆ ಅನುಕೂಲವಾಗದ್ದಿದ್ದಿಲ್ಲ. ಮಾಧವಾಚಾರ್ಯರ ಪುಣ್ಯಪ್ರಭಾವದಿಂದ ಕನ್ನಡಿಗರ ಜಾಗ್ರತಿಯಾಗಿರಲು, ಮುಸಲ್ಮಾನರು ಎಚ್ಚರದಿಂದಿರದಿದ್ದರೆ ಅವರ ಪರಿಣಾಮವಾಗುವಹಾಗಿದ್ದಿಲ್ಲ. ಪದ್ಮಿನಿಯ ಅಪಹರಣದ ಸಂಶಯದಿಂದ ದೇವರಾಜನು ಕಾಸಿಮನ ಪಾರುಪತ್ಯದ ಸಿದ್ಧತೆಯಲ್ಲಿ ತೊಡಗಿದ್ದನು. ಇದನ್ನೆಲ್ಲ ಕಾಸಿಮನು ಅರಿತಿದ್ದರೂ, ಅವನು ಸ್ತ್ರೀ ವ್ಯಾಮೋಹಿತನಾಗಿ ಹುಚ್ಚೆದ್ದು ಹರಿಯುವವನಂತೆ ಆಚರಿಸತೊಡಗಿದನು. ಮೇಲಾಗಿ

ಹುಕ್ಕ– ಬುಕ್ಕರು ತನ್ನ ಸೆರೆಯಾಳಾದದ್ದರಿಂದ ಹಿಂದೂ ಜನರ ಮುಗದಾಣವೇ ತನ್ನ ಕೈಯಲ್ಲಿ ಸಿಕ್ಕ ಹಾಗಾಗಿರುವದೆಂದು ಆತನು ಹಿಗ್ಗಿದನು. ಇದಲ್ಲದೆ ವಿಷಯದ ನಂಜು ಮೇಲೆಮೇಲೆ ಅವನ ಮೈಮರೆಸುತ್ತಿದ್ದು, ಹರಿದು ಹೊರಬೀಳಲಾರದಂಥ ಪದ್ಮಿನಿ ಬೈರಾಗಿಣಿಯರ ಬಲವಾದ ಮೋಹದ ಬಲೆಯು ಅವನನ್ನು ಬಿಗಿದು ಕೆಡವಿಹಾಕಿತ್ತು. ಈ ಎಲ್ಲ ಕಾರಣಗಳಿಂದ ಆ ನೀಚ ಸ್ವಾರ್ಥ ಪರಾಯಣನು ವಿವೇಕಭ್ರಷ್ಟನಾಗಿ ಹೊಲ್ಲದ ಕೆಲಸಕ್ಕೆ ಕೈಹಾಕಿದನು. ಹೆಂಗಸರ ಹುಚ್ಚುಹಿಡಿದ ಹುಲ್ಲುಮನುಜರ ಮತಿಯು ಹೀಗಾಗುವದೇ ಸರಿ! ಕೋಟೆಯಲ್ಲಿ ಸಮಾರಂಭದ ಕಾರ್ಯಗಳು ನಿರಾತಂಕವಾಗಿ ನಡೆದವು. ಸೈನಿಕರು ಮನಸ್ಸಿಗೆ ಬಂದಂತೆ ಸೆರೆಕುಡಿದು ಎಚ್ಚರತಪ್ಪಿ ಬಿದ್ದರು. ಕೋಟೆಯ ಕಾವಲಿನ ಕಸುವು ಕಡಿಮೆಯಾಯಿತು. ಅಂದಿನ ಮದ್ಯದಲ್ಲಿ ಸ್ವಾಭಾವಿಕ ಮದ್ಯಕ್ಕಿಂತ ಅಮಲೇರುವ ಗುಣವು ವಿಶೇಷವಾಗಿ ಇದ್ದಂತೆ ತೋರಿತು. ಅದನ್ನು ಕುಡಿದವರು ಬರಬರುತ್ತ ತೀರ ನಿಶ್ಚೇಷ್ಟವಾಗಿ ಬಿದ್ದುಕೊಳ್ಳತೊಡಗಿದರು. ಕೋಟೆಯೊಳಗಿನ ಎಲ್ಲ ಸೈನಿಕರಲ್ಲಿ ಬಖತ್ಯಾರನ ಸೈನಿಕರು ಮಾತ್ರ ಕುರಾಣದ ಪವಿತ್ರ ವಾಕ್ಯವನ್ನು ಪಾಲಿಸುವದಕ್ಕಾಗಿಯೋ, ಮತ್ತೆ ಯಾವ ಕಾರಣದಿಂದಲೋ ಮದ್ಯವನ್ನು ಮುಟ್ಟದೆ ಜಾಗರೂಕರಾಗಿದ್ದರು. ಅವರೇ ಅಂದಿನ ರಾತ್ರಿ ಕೋಟೆಯ ಆಯಕಟ್ಟಿನ ಕಾವಲಿನ ಸ್ಥಳಗಳನ್ನು ಹಿಡಿದುಕೊಂಡು ಕೋಟೆಯನ್ನು ರಕ್ಷಿಸತೊಡಗಿದರು. ಆದರೆ ಬೈರಾಗಿಣಿಯ ಪಾಣಿಗ್ರಹಣಕ್ಕಾಗಿ ಅತ್ಯಂತ ಆತುರನಾಗಿದ್ದ ಕಾಸಿಮನು ಇದರ ವಿಚಾರವನ್ನೇನೂ ಮಾಡದೆ, ಮಧ್ಯರಾತ್ರಿಯ ಸುಮಾರಿನಲ್ಲಿ ವಸ್ತ್ರಾಲಂಕಾರಭೂಷಿತನಾಗಿ ಪದ್ಮಿನಿಯ ಮಹಲಿನ ಕಡೆಗೆ ಸಾಗಿದನು.

ಕಾಸಿಮನು ಅಂತರ್ಗೃಹದಲ್ಲಿ ಕಾಲಿಟ್ಟಾಗ ಐದುತಾಸು ರಾತ್ರಿಯಾಗಿರಬಹುದು. ಆತನು ಅಲ್ಲಿಗೆ ಅತ್ಯಾತುರದಿಂದ ಹೋಗಿದ್ದನೆಂದು ಹೇಳುವ ಕಾರಣವಿಲ್ಲ; ಆದರೆ ಅಲ್ಲಿ ಆತನು ಮನಸ್ಸಿಗೆ ಸಮಾಧಾನವಾಗುವಂಥ ಸಂಗತಿಯೊಂದೂ ತೋರಲೊಲ್ಲದು. ಅಲ್ಲಿ ಪದ್ಮಿನಿಯಿಲ್ಲ— ಬೈರಾಗಿಣಿ ಯಿಲ್ಲ; ತನ್ನನ್ನು ಆದರಿಸಿ ಬರಮಾಡಿಕೊಳ್ಳುವ ಬೇರೆ ಜನರೂ ಇಲ್ಲ. ಒಟ್ಟಿಗೆ ಅಲ್ಲಿ ಜನರ ಸುಳಿವೇ ಇದ್ದಿಲ್ಲವೆಂದು ಹೇಳಬಹುದು. ಅಂತರ್ಗೃಹದ ಕಾವಲುಗಾರರೂ ಆತನಿಗೆ ಹೊಸಬರಾಗಿ ತೋರಿದರು. ಅವರು ತಮಗೆ ವಿನಯದಿಂದ ಸಲಾಮು ಕೂಡ ಮಾಡದಿರು ವದನ್ನು ನೋಡಿ ಆ ಅಭಿಮಾನಿಯಾದ ಯವನವೀರನ ಸರ್ವಾಂಗವು ತೃಪ್ತವಾಯಿತು. ಸಂತಾಪದ ಭರದಲ್ಲಿ ಆತನು ಒಬ್ಬ ಕಾವಲುಗಾರನನ್ನು ಗದ್ದರಿಸಿ– ''ಬದಮಾಷ, ಯಾರು ಬಂದಿರುವ ರೆಂಬದರ ಎಚ್ಚರವು ಕೂಡ ನಿನಗೆ ಇರುವದಿಲ್ಲವೇ?'' ಸೆರೆಕುಡಿದು ಅರವುಗೆಟ್ಟಿರುವೆಯೋ ಏನು?ಎಂದು ಕೇಳಲು, ಆ ಕಾವಲುಗಾರನು ನಗುತ್ತ– ''ಕಾಸಿಮ, ನಾನಂತೂ ಸೆರೆ ಕುಡಿದಿಲ್ಲ. ನಿನ್ನ ಅವಿಚಾರದ ಅಪ್ಪಣೆ ಯಂತೆ ನಿನ್ನ ಸೈನಿಕರು ಸೆರೆಕುಡಿದು ಬಿದ್ದಿರಬಹುದು; ನೀನು ರಾಜಪುತ್ರಿಯ ಹಾಗು ಬೈರಾಗಿಣಿಯ ಹುಚ್ಚಿನಿಂದ ಎಂದೋ ಅರವುಗೆಟ್ಟಿರುತ್ತೀ. ಅಂದಬಳಿಕ ನಮ್ಮಂಥ ಸ್ವಾಮಿನಿಷ್ಠರನ್ನು ಗದ್ದರಿಸುವ ಅಧಿಕಾರವು ನಿನಗೆ ಹ್ಯಾಗೆ ಪ್ರಾಪ್ತವಾಗುವದು?''

ಈ ಮೇರೆಗೆ ನುಡಿದವನ ದನಿಯಮೇಲಿಂದ ಆತನು ಬಖತ್ಯಾರ ಖಿಲಜಿಯೆಂಬದು ಕಾಸಿಮನಿಗೆ ಗೊತ್ತಾಗಲು, ಅವನ ಕಣ್ಣುಗಳು ನಿಚ್ಚಳವಾಗಿ ತೆರೆದವು. ತನ್ನೊಡನೆ ಮಿತ್ರತ್ವ ಬಳಿಸಿದ್ದ ಬಖತ್ಯಾರನು ಹೀಗೆ ನಿಷ್ಠುರ ಮಾತಾಡಲಿಕ್ಕೆ ಕಾರಣವೇನೆಂಬದು ಆತನಿಗೆ ತಿಳಿಯದಾಯಿತು. ಆಗ ಆತನು ಮೆತ್ತಗಾಗಿ ಬಖತ್ಯಾರನನ್ನು ಕುರಿತು–

ಕಾಸಿಮ–ಪ್ರಿಯದೋಸ್ತ, ನನ್ನ ಸಂಗಡ ಇಂಥ ನಿಷ್ಠುರ ಮಾತುಗಳೇಕೆ? ಇಂದಿನವರೆಗೆ ನನ್ನ ಮಾತು ಮೀರದೆ ಕೇವಲ ವಿನಯಭಾವದಿಂದ ನಡೆದುಕೊಳ್ಳುತ್ತ ಬಂದಿದ್ದ ನೀನು, ಹೀಗೆ ನನ್ನನ್ನು ನಿಷ್ಕಾರಣ ನಿರಾಕರಿಸಿ ಅವಮಾನಗೊಳಿಸಬಹುದೇ? ನೀನು ಸ್ವಾಮಿನಿಷ್ಠನೆಂದು ಹೇಳಿಕೊಳ್ಳುವಾಗ ನಾನು ಸ್ವಾಮಿದ್ರೋಹಿಯಾದೆನಲ್ಲ!

ಬಖತ್ಯಾರ– ಅದರಲ್ಲಿ ಸಂದೇಹವೇನು ? ಅಧಿಕಾರದ ಮದದಿಂದ ನೀಚಸ್ವಾರ್ಥಕ್ಕೆ ಹರಿದು ಬಿದ್ದು ಸ್ವಾಮಿಯ ನಿಜವಾದ ಹಿತಕ್ಕೆ ಬಾಧೆಯನ್ನುಂಟುಮಾಡುವ ಸೇವಕರು ಸ್ವಾಮಿದ್ರೋಹಿಗಳೇ ಸರಿ.

ಕಾಸಿಮ–ಅಂಥ ದ್ರೋಹವನ್ನು ನೀನು ನನ್ನಲ್ಲೇನು ಕಂಡೆ?

ಬಖತ್ಯಾರ–ಈಗ ಕಂಪಲಿಯ ಕೋಟೆಯು ಅನಾಯಾಸವಾಗಿ ಶತ್ರುಗಳ ಕೈಸೇರುವದಲ್ಲ, ಇದಕ್ಕೆ ಹೆಂಗಸರ ಹುಚ್ಚುಹಿಡಿದ ನಿನ್ನ ಅವಿಚಾರದ ಸ್ವಾರ್ಥದ ನಡತೆಯಲ್ಲದೆ, ಬೇರೆ ಕಾರಣ ವೇನಿರಬಹುದು? ಇದು ನಿನ್ನ ಸ್ವಾಮಿನಿಷ್ಠೆಯ ಲಕ್ಷಣವೋ–ಸ್ವಾಮಿದ್ರೋಹದ ಲಕ್ಷಣವೋ ನೀನೇ ತಿಳಿದುನೋಡು. ರಾಜನ ಮುಖ್ಯ ಕರ್ತವ್ಯವೂ, ಆತನ ಅತ್ಯಂತವಾದ ಹಿತದ ಸಾಧನವೂ, ಆತನ ಸುರಕ್ಷಿತತೆಯ ಭದ್ರವಾದ ಕವಚವೂ ಆದ ಪ್ರಜಾರಂಜನದ ಕಡೆಗೆ ಲಕ್ಷಗೊಡದೆ, ಅಧಿಕಾರ–ಬಲಗಳ ಅಹಂಭಾವದಿಂದ ಪ್ರಜೆಗಳನ್ನು ಹಿಂಸಿಸಿ ತನ್ನ ದುರಾಶೆಯನ್ನು ಪೂರ್ಣ ಮಾಡಿಕೊಳ್ಳುವ ನಿನ್ನಂಥ ಕೃತಘ್ನ ರಾಜ್ಯಾಧಿಕಾರಿಯು ರಾಜದ್ರೋಹಿಯಲ್ಲದೆ ಮತ್ತೇನು?

ಕಾಸಿಮ–ಇರಲಿ, ರಾಜದ್ರೋಹದ ಮಾತು ಹಿಂದಗಡೆ ನೋಡಿಕೊಳ್ಳೋಣವಂತೆ; ಆದರೆ ಕಂಪಲಿಯು ಕಾಸಿಮನ ಕೈಬಿಡಲಿಕ್ಕೆ ಅವನೇನು ಕೈಯಲ್ಲಿ ಬಳೆಯಿಟ್ಟಿರುವದಿಲ್ಲ.

ಈ ಮೇರೆಗೆ ನುಡಿದ ಕಾಸಿಮನು ಸಂತಾಪಗೊಂಡು ಅಂತರ್ಗೃಹದಿಂದ ಹೊರಬಿದ್ದನು. ಆಗ ಬಖತ್ಯಾರನು ಉಪಹಾಸದಿಂದ ಆತನನ್ನು ತಿರಸ್ಕರಿಸಿದನಲ್ಲದೆ, ಹೋಗುವವನನ್ನು ಸರ್ವಥಾ ತಡೆಯಲಿಲ್ಲ. ಕಾಸಿಮನು ಹೋಗಿನೋಡಿದಲ್ಲೆಲ್ಲ ಬಖತ್ಯಾರನ ಜನರು ಜಾಗರೂಕರಾಗಿದ್ದು, ಅವನವರು ಮದ್ಯಪಾನದಿಂದ ಮೈಮರೆತು ಬಿದ್ದಿದ್ದರು. ಅದನ್ನು ನೋಡಿ ಕಾಸಿಮನು ಗಾಬರಿ ಯಾದನು. ಇದೇನೋ ಬಖತ್ಯಾರನ ದ್ರೋಹವಿರಬೇಕೆಂದು ಆತನು ಯೋಚಿಸಿ ಸಂತಾಪದಿಂದ ಹಲ್ಲುಕಡಿಯಹತ್ತಿದನು. ಆದರೆ ಮುಂದೆ ಏನು ಮಾಡಬೇಕೆಂಬದು ಆತನಿಗೆ ತೋಚದಾಯಿತು. ಆತನು ನಿಂತಲ್ಲಿ ನಿಂತು ಸ್ವಲ್ಪ ಆಲೋಚಿಸಿ, ಹುಕ್ಕ–ಬುಕ್ಕರನ್ನು ಸೆರೆಯಿಟ್ಟಲ್ಲಿಗೆ ಹೋಗುವದಕ್ಕಾಗಿ ಹೊರಟನು. ಹೋಗಹೋಗುತ್ತ ಆತನಿಗೆ ಬೈರಾಗಿಣಿಯ ಗಾಯನ ಧ್ವನಿಯು ಕೇಳತೊಡಗಿತು. ಈ ಎಲ್ಲ ಅನರ್ಥಕ್ಕೆ ಈ ಹೊಯ್ಮಾಲೆಯೇ ಕಾರಣಳಾದ್ದರಿಂದ ಮೊದಲು ಈಕೆಯ ಸಮಾಚಾರವನ್ನು ತಕ್ಕೊಳ್ಳಬೇಕೆಂದು ಗಾಯನ ಧ್ವನಿಯು ಕೇಳಿಬರುವ ದಿಕ್ಕಿನ ಕಡೆಗೆ ಆತನು ಸಾಗಿದನು. ಆತನು ಭರದಿಂದ ಸಾಗುತ್ತಿರುವಾಗ ಆತನ ಮೈಗಾವಲಿನ ಇಬ್ಬರು ಸರದಾರರು ವಿನಯದಿಂದ ಸಲಾಮು ಮಾಡಿ– ''ಖಾವಿಂದ, ಘಾತವಾಯಿತು! ಬಖತ್ಯಾರ ಖಿಲಜಿಗೆ ಆಶ್ರಯ ಕೊಡಬೇಡಿರೆಂದು ನಾವು ತಮಗೆ ಎಷ್ಟು ಹೇಳಿದರೂ ತಾವು ಕೇಳಲಿಲ್ಲ. ಆ ದುಷ್ಟನು ಕಾಫರರಿಗೆ ಅನುಕೂಲನಾಗಿ ಸ್ವಜನದ್ರೋಹವನ್ನು ಚಿಂತಿಸಿದನು! ಇಂದಿನ ಸಮಾರಂಭದ

ಯಾವತ್ತೂ ಅಧಿಕಾರವನ್ನು ಆತನ ಕಡೆಗೆ ಒಪ್ಪಿಸಿಬಿಟ್ಟಿದ್ದರಿಂದ ಆ ದ್ರೋಹಿಯು ವಿಲಕ್ಷಣ ಮಾದಕಗುಣವುಳ್ಳ ಮದ್ಯವನ್ನು ನಮ್ಮ ಸೈನಿಕರಿಗೆಲ್ಲ ಕುಡಿಸಿ ಘಾತಮಾಡಿದನು. ಅವನ ಸೈನಿಕರೊಬ್ಬರೂ ಮದ್ಯಪಾನ ಮಾಡಿರುವದಿಲ್ಲ. ಅವರು ಕಾವಲಿನ ಮುಖ್ಯಮುಖ್ಯ ಸ್ಥಳಗಳನ್ನೆಲ್ಲ ಹಿಡಿದುಕೊಂಡು ಕುಳಿತಿರುವರು. ಹುಕ್ಕನು ಸೆರೆಯಲ್ಲಿ ಸಿಕ್ಕನೆಂದು ತಾವು ಉಬ್ಬಿದಿರಿ; ಆದರೆ ಹುಕ್ಕನ ಸೈನಿಕರು ಇಷ್ಟರಲ್ಲಿ ಸಾವಿರಾರು ಜನರು ಕೋಟೆಯೊಳಗೆ ಬಂದಿರುವರು. ಈ ಎಲ್ಲ ತಂತ್ರಕ್ಕೆ ಮಾಧವನೆಂಬ ಬ್ರಾಹ್ಮಣನು ಕಾರಣನಂತೆ. ಕಾಫರನಾದ ಆ ಬ್ರಾಹ್ಮಣನಿಗೆ ಬಖತ್ಯಾರನು ಕೇವಲ ಅಂಕಿತನಾಗಿ ಆತನು ಹೇಳಿದಂತೆ ಕುಣಿಯುತ್ತಿರುವನು! ಮುಸಲ್ಮಾನರು ಮುಸಲ್ಮಾನರ ಒಂದು ರಕ್ತದ ಹನಿಯನ್ನು ಕೂಡ ಕೆಡವಲಾಗ ದೆಂದು ಕುರಾಣದ ಆಜ್ಞೆಯಿದ್ದು ಈ ನೀಚ ಬಖತ್ಯಾರನು ಮುಸಲ್ಮಾನನೆನಿಸಿ ಮುಸಲ್ಮಾನರ ಪ್ರಾಣಹರಣ ಮಾಡಲಿಕ್ಕೆ ನಿಂತಿರುವನು ! ಖಾವಿಂದ, ನಾವೂ, ನಮ್ಮ ಇನ್ನೂರಾಐವತ್ತು ಜನರೂ ಸಂಶಯದಿಂದ ಇಂದಿನ ಸಮಾರಂಭದಲ್ಲಿ ಸೇರದೆ ಮದ್ಯವನ್ನು ಮುಟ್ಟದೆ ಜಾಗರೂಕರಾಗಿರುವೆವು. ಇನ್ನು ಕೋಟೆಯು ಕಾಫರರ ಕೈಸೇರುವದೇನೋ ನಿಜ; ಆದರೆ ನಾವು ಈಗಲೇ ಬಖತ್ಯಾರನ ಮೇಲೆ ಬಿದ್ದು ಮೊದಲು ಆ ಸ್ವಾಮಿದ್ರೋಹಿಯನ್ನು ತುಂಡರಿಸೋಣ. ಈ ಪ್ರಸಂಗದಲ್ಲಿ ತಾವು ವ್ಯರ್ಥ ಕಾಲಹರಣಮಾಡಿದರೆ, ಹಾಗೂ ನಿಮ್ಮ ಸಂರಕ್ಷಣೆಯ ಪರಿವೆಯಿಲ್ಲದೆ ''ನನ್ನ ಸ್ವಾಧೀನದಲ್ಲಿರುವ ಕೋಟೆ, ನನ್ನಂಥ ಬಲಾಢ್ಯನ ಗೊಡವೆಗೆ ಬರುವವರಾರು'' ಎಂಬ ಮಬ್ಬಿನಿಂದ ಒಬ್ಬರೇ ಕೋಟೆ ಯಲ್ಲಿ ತಿರುಗಾಡಿದರೆ, ನಿಶ್ಚಯವಾಗಿ ಕಾಫರರ ಸೆರೆಯಾಳಾಗುವಿರಿ. ಆ ದುಷ್ಟ ಬಖತ್ಯಾರನು ಈಗ ನಿಮ್ಮನ್ನು ಸುಮ್ಮನೆ ಬಿಟ್ಟಿರುವದೇ ಆಶ್ಚರ್ಯವು. ಎರಡನೆಯ ವಿಚಾರ ಮಾಡಬೇಡಿರಿ, ತಿರುಗಿರಿ; ಹೀಗೆಯೇ ಹೋಗಿ ಬಖತ್ಯಾರನ ನಾಶಮಾಡಿ ಆಮೇಲೆ ನಮ್ಮ ಇಸ್ಲಾಮಿ ಜನರ ಪರಾಕ್ರಮವನ್ನು ಕಾಫರರಿಗೆ ತೋರಿಸೋಣ. ಆ ದುಷ್ಟ ಬ್ರಾಹ್ಮಣನಾದ ಮಾಧವನೂ ಇಲ್ಲಿಗೆ ಬಂದಿರುವನಂತೆ. ಆ ತುಕಡಿಮುರುಕ ಹಾರವನು ಎಂಥ ಕಾರಸ್ಥಾನಿಯವನು! ಈಗಾಗಿರುವ ಕರ್ನಾಟಕದ ಜಾಗ್ರತಿಗೆ ಅವನೇ ಕಾರಣನೆಂಬುದನ್ನು ತಾವು ಕೇಳಿರುವಿರಿ. ನಾವು ಬಖತ್ಯಾರನ ಸಮಾಚಾರವನ್ನು ತೆಗೆದು ಕೊಂಡಕೂಡಲೆ ಆ ಮಾಧವನ ಮಹಿಮೆಯನ್ನು ಪರೀಕ್ಷಿಸೋಣ! ಖಾವಿಂದ, ನಾವು ಇನ್ನೂರಾಐವತ್ತೇ ಜನರಿರುವೆವೆಂದು ಸಂದೇಹಪಡುವಂಥ ಅವಸಾನ ಘಾತಕಿಗಳು ತಾವು ಅಲ್ಲವೆಂಬದನ್ನು ಸೇವಕರಾದ ನಾವು ಬಲ್ಲೆವು. ರಣಭೂಮಿಯಲ್ಲಿ ತಮ್ಮನ್ನು ಎದುರಿಸುವಂಥ ವೀರನು ಅದಾವನಿರುವನು? ಎಂದು ನುಡಿದು ಸಾಂಕೇತಿಕ ಕೊಂಬನ್ನು ಊದಿದಕೂಡಲೆ ಇನ್ನೂರಾಐವತ್ತು ಜನ ವೀರರು ಶಸ್ತ್ರಪಾಣಿಗಳಾಗಿ ಕಾಸಿಮನನ್ನು ಸುತ್ತುವರಿದು ರಕ್ಷಿಸುತ್ತ ಬಖತ್ಯಾರನ ಮೇಲೆ ಸಾಗಿ ಹೋಗುವದಕ್ಕಾಗಿ ಅಪ್ಪಣೆಯನ್ನು ಕೇಳತೊಡಗಿದರು.

ಈ ಆಕಸ್ಮಿಕ ಪ್ರಸಂಗವನ್ನು ನೋಡಿ ಕಾಸಿಮನು ಚಕಿತನಾದನು; ಆದರೆ ಆ ಮಹಾ ಬಲಶಾಲಿಯು ಪ್ರಸಂಗದಲ್ಲಿ ಕೈಕಾಲುಗೆಡುವಂಥ ರಣಹೇಡಿಯಿದ್ದಿಲ್ಲ. ಆತನು ಹೆಸರಾದ ರಣ ಪಂಡಿತನು. ಆತನು ತನ್ನ ಸರದಾರರ ಮಾತನ್ನು ಸಂಪೂರ್ಣವಾಗಿ ಒಪ್ಪಿಕೊಂಡು ಬಖತ್ಯಾರನ ರಕ್ತವನ್ನು ಹಿಂಡುವದಕ್ಕಾಗಿ ತನ್ನ ಸೈನ್ಯದೊಡನೆ ಆವೇಶದಿಂದ ಸಾಗಿದನು. ಅವರು ಸ್ವಲ್ಪ

ಮುಂದಕ್ಕೆ ಹೋಗುತ್ತಿರಲು ಇನ್ನೂರಾಐವತ್ತೇ ಜನ ಹಿಂದೂಸೈನಿಕರು ಆ ಯವನಸೈನಿಕರನ್ನು ಅಡ್ಡಗಟ್ಟಿದರು. ಆ ಕನ್ನಡ ವೀರರ ಮುಖ್ಯರು ಹುಕ್ಕ–ಬುಕ್ಕರಾಗಿದ್ದರು. ಕನ್ನಡಿಗರ ಬೇರೊಂದು ದೊಡ್ಡ ಸೈನ್ಯವು ಒತ್ತಟ್ಟಿಗೆ ನಿಂತುಕೊಂಡಿತ್ತು. ಈ ಸೈನ್ಯಗಳಲ್ಲಿ ಮುಸಲ್ಮಾನ ಸೈನಿಕರಿದ್ದಿಲ್ಲ. ಬಖತ್ಯಾರನ ಕೆಲವು ಸೈನ್ಯವು ಕಾವಲಿನ ಸ್ಥಳಗಳನ್ನು ಕಾಯುತ್ತಲಿತ್ತು. ಉಳಿದ ಆತನ ಸೈನ್ಯವು ಮಾಧವಾಚಾರ್ಯರ ಅಪ್ಪಣೆಯಂತೆ ಒತ್ತಟ್ಟಿಗೆ ತಟಸ್ಥವಾಗಿ ನಿಂತುಕೊಂಡಿತ್ತು. ಈ ಎಲ್ಲ ವ್ಯೂಹರಚನೆಯನ್ನು ನೋಡಿ ಕಾಸಿಮನೂ ಅವನ ಎಲ್ಲ ಸೈನಿಕರೂ ಬೆರಗಾಗಿ ನಿಂತುಕೊಂಡರು. ಸೈನ್ಯದ ಯಾವ ಗುಂಪಿನಲ್ಲಿ ಬಖತ್ಯಾರನಿರುವ ನೆಂಬದು ಅವರಿಗೆ ತಿಳಿಯದಾಯಿತು. ಆ ಮುಸಲ್ಮಾನ ವೀರರು ಯುದ್ಧಕ್ಕಾಗಿ ಅಂಜುತ್ತಿದ್ದಿಲ್ಲ. ಆದರೆ ಅವರು ಮೊದಲು ಬಖತ್ಯಾರನ ಸೇಡನ್ನು ತೀರಿಸಿಕೊಳ್ಳಬೇಕಾಗಿತ್ತು; ಆ ಸೇಡು ತೀರಿಸಿಕೊಳ್ಳುವ ಕೆಲಸವಾದ ಬಳಿಕ ಅವರೆಲ್ಲರೂ ಶೌರ್ಯದಿಂದ ಕಾದುತ್ತ ಸಮರ ಭೂಮಿಯಲ್ಲಿ ದೇಹವಿಡಲು ನಿಶ್ಚಯಿಸಿದ್ದರು. ಈ ಸ್ಥಿತಿಯಲ್ಲಿ ಕಾಸಿಮನು ಎದುರಿನ ಸೈನ್ಯದವರನ್ನುದ್ದೇಶಿಸಿ–ಕನ್ನಡ ವೀರರೇ, ವೀರಮಹಮ್ಮದೀಯರು ನಾವು ಸಮರಕ್ಕೆ ಸನ್ನದ್ಧರಾಗಿ ಬಂದಿರುವದರಿಂದ ನಿಮ್ಮ ತೋಳು ತಿಂಡೆಯನ್ನು ಕಳೆದುಕೊಳ್ಳುವ ಚಿಂತೆಯನ್ನು ಮಾಡಬೇಡಿರಿ. ನಾವು ಇನ್ನೂರಾಐವತ್ತು ಜನರೇ ನಿಮ್ಮೆಲ್ಲರೊಡನೆ ಕಾದಲಿಕ್ಕೆ ಸಾಕಾಗಿರುವೆವು. ಆದರೆ ಮೊದಲು ಬಖತ್ಯಾರನು ತನ್ನ ಸೈನ್ಯದೊಡನೆ ನಮ್ಮ ಸಂಗಡ ಕಾದಲಿಕ್ಕೆ ಬರಲಿ. ಆಮೇಲೆ ಸರ್ವಸೂತ್ರ ಚಾಲಕನಾದ ಮಾಧವನ ಮಹಿಮೆಯ ಪಡಿಕಟ್ಟನ್ನು ನೋಡಬೇಕಾಗಿರುವದರಿಂದ ಬಖತ್ಯಾರನು ಬಕ್ಕಬೊರಲು ಬಿದ್ದ ನಂತರದಲ್ಲಿ ಆ ಬ್ರಾಹ್ಮಣನು ಸೈನ್ಯದೊಡನೆ ನಮ್ಮ ಮೇಲೆ ಸಾಗಿಬರಲಿ. ಇವರಿಬ್ಬರಾದ ಬಳಿಕ ಯಾರು ನಮ್ಮ ಮೇಲೆ ಸೈನ್ಯ ಸಾಗಿಸಿಕೊಂಡು ಬಂದರೂ ಚಿಂತೆಯಿಲ್ಲ. ಎಲ್ಲಿ? ಬಖತ್ಯಾರನು ಎಲ್ಲಿರುವನು? ಮೊದಲು ಆ ವಿಶ್ವಾಸ ಘಾತಕಿಯನ್ನು ಮುಂದಕ್ಕೆ ನೂಕಿರಿ. ಎಂದು ನುಡಿಯಲು ಮಾಧವಾಚಾರ್ಯರೇ ಮುಂದುವರಿದು ಬಂದು ಗಂಭೀರವಾಣಿಯಿಂದ ಯವನ ವೀರಾ, ನಿನ್ನ ಮಾತಿನಂತೆ ಬಖತ್ಯಾರನನ್ನು ನಿನ್ನೊಡನೆ ಕಾದಲಿಕ್ಕೆ ಕಳಿಸುವದು ನಿಮ್ಮ ಇಸ್ಲಾಮೀಧರ್ಮಕ್ಕೆ ವಿರೋಧ ವಾಗಿರುವದರಿಂದ ನಾನು ಧರ್ಮವಿರುದ್ಧ ಕೆಲಸವನ್ನು ಮಾಡಲಾರೆನು. ಪವಿತ್ರ ಕುರಾಣದ ವಾಕ್ಯದ ಆಧಾರವನ್ನು ಈಗ ನೀನೇ ಹೇಳಿರುವಿಯಲ್ಲವೆ? ಅಂದಬಳಿಕ ಮುಸಲ್ಮಾನನಾದ ಬಖತ್ಯಾರನು ಮುಸಲ್ಮಾನರಾದ ನಿಮ್ಮ ರಕ್ತವನ್ನು ಸುರಿಸಲಿಕ್ಕೆ ಹ್ಯಾಗೆ ಮುಂದುವರಿದಾನು? ಹಾಗೆ ರಕ್ತಸುರಿಸ ಬೇಕಾಗಿದ್ದರೆ ಆತನು ನಿನ್ನನ್ನು ಅಂತರ್ಗೃಹದಿಂದ ಸುಮ್ಮನೆ ಹೋಗಗೊಡುತ್ತಿದ್ದನೇ? ಅದರಂತೆ, ಮದ್ಯಪಾನದಿಂದ ಮೈಮರೆತು ಬಿದ್ದಿರುವ ನಿನ್ನ ಸೈನಿಕರ ಸಂಹಾರದ ಅಧರ್ಮ ಕಾರ್ಯಮಾಡಲಿಕ್ಕೆ ಆತನಿಗೆ ಬರುತ್ತಿದ್ದಿಲ್ಲವೆ? ಈಗ ಕಾದುವ ರಭಸದಿಂದ ಸಾಗಿಬಂದಿರುವ ನಿನಗೆ ಎದುರಾಗಲಿಕ್ಕೆ ಆ ಧರ್ಮತತ್ಪರವೀರನು ಅಂಜುತ್ತಿರುವನೆ? ಹೀಗಿದ್ದು, ಮುಸಲ್ಮಾನರ ಒಂದು ರಕ್ತದ ಹನಿಯನ್ನೂ ಕೂಡ ಮುಸಲ್ಮಾನರು ಕೆಡವುವ ಪ್ರಸಂಗವನ್ನು ಧರ್ಮಿಷ್ಠ ಬಖತ್ಯಾರನು ತಂದಿರುವದಿಲ್ಲ. ಇನ್ನು ಮುಂದೆಯಾದರೂ ಅಂಥ ಹೀನ ಪ್ರಸಂಗವನ್ನು ಒದಗಿಸುವ ಇಚ್ಛೆಯು ಬಖತ್ಯಾರನಿಗಾಗಲಿ, ನನಗಾಗಲಿ ಇರುವದಿಲ್ಲ; ಯಾಕಂದರೆ ಮಹಾತ್ಮರಾದ ಪೈಗಂಬರರ ವಾಕ್ಯವು

ಅಕ್ಷರಶಃ ಪಾಲಿಸತಕ್ಕದ್ದಾಗಿದೆ. ಪೈಗಂಬರರ ದೃಷ್ಟಿಯ ಮುಸಲ್ಮಾನರೇ ನಿಜವಾದ ಮುಸಲ್ಮಾನರು. ಆ ಮಹಾತ್ಮರು ನಿಜವಾದ ಮುಸಲ್ಮಾನರ ರಕ್ತವನ್ನು ನಿಜವಾದ ಮುಸಲ್ಮಾನರು ಸುರಿಸಬಾರದೆಂದು ಆಜ್ಞಾಪಿಸಿರುವರು. ನಿಜವಾದ ಮುಸಲ್ಮಾನರೆಂದರೆ ತಮ್ಮಂತೆ ಪರರನ್ನು ಬಗೆಯುವವರು; ತಮ್ಮ ಹಿತಕ್ಕಾಗಿ ಮಂದಿಯ ಬಾಧ್ಯತೆಗೆ ಬಾಧೆತಾರದವರು; ಭಕ್ತಿ-ಜ್ಞಾನ-ವೈರಾಗ್ಯಸಂಪನ್ನರು; ಸದ್ಗುರುಗಳಾದ ಪೈಗಂಬರರ ಆಜ್ಞೆಯನ್ನು ಅಕ್ಷರಶಃ ಪಾಲಿಸುವವರು. ಇಂಥ ನಿಜವಾದ ಮುಸಲ್ಮಾನರಿಗೂ, ನಿಜವಾದ ಬ್ರಾಹ್ಮಣರಿಗೂ, ನಿಜವಾದ ಕ್ರಿಶ್ಚಿಯನ್ನರಿಗೂ, ನಿಜವಾದ ಯಾವ ಧರ್ಮದವರಿಗೂ ಭೇದವಿರುದಿಲ್ಲವೆಂದು ನಿರ್ಬಾಧವಾಗಿ ತಿಳಿಯತಕ್ಕದ್ದು. ಯವನವೀರ, ನಿಮ್ಮೆಲ್ಲರನ್ನು ಅಂಥ ಮುಸಲ್ಮಾನರೆಂದು ನಾವು ತಿಳಿದಿರುವ ದರಿಂದ ಬಖತ್ಯಾರನಂತೂ ತನ್ನ ಅಪ್ಪಣೆಯ ಹೊರತು ನಿಮ್ಮ ಮೇಲೆ ಕೈಮಾಡುವ ಹಾಗಿಲ್ಲ. ಮೇಲೆ ಹೇಳಿದ ಲಕ್ಷಣಗಳುಳ್ಳವರು ನೀವಾದರೆ, ಅಂದರೆ ಬ್ರಾಹ್ಮಣ ವೃತ್ತಿಯವರಾದರೆ ಬ್ರಾಹ್ಮಣನಾದ ನಾನೂ ನಿಮ್ಮನ್ನು ವೃತ್ತಿಬಾಂಧವರೆಂದು ತಿಳಿದು ಬಂಧುದ್ರೋಹಕ್ಕೆ ಸರ್ವಥಾ ಮುಂದುವರಿಯಲಾರೆನು. ಪ್ರಿಯಬಂಧು ಕಾಸಿಮಖಾನ, ವಿಚಾರಮಾಡಿ ನೋಡು. ಪವಿತ್ರ ಕುರಾಣವು ಮದ್ಯಪಾನವನ್ನು ನಿಷೇಧಿಸುವದಿಲ್ಲವೆ? ಪರರ ಸೊತ್ತನ್ನೂ ಬಾಧ್ಯತೆಯನ್ನೂ ಅನ್ಯಾಯದಿಂದ ಅಪಹರಿಸಲು ಮಹಾತ್ಮರಾದ ಪೈಗಂಬರರು ಒಪ್ಪಿಕೊಳ್ಳುತ್ತಿರಬಹುದೆ? ಪರಸ್ತ್ರೀ ಗಮನವನ್ನೂ, ಚೌರ್ಯಾದಿ ನೀಚ ಕರ್ಮಗಳನ್ನೂ ಪರರ ಸ್ವಾತಂತ್ರ್ಯ ಹರಣರೂಪ ಮಹಾಪಾತಕವನ್ನೂ ಜ್ಞಾನಿಗಳು ಸಮ್ಮತಿಸುತ್ತಿರಬಹುದೆ? ಇಂಥ ಹಲವು ಬಗೆಯ ಅನ್ಯಾಯಗಳು, ನೀಚ ಸ್ವಾರ್ಥದ ಬಲೆಗೆ ಬಿದ್ದಿರುವ ಅಹಂಭಾವದ ನಿಮ್ಮಂಥ ಮದಾಂಧರಾದ ರಾಜಕೀಯ ಅಧಿಕಾರಿಗಳಿಂದ ಘಟಿಸುತ್ತಿರುವದರಿಂದ ನಿಮ್ಮನ್ನು ಹಾದಿಗೆ ತಂದು ನಮ್ಮದನ್ನು ನಾವು ಕಾಯ್ದುಕೊಳ್ಳಲಿಕ್ಕೆ ''ಶಠಸ್ಯ ಶಾಠ್ಯಂ'' ಎಂಬ ಸಿದ್ಧಾಂತದಂತೆ ನಾವು ಹೆಣಗುವದು ಅನ್ಯಾಯವಾಗಬಹುದೆ? ನಿಮ್ಮ ಅನ್ಯಾಯದ ಪ್ರತೀಕಾರವನ್ನು ಉಪಾಯಾಂತರದಿಂದ ನಾವು ಮಾಡೇವಲ್ಲದೆ, ನಮ್ಮ ಹಿತಕ್ಕಾಗಿ ಅನ್ಯಾಯವನ್ನು ಪರಮಸಾಧನವೆಂದು ಸರ್ವಥಾ ಆಚರಿಸೆವು! ಕನ್ನಡಿಗರಾದ ನಮ್ಮ ಸ್ವಾತಂತ್ರ್ಯದ ಹರಣಮಾಡಿ, ನಮ್ಮನ್ನು ಮನುಷ್ಯಕೋಟಿಯಿಂದ ಪಶುಕೋಟಿಯಲ್ಲಿ ದಬ್ಬಲಿಕ್ಕೆ ನಿಮಗೇನು ಬಾಧ್ಯತೆಯಿದೆ? ವೀರಪುಂಗವ, ಈಗಾದರೂ ವಿಚಾರಮಾಡು. ಈಗ ನಿನ್ನ ಅಹಂಕಾರದ ಸಾಧನಗಳು ಬಹುಮಟ್ಟಿಗೆ ಕಡಿಮೆಯಾಗಿರು ವದರಿಂದ ಹೀನಬಲನಾಗಿರುವ ನಿನ್ನ ಕಣ್ಣಿಗೆ ಅಂಜನಹಚ್ಚಿದ ಹಾಗಾಗಿ ವಿಚಾರಮಾಡಲು ತಕ್ಕ ಅಧಿಕಾರವು ಈಗ ನಿನಗೆ ಪ್ರಾಪ್ತವಾಗಿರುತ್ತದೆ. ಇನ್ನೊಮ್ಮೆ ನಿನಗೆ ಹೇಳುತ್ತೇನೆ, ನೀನು ನಿಜವಾದ ಮುಸಲ್ಮಾನ ನಾಗಿದ್ದರೆ, ನಿಜವಾದ ಮುಸಲ್ಮಾನನಾದ ಬಖತ್ಯಾರನ ಕೊಲೆಗೆ ಸರ್ವಥಾ ಮುಂದುವರಿಯಬೇಡ. ಇದರಮೇಲೆಯೂ ನನ್ನ ಮಾತು ಕೇಳದೇ ಮುಂದುವರಿದ ಪಕ್ಷದಲ್ಲಿ ನೀನು ನಿಜವಾದ ಮುಸಲ್ಮಾನನಿರದೇ ಕಾಫರನಿರುವೆಯೆಂದು ತಿಳಿದು ಬಖತ್ಯಾರನಾದರೂ ನಿನ್ನ ಶಾಸನ ಮಾಡುವನು, ಈ ಮಾಧವನಾದರೂ ನಿನ್ನ ಶಾಸನ ಮಾಡುವನು. ಮತ್ತೆನಮ್ಮ ಯಾವ ವೀರನಾದರೂ ನಿನ್ನ ಶಾಸನ ಮಾಡುವರು! ಕಾಫರರೆಂದರೆ ತನ್ನಂತೆ ಪರರನ್ನು ತಿಳಿಯದವರು,

ಸ್ವಾರ್ಥಕ್ಕಾಗಿ ಮಂದಿಯ ಬಾಧ್ಯತೆಗೆ ಬಾಧೆತರುವವರು, ಭಕ್ತಿ-ಜ್ಞಾನ-ವೈರಾಗ್ಯ ಹೀನರು, ಧರ್ಮದ ಆಜ್ಞೆಯನ್ನು ಉಲ್ಲಂಘಿಸುವವರು, ಅರ್ಥಾತ್ ನಾಸ್ತಿಕರು. ಇಂಥವರು ನಿಜವಾದ ಮುಸಲ್ಮಾನರಲ್ಲ, ನಾಮಧಾರಿ ಮುಸಲ್ಮಾನರು. ಇಂಥವರು ದುವೃತ್ತದ ಪರಪೀಡೆಗಾಗಿ, ಅವರನ್ನು ಶಸ್ತ್ರಭಯದಿಂದಲಾದರೂ ಹಾದಿಗೆ ತರುವದು ಮಹಾತ್ಮರಾದ ಪೈಗಂಬರರಿಗೆ ಅಸಮ್ಮತ ವಾಗಲಾರದು. ಯವನವೀರ, ನಮ್ಮ ದ್ವೇಷವು ಮನುಷ್ಯರ ಸಂಗಡವಲ್ಲ, ಅವರ ಸೈತಾನೀ ಗುಣಗಳ ಸಂಗಡ ಇರುತ್ತದೆಂಬದನನು ಚೆನ್ನಾಗಿ ಲಕ್ಷದಲ್ಲಿಡು.

ಈ ಮೇರೆಗೆ ನುಡಿದು ಮಾಧವಾಚಾರ್ಯರು ಸುಮ್ಮನಾಗಲು, ಅವರ ಮಾತು ಕೇಳಿ ಕಾಸಿಮನೊಬ್ಬನೇ ಅಲ್ಲ, ಅವನ ಸೈನಿಕರೂ ವಿಚಾರಮಾಡತೊಡಗಿದರು. ಮಹಾತ್ಮರ ವರ್ಚಸ್ಸೇ ವಿಲಕ್ಷಣವಾದದ್ದು! ಅವರ ಬೋಧಕಶಕ್ತಿಯು ಅಮೋಘವಾದದ್ದು ! ಆಚಾರ್ಯರ ಆ ಪರಿಣಾಮ ಕಾರಕ ಬೋಧದಿಂದ ಎಚ್ಚತ್ತ ಆ ಯವನವೀರರು, ತಮ್ಮ ಸುತ್ತಮುತ್ತಲಿನ ಆ ಪ್ರಚಂಡ ಸೈನ್ಯದ ವ್ಯೂಹರಚನೆಯು ಸದ್ದಿಲ್ಲದೆ ಆದದ್ದನ್ನು ನೋಡಿ ಆಶ್ಚರ್ಯಮಗ್ನರಾಗಿದ್ದರು. ಅವರಲ್ಲಿ ಮೊದಲಿನ ಆವೇಶವು ಉಳಿದಿದ್ದಿಲ್ಲ. ನಾವು ಅಡ್ಡದಾರಿಯನ್ನು ತುಳಿದರೆ ಈ ನಿಶ್ಚಯ ಬುದ್ಧಿಯ ಮಾಧವನು ನಮ್ಮನ್ನು ಕ್ಷಣದಲ್ಲಿ ನಾಶಮಾಡುವನೆಂಬ ಭಯವು ಅವರಲ್ಲಿ ಉತ್ಪನ್ನವಾಯಿತು. ಹೀಗೆ ಅವರು ಕಿಂಕರ್ತವ್ಯಬುದ್ಧಿಯಿಂದ ಸುಮ್ಮನೆ ನಿಂತಿರಲು, ಮತ್ತೆ ಮಾಧವಾಚಾರ್ಯರು ಅವರನ್ನು ಕುರಿತು— ಯವನ ವೀರರೇ, ಈಗ ಯುದ್ಧಕ್ಕೆ ಸನ್ನದ್ಧರಾಗಿ ಬಂದಿದ್ದ ನೀವು ಯುದ್ಧಮಾಡದೆ ಶಸ್ತ್ರಗಳನ್ನು ಕೆಳಗಿಡಲಾರಿರೆಂಬ ಮಾತು ನನಗೆ ಗೊತ್ತಿರುವದು; ಆದರೆ ಅದಕ್ಕೊಂದು ಧರ್ಮಸಮ್ಮತವಾದ ಉಪಾಯವನ್ನು ಹೇಳುತ್ತೇನೆ ಕೇಳಿರಿ. ನಿಮ್ಮ ಈ ಇನ್ನೂರಾಐವತ್ತು ಜನರೊಡನೆ ನಮ್ಮ ಈ ಸಾವಿರಾರು ಜನ ಸೈನಿಕರು ಕಾದುವದು ನ್ಯಾಯವಲ್ಲ; ಆದ್ದರಿಂದಲೇ ನಿಮ್ಮೊಡನೆ ಯುದ್ಧ ಮಾಡುವದಕ್ಕಾಗಿ ಈ ಸೈನ್ಯ ಭಾಗವನ್ನು ಮುಂದೆಮಾಡಿದ್ದೇನೆ; ಆದರೆ ಇಷ್ಟು ಜನರು ಪರಸ್ಪರ ಕೊಲೆಗೆ ಎದುರಾಗುವದು ನನ್ನ ಮನಸ್ಸಿಗೆ ಬರುವದಿಲ್ಲ. ನಾವು ಪ್ರಾಮುಖ್ಯವಾಗಿ ಈಗ ಯತ್ನಿಸುತ್ತಿರುವದು ನಮ್ಮ ಸ್ವಾತಂತ್ರ್ಯದ ಪ್ರಾಪ್ತಿಗಾಗಿಯಲ್ಲದೆ ವ್ಯರ್ಥವಾದ ಮನುಷ್ಯ ಸಂಹಾರಕ್ಕಲ್ಲ; ಆದ್ದರಿಂದ ಇಂದಿನ ಜಯಾಪಜಯದ ನಿರ್ಣಯವನ್ನು ಈಗ ಉಭಯಪಕ್ಷದ ಮುಖ್ಯಮನುಷ್ಯರ ದ್ವಂದ್ವಯುದ್ಧದಿಂದ ಮಾಡೋಣ! ನೀವು ಸ್ವಲ್ಪ ಜನರಿರುವಿರೆಂದು ತಿಳಿದು ನಿಮ್ಮ ತೇಜೋಭಂಗ ಮಾಡುವ ಪಶುವೃತ್ತಿಗೆ ನಾನು ಹೋಗುವದಿಲ್ಲ. ಕಾಸಿಮಖಾನ, ಆಗಲೇ ನೀನು—''ಮೊದಲು ಬಖತ್ಯಾರನು, ಆಮೇಲೆ ನಾನು, ಅದರ ತರುವಾಯ ಬೇಕಾದವರು'' ಮುಂದೆ ಬರಲು ಸೂಚಿಸಿದೆಯಲ್ಲವೇ? ಆದರೆ ನಮ್ಮ ಮೂವರೊಡನೆ ಕ್ರಮವಾಗಿ ಕಾದುವಷ್ಟು ಬಲವು ನಿನ್ನಲ್ಲಿ ಈಗ ಇಲ್ಲದಿರುವದರಿಂದ, ನಿನಗೆ ಹಿತವಾದ ಸೂಚನೆಯನ್ನು ನಾನು ಮಾಡುತ್ತೇನೆ ಕೇಳು. ಈಗ ನೀನು ಯುದ್ಧಕ್ಕಾಗಿ ಒಬ್ಬನೇ ಮುಂದಕ್ಕೆ ಬಾ. ನಿನ್ನೊಡನೆ ದ್ವಂದ್ವಯುದ್ಧಕ್ಕಾಗಿ ಬಖತ್ಯಾರನು ಬರಬೇಕೋ, ನಾನು ಬರಬೇಕೋ, ಹುಕ್ಕ-ಬುಕ್ಕರಲ್ಲಿ ಒಬ್ಬರು ಬರಬೇಕೋ ಹೇಳು. ವೀರಾಗ್ರಣಿಯಾದ ಕಾಸಿಮ, ನನ್ನ ವಿಷಯವಾಗಿ ಹೇಳುವದೆಂದರೆ, ನಾನು ಬ್ರಾಹ್ಮಣನು. ತಪಸ್ಸಿನಿಂದ ಸತ್ಯದ ಶೋಧಮಾಡಿ

ಜಗತ್ಕಲ್ಯಾಣಕ್ಕಾಗಿ ಯೋಗ್ಯಮಾರ್ಗವನ್ನು ಬೋಧಿಸುವದು ಬ್ರಾಹ್ಮಣವೃತ್ತಿಯ ಅನಾದಿ ಕರ್ತವ್ಯವಾಗಿರುವದು. ಆದ್ದರಿಂದ ಬ್ರಾಹ್ಮಣರಾದ ನಮ್ಮ ಪೌರುಷವು ಪ್ರಾಮುಖ್ಯವಾಗಿ ಬಾಯಿಯಲ್ಲಿರುತ್ತಿರುವದು. ಕ್ಷತ್ರಿಯ ವೃತ್ತಿಯ ನಿಮ್ಮ ಸಾಮರ್ಥ್ಯವು ತೋಳಿನಲ್ಲಿ ಎಂಬುದು ಪ್ರಸಿದ್ಧವಾಗಿರುವದು; ಆದರೆ ಕರ್ನಾಟಕದ ಸ್ವಾತಂತ್ರ್ಯರಕ್ಷಣಕ್ಕಾಗಿ ಬ್ರಾಹ್ಮಣನಾದ ನನಗೆ ಶಸ್ತ್ರ ಹಿಡಿಯುವ ಪ್ರಸಂಗ ಬಂದದ್ದರಿಂದ ಈಗ ನಾನು ಶಸ್ತ್ರವನ್ನು ಹಿಡಿದಿದ್ದೇನೆ. ಆಪ ದ್ಧರ್ಮವೆಂದು ಹೀಗೆ ಬ್ರಾಹ್ಮಣರಾದ ನಮಗೆ ಕ್ಷಾತ್ರಧರ್ಮವನ್ನು ಪಾಲಿಸಲು ಧರ್ಮಾಜ್ಞೆಯಿರುವದು. ಇರಲಿ, ಈಗ ಬಾಹ್ಯಪೌರುಷದ ಜಾತಿಯ ಮಾಧವನ ಯುದ್ಧಮರ್ಯಾದೆಯನ್ನು ಪರೀಕ್ಷಿಸುವ ಇಚ್ಛೆ ನಿನಗಿದ್ದರೆ, ಈಗ ನನ್ನೊಡನೆಯೇ ನೀನು ಯುದ್ಧವನ್ನು ಆರಂಭಿಸು. ನೀನೇನು ಮಲ್ಲಯುದ್ಧದವನೋ, ಶಸ್ತ್ರ ಯುದ್ಧದವನೋ, ಅಸ್ತ್ರ ಯುದ್ಧದವನೋ ಯಾವ ಯುದ್ಧದವನು ಹೇಳು. ನಮ್ಮಿಬ್ಬರ ಯುದ್ಧದ ನಿರ್ಣಯವೇ ಇಂದಿನ ಯುದ್ಧದ ನಿರ್ಣಯವು ! ಮುಂದೆ ಆ ನಿರ್ಣಯದಂತೆ ನಡೆಯದವರನ್ನು ದಂಡಿಸಲು ರಣದೇವತೆಯು ಸಮರ್ಥಳಿರುವಳು. ಸುಮ್ಮನೆ ಮನುಷ್ಯಸಂಹಾರದಂಥ ಕ್ರೂರತಮ ಪಶುವೃತ್ತಿಯ ವ್ಯವಹಾರಕ್ಕೆ ಮುಂದುವರಿಯುವದು ಹಿತಕರವಲ್ಲ. ಹುಂಬತನ ಬೇಡ, ಜಾಣತನದಿಂದ ಯುದ್ಧದ ನಿರ್ಣಯ ಮಾಡೋಣ. ಕಾಸಿಮ, ಈಗ ನೀನು ಬಲಿಷ್ಠನಾಗಿದ್ದರೆ ಇಷ್ಟು ಹೇಳುವ ಪ್ರಸಂಗವು ನನಗೆ ಬರುತ್ತಿದ್ದಿಲ್ಲ, ಹೇಳಿದ್ದರೆ ನಿನ್ನಂಥ ಮದಾಂಧರು ಅದರಂತೆ ನಡೆಯುವ ಸಂಭವವು ಇದ್ದಿಲ್ಲ; ಆದರೆ ನಿನ್ನ ವಿಚಾರ–ಅಜಾಗ್ರತೆಗಳಿಂದ ಈಗ ನೀನು ಹೀನಬಲನಾಗಿರುತ್ತೀ; ಆದ್ದರಿಂದ ಇದು ನ್ಯಾಯತಃ ಹೇಳತಕ್ಕ ಸಮಯವೆಂದು ನಾಲ್ಕುಮಾತು ಹೇಳಿದ್ದೇನೆ; ಮತ್ತು ಸೂಚಿಸತಕ್ಕ ಸಮಯವೆಂದು ಯುದ್ಧ–ಧರ್ಮೋಚಿತವಾದ ಯುಕ್ತಿಯನ್ನು ಸೂಚಿಸಿರುತ್ತೇನೆ. ಇದರ ಮೇಲೆ ನಿನ್ನ ಇಚ್ಛೆ. ಎಂದು ನುಡಿದು ಸುಮ್ಮನಾಗಲು, ಸೇರಿಗೆ ಸವ್ವಾಸೇರು ಗಂಟುಬಿದ್ದಂತೆ ತನಗೆ ಮಾಧವನು ಗಂಟುಬಿದ್ದದ್ದರಿಂದ ಕಾಸಿಮನು ಮೆತ್ತಗಾಗಿ ದ್ವಂದ್ವಯುದ್ಧದಿಂದಲೇ ಜಯಾಪಜಯಗಳ ನಿರ್ಣಯ ಮಾಡಲು ಮನಸ್ಸು ಮಾಡಿದನು.

## ವೀರಾಗ್ರಣಿ ಕೃಷ್ಣನಾಯಕನು

ಮಹಾ ತೇಜಸ್ವಿಗಳಾದ ಮಾಧವಾಚಾರ್ಯರ ಮಾತುಗಳ ಪರಿಣಾಮವು ಕಾಸಿಮನ ಮೇಲೆ ವಿಲಕ್ಷಣವಾಗಿ ಆಯಿತು. ಮುಸಲ್ಮಾನರೇನು ಹಿಂದುಗಳೇನು—ಯಾವ ಜಾತಿಯವರೇನು, ತಪಸ್ಸಿನಿಂದ ದೈವೀತೇಜಸ್ಸನ್ನು ಪಡೆದ ಮಹಾತ್ಮರ ವೈಭವವೇ ಅಂತಹದು ! ಆ ದೈವೀ ಸಾತ್ವಿಕ ವೈಭವಕ್ಕೆ ಲೀನರಾದವರು ಅಪರೂಪ. ಮಾಧವಾಚಾರ್ಯರ ಉಪದೇಶದಿಂದ ಕಾಸಿಮನು ಮೆತ್ತಗಾಗಿದ್ದನು; ಆದರೂ ಆ ಪ್ರತಾಪಿಯು ಯುದ್ಧಮಾಡದೆ ಶಸ್ತ್ರಗಳನ್ನು ಕೆಳಗಿಡುವಹಾಗಿದ್ದಿಲ್ಲ. ಆತನು ತನ್ನೊಡನೆ ದ್ವಂದ್ವಯುದ್ಧಕ್ಕೆ ಯಾರನ್ನು ಕರೆಯಬೇಕೆಂದು

ಆಲೋಚಿಸತೊಡಗಿದ್ದನು. ಆಗ ಮಾಧವಾಚಾರ್ಯರು ಆತನನ್ನು ಕುರಿತು–''ಯವನವೀರ, ಯಾರನ್ನು ಯುದ್ಧಕ್ಕೆ ಕರೆಯಲೆಂದು ಇಷ್ಟು ಆಲೋಚಿಸುವದೇಕೆ? ನಿನ್ನೊಡನೆ ಯುದ್ಧ ಮಾಡತಕ್ಕವರ ಹೆಸರನ್ನು ನಾನು ನಿನ್ನಮುಂದೆ ಆಗಲೇ ಹೇಳಿದ್ದೇನೆ. ಆದರೆ ಇನ್ನೊಬ್ಬ ವೀರಾಗ್ರಣಿಯ ಹೆಸರು ಹೇಳುವದು ಪ್ರಮಾದದಿಂದ ಉಳಿದು ಹೋಯಿತು. ಆ ವೀರನು ನನ್ನ ಕಡೆಗೆ ಈಗ ಎರಡು ಮೂರು ಸಾರೆ ನೋಡಿದ್ದರ ಭಾವದ ಮೇಲಿಂದ ಆತನು ನಿನ್ನೊಡನೆ ಕಾದಲು ಅತ್ಯುತ್ಸುಕನಾಗಿರುವಂತೆ ತೋರುತ್ತದೆ. ಆ ''ವೀರಾಗ್ರಣಿ ಕೃಷ್ಣನಾಯಕನನ್ನು ನೀನು ಬಲ್ಲೆಯಷ್ಟೇ? ಆತನು ವರಂಗಲದ ಪ್ರತಾಪರುದ್ರದೇವನ ಮಗನು. ಮಲಿಕಕಾಫರನು ವರಂಗಲವನ್ನು ಕೈವಶಮಾಡಿಕೊಳ್ಳುವಾಗ ಕೃಷ್ಣನಾಯಕನ ಪರಾಕ್ರಮಕ್ಕೆ ತಲೆದೂಗಿರುವನು. ಸದ್ಯಕ್ಕೆ ಕೃಷ್ಣನಾಯಕನನ್ನು ಸರಿಗಟ್ಟುವ ವೀರರು ದುರ್ಲಭವು. ಆತನೊಡನೆ ದ್ವಂದ್ವ ಯುದ್ಧಮಾಡಲು ನೀನೇ ತಕ್ಕವನು'' ಎಂದು ನುಡಿಯುತ್ತಿರಲು, ಕೃಷ್ಣನಾಯಕನು ಮುಂದಕ್ಕೆ ಬಂದು ಮಾಧವಾಚಾರ್ಯರನ್ನು ಭಕ್ತಿಯಿಂದ ನಮಸ್ಕರಿಸಿ– ''ಗುರುವರ, ಈ ಪಾಮರ ಶಿಷ್ಯನನ್ನು ಅನುಗ್ರಹಿಸಿ ಈ ಯವನ ವೀರನೊಡನೆ ಕಾದುವ ಸುಪ್ರಸಂಗವನ್ನು ಒದಗಿಸಿಕೊಟ್ಟದ್ದು ಪರಮಾನಂದವು ! ಈಗ ಈ ವೀರ ಕಾಸಿಮನೊಡನೆ ಕಾದಲು ನಾನೇ ತಕ್ಕವನೆಂಬದನ್ನು ಸಪ್ರಮಾಣವಾಗಿ ಹೇಳಿ, ಖಾನನ ಮನಸ್ಸನ್ನು ಒಡಂಬಡಿಸುವದಕ್ಕೆ ಅಪ್ಪಣೆಯಾಗಬೇಕು. ಖಾನನಂಥ ವೀರಾಗ್ರಣಿಯು ದ್ವಂದ್ವಯುದ್ಧಕ್ಕೆ ಲಭಿಸಲಿಕ್ಕೂ ಪುಣ್ಯ ಬೇಕಾಗುವದು'' ಅನ್ನಲು ಮಾಧವಾಚಾರ್ಯರು ತಲೆಯಲ್ಲಾಡಿಸಿ ''ಆಗಲಿ'' ಎಂದು ಸಮ್ಮತಿಸಿದರು.

ಆಗ ಕೃಷ್ಣನಾಯಕನು ಕಾಸಿಮಖಾನನಿಗೆ— ''ಖಾನಸಾಹೇಬ, ಗುರುವರ್ಯರು ಅನುಗ್ರಹಿಸಿ ನನ್ನ ಪರಿಚಯವನ್ನು ನಿಮಗೆ ಮಾಡಿಕೊಟ್ಟಿರುವರು. ಆದರೆ ನನ್ನ ಗುರುತನ್ನು ನೀವಾದರೂ ಮರೆತಿರಲಿಕ್ಕಿಲ್ಲ, ನಮ್ಮ ವರಂಗಲ ರಾಜ್ಯದಲ್ಲಿ ಫಿತೂರಿಯನ್ನುಂಟುಮಾಡಿ ನೀವು ಅದನ್ನು ಸ್ವಾಧೀನಪಡಿಸಿಕೊಂಡಿರಷ್ಟೇ? ಆಗಿನ ಘೋರವಾದ ಯುದ್ಧದಲ್ಲಿ ನಮ್ಮ ತಂದೆಯಾದ ಪ್ರತಾಪರುದ್ರದೇವರ ಸಂಹಾರವಾಗಲಿಕ್ಕೆ ನಿಮ್ಮ ಮೋಸದ ಯುಕ್ತಿಯೇ ಕಾರಣವಾಯಿ ತೆಂಬದನ್ನು ನಾನು ಬಲ್ಲೆನು. ಹೀಗೆ ಮೋಸಮಾಡುವದು ನಿಮ್ಮಂಥ ವೀರರಿಗೆ ಶ್ರೇಯಸ್ಕರ ವಾಗಿದ್ದಿಲ್ಲ; ಆದರೂ ಆಗುವದು ಆಗಿ ಹೋಗಿದೆ; ಅದೇನು ತಿರುಗಿ ಬರುವಹಾಗಿಲ್ಲ, ಅದೇ ಕಾಲಕ್ಕೆ ನಾನು ನಿಮಗೆ ಎದುರಾಗಿ ನಮ್ಮ ತಂದೆಯವರ ಮರಣದ ಸೇಡು ತೀರಿಸಿಕೊಳ್ಳುತ್ತಿದ್ದೆನು. ಆದರೆ ಕ್ರೂರ ಮೃಗದಂತೆ, ಅಥವಾ ದುಷ್ಟ ಸರ್ಪದಂತೆ ಬರಿಯ ಸೇಡು ತೀರಿಸಿಕೊಂಡ ಮಾತ್ರದಿಂದ ಮಹಾಕಾರ್ಯ ಮಾಡಿದ ಹಾಗಾಗುವದಿಲ್ಲ, ಕರ್ನಾಟಕದ ಸ್ವಾತಂತ್ರ್ಯಹರಣಕ್ಕೆ ಬದ್ಧಕಂಕಣರಾಗಿ ನಿಂತಿರುವ ನಿಮ್ಮ ಮಗ್ಗಲು ಮುರಿದು ಸಮಯನೋಡಿ ಕರ್ನಾಟಕದ ಸ್ವಾತಂತ್ರ್ಯವನ್ನು ಸ್ಥಿರಗೊಳಿಸ ದಿದ್ದರೆ ನಮ್ಮಂಥ ವೀರರ ಹೆಸರಿಗೆ ಕಲಂಕ ಉಂಟಾಗುವದೇ ಸರಿ ! ಆದ್ದರಿಂದಲೇ ಆ ವರಂಗಲ ಯುದ್ಧದಲ್ಲಿ ನಾನು ಸಮರ ಭೂಮಿಯಿಂದ ಜಾರಿಹೋಗಿ ಈಗ ನಿಮ್ಮೊಡನೆ ಕಾದಲು ಜೀವದಿಂದ ಉಳಿದಿದ್ದೇನೆ. ಮೂರ್ತಿಮಂತ ಬ್ರಹ್ಮತೇಜಸ್ಸಾದ ಮಾಧವಾಚಾರ್ಯರ ತಪಃಪ್ರಭಾವವು ನಮ್ಮ ಕ್ಷಾತ್ರತೇಜಸ್ಸಿಗೆ ಉತ್ತೇಜಕವಾದದ್ದರಿಂದ ನಮ್ಮ

ಸ್ವಾತಂತ್ರ್ಯದ ಪುನರ್ಘಟನೆಯಾಗುವ ಸುಯೋಗವು ಒದಗಿಬಂದಿರುತ್ತದೆ ! ರಾಜ್ಯಸ್ಥಾಪನದಂಥ ಮಹಾಕಾರ್ಯಕ್ಕೆ ಬ್ರಹ್ಮತೇಜ–ಕ್ಷಾತ್ರ ತೇಜಗಳ ಸಂಗಮವಾಗಬೇಕಾಗುತ್ತದೆ. ಬ್ರಹ್ಮತೇಜವೆಂದರೆ, ಲೋಕಹಿತಯತ್ನರೂಪವಾದ ಘೋರ ತಪಶ್ಚರ್ಯದಿಂದ ಲೋಕಹಿತದ ಯೋಗ್ಯಮಾರ್ಗವನ್ನು ಕಂಡುಹಿಡಿದು ಅದನ್ನು ನಿಸ್ಪೃಹತೆಯಿಂದ ಜಗತ್ತಿಗೆ ತೋರಿಸುವ ಸಾತ್ವಿಕ ಯೋಗ್ಯತೆಯು ! ಇಂಥ ಸಾತ್ವಿಕ ಯೋಗ್ಯತೆಯ ಮಹಾತ್ಮರು ತೋರಿಸಿದ ಮಾರ್ಗದಿಂದ ಭಕ್ತಿಯುತವಾಗಿ ನಿಸ್ಪೃಹತೆಯಿಂದ ಲೋಕಹಿತಕ್ಕಾಗಿ ಆತ್ಮಾರ್ಪಣ ಮಾಡಲಿಕ್ಕೂ ಹಿಂದೆಮುಂದೆ ನೋಡದಂಥ ರಾಜರ ಯೋಗ್ಯತೆಯು ಕ್ಷಾತ್ರತೇಜವು. ಕಾಸಿಮಖಾನ, ವೀರರ ತೋಳತಿಂಡಿಯನ್ನು ವೀರರಲ್ಲದೆ ರಣಹೇಡಿಗಳು ಪೂರಯಿಸಬಹುದೆಯೇ? ಬಖತ್ಯಾರರು ನಿಮ್ಮ ಧರ್ಮಬಂಧುಗಳಾದದ್ದರಿಂದ ನಮ್ಮ ಪಕ್ಷಕಟ್ಟಿದ ಅವರೊಡನೆ ಕಾದಿ ನೀವು ಧರ್ಮಕ್ಕೆ ವಿರೋಧವಾಗಿ ಯಾಕೆ ನಡೆದುಕೊಳ್ಳಬೇಕು? ತಪಶ್ಶಕ್ತಿಯ ಬ್ರಾಹ್ಮಣರೊಡನೆ ಶರೀರ ಶಕ್ತಿಯ ಕ್ಷಾತ್ರಧರ್ಮಿಗಳು ಕಾದುವದು ವಿಷಮಯ ವಾಗಿರುವದರಿಂದ ನಿಮ್ಮೊಡನೆ ಕಾದಲು ಮಾಧವಾಚಾರ್ಯರು ಸರಿಕರಲ್ಲ, ಹುಕ್ಕದೊರೆ ಯೊಡನೆ ನೀವು ಒಂದೆರಡುಸಾರೆ ಕಾದಿರುವದರಿಂದ ಆತನು ನಿಮಗೆ ಹಳಬನಾಗಿರುವನು. ಬುಕ್ಕದೊರೆಯು ಚಿಕ್ಕವನು; ಆದ್ದರಿಂದ ಈಗ ನಿಮ್ಮೊಡನೆ ಕಾದಲು ನಾನೇ ಯೋಗ್ಯನು. ನಮ್ಮಿಬ್ಬರ ಸಮರಪಾಂಡಿತ್ಯವನ್ನು ನೋಡಿ ಉಭಯ ಸೈನಿಕರು ಸಂತೋಷಪಡಲಿ. ಪರಸ್ಪರರ ಗುಣೋತ್ಕರ್ಷದ ಅನುಭವದಿಂದ ನಾವಿಬ್ಬರೂ ಅಂತರಂಗದಲ್ಲಿ ಆನಂದಪಡೋಣ. ಇಗೋ, ಇದೇ ನೋಡು ಆ ವರಂಗಲದ ಘೋರ ಸಂಗ್ರಾಮದಲ್ಲಿ ನಿನ್ನ ಕೈಯೊಳಗಿಂದ ಬಲಾತ್ಕರಿಸಿ ನಾನು ಕಿತ್ತುಕೊಂಡ ಖಡ್ಗವು ! ಇದನ್ನು ನನ್ನಿಂದ ತಿರುಗಿ ಸಂಪಾದಿಸುವ ಯೋಗ್ಯತೆಯಿದ್ದರೆ ನೀನು ನನ್ನೊಡನೆ ಈಗ ಸಮರಕ್ಕೆ ಸಿದ್ಧನಾಗತಕ್ಕದ್ದು. ಹಾಗೆ ಮಾಡದಿದ್ದರೆ ಈ ಉಭಯ ಪಕ್ಷದ ವೀರರ ಸಮಕ್ಷದಲ್ಲಿ ನೀನು ನನ್ನೊಡನೆ ಕಾದಲಿಕ್ಕೆ ಹಿಂಜರಿದೆಯೆಂದು ಸಪ್ರಮಾಣ ಸಿದ್ಧಮಾಡಿದ ಹಾಗಾಗುವದು.

ವೀರ ಕೃಷ್ಣನಾಯಕನ ಈ ಮಾತುಗಳನ್ನು ಕೇಳಿ ಕಾಸಿಮನು ಸ್ತಂಭಿತನಾದನು. ಕೃಷ್ಣನಾಯಕನ ಮಾತು ಒಂದೂ ಅಸತ್ಯವಾಗಿದ್ದಿಲ್ಲ. ಹಿಂದಕ್ಕೆ ಆತನು ತನ್ನ ಕೈಯೊಳಗಿನ ಖಡ್ಗವನ್ನು ಪರಾಕ್ರಮದಿಂದ ಅಪಹರಿಸಿದ್ದರಿಂದ ಆ ಯವನವೀರನ ಶೌರ್ಯಕ್ಕೆ ಕಲಂಕ ಉಂಟಾದಂತಾಗಿತ್ತು; ಆದ್ದರಿಂದ ಆ ಕಲಂಕವನ್ನು ಈಗ ದೂರಮಾಡಿಕೊಳ್ಳದಿದ್ದರೆ, ಅವನವರೇ ಅವನಿಗೆ ಹೆಸರಿಡದೆ ಇರುತ್ತಿದ್ದಿಲ್ಲ; ಆದ್ದರಿಂದ ವೀರ ಕಾಸಿಮಖಾನನು ಕೃಷ್ಣನಾಯಕನೊಡನೆಯೇ ದ್ವಂದ್ವಯುದ್ಧ ಮಾಡಲು ನಿಶ್ಚಯಿಸಿ ಕೃಷ್ಣನಾಯಕನಿಗೆ— "ವೀರ ಶಿರೋಮಣಿ ಕೃಷ್ಣನಾಯಕ, ನಿನ್ನ ಮಾತು ಕೇಳಿ ನನಗೆ ಬಹಳ ಸಂತೋಷವಾಯಿತು. ಹಿಂದಕ್ಕೆ ಯುದ್ಧದಲ್ಲಿ ನನಗೆ ಉಂಟಾಗಿದ್ದ ಕುಂದನ್ನು ದೂರಮಾಡಿ ಕೊಳ್ಳುವ ಸಂಧಿಯನ್ನು ಈಗ ನೀನು ಒದಗಿಸಿಕೊಟ್ಟದ್ದಕ್ಕಾಗಿ ನನಗೆ ಬಹಳ ಸಮಾಧಾನವಾಗಿದೆ. ನಿಮ್ಮ ಮಾಧವಾಚಾರ್ಯರು ಹೇಳಿದಂತೆ ನೀನು ಸಾಮಾನ್ಯ ವೀರನಲ್ಲ ವೆಂಬುದನ್ನು ನಾನು ಒಪ್ಪಿಕೊಳ್ಳುತ್ತೇನೆ. ನಮ್ಮ ವೀರಾಗ್ರಣಿಗಳಾದ ಮಲಿಕಕಾಫರರಿಂದ ನೀನು ಹೊಗಳಿಸಿಕೊಂಡದ್ದು ನಿಜವು ! ಬಹಳ ಸಂತೋಷವು. ಈ ವೀರರ ಸಂಘದ ಸಮ್ಮುಖದಲ್ಲಿ

ನಮ್ಮಿಬ್ಬರ ಸಮರ ಸಾಹಸದ ಪರೀಕ್ಷೆಯು ಆಗಿಹೋಗಲಿ; ಆದರೆ ಒಂದು ಮಾತು ನಾನು ನಿನಗೆ ಮೊದಲಿಗೇ ಹೇಳುವೆನು. ಹಿಂದಕ್ಕೆ ನೀನು ಯುದ್ಧದಲ್ಲಿ ನನ್ನ ಖಡ್ಗವನ್ನು ಕಸಿದುಕೊಂಡಿರುವದರಿಂದ ಒಂದು ಬಗೆಯಿಂದ ನಾನು ನಿನಗೆ ಸೋತಹಾಗೆ ಆಗಿರುತ್ತದೆ; ಆದ್ದರಿಂದ ನಿನ್ನ ಕೈಯೊಳಗಿನ ನನ್ನ ಖಡ್ಗವನ್ನು ಕಸಿದುಕೊಳ್ಳುವದು ನನ್ನ ಮೊದಲನೆಯ ಕೆಲಸವು. ಹಾಗೆ ನನ್ನ ಖಡ್ಗವನ್ನು ನಾನು ಸಂಪಾದಿಸುವವರೆಗೆ ನಿನ್ನಂಥ ಅಪ್ರತಿಮ ವೀರನೊಡನೆ ಕಾದಲು ನಾನು ಯೋಗ್ಯನೇ ಆಗುವದಿಲ್ಲ; ಆದ್ದರಿಂದ ಈ ಎಲ್ಲ ವೀರರ ಸಮಕ್ಷ ನಾನು ಸ್ಪಷ್ಟವಾಗಿ ಪ್ರತಿಜ್ಞೆಮಾಡುತ್ತೇನೆ. ಯುದ್ಧದಲ್ಲಿ ನಿನ್ನ ಮೈ ಬೆವರೊಡೆಯುವದರೊಳಗಾಗಿ ನಾನು ನನ್ನ ಖಡ್ಗವನ್ನು ನಿನ್ನ ಕೈಯೊಳಗಿಂದ ಕಸಿದುಕೊಳ್ಳುವೆನು, ಸರ್ವಪ್ರಯತ್ನದಿಂದ ನೀನು ಅದನ್ನು ಕಾದುಕೊಳ್ಳತಕ್ಕದ್ದು'' ಎಂದು ನುಡಿದು ಆ ರಣಪಂಡಿತನು ತನ್ನ ಕುದುರೆಯನ್ನು ಮುಂದಕ್ಕೆ ನೂಕಿದನು. ಅತ್ತಲಿಂದ ಕೃಷ್ಣನಾಯಕನೂ ತನ್ನ ಕುದುರೆಯನ್ನು ಮುಂದಕ್ಕೆ ಸಾಗಿಸಿಕೊಂಡು ಬಂದನು. ಕೂಡಲೆ ಉಭಯಪಕ್ಷದ ವೀರರು ಹಿಂದಕ್ಕೆ ಸರಿದು, ಆ ವೀರರಿಬ್ಬರ ಯುದ್ಧ ಸಂಭ್ರಮಕ್ಕೆ ಪ್ರಶಸ್ತವಾದ ರಣಮಂಡಲವನ್ನುಂಟು ಮಾಡಿಕೊಟ್ಟರು. ಇಬ್ಬರೂ ಹೆಸರಾದ ವೀರರು; ಅಂಥವರ ದ್ವಂದ್ವಯುದ್ಧವನ್ನು ನೋಡುವ ಉತ್ಸುಕತೆಯು ಯಾರಲ್ಲಿ ಉಂಟಾಗಲಿಕ್ಕಿಲ್ಲ ? ಉಭಯಪಕ್ಷದ ವೀರರೂ ಪರಸ್ಪರ ದ್ವೇಷಭಾವವನ್ನು ಮರೆತವರಂತೆ, ಆ ಇಬ್ಬರ ಯುದ್ಧವ್ಯಾಪಾರವನ್ನು ಉತ್ಸುಕತೆಯಿಂದ ನೋಡಹತ್ತಿದರು. ಇದನ್ನು ನೋಡಿ ಮಾಧವಾಚಾರ್ಯರಿಗೆ ಬಹಳ ಸಮಾಧಾನವಾಯಿತು; ಯಾಕಂದರೆ ಆ ತಪೋಧನರು ಸ್ವಾಭಾವಿಕವಾಗಿಯೇ ಹಿಂಸೆಗೆ ಹೇಸುವವರಾಗಿದ್ದರು. ಬಹು ಸಂಖ್ಯಾಕರಾದ ತಮ್ಮ ಸೈನಿಕರು ಅಲ್ಪ ಸಂಖ್ಯಾಕರಾದ ಮುಸಲ್ಮಾನರೊಡನೆ ಅಧರ್ಮದಿಂದ ಕಾದಿ ಕೊಲೆಮಾಡುವದು ಅವರ ಮನಸ್ಸಿಗೆ ಬರುತ್ತಿದ್ದಿಲ್ಲ. ಆ ಮಹಾತ್ಮರಿಗೆ ಮಾನವಪ್ರಾಣಿಯ ಈಶ್ವರದತ್ತ ಸ್ವಾತಂತ್ರ್ಯವು ಬೇಕಾಗಿತ್ತಲ್ಲದೆ, ಕ್ರೂರತನದಿಂದ ಮುಸಲ್ಮಾನರ ಪ್ರಾಣಹರಣ ಮಾಡುವದು ಬೇಕಾಗಿದ್ದಿಲ್ಲ. ರೊಚ್ಚಿನಿಂದ ಒಬ್ಬರುಳಿಯದಂತೆ ಕಾಸಿಮನ ಜನರನ್ನು ತುಂಡರಿಸುವಷ್ಟು ಸಾಮರ್ಥ್ಯವು ಸದ್ಯಕ್ಕೆ ಮಾಧವಾಚಾರ್ಯರಿಗಿದ್ದರೂ ಅವರು ಹಿಂಸೆಯನ್ನು ನಿಲ್ಲಿಸಿದ್ದು ಅವರ ಶಮಪ್ರಧಾನತೆಯ ಲಕ್ಷಣವಾಗಿರುವದು.

ತಮ್ಮ ತಮ್ಮ ಪಕ್ಷಕ್ಕೆ ಜಯಬರಬೇಕೆಂದು ಇಚ್ಛಿಸುವದು ಉಭಯ ಪಕ್ಷದವರಿಗೂ ಸಾಧಾರಣವಾದ ಮಾತೇ ಸರಿ; ಆದರೆ ಇಬ್ಬರೂ ಅಸಾಮಾನ್ಯ ವೀರರಾದ್ದರಿಂದಲೂ, ಪ್ರಸಂಗದಲ್ಲಿ ತಮ್ಮ ಪಕ್ಷದ ಸಹಾಯಕ್ಕಾಗಿ ಮುಂದುವರಿಯಲಿಕ್ಕೆ ಯಾವ ಪಕ್ಷದವರಿಗೂ ಆಸ್ಪದವಿಲ್ಲದ್ದರಿಂದಲೂ ಗೆಲವು ತಮ್ಮ ಪಕ್ಷಕ್ಕೇ ಬಂದೀತೆಂದು ಯಾವ ಪಕ್ಷದವರೂ ವಿಶ್ವಾಸಪಡುವಹಾಗಿದ್ದಿಲ್ಲ. ಹೇಳಿಕೇಳಿ ತಾವು ಬಲಹೀನರಾಗಿರಲು, ಈ ದ್ವಂದ್ವಯುದ್ಧದ ಯೋಗದಿಂದ ತಾವು ಸಮಾನ ಬಲಿಷ್ಠರಾದೆವೆಂದು ಮುಸಲ್ಮಾನರು ಸಮಾಧಾನಪಟ್ಟರು; ಆದರೆ ಅಧಿಕ ಬಲರಾದ ಹಿಂದೂ ಜನರು ಹೀಗೆ ಸಮಾಧಾನಪಡುವ ಸಂಭವವಿದ್ದಿಲ್ಲ. ಕೆಲವು ದುಡುಕಿನ ಸ್ವಭಾವದ ಹಿಂದೂ ವೀರರಂತೂ ಮನಸ್ಸಿನಲ್ಲಿ— ''ಆಚಾರ್ಯರು ಇದೆಲ್ಲಿಯ ದ್ವಂದ್ವಯುದ್ಧದ ಗೊಂದಲವನ್ನು ಹೂಡಿದರು ! ಕಂಪಲಿಯ ಕೋಟೆಯು ಅನಾಯಾಸವಾಗಿ ನಮ್ಮ

ಕೈಸೇರಿಹೋಗಿ ನಮ್ಮ ಬಳಿಯಲ್ಲಿ ಮುಸಲ್ಮಾನರು ತಾವಾಗಿ ಸಿಕ್ಕು ಒದ್ದಾಡುತ್ತಿರುವಾಗ, ಆಚಾರ್ಯರು ತಾವೇ ಬಲೆಯ ಹಗ್ಗವನ್ನು ಹರಿಯತೊಡಗಿರುವದು ಆಶ್ಚರ್ಯವಲ್ಲವೆ? ಈವರೆಗೆ ಮುಸಲ್ಮಾನರು ಮಾಡಿರುವ ಹಿಂದೂ ಜನರ ಕೊಲೆಯ ಸೇಡನ್ನು ಈಗ ಅನಾಯಾಸವಾಗಿ ತೀರಿಸಿಕೊಳ್ಳಬಹುದಾಗಿತ್ತಲ್ಲ! ಆದರೆ ಮಹಾತ್ಮರ ಇಚ್ಛೆಯ ಮುಂದೆ ನಮ್ಮಂಥ ಪಾಮರರ ಇಚ್ಛೆಯ ಪಾಡೇನು? ಮಹಾತ್ಮರ ಉಪಾಯ ಯೋಜನೆಯ ರಹಸ್ಯವನ್ನು ಮಹಾತ್ಮರೇ ಬಲ್ಲರು; ಆದ್ದರಿಂದ ಈಗ ಮಹಾತ್ಮರಾದ ಮಾಧವಾಚಾರ್ಯರು ಯೋಜಿಸುವ ಉಪಾಯಗಳಲ್ಲಿ ಅವಿಶ್ವಾಸಪಡದೆ ಅವರ ಅಪ್ಪಣೆಯನ್ನು ಶಿರಸಾವಹಿಸಿ ಅವರಿಗೆ ಸಂತೋಷವಾಗುವಂತೆ ನಾವು ಭಕ್ತಿಪೂರ್ವಕವಾಗಿ ನಡೆದುಕೊಂಡರಾಯಿತು! ಆಚಾರ್ಯರು ಗೊತ್ತುಪಡಿಸಿದ ಈ ದ್ವಂದ್ವ ಯುದ್ಧದಿಂದಲೇ ನಮಗೆ ಹಿತವಾಗುತ್ತಿರಬಹುದು''ಎಂಬಿವೇ ಮೊದಲಾದ ವಿಚಾರಗಳಿಂದ ಸಮಾಧಾನಮಾಡಿಕೊಂಡು ಸುಮ್ಮನೆ ದ್ವಂದ್ವಯುದ್ಧವನ್ನು ನೋಡತೊಡಗಿದರು. ಮುಂದೆ ಬರಬರುತ್ತ ಆ ಇಬ್ಬರು ವೀರರ ರಣಕೌಶಲ್ಯವು ಪ್ರಕಟವಾಗುತ್ತಹೋದಂತೆ ಆ ಉಭಯ ಪಕ್ಷದ ವೀರರ ಮನಸ್ಸಿನಲ್ಲಿಯೂ ಪ್ರಾಂಜಲತ್ವವು ಉಂಟಾಗಲು, ಅವರ ಪಕ್ಷಾಭಿಮಾನವು ಇಲ್ಲದಂತಾಗಿ ಇಬ್ಬರು ವೀರರ ಸಂಬಂಧದಿಂದಲೂ ಆ ಉಭಯಪಕ್ಷದ ವೀರರ ಮುಖದಿಂದ ಧನ್ಯೋದ್ಗಾರಗಳು ಹೊರಡಹತ್ತಿದವು. ಆ ಇಬ್ಬರು ವೀರರೂ ಮೇಲೆಮೇಲೆ ಮಾಧವಾಚಾರ್ಯರ ಕಡೆಗೆ ನೋಡುತ್ತಿದ್ದರು. ಆ ಆಚಾರ್ಯರ ಪ್ರಸನ್ನತೆಯನ್ನು ಪಡೆಯಲು ಆ ಇಬ್ಬರು ವೀರರೂ ಸರಿಯಾಗಿಯೇ ಉತ್ಸುಕರಾಗಿದ್ದರು. ಮಾಧವಾಚಾರ್ಯರಂಥ ದೈವೀಭಾವದ ಮಹಾತ್ಮರಲ್ಲಿ ಮಾತ್ಸರ್ಯಾದಿ ಕ್ಷುದ್ರಗುಣಗಳು ಎಲ್ಲಿಂದ ಬರಬೇಕು? ಅವರು ಆಗಾಗ್ಗೆ ಆ ಇಬ್ಬರು ವೀರರನ್ನು ಹೆಸರ್ಗೊಂಡು ಅಭಿನಂದಿಸುತ್ತ ಪ್ರೋತ್ಸಾಹಗೊಳಿಸುತ್ತಿದ್ದರು. ''ತನ್ನ ಒಬ್ಬನ ಪರಾಕ್ರಮದಲ್ಲಿ ವಿಶ್ವಾಸವಿಟ್ಟು, ಆಚಾರ್ಯರು ತಮ್ಮ ಕೌಶಲ್ಯದಿಂದ ತಮಗಾಗಿದ್ದ ಜಯಕ್ಕೆ ಮಹತ್ವಕೊಡದೆ ನಾನು ಜಯ ಸಂಪಾದಿಸುವ ಹಾದಿಯನ್ನು ನೋಡುತ್ತಿರುವರಲ್ಲ'' ಎಂಬದರ ಸ್ಮರಣವಾದ ಕೂಡಲೆ ವೀರ ಕೃಷ್ಣನಾಯಕನ ಶಕ್ತಿಯು ದ್ವಿಗುಣಿತವಾಗುತ್ತಿತ್ತು. ಅತ್ತ ಕಾಸಿಮನು– ''ನಾನು ಶತ್ರುವಾದರೂ ನನ್ನ ಪರಾಕ್ರಮವನ್ನು ಆಚಾರ್ಯರು ಪ್ರಾಂಜಲ ಮನಸ್ಸಿನಿಂದ ಶ್ಲಾಘಿಸುವರಲ್ಲದೆ, ಪೂರಾ ಸೋತು ಹೋಗಿದ್ದ ನಮಗೆ ದೊಡ್ಡ ಮನಸ್ಸಿನಿಂದ ವಿಜಯವನ್ನು ಸಂಪಾದಿಸಿಕೊಳ್ಳಲಿಕ್ಕೆ ಹಾದಿಯನ್ನು ಮಾಡಿಕೊಟ್ಟರಲ್ಲ'' ಎಂದು ಆಗಾಗ್ಗೆ ನೆನಿಸಿ ಆಚಾರ್ಯರ ವಿಷಯವಾಗಿ ಪೂಜ್ಯಭಾವವನ್ನು ತಾಳುತ್ತ ''ಇಂಥವರ ಮನಸ್ಸನ್ನು ಮೆಚ್ಚಿಸುವ ಪ್ರಸಂಗವು ಸಿಗುವದುಂಟೇ'' ಎಂಬ ಪರಮೋತ್ಸಾಹದಿಂದ ಪರಾಕ್ರಮ ಪರಿಪುಷ್ಟನಾಗಿ ಕಾದುತ್ತಲಿದ್ದನು. ಒಟ್ಟಿಗೆ ಮಾಧವಾಚಾರ್ಯರ ಧನ್ಯೋದ್ಗಾರಗಳಿಂದ ಆ ಇಬ್ಬರು ವೀರರ ಮೈಗಳೂ ಉಬ್ಬಿ, ಅವರ ಯುದ್ಧೋತ್ಸಾಹವು ಹೆಚ್ಚುತ್ತಲಿತ್ತು. ಆ ಇಬ್ಬರಿಗೂ ಗಾಯಗಳಾದವು, ಇಬ್ಬರ ಮೈಯೊಳ ಗಿಂದಲೂ ರಕ್ತವು ಸುರಿಯಹತ್ತಿತು; ಆದರೆ ಜಯಾಪಜಯಗಳ ನಿರ್ಣಯವಾಗಲೊಲ್ಲದು!

ಹೀಗೆ ಸಮಬಲದ ಆ ವೀರರ ಸಮಕುಸ್ತಿಯಾದಂತಾಗಿರಲು, ಬಲಾಢ್ಯನಾದ ಖಾನನು ಒಮ್ಮೆಲೆ ಕುದುರೆಯಿಂದ ನೆಲಕ್ಕೆ ದುಮುಕಿ ಆವೇಶದಿಂದ ಕೃಷ್ಣನಾಯಕನ ಮೇಲೆ ಏರಿಹೋಗಿ ಆತನ

ಕುದುರೆಯ ಮುಂಗಾಲಿಗೆ ಕಸುವಿನಿಂದ ಖಡ್ಗಪ್ರಹಾರಮಾಡಿದನು. ಕೂಡಲೆ ಕುದುರೆಯ ಮುಂಗಾಲುಗಳು ತುಂಡರಿಸಿಹೋಗಿ ಅದು ಮುಗ್ಗರಿಸಿ, ಮುಂದಕ್ಕೆ ಉರುಳಲು, ಅಷ್ಟರಲ್ಲಿ ಚಪಲನಾದ ಕೃಷ್ಣನಾಯಕನು ತನ್ನ ಕುದುರೆಯಿಂದ ನೆಲಕ್ಕೆ ದುಮುಕಿ ಕಾಸಿಮನಿಗೆ ಎದುರಾಗಿದ್ದನು; ಆದರೆ ಈ ಅವಸರದಲ್ಲಿ ಕಾಸಿಮನು ಏನು ಕೈಚಮತಮಾಡಿದನೋ ಅವನಿಗೇ ಗೊತ್ತು, ಕೃಷ್ಣನಾಯಕನ ಕೈಯೊಳಗಿನ ಕಾಸಿಮನ ಖಡ್ಗವು ಕಾಸಿಮನ ಕೈಯಲ್ಲಿ ಬಂದಿರಲು, ಕಾಸಿಮನು ಸಿಂಹನಾದ ಮಾಡುವದು ಮಾತ್ರ ಜನರ ಕಿವಿಗೆ ಬಿದ್ದಿತು. ಇದನ್ನು ನೋಡಿ ಉಭಯಪಕ್ಷದ ಸೈನಿಕರೂ ಕಾಸಿಮನ ಪರಾಕ್ರಮವನ್ನು ಕೊಂಡಾಡಹತ್ತಿದರು; ಆದರೆ ಇದನ್ನು ನೋಡಿ ಕೃಷ್ಣನಾಯಕನು ಕಾಸಿಮನ ವಿಷಯವಾಗಿ ಸರ್ವಥಾ ಮಾತ್ಸರ್ಯಪಡಲಿಲ್ಲ ! ನಿಜವಾದ ವೀರರಲ್ಲಿ ಮಾತ್ಸರ್ಯಾದಿ ಹೇಯಗುಣಗಳು ಇರುವದುಂಟೆ? ತನ್ನ ಕೈಯೊಳಗಿನ ಖಡ್ಗವನ್ನು ನಿಜವಾದ ಪರಾಕ್ರಮದಿಂದ ಕಾಸಿಮನು ಕಸಿದುಕೊಂಡದ್ದನ್ನು ನೋಡಿ ಕೃಷ್ಣನಾಯಕನು ಸಂತೋಷದಿಂದ ಖಾನನಿಗೆ– ''ವೀರಬಂಧುವೇ, ನೀನು ಪರಮಧನ್ಯನು ! ನಿನ್ನ ಪರಾಕ್ರಮವು ಹೊಗಳತಕ್ಕದ್ದೇ ಸರಿ. ನಿನ್ನ ಪ್ರತಿಜ್ಞೆಯಂತೆ ನೀನು ನನ್ನ ಮೈಗೆ ಬೆವರೊಡೆಯುವದರೊಳಗಾಗಿಯೇ ನಿನ್ನ ಖಡ್ಗವನ್ನು ನನ್ನ ಕೈಯೊಳಗಿಂದ ಕಸಿದುಕೊಂಡಿರುತ್ತೀ ! ಆದ್ದರಿಂದ ನನ್ನ ದೃಷ್ಟಿಯಿಂದ ನೀನು ಜಯಶಾಲಿಯಾದೆ !'' ಎಂದು ನುಡಿಯುತ್ತಿರಲು, ಮಾಧವಾಚಾರ್ಯರಂಥ ಸಜ್ಜನರ ಸಾನ್ನಿಧ್ಯದಿಂದ ಸುಜನನಾಗಿ ಹೋಗಿದ್ದ ಕಾಸಿಮನು ನಡುವೇ ಬಾಯಿಹಾಕಿ— ''ಪ್ರಿಯಮಿತ್ರ ವೀರ ಕೃಷ್ಣನಾಯಕ, ಹಿಂದಕ್ಕೆ ಕಳೆದುಕೊಂಡಿದ್ದ ನನ್ನ ಖಡ್ಗವನ್ನು ನಾನು ಸಂಪಾದಿಸಿದ ಮಾತ್ರದಿಂದ ನಾನೇನು ಮಹಾ ಜಯವನ್ನು ಸಂಪಾದಿಸಿದಹಾಗಾಯಿತು? ಇಂದಿನ ಯುದ್ಧದ ಆರಂಭದಲ್ಲಿ ನಾನು ನಿನಗೆ ಹೇಳಿದಂತೆ ನಿನ್ನೊಡನೆ ಯುದ್ಧಮಾಡುವ ಅಧಿಕಾರವನ್ನು ಮಾತ್ರ ನಾನು ಈಗ ಪಡೆದೆನು. ನಮ್ಮಿಬ್ಬರ ಜಯಾಪಜಯಗಳ ನಿರ್ಣಯದ ನಿಜವಾದ ಯುದ್ಧವು ಇನ್ನುಮುಂದೆ ಆಗತಕ್ಕದ್ದು; ಆದ್ದರಿಂದ ನೀನು ಬೇರೆ ಖಡ್ಗವನ್ನು ತಕ್ಕೊಂಡು ಯುದ್ಧಕ್ಕೆ ಸನ್ನದ್ಧನಾಗು. ನಮ್ಮ ಜಯಾಪಜಯಗಳ ನಿರ್ಣಯಕ್ಕಾಗಿ ಆತುರಪಡುತ್ತಿರುವ ಈ ವೀರರ ಮನಸ್ಸುಗಳು ಸಮಾಧಾನಪಡಲಿ'' ಅನ್ನಲು, ಕೃಷ್ಣನಾಯಕನು– ''ಮಿತ್ರನೇ, ಬೇರೆ ಖಡ್ಗವೇತಕ್ಕೆ? ನನ್ನ ಕೈಯೊಳಗಿನ ಖಡ್ಗವನ್ನು ಕಳೆದುಕೊಂಡಿದ್ದು ನನ್ನ ದೌರ್ಬಲ್ಯದ ಲಕ್ಷಣವಾದದ್ದರಿಂದ, ನಾನು ಬೇರೆ ಖಡ್ಗವನ್ನು ತರುವ ಲಜ್ಜಾಸ್ಪದವಾದ ಕಾರ್ಯಕ್ಕೆ ಮನಸ್ಸು ಮಾಡೆನು. ಇದ್ದ ಈ ಸ್ಥಿತಿಯಲ್ಲಿಯೇ ನಾನು ನಿನ್ನೊಡನೆ ಕಾದತಕ್ಕವನು'' ಎಂದು ಸಮರೋತ್ಸಾಹದಿಂದ ಸಿಂಹನಾದ ಮಾಡಿದನು.

ತನ್ನ ಹೀನಬಲದ ಅಗೌರವವನ್ನು ಕಳೆದುಕೊಳ್ಳುವ ಆವೇಶದಲ್ಲಿ ಕೃಷ್ಣನಾಯಕನ ಬಲವು ದ್ವಿಗುಣವಾಯಿತು. ತನ್ನ ಗುರುಗಳಾದ ಮಾಧವಾಚಾರ್ಯರ ದಿವ್ಯಮೂರ್ತಿಯನ್ನು ಧ್ಯಾನಿಸಲು, ಆತನ ಸರ್ವಾಂಗದಲ್ಲಿ ಹೊಸ ಬಲದ ಸಂಚಾರವಾಯಿತು. ಸಮರಾವೇಶದಲ್ಲಿ ಆ ವೀರನ ಮೈಮೇಲಿನ ಎಚ್ಚರವು ತಪ್ಪಿತು. ಆತನು ಕೆರಳಿದ ಕೇಸರಿಯಂತೆ ಕಾಸಿಮನ ಮೇಲೆ ಸಾಗಿಹೋದನು. ಮತ್ತೊಬ್ಬ ವೀರನಾಗಿದ್ದರೆ, ಆತನ ಆ ಆವೇಶದ ಸಾಗುವಿಕೆಯಲ್ಲಿ ಪ್ರತಿಸ್ಪರ್ಧಿಯು ಗತ ಪ್ರಾಣನಾಗಿ ನೆಲಕ್ಕುರುಳಬಹುದಾಗಿತ್ತು; ಆದರೆ ಕಾಸಿಮನು ಅದಕ್ಕೆ ಸೊಪ್ಪುಹಾಕದೆ ತನ್ನ ಯೋಗ್ಯತೆಯನ್ನು

ಹೆಚ್ಚಿಸಿಕೊಂಡರೂ, ಕೃಷ್ಣನಾಯಕನ ದೈವೀ ಆವೇಶಕ್ಕೆ ಆ ಯವನವೀರನ ಅಸುರೀ ಆವೇಶವು ತಡೆಯದೆ ಆತನ ಹೃದಯವು ಕಂಪಿಸಿತು. ಆ ಯವನವೀರನ ಹೃದಯ ಕಂಪನವು ಅಡಗುವದರೊಳಗಾಗಿಯೇ ಕೃಷ್ಣನಾಯಕನು ಆತನ ಮೇಲೆ ಮತ್ತೊಮ್ಮೆ ಸಾಗಿಹೋಗಿ ಆತನನ್ನು ಮಹಾಬಲದಿಂದ ನೆಲಕ್ಕುರುಳಿಸಿದನು. ಕೂಡಲೆ ಕನ್ನಡಿಗರು ಜಯಘೋಷಮಾಡಲು, ಮುಸಲ್ಮಾನರ ಉತ್ಸಾಹವು ಕುಗ್ಗಿ ಅವರು ಅಪಮಾನಹೊಂದಿ ರೊಚ್ಚಿಗೆದ್ದು ಹಿಂದೂ ಸೈನಿಕರ ಮೇಲೆ ಬಿದ್ದರು. ಹೀಗೆ ಅವರು ಯುದ್ಧದ ನಿಯಮವನ್ನು ಅತಿಕ್ರಮಿಸಿದ್ದು ಅಪರಾಧವೇ ಸರಿ. ಹೀಗೆ ಮುಸಲ್ಮಾನರು ಕ್ರೋಧಾವೇಶದಲ್ಲಿ ಹಿಂದುಮುಂದಿನ ವಿಚಾರವಿಲ್ಲದೆ ತನ್ನ ಮೇಲೆ ಬೀಳಲು, ಹಿಂದೂ ಜನರು ಕಾದಲನುವಾಗಿ ಕೈಗೆ ಕೈಹತ್ತಿ ಕಾಳಗವು ಆರಂಭವಾಯಿತು. ಮುಸಲ್ಮಾನರು ಎಷ್ಟು ಪರಾಕ್ರಮದಿಂದ ಕಾದಿದರೂ ಏನಾಗಬೇಕು? ಹಿಂದೂ ಜನರ ಪ್ರಚಂಡ ಬಲಕ್ಕೆ ಅವರು ಈಡಾಗಲಿಲ್ಲ. ಸ್ವಲ್ಪಹೊತ್ತಿನಲ್ಲಿ ಅವರು ಹಣ್ಣಾಗಿ ಶಸ್ತ್ರಗಳನ್ನು ಕೆಳಗಿಡಬೇಕಾಯಿತು. ಪ್ರಾಣಿ ಹಿಂಸೆಗೆ ಹೇಸುತ್ತಿದ್ದ, ಮಾಧವಾಚಾರ್ಯರಿಗೆ ಕಾಳಗದಲ್ಲಿ ನಿಷ್ಕಾರಣವಾಗಿ ಆದ ಹಿಂಸೆಯನ್ನು ನೋಡಿ ಅಸಮಾಧಾನವಾಯಿತು. ತಮ್ಮ ಜನರು ನಿಷ್ಕಾರಣವಾಗಿ ಹೀಗೆ ಹಿಂಸೆಗೆ ಕಾರಣರಾದದ್ದು ಕಾಸಿಮನ ಮನಸ್ಸಿಗೂ ಬರಲಿಲ್ಲ. ಮಾರ್ಗದರ್ಶಿಗಳ ಆಜ್ಞೆಯಂತೆ ಅವರವರ ಅನುಯಾಯಿಗಳು ತಪ್ಪದೆ ನಡೆದುಕೊಂಡರೆ ಮಾನದಿಂದ ಅವರ ಇಷ್ಟಾರ್ಥವು ಬೇಗನೆ ಸಾಧಿಸುತ್ತದೆ. ಇದಕ್ಕೆ ವಿರುದ್ಧವಾಗಿ, ಮಾರ್ಗದರ್ಶಕರ ಮಾತನ್ನು ಮರೆತುಬಿಟ್ಟು ಮನಬಂದಂತೆ ನಡೆದುಕೊಂಡ ಮಾನದಿಂದ ಕಾರ್ಯಹಾನಿಯಾಗಿ ಎಲ್ಲರೂ ದುಃಖಪಡಬೇಕಾಗುತ್ತದೆ. ಭಾರತ ಯುದ್ಧದಲ್ಲಿ ಪಾಂಡವರು ತಮ್ಮ ಮಾರ್ಗದರ್ಶಿಯಾದ ಶ್ರೀಕೃಷ್ಣನ ಮಾತಿನಂತೆ ನಡೆದದ್ದರಿಂದ ಹೀನಬಲರಾದರೂ ಅವರು ಹಲವು ವಿಪತ್ತುಗಳೊಳಗಿಂದ ಪಾರಾಗಿ ಕಡೆಗೆ ಜಯಶಾಲಿಗಳಾದರು. ಈ ಬಿಗುವು ಕೌರವರಲ್ಲಿಲ್ಲದಿರಲು, ಮನಸ್ಸಿಗೆ ಹ್ಯಾಗೆ ಬಂದಿತೋ ಹಾಗೆ ಅವರು ನಡೆದದ್ದರಿಂದ ಅವರು ಮಹಾಬಲಿಷ್ಠರಾದರೂ ಕಡೆಗೆ ನಾಶವನ್ನು ಹೊಂದಿದ್ದರು. ಅದರಂತೆ ಶಿವಾಜಿ ಮಹಾರಾಜರ ಕಾಲದಲ್ಲಿದ್ದ ಆತನ ಅನುಯಾಯಿಗಳ ಆಜ್ಞಾಧಾರಕತ್ವದ ಬಿಗುವು ಮುಂದೆ ಕಡಿಮೆಯಾಗುತ್ತಹೋದಂತೆ ಎಂದೂ ರಾಜ್ಯದ ಕೀಲಗಳು ಸಡಿಲುತ್ತಹೋಗಿ 2ನೇ ಬಾಜೀರಾಯನ ಕಾಲದಲ್ಲಿ ಆ ರಾಜ್ಯಾಧಿಕಾರವು ಜೀವನ್ಮೃತವಾಗಲು, ಕಡೆಗೆ ಹಿಂದುಗಳು ಪಾರತಂತ್ರ್ಯದ ಪಂಕದಲ್ಲಿ ಸಿಕ್ಕುಬೀಳಬೇಕಾಯಿತು ! ಇರಲಿ.

ಮುಂದೆ ಮಾಧವಾಚಾರ್ಯರ ಸೂಚನೆಯಂತೆ ಹುಕ್ಕದೊರೆಯು ಕೋಟೆಯ ಕಾವಲಿನ ಸ್ಥಳಗಳಲ್ಲೆಲ್ಲ ತನ್ನವರ ಕಾವಲಿಡಿಸಿ ಕಾಸಿಮನನ್ನೂ, ಶರಣುಬಂದ ಅವರ ಜನರನ್ನೂ ಯಾವ ಬಗೆಯಿಂದಲೂ ಹಿಂಸಿಸದೆ, ಅವರಿಂದ ತಮಗೆ ಉಪಹತಿಯಾಗದಂತೆ ಮಾತ್ರ ವ್ಯವಸ್ಥೆಮಾಡಿಸಿ, ಅವರನ್ನು ಸ್ವಾತಂತ್ರ್ಯದಿಂದ ಇರಗೊಟ್ಟನು. ಹೀಗೆ ಕಂಪಲಿಯ ಕೋಟೆಯು ಅನಾಯಾಸವಾಗಿ ಸಿಕ್ಕಿದ್ದರಿಂದ ಹಿಂದೂಜನರ ಬಲವೂ, ಒಗರೂ ಸ್ವಾಭಾವಿಕವಾಗಿಯೇ ಹೆಚ್ಚಿದವು; ಆದರೆ ತಘಲಕ ಮಹಮ್ಮದನ ದಕ್ಷಿಣದ ಪ್ರತಿನಿಧಿಯಾದ ಮಲಿಕನಾಯಬನೆಂಬ ಮುಖ್ಯಾಧಿಕಾರಿಯನ್ನು ಜಯಿಸದೆ ಮಾಧವಾಚಾರ್ಯರಿಗೆ ಕರ್ನಾಟಕದ ಸಿಂಹಾಸನವನ್ನು ಸ್ಥಾಪಿಸಲಿಕ್ಕೆ ಬರುವಹಾಗಿದ್ದಿಲ್ಲ;

ಆದ್ದರಿಂದ ಈಗ ಕಂಪಲಿಯ ಕೋಟೆಯು ಅನಾಯಾಸ ಸಿಕ್ಕದ್ದಕ್ಕಾಗಿ ಅವರು ತೃಪ್ತರಾಗದೆ, ಆದಷ್ಟು ಬೇಗನೆ ಮಲಿಕನಾಯಬನನ್ನು ಸೋಲಿಸುವ ಉಪಾಯವನ್ನು ಯೋಚಿಸತೊಡಗಿದರು. ಯಾವಾಗಲೂ ಕೊಲೆಯಾಗದೆ ಕಾರ್ಯವಾಗುವದರ ಕಡೆಗೆ ಮಾಧವಾಚಾರ್ಯರ ಲಕ್ಷವಿರುತ್ತಿತ್ತು. ಆ ತಪೋಧನರು ಮನುಷ್ಯಮಾತ್ರರ ಜನ್ಮಸಿದ್ಧ ಸ್ವಾತಂತ್ರ್ಯವನ್ನೂ, ಆ ಸ್ವಾತಂತ್ರ್ಯರಕ್ಷಣದ ಭದ್ರವಾದ ಕೋಟೆಯೆನಿಸುವ ಸ್ವಧರ್ಮರಕ್ಷಣವನ್ನೂ ಸಾಧಿಸುವ ಪವಿತ್ರವಾದ ಉದ್ದೇಶದಿಂದ ರಾಜಕಾರಣದಲ್ಲಿ ಸೇರಿದ್ದರಲ್ಲದೆ, ತಮ್ಮವರ ಸುಖಲೋಲುಪತೆಯನ್ನು ಹೆಚ್ಚಿಸುವದಕ್ಕಾಗಲಿ, ಅನ್ಯರ ಮೇಲೆ ತಮ್ಮ ಅಧಿಕಾರದ ದರ್ಪವನ್ನು ಕುಳ್ಳಿರಿಸಿ ಅವರನ್ನು ಹಿಂಸೆಪಡಿಸುವದಕ್ಕಾಗಿಯಾಗಲಿ ರಾಜಕಾರಣದಲ್ಲಿ ಸೇರಿದ್ದಿಲ್ಲ. ಹಾಗೆ ಸೇರಲಿಕ್ಕೆ ಅವರೇನು ಐಶ್ವರ್ಯಾಧಿಕಾರಗಳ ಮದದಿಂದ ಅಂಧರಾದವರೆ ? ಅವರು, ಸಾತ್ವಿಕ ವೃತ್ತಿಯ ಘೋರ ತಪಶ್ಚರ್ಯದಿಂದ ಆತ್ಮೋನ್ನತಿಯನ್ನೂ, ದೈವೀ ಸಹಾಯವನ್ನೂ ಪಡೆದು, ವೈರಾಗ್ಯಶಾಲಿಗಳೂ, ಭೂತದಯಾಪರರೂ, ಪರಧರ್ಮ ಮರ್ಮಜ್ಞರೂ ಆಗಿ, ಲೋಕಕ್ಕೆ ಕೇವಲ ಐಹಿಕ-ಪಾರತ್ರಿಕ ಹಿತದ ಮಾರ್ಗವನ್ನು ತೋರಿಸುವದಕ್ಕಾಗಿ ಲೌಕಿಕ ವ್ಯವಹಾರದಲ್ಲಿ ಸೇರಿದವರು ! ಅವರ ''ಆಚಾರ್ಯ''ವೆಂಬ ಉಪಪದವು ನಿಶ್ಚಯವಾಗಿ ಸಾರ್ಥಕವಾಗಿರುವದು. ಯಾಕಂದರೆ ''ಆಚಿನೋಚಿತ ಶಾಸ್ತ್ರಾರ್ಥಂ ಆಚಾರೇ ಸ್ಥಾಪಯತ್ಯಪಿ । ಸ್ವಯಮಪ್ಯಾಚರೇದ್ಯಸ್ತು ಸ ಆಚಾರ್ಯ ಇತಿಸ್ಮೃತಃ'' ಅಂದರೆ ಶಾಸ್ತ್ರಾಸ್ತ್ರವನ್ನು ಪರ್ಯಾಲೋಚಿಸಿ ಆ ಅರ್ಥವನ್ನು ಬಳಿಕೆಯಲ್ಲಿ ತಂದು ತಾನೂ ಅದರಂತೆ ಆಚರಿಸುವವನೇ ಆಚಾರ್ಯನು'' ಎಂದು ಹೇಳಿರುವಂತೆ, ಮಹಾತ್ಮರಾದ ಮಾಧವಾಚಾರ್ಯರು ಅಕ್ಷರಶಃ ವರ್ತಿಸಿ ಅದ್ವಿತೀಯ ಮಹಾ ಪುರುಷರಾಗಿಹೋಗಿರುವರು. ಇವರ ತಪಃಪೂರಿತವಾದ ದಿವ್ಯ ಬ್ರಹ್ಮ ವರ್ಚಸ್ಸನ್ನು ನೋಡಿ ವೈದಿಕಧರ್ಮದವರು ಲೀನವಾಗುವದಂತೂ ಇರಲಿ, ಕಾಸಿಮನಂಥ ಯವನವೀರನೂ ಲೀನನಾದನು ! ಪರಿಪಕ್ವಕಾಲವು ಒದಗಿತೆಂದರೆ ಕಡ್ಡಿಯಿಂದ ಗುಡ್ಡದಂಥ ಕಾರ್ಯವಾಗುತ್ತದೆಂಬ ಮಾತು ಸುಳ್ಳಲ್ಲ. ಕಾಸಿಮನು ಮಹಾಬಲಿಷ್ಠನೂ, ಅದ್ವಿತೀಯ ವೀರನೂ ಆಗಿದ್ದರೂ, ಆತನು ಪರಸ್ತ್ರೀಯರ ಅಭಿಲಾಷೆಯಿಂದಲೂ, ಅಧಿಕಾರ- ಬಲಗಳ ಗರ್ವದಿಂದಲೂ ದೂಷಿತಮನಸ್ಕನಾಗಿ ಪರಮಾರ್ಥ ಸಾಧನದ ಸಂಬಂಧದಿಂದ ತೀರ ಕ್ಷುದ್ರನಾಗಿದ್ದನು. ಅಂಥವನ ಮಲಿನ ಹೃದಯವು ಮಾಧವಾಚಾರ್ಯರ ದರ್ಶನ ಭಾಷಣಗಳ ಯೋಗದಿಂದ ಪವಿತ್ರವಾಗತೊಡಗಿ, ಆ ಯವನವೀರನಿಗೆ ಮಾಧವಾಚಾರ್ಯರು ಅತ್ಯಂತ ಪೂಜ್ಯರಾದರು. ಆತನ ಹೃದಯದಲ್ಲಿ ಭೂತದಯೆ-ಪಶ್ಚಾತ್ತಾಪಗಳ ಮೊಳಕೆಗಳು ಒಡೆದವು. ಆತನು ತನ್ನ ದುರ್ಗುಣಗಳಿಗೆ ಹೇಸಿ, ಈ ಮಹಾತ್ಮರಿಂದ ಶಾಂತಿಯ ಮಾರ್ಗವನ್ನು ಕಂಡುಕೊಳ್ಳಬೇಕೆಂದು ನಿಶ್ಚಯಿಸಿದನು. ಮಹಾ ಮಹಾ ಸಾಧಕರಿಗೂ ಸಾಧಿಸದ ಮಾತು ಈಗ ಕಾಸಿಮನಿಗೆ ಸಾಧಿಸಿದ್ದು ಆತನ ಪೂರ್ವಾರ್ಜಿತ ಪುಣ್ಯದ ಪರಿಪಾಕವೇ ಸರಿ. ಆ ಪುಣ್ಯವಂತನ ಹೃದಯದಲ್ಲಿ ಮಾಧವಾಚಾರ್ಯರ ಮೂರ್ತಿಯು ನೆಲಿಸಿಹೋಯಿತು. ಆ ಮಹಾತ್ಮರ ದರ್ಶನಕ್ಕಾಗಿ ಆತನ ಮನಸ್ಸು ಆತುರಪಡತೊಡಗಿತು. ಆಚಾರ್ಯರು ಬ್ರಾಹ್ಮಣರೆಂಬ ಮಾತು ಕಾಸಿಮನ ಭಕ್ತಿಯ ಅಭಿವೃದ್ಧಿಗೆ ಅಡ್ಡಬರಲಿಲ್ಲ. ಪವಿತ್ರವಾಗತೊಡಗಿದ್ದ ಕಾಸಿಮನ ಚಿತ್ತವೃತ್ತಿಯು, ಪರಿಶುದ್ಧ

ಚಿತ್ತವೃತ್ತಿಯ ಮಾಧವಾಚಾರ್ಯರ ದಿವ್ಯಪ್ರಭಾವದಿಂದ ಆಕರ್ಷಿತವಾಯಿತು. ಇದರಂತೆ ಬ್ರಾಹ್ಮಣರೂ ಮುಸಲ್ಮಾನ ಸತ್ಪುರುಷರಲ್ಲಿ ಭಕ್ತಿ-ವಿಶ್ವಾಸಗಳನ್ನು ತಾಳಿ ಶಿಷ್ಯತ್ವ ವಹಿಸಿದ ಉದಾಹರಣೆಗಳು ಹಲವು ಇರುವವು. ಹೀಗಾಗುವದರಲ್ಲಿ ವೈಲಕ್ಷಣ್ಯವೇನೂ ಇರುವದಿಲ್ಲ; ಯಾಕಂದರೆ ದೇವರಿಗೂ, ಸತ್ಪುರುಷರಿಗೂ, ಪ್ರಜಾವತ್ಸಲನಾದ ಅರಸನಿಗೂ ಅವರ ಅಂತಃಕರುಣ ಪ್ರಭಾವದಿಂದ ಅವರ ಜಾತಿ ಮತಾದಿಗಳ ಆರೋಪವು ಕೇವಲ ಔಪಚಾರಿಕವಾಗಿ ಪರಿಣಮಿಸುವದು. ಅದರಂತೆ, ಕಾಸಿಮನ ಭಕ್ತಿಯು ಮಾಧವಾಚಾರ್ಯರ ಜಾತಿ-ಮತಗಳ ವಿಷಯದಲ್ಲಿ ಅಂಧವಾಗಿ, ಅವರ ದಿವ್ಯಪ್ರಭಾವಕ್ಕಾಗಿ ಅದು ಉತ್ತರೋತ್ತರ ಅಭಿವೃದ್ಧವಾಗಲು, ಮಹಾಜ್ಞಾನಿಗಳಾದ ಮಾಧವಾಚಾರ್ಯರ ಕರುಣಾ ಶಾಲಿತ್ವದ ಪ್ರದರ್ಶನಕ್ಕೆ ಕಾಸಿಮನು ಸ್ಥಾನವಾದನು ! ಆ ಯವನವೀರನ ಮೇಲೆ ಮಾಧವಾಚಾರ್ಯರ ಲೋಭವು ಸಂಪೂರ್ಣವಾಗಿ ಕುಳಿತುಕೊಂಡಿತು !

## ಕಾಸಿಮನ ಪಶ್ಚಾತ್ತಾಪ

ಕಂಪಲಿಯ ಕೋಟೆಯೊಳಗಿನದೊಂದು ಮನೋಹರವಾದ ಉದ್ಯಾನವು. ಎರಡುತಾಸು ಹೊತ್ತು ಏರಿದ್ದರಿಂದ ಹೂಬಿಸಿಲು ಎಳೆಬಿಸಿಲರೂಪವನ್ನು ಹೊಂದಿ ಮೆಲ್ಲಮೆಲ್ಲನೆ ಬಲಿಯುವ ಹಾದಿಯನ್ನು ಹಿಡಿದಿದೆ. ತೋಟಿಗನು ಅದೇ ನೀರು ಹಾಯಿಸಿಬಿಟ್ಟದ್ದರಿಂದ ಗಿಡ-ಬಳ್ಳಿ-ಸಸ್ಯ-ಮಡಿ-ಗದ್ದೆಗಳು ಹಸಿರಾಗಿ ಸೊಬಗನ್ನು ಸುರಿಸುತ್ತಲಿವೆ. ಆಳು ಹೋಳುಗಳು ಬಗೆಬಗೆಯ ಪುಷ್ಪಗಳ ಸಮ್ಮಿಶ್ರಸುಗಂಧದ ಸೇವನದಿಂದ ಸಂತುಷ್ಟರಾಗಿ ಉದ್ಯಾನದೊಳಗಿನ ತಮ್ಮ ತಮ್ಮ ಕೆಲಸಗಳನ್ನು ಉಲ್ಲಾಸದಿಂದ ಮಾಡತೊಡಗಿದ್ದಾರೆ. ಬೆಳಗಿನ ಎರಡುತಾಸು ರಾತ್ರಿಯಿಂದ ನೀರು ಹಾಯಿಸಿ ಹಾಯಿಸಿ ದಣಿದು ಹಸಿದಿದ್ದ ಎತ್ತುಗಳು ಎಳೆಹುಲ್ಲು ಮೇಯತೊಡಗಿವೆ. ಅವುಗಳ ನಿಯಾಮಕನು ಬಾವಿಯ ದಂಡೆಯಮೇಲೆ ಕುಳಿತುಕೊಂಡು ಬೆಳಗಿನ ನೇರೆಯನ್ನು ಮಾಡತೊಡಗಿದ್ದಾನೆ. ಹೂ-ತುಲಸಿ-ಬಿಲ್ವ-ಕರಿಕೆ ಮುಂತಾದವುಗಳನ್ನು ಎತ್ತಿಕೊಂಡು ತಂಬಿಗೆ-ಬುಟ್ಟಿಗಳನ್ನು ತುಂಬಿಕೊಂಡು ಭಾವಿಕ ಜನರು ಮೆಲ್ಲಮೆಲ್ಲನೆ ಮನೆಯಹಾದಿಯನ್ನು ಹಿಡಿಯತೊಡಗಿದ್ದಾರೆ. ಬೆಳಗಿನಲ್ಲಿಯೇ ಬಾವಿಯ ಜಳಕಕ್ಕಾಗಿ ಬಂದ ತರುಣರು ಯಥೇಚ್ಛವಾಗಿ ಈಸಿ ವ್ಯಾಯಾಮ ಹೊಂದಿ ಒಗೆದ ಸ್ವಚ್ಛವಾದ ಮಡಿಕೆಗಳನ್ನು ಹಿಡಕೊಂಡು ತೋಟದಿಂದ ಹೊರಡತೊಡಗಿದ್ದಾರೆ. ಕೆಲವು ಸೊಗಸುಗಾರರು ತಾಸೆರಡು ತಾಸು ಆಡಿ-ಓಡಿ ದಣಿದುಬಂದು ಉದ್ಯಾನದ ಸುಗಂಧಯುಕ್ತ ತಂಗಾಳಿಯಿಂದ ತಂಪುವಡೆದು ಮೋದಪಡುತ್ತ ಚಕ್ಕಂದದಿಂದ ಹರಟುತ್ತಲಿದ್ದಾರೆ. ಹೀಗೆ ಉದ್ಯಾನದೊಳಗಿನ ಎಷ್ಟು ಜನರು ಎಷ್ಟು ಹರಟಿದರೂ, ಎಷ್ಟು ಜನರು ಎಷ್ಟು ವ್ಯವಸಾಯ ಮಾಡಿದರೂ, ಅವರೆಲ್ಲರೂ ಸ್ವಲ್ಪವೂ ಗದ್ದಲವಾಗದಂತೆ ಬಲು ಎಚ್ಚರಪಡುತ್ತಿದ್ದರು! ಯಾಕಂದರೆ, ತಪೋಧನರಾದ ಮಾಧವಾಚಾರ್ಯರು ಅಲ್ಲಿಯೇ

ಉದ್ಯಾನವನದಲ್ಲಿಯದೊಂದು ಪರ್ಣಕುಟೀರದಲ್ಲಿ ವಾಸಿಸುತ್ತಿದ್ದರು. ಆ ಉದ್ಯಾನದ ಪ್ರಶಾಂತವಾದದ್ದೊಂದು ನಿಟ್ಟಿನಲ್ಲಿ ಮಾಧವಾಚಾರ್ಯರ ಸಲುವಾಗಿಯೇ ಒಂದು ಪರ್ಣಶಾಲೆಯು ಹೊಸದಾಗಿ ಕಟ್ಟಲ್ಪಟ್ಟಿತ್ತು. ಅದರ ಸುತ್ತುಮುತ್ತು ಗಿಡಗಳು ದಟ್ಟವಾಗಿ ಇದ್ದದ್ದರಿಂದ ಆಶ್ರಮದ ಹೊರಗೆ ಬೈಲಲ್ಲಿ ಕುಳಿತು ಕೊಂಡರೂ ಬಿಸಿಲಬಾಧೆಯಾಗುತ್ತಿದ್ದಿಲ್ಲ. ಆಚಾರ್ಯರ ಸ್ನಾನ-ಸಂಧ್ಯಾದಿ ನಿತ್ಯಕರ್ಮಗಳಿಗೂ, ಜಪತಪಾನುಷ್ಠಾನಗಳಿಗೂ ಬಾಧೆಬಾರದಂತೆ ರಾಜಕೀಯ ವ್ಯವಸ್ಥೆಯನ್ನಿಡುವದು ಆಚಾರ್ಯರಿಗೆ ಬೇಡಾಗಿದ್ದರೂ ರಾಜಕೀಯ ಗೌರವಕ್ಕಾಗಿ ಆಚಾರ್ಯರ ಒಪ್ಪಿಗೆಯಿಂದಲೇ ಆ ವ್ಯವಸ್ಥೆಯು ಇಡಲ್ಪಟ್ಟಿತ್ತು. ಆ ಮಹಾಮಹಿಮರಿರುವ ನಿಟ್ಟಿನಲ್ಲಿ ಹದ್ದುಮೀರಿ ಜನರು ಮುಂದಕ್ಕೆ ಬಾರದಂತೆ, ಹಾಗು ಗದ್ದಲವಾಗದಂತೆ ಸೈನಿಕರು ಸನ್ನಾಹಗೊಂಡು ನೋಡಿಕೊಳ್ಳುತ್ತಿರಲು, ಶುದ್ಧ ಸಾತ್ವಿಕವಾದ ಬ್ರಹ್ಮತೇಜಸ್ಸನ್ನು ಸತ್ವಯುಕ್ತ ರಾಜಸವೆನಿಸುವ ಕ್ಷಾತ್ರತೇಜಸ್ಸು ಕಾಯುವದನ್ನು ನೋಡಿ ಕನ್ನಡಿಗರು ಅಭಿಮಾನಪಡುತ್ತಿದ್ದರು ! ಅವರು ತಮ್ಮತಮ್ಮೊಳಗೆ– ''ಈ ಮಹಾತ್ಮರು ಕನ್ನಡಿಗರಾದ ನಮ್ಮನ್ನು ಉದ್ಧರಿಸುವದಕ್ಕಾಗಿಯೇ ಅವತರಿಸುವರು ! ಇವರು ಕಾಸಿಮನಂಥ ಯವನವೀರನ ಭಕ್ತಿ-ವಿಶ್ವಾಸಗಳಿಗೂ ಪಾತ್ರರಾಗುವಂಥ ಮಹಿಮಾಶಾಲಿಗಳು'' ಎಂದು ಮೆಲ್ಲನೆ ಮಾತಾಡುತ್ತ ಆಚಾರ್ಯರ ಕುಟೀರವನ್ನು ಕೌತುಕದಿಂದ ನೋಡುತ್ತ ಅರಿಯದವರಿಗೆ ಅದನ್ನು ಬೆರಳು ಮಾಡಿಮಾಡಿ ತೋರಿಸುತ್ತ ಅನುಷ್ಠಾನವಾದಬಳಿಕ ಆಚಾರ್ಯರು ಹೊರಗೆ ಬಂದಮೇಲೆ ಕುಳಿತುಕೊಳ್ಳತಕ್ಕ ಸ್ಥಳವು ಅದೇ ಎಂದು ಕೈ ಮಾಡಿಮಾಡಿ ಬಣ್ಣಿಸುತ್ತ . ಅವರೆಲ್ಲರೂ ಆಚಾರ್ಯರು ಹೊರಗೆ ಬರುವ ಹಾದಿಯನ್ನು ಅತ್ಯುತ್ಸುಕತೆಯಿಂದ ನೋಡುತ್ತಲಿದ್ದರು.

ಮಾಧವಾಚಾರ್ಯರ ಅನುಷ್ಠಾನವು ಬೆಳಗಿನ ಮೂರುತಾಸಿಗೆ ಮುಗಿದ ಬಳಿಕ ಅವರು ತಮ್ಮ ಪರ್ಣಕುಟೀರದಿಂದ ಹೊರಗೆ ಬಂದು ಕುಳಿತುಕೊಳ್ಳುವ ಪ್ರಚಾರವಿತ್ತು. ಅವರು ಹೊರಗೆ ಬರುವ ಕಾಲವು ಸಮೀಪಿಸುತ್ತ ಬಂದಂತೆ ಒಬ್ಬೊಬ್ಬರೇ ರಾಜಕಾರಣ ಪುರುಷರು ಬಂದು ಕುಟೀರದ ಹೊರಗೆ ಸುಮ್ಮನೆ ಕುಳಿತುಕೊಳ್ಳತೊಡಗಿದರು. ಪರ್ಣ ಕುಟೀರದ ಮುಂದಿನ ಪ್ರಶಸ್ತಪ್ರದೇಶವನ್ನು ಸಾರಿಸಿ ರಂಗವಲ್ಲಿಯನ್ನು ಹಾಕಿದ್ದರು. ಆಚಾರ್ಯರು ಕುಳಿತು ಕೊಳ್ಳುವದಕ್ಕಾಗಿಯೂ, ಉಳಿದ ಕರ್ಮನಿಷ್ಠ ಬ್ರಹ್ಮವೃಂದವು ಕುಳಿತುಕೊಳ್ಳು ವದಕ್ಕಾಗಿಯೂ ಕೃಷ್ಣಾಜಿನ ದರ್ಭಾಸನಗಳನ್ನು ಹಾಕಿ, ಬೇರೆ ರಾಜಕೀಯ ಪುರುಷರು ಕುಳಿತುಕೊಳ್ಳುವದಕ್ಕೆ ಜಾಜಮು. ಜಮಖಾನಿ ಮೊದಲಾದವುಗಳನ್ನು ಹಾಕಿದ್ದರು. ಲೋಕ ಸಂಗ್ರಹ– ಲೋಕಜಾಗೃತಿಗಳಿಗಾಗಿ ಮಾಧವಾಚಾರ್ಯರ ಪ್ರವಚನಗಳು ಬಹುತರ ಪ್ರತಿನಿತ್ಯ ಇದೇ ಹೊತ್ತಿನಲ್ಲಿ ಆರಂಭವಾಗಿ, ಮಧ್ಯಾಹ್ನದ ಸಂಧ್ಯಾಸಮಯಕ್ಕೆ ಮುಗಿಯುತ್ತಿದ್ದವು. ಆಚಾರ್ಯರು ಆಹಿತಾಗ್ನಿಗಳು, ಅವರ ನಿತ್ಯನೈಮಿತ್ತಿಕ ಕರ್ಮಗಳಿಗೆ ಬಾಧೆಬರುವಂತೆ ಇದ್ದಿಲ್ಲ. ಅವರು ಎಂಥ ರಾಜಕಾರಣವಿದ್ದರೂ ತಮ್ಮ ಧಾರ್ಮಿಕ ವ್ಯವಹಾರಕ್ಕೆ ಭಂಗ ತಂದುಕೊಳ್ಳುತ್ತಿದ್ದಿಲ್ಲ. ಇದರ ಮೇಲೆಯೂ ಕೈಮೀರಿ ಭಂಗವುಂಟಾದರೆ ಪ್ರಾಯಶ್ಚಿತ್ತದಿಂದ ಪರಿಶುದ್ಧರಾಗುತ್ತಿದ್ದರು. ಮಹಾತ್ಮರ ಈ ಸ್ವಧರ್ಮನಿಷ್ಠೆಯನ್ನು ನೋಡಿ ಕಾಸಿಮನಂಥ ಯವನವೀರನೂ ಲೀನನಾಗಿದ್ದನು.

ಆಚಾರ್ಯರ ಮನಃಪೂರ್ವಕವಾದ ಈ ಧಾರ್ಮಿಕ ಪರಿಶುದ್ಧಾಚರಣೆಯಲ್ಲಿ ಕಾಸಿಮನ ಆದರ ಬಹಳ; ಆ ಮಹಾತ್ಮರ ಆಚಾರಪೂರ್ವಕವಾದ ಪರಿಶುದ್ಧ ವಿಚಾರದಲ್ಲಿ ಕಾಸಿಮನ ವಿಶ್ವಾಸವು ಹೆಚ್ಚು; ಆದ್ದರಿಂದ ಆತನು ದಿನಾಲು ಭಕ್ತಿಯಿಂದ ಆಚಾರ್ಯರ ಪ್ರವಚನಕ್ಕಾಗಿ ಬರುತ್ತಲಿದ್ದನು. ಈ ಮಾತು ವೈದಿಕ ಧರ್ಮದವರಿಗೆ ಕೌತುಕದ್ದಾಗಿ ತೋರಿದ್ದರೆ ಆಶ್ಚರ್ಯವಲ್ಲ. ಒಬ್ಬ ಕಾಸಿಮನ ಭಕ್ತಿಯು ಮಾಧವಾಚಾರ್ಯರಲ್ಲಿ ಕುಳಿತದ್ದು, ಆತನ ಅನುಯಾಯಿಗಳ ಭಕ್ತಿಯು ಆಚಾರ್ಯರಲ್ಲಿ ಕುಳಿತುಕೊಳ್ಳಲಿಕ್ಕೆ ಸಹಾಯಕಾರಿ ಯಾಯಿತು. ಆಚಾರ್ಯರ ಪ್ರವಚನಗಳಿಂದ ಕಾಸಿಮನ ಸಂಶಯಗಳ ಪರಾಭವವಾಗುತ್ತ ಹೋದಂತೆ ಅವರ ವಿಷಯದಲ್ಲಿ ಕಾಸಿಮನ ಭಕ್ತಿಯು ಹೆಚ್ಚುತ್ತಹೋಯಿತು. ಮಾಧವಾಚಾರ್ಯರಂಥ ಶ್ರೇಷ್ಠ ತತ್ವ ಜ್ಞಾನಿಗಳಿಂದ ವಿವಿಧ ಗೂಢತತ್ವಗಳ ವಿವೇಚನವಾಗದಿದ್ದರೆ ಮತ್ತೆ ಯಾರಿಂದ ಆಗಬೇಕು? ಇಂದಿನ ಪ್ರವಚನದ ಶ್ರವಣಕ್ಕಾಗಿ ಬರುವ ರಾಜಕೀಯ ಪುರುಷರು ಬಡಬಡ ಬಂದು ತಮ್ಮತಮ್ಮ ಸ್ಥಳಗಳಲ್ಲಿ ಕುಳಿತುಕೊಳ್ಳತೊಡಗಿದರು. ಕಡೆಗೆ ಹುಕ್ಕ–ಬುಕ್ಕರೂ, ಕೃಷ್ಣನಾಯಕನೂ, ಬಖತ್ಯಾರಖಾನ–ಕಾಸಿಮಖಾನರೂ, ಮಲ್ಲಸರ್ಜನನೇ ಮೊದಲಾದ ಪ್ರಮುಖ ಸರದಾರರೂ ಬಂದು ಕುಳಿತುಕೊಂಡರು. ಉಳಿದ ಜನರು, ಅಲ್ಲಲ್ಲಿ ಅನುವು ನೋಡಿ ಕೆಲವರು ಕುಳಿತುಕೊಂಡರು–ಕೆಲವರು ನಿಂತುಕೊಂಡರು. ಕೆಲವರು ಆತುರ ಸ್ವಭಾವದವರು ಮರವೇರಿ ಕುಳಿತುಕೊಳ್ಳಲಿಕ್ಕೂ ಹಿಂದೆಮುಂದೆ ನೋಡಲಿಲ್ಲ. ದುಸ್ಸಹವಾದ ಕ್ಷಾತ್ರತೇಜಸ್ಸಿಗೆ, ಶಾಂತವಾದ ಬ್ರಹ್ಮತೇಜಸ್ಸಿನ ಮಿಲನವಾದದ್ದರಿಂದ ಆ ಸುಸಂಸ್ಕೃತ ಕ್ಷಾತ್ರತೇಜಸ್ಸು ಲೋಕತಾಪಹಾರಕವೂ, ಲೋಕಕಲ್ಯಾಣ ಕಾರಕವೂ ಆಗಿ ಪರಿಣಮಿಸುತ್ತಲಿತ್ತು. ಮಾಧವಾಚಾರ್ಯರಂಥ ನಿಸ್ಪೃಹರಾದ ತಪೋನಿಷ್ಠ ಜ್ಞಾನಿಗಳು ರಾಜ್ಯಸೂತ್ರ ಚಾಲಕರಾದದ್ದರಿಂದ ಪ್ರಜೆಗಳಿಗೆ ರಾಜನೂ ರಾಜ್ಯಾಧಿಕಾರಿಗಳೂ ಸಲಿಗೆಯ ತಂದೆ– ತಾಯಿಗಳಂತೆ, ಇಷ್ಟಾರ್ಥವನ್ನು ಪೂರಯಿಸುವ ದೇವರಂತೆ ತೋರುತ್ತಿದ್ದರು! ಮಾಧವಾಚಾರ್ಯರ ಸನ್ನಿಧಿಯಲ್ಲಿ ಅನ್ಯಾಯದಿಂದ ಯಾರ ಉಪಮರ್ದವಾಗಲಿ, ಅಪಮಾನ ವಾಗಲಿ ಆಗುವಹಾಗಿದ್ದಿಲ್ಲ; ಯಾಕಂದರೆ ಅವರ ಆಚರಣೆಯ ಉದಾತ್ತತೆಯೇ ಅಂತಹದು. ಆ ಮಹಾತ್ಮರು ಧಾರ್ಮಿಕ ವ್ಯವಹಾರದಲ್ಲಿ ಅತ್ಯಂತ ಧರ್ಮನಿಷ್ಠರು, ರಾಷ್ಟ್ರೀಯ ವ್ಯವಹಾರದಲ್ಲಿ ಅತ್ಯಂತ ರಾಷ್ಟ್ರಭಕ್ತರು ಆಗಿದ್ದರು. ಅವರು ತಮ್ಮ ಧಾರ್ಮಿಕ ವ್ಯವಹಾರದಲ್ಲಿ ಶ್ರೇಷ್ಠ ವೈದಿಕರೆನಿಸಿ ಏಕಾಂತದಲ್ಲಿ ಏಕದೇಶೀಯ ಧಾರ್ಮಿಕ ಕರ್ಮಗಳನ್ನು ಏಕನಿಷ್ಠೆಯಿಂದ ಸರ್ವಸಂಗಪರಿತ್ಯಾಗ ಪೂರ್ವಕವಾಗಿ ಆಚರಿಸುತ್ತಿದ್ದಂತೆ, ರಾಜಕೀಯ ವ್ಯವಹಾರದಲ್ಲಿ ರಾಜಕಾರಣಪಟುಗಳೆನಿಸಿ ಎಲ್ಲ ಜನರ ಪರವಾಗಿ ಎಲ್ಲರೊಡನೆ ಸಾರ್ವತ್ರಿಕ ಹಿತದ ಸರ್ವವ್ಯಾಪಕ ಕರ್ಮಗಳನ್ನು ಸರ್ವಸಂಗಪರಿತ್ಯಾಗ ಪೂರ್ವಕವಾಗಿಯೇ ಏಕನಿಷ್ಠೆಯಿಂದ ಆಚರಿಸುತ್ತಿದ್ದರು.

ಆ ಪ್ರಚಂಡ ಜನಸಮೂಹವು ತನ್ನ ಮಾರ್ಗದರ್ಶಕರ ಮಾರ್ಗವನ್ನು ನಿರೀಕ್ಷಿಸುತ್ತಿರಲು, ಮಾಧವಾಚಾರ್ಯರ ತೇಜಃಪುಂಜ ಮೂರ್ತಿಯು ಸಾಕ್ಷಾತ್ ಯಜ್ಞೇಶ್ವರನಂತೆ ದೇದೀಪ್ಯ ಮಾನವಾಗಿ ಜನರ ಚಿತ್ತವನ್ನು ಆಕರ್ಷಿಸುತ್ತ ಪರ್ಣಕುಟಿಯಿಂದ ಹೊರಗೆ ಬಂದಿತು. ಕೂಡಲೇ ಎಲ್ಲರೂ ಭಕ್ತಿಯಿಂದ ಎದ್ದುನಿಂತರು. ಆಗ ಆಚಾರ್ಯರು ಮುಗುಳುನಗೆಯ ಕೃಪಾಕಟಾಕ್ಷದಿಂದ

ಸಭಿಕರನ್ನು ಅನುಗ್ರಹಿಸುತ್ತ ಆದರದಿಂದ ತಲೆಯಲ್ಲಾಡಿಸಿ— ''ಕುಳಿತುಕೊಳ್ಳಬೇಕು'' ಎಂಬ ವಿನಯೋಕ್ತಿಯ ಕರ ಸಂಜ್ಞೆಯಿಂದ ಸರ್ವರನ್ನು ಸನ್ಮಾನಿಸಿದರು. ಕೂಡಲೇ ಸಭಿಕರ ಚಿತ್ತವೃತ್ತಿಗಳು ಉಲ್ಲಸಿತವಾಗಿ ಎಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡರು. ಆಚಾರ್ಯರ ವಿಲಕ್ಷಣವಾದ ಶಾಂತವೃತ್ತಿಯ ದಿವ್ಯಪ್ರಭಾವದಿಂದಲೇ ಸಭಿಕರಲ್ಲಿ ಶಾಂತಿಯ ಪ್ರತಿಷ್ಠಾಪನೆಯು ಸ್ವಾಭಾವಿಕವಾಗಿ ಆಗಿಹೋಯಿತು. ಅದಕ್ಕೆ ರಾಜಶಾಸನದ ಭಯದ ಕೃತ್ರಿಮ ಉಪಾಯದ ಅವಶ್ಯಕತೆಯೇ ಬೀಳಲಿಲ್ಲ. ಪ್ರತಿಯೊಬ್ಬರಿಗೆ ತಮ್ಮನ್ನು ಆಚಾರ್ಯರು ಕೃಪಾದೃಷ್ಟಿಯಿಂದ ನೋಡಿದರೆಂಬ ಭಾವನೆಯಾಯಿತು. ಈ ಭಾವನೆಯಿಂದ ಕಾಸಿಮಖಾನನು ತನ್ನನ್ನು ಧನ್ಯನೆಂದು ತಿಳಿದು ಕೊಂಡನು. ಆಸನದಲ್ಲಿ ಕುಳಿತುಕೊಂಡ ಆಚಾರ್ಯರಲ್ಲಿಯೇ ಎಲ್ಲರ ಕಣ್ಣುಗಳು ನಟ್ಟು ಹೋಗಿದ್ದವು. ಎಂದಿನಂತೆ ಅಂದಾದರೂ ಅವರ ಉಡಿಗೆ-ತೊಡಿಗೆಗಳಲ್ಲಿ ಆಡಂಬರದ ಗಂಧವಿದ್ದಿಲ್ಲ. ಅವರು ಶುಭ್ರವಸ್ತ್ರವನ್ನುಟ್ಟು , ಶುಭ್ರವಸ್ತ್ರವನ್ನೇ ಹೊದ್ದು, ತಲೆಗೊಂದು ಶುಭ್ರವಸ್ತ್ರವನ್ನು ಸುತ್ತಿದ್ದರು. ಅವರ ಭಸ್ಮೋದ್ಧೂಲಿತ ಗಾತ್ರವನ್ನು ರುದ್ರಾಕ್ಷಮಾಲೆಗಳು ಅಲಂಕರಿಸುತ್ತಿರಲು, ಅವರ ಕೈಯೊಳಗಿನ ಜಪದ ಗೋಮುಖ, ಕಾಲೊಳಗಿಂದ ಕಳಚಿಟ್ಟಿದ್ದ ಕಡಾವಿಗೆಗಳು, ಕಂಕುಳೊಳಗಿನ ಯೋಗದಂಡ, ದಿಟ್ಟಿಸಿ ನೋಡಲಸಾಧ್ಯವಾದ ಮುಖಕಾಂತಿ ಇವು ತಪಸ್ವಿತೆಯ ಕುರುಹುಗಳಾಗಿ ಕಂಗೊಳಿಸುತ್ತಿದ್ದವು. ಆಚಾರ್ಯರ ಸುತ್ತುಮುತ್ತು ಶಿಷ್ಯಪರಿವಾರವೂ, ಬ್ರಹ್ಮವೃಂದವೂ ಯಾರು ಆಸನದ ಮೇಲೆ, ಯಾರು ನೆಲದ ಮೇಲೆ ಕುಳಿತುಕೊಂಡಿದ್ದರು. ಆಚಾರ್ಯರ ಪ್ರೀತಿಯ ಎರಳೆಯು, ಸುತ್ತುಮುತ್ತು ಕುಳಿತುಕೊಂಡಿದ್ದ ಬ್ರಾಹ್ಮಣರ ನಡುವಿನಿಂದ ಹಾದುಬಂದು ಆಚಾರ್ಯರ ಬಳಿಯಲ್ಲಿ ಮೆಲಕಾಡಿಸುತ್ತ ಮಲಗಿಕೊಂಡಿತು. ಆಚಾರ್ಯರ ನಿತ್ಯ ಪೂಜೆಯ ಪವಿತ್ರ ಗೋವು, ಕುಳಿತು ಬ್ರಹ್ಮವೃಂದದಾಚೆಕಡೆಯಲ್ಲಿ ಆಚಾರ್ಯರ ಕಡೆಗೆ ಮೋರೆಮಾಡಿ ಮೆಲಕು ಹಾಕುತ್ತ, ನಡುನಡುವೆ ಚಿನ್ನಾಟದಿಂದ ಬಾಲವೆತ್ತಿ ಜಿಗಿದಾಡುವ ತನ್ನ ಕರುವನ್ನು ಕೌತುಕದಿಂದ ನೋಡುತ್ತ ಕುಳಿತುಕೊಂಡಿತ್ತು. ಪೂಜೆಯ ಕಾಲದಲ್ಲಿ ಅದೇ ಹಚ್ಚಿದ ಗಂಧಾಕ್ಷತೆ ಹರಿದ್ರಾಕುಂಕುಮಗಳು ಆದರ ಹಣೆ ಬಾಲಗಳಲ್ಲಿ ಅಚ್ಚಳಿಯದೆ ಒಪ್ಪುತ್ತಿದ್ದವು. ಅದರ ಕೊರಳಲ್ಲಿ ಹಾಕಿದ ವಿವಿಧ ಸುಗಂಧಪುಷ್ಪಗಳ ಮಿಶ್ರಮಕರಂದವು ಸುತ್ತುಮುತ್ತು ಇಡಿಗಿತ್ತು! ಈ ಪವಿತ್ರ ಗೋವು ಆಚಾರ್ಯರ ಅಭಿಷ್ಟವನ್ನು ಪೂರೈಸುವ ಆಶ್ರಮಸ್ಥ ಕಾಮಧೇನುವೇ ಸರಿಯೆಂದು, ನೋಡುವವರ ಮನಸ್ಸಿನಲ್ಲಿ ಸ್ವಾಭಾವಿಕವಾಗಿ ಹೊಳೆದು, ಪ್ರಾಚೀನಕಾಲದ ವಶಿಷ್ಠ-ವಿಶ್ವಾಮಿತ್ರಾದಿ ಮಹರ್ಷಿಗಳ ಆಶ್ರಮದ ಕಲ್ಪನೆಯಾಗುತ್ತಿತ್ತು! ಆ ಸಾತ್ವಿಕವಾದ ತಪೋಧನರು ಅದೇ ಅನುಷ್ಠಾನವನ್ನು ಮುಗಿಸಿಕೊಂಡು ಬಂದದ್ದರಿಂದ ಅವರ ಅಂಗಾಂಗಳಲ್ಲಿ ತುಂಬಿತುಳುಕುತ್ತಿರುವ ಸಾತ್ವಿಕಭಾವವು ಹಾಗೆಯೇ ತುಂಬಿ ತುಳುಕುತ್ತಲೇ ಇತ್ತು! ರಾಷ್ಟ್ರೋದ್ಧಾರಕ್ಕಾಗಿಯೇ ಅವತರಿಸಿದ್ದ ಆ ಸತ್ವಮೂರ್ತಿಯ ಸಾನ್ನಿಧ್ಯದಿಂದ ಅಲ್ಲಿದ್ದವರ ಹೃದಯಗಳೆಲ್ಲ ತಟ್ಟನೇ ಸತ್ವಮಯವಾಗಿ ಹೋದವು ! ಹಿಂದುಗಳು ತಮ್ಮ ಪ್ರಬಲ ಶತ್ರುವೆಂದು ತಿಳಿದುಕೊಂಡಿದ್ದ ಕಾಸಿಮಖಾನನೂ ಸಾತ್ವಿಕನಾಗಿ ಆಚಾರ್ಯರಿಗೆ ಅಂಕಿತನಾಗಿರುವದನ್ನು ನೋಡಿದರೆ, ಸತ್ವಸ್ಥರ ಮಹಿಮೆಯು ಯಾರಿಗೆ ತಾನೆ ಗೊತ್ತಾಗಲಿಕ್ಕಿಲ್ಲ? ಖಾನನಿಗೆ ಆಚಾರ್ಯರು

ತಮ್ಮ ಧರ್ಮದ ಶ್ರೇಷ್ಠ ಸತ್ಪುರುಷರಂತೆಯೂ, ಸಾಧುಗಳಂತೆಯೂ ತೋರಹತ್ತಿದರು. ಆಚಾರ್ಯರ ಭಾವಸಾತ್ವಿಕ, ಇರವು ಸಾತ್ವಿಕ, ಕರ್ಮ ಸಾತ್ವಿಕ, ನುಡಿಯು ಸಾತ್ವಿಕ, ಪರಿವಾರವು ಸಾತ್ವಿಕ; ಹೀಗಿದ್ದು, ಅವರು ರಾಜ್ಯಸ್ಥಾಪನದಂಥ ಹಿಂಸಾಮಯ ರಾಜಸ-ತಾಮಸ ಕಾರ್ಯಕ್ಕೆ ಕೈಹಾಕಿ, ಆ ಕಾರ್ಯವನ್ನು ಕೊನೆಗಾಣಿಸುವ ಪರಿಸ್ಥಿತಿಗೆ ತಂದಿಟ್ಟದ್ದನ್ನು ನೋಡಿ ಕಾಸಿಮನಿಗೆ ಪರಮಾಶ್ಚರ್ಯವಾಯಿತು ! ತಮ್ಮ ಧರ್ಮದಲ್ಲಿಯ ಸಾತ್ವಿಕಭಾವದ ಮಹಾತ್ಮರು, ತಮ್ಮ ಧರ್ಮಕ್ಕೂ, ಸ್ವಾತಂತ್ರ್ಯಕ್ಕೂ ಬಾಧೆಯುಂಟಾಗುವ ಪ್ರಸಂಗದಲ್ಲಿ ತಮ್ಮ ಧರ್ಮಬಾಂಧವರನ್ನು ಧರ್ಮ ಸ್ಥಾಪನೆಯ, ಹಾಗು ಸ್ವಾತಂತ್ರ್ಯರಕ್ಷಣದ ಪವಿತ್ರ ಕಾರ್ಯಕ್ಕಾಗಿ ಪ್ರಾಣವನ್ನರ್ಪಿಸಲು ಸಿದ್ಧವಾಗಬೇಕೆಂದು ಸಾರಿ ಸಾರಿ ಉಪದೇಶಿಸುವಂತೆ, ಈ ಆಚಾರ್ಯರೂ ತಮ್ಮ ದೇಶಬಾಂಧವರ ಧರ್ಮದ ಹಾಗೂ ಸ್ವಾತಂತ್ರ್ಯದ ರಕ್ಷಣಕ್ಕಾಗಿ ಆಚಾರಪೂರ್ವಕವಾದ ಉಪದೇಶದ ಕಾಯಕವನ್ನು ಕೈಕೊಂಡಿರಬಹುದಲ್ಲವೆ? ಅಂದಬಳಿಕ ಉದ್ದೇಶದಲ್ಲಿ ನಮ್ಮವರಿಗೂ ಇವರಿಗೂ ಏನು ಭೇದವಿದ್ದಂತಾಯಿತು? ಅಹಹ ! ಆಚಾರ್ಯರು ಅತ್ಯಂತ ಮಾನ್ಯರು; ಅತ್ಯಂತ ತಾರಕರು; ಅತ್ಯಂತ ಪೂಜ್ಯರು ! ಇಂಥವರಿಗೆ ನಾನು ಶರಣುಹೋಗಲೇಬೇಕು !

ಈ ಮೇರೆಗೆ ಮನಸ್ಸಿನಲ್ಲಿ ಯೋಚಿಸಿಕೊಂಡು ಕಾಸಿಮಖಾನನು ಏನೋ ಕೇಳಬೇಕೆಂದು ಮೇಲಕ್ಕೇಳುತ್ತಿರಲು, ಮಹಾತ್ಮರಾದ ಆಚಾರ್ಯರು ಅಂತರ್ಜ್ಞಾನದಿಂದ ಆತನ ಮನೋಭಾವ ವನ್ನು ತಿಳಿದು ಆತನನ್ನು ಕುರಿತು ಮುಗುಳುನಗೆಯಿಂದ- ''ಖಾನಸಾಹೇಬ, ಕುಳಿತುಕೊಳ್ಳಿರಿ, ಏನು ಕೇಳುವದನ್ನು ಕುಳಿತುಕೊಂಡೇ ಕೇಳಿರಿ. ಇನ್ನು ನೀವು ನಮಗೆ ಹೊರಗಿನವರಲ್ಲದ್ದರಿಂದ ಎಷ್ಟು ಮಾತ್ರವೂ ಸಂಕೋಚಪಡಬಾರದು. ನಮ್ಮ ನಿಮ್ಮ ಧರ್ಮಗಳ ಬಾಹ್ಯಾಚರಣೆಯಲ್ಲಿ ಭೇದವು ತೋರಿದರೂ ಧರ್ಮದ ಮುಖ್ಯತತ್ವಗಳಲ್ಲಿ ಭೇದವಿಲ್ಲವು. ದೇವರಲ್ಲಿ ಭಕ್ತಿಯು ನಮಗೂ ಬೇಕು; ನಿಮಗೂ ಬೇಕು; ಸತ್ಯಜ್ಞಾನದ ಅಪೇಕ್ಷೆಯನ್ನು ನಾವೂ ಮಾಡುವೆವು, ನೀವೂ ಮಾಡುವಿರಿ; ವೈರಾಗ್ಯಕ್ಕೆ ನಮ್ಮಲ್ಲಿಯೂ ಗೌರವವುಂಟು, ನಿಮ್ಮಲ್ಲಿಯೂ ಗೌರವವುಂಟು. ಈ ಭಕ್ತಿ-ಜ್ಞಾನ-ವೈರಾಗ್ಯಸಂಪನ್ನತೆಯಿಂದ ನಮಗೆ ಆನಂದಪ್ರಾಪ್ತಿಯಾಗುವಂತೆ ನಿಮಗೂ ಆನಂದಪ್ರಾಪ್ತಿಯಾಗುತ್ತದೆ. ನಾವಾಗಲಿ-ನೀವಾಗಲಿ ಆಚರಿಸುವ ಧರ್ಮದ ಬಾಹ್ಯಾಚರಣೆಗಳು, ಈ ಭಕ್ತಿ-ಜ್ಞಾನ-ವೈರಾಗ್ಯದ್ವಾರಾ ಆನಂದಪ್ರಾಪ್ತಿಯಾಗಬೇಕೆಂತಲೇ ಆಚರಿಸತಕ್ಕವಾಗಿರುತ್ತವೆ. ಈ ಬಾಹ್ಯಾಚರಣರೂಪವಾಗಿ ಧರ್ಮದ ಬಾಹ್ಯಾಂಗಕ್ಕೆ ಅಷ್ಟು ಮಹತ್ವವಿಲ್ಲ. ಸರ್ವಧರ್ಮ ಸಮಾನ್ಯವಾದ ಧರ್ಮದ ಅಂತರಂಗಕ್ಕೆ ಲಕ್ಷಗೊಡದೆ, ಈ ಬಾಹ್ಯಾಚರಣ ರೂಪವಾದ ಧರ್ಮದ ಬಹಿರಂಗದ ಭಿನ್ನತ್ವಕ್ಕಾಗಿ ಕ್ಷೋಭಿಸಿ ಈವರೆಗೆ ಜಗತ್ತಿನಲ್ಲಿ ಧರ್ಮದ ಹೆಸರಿನಿಂದ ರಕ್ತದ ಕಾಲುವೆಗಳು ಹರಿಯುತ್ತ ಬಂದಿರುವವು. ಅದು ಧರ್ಮದ ನಿಜವಾದ ಅಂತರಂಗದ ಜ್ಞಾನವನ್ನು ಕಳಕೊಂಡ ತಪ್ಪಿಗಾಗಿ ಆಗುವ ಘೋರ ಪ್ರಾಯಶ್ಚಿತ್ತವೆಂದು ತಿಳಿಯಬೇಕು. ಈ ಪ್ರಾಯಶ್ಚಿತ್ತವನ್ನು ಒಂದು ಬಗೆಯಿಂದ ಜಗತ್ತೇ ಅನುಭವಿಸುತ್ತ ಬಂದಿರುತ್ತದೆಂದು ಹೇಳಬಹುದು. ಆದ್ದರಿಂದ ಕಾಸಿಮಖಾನ, ನಮ್ಮ ನಿಮ್ಮ ಧರ್ಮಗಳ ನಿಜವಾದ ತತ್ವಗಳು ಒಂದೇ ಇರುವದರಿಂದ ತಾತ್ವಿಕವಾಗಿ ನಿಮಗೆ ನಾವೂ ನಮಗೆ ನೀವೂ ಪರಕೀಯರೆಂದು ಭಾವಿಸಲಾಗದು; ಆದ್ದರಿಂದ ಕೇಳತಕ್ಕದ್ದನ್ನು

ಸಂಕೋಚವಿಲ್ಲದೆ ಕೇಳಬೇಕು, ಎಂದು ಹೇಳಲು, ಕಾಸಿಮಖಾನನು ಎದ್ದುನಿಂತು ವಿನಯದಿಂದ– ''ಮಹಾಪುರುಷರೇ, ನಿಮ್ಮ ತೇಜಸ್ಸಿನ ಮುಂದೆ ಕುಳಿತುಕೊಂಡು ಮಾತಾಡುವ ಧೈರ್ಯವು ನನಗೆ ಆಗಲೊಲ್ಲದು, ಆದ್ದರಿಂದ ಅಪ್ಪಣೆಯ ವಿರುದ್ಧವಾಗಿ ಎದ್ದುನಿಂತು ಮಾತಾಡುವದಕ್ಕಾಗಿ ನನ್ನನ್ನು ಕ್ಷಮಿಸಬೇಕು. ನನಗೆ ನನ್ನ ಪಾಪಗಳಿಗಾಗಿ ಪರಮಾವಧಿ ಪಶ್ಚಾತ್ತಾಪವಾಗಿದೆಯೆಂಬದನ್ನು ಅರಿಕೆಮಾಡಿಕೊಳ್ಳುವೆನು. ನಾನು ಇಲ್ಲಿ ಕರ್ನಾಟಕಕ್ಕೆ ಬಂದಬಳಿಕ ಮಾಡಿದ ಪಾಪಗಳನ್ನು ಬಹುತರ ಕನ್ನಡಿಗರೆಲ್ಲರೂ ಬಲ್ಲರು; ಅದರಲ್ಲಿ ಈ ಸಭಿಕರಂತೂ ಒಂದೂ ಬಿಡದಂತೆ ಅವನ್ನು ಅರಿತಿರುವರು. ಅಂದಬಳಿಕ ಈಗ ಅವನ್ನು ಬಾಯಿಂದ ಅನ್ನಲಿಕ್ಕೆ ಯಾಕೆ ಅಂಜಬೇಕು? ಸತ್ಪುರುಷರ ಸನ್ನಿಧಿಯಲ್ಲಿ ಅವರ ಸಾಕ್ಷಿಯಿಂದ ಅವನ್ನು ಈಗ ಒಡನುಡಿದು ಅವಕ್ಕಾಗಿ ಕ್ಷಮಿಸಬೇಕೆಂದು ದೇವರನ್ನು ಪ್ರಾರ್ಥಿಸುವೆನು. ನಾನು ಮಾಡಿದ ಮುಖ್ಯ ಪಾಪವೆಂದರೆ, ಪರಸ್ತ್ರೀಯರ ಅಪಹಾರವು. ಈ ಪಾಪವನ್ನು ಮಾಡುವಾಗ ಹಿಂದೂ ಸ್ತ್ರೀಯರ ಪವಿತ್ರ ಪಾತಿವ್ರತ್ಯದ ಉಜ್ವಲ ತೇಜವು ನನ್ನ ಅನುಭವಕ್ಕೆ ಚೆನ್ನಾಗಿ ಬಂದಿತು ! ಕೆಲ ಪತಿವ್ರತೆಯರು ನನ್ನ ಪಾಪದ ಪ್ರಾಯಶ್ಚಿತ್ತವನ್ನು ಆಗಲೇ ಭೋಗಿಸಹಚ್ಚಿ ತಾವು ಪವಿತ್ರರಾಗಿ ಉಳಿದರು; ಕೆಲವರು ನನಗೆ ಮಂಕುಬೂದಿಯನ್ನು ಹಚ್ಚಿ ತಮ್ಮ ಪಾತಿವ್ರತ್ಯವನ್ನು ಕಾಯ್ದುಕೊಂಡು ಪಾರಾಗಿಹೋದರು; ಕೆಲವರು ಮೂಗಿಗೆ ತುಪ್ಪಹಚ್ಚಿ ಕುಳ್ಳಿರಿಸಿದಂತೆ ನನ್ನನ್ನು ಮರುಳುಮಾಡಿ ಕುಳ್ಳಿರಿಸಿಬಿಟ್ಟರು ! ಅವರ ಏಕನಿಷ್ಠೆಯ ಸದ್ಗುಣವನ್ನು ಮನಸ್ಸಿನಲ್ಲಿ ತಂದರೆ, ಅವರ ಮುಂದೆ ನನ್ನ ಬೆಲೆಯು ಒಂದು ಕವಡಿಕೂಡ ಬಾಳದು. ನಿಮ್ಮ ಈ ಮಲ್ಲಸರ್ಜನನ ಹೆಂಡತಿಯನ್ನು ನಾನು ಅಪಹರಿಸಿ, ಮಲ್ಲಸರ್ಜನನ ದ್ವೇಷವನ್ನು ಸಂಪಾದಿಸಿದೆನು; ಆದರೆ ಆ ಪತಿವ್ರತಾಶಿರೋಮಣಿಯು ತನ್ನ ಸತ್ವಾತಿಶಯದಿಂದ ನನ್ನಂಥ ವೀರನನ್ನು ಅಂಜಿಸಿ ಯಾವ ಮಾಯದಿಂದಲೋ ಪಾರಾಗಿ ಎತ್ತೋ ಹೋದಳು. ಅದರ ತರುವಾಯ, ಒಬ್ಬ ಯಕಃಶ್ಚಿತ ಬೈರಾಗಿಣಿಗೆ ಮರುಳಾಗಿ ನಾನು ಆಕೆಯನ್ನು ಸ್ವಾಧೀನಪಡಿಸಿಕೊಳ್ಳಲು ಹೆಣಗಿದೆನು; ಆದರೆ ಆ ತೇಜಸ್ವಿನಿಯು ನನ್ನನ್ನು ಹುಚ್ಚ ಮಂಗನಂತೆ ಕುಣಿಸಿ ಕೈಸೇರದೇ ಹೋದಳು ! ರಾಜಪುತ್ರಿಯಾದ ಪದ್ಮಿನೀದೇವಿಯ ಯೋಗ್ಯತೆ ಯಂತೂ ನಾನೇನು ವರ್ಣಿಸಲಿ? ವಿಶ್ವಾಸಾಹಸಪಟ್ಟು ಆಕೆಯನ್ನು ನಾನು ಅಪಹರಿಸಿದರೂ, ಕಡೆಗೆ ಗಾಳಿಯನ್ನು ಗುದ್ದಿ ಮೈನೋವು ಮಾಡಿಕೊಂಡಂತೆ ನನ್ನ ಗತಿಯಾಯಿತು ! ಈ ಸಾಧ್ವಿಯರ ಚಾತುರ್ಯ–ಸಾಹಸ–ಸ್ವದೇಶಪ್ರೀತಿ–ಪವಿತ್ರ ಹೃದಯಗಳನ್ನು ನೆನಿಸಿದರೆ ನನ್ನ ಹಡೆದ ತಾಯಿಯಲ್ಲಿ ಹುಟ್ಟುವಷ್ಟು ಭಕ್ತಿಯು ಅವರ ವಿಷಯವಾಗಿ ನನ್ನಲ್ಲಿ ಹುಟ್ಟುತ್ತದೆ ! ಮಹಾತ್ಮನ್, ಐಹಿಕ ಸುಖೇಚ್ಛೆಯಿಂದ ನಾನು ಮಿತ್ರದ್ರೋಹಮಾಡಿ ಬಹಾಉದ್ದೀನನ ಮೈದೊಗಲು ಸುಲಿಸಿದೆನು; ನಿರಪರಾಧಿಗಳಾದ ಬಹುಜನ ಕನ್ನಡಿಗರನ್ನು ಅಧಿಕಾರ–ಬಲಗಳ ದುರುಪಯೋಗ ಮಾಡಿಕೊಂಡು ಕೊಲೆಪಾತಕಿ ಎನಿಸಿಕೊಂಡೆನು. ಹೀಗೆ ನನ್ನ ಪಾತಕಗಳನ್ನು ಎಷ್ಟೆಂದು ಹೇಳಲಿ? ಅವುಗಳ ಸ್ಮರಣದಿಂದ ಈಗ ನನಗೆ ಸಂಪೂರ್ಣ ಪಶ್ಚಾತ್ತಾಪವಾಗಿದೆ. ನಾನು ಹೀಗೆಯೇ ಮಕ್ಕೆಯ ಯಾತ್ರೆಗೆ ಹೋಗುವೆನು. ಸ್ತ್ರೀ ವಿಷಯವು ಬಹು ಸೂಕ್ಷ್ಮವಾದದ್ದರಿಂದ, ಪ್ರಸಂಗವಶಾತ್ ಆಯಾ ಸಾಧ್ವಿಯರ ಬಾಳುವೆಗೆ ಬಾಧಕವಾಗಬಾರದೆಂದು ನಿರ್ಲಜ್ಜೆಯಿಂದ ಇದ್ದದ್ದನ್ನು ಬಾಯಿಬಿಟ್ಟು, ಈ ಸಭೆಯಮುಂದೆ

ಹೇಳಿದ್ದೇನೆ. ಇನ್ನುಮೇಲೆ ಇಂಥ ಪಾಪಗಳನ್ನು ನಾನು ಸರ್ವಥಾ ಮಾಡಲಿಕ್ಕಿಲ್ಲ. ಈವರೆಗೆ ನನ್ನಿಂದ ಒದಗಿದ ಪಾಪಗಳನ್ನು ತಮ್ಮಂಥ ಮಹಾತ್ಮರ ಕೃಪೆಯಿಂದ ಅಲ್ಲಾನು ಕ್ಷಮಿಸಬಹುದು; ಕ್ಷಮಿಸದಿದ್ದರೆ ಆತನು ವಿಧಿಸಿದ ಶಾಸನವನ್ನು ಅನುಭೋಗಿಸಲು ಸಿದ್ಧನೇ ಇರುವೆನು. ಈ ಮರೆಮೋಸದ ಹಾಗೂ ಕೊಲೆಪಾತಕದ ರಾಜಕೀಯ ವ್ಯವಹಾರದ ಹೇಸಿಗೆಯು ನನಗೆ ಈಗ ಬಂದಿರುವದು; ಆದ್ದರಿಂದ ಆಚಾರ್ಯರು ಮಕ್ಕೆಗೆ ಹೋಗುವದಕ್ಕಾಗಿ ನನಗೆ ಅಪ್ಪಣೆಯನ್ನು ಕೊಡಬೇಕು. ನನ್ನ ಈ ಉಪರತಿಗೆ ತಾವೇ ಕಾರಣರಾದ್ದರಿಂದ ತಮ್ಮನ್ನು ನಾನು ಗುರುಗಳೆಂದು ಭಾವಿಸುವೆನು. ಮಹಾತ್ಮನ್, ಕೊಡಬೇಕು, ಈ ಅಧಮ ಕಾಸಿಮನಿಗೆ ಮಕ್ಕೆಗೆ ಹೋಗಲು ಅಪ್ಪಣೆ ಕೊಡಬೇಕು !''

ಈ ಮೇರೆಗೆ ಅತ್ಯಂತವಾದ ಪಶ್ಚಾತ್ತಾಪದ ವೈರಾಗ್ಯದಿಂದ ನುಡಿದ ವೀರಾಗ್ರಣಿ ಕಾಸಿಮ ಖಾನನ ಮಾತುಗಳನ್ನು ಕೇಳಿ ಮಾಧವಾಚಾರ್ಯರಿಗೆ ಅವನ ಸಹೃದಯತೆ–ಸರಳತನಗಳಿಗಾಗಿ ಪರಮಾಶ್ಚರ್ಯವಾಯಿತು. ಅವರು ಗಾಂಭೀರ್ಯದಿಂದ ತಲೆದೂಗುತ್ತ ಶಾಬಾಸ ! ಕಾಸಿಮ ಖಾನ, ಧನ್ಯನು, ನೀನು ಪರಮ ಧನ್ಯನು ! ಕೆಚ್ಚೆದೆಯ ಮುಸಲ್ಮಾನರ ಈ ದಿವ್ಯವಾದ ಪಶ್ಚಾತ್ತಾಪದ ವೃತ್ತಿಯು, ಹಿಂದು–ಮುಸಲ್ಮಾನರಲ್ಲಿ ಬಾಂಧವ್ಯ ಬೆಳೆಯಲಿಕ್ಕೆ ಸಹಾಯಕಾರಿಯಾದದ್ದರಿಂದ ನನಗೆ ಬಹಳ ಸಂತೋಷವಾಗುತ್ತದೆ ! ಹೀಗೆ ಕಾಸಿಮನ ಹಾಗೆ ತಟ್ಟನೆ ಪವಿತ್ರ ಹೃದಯದವರಾಗುವ ಪುಣ್ಯವು ಎಷ್ಟು ಜನ ಹಿಂದು–ಮುಸಲ್ಮಾನರಲ್ಲಿರುವದೆಂಬುದನ್ನು ಅವರೇ ಬಲ್ಲರು ! ಇರಲಿ, ಗೌರವಸಂಪನ್ನನಾದ ಕಾಸಿಮಖಾನ, ನೀನು ಬರಬರುತ್ತ ನಮಗೆ ಹೆಚ್ಚು ಹೆಚ್ಚು ಆಪ್ತನಾಗ ತೊಡಗಿರುವದು ಸಂತೋಷದ ಸಂಗತಿಯು ! ಇಂದು ಮಧ್ಯಾಹ್ನ ಸಂಧ್ಯಾಕಾಲವು ಸಮೀಪಿಸಿದ್ದ ರಿಂದಲೂ, ನಿನಗೂ ನಮಾಜಿನ ಹೊತ್ತು ಆದದ್ದರಿಂದಲೂ ನಿನಗೆ ಹೇಳತಕ್ಕ ನಾಲ್ಕು ಮಾತುಗಳನ್ನು ನಾಳೆ ಹೇಳುವೆನು; ಆದರೆ ನೀನು ಮಕ್ಕೆಗೆ ಹೋಗದೆ ನಿನ್ನ ದೇಶಬಾಂಧವರ ನಿಜವಾದ ಹಿತಸಾಧನ ದಲ್ಲಿ ನೀನು ನಿನ್ನ ಆಯುಷ್ಯ ಕಳೆಯಬೇಕಾಗುವದನ್ನು ಮರೆಯಬೇಡ. ನಿನ್ನ ಈ ಆಗಂತುಕ ವೈರಾಗ್ಯಕ್ಕೂ, ಪವಿತ್ರ ಮಕ್ಕಾಯಾತ್ರೆಗೂ ಸಂಬಂಧವಿಲ್ಲ. ಇವುಗಳ ನಡುವೆ ಅಂತರವು ಬಹಳ ಇರುವದು. ಅಪ್ಪಾ, ನೀನು ವೀರನಿರುತ್ತೀ, ಧೀರನಿರುತ್ತೀ, ಸರಳಹೃದಯದವನಿರುತ್ತೀ, ಚಿತ್ತಾಕರ್ಷಣದ ವಿಷಯದಲ್ಲಿ ತದ್ರೂಪವಾಗಿ ಕೂಡಿಕೊಳ್ಳುವ ಸಹೃದಯತೆಯೂ ನಿನ್ನಲ್ಲಿರುತ್ತದೆ; ಆದರೆ ಪುಟಕ್ಕೆ ಹಾಕಿ ಶುದ್ಧಮಾಡದ ಬಂಗಾರವನ್ನು ದುಡ್ಡಿನ ಆಚೆನಿಂದ ಮಾರಾಟಕ್ಕಾಗಿ ಚಿನಿವಾಲಗಟ್ಟಿಗೆ ಒಯ್ದರೆ ಅದಕ್ಕೆ ಚೊಕ್ಕ ಬಂಗಾರದ ಬೆಲೆಯು ಬರಬಹುದೋ? ಅದರಂತೆ, ತಪಶ್ಚರ್ಯದಿಂದ ನಿನ್ನ ಚಿತ್ತವೃತ್ತಿಯೊಳಗಿನ ದೋಷವನ್ನು ತೆಗೆದುಹಾಕದೆ, ಸದ್ಗತಿಯ ಆಸೆಯಿಂದ ನೀನು ಮಕ್ಕೆಗೆ ಹೋದರೆ ಏನಾಗುವದು? ಪ್ರಸಂಗವಶಾತ್ ಚಿನಿವಾಲನು ಹೀನ ಬಂಗಾರವನ್ನು ನಿರಾಕರಿಸಿ ಹಿಂತಿರುಗಿ ಕಳಿಸುವಂತೆ, ಚಿತ್ತಶುದ್ಧಿ ಪಡೆಯದ ನಿನ್ನನ್ನು ಪವಿತ್ರ ಮಕ್ಕಾಕ್ಷೇತ್ರಸ್ಥ ದೈವೀ ವಿಭೂತಿಯು ನಿರಾಕರಿಸಿಬಿಟ್ಟೀತು; ಆದ್ದರಿಂದ ಪಶ್ಚಾತ್ತಾಪದಿಂದ ಎಚ್ಚತ್ತಿರುವ ನೀನು ತಪಶ್ಚರ್ಯದಿಂದ ಮೊದಲು ಹೃದಯವನ್ನು ಶುದ್ಧಮಾಡಿಕೊಳ್ಳು, ಆಮೇಲೆ ಮಕ್ಕೆಗೆ ಹೋದರೆ ಬೆಲೆಬಾಳೀ. ತಪಶ್ಚರ್ಯವೆಂದರೆ, ಮಹಾತ್ಮರಾದ ನಿಮ್ಮ ಧರ್ಮಗುರುಗಳು ಹಾಕಿಕೊಟ್ಟ ಧರ್ಮಮಾರ್ಗದಿಂದ ಜಾರಿಹೋಗುವ ಮನಸ್ಸನ್ನು ಬಿಗಿಹಿಡಿಯುವದು. ಈ ತಪಶ್ಚರ್ಯಕ್ಕೆ ನೀನು

ಕೈಕೊಂಡಿರುವ ರಾಜಕಾರಣವು ಸಾಧನವೆಂದು ತಿಳಿಯಬೇಕು. ನೀನು ತಘಲಕಮುಹಮ್ಮದನ ಸರದಾರನಾಗಿಯೇ ಈ ತಪಶ್ಚರ್ಯವನ್ನು ಆಚರಿಸಬಹುದೆಂಬದನ್ನು ನಾಳೆ ಹೇಳುತ್ತೇನೆ. ಆದ್ದರಿಂದ ಈಗ ನೀನು ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು ಶಾಂತನಾಗು. ವಿಚಾರಕ್ಕೆ ಒಳಗಾಗಿಯಲ್ಲದೆ ವಿಕಾರಕ್ಕೆ ಒಳಗಾಗಬೇಡ. ದೇಶಬಾಂಧವರ ಯೋಗಕ್ಷೇಮವನ್ನು ವಿಚಾರಿಸದೆ ನೀನೊಬ್ಬನು ವೈರಾಗ್ಯಶಾಲಿಯಾಗಿ ಮಕ್ಕೆಗೆ ಹೋಗಿ ಮೋಕ್ಷವನ್ನು ಪಡೆಯುವದು ದೊಡ್ಡ ಮಾತೋ ? ತನ್ನ ಹೊಟ್ಟೆಯನ್ನು ತಾನು ತುಂಬಿಕೊಳ್ಳುವವನು ದೊಡ್ಡವನಲ್ಲ, ಆ ಕೆಲಸವನ್ನು ನರಿ–ನಾಯಿಗಳೂ ಮಾಡುತ್ತವೆ. ಹಸಿದ ಅನಾಥರ ಹೊಟ್ಟೆಯನ್ನು ತುಂಬುವವನೇ ದೊಡ್ಡವನು ! ಪುಣ್ಯಶಾಲಿಯಾದ ಕಾಸಿಮ, ತನ್ನ ಸಲುವಾಗಿ ತಾನು ಬದುಕಿದವನು ಬದುಕಿಯೂ ಸತ್ತಂತೆಯೇ; ಮಂದಿಯ ಸಲುವಾಗಿ ಸಾಯು ವವನು ಸತ್ತರೂ ಬದುಕಿದಂತೆಯೇ, ಎಂಬ ಮಾತನ್ನು ಮರೆಯಬೇಡ; ಆದ್ದರಿಂದ ಮಂದಿಯ ಸಲುವಾಗಿ ಕಷ್ಟಪಟ್ಟು ಸತ್ತು ನೀನು ಸ್ಥಿರಜೀವಿಯಾಗು ! ಮಂದಿಯ ಸಲುವಾಗಿ ಕಷ್ಟಪಡುವ ದೆಂದರೆ, ತನ್ನಲ್ಲಿಯ ದುರ್ಗುಣಗಳನ್ನು ಬಿಟ್ಟು ಮಂದಿಯ ದುರ್ಗುಣಗಳನ್ನು ಬಿಡಿಸಲು ಹೆಣಗುವದು. ಈಹೊತ್ತು ನಿನ್ನಲ್ಲುಂಟಾಗಿರುವ ಪಶ್ಚಾತ್ತಾಪದ ಅಗ್ನಿಯಲ್ಲಿ ನಿನ್ನ ಒಂದು ದುರ್ಗುಣವನ್ನು ಸುಟ್ಟುಬಿಡು ! ಒಂದು ಹಲ್ಲು ಬೀಳುವದರಿಂದ ಉಳಿದ ಹಲ್ಲುಗಳು ಸಡಿಲಾಗುವಂತೆ, ಒಂದು ದುರ್ಗುಣವನ್ನು ಬಿಡುವದರಿಂದ ಉಳಿದ ದುರ್ಗುಣಗಳೂ ಸಡಿಲುವವು. ಮದ್ಯಪಾನವನ್ನು ನಿಮ್ಮ ಪವಿತ್ರ ಕುರಾಣವು ನಿಷೇಧಿಸುವದಷ್ಟೇ? ಮೇಲಾಗಿ ಮದ್ಯಪಾನದ ಹಾನಿಯನ್ನು ಇಂದು ನೀನು ಪ್ರತ್ಯಕ್ಷ ಅನುಭೋಗಿಸಿರುತ್ತೀ; ಆದ್ದರಿಂದ ಇಂದಿನಿಂದ ನೀನು ಸ್ವತಃ ಮದ್ಯಪಾನ ಮಾಡಲಿಕ್ಕಿಲ್ಲವೆಂತಲೂ, ನಿಮ್ಮವರ ಈ ಧರ್ಮವಿರುದ್ಧ ದುಷ್ಟ ಚಟವನ್ನು ಪ್ರತಿಬಂಧಿಸಲು ಮನಃಪೂರ್ವಕವಾಗಿ ಯತ್ನಿಸುವೆನೆಂತಲೂ ಮನಸ್ಸಿನಲ್ಲಿ ಪ್ರತಿಜ್ಞೆ ಮಾಡು'' ಎಂದು ಹೇಳಿ, ಆಚಾರ್ಯರು ಎಲ್ಲರಿಗೂ ಮನೆಗೆ ಹೋಗಲು ಅನುಜ್ಞೆಯಿತ್ತು ಮಧ್ಯಾಹ್ನಾಹ್ನಿಕಕ್ಕಾಗಿ ಪರ್ಣಕುಟೀರವನ್ನು ಹೊಕ್ಕರು.

## ವ್ಯಾವಹಾರಿಕ ಯೋಗತ್ರಯಗಳು !

ಸತ್ಸಮಾಗಮದ ಮಹಿಮೆಯು ಸಾಮಾನ್ಯವಾದದ್ದಲ್ಲ. ಅದರ ಯೋಗವು ಒದಗಿದವನ ಕಲ್ಯಾಣವು ಅವನ ಏಕನಿಷ್ಠೆಯ ಮಾನದಿಂದ ಆಗಿಯೇತೀರುವದು. ಸದ್ಯಕ್ಕೆ ಕಾಸಿಮನ ಚಿತ್ತವೃತ್ತಿಯ ರೂಪಾಂತರವು ಸತ್ಸಮಾಗಮದಿಂದಲೇ ಆಯಿತು. ಆತನು ತನ್ನ ದೌರ್ಜನ್ಯದ ಹಾದಿಯನ್ನು ಬಿಟ್ಟು, ಸೌಜನ್ಯದ ಹಾದಿಯನ್ನು ಹಿಡಿದನು. ಇನ್ನು ತಾನು ಕುರಾಣದ ಆಜ್ಞೆಗೆ ವಿರುದ್ಧವಾಗಿ ಮದ್ಯಪಾನ ಮಾಡಲಿಕ್ಕಿಲ್ಲವೆಂತಲೂ ತನ್ನ ಧರ್ಮಬಾಂಧವರನ್ನು ಆ ದುಷ್ಟ ವ್ಯಸನದಿಂದ ಮುಕ್ತಮಾಡುವದು ತನ್ನ ಕರ್ತವ್ಯವೆಂತಲೂ ತಿಳಿದು ಹಾಗೆ ನಡೆಯಲು ಪ್ರತಿಜ್ಞೆಮಾಡಿದನು ! ದುರ್ಗುಣಗಳೇನು ಸದ್ಗುಣಗಳೇನು, ಸಹವಾಸದ್ಧ ಯೋಗದಿಂದ ಅವುಗಳಲ್ಲಿ ಒಂದು

ಕಳಚಿಹೋದರೆ ಇಡಿಯ ದುರ್ವೃತ್ತಿಯ ಅಥವಾ ಸದ್ವೃತ್ತಿಯ ಕಸುವು ಕಡಿಮೆಯಾಗಿ, ಸಮಾಗಮವು ಬಲಿಷ್ಠವಾಗಿದ್ದ ಮಾನದಿಂದ ಮನುಷ್ಯನು ಕ್ರಮವಾಗಿ ದುರ್ಜನನಾಗಲಿ–ಸಜ್ಜನನಾಗಲಿ ಆಗಹತ್ತುವನು ! ಈ ನಿಯಮದಂತೆ ಈಗ ಕಾಸಿಮನು ಮಾಧವಾಚಾರ್ಯರ ಬಹು ಬಲಿಷ್ಠವಾದ ಸತ್ಸಮಾಗಮದ ಯೋಗದಿಂದ ಬಡಬಡ ಸಜ್ಜನನಾಗಹತ್ತಿದನು. ಮಾಧವಾಚಾರ್ಯರು ಆತನ ಚಿತ್ತವನ್ನು ಸಂಪೂರ್ಣವಾಗಿ ಹರಣಮಾಡಿ ಬಿಟ್ಟಿದ್ದರು; ಆದ್ದರಿಂದ ಆತನಿಗೆ ಆಚಾರ್ಯರ ಸನ್ನಿಧಿಗೆ ಯಾವಾಗ ಹೋದೇನು, ಅವರ ಸದ್ಬೋಧದ ಶ್ರವಣವನ್ನು ಯಾವಾಗ ಮಾಡೇನು ಅನ್ನುವಹಾಗೆ ಆಗಿತ್ತು. ಮರುದಿನ ಪುನಃ ಆಚಾರ್ಯರ ಪರ್ಣಕುಟಿಯ ಮುಂದುಗಡೆಯಲ್ಲಿ ಶ್ರೋತೃವರ್ಗವು ನೆರೆಯಿತು. ಕಾಸಿಮನಂಥ ವೈಭವಸಂಪನ್ನನಾದ ಯವನ ವೀರನು ಕ್ಷಣದಲ್ಲಿ ವೈರಾಗ್ಯ ಸಂಪನ್ನನಾದದ್ದನ್ನು ನೋಡಿ ಕಂಪಲಿಯ ಆಬಾಲವೃದ್ಧರಿಗೆ ಆಶ್ಚರ್ಯವಾಗಿತ್ತು. ಆಚಾರ್ಯರು ಆತನಿಗೆ ಏನು ಹೇಳುವರೋ ಕೇಳಬೇಕೆಂದು ಜನರು ಉತ್ಸುಕತೆಯಿಂದ ನೆರೆದಿದ್ದರು. ಈ ಮೊದಲೇ ಕಾಸಿಮನಿಗೆ ಅತ್ಯಂತ ತಿರಸ್ಕರಣೀಯರಾಗಿ ತೋರುತ್ತಿದ್ದ ಕಾಫರರಾದ ಹಿಂದುಗಳು ಈಗ ಅತ್ಯಂತ ಆದರಣೀಯರಾಗಿ ತೋರಹತ್ತಿದರು; ಆದ್ದರಿಂದ ಕಾಸಿಮನೂ ಹಿಂದುಗಳಿಗೆ ಆದರಣೀಯನಾಗಿ ತೋರಹತ್ತಿದನು. ಹೀಗೆ ಸಾರ್ವತ್ರಿಕ ಪ್ರೇಮಭಾವದ ವ್ಯಾಪ್ತಿಯು ಹೆಚ್ಚಾಗುವದೇ ಸತ್ಸಮಾಗಮವಾದದ್ದರ ಲಕ್ಷಣವು ! ಯಾರ ಹೃದಯದಲ್ಲಿ ಪರಧರ್ಮದ್ವೇಷ–ಪರಜಾತಿದ್ವೇಷ ಮೊದಲಾದ ದ್ವೇಷಗುಚ್ಛದ ವಾಸ್ತವ್ಯವಿದ್ದು, ಅದರಿಂದ ಮಾತ್ಸರ್ಯವು ಉತ್ಪನ್ನವಾಗಿ, ಆ ಮಾತ್ಸರ್ಯದ ಮೂಲಕ ಪರೋಪಕಾರಗುಣವು ನಷ್ಟವಾಗಲು, ಬಲವಾದ ಪರಪೀಡೆಯ ಪ್ರವೃತ್ತಿಯಾಗುವದೋ ಅವರಿಗೆ ಸತ್ಸಮಾಗಮದ ಗಂಧವು ಕೂಡ ತಗಲಲಿಲ್ಲವೆಂದು ತಿಳಿಯಬೇಕು! ಯಾರ ಹೃದಯದಲ್ಲಿ ಭೂತದಯಾ ಪಶ್ಚಾತ್ತಾಪಗಳಿಲ್ಲವೋ, ಯಾರ ಹೃದಯದಲ್ಲಿ ಮನುಷ್ಯಮಾತ್ರರ ವಿಷಯದ ಸ್ವಕೀಯ ಭಾವವು ಸಂಕೋಚವಾಗುತ್ತಿರುವದೋ ಅವರಿಗೆ ಸರ್ವಥಾ ಸತ್ಸಮಾಗಮವಾಗಿಲ್ಲವೆಂದು ತಿಳಿಯಬೇಕು. ಯಾರ ನಡತೆಯಲ್ಲಿ ಅಹಂಭಾವ ಮೂಲವಾದ ದ್ವೈತವು ಒಡೆದುಕಾಣುವದೋ, ಯಾರಿಗೆ ತಾನೂ ತನ್ನವರೂ ಮಾತ್ರ ಶ್ರೇಷ್ಠರಾಗಿಯೂ, ಇತರರು ಕನಿಷ್ಠರಾಗಿಯೂ ತೋರುವರೋ, ಯಾರ ಮನಸ್ಸು ಗುಪ್ತವಾಗಿ ಪಾಪ ಮಾಡಲಿಕ್ಕೂ ಅನ್ಯರ ಪಾಪಾಚರಣೆಗಳನ್ನು ಹಿತಭಾವವಿಲ್ಲದೆ ದೂರಿಕೊಳ್ಳಲಿಕ್ಕೂ, ಸ್ವಪ್ರತಿಷ್ಠೆ–ಸ್ವಾರ್ಥಗಳ ಕಾಂಕ್ಷೆಯಿಂದ ಆಡಂಬರ ತೋರಿಸಲಿಕ್ಕೂ ಎಳಿಸುವದೋ ಅವರಿಗೆ ಸುತಾರಾಂ ಸತ್ಸಮಾಗಮವಾಗಿಲ್ಲವೆಂದು ತಿಳಿಯಬೇಕು. ಇಂಥ ಸತ್ಸಮಾಗಮ ಹೀನರಾದವರು ಎಂಥ ತ್ಯಾಗಿಗಳಿದ್ದರೂ–ಯೋಗಿಗಳಿದ್ದರೂ–ಭೋಗಿಗಳಿದ್ದರೂ –ರಾಗಿಗಳಿದ್ದರೂ– ವಿರಾಗಿ ಗಳಿದ್ದರೂ–ಕರ್ಮಶೀಲರಿದ್ದರೂ–ಶ್ರೇಷ್ಠಸ್ಥಾನಾಪನ್ನರಿದ್ದರೂ, ಮತ್ತೆ ಏನೇ ಇದ್ದರೂ ಪ್ರಾಣ ಪ್ರತಿಷ್ಠಾಪನೆಯಿಲ್ಲದ ಪ್ರತಿಮೆಯಂತೆ, ಅರ್ಥಾತ್ ಜೀವಾತ್ಮನು ಹೊರಟುಹೋಗಿದ್ದ ದೇಹದಂತೆ ನಿರರ್ಥಕವೇ ಸರಿ ! ಆದ್ದರಿಂದ ಸತ್ಸಮಾಗಮಕ್ಕೆ ಸಮಾನವಾದದ್ದು ಜಗತ್ತಿನಲ್ಲಿ ಮತ್ತೊಂದಿಲ್ಲವು; ಅದನ್ನು ಪಡೆದ ಸದಾಚಾರಿಯೂ ದುರಾಚಾರಿಯೂ ಸಮಾನಸ್ಕಂಧರಾಗುವರೆಂದು ಜ್ಞಾನಿಗಳು ಹೇಳುವ ಮಾತು ಸುಳ್ಳಲ್ಲ. ಅದರಂತೆ ಕಾಸಿಮನೂ ಈ ಮೊದಲು ಎಂಥ ದುರಾಚಾರಿ ಇದ್ದರೂ

ಮಾಧವಾಚಾರ್ಯರ ಶಿಷ್ಯಪ್ರಕೋಟಿಯಲ್ಲಿ ಸೇರಿದ್ದರಿಂದ ಈಗ ಸಜ್ಜನರ ಸಾಲಿನಲ್ಲಿ ಕುಳಿತು ಕೊಂಡನು.

ಮಾಧವಾಚಾರ್ಯರು ಆಸನದಲ್ಲಿ ಕುಳಿತುಕೊಂಡಕೂಡಲೇ ಕಾಸಿಮನನ್ನು ಕುರಿತು –''ಕಾಸಿಮಖಾನ,ಮಕ್ಕೆಯ ಯಾತ್ರೆಯ ವಿಚಾರವೇನಾಯಿತು? ನಿನ್ನೆ ಸ್ವಪ್ನದಲ್ಲಿ ನಿನಗೆ ನಿನ್ನ ಗುರುಗಳ ದರ್ಶನವಾಯಿತಷ್ಟೇ? ಅವರ ಅಪ್ಪಣೆಯಂತೆ ನೀನು ನಡೆಯುವಿಯಾ?'' ಎಂದು ಕೇಳಲು, ಭಕ್ತಿ ವಿಶೇಷದಿಂದ ಕಾಸಿಮನ ಹೃದಯವು ಕಂಪಿಸಿ ಮೈಮೇಲಿನ ಕೂದಲುಗಳು ನೆಟ್ಟಗಾದವು.ತನಗೆ ಬಿದ್ದ ಸ್ವಪ್ನದ ವೃತ್ತಾಂತವು ಇವರಿಗೆ ಗೊತ್ತಾದ್ದರಿಂದ ಈ ಮಹಾತ್ಮರ ಯೋಗ್ಯತೆಯು ಅಲೌಕಿಕವಾದದ್ದೆಂದು ಆತನ ಮನವರಿಕೆಯಾಯಿತು. ಭಕ್ತಿವಿಶೇಷದಿಂದ ಆತನ ಕಣ್ಣುಗಳಲ್ಲಿ ನೀರುಗಳು ಸುರಿಯುತ್ತಿರಲು, ಆತನು ಎದ್ದುನಿಂತು ಕೈಜೋಡಿಸಿ –''ಮಹಾತ್ಮನ್, ತಮಗೆ ಅರಿಯದ್ದು ಯಾವದಿದೆ? ನಮ್ಮ ಗುರುಗಳಿಗೂ ನಿಮಗೂ ಭೇದವಿಲ್ಲ. ಈ ಮಾತನ್ನು ನಮ್ಮ ಗುರುಗಳೇ ನಿನ್ನೆ ಸ್ವಪ್ನದಲ್ಲಿ ಬಾಯಿಬಿಟ್ಟು ನನಗೆ ಹೇಳಿದರು ! ಈ ಪಾಮರನಾದ ಕಾಸಿಮನು ಚರಣ ಕೃಪೆಯಿಂದ ನಿಶ್ಚಯವಾಗಿ ಧನ್ಯನಾದನು. ಸದ್ಗುರುವೇ ನಿನ್ನ ಬೋಧದಂತೆ ಆಚರಿಸಲು ನಮ್ಮ ಪೈಗಂಬರರ ಅಪ್ಪಣೆಯಾಗಿರುವದು.ನಿನ್ನೆ ನನ್ನ ಕನಸಿನಲ್ಲಿ ಬಂದು ಒಬ್ಬ ಮುಸಲ್ಮಾನ ಸತ್ಪುರುಷನು ನನ್ನನ್ನು ಕುರಿತು – ''ಕಾಸಿಮ, ಮಾಧವಾಚಾರ್ಯರನ್ನು ನನ್ನಿಂದ ಬೇರೆಯೆಂದು ತಿಳಿಯಬೇಡ. ಅವರ ಯೋಗದಿಂದಲೇ ನಿನಗೆ ನನ್ನ ದರ್ಶನವಾಗಿದೆ.ಅವರು ಹೇಳಿದಂತೆ ನೀನು ಕೇಳತಕ್ಕದ್ದು'' ಎಂದು ಅಪ್ಪಣೆಕೊಡಿಸಿ ನನ್ನ ತಲೆಯಮೇಲೆ ಕೈಯಿಟ್ಟು ಅದೃಶ್ಯರಾದರು ! ಅಹಹ! ಎಂಥ ದಿವ್ಯ ರೂಪವದು ! ಆ ದೈವೀತೇಜಸ್ಸು ಈಗಲೂ ನನ್ನ ಕಣ್ಣಿಗೆ ಕಟ್ಟಿದೆ. ಭಗವಾನ್, ನೀವು ಈ ಪಾಮರನಿಗೆ ಪೈಗಂಬರರ ದರ್ಶನ ಮಾಡಿಸಿ ಧನ್ಯನಾಗಮಾಡಿದಿರಿ. ಅವರು ಪೈಗಂಬರರೇ ನಿಶ್ಚಯವು ! ಇಲ್ಲದಿದ್ದರೆ ಆ ದಿವ್ಯತೇಜಸ್ಸು ಅನ್ಯರಿಗೆ ಹ್ಯಾಗೆ ಇದ್ದೀತು? ಆದರೆ ಈಗ ಪಾಮರನಿಗೆ ಏನು ಅಪ್ಪಣೆಯಾಗುವದು ಭಗವಾನ್?

ಮಾಧವಾಚಾರ್ಯ—ನಿನ್ನಲ್ಲಿ ನಿಜವಾದ ವೈರಾಗ್ಯವು ಉತ್ಪನ್ನವಾಗುವವರೆಗೆ ನಿನ್ನ ದೇಶಬಾಂಧವರ ಹಿತವನ್ನು ಸಾಧಿಸುವದಕ್ಕಾಗಿ ನೀನು ನಿನ್ನ ಒಡೆಯನಾದ ಮಹಮ್ಮದ ತಘಲಕನ ನೌಕರನಾಗಿ ನೀನು ಇರತಕ್ಕದ್ದು.

ಕಾಸಿಮ—ನನಗೆ ಈ ರಾಜಕಾರಣದ ಹೊಡೆದಾಟದ ತಿರಸ್ಕಾರ ಉಂಟಾಗಿದೆ. ನನಗೆ ಯಾತರ ಮೇಲೆಯೂ ಆಶೆಯಿಲ್ಲ. ಅಂದಬಳಿಕ ನನ್ನಲ್ಲಿ ನಿಜವಾದ ವೈರಾಗ್ಯವು ಇನ್ನೇನು ಉಂಟಾಗಬೇಕು?

ಮಾಧವಾಚಾರ್ಯ —ಕಾಸಿಮ, ನೀನು ಮರುಳನಿರುವೆ. ನನ್ನ ಅಪ್ಪಣೆಯನ್ನು ಮೀರುವದರ ಮೇಲಿಂದಲೇ ನಿನ್ನಲ್ಲಿ ನಿಜವಾದ ವೈರಾಗ್ಯವು ಉತ್ಪನ್ನವಾಗಿಲ್ಲವೆಂಬ ಮಾತು ಸಿದ್ಧವಾಗುತ್ತದೆ.

ಕಾಸಿಮ—ಹಾಗಾದರೆ ನಾನು ಹೀಗೆಯೇ ಕೊಲೆ–ಸುಲಿಗೆಗಳನ್ನು ಮಾಡುತ್ತ ಅನ್ಯರ ಹಕ್ಕು–ಸ್ವಾತಂತ್ರ್ಯ—ಸೊತ್ತು ಇವುಗಳನ್ನು ಅಪಹರಿಸುತ್ತ ಅಧಮನಾಗಿಯೇ ಉಳಿಯಲಾ?

ಮಾಧವಾಚಾರ್ಯ–ನನ್ನಲ್ಲಿ ಹಾಗೂ ನನ್ನ ಮಾತಿನಲ್ಲಿ ನಿನ್ನ ವಿಶ್ವಾಸವಿದ್ದರೆ ಉಳಿಯಬೇಕು. ಇಲ್ಲದಿದ್ದರೆ ವೈರಾಗ್ಯದೊಡನೆ ನಿನ್ನಲ್ಲಿ ಜ್ಞಾನೋದಯವು ಆಯಿತೆಂದು ತಿಳಕೊಂಡು ನಿನ್ನ ಮನಸ್ಸಿಗೆ ಬಂದಂತೆ ನೀನು ನಡೆಯಬೇಕು. ಕಾಸಿಮ ಸ್ಪಷ್ಟವಾಗಿ ಹೇಳುತ್ತೇನೆ. ನಾನು ಬೆಂಕಿಯಲ್ಲಿ ಹಾರೆಂದರೂ ನೀನು ಹಾರಲಿಕ್ಕೆ ಸಿದ್ಧನಿರಬೇಕು. ಹಾಗಿದ್ದರೆ ನೀನು ನನ್ನ ಅನುಯಾಯಿ ಎಂದು ನಾನು ತಿಳಿಯುವೆನು. ಇಲ್ಲದಿದ್ದರೆ ನಿನ್ನ ಮನಸ್ಸಿಗೆ ಬಂದಂತೆ ನಡೆಯಲಿಕ್ಕೆ ನನ್ನ ಪ್ರತಿಬಂಧವೇನೂ ಇರುವದಿಲ್ಲ!

ಕಾಸಿಮ— ಆಚಾರ್ಯವರ, ನನ್ನ ತಪ್ಪು ನನ್ನ ಮನಸ್ಸಿಗೆ ಹೊಳೆಯಿತು. ನನ್ನ ಹೃದಯವು ನಿಜವಾಗಿಯೇ ಅಪಕ್ವವಾದದ್ದಿರುವದು. ನನ್ನ ಸ್ವಪ್ನದಲ್ಲಿ ಪೈಗಂಬರರು ಆಜ್ಞಾಪಿಸಿರುವಂತೆ ನಿಮ್ಮ ಆಜ್ಞೆ ಪಾಲಿಸುವದು ನನ್ನ ಕೆಲಸವಿದ್ದು ಅದಕ್ಕೆ ಪ್ರತಿಯಾಗಿ ಈಗ ಮಾತಾಡಿದ್ದು ನನ್ನ ಅಪರಾಧವು! ಇನ್ನು ಮೇಲೆ ಇಂಥ ತಪ್ಪುಗಳಾಗದಂತೆ ಎಚ್ಚರಪಡುವೆನು. ಆದರೆ ಆಜ್ಞಾಧಾರಕನಾದ ನಾನು ಮನಸ್ಸಿನ ಸಮಾಧಾನಕ್ಕಾಗಿ ಕೆಲವು ಮಾತುಗಳನ್ನು ಕೇಳಿಕೊಳ್ಳಬೇಕೆನ್ನುತ್ತೇನೆ, ಅಪರಾಧಕ್ಕಾಗಿ ಕ್ಷಮೆಯಿರಬೇಕು.

ಮಾಧವಾಚಾರ್ಯ— ಅವಶ್ಯವಾಗಿ ಕೇಳಿಕೊಳ್ಳು; ನೀನು ಏನು ಅಪರಾಧ ಮಾಡಿದರೂ ಕ್ಷಮಿಸುವೆವು.

ಕಾಸಿಮ— ನಮ್ಮ ಬಖತ್ಯಾರ ಖಿಲಜಿಯವರ ವಿಷಯವಾಗಿ ನನ್ನಲ್ಲಿ ತಿರಸ್ಕಾರಭಾವವುಂಟಾಗಿದೆ.

ಮಾಧವಾಚಾರ್ಯ — ಅದೇಕೆ ?

ಕಾಸಿಮ— ಅವರು ನಟರಂತೆ ಬಹುರೂಪ ತಾಳಿ ನನಗೆ ಮೋಸಮಾಡಿದರೆಂದು !

ಮಾಧವಾಚಾರ್ಯ— ಅದು ಹೇಗೆ ಹೇಳು ನೋಡುವಾ !

ಕಾಸಿಮ— ಅವರು ಮೊದಲು ನನಗೆ ಕೇವಲ ಅನುಕೂಲರಾಗಿ, ಅಂದರೆ ನನ್ನೊಡನೆ ಸಹಕಾರದಿಂದ ನಡೆದು ನನ್ನವರೆನಿಸಿಕೊಂಡು ನನ್ನ ಮನಸ್ಸನ್ನೊಲಿಸಿಕೊಂಡರು. ಮುಂದೆ ನಿಮ್ಮವರ ಸಂಗಡ ಯುದ್ಧಕ್ಕೆ ಸಿದ್ಧರಾಗುವದಕ್ಕಾಗಿ ನಾನು ಅವರನ್ನು ಆಜ್ಞಾಪಿಸಲು, ನನ್ನ ಆ ಆಜ್ಞೆಯನ್ನು ಉಲ್ಲಂಘಿಸಿ ನನ್ನೊಡನೆ ಅಸಹಕಾರದಿಂದ ನಡೆದು ನನ್ನ ದ್ರೋಹವನ್ನು ಚಿಂತಿಸಿದರು. ಇಷ್ಟೆಲ್ಲ ಆದಬಳಿಕ ನನ್ನೊಡನೆ ದ್ವಂದ್ವಯುದ್ಧಕ್ಕೆ ನಿಲ್ಲುವ ಪ್ರಸಂಗ ಬರಲು, ನಿಮ್ಮ ಅಪ್ಪಣೆಯಾಗಿದ್ದರೆ ಅದಕ್ಕೂ ಟೊಂಕಕಟ್ಟಲು ಸಿದ್ಧವಾಗಿದ್ದರು. ಅಂದಬಳಿಕ ನಿಮ್ಮಂಥ ಜ್ಞಾನಿಗಳ ಸಹವಾಸದಲ್ಲಿದ್ದವರಿಗೆ ಈ ಬಹುರೂಪವೇಕೆ? ಇದರಲ್ಲಿ ಮೋಸವಿರುವದಿಲ್ಲವೆ? ಮೊದಲು ನನಗೆ ಕೇವಲ ಅನುಕೂಲವಾಗಿ ವರ್ತಿಸಿ ನನ್ನವರೆನಿಸಿಕೊಂಡು, ಪ್ರಸಂಗದಲ್ಲಿ ನನ್ನೊಡನೆ ಅಸಹಕಾರ ಪ್ರತಿಕಾರ ಬೆಳಿಸಲು ಸಿದ್ಧವಾದದ್ದು ಇವರ ಕೃತಘ್ನತೆಯ ಲಕ್ಷಣವಲ್ಲವೇ? ಕೃತಘ್ನತೆಗಿಂತ ಹೆಚ್ಚಿನ ಪಾಪವಾವುದಿರುವದು?

ಮಾಧವಾಚಾರ್ಯ— ಕಾಸಿಮಖಾನ, ಕೃತಘ್ನತೆಗಿಂತ ಹೆಚ್ಚಿನ ಪಾಪವಿಲ್ಲೆಂಬುದು ನಿಜವು; ಬಖತ್ಯಾರರು ಆ ಪಾಪಕ್ಕೆ ಗುರಿಯಾದರೆಂದು ತೋರಿಕೆಯಲ್ಲಿ ಕಾಣುವದು ಸತ್ಯವು; ಆದರೆ ಮಾನವಜಾತಿಯ ಸ್ವಯಂಸಿದ್ಧವಾದ ಹಕ್ಕಿಗೆ ಬಾಧೆತರುತ್ತಿರುವ ನಿಮ್ಮ ಶಾಸನಮಾಡಿ ಧರ್ಮರಕ್ಷಣ ಮಾಡುವದಕ್ಕಾಗಿ ಅವರು ಸ್ವತಃ ಕೃತಘ್ನತೆಯ ಪಾಪಕ್ಕೆಗುರಿಯಾದದ್ದು ಅವರ ಸ್ವಾರ್ಥತ್ಯಾಗದ

ಲಕ್ಷಣವಾಗಿರುವದು. ಧರ್ಮವಿರುದ್ಧವಾದ ನಿಮ್ಮ ಕೃತಿಗಳು ಸ್ವಾರ್ಥಕ್ಕೋಸ್ಕರ ಇರುವದರಿಂದ ಅವು ಅಕ್ಷಮ್ಯವಾಗಿರುವವು. ಆದರೆ ಬಖತ್ಯಾರರ ಕೃತಿಗಳು ಧರ್ಮವಿರುದ್ಧವಾಗಿ ತೋರಿದರೂ ಅವು ಪರಾರ್ಥಕ್ಕಾಗಿ ಇರುವದರಿಂದ ಕ್ಷಮ್ಯವಾಗಿರುವವು. ನೀವು ಮೂಲತಃ ಮಾನವ ಧರ್ಮವಿರುದ್ಧವಾಗಿ ನಮ್ಮ-ಕನ್ನಡಿಗರ ಸ್ವಾತಂತ್ರ್ಯಹರಣವನ್ನು ಅನ್ಯಾಯದಿಂದ ಮಾಡುವ ಅಧರ್ಮವನ್ನು ಆಚರಿಸದಿದ್ದರೆ, ನಿಮ್ಮ ಶಾಸನಕ್ಕಾಗಿ ಬಖತ್ಯಾರ ಖಿಲಜಿಯವರು ನಿಮ್ಮೊಡನೆ ಅನ್ಯಾಯದಿಂದ ಆಚರಿಸಿದ ಅಪವಾದಕ್ಕೆ ಗುರಿಯಾಗುತ್ತಿದ್ದರು. ಪರೋಪಕಾರಕ್ಕಾಗಿ ದೇಹವನ್ನರ್ಪಿಸುವದು ಸಜ್ಜನರ ಧರ್ಮವಾಗಿದ್ದು, ಬಖತ್ಯಾರ ಖಿಲಜಿಯವರು ಕನ್ನಡಿಗರ ಸ್ವಾತಂತ್ರ್ಯರಕ್ಷಣಕ್ಕಾಗಿ ನಿರಪೇಕ್ಷ ಬುದ್ಧಿಯಿಂದ ನಿನ್ನೊಡನೆ ಆಪದ್ಧರ್ಮವೆಂದು ಕೃತಘ್ನತೆಯಿಂದ ವರ್ತಿಸಿದರೆ ಅವರು ಪಾಪಕ್ಕೆ ಹೇಗೆ ಗುರಿಯಾದಾರು? ಒಂದು ಪಕ್ಷದಲ್ಲಿ ಗುರಿಯಾದರೂ ಪರೋಪಕಾರಕ್ಕಾಗಿ ಕಷ್ಟಪಡುವ ಮಹಾತ್ಮರ ಧರ್ಮವನ್ನು ಅವರು ಪಾಲಿಸಿದ ಹಾಗಾದ್ದರಿಂದ ಅವರು ನಿಶ್ಚಯವಾಗಿ ಲೋಕವಂದ್ಯರಾಗಿರುವರು. ಕಾಸಿಮ, ಮನುಷ್ಯರು ಸ್ವಾರ್ಥಕ್ಕಾಗಿ ಪಶ್ವಾದಿಗಳ ಸ್ವಾತಂತ್ರ್ಯ ಹರಣಮಾಡುವದು ಪಾತಕವಾಗಿರಲು, ಮನುಷ್ಯರ ಸ್ವಾತಂತ್ರ್ಯ ಹರಣಮಾಡುವದು ಮಹಾಪಾತಕವಲ್ಲವೆ? ಅಂದಬಳಿಕ ಕಾಲವಶದಿಂದ ಅಧಃಪತನದ ಹಾದಿಯನ್ನು ಹಿಡದಿದ್ದ ಕರ್ನಾಟಕವನ್ನು ಸ್ವಾರ್ಥಕ್ಕಾಗಿ ಕಾಲಿನಿಂದ ಮೆಟ್ಟುವ ಅಧರ್ಮದಲ್ಲಿ ಪ್ರವೃತ್ತರಾಗುವ ನಿಮ್ಮನ್ನು ಹಾದಿಗೆ ತರುವದಕ್ಕಾಗಿ, ಅಂದರೆ ಧರ್ಮಸ್ಥಾಪನೆಗಾಗಿ ಬಖತ್ಯಾರಖಿಲಜಿಯವರು ಪ್ರಸಂಗನೋಡಿ ನಿಮ್ಮೊಡನೆ ಸಹಕಾರವನ್ನೂ ಆಚರಿಸಿರಬಹುದು, ಪ್ರಸಂಗ ನೋಡಿ ಅಸಹಕಾರ-ಪ್ರತೀಕಾರಗಳನ್ನೂ ಆಚರಿಸಿರಬಹುದು. ಅವರಿಗೆ ಧರ್ಮರಕ್ಷಣದ ಕಾರ್ಯವನ್ನು ಸಾಧಿಸಬೇಕಾಗಿದ್ದು, ಕಾರ್ಯಸಾಧನದ ವ್ಯಾವಹಾರಿಕ ಈ ಮೂರು ಯೋಗಗಳನ್ನು, ಅಂದರೆ ಸಹಯೋಗ, ಅಸಹಯೋಗ, ಪ್ರತಿಯೋಗಗಳನ್ನು ಆಚರಿಸಿ ಧರ್ಮರಕ್ಷಣಮಾಡಿದ್ದರಿಂದ ಅವರು ಅಧರ್ಮ ಪ್ರವೃತ್ತರಾದರೆಂದು ಹೇಳಲಾಗುವದಿಲ್ಲ. ಕಾಸಿಮ, ಧರ್ಮಪರಾಙ್ಮುಖರನ್ನು ಉಪಾಯಾಂತರದಿಂದ ದಂಡಿಸಿ ಮಾಡುವ ಧರ್ಮರಕ್ಷಣವು ಅಧರ್ಮವಾಗಬಹುದೋ? ಕಾರ್ಯತಃ ಧರ್ಮಾ ಧರ್ಮಗಳ ವಿಚಾರಮಾಡುವದಕ್ಕಿಂತ ಉದ್ದೇಶತಃ ಧರ್ಮಾಧರ್ಮದ ವಿಚಾರಮಾಡುವದು ತತ್ವಜ್ಞಾನದ ನಿರ್ದುಷ್ಟ ಮಾರ್ಗವಾಗಿರುವದು! ಧರ್ಮದಿಂದಲೇ ಜಗತ್ತು ನಿಂತಿರುವದರಿಂದ ಪ್ರತಿಯೊಬ್ಬನು ಯಾವ ಉಪಾಯದಿಂದಲೇ ಆಗಲಿ, ನಿಸ್ಪ್ರಹತೆಯಿಂದ ಧರ್ಮರಕ್ಷಣ ಮಾಡತಕ್ಕದ್ದು. ಇಂಥವರಿಗೆ ಕಟ್ಟಕಡೆಯಲ್ಲಿ ಭಗವದ್ದರ್ಶನವಾಗುವದರಿಂದ ಅವರನ್ನು ಯಾವ ಘೋರಪಾಪವೂ ತಗಲಲಾರದು.

ಕಾಸಿಮ—ಹಾಗಾದರೆ ಕರ್ಮಾಕರ್ಮದ ವಿಚಾರವೆಲ್ಲಿ ಉಳಿಯಿತು? ಭಗವನ್ ನಾವು ಮಾಡುವದೆಲ್ಲ ಧಮರಕ್ಷಣಕ್ಕಾಗಿಯೇ ಎಂದು ತಿಳಿದುಕೊಂಡುಬಿಟ್ಟರಾಯಿತಿಲ್ಲವೇ?

ಮಾಧವಾಚಾರ್ಯ—ಬರಿಯ ತಿಳಿದುಕೊಂಡರೆ ಏನೂ ಆಗುವುದಿಲ್ಲ; ತಿಳಿದುಕೊಂಡಂತೆ ನಡೆದರೆ ಮಾತ್ರ ಪ್ರಯೋಜನವಾಗುವದು. ಜಗತ್ತಿನ ಒಲವು ಸ್ವಾಭಾವಿಕವಾಗಿ ಸ್ವಾರ್ಥದ ಕಡೆಗೇ ಇರುತ್ತದೆಂದು ಹೇಳುವ ಕಾರಣವಿಲ್ಲ. ಕೇವಲ ತಿಂದುಂಡು ಸತ್ತುಹೋಗುವದಕ್ಕಾಗಿಯೇ ಹುಟ್ಟಿದ್ದ

ಪಶ್ವಾದಿಗಳು ಸ್ವಾರ್ಥಕ್ಕೋಳಗಾದರೆ ಆಶ್ಚರ್ಯವಲ್ಲ; ''ಜೀವೋ ಜೀವಸ್ಯ ಜೀವನಂ'' ಎಂಬ ಸೃಷ್ಟಿಯ ಸಾಮಾನ್ಯ ನಿಯಮವನ್ನನುಸರಿಸಿ ಅವು ನಡೆಯತಕ್ಕವಾಗಿರುವವು. ಕರ್ತವ್ಯಬುದ್ಧಿಯು ಅವಕ್ಕಿಲ್ಲದ್ದರಿಂದ ಬೇರೆ ವಿಶೇಷ ಧರ್ಮಾರ್ಥರ್ಮಗಳ ವಿಚಾರವೂ ಅವಕ್ಕಿರುವದಿಲ್ಲ. ಆದ್ದರಿಂದ ಅವುಗಳ ಸ್ವಾಭಾವಿಕ ಸ್ಥಿತಿಯಿಂದ ಅವು ಪ್ರಯತ್ನಪೂರ್ವಕವಾಗಿ ಉತ್ಕರ್ಷವನ್ನೂ ಹೊಂದುವದಿಲ್ಲ ಅಪಕರ್ಷವನ್ನೂ ಹೊಂದುವದಿಲ್ಲ! ಅವು ಕ್ರಮವಾಗಿ ಜನ್ಮಾಂತರದಿಂದ ಉತ್ಕರ್ಷವನ್ನಾಗಲಿ–ಅಪಕರ್ಷವನ್ನಾಗಲಿ ಹೊಂದುವದು ಸೃಷ್ಟಿಯ ನಿಯಮದಂತೆ ಅಬಾಧಿತವಾಗಿರುವದು; ಆದರೆ ಪ್ರತ್ಯಕ್ಷ ದೇವರಾಗುವದಕ್ಕಾಗಿ ಹುಟ್ಟಿಬಂದ ಮನುಷ್ಯಪ್ರಾಣಿಯ ಮಾತು ಹಾಗಲ್ಲ. ಮನುಷ್ಯನು ತನ್ನ ಕರ್ತವ್ಯವನ್ನು ಮಾಡಿದರೆ ದೇವರಾಗಬಹುದು, ಕರ್ತವ್ಯ ಮಾಡದಿದ್ದರೆ ಅಂದರೆ ಧರ್ಮಭ್ರಷ್ಟ ನಾದರೆ ಪಶುಗಳಿಗಿಂತಲೂ ಕಡೆಯಾಗಬಹುದು; ಆದ್ದರಿಂದ ಮನುಷ್ಯರಾದವರು ತಮ್ಮ ತಮ್ಮ ಧರ್ಮಗಳಂತೆ ನಡೆದುಕೊಳ್ಳಬೇಕು.

ಪ್ರಸಂಗಕ್ಕನುಸರಿಸಿ ಬೇಕಾದ ಉಪಾಯದಿಂದ ಧರ್ಮವನ್ನು ರಕ್ಷಿಸಬೇಕು. ''ಅಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ'' ಎಂಬ ಭಗವದುಕ್ತಿಯಂತೆ, ಧರ್ಮದ ಅಲ್ಪಾಂಶ ವಾದರೂ ದೊಡ್ಡ ಭಯದಿಂದ ರಕ್ಷಿಸುವದು; ಆದ್ದರಿಂದ ಮನುಷ್ಯನ ವ್ಯವಹಾರಗಳೆಲ್ಲ ಧರ್ಮದವಾಗಿರಬೇಕು. ಧರ್ಮಕ್ಕೋಸ್ಕರ ಇರಬೇಕು.

ಕಾಸಿಮ—ಭಗವನ್, ತಮ್ಮ ದಿವ್ಯ ಬೋಧದಿಂದ ನನ್ನ ಸಂಶಯದ ಸೋಪಾನವು ಸಡಿಲ ತೊಡಗಿರುವದು. ನಾನು ಈವರೆಗೆ ಮಾಡುತ್ತಬಂದ ವ್ಯವಹಾರಗಳೆಲ್ಲ ಸ್ವಾರ್ಥಕ್ಕಾಗಿಯೇ ಅಲ್ಲದೆ ಧರ್ಮಕ್ಕಾಗಿ ಅಲ್ಲವೆಂಬದನ್ನು ನಾನು ಒಪ್ಪಿಕೊಳ್ಳುವೆನು. ನಾನು ಮಾಡುವ ತಘಲಕಮಹಮ್ಮದನ ಚಾಕರಿಯು ಸ್ವಾರ್ಥಕ್ಕಾಗಿ, ಕರ್ನಾಟಕವನ್ನು ಸ್ವಾಧೀನಪಡಿಸಿಕೊಂಡು ಕನ್ನಡಿಗರನ್ನು ಗುಲಾಮ ರಾಗಮಾಡಬೇಕೆಂದು ಯತ್ನಿಸುವದು ಸ್ವಾರ್ಥಕ್ಕಾಗಿ, ಪರಸ್ತ್ರೀಯರ ಹಂಬಲ ಹಿಡಿಯುವದು, ಮದ್ಯಪಾನ ಮಾಡುವದೂ ನೀಚ ಸ್ವಾರ್ಥಕ್ಕಾಗಿಯೇ ! ನಾನು ಅತ್ಯಂತ ಅಹಂಕಾರಿಯು, ದುರಭಿಮಾನಿಯು, ವಿಷಯಲೋಲುಪನು; ಆತ್ಮಘಾತದ ನನ್ನ ಈ ದುಷ್ಟ ನಡತೆಗಾಗಿ ನನ್ನಲ್ಲಿ ಈಗ ಭಯವುಂಟಾಗಿದೆ. ಸದ್ಗುರೋ, ಇನ್ನು ನಾನು ಧರ್ಮದಲ್ಲಿ ದೃಷ್ಟಿಯನ್ನಿಟ್ಟು ವ್ಯವಹಾರ ಮಾಡಬೇಕೆನ್ನುವೆನು; ಆದರೆ ಧರ್ಮಗಳಾದರೂ ಎಷ್ಟವು? ನಾನು ಯಾವ ಧರ್ಮದಂತೆ ನಡೆಯಲಿ?

ಮಾಧವಾಚಾರ್ಯ—ವಿವೇಕಿಯಾದ ಸರಳಹೃದಯದ ಕಾಸಿಮಖಾನ, ಧರ್ಮಗಳು ಹಲವು ಇರುವವು; ಮನುಷ್ಯಮಾತ್ರರ ಈಶ್ವರದತ್ತ ಸ್ವಾಭಾವಿಕ ಬಾಧ್ಯತೆಗೆ ಬಾಧೆಬಾರದಂತೆ ದೇಶ–ಕಾಲ–ಪರಿಸ್ಥಿತಿಗಳಿಗನುಸರಿಸಿ ಜ್ಞಾನಿಗಳು ಹಾಕಿಕೊಟ್ಟ ನಡವಳಿಕೆಯ ಮಾರ್ಗಗಳು ಧರ್ಮಗಳೆನಿಸುವವು. ಅವುಗಳಲ್ಲಿ ವ್ಯಕ್ತಿಗೆ ಸಂಬಂಧಿಸದವು ವ್ಯಷ್ಟಿಧರ್ಮಗಳೆನಿಸುವವು; ಬಹುಜನ ಸಮಾಜಕ್ಕೆ ಸಂಬಂಧಿಸಿದವು ಸಮಷ್ಟಿ ಧರ್ಮಗಳೆನಿಸುವವು. ಪಿತೃಧರ್ಮ, ಪುತ್ರಧರ್ಮ, ಪತ್ನೀಧರ್ಮ, ಪತಿಧರ್ಮ, ಗುರುಧರ್ಮ, ಶಿಷ್ಯಧರ್ಮ, ಪ್ರಜಾಧರ್ಮ ಮುಂತಾದವು ವ್ಯಷ್ಟಿಧರ್ಮಗಳಾಗಿರುವವು. ಕೌಟುಂಬಿಕ ಧರ್ಮ, ಸಾಮಾಜಿಕಧರ್ಮ,

ರಾಷ್ಟ್ರೀಯಧರ್ಮ ಮುಂತಾದವು ಸಮಷ್ಟಿ ಧರ್ಮಗಳಾಗಿರುವವು. ಯಾವ ಧರ್ಮವನ್ನೇ ಆಗಲಿ ಸ್ವಾರ್ಥಬುದ್ಧಿಯಿಂದ ಆಚರಿಸಿದರೆ ಅದು ಬಂಧನಕ್ಕೆ ಕಾರಣವಾಗುವದು; ಪರಾರ್ಥಬುದ್ಧಿಯಿಂದ ಆಚರಿಸಿದರೆ ಅದು ಮೋಕ್ಷಕ್ಕೆ ಕಾರಣವಾಗುವದು; ಕಾಸಿಮುಖಾನ, ಧರ್ಮಗಳು ಅನಂತ ವಾಗಿದ್ದರೂ ''ತನ್ನಂತೆ ಪರರನ್ನು ತಿಳಿಯಬೇಕೆ''ಂಬದು ಎಲ್ಲ ಧರ್ಮಗಳ ರಹಸ್ಯವಾಗಿ ರುವದು.ಇದೇ ರಹಸ್ಯವನ್ನು ''ಆತ್ಮವತ್ಸರ್ವ ಭೂತಾನಿ ಯಃಪಶ್ಯತಿ ಸಪಶ್ಯತಿ'' ಎಂಬ ಭಗವದುಕ್ತಿಯು ಪ್ರತಿಪಾದಿಸುತ್ತದೆ. ತನ್ನಂತೆ ಪರರನ್ನು ತಿಳಿದು ಪರರ ಹಿತಸಾಧನದಲ್ಲಿ ಆತ್ಮಾರ್ಪಣ ಮಾಡುವವನೇ ಮುಕ್ತನಾಗುವನು! ಧರ್ಮನಾಶದಿಂದ ಜಗತ್ತಿನ ನಾಶವಾಗುವದ ರಿಂದ ಧರ್ಮರಕ್ಷಣವು ಪ್ರತಿ ಒಬ್ಬನ ಕರ್ತವ್ಯವಾಗಿರುವದು.

ಕಾಸಿಮ–ವಿಪ್ರವರ, ವ್ಯಷ್ಟಿದರ್ಮ–ಸಮಷ್ಟಿಧರ್ಮಗಳಲ್ಲಿ ಶ್ರೇಷ್ಠವಾದದ್ದು ಯಾವದು?

ಮಾಧವಾಚಾರ್ಯ—ಧರ್ಮವು ಕಲ್ಯಾಣಕಾರಕವಾದದ್ದರಿಂದ ವ್ಯಷ್ಟಿಧರ್ಮದಿಂದ ವ್ಯಕ್ತಿಯ ಕಲ್ಯಾಣವೂ, ಸಮಷ್ಟಿ ಧರ್ಮದಿಂದ ಸಮಾಜದ ಕಲ್ಯಾಣವೂ ಸಾಧಿಸುವದಷ್ಟೆ? ಅಂದಬಳಿಕ ಒಬ್ಬನ ಕಲ್ಯಾಣವನ್ನು ಸಾಧಿಸುವ ಧರ್ಮಕ್ಕಿಂತ ಬಹುಜನರ ಕಲ್ಯಾಣವನ್ನು ಸಾಧಿಸುವ ಧರ್ಮವು ಶ್ರೇಷ್ಠವಾದದ್ದಲ್ಲವೆ ! ಆದ್ದರಿಂದಲೇ ವ್ಯಷ್ಟಿಧರ್ಮಕ್ಕಿಂತ ಸಮಷ್ಟಿ ಧರ್ಮವು ಶ್ರೇಷವಾಗಿರುವದು ! ವ್ಯಷ್ಟಿ ಧರ್ಮಕ್ಕಿಂತ ಸಮಷ್ಟಿ ಧರ್ಮ ಪಾಲನದಲ್ಲಿ ಪುಣ್ಯವೂ, ಪುರುಷಾರ್ಥವೂ ಹೆಚ್ಚುಇರುವದಲ್ಲದೆ, ಅದರಿಂದ ಮೋಕ್ಷವು ಬಹು ಶೀಘ್ರವಾಗಿ ಸಾಧಿಸುವದು! ಯಾಕಂದರೆ ಧರ್ಮಪಾಲನರೂಪವಾದ ತಪಶ್ಚರ್ಯವನ್ನು ವ್ಯಷ್ಟಿಧರ್ಮಕ್ಕಿಂತಲೂ ಸಮಷ್ಟಿಧರ್ಮದಲ್ಲಿ ಹೆಚ್ಚು ಕಠಿಣತರವಾಗಿಯೇ ಅಲ್ಲ, ಉಗ್ರತರವಾಗಿಯೂ ಆಚರಿಸ ಬೇಕಾಗುವದು. ಕಾಸಿಮ, ಅಬಲೆಯಾದರೂ ನಮ್ಮ ಬೈರಾಗಿಣಿಯು ರಾಷ್ಟ್ರೀಯ ಧರ್ಮ ರೂಪವಾದ ಸಮಷ್ಟಿ ಧರ್ಮಪಾಲನದಲ್ಲಿ ಮಾಡುವ ಉಗ್ರತಪಸ್ಸನ್ನು ನೋಡಿದೆಯಾ? ಕರ್ನಾಟಕದ ಸ್ವಾತಂತ್ರ್ಯ ರಕ್ಷಣಕ್ಕಾಗಿ ಆ ಪುಣ್ಯವಂತಳು ಸರ್ವಸಂಗಪರಿತ್ಯಾಗ ಮಾಡಿ ತಪಶ್ಚರ್ಯ ಮಾಡುವಾಗ ಆಕೆಯು ಪಡೆದ ಆತ್ಮೋನ್ನತಿಯು ಅಗಾಧವಾದದ್ದಿರುವದು! ಆ ತೇಜಸ್ವಿನಿಯು ತಘಲಕ ಮುಹಮ್ಮದನಂಥ ಅಲೌಕಿಕ ಪುರುಷನನ್ನೂ ಮೆತ್ತಗೆ ಮಾಡಿದಳೆಂದಬಳಿಕ, ಆಕೆಯ ಆತ್ಮಬಲದ ಪ್ರಭಾವವನ್ನು ಎಷ್ಟೆಂದು ವರ್ಣಿಸಬೇಕು? ಇಂಥ ಒಬ್ಬ ಸಾಧ್ವಿಯು ಪುರುಷರೆನಿಸಿಕೊಳ್ಳುವ ನಮ್ಮಂಥ ಸಹಸ್ರಾವಧಿ ಜನರ ಜಾಗ್ರತಿಗೂ ಪೌರುಷೋತ್ಪತ್ತಿಗೂ ಕಾರಣವಾಗುವಳು ! ಇಂಥ ಪತಿವ್ರತೆಯರು ದೇಶೋದ್ಧಾರಕ್ಕಾಗಿ ಸೆರಗು ಬಿಗಿದು ನಿಂತ ದಿವಸವೇ ಸ್ವಾತಂತ್ರ್ಯಸೂರ್ಯನ ಉದಯವಾಯಿತೆಂದು ತಿಳಿಯಬೇಕು.

ಕಾಸಿಮ—ಹೌದು ಭಗವನ್, ಆ ಸತ್ವಶಾಲಿನಿಯಾದ ಬೈರಾಗಿಣಿಯ ಆತ್ಮಬಲದ ಅನುಭವವು ನನಗೆ ಚೆನ್ನಾಗಿ ಆಗಿದೆ; ಆದರೆ ಆ ದೇಶಭಕ್ತಳು ಅಂಥ ಆತ್ಮಬಲವನ್ನು ಹೇಗೆ ಪಡೆದಳು?

ಮಾಧವಾಚಾರ್ಯ—ಕಾಸಿಮ, ಬೈರಾಗಿಣಿಯಂಥ ಸಾಧ್ವಿಯರು ಹೀಗೆ ಬೈಲಿಗೆ ನಿಂತು ನಮ್ಮನಿಮ್ಮಂಥ ಮೀಸೆಹೊತ್ತ ಗಂಡಸರನ್ನೂ ನಾಚಿಸುವಂಥ ಸಾಹಸಮಾಡಲಿಕ್ಕೆ ನೀವು

ಕರ್ನಾಟಕದಲ್ಲಿ ನಡಿಸಿರುವ ಬಲಾತ್ಕಾರದ ಹಿಂಸೆಯೇ ಕಾರಣವು. ಸ್ವಭಾವತಃ ಸ್ತ್ರೀಯರು ಅಬಲೆಯರು–ಭೀರುಗಳು, ಲಜ್ಜೆಯು ಅವರ ಅಲಂಕಾರವು; ನಿಷ್ಕಾರಣವಾಗಿ ನೆರೆಮನೆಗೆ ಹೋಗುವದೆಂದರೆ ಅವರಿಗೆ ಕ್ರೂರ ಕೃಷ್ಣಸರ್ಪದ ಹೆಡೆಯಮೇಲೆ ಕಾಲಿಟ್ಟಹಾಗೆ! ಇಂಥ ಸುಕುಮಾರಿಯರಾದ ಸೌಜನ್ಯದ ಆರ್ಯಸ್ತ್ರೀಯರು, ನಿಮ್ಮಂಥ ಬಲಿಷ್ಠರಿಗಿಂತಲೂ ಬಲಿಷ್ಠರಾಗಿ, ಧೈರ್ಯಶಾಲಿಗಳಿಗಿಂತಲೂ ಧೈರ್ಯಶಾಲಿಗಳಾಗಿ, ನಿರ್ಲಜ್ಜರಿಗಿಂತಲೂ ನಿರ್ಲಜ್ಜರಾಗಿ, ನೆರೆಮನೆಗಷ್ಟೇ ಅಲ್ಲ, ಸೆರೆಮನೆಗೂ, ಯಮನ ಮನೆಗೂ ಹೋಗಲಿಕ್ಕೆ ಸಿದ್ಧರಾಗಿ ನಿಂತಬಳಿಕ ನಿಮ್ಮ ಅನ್ಯಾಯದ ಪರಮಾವಧಿಯು ಎಷ್ಟರಮಟ್ಟಿಗೆ ಆಯಿತೆಂಬದರ ಅರಿವು ನಿಮಗೆ ಆಗಬಾರದೇನು? ಕಾಸಿಮಖಾನ, ಹೀಗೆ ಪತಿವ್ರತೆಯರು ಬೈಲಿಗೆಬಿದ್ದು ತಮ್ಮ ಪಾತಿವ್ರತ್ಯದ ಮಹಾತೇಜಸ್ಸಿನ ತ್ವೇಷದಿಂದ ಕರಕರ ಹಲ್ಲುಕಡಿದು ಲಟಲಟ ಬೆರಳು ಮುರಿಯುತ್ತ ಕೆಂಪಡರಿದ ಕಣ್ಣುಗಳಿಂದ ಕಿಡಿಸುರಿಸಿ, ಸಂತಾಪದ ಬಿಸಿಯುಸಿರುಬಿಟ್ಟು ಆ ಕಿಡಿಗಳನ್ನು ಹೊತ್ತಿಸಿದಾಗಲೇ ದುಷ್ಟರ ದಹನವಾಗಿರವದು ! ಯವನವೀರ, ಶ್ರೀ ಸೀತಾಮಾತೆಯ ಇಂಥ ಉಗ್ರ ವ್ಯವಹಾರದ ಶಾಪದಿಂದಲೇ ಲಂಕೇಶ್ವರನ ಅಗಾಧವಾದ ವೈಭವವು ದಗದಗನೆ ದಹಿಸಿ ನೆಲಕ್ಕೆಕುಸಿದು ಬೂದಿಯಾಯಿತು ! ಮಹಾ ತೇಜಸ್ವಿನಿಯಾದ ದ್ರೌಪದಿಯ ಇಂಥ ಉಗ್ರವ್ಯವಹಾರದ ಶಾಪದಿಂದಲೇ ದುರ್ಯೋಧನನ ಅದ್ವಿತೀಯ ಬಲ ವೈಭವಗಳ ಲಯವಾಯಿತು; ಆದ್ದರಿಂದ ಕಾಸಿಮಖಾನ, ನಿಮ್ಮ ದುರ್ವೃತ್ತದ ದರ್ಪವೂ, ದಯಾಶೂನ್ಯತೆಯೂ ಕರ್ನಾಟಕದಲ್ಲಿ ವಿಲಕ್ಷಣ ಜಾಗ್ರತಿಯನ್ನುಂಟುಮಾಡಿದ್ದರಿಂದಲೇ ಬೈರಾಗಿಣಿಯಂಥ ಒಲೆಯ ಮುಂದಿನ ಹೆಂಗಸರು ಬೈಲಿಗೆ ಬಂದು ಸಬಲೆಯರಾಗಹತ್ತಿರುವರೆಂಬದನ್ನು ಮರೆಯಬೇಡ. ಪತಿವ್ರತೆಯರ ಶಾಪದ ಸಾಮರ್ಥ್ಯವು ಸಾಮಾನ್ಯವಾದದ್ದೆಂದು ತಿಳಿಯುವೆಯೋ? ಸೀತಾಮಾತೆಯ ಶಾಪದಿಂದ ರಾವಣನ ಸತ್ವವೂ, ದ್ರೌಪದಿಯ ಶಾಪದಿಂದ ದುರ್ಯೋಧನನ ಸತ್ವವೂ ಬೆಂದು ಬೆಂಡಾಗಿದ್ದರಿಂದಲೇ ಶ್ರೀರಾಮನ ಬಾಣದ ಅಮೋಘತೆಯೂ, ಪಾಂಡವರ ಪೌರುಷವೂ ಜಗತ್ತಿನಲ್ಲಿ ಬೆಳೆಯಲಿಕ್ಕೆ ಸುಲಭವಾಯಿತು !

ಕಾಸಿಮ—ಮಹಾತ್ಮನ್, ತಮ್ಮ ಮಾತುಗಳಿಂದ ನನ್ನ ಹೃದಯಸ್ಥ ದೌರ್ಜನ್ಯದ ಉಚ್ಚಾಟನವಾಗಿ ಅದು ಮೂರ್ತಿಗೊಂಡು ನನ್ನ ಮುಂದೆ ನಿಂತದ್ದರಿಂದ ನನ್ನ ಹೃದಯವು ಭಯದಿಂದ ಕಂಪಿಸ ಹತ್ತಿದೆ ! ನಾನು ಕೇವಲ ಪರಾಧೀನನಾದೆನು; ಮಾತಾಡುವ ನನ್ನ ನಾಲಿಗೆಯು ಸೆಳೆಯುತ್ತಿರುವದು; ಮಾತು ಕೇಳುವ ನನ್ನ ಕಿವಿಗಳು ಕಿವುಡಾಗುತ್ತಿರುವವು. ನಿಮ್ಮ ತೇಜೋಮಯ ರೂಪವನ್ನು ನೋಡುವ ಪಾಪಿಯಾದ ನನ್ನ ಕಣ್ಣುಗಳು ಕತ್ತಲು ಗೂಡಿಸುತ್ತಿರುವವು. ಸದ್ಗುರೋ, ನನ್ನನ್ನು ರಕ್ಷಿಸು ರಕ್ಷಿಸು !

ಈ ಮೇರೆಗೆ ನುಡಿದು ಕಾಸಿಮನು ಪಶ್ಚಾತ್ತಾಪದಿಂದ ಮೈಮರೆತು ನಿಜವಾಗಿಯೇ ಪರಾಧೀನನಾಗಲು, ಕರುಣಾಳುಗಳಾದ ಮಾಧವಾಚಾರ್ಯರು ತಟ್ಟನೆ ಆಸನದಿಂದ ಎದ್ದುಬಂದು ಕಾಸಿಮನನ್ನು ಸಂತಯಿಸಿ ವಾತ್ಸಲ್ಯದಿಂದ–ಯವನವೀರ, ಕಾಸಿಮ, ಏಳು ಏಳು ಎಚ್ಚರಾಗು ! ಇನ್ನು ಪಶ್ಚಾತ್ತಾಪದಿಂದ ನೀನು ನಿಶ್ಚಯವಾಗಿ ಪರಿಶುದ್ಧನಾದೆ ! ಇಂದಿನಿಂದ ನಿನಗೆ

ಹೀಗೆ ಪರಿತಾಪ ವಾಗುತ್ತಹೋದಾಗೆಲ್ಲನೀನು ಸಹಿಸುತ್ತಾಶಾಂತನಾಗುತ್ತಹೋಗು; ಕಬ್ಬಿಣವು ಕಾದು ಕಾದು ತನಗಾಗುವ ತಾಪವನ್ನು ಸಹಿಸಿ ಸಹಿಸಿ ಶೀತಜಲಸೇಚನದಿಂದ ಶಾಂತವಾಗು ತಾಗುತ್ತಾಹೋದಂತೆ ಶ್ರೇಷ್ಠ ಉಕ್ಕು ಆಗಿ ಉನ್ನತಿಯನ್ನು ಪಡೆಯುವ ಹಾಗೆ ಪುಣ್ಯಶಾಲಿಯಾದ ನೀನೂ ಸಹಿಷ್ಣುವಾಗಿ ಆತ್ಮೋನ್ನತಿಯನ್ನು ಪಡೆಯುತ್ತ ಹೋಗು. ನಮ್ಮ ಬೈರಾಗಿಣಿಯು ಸಹಿಷ್ಣುತೆಯಿಂದಲೇ ಆತ್ಮೋನ್ನತಿಯನ್ನು ಪಡೆಯುತ್ತಿರುವಳು. ಮೊದಲಿಗೆ ಆಕೆಯೊಬ್ಬ ಸರ್ವಸಾಮಾನ್ಯ ಸ್ತ್ರೀಯು! ಅಂಥವಳು ಕಾರಣವಿಶೇಷದಿಂದ ದೇಶಹಿತ ತತ್ಪರಳಾಗಿ ಸ್ವಹಿತ– ನಿರಭಿಲಾಷೆಯಿಂದ ದೇಶಬಾಂಧವರ ಹಿತವನ್ನು ಸಾಧಿಸುವಾಗ ಬಂದ ಎಡರುಗಳಿಗೆ ಎದೆಗುಂದದೆ, ತನ್ನ ಮಾರ್ಗ ದರ್ಶಕನ ಏಕನಿಷ್ಠ ಸೇವಕಳಾಗಿ ಪ್ರಸಂಗದಲ್ಲಿಸಹಯೋಗವನ್ನೂ, ಪ್ರಸಂಗದಲ್ಲಿ ಅಸಹಯೋಗ ವನ್ನೂ, ಪ್ರಸಂಗದಲ್ಲಿ ಪ್ರತಿಯೋಗವನ್ನೂ ಪ್ರತಿಸ್ಪರ್ಧಿಗಳೊಡನೆ ಪ್ರೇಮಕ್ಕೆ ಭಂಗುತಂದುಕೊಳ್ಳದೆ ಆಚರಿಸಿ ಆತ್ಮೋನ್ನತಿಯನ್ನು ಪಡೆದಳು ! ಇರಲಿ, ಇಂದು ಇಲ್ಲಿಗೆ ಸಾಕು ! ಪ್ರತಿಯೊಬ್ಬನೂ ಈ ಸಹಯೋಗ–ಅಸಹಯೋಗ–ಪ್ರತಿಯೋಗಗಳೆಂಬ ಮೂರು ಯೋಗಗಳಲ್ಲಿ ಯಾವದೊಂದರ ದ್ವಾರದಿಂದಲೇ ವ್ಯವಹಾರವನ್ನು ಸಾಗಿಸ ಬೇಕಾಗುವದು. ಈ ಯೋಗಗಳಲ್ಲದೆ ವ್ಯವಹಾರವು ನಡೆಯಲಾರದು; ಆದ್ದರಿಂದಲೇ ಅವನ್ನು ವ್ಯಾವಹಾರಿಕ ಯೋಗತ್ರಯಗಳೆಂದು ಕರೆಯತಕ್ಕದ್ದು! ಕಾಸಿಮ, ಏಳು ! ಅಲ್ಲಾನ ಕೃಪೆಯಿಂದ ನಿನಗೆ ಶಾಂತಿಯು ದೊರೆಯುವದು. ಮಧ್ಯಾಹ್ನದ ನಮಾಜಿನ ಸಮಯವಾದದ್ದರಿಂದ ನಮಾಜು ಮಾಡು ಏಳು ! ನಾನೂ ಮಧ್ಯಾಹ್ನದ ಸಂಧ್ಯೆಗೆ ಹೋಗುವೆನು. ಎಂದು ಹೇಳಿ ಮಾಧವಾಚಾರ್ಯರು ಕಾಸಿಮನನ್ನು ಸಮಾಧಾನಪಡಿಸಿ, ತಮ್ಮ ಪರ್ಣಕುಟೀರದ ನೆರೆಯಲ್ಲಿಯೇ ಇಂದು ನಮಾಜುಮಾಡಬೇಕೆಂದು ಆತನಿಗೆ ಹೇಳಿ ತಾವು ಕುಟೀರವನ್ನು ಹೊಕ್ಕರು.

## ಧರ್ಮದ ದುರಭಿಮಾನ !

ಸೆಟ್ಟಿ ಇಳಿದಲ್ಲಿ ಪಟ್ಟಣವೆಂಬ ಮಾತು ಸುಳ್ಳಲ್ಲ. ಪೂರ್ಣಿಮೆಯ ದಿವಸವು. ಅಹಿತಾಗ್ನಿಗಳಾದ ಮಾಧವಾಚಾರ್ಯರ ಆಶ್ರಮದಲ್ಲಿ ಅಂದು ಇಷ್ಟಿಯ ನಿಮಿತ್ತವಾಗಿ ಬ್ರಾಹ್ಮಣಸಮೂಹವು ನೆರದಿತ್ತು. ಆಚಾರ್ಯರು ಘನಪಂಡಿತರು; ಮೇಲೆ ವೈದಿಕಕರ್ಮತತ್ಪರರು; ಇವೆರಡಕ್ಕೂ ಜೀವಕಳೆಯನ್ನುಂಟು ಮಾಡುವಂಥ ತಪೋಬಲವೂ ಅವರಲ್ಲಿ ಅತರ್ಕ್ಯವಾಗಿ ಇತ್ತು. ಆ ತಪೋಧನರು ತಮ್ಮ ಅಗಾಧವಾದ ತಪಶ್ಚರ್ಯದಿಂದ ಸಾಕ್ಷಾತ್ ಭುವನೇಶ್ವರಿಯನ್ನು ಪ್ರಸನ್ನೀಕರಿಸಿ ಕೊಂಡದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಇಂಥ ಘನತರವಾದ ಯೋಗ್ಯತೆಯು, ಹಾಗು ಅಲೌಕಿಕ ಸಾಮರ್ಥ್ಯದ ಮಹಾತ್ಮರ ಆಚರಣೆಯಲ್ಲಿ ಏನಾದರೂ ಕೊಂಕು ಕೊರತೆಗಳಾದದ್ದು ಕಂಡುಬಂದರೆ ಅದಕ್ಕಾಗಿ ಅವರನ್ನು ಕೇಳುವ ಧೈರ್ಯವು ಯಾರಿಗೆ ಆಗಬೇಕು? ಯಾವ ಕಾರಣದಿಂದಲೋ ಆಚಾರ್ಯರು ಕಾಸಿಮಖಾನನಂಥ ಯವನನನ್ನು ತಮ್ಮ ಪರ್ಣಕುಟೀರದ

ಬಳಿಯಲ್ಲಿಟ್ಟುಕೊಂಡದ್ದಕ್ಕಾಗಿ ಬ್ರಹ್ಮವೃಂದದ ಹೃದಯದಲ್ಲಿ ಬಲವಾದ ಶಂಕೆಯು ಬಾಧಿಸತೊಡಗಿತ್ತು; ಆದರೆ ಅದನ್ನು ಆಚಾರ್ಯರ ಮುಂದೆ ಒಡನುಡಿಯುವ ಧೈರ್ಯವು ಯಾರಿಗೂ ಆಗಲೊಲ್ಲದು. ಮುನ್ನಾದಿನ ಕಾಸಿಮಖಾನನು ಪಶ್ಚಾತ್ತಾಪದಿಂದ ಮೈಮರೆತಾಗಿನಿಂದ ಆಚಾರ್ಯರು ಆ ಯವನವೀರನ ವಿಷಯವಾಗಿ ಅತ್ಯಂತ ಕರುಣಾಶಾಲಿಗಳಾಗಿದ್ದರು. ಆತನನ್ನು ಸಮಾಧಾನಪಡಿಸುವದಕ್ಕಾಗಿ ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಅವರು ಆತನನ್ನು ತಮ್ಮ ಪರ್ಣಕುಟೀರದ ಬಳಿಯಲ್ಲಿಯೇ ಇಟ್ಟುಕೊಂಡಿದ್ದರು. ವೇದಘೋಷವು ಸಹಜವಾಗಿ ಆತನ ಕಿವಿಗೆ ಬೀಳುತ್ತಿತ್ತು; ಎಷ್ಟೋ ವೈದಿಕ ಕರ್ಮಗಳು ಅವನ ಕಣ್ಣಿಗೆ ಬೀಳುತ್ತಿದ್ದವು; ಹೀಗೆ ವೇದಬಾಹಿರರ ಕಿವಿಗೆ ವೇದವು ಬೀಳುವದೂ, ಅವರ ಕಣ್ಣಿಗೆ ವೈದಿಕ ಕರ್ಮಗಳು ಕಾಣುವದೂ ಅಧರ್ಮವೆಂದು ಕೇವಲ ಧಾರ್ಮಿಕ ವೃತ್ತಿಯ ಬ್ರಾಹ್ಮಣರ ಭಾವನೆಯಾಯಿತು.

ಆಚಾರ್ಯರು ತಾವು ಆಹಿತಾಗ್ನಿಗಳಿದ್ದು ಮೂರ್ಛಿತನಾದ ಕಾಸಿಮನನ್ನು ಮುಟ್ಟಿ ಎಬ್ಬಿಸಿದ್ದು ತೀಕ್ಷ್ಣಮಡಿಯ ಬ್ರಾಹ್ಮಣರಿಗೆ ಸರಿಬರಲಿಲ್ಲ. ಶ್ರೌತಿಗಳಿಗೆ ಶೂದ್ರಸ್ಪರ್ಶವೇ ನಿಷೇಧ ವಾಗಿರಲು, ಆಚಾರ್ಯರು ಯವನ ಸ್ಪರ್ಶ ಮಾಡಿದರಲ್ಲ, ಎಂಬ ವೈಷಮ್ಯವು ಅವರ ಮನಸ್ಸಿನಲ್ಲಿ ಉತ್ಪನ್ನವಾಗಿತ್ತು. ಇದರಂತೆಯೇ ಸಂಶಯಗ್ರಸ್ತರಾದ ಏಕದೇಶೀಯ ವಿಚಾರದ ಆ ಕರ್ಮಠ ಬ್ರಾಹ್ಮಣರ ಮನಸ್ಸಿನಲ್ಲಿ ಲೋಕಸಂಗ್ರಹತತ್ಪರರಾದ ಆಚಾರ್ಯರ ಆಚರಣೆಯ ವಿಷಯವಾಗಿ ಹಲವು ಶಂಕೆಗಳು ಉತ್ಪನ್ನವಾಗಿದ್ದವು.

ದ್ರವ್ಯಲೋಭದಿಂದ ಹೀಗೆ ಆಚಾರ್ಯರು ಲೋಕಾನುವರ್ತನ ಮಾಡುವರೆನ್ನಬೇಕೆಂದರೆ ಅವರು ಅತ್ಯಂತ ನಿಸ್ಪೃಹರು ! ಅಥವಾ ಯವನಬಾಧೆಗೆ ಅಂಜಿ ಹೀಗೆ ನಡೆಯುವರೆನ್ನಬೇಕೆಂದರೆ, ಅವರು ರಾಷ್ಟ್ರಹಿತಕ್ಕಾಗಿ ತಮ್ಮ ಪ್ರಾಣವನ್ನೂ ತೃಣೀಕರಿಸಿ ಬೈಲಿಗೆ ನಿಂತವರು, ಮೇಲಾಗಿ ಕಾಸಿಮನಂಥ ವೀರರನ್ನು ತಮ್ಮ ಬುದ್ಧಿಸಾಮರ್ಥ್ಯದಿಂದ ನಿರಾಯಾಸವಾಗಿ ಸೋಲಿಸಿ, ತಮ್ಮ ಪ್ರಚಂಡ ಸೇನಾಬಲದ ಪ್ರದರ್ಶನದಿಂದ ಆತನನ್ನು ಅಂಕಿತನನ್ನಾಗಿ ಮಾಡಿಕೊಂಡವರು ! ಇಂಥ ಶ್ರೇಷ್ಠಪುರುಷರ ಆಚರಣೆಯನ್ನು ಎತ್ತಿ ಎಣಿಸಲಿಕ್ಕೆ ಯಾರಿಗೆ ಆಸ್ಪದವು ದೊರೆಯಬೇಕು ? ಕಾಲಕ್ಕನುಸರಿಸಿ ಸನಾತನ ಧರ್ಮಕ್ಕೆ ಹೊಸ ಹಾದಿಯನ್ನು ಮಾಡಿಕೊಡಲಿಕ್ಕೆ ಇಂಥ ಅಸಮಾನ್ಯ ಪುರುಷರೇ ಬೇಕಾಗುವರೆಂಬದನ್ನು ವಿಚಾರವಂತ ಬ್ರಾಹ್ಮಣರು ಅರಿತಿದ್ದರು; ಆದರೂ ಸಾಮಾನ್ಯ ವಾಗಿ ಅವರ ಮನಸ್ಸಿನೊಳಗಿನ ಸಂಶಯದ ನಿವಾರಣವಾಗದಿರಲು ಗದ್ದಲವಾಗದಂತೆ ಅವರು ತಮ್ಮತಮ್ಮೊಳಗೆ ಈ ಸಂಬಂಧದಿಂದ ಚರ್ಚಿಸುತ್ತಲಿದ್ದರು.

ಹೀಗೆ ಬ್ರಹ್ಮವೃಂದದ ಚರ್ಚೆಯು ಪರ್ಣಕುಟೀರದ ಮುಂದುಗಡೆಯ ಪ್ರಶಸ್ತವಾದ ಅಂಗಳದಲ್ಲಿ ಗದ್ದಲವಾಗದಂತೆ ನಡೆದಿರಲು, ಪರ್ಣಕುಟೀರದಲ್ಲಿ ಆಚಾರ್ಯರು ಭೋಜನಾ ನಂತರದ ವಿಶ್ರಾಂತಿಯನ್ನು ಹೊಂದುತ್ತಲಿದ್ದಾರೆ. ಸೃಷ್ಟಿಯ ಅನುವರ್ತನಧುರೀಣಗಳೂ, ಸ್ವಸ್ವಧರ್ಮರತಗಳೂ ಆದ ಮನುಷ್ಯೇತರ ಪ್ರಾಣಿಕೋಟಿಗಳು ಋತುಮಾನದಂತೆ ಮಧ್ಯಾಹ್ನದ ಬಿಸಿಲ ಮರೆ ನೋಡಿ ಕಣ್ಣುಮುಚ್ಚುತ್ತ ತೆರೆಯುತ್ತ ಮಲಗಿಕೊಂಡಿವೆ. ಅಷ್ಟರಲ್ಲಿ ಸಾಕ್ಷಾತ್ ಅರುಂಧತಿಯಂತೆ ಮಂಗಲಸ್ವರೂಪಳೂ, ಆಚಾರ್ಯರ ಅರ್ಧಾಂಗಿಯೂ ಆದ ದೇವೀ ಮೈತಿ

ಹೋತ್ರಿಯು, ಸುವಾಸಿನೀಗಣವನ್ನು ಹರಿದ್ರಾ–ಕುಂಕುಮ–ತಾಂಬೂಲ–ಫಲ– ಪುಷ್ಪಾದಿ ಗಳಿಂದ ಸತ್ಕರಿಸಿ ಹಿರಿಯರಿಗೆ ಅಭಿವಂದಿಸಿ ಆಶೀರ್ವಾದ ಪಡೆದು ಅವರನ್ನು ಕುರಿತು — ''ಸುಮಂಗಲೆಯರೇ, ನಿಮ್ಮೆಲ್ಲರ ಆಗಮನದಿಂದ ನನಗೆ ಬಹಳ ಸಂತೋಷವಾಯಿತು. ನಿಮ್ಮಿಂದ ನಮ್ಮ ಆಶ್ರಮವು ಅಲಂಕೃತವೂ ಪುನೀತವೂ ಆಯಿತು'' ಎಂದು ಉಪಚರಿಸುತ್ತ ಅವರ ಮಧ್ಯದಲ್ಲಿ ಕುಳಿತುಕೊಂಡಳು. ಶ್ರೇಷ್ಠ ಆಚಾರ್ಯ ಪತ್ನಿಯಾದರೂ ಆಕೆಯ ವಿನಯವನ್ನು ನೋಡಿ ಸುವಾಸಿನಿಯರು ಸಂತೋಷಪಟ್ಟರು. ಆ ಬ್ರಾಹ್ಮಣ ಸ್ತ್ರೀಯರಿಗೂ ಆಶ್ರಮದಲ್ಲಿ ಯವನ ವಸತಿಯಾದದ್ದು ಅಸಹ್ಯವಾಗಿತ್ತು.

ಅವರಲ್ಲಿ ಒಬ್ಬ ಹಿರಿಯ ಮುತ್ತೈದೆಯು ವೈತಿಹೋತ್ರಿಯನ್ನು ಕುರಿತು ಅಂಜುತ್ತಂಜುತ್ತ– ''ಅವ್ವಾ ವೈತಿಹೋತ್ರಿ, ನಾನೇನು ಶಾಸ್ತ್ರ ಬಲ್ಲವಳಲ್ಲ, ಪುರಾಣ ಬಲ್ಲವಳಲ್ಲ; ನಿನ್ನಂಥ ಈಗಿನ ಜಾಣೆಯರ ಮುಂದೆ ನನಗೆ ಮಾತಾಡಲಿಕ್ಕೂ ಬರುವದಿಲ್ಲ; ಆದರೆ ಜೀವ ನಿಲ್ಲಲಾರದೆ ಕೇಳುತ್ತೇನೆ; ಆಚಾರ್ಯರಂಥ ಮಹಾತ್ಮರ ಸಹವಾಸವು ನಿನಗಿರುವದರಿಂದ ನೀನು ಏನಾದರೂ ಹೇಳಬಲ್ಲೆ; ಆದ್ದರಿಂದ ನಾನು ಕೇಳುವ ಪ್ರಶ್ನೆಗಳ ಸಂಬಂಧದಿಂದ ವಿಕಲ್ಪವನ್ನು ಭಾವಿಸದೇ ನನಗೆ ತಕ್ಕಹಾಗೆ ಸಮಾಧಾನ ಹೇಳು ! ಆಶ್ರಮ ಸ್ಥಾನದಲ್ಲಿ ಮ್ಲೇಂಛರು ವಾಸಿಸಬಹುದೇ? ಯವನ ಸಂಪರ್ಕ ವಾದಷ್ಟು ದೇಹವನ್ನು ಕತ್ತರಿಸಿ ಚಲ್ಲಬೇಕೆಂದು ಶಾಸ್ತ್ರವು ಹೇಳುತ್ತಿರಲು, ಆಚಾರ್ಯವರ್ಯರು ಯವನರಿಗೆ ಆಶ್ರಮಸ್ಥಾನದಲ್ಲಿ ಆಶ್ರಯವಿತ್ತಿರುವರಲ್ಲ ! ನೀವಾದರೂ ಹೇಗೆ ಸುಮ್ಮನಿರುವಿರಿ? ಆಶ್ರಮಸ್ಥಾನದಲ್ಲಿ ಅವಿಂಥರ ನೆರಳು ಬೀಳುವದು ಅಪವಿತ್ರವಲ್ಲವೆ? ವೇದಘೋಷವು ಯವನರ ಕಿವಿಗೆ ಬೀಳಬಹುದೆ ? ಅವ್ವಾ ಆಚಾರ್ಯರಿಗೆ ಹೆಸರಿಡುವ ಯೋಗ್ಯತೆಯು ನಮ್ಮದಲ್ಲ, ನೀನು ಮಹಾಪತಿವ್ರತೆಯು. ವಶಿಷ್ಠರಿಗೆ ಅರುಂಧತಿಯು, ಅಗಸ್ತ್ಯರಿಗೆ ಲೋಪಾಮುದ್ರೆಯು, ಯಾಜ್ಞವಲ್ಕರಿಗೆ ಮೈತ್ರೇಯಿಯು ಪತ್ನಿಯಾಗಿರುವಂತೆ ನೀನು ಮಾಧವಾಚಾರ್ಯರಿಗೆ ಪತ್ನಿಯಾಗಿರುತ್ತೀ ! ನೀನು ಅತ್ಯಂತ ನಿಸ್ಪೃಹತೆಯಿಂದ ಪತಿಯ ದೇಶೋದ್ಧಾರದ ಕಾರ್ಯಕ್ಕೆ ಅನುಕೂಲೆಯಾಗಿ ಅವರ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ನಡೆಯುತ್ತಿರುವೆಯೆಂಬುದನ್ನು ಎಲ್ಲರೂ ಬಲ್ಲರು. ನಿನ್ನಂಥ ಪುಣ್ಯಾತ್ಮಳಿಂದ ನಮ್ಮ ಸಂಶಯ ನಿವಾರಣೆಯಾದೀತೆಂದು ನಾನು ಪ್ರಶ್ನೆ ಮಾಡಿರುವೆನು, ಕೋಪಿಸದೆ ಕರುಣಿಸವ್ವಾ ! ನಮ್ಮ ಪಾಮರರ ಸಂಶಯವನ್ನು ದೂರಮಾಡು, ಎಂದು ನುಡಿಯಲು, ಉಳಿದ ಸ್ತ್ರೀಯರ ಸಂಘದಿಂದ — ''ಹೌದವ್ವಾ ! ಇದು ಕೇಳತಕ್ಕಮಾತೇ ಸರಿ ! ನಾವೇ ಕೇಳಬೇಕೆನ್ನುತ್ತಿರುವಷ್ಟರಲ್ಲಿ ಹಿರಿಯ ಮನುಷ್ಯರು ನೀವು ಕೇಳಿದ್ದು ನೆಟ್ಟಗಾಯಿತು!'' ಎಂಬರ್ಥದ ಸಂಕಲಿತ ಮಂದಧ್ವನಿಯು ಉತ್ಪನ್ನವಾಯಿತು, ಅದನ್ನು ಕೇಳಿ ವೈತಿಹೋತ್ರಿದೇವಿಗೆ ಪರಮಾನಂದವಾಯಿತು.

ಮಹಾತ್ಮರಾದ ಆಚಾರ್ಯರು ಈ ವಿಷಯವನ್ನು ಕುರಿತು ತನ್ನನ್ನು ಬೋಧಿಸುವವರೆಗೆ ತಾನೂ ಇಂಥ ಸಂಕುಚಿತ ವಿಚಾರದವಳಾಗಿದ್ದುದರ ಸ್ಮರಣವು ಆಕೆಗೆ ಆಯಿತು. ಆಕೆಯು ವಿನಯದ ಹಾಸ್ಯಮುಖದಿಂದ ಸುವಾಸಿನಿಯರನ್ನು ಕುರಿತು —ಪೂಜ್ಯರಾದ ಸಾಧ್ವೀಮಣಿಗಳೇ, ಪತಿಸೇವಾ ತತ್ಪರರಾಗಿರುವ ನಿಮ್ಮಂಥ ಪತಿವ್ರತೆಯರ ಶಂಕೆಗಳು ನಿರರ್ಥಕವಾದವೆಂದು

ಹೇಳಬಹುದೆಯೇ? ನೀವಾಯಿತು, ನಿಮ್ಮ ಪತಿಸೇವೆಯಾಯಿತು, ಅನ್ಯವಿಷಯಗಳ ಗೊಡವೆ ಯರಿಯದ ನಿಮ್ಮಂಥ ಸಾಧ್ವಿಯರ ಪಾಪಭೀರು ಸ್ವಭಾವಕ್ಕೆ ನಿಮ್ಮ ವಿಚಾರಗಳು ಬಹಳವಾಗಿ ಒಪ್ಪುವವು. ಆಚಾರ್ಯರು ತಿಳಿಸಿ ಹೇಳುವವರೆಗೆ ನನಗೂ ನಿಮ್ಮ ಹಾಗೆಯೇ ಸಂಶಯವು ಉತ್ಪನ್ನವಾಗುತ್ತಿತ್ತು; ಆದರೆ ಮಹಾತ್ಮರಾದ ಆಚಾರ್ಯರವರು ಇಸ್ಲಾಮಿ ಮೊದಲಾದ ಪರಧರ್ಮಗಳಲ್ಲಿರುವ ಧರ್ಮದ ಸನಾತನತ್ವವನ್ನು ಕುರಿತು ನನ್ನನ್ನು ಬೋಧಿಸಿದ್ದರಿಂದ ನನ್ನ ತಪ್ಪುತಿಳುವಳಿಕೆಯು ದೂರವಾಗಿರುವದು. ಯವನರ ವಿಷಯವಾಗಿ ನಮ್ಮಲ್ಲಿ ಸಾಮಾನ್ಯವಾಗಿ ಉತ್ಪನ್ನವಾಗಿರುವ ದ್ವೇಷಬುದ್ಧಿಗೆ, ವಿವೇಕಿಗಳಲ್ಲದ ಯವನರ ಕ್ರೂರ ಕೃತಿಗಳು ಕಾರಣವಲ್ಲದೆ, ಅವರ ಧರ್ಮವಾಗಲಿ, ನಿಜವಾದ ಇಸ್ಲಾಮಿ ಧರ್ಮದವರಾಗಲಿ ಕಾರಣವಲ್ಲವೆಂದು ಆಚಾರ್ಯರು ನನಗೆ ಸ್ಪಷ್ಟವಾಗಿ ತಿಳಿಸಿ ಹೇಳಿರುವರು. ಅಮ್ಮಾ ನಿಜವಾದ ಬ್ರಾಹ್ಮಣರು ದ್ವೇಷಾಸೂಯೆಗಳಿಗೆ ಒಳಗಾಗರೆಂಬದನ್ನು ನಾವು ಚನ್ನಾಗಿ ನೆನಪಿನಲ್ಲಿಡತಕ್ಕದ್ದು.

''ಜಾತಿಗೆ ಭೇದವಾದರೂ ನೀತಿಗೆ ಭೇದವಿಲ್ಲೆಂಬ'' ನಿಯಮದಂತೆ, ಜಾತಿಗಳಲ್ಲಿ ಭೇದಕಂಡು ದೂರದೂರ ಸರಿಯುವವರು ಭಿನ್ನಜಾತಿಯವರ ನೀತಿಯು ಒಂದೇ ಆದ ಪಕ್ಷದಲ್ಲಿ ಪರಸ್ಪರರು ದೊಡ್ಡ ಮನಸ್ಸಿನಿಂದ ಒಬ್ಬರ ಹತ್ತರ ಒಬ್ಬರು ಬರಬೇಕಾಗುವದು; ಯಾಕಂದರೆ, ಜಾತಿಗಿಂತಲೂ ನೀತಿಯು ಯೋಗ್ಯತೆಯು ಅತ್ಯಂತ ಶ್ರೇಷ್ಠವಾಗಿರುವದು. ನೀತಿ ಸಂಪಾದನೆಗಾಗಿಯೇ ಮಹಾತ್ಮರು ಜಾತಿನಿರ್ಬಂಧಗಳನ್ನುಂಟು ಮಾಡಿರುವದರಿಂದ, ನೀತಿವಂತರು ಯಾವಜಾತಿಯವರಿದ್ದರೂ ಅವರ ಜಾತಿಯಲ್ಲಿ ದೃಷ್ಟಿಯಿಡದೆ ಅವರ ನೀತಿಮತ್ತೆಗಾಗಿ ಅವರನ್ನು ಆದರಿಸಿ ಮುಂದಕ್ಕೆ ಕರೆಯಬೇಕೆಂದು ಆಚಾರ್ಯರು ನನಗೆ ಚನ್ನಾಗಿ ಬುದ್ಧಿಗಲಿಸಿದ್ದಾರೆ. ಜಾತಿಯು ಹಣ್ಣಿನ ಸಿಪ್ಪೆಯಿದ್ದ ಹಾಗೆಯಂತೆ, ನೀತಿಯು ಹಣ್ಣಿನ ತಿಳಲು ಇದ್ದ ಹಾಗೆಯಂತೆ. ನೀತಿಯೆಂಬ ತಿಳಲಿನ ಸಂರಕ್ಷಣವೂ, ಸಂವರ್ಧನವೂ ಆಗಬೇಕೆಂತಲೇ ಅದರ ಸುತ್ತಲೂ ಜಾತಿಯೆಂಬ ಸಿಪ್ಪೆಯ ಆವರಣವಿರುತ್ತದಂತೆ. ತಿಳಲಿಲ್ಲದ ಸಿಪ್ಪೆಯು ತಿಪ್ಪೆಯ ಪಾಲಾಗುವಂತೆ, ನೀತಿಯಿಲ್ಲದ ಜಾತಿಯು ಯಾವದಿದ್ದರೂ ಅದು ಹೋತಿನ ಮಲೆಗೆ ಸಮಾನವಾಗಿರವದು ! ನೀತಿಯು ಕಂಡುಬಂದಲ್ಲೆಲ್ಲ ನಾವು ಜಾತಿಯನ್ನು ದುರ್ಲಕ್ಷಿಸಿ ಯಾವ ಜಾತಿಯವರಿದ್ದರೂ ನೀತಿವಂತರನ್ನು ಆದರಿಸಬೇಕಾಗುವದಲ್ಲವೆ ? ಅದರಂತೆ ಕಾಸಿಮಖಾನರನ್ನು ಆಚಾರ್ಯರು ಈಗ ಆದರಿಸಿ ಮುಂದಕ್ಕೆ ಕರೆದಿರುವದು, ಖಾನ ಸಾಹೇಬರವರ ಜಾತಿಗಾಗಿಯಲ್ಲ, ಅವರ ನೀತಿಗಾಗಿ ! ಅಮ್ಮಾ, ನನಗಾದರೂ ಹೆಚ್ಚಿಗೇನು ತಿಳಿಯುತ್ತದೆ? ಹಿರಿಯರಾದ ನಿಮಗಿಂತಲೂ ನಾನೇನು ಬಲ್ಲವಳೆಯೆ? ಹಿರಿಯರ ಅಪ್ಪಣೆ ಮೀರಬಾರದೆಂದು ಆಚಾರ್ಯ ರವರಿಂದ ಕೇಳಿದ ಎರಡು ಮಾತು ಹೇಳಿದ್ದಕ್ಕಾಗಿ ನನ್ನನ್ನು ಕ್ಷಮಿಸಬೇಕು; ಈಗ ಆಚಾರ್ಯರು ವಿಶ್ರಮಿಸಿ ಏಳುವ ಹೊತ್ತಾದ್ದರಿಂದಅವರ ಪಾದಪ್ರಕ್ಷಾಲನಕ್ಕೂ,ಆಚಮನಕ್ಕೂ ನೀರುಕೊಟ್ಟು ಬರುವೆನು, ಅಪ್ಪಣೆ ಕೊಡಿರಿ.

ಈ ಮೇರೆಗೆ ನುಡಿದು ವಿನಯಶಾಲಿನಿಯಾದ ವೈತಿಹೋತ್ರಿಯು ಪರ್ಣ ಕುಟೀರವನ್ನು ಹೊಕ್ಕಳು. ಇತ್ತ ಸುವಾಸಿನಿಯರು ಆ ಜ್ಞಾನಸಂಪನ್ನಳ ಮಾತಿಗೆ ಅಚ್ಚಿಮೆಚ್ಚಿ ಅಚ್ಚರಿಗೊಳ್ಳುತ್ತ ಆಚಾರ್ಯರ ಬರವನ್ನು ಎದುರು ನೋಡುತ್ತಕುಳಿತುಕೊಂಡರು. ದಿನಾಲು ಮಧ್ಯಾಹ್ನದ ಒಂಬತ್ತು

ತಾಸಿನಲ್ಲಿ ಆಚಾರ್ಯರ ಧಾರ್ಮಿಕ ಪ್ರವಚನವಾಗುತ್ತಿತ್ತು. ವಿಶೇಷತರದ ರಾಜಕೀಯ ವ್ಯವಹಾರ ವಿಲ್ಲದಿದ್ದರೆ ಈ ಪ್ರವಚನವು ಆಚಾರ್ಯರಿದ್ದಲ್ಲಿ ತಪ್ಪುತ್ತಿರಲಿಲ್ಲ. ವೈದಿಕ ಧರ್ಮವಿಚಾರದ ತೊಡಕು ಬಿಡುವ ಕಾಲವು ಇದೇ ಆದ್ದರಿಂದ, ಆಗ ಬ್ರಹ್ಮವೃಂದವು ವಿಶೇಷವಾಗಿ ಕೂಡುತ್ತಿತ್ತು. ಅನ್ಯವರ್ಣದವರಿಗೆ ಆಗ ಬರಲಿಕ್ಕೆ ಪ್ರತಿಬಂಧವಿಲ್ಲದಿದ್ದರೂ, ಕೆಲವರು ವೈದಿಕ ಧರ್ಮದ ತೊಡಕಿನ ವಿಚಾರಗಳು ತಮಗೆ ತಿಳಿಯದ್ದರಿಂದಾಗಲಿ, ಕೆಲವರು ಅದನ್ನು ಕೇಳುವದು ನಮ್ಮ ಕೆಲಸವಲ್ಲವೆಂಬ ತಿಳುವಳಿಕೆಯಿಂದಾಗಲಿ, ಕೆಲವರು ಆ ವಿಷಯವು ತಮಗೆ ಸಂಬಂಧಿಸಿದ್ದಲ್ಲವೆಂಬ ಭಾವನೆಯಿಂದಾಗಲಿ, ಕೆಲವರು ತಮ್ಮ ವ್ಯವಸಾಯದಲ್ಲಿ ಕೂಡದ್ದರಿಂದಾಗಲಿ, ಕೆಲವರು ಆಚಾರ್ಯರ ಆಜ್ಞೆಗಿಂತಲೂ ತಮಗೆ ಹೆಚ್ಚಿನ ಧರ್ಮವಿಲ್ಲವೆಂಬ ನಂಬುಗೆಯಿಂದಾಗಲಿ ಪ್ರವಚನಕ್ಕೆ ಬಾರದಿರುವದರಿಂದ ಬೆಳಗಿನ ರಾಜಕೀಯ ಪ್ರವಚನಕ್ಕಿಂತ ಮಧ್ಯಾಹ್ನದ ಈ ಧಾರ್ಮಿಕ ಪ್ರವಚನಕ್ಕೆ ಜನಸಮ್ಮರ್ದನವು ಕಡಿಮೆಯಾಗಿರುತ್ತಿತ್ತು. ಆದರೆ ವರ್ಣಾಶ್ರಮ ರಕ್ಷಣಬದ್ಧರಾದ್ದರಿಂದ ಹುಕ್ಕ–ಬುಕ್ಕ–ಕೃಷ್ಣನಾಯಕರಂಥ ಕ್ಷತ್ರಿಯ ವೀರರೂ, ಧರ್ಮಾತ್ಮರಾದ ವೈಶ್ಯರೂ, ಭಾವಿಕರಾದ ಶೂದ್ರರೂ, ಬೇರೆ ಉದಾರಭಾವದ ವೈದಿಕ ಧರ್ಮದವರು ಪ್ರವಚನಕ್ಕೆ ಭಕ್ತಿಯಿಂದ ಬರುತ್ತಿದ್ದರು.

ಒಂದೊಂದು ದಿನ ಅಂತ್ಯಜರವರೆಗೆ ಯಾವತ್ತೂ ಹಿಂದೂ ಧರ್ಮದವರು ಪ್ರವಚನಕ್ಕೆ ಬರುತ್ತಿದ್ದರು. ಆಚಾರ್ಯರು ಹೋಮಶಾಲೆಯಿಂದ ಹೊರಗೆ ಹೋಗಿ ಪಾದಪ್ರಕ್ಷಾಲನಮಾಡಿ ಬರುವದರೊಳಗೆ ಬರತಕ್ಕ ಜನರು ಬಹುತರ ಬಂದಿರುತ್ತಿದ್ದರು. ಆಚಾರ್ಯರ ವಿಶ್ರಾಂತಿಯೆಂದರೆ ಹಗಲನಿದ್ದೆಯಿಲ್ಲ, ದೇಶೋದ್ಧಾರದ ಚಡಪಡಿಕೆಯಲ್ಲಿ ರಾತ್ರಿ ನಿದ್ದೆಮಾಡಲಿಕ್ಕೆ ಕೂಡದ ಆಚಾರ್ಯರವರಿಗೆ ಹಗಲು ನಿದ್ದೆಬರುವ ಬಗೆ ಹೇಗೆ? ಮೇಲಾಗಿ ಹಗಲ ನಿದ್ದೆಯು ಧರ್ಮತಃ ನಿಷೇಧವು, ಭೋಜನಾನಂತರ ವಿಶ್ರಮಿಸಿ, ''ಕಾರ್ಯಾಂತರ ಏವ ವಿಶ್ರಾಂತಿ'' ಎಂಬ ಉಕ್ತಿಯಂತೆ ನಿಯಮಿತಕಾಲ ಗ್ರಂಥಾವಲೋಕನದಲ್ಲಿ, ಇಲ್ಲವೆ ರಾಜಕಾರಣದ ವಿಚಾರದಲ್ಲಿ ತೊಡಗಿರುವದು ಆಚಾರ್ಯರ ನಿತ್ಯಕ್ರಮವಾಗಿತ್ತು. ಅದರಂತೆ ಅವರು ಇಂದು ವಿಶ್ರಾಂತಿ ಹೊಂದಿ ಪಾದಪ್ರಕ್ಷಾಲನಾ ನಂತರ ಶುದ್ಧಾಚಮನ ಮಾಡಿ ಹೊರಗೆ ಬರಲು, ಭಕ್ತಿಯಿಂದ ಎಲ್ಲಸ್ತ್ರೀ–ಪುರುಷರೂ ಪ್ರತ್ಯುತ್ಥಾನಮಾಡಿದರು. ಆಗ ಆಚಾರ್ಯರು ಮುಗುಳು ನಗೆಯ ಗಾಂಭೀರ್ಯದಿಂದ ಎಲ್ಲರನ್ನೂ ನೋಡಿ ನಮ್ರಭಾವದಿಂದ– ''ಕುಳಿತುಕೊಳ್ಳಬೇಕು ! ಲೌಕಿಕ ಶಿಷ್ಟಾಚಾರಕ್ಕಾಗಿ ಹೀಗೆ ಮಹಾಜ ಸಂಘವು ಕೊಡುತ್ತಿರುವ ಬಹುಮಾನದ ಭಾರವು ನನಗೆ ದುಸ್ಸಹವಾಗುತ್ತದೆ; ಆದರೂ ಲೋಕಸಂಗ್ರಹಕ್ಕಾಗಿ ಆ ಭಾರವನ್ನು ವಹಿಸಲೇಬೇಕಾಗಿರುವದು'' ಎಂದು ಸಭಿಕರನ್ನುಆದರದಿಂದ ಸಂಭಾವಿಸುತ್ತ ಆಸನದಲ್ಲಿ ಕುಳಿತುಕೊಂಡರು.

ಆಚಾರ್ಯರ ಯೋಗದಿಂದ ಕರ್ನಾಟಕದಲ್ಲಿ ಅದೇ ಜಾಗೃತಿಯಾಗಿರುವದರಿಂದಲೂ, ದೇಶದ ಸ್ವಾತಂತ್ರ್ಯ ಸ್ಥಾಪನೆಯ ತೀಕ್ಷ್ಣವಾದ ಉದ್ಯೋಗದಲ್ಲಿ ಎಲ್ಲರೂ ತೊಡಗಿದವರಾದ್ದ ರಿಂದಲೂ ಮಾಗದರ್ಶಕರಾದ ಆಚಾರ್ಯರ ಪ್ರವಚನದ ವಿಷಯವಾಗಿಯೂ, ಅವರ ದರ್ಶನದ ವಿಷಯವಾಗಿಯೂ ಜನರಲ್ಲಿ ವಿಲಕ್ಷಣವಾದ ಆಸ್ಥೆಯು ಕಂಗೊಳಿಸುತ್ತಿತ್ತು. ಆಚಾರ್ಯರ ಮುಂಭಾಗದಲ್ಲಿಯೂ, ಎಡಭಾಗದಲ್ಲಿಯೂ ಪುರುಷವರ್ಗವೂ, ಬಲಭಾಗದಲ್ಲಿ ಸ್ತ್ರೀವರ್ಗವೂ

ಕುಳಿತುಕೊಂಡಿತ್ತು. ಈ ದಿನ ತಮ್ಮ ಶಂಕೆಯ ವಿಷಯವನ್ನೇ ಆಚಾರ್ಯರು ಪ್ರಸ್ತಾಪಿಸಿದರೆ ನೆಟ್ಟಗಾಗುವದೆಂದು ಯಾವತ್ತು ಬ್ರಾಹ್ಮಣ ಸ್ತ್ರೀ-ಪುರುಷರು ಮನಃಪೂರ್ವಕವಾಗಿ ಇಚ್ಛಿಸುತ್ತಿದ್ದರು; ಆದರೆ ಸಭೆಯಲ್ಲಿ ಹಾಗೆ ಆಚಾರ್ಯರಿಗೆ ಸೂಚಿಸುವ ಸಾಹಸವನ್ನು ಯಾರು ಮಾಡಬೇಕು? ಸ್ವಭಾವತಃ ಆಚಾರ್ಯರು ಅತ್ಯಂತ ಸಾತ್ವಿಕರು, ಶಮಪ್ರಧಾನರು, ಹಿಂಸೆಗೆ ಮನಃಪೂರ್ವಕವಾಗಿ ಹೇಸುವವರು; ಆದರೆ ಆ ತಪೋಧನರ ದಾಹಾತ್ಮಕವಾದ ಗೂಢಶಕ್ತಿಯ ದರ್ಪದಿಂದ ಎಲ್ಲರೂ ಅವರೊಡನೆ ಮಾತಾಡಲಿಕ್ಕೆ ಅಂಜುತ್ತಿದ್ದರು ! ಕೆಲಕಾಲ ಆಚಾರ್ಯರು ಏನೋ ಯೋಚಿಸುವವರಂತೆ ಗಾಂಭೀರ್ಯದಿಂದ ಸುಮ್ಮನೆ ಕುಳಿತುಕೊಂಡರು; ಅವರ ಆ ಮೌನವನ್ನು ಭಂಗಗೊಳಿಸುವ ಧೈರ್ಯವು ಆ ಸಭಿಕರಲ್ಲಿ ಯಾರಿಗೂ ಆಗಲೊಲ್ಲದು. ಕೆಲ ಹೊತ್ತಿನ ಮೇಲೆ ಆಚಾರ್ಯರು ಜಾಗರೂಕರಾಗಿ ಸಭಿಕರನ್ನು ವಿನಯದಿಂದ ನೋಡುತ್ತಿರಲು, ಕಾಶಿಮಖಾನನು ಅಕಸ್ಮಾತ್ ಸಭೆಗೆ ಬಂದುಬಿಟ್ಟನು. ಆತನನ್ನು ನೋಡಿದ ಕೂಡಲೆ ಸರಳಹೃದಯದ ಕರ್ಮಠ ಬ್ರಾಹ್ಮಣರ ಚಿತ್ತವೃತ್ತಿಗಳು ಚಂಚಲವಾದವು. ಕೂಡಲೆ ಅವರು ಪರಸ್ಪರ ಗುಜುಗುಟ್ಟತೊಡಗಲು, ಆಗ ಆಚಾರ್ಯರು ಅತ್ತಿತ್ತ ನೋಡುವಾಗ ಖಾನನು ಅವರ ಕಣ್ಣಿಗೆ ಬಿದ್ದನು.

ಖಾನನು ಹೀಗೆ ಸಭೆಗೆ ಬಂದದ್ದರಿಂದ ಆಚಾರ್ಯರ ಮುಖಮುದ್ರೆಯು ಆನಂದದಿಂದ ಪ್ರಫುಲ್ಲಿತವಾದಂತೆ ತೋರಿತು. ಅವರು ನಗೆಮೊಗದಿಂದ ಖಾನನನ್ನು ಕುರಿತು ಅತ್ಯಾನಂದದಿಂದ —''ಬರಬೇಕು, ಖಾನಾಸಾಹೇಬರು ಬರಬೇಕು; ಹೀಗೆ ಹುಕ್ಕರಾಜನ ಬಳಿಯಲ್ಲಿ ಬರಬೇಕು'' ಎಂದು ಕರೆಯಲು, ಕೂಡಲೆ ಹುಕ್ಕದೊರೆಯು ಎದ್ದುನಿಂತು ಕಾಶಿಮಖಾನನನ್ನು ಬರಮಾಡಿಕೊಂಡು ತನ್ನ ಹತ್ತಿರ ಕುಳ್ಳಿರಿಸಿಕೊಂಡನು. ಅಷ್ಟರಲ್ಲಿ ದಕ್ಷಿಣಾಮೂರ್ತಿ ಭಟ್ಟನೆಂಬ ಶುದ್ಧ ವೈದಿಕ ಬ್ರಾಹ್ಮಣನ ಭ್ರಷ್ಟಾಚಾರವಾಗುವದೆಂಬ ಭಯದಿಂದ ಎದ್ದು ನಿಂತು ವಿಷಾದಜನಿತ ಸಂತಾಪದಿಂದ ಕಾಶಿಮ ಖಾನನ ಕಡೆಗೆ ನೋಡುತ್ತ-''ಅಬ್ರಾಹ್ಮಣ್ಯವು ! ಅಬ್ರಾಹ್ಮಣ್ಯವು !! ಖಾನಸಾಹೇಬ, ಇದು ಧಾರ್ಮಿಕ ಪ್ರವಚನದ ಸಮಯವು; ತಾವು ಇದನ್ನು ಕೇಳಲು ಅನರ್ಹರಾದ್ದರಿಂದ ಈಗ ನೀವು ಬಾರದಿದ್ದರೆ ನೆಟ್ಟಗಾಗುತ್ತಿತ್ತು; ಆದರೂ ತಾವು ಪ್ರವಚನಕ್ಕೆ ವಿಘ್ನಮಾಡದೆ ಈಗ ಇಲ್ಲಿಂದ ಹೊರಟು ಹೋಗುವದು ಯೋಗ್ಯ ಕಾಣುತ್ತದೆ. ಪಾಪ ! ಆಚಾರ್ಯರು ಈ ವಿಷಯವಾಗಿ ನಿಮಗೆ ಏನು ಹೇಳುವರು? ಅವರು ಪ್ರಾಮುಖ್ಯವಾಗಿ ರಾಜಕೀಯ ವ್ಯವಹಾರದಲ್ಲಿ ಸೇರಿದವರಾದ್ದರಿಂದ, ರಾಜಕೀಯ ಸಂಬಂಧವುಳ್ಳ ನಿಮ್ಮಂಥ ಪ್ರತಿಷ್ಠಿತ ಪುರುಷರಿಗೆ ನಿಷ್ಠುರವಾಗಿ ಹೇಳಲಿಕ್ಕೆ ಅವರಿಗೆ ಸ್ವಾಭಾವಿಕವಾಗಿಯೇ ಸಂಕೋಚವಾಗುತ್ತಿರ ಬಹುದು; ಆದರೆ ಕೇವಲ ಧರ್ಮದೃಷ್ಟಿಯುಳ್ಳ ನನಗೆ ಬಹಳ ವ್ಯತ್ಯಾಸವಾಗಿ ತೋರಿದ್ದರಿಂದ ಹೀಗೆ ಸ್ಪಷ್ಟವಾಗಿ ಹೇಳುವ ಸಾಹಸ ಮಾಡಿರುವೆನು. ಇದಕ್ಕಾಗಿ ನೀವೂ ಆಚಾರ್ಯರೂ ನನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ.'' ಎಂದು ನುಡಿದು, ಒಂದು ಮಹಾಕುತ್ತಿನೊಳಗಿಂದ ಪಾರಾದವನಂತೆ ಆ ಬ್ರಾಹ್ಮಣನು ಕುಳಿತುಕೊಂಡನು. ''ತಾನು ಜಳಜಳ ಹೇಳಿಬಿಡುವೆನು.'' ಎಂದು ಧರ್ಮಾಭಿಮಾನದ ಆವೇಶದಿಂದ ಎದ್ದುಬಿಟ್ಟಿದ್ದ ಆ ಸರಳಹೃದಯದ ಭಟ್ಟರ ಆವೇಶವು ಅವರು ಮಾತಾಡಹತ್ತಿದಂತೆ ಕಡಿಮೆ ಕಡಿಮೆಯಾಗಹತ್ತಿತು. ಅವರ ಮೈ

ಬೆವತಿತು, ಧನಿಯು ನಡುಗಹತ್ತಿತು. ಹ್ಯಾಗಾದರೂ ಮಾಡಿ ಅವರು ಮಾತಾಡಿ ಕುಳಿತುಕೊಳ್ಳುವದರೊಳಗೆ, ತಾವು ಔದ್ಧತ್ಯದಿಂದ ಮಹಾಪುರುಷರ ಸಮ್ಮುಖದಲ್ಲಿ ಮಾತಾಡಿದ್ದರ ಪಶ್ಚಾತ್ತಾಪವು ಅವರಿಗೆ ಪೂರಾ ಆಗಿಹೋಯಿತು. ಶುದ್ಧವೈದಿಕ ಬ್ರಾಹ್ಮಣರಾದವರ ಸ್ವಭಾವದ ಸ್ವರೂಪವೇ ಹೀಗೆ. ಬ್ರಾಹ್ಮಣರು ಸಾಧಾರಣವಾಗಿ ಶೀಘ್ರ ಕೋಪಿಗಳೆಂಬುದೇನೋ ನಿಜ;ಆದರೆ ಅವರು ದೀರ್ಘದ್ವೇಷಿಗಳಲ್ಲ; ಆದ್ದರಿಂದ ಅವರಿಗೆ ಪಶ್ಚಾತ್ತಾಪವು ಕೂಡಲೇ ಆಗುವದು. ತಾವು ಹೀಗೆ ಆಚಾರ್ಯರ ಸಮಕ್ಷಮ ಸಭೆಯಲ್ಲಿ ಖಾನನಂಥ ಸನ್ಮಾನನೀಯ ಗೃಹಸ್ಥನ ಅವಮಾನಗೊಳಿಸಿದ್ದು ಅಯೋಗ್ಯವಾಯಿತೆಂಬ ಪಶ್ಚಾತ್ತಾಪದಿಂದ ಅವರು ಹಣ್ಣುಹಣ್ಣಾಗಿ ತಣ್ಣಗೆ ಕುಳಿತುಬಿಟ್ಟರು. ಅವರು ತಗ್ಗಿಸಿದ ಮೋರೆ ಯನ್ನು ಎಬ್ಬಿಸದಾದರು.ಆಗ ಸಭೆಯು ಸ್ತಬ್ಧವಾಯಿತು. ಕೆಲವರು ಭಟ್ಟರ ಸರಳತನದ ಸ್ಪಷ್ಟ ಮಾತಿಗಾಗಿ ಅವರನ್ನು ಮನಸ್ಸಿನಲ್ಲಿ ಹೊಗಳಿದರು. ಕೆಲವರು ಅವರ ವ್ಯವಹಾರಜ್ಞಾನದ ಶೂನ್ಯತೆಗಾಗಿ ಬೊಗಳಿದರು.ಭಟ್ಟರ ಗುಟ್ಟು ಆಚಾರ್ಯರಿಗೆ ಹೊಳೆದು ಹೋದದ್ದರಿಂದ ಅವರ ಗಂಭೀರ ಮುಖದಲ್ಲಿ ಮುಗುಳು ನಗೆಯು ಉತ್ಪನ್ನವಾಯಿತು. ಅವರು ತಮ್ಮನ್ನು ಆದರದಿಂದ ನೋಡುತ್ತ ಸುಮ್ಮನೆ ಕುಳಿತಿದ್ದ ಖಾನನ ಕಡೆಗೆ ನೋಡಿ ಮೃದುಹಾಸದ ಗಾಂಭೀರ್ಯದಿಂದ— "ಖಾನ ಸಾಹೇಬ, ನಮ್ಮ ವೈದಿಕ ಬ್ರಾಹ್ಮಣರ ದುಡುಕಿನ ಮಾತನ್ನು ನೀವು ಮನಸ್ಸಿಗೆ ಹಚ್ಚಿಕೊಳ್ಳುವ ಕಾರಣವಿಲ್ಲ, ನಮ್ಮ ದಕ್ಷಿಣಾಮೂರ್ತಿ ಭಟ್ಟರು ತಮ್ಮ ಕರ್ಮಠತನಕ್ಕೂ, ಸರಳ ಸ್ವಭಾವಕ್ಕೂ ಅನುಸರಿಸಿ ಮನಸ್ಸಿನಲ್ಲಿ ಬಂದದ್ದನ್ನು ತಟ್ಟನೆ ಆಡಿಬಿಟ್ಟಿದ್ದರಲ್ಲಿ ಶಿಷ್ಟಾಚಾರದ ಭಂಗವಾದರೂ, ಅವರ ಉದ್ದೇಶದಲ್ಲಿ ದೋಷವಿಲ್ಲ, ತಮ್ಮ ಬ್ರಾಹ್ಮಣ ಧರ್ಮಕ್ಕೆ ಭ್ರಷ್ಟತೆಯುಂಟಾಗಬಾರದೆಂದು ಅವರ ಉದ್ದೇಶವು ಅತ್ಯಂತ ಗ್ರಾಹ್ಯವಾಗಿರುತ್ತದೆ. ಹೇಳಿರಿ ಅಲ್ಲಾನು ಪ್ರೇರಿಸಿದ ಉತ್ತರವನ್ನು ದಕ್ಷಿಣಾಮೂರ್ತಿಭಟ್ಟರಿಗೆ ನೀವು ಹೇಳಿರಿ; ಯಾಕಂದರೆ ನಿಮ್ಮನ್ನು ಕುರಿತು ಅವರು ಮಾತಾಡಿರು ವದರಿಂದ, ಅವರಿಗೆ ನೀವು ಏನಾದರೂ ಉತ್ತರಹೇಳುವದು ಶಿಷ್ಟಾಚಾರಪ್ರಾಪ್ತವಿರುತ್ತದೆ. ಸಭಾಪತಿಯೆಂದು ನಿಮ್ಮೆಲ್ಲರಿಂದ ತಿಳಿಯಲ್ಪಟ್ಟಿರುವ ನಾನು, ಮಾತಾಡಲಿಕ್ಕೆ ನಿಮಗೆ ಅನುಮತಿ ಯನ್ನಿತ್ತಿರುವೆನು. ಮಾತಾಡಿರಿ, ಏನೂ ಸಂಕೋಚಪಡಬೇಡಿರಿ !

ಸ್ವಭಾವತಃ ಮುಸಲ್ಮಾನರು ಅತ್ಯಂತ ಪರಿತಪ್ತರು. ಅತ್ಯಂತ ಸ್ವಾಭಿಮಾನಿಗಳು. ಅವರಿಗೆ ಅಪಮಾನವು ಎಳ್ಳಷ್ಟೂ ಸಹನವಾಗುವದಿಲ್ಲ. ಒಂದು ಕಡತ ಎರಡು ತುಂಡೆಂಬ ಖಂಡತುಂಡ ಸ್ವಭಾವದ ಜನರವರು. ಅವರ ಧರ್ಮಶ್ರದ್ಧೆಯ ದೃಢತೆಯು ಬಲು ಬೆಲೆಯುಳ್ಳದ್ದು. ಇಂಥವರಲ್ಲಿ ಅಗ್ರೇಸರನಾಗಿರುವ ಕಾಶಿಮನ ಸ್ವಭಾವವು ಯಾವ ಪಡಿಕಟ್ಟಿನದರಿಬಹುದೆಂಬುದನ್ನು ನಾವೇನು ಹೇಳೋಣ? ಆದರೆ ಅಂಥ ಪ್ರಖರ ತೇಜಸ್ವಿಯಾದ ಖಾನನು ಮಹಾತ್ಮರಾದ ಮಾಧವಾಚಾರ್ಯರಂಥ ಶಾಂತಮೂರ್ತಿಯ ಅಲ್ಪಕಾಲದ ಸಹವಾಸದ ಪ್ರಭಾವದಿಂದ ತಾನೂ ಶಾಂತ ಸ್ವಭಾವದವನಾಗಿದ್ದುದು ಪರಮಾಶ್ಚರ್ಯವೇ ಸರಿ! ಹೀಗೆ ಕಾಶಿಮನ ಸ್ವಭಾವದ ರೂಪಾಂತರವಾಗುವದು ಯಾರಿಗೂ ಶಕ್ಯವಾಗಿ ತೋರಿದ್ದಿಲ್ಲ, ಖಾನನು ಆಚಾರ್ಯರ ಅಪ್ಪಣೆ ಯನ್ನು ಶಿರಸಾವಹಿಸಿ ಬ್ರಹ್ಮಸಭೆಯನ್ನುದ್ದೇಶಿಸಿ ವಿನಯದಿಂದ — ಸನ್ಮಾನ್ಯರೇ, ಕ್ಷಮಿಸಿರಿ; ಅಬ್ರಾಹ್ಮಣ್ಯವನ್ನುಂಟುಮಾಡಿ ನಿಮ್ಮೆಲ್ಲರ ದ್ರೋಹ ಕಟ್ಟಿಕೊಳ್ಳಬೇಕೆಂದಾಗಲಿ, ನಿಮ್ಮ ಉಪಮರ್ದ ಮಾಡಬೇಕೆಂದಾಗಲಿ ನಾನು ಸಭೆಗೆ ಬಂದವನಲ್ಲ, ನನಗೆ ಬೇಕಾದದ್ದು ಆಚಾರ್ಯರ

ದರ್ಶನ—ಅವರ ಸದ್ಬೋಧ ಶ್ರವಣ. ಅವುಗಳಲ್ಲಷ್ಟು ದೃಷ್ಟಿಯನ್ನಿಟ್ಟು ನಾನು ಸಭೆಗೆ ಬಂದುಬಿಟ್ಟೆನು. ಈಗ ನಿಮ್ಮ ಧಾರ್ಮಿಕ ಪ್ರವಚನವಿರುತ್ತದೆಂಬದನ್ನಾಗಲಿ, ನಾನು ಬರುವದರಿಂದ ಅದಕ್ಕೆ ಭಾಧೆ ಬರುತ್ತದೆಂಬದನ್ನಾಗಲಿ ನಾನು ಸರ್ವಥಾ ಅರಿತವನಲ್ಲ! ಬ್ರಾಹ್ಮಣೋತ್ತಮರೇ, ನಾನು ನೆಟ್ಟನ್ನ ಹಾದಿಯವನು, ನನ್ನ ಅಂತರಂಗವನ್ನು ತಿಳಿದುಕೊಂಡಿದ್ದ ಆಚಾರ್ಯರ ಅಪ್ಪಣೆಯಂತೆ ನಾನು ನಡೆದುಕೊಳ್ಳತಕ್ಕವನು. ಅವರು ಇಲ್ಲಿಂದ ಹೋಗ ಹೇಳದಿದ್ದರೆ, ನೀವು ಏನು ಮಾಡಿದರೂ ನಾನು ಹೋಗತಕ್ಕವನಲ್ಲ. ಮಹಾತ್ಮರ ಆಜ್ಞೆ ಪಾಲಿಸುವದಷ್ಟು ನನ್ನ ಕೆಲಸವು. ಅವರು ಉರಿಯಲ್ಲಿ ಹಾರೆಂದರೆ ನಾನು ಹಾರುವೆನು ! ನನಗೆ ಧರ್ಮಾಧರ್ಮದ ಮಾತು ಗೊತ್ತಿಲ್ಲ, ಗೊತ್ತಿದ್ದರೂ ಆಚಾರ್ಯರ ಅಪ್ಪಣೆಯ ಮುಂದೆ ಅವುಗಳಿಗೆ ನಾನು ಮಹತ್ವ ಕೊಡುವದಿಲ್ಲ. ಆಚಾರ್ಯರ ನುಡಿಯೇ ನನಗೆ ಧರ್ಮವು, ಅವರ ನಡೆಯೇ ನನಗೆ ಹಾದಿಯು ! ಎಂದು ನುಡಿದು ಕಾಸಿಮನು ಕುಳಿತುಕೊಂಡನು. ಆಚಾರ್ಯರ ವಿಷಯದ ಆತನ ಈ ಅತ್ಯಂತವಾದ ಶ್ರದ್ಧೆಯನ್ನು ನೋಡಿ — ''ನಮ್ಮ ಆಚಾರ್ಯರು ದೊಡ್ಡವರು, ಪೂಜ್ಯರು, ಧರ್ಮೋದ್ಧಾರಕರು'' ಎಂದು ಸ್ತುತಿಸುತ್ತ ಸಮೀಚೀನವಾಗಿ ಇಷ್ಟಿಯ ಮಿಷ್ಟಾನ್ನ ಭೋಜನ ಮಾಡುತ್ತಿದ್ದ ಬ್ರಾಹ್ಮಣರು ಮನಸ್ಸಿನಲ್ಲಿ ನಾಚಿರಬಹುದು. ತಟ್ಟನೆ ಕಟ್ಟಿಗೆ ಮುರಿದ ಹಾಗೆ ಸಭೆಯಲ್ಲಿ ಮಾತನಾಡಿದ ದಕ್ಷಿಣಾಮೂರ್ತಿ ಭಟ್ಟರಂತೂ ಬೆಪ್ಪಾಗಿ ಕುಳಿತುಕೊಂಡಿದ್ದರು. ಕಾಸಿಮಖಾನನು ಮಾತಾಡಿ ಕುಳಿತು ಕೊಳ್ಳಲು, ಆಚಾರ್ಯರ ಶಿಷ್ಯನಾದ ಕಾಶೀನಾಥಶರ್ಮ ನೆಂಬವನು ಎದ್ದುನಿಂತು ಕೈಜೋಡಿಸಿ ತಮ್ಮ ಗುರುಗಳನ್ನು ಕುರಿತು— ಭಗವನ್, ನಮ್ಮ ದಕ್ಷಿಣಾಮೂರ್ತಿ ಭಟ್ಟರ ಮಾತು ಅವರೊಬ್ಬರ ಮಾತೇ ಅಲ್ಲ, ನಮ್ಮೆಲ್ಲರ ಮಾತೂ ಇರುವದು. ಬರಬರುತ್ತ ನಮ್ಮ ಬ್ರಾಹ್ಮಣರಲ್ಲಿ ಉದಾತ್ತ ಭಾವವು ಕಡಿಮೆಯಾಗಹತ್ತಿ ಧರ್ಮದ ದುರಭಿಮಾನದ ಗಾಳಿಯು ಬಲವಾಗಿ ಬೀಸತೊಡಗಿರುವದು. ನಿಜವಾದ ಧರ್ಮ ಶಿಕ್ಷಣವು ಬ್ರಾಹ್ಮಣರಿಗೆ ದೊರೆಯುವದು ದಿನದಿನಕ್ಕೆ ಕಡಿಮೆಯಾಗತೊಡಗಿರು ವದರಿಂದ, ಧರ್ಮಾಧರ್ಮದ ವಿವೇಕವು ಕುಗ್ಗಿ ಹೋಗಿ ಅಂಧ ಪರಂಪರೆಯ ಆಢ್ಯತೆಯು ಹೆಚ್ಚತೊಡಗಿರುತ್ತದೆ. ಶ್ರುತಿ–ಸ್ಮೃತಿ–ಪುರಾಣಗಳ ಆಧಾರಕ್ಕಿಂತ ಶಿಷ್ಟಾಚಾರಕ್ಕೆ ಹೆಚ್ಚು ಗೌರವವು ಪ್ರಾಪ್ತವಾಗತೊಡಗಿರುತ್ತದೆ. ಶುದ್ಧಭಾವದ ಶ್ರುತ್ಯುಕ್ತಾಚರಣ ಶೀಲತ್ವವೇ ಶಿಷ್ಟರ ಲಕ್ಷಣವಾಗಿದ್ದರೂ, ಬಹುತರ ಈಗಿನ ಶಿಷ್ಟರು ಸದ್ಭಾವಕ್ಕಿಂತ ರುಕ್ಷಶಾಬ್ದಿಕ ಜ್ಞಾನಕ್ಕೆ, ರುಕ್ಷಶಾಬ್ದಿಕ ಜ್ಞಾನಕ್ಕಿಂತ ಸ್ವಾರ್ಥಪ್ರೇರಿತ ಕರ್ಮಕಲಾಪಕ್ಕೆ, ಸ್ವಾರ್ಥಪ್ರೇರಿತ ಕರ್ಮಕಲಾಪಕ್ಕಿಂತ ಮಡಿಮೈಲಿಗೆ ಮೊದಲಾದ ಬಾಹ್ಯಾಡಂಬರಕ್ಕೆ, ಅಂಥ ಬಾಹ್ಯಾಡಂಬರಕ್ಕಿಂತ ಶ್ವವೃತ್ತಿಯ ಲೋಕರಂಜನಕ್ಕೆ ಮೆಚ್ಚಿ ನಡೆಯತೊಡಗಿರುವರು ! ಸದಭಿಮಾನದಿಂದಲೋ ದುರಭಿಮಾನದಿಂದಲೋ ಅವರ ಲಕ್ಷ್ಯವು ಸಮತೆಗಿಂತ ವಿಷಮತೆಯ ಕಡೆಗೆ ಹೆಚ್ಚು ಹೆಚ್ಚು ಒಲಿಯಹತ್ತಿ ಅವರವರು ತಮ್ಮಲ್ಲಿ ಶ್ರೇಷ್ಠತ್ವವನ್ನು ಆರೋಪಿಸಿಕೊಂಡು ಅನ್ಯ ಜಾತಿಯವರಿಂದಷ್ಟೇ ಅಲ್ಲ, ತಮ್ಮ ಬ್ರಾಹ್ಮಣ ಜಾತಿಯಿಂದಲೂ ಏನೊಂದು ಕ್ಷುದ್ರ ಕಾರಣವನ್ನು ಮುಂದೆಮಾಡಿ ಒಬ್ಬರಿಂದೊಬ್ಬರು ಸಿಡಿದು ಆಚರಿಸತೊಡಗಿರುವರು ! ಹೀಗೆ ನಡೆಯುವದೇ ಶಿಷ್ಟಸಂಪ್ರದಾಯವಾಗಿ ಕುಳಿತಿರುವಾಗ ನಮ್ಮಂಥ ಅನುಕರಣಶೀಲರಾದ ಮಂದಮತಿಗಳ ವಿಚಾರಗಳು ಸಂಕುಚಿತವಾಗುವದರಲ್ಲಿ

ಆಶ್ಚರ್ಯವೇನು? ನಮ್ಮ ಪೂರ್ವಜರಾದ ಪ್ರಾಚೀನ ಋಷಿಗಳು ಜಗತ್ತಿನ ಕಲ್ಯಾಣಕ್ಕಾಗಿ ಸರ್ವಸಂಗ ಪರಿತ್ಯಾಗಮಾಡಿ ಪರೋಪಕಾರದಲ್ಲಿಯೇ ಆನಂದಬಡುತ್ತಿದ್ದದ್ದರಿಂದ ಲೋಕವು ಅಂಥವರ ಪುಣ್ಯದಿಂದ ಮೊದಲಿನಿಂದಲೂ ಬ್ರಾಹ್ಮಣರಿಗೆ ಶ್ರೇಷ್ಠತ್ವ ಕೊಡುತ್ತ ಬಂದಿರುವದು. ಇಂಥ ಪರೋಪಕಾರನಿರತರಾದ ಬ್ರಾಹ್ಮಣರ ಶ್ರೇಷ್ಠತ್ವವನ್ನು ಶ್ರುತಿ-ಸ್ಮೃತಿ-ಪುರಾಣಗಳು ಹೊಗಳಿದ್ದು ಆಶ್ಚರ್ಯವಲ್ಲ. ಆದರೆ ಬ್ರಾಹ್ಮಣರಾದ ನಾವು ಲೋಕಹಿತದ ಮಾತನ್ನು ಹಿಂದಕ್ಕಿಟ್ಟುಬಿಟ್ಟು ಜಗತ್ತಿನ ಗೊಡವೆಗೆ ಹೋಗದೆ, ನಮ್ಮ ಮನೆಯಲ್ಲಿ ನಾವು ಪ್ರಶಸ್ತವಾಗಿ ಕುಳಿತುಕೊಂಡು— ''ನಾವು ಶ್ರೇಷ್ಠ ವರ್ಣದವರು, ದೇವರ ಮುಖದಿಂದ ಹುಟ್ಟಿದವರು, ಯಾವತ್ತು ವರ್ಣಗಳ ಗುರುಗಳು'' ಎಂದು ವಿವೇಕವಿಲ್ಲದೆ ತಿಳಿದುಕೊಂಡು ಅದಕ್ಕೆ ವೇದಾದಿಗಳ ಆಧಾರ ಕೊಟ್ಟು ಕಲಹ ಬೆಳೆಸುತ್ತ ಲೋಕದ ವಿತುಷ್ಟತೆಗೆ ಪಾತ್ರರಾಗತೊಡಗಿರುವೆವು. ನಮಗೆ ಅಂಜಿಕೆ ಬಹಳ; ಲೋಕದ ಜನರ ಸಂಬಂಧವನ್ನರಿತುಕೊಂಡು ಅವರೊಡನೆ ಸಹಾನು ಭೂತಿಯಿಂದ ನಡೆದುಕೊಂಡರೆ ನಮಗೆ ಧರ್ಮದ ಹಾನಿಯಾದೀತೆಂಬ ಅಂಜಿಕೆ, ಲೋಕದ ಜನರ ಸಂಬಂಧವನ್ನು ಕಡಿದುಕೊಂಡು ಬಿಟ್ಟು ಬೇರೆಯಾಗಿ ಬಿಡೋಣವೆಂದರೆ ಧರ್ಮದ ಅಧಿಪತ್ಯವು ಹೋಗುವದೆಂಬ ಅಂಜಿಕೆ; ಹೀಗಾಗಿ ನಾವು ಏನು ಮಾಡಲಿಕ್ಕೂ ಧೈರ್ಯವಿಲ್ಲದ ಅಂಜುಬುರುಕರಾಗಿ ಹೋಗಿರುವೆವು ! ಇಂಥ ಅತಂತ್ರರಾದ ನಮ್ಮನ್ನು ಸಂಶಯವು ಆವರಿಸಿಬಿಟ್ಟಿದ್ದರಿಂದ ನಮಗೆ ಮಂದಿಯನ್ನು ಮುಟ್ಟಲಿಕ್ಕೆ ಸಂಶಯ, ಮಂದಿಯ ಕಿವಿಗೆ ಕೇಳುವಂತೆ ವೇದವೆನ್ನಲಿಕ್ಕೆ ಸಂಶಯ, ಲೋಕಹಿತಕ್ಕಾಗಿ ಹರಿಬಿದ್ದು ಪಾಠ-ಪ್ರವಚನ ನಡಸಲಿಕ್ಕೆ ಸಂಶಯ. ಹೀಗೆ ಎಲ್ಲಿ ಹೋದರೂ ನಮ್ಮ ಪಾಲಿಗೆ ಸಂಶಯವೇ ಸಂಶಯವಾಗಿ ಹೋಗಿ, ''ಸಂಶಯಾತ್ಮ ವಿನಶ್ಯತಿ'' ಎಂಬಂತೆ ನಾವು ನಾಶದ ಪಂಥವನ್ನು ಹಿಡಿದಿರುತ್ತೇವೆ ! ಸದ್ಗುರೋ, ನಮ್ಮ ಈ ಸ್ವರೂಪವನ್ನು ಮುಚ್ಚಿಕೊಂಡರೆ ರಾಷ್ಟ್ರೋದ್ಧಾರದ ಕಾರ್ಯಕ್ಕೆ ನಿಶ್ಚಯವಾಗಿ ಕಾಲದೊಡರಾಗುವದು. ನಿಜವಾದ ಧರ್ಮಜಾಗ್ರತಿಗಾಗಿಯೂ, ರಾಷ್ಟ್ರಜಾಗೃತಿಗಾಗಿಯೂ ನಿಮ್ಮ ಅವತಾರವಾಗಿರುವದೆಂದು ನಾವು ಸಂಪೂರ್ಣವಾಗಿ ನಂಬಿಕೊಂಡಿರುವೆವು; ಆದ್ದರಿಂದ ನಮ್ಮ ಅಜ್ಞಾನಮೂಲವಾದ ದುರಭಿಮಾನವನ್ನು ದೂರಮಾಡಿ ನಮಗೆ ಯೋಗ್ಯಮಾರ್ಗವನ್ನು ತೋರಿಸೋಣವಾಗಬೇಕು, ಎಂದು ಬೇಡಿಕೊಳ್ಳಲು, ಅದಕ್ಕೆ ಆಚಾರ್ಯರು— ಕಾಶೀನಾಥ, ನಿನ್ನ ಮಾತುಗಳು ನಿರರ್ಥಕವಾದವೆಂದು ನಾನು ಹೇಳುವದಿಲ್ಲ. ಈಗ ವೈದಿಕ ಧರ್ಮದವರೆನಿಸಿ ಕೊಳ್ಳುವವರು, ಅವರು ಯಾವ ಜಾತಿಯವರಿರಲಿ, ಯಾವ ಧರ್ಮದವರಿರಲಿ, ಯಾವ ಪಂಥದವರಿರಲಿ, ಜಾಗರೂಕರಾಗಿ ಉದ್ದೇಶವರಿತು ವಿವೇಕದಿಂದ ಆಚರಿಸಬೇಕಾಗಿದೆ; ಹೀಗೆ ಆಚರಿಸಲಿಕ್ಕೆ ಈಗ ಅನುಕೂಲಕಾಲವೂ ಒದಗಿಬಂದ ಹಾಗೆ ತೋರುತ್ತದೆ.; ಯಾಕಂದರೆ ಎಲ್ಲ ವೈದಿಕ ಧರ್ಮದವರೂ ಒಂದುಬಗೆಯ ಜಾಗೃತಿ ಪಡೆದು ತಮ್ಮ ಸ್ವರೂಪದ ಅವಲೋಕನ ಮಾಡಿಕೊಳ್ಳಹತ್ತಿದ್ದಾರೆ. ಅದಿರಲಿ, ಕಾಶೀನಾಥ, ಈಗ ಒಬ್ಬ ಮಹಾತ್ಮರು ತಮ್ಮ ಶಿಷ್ಯಸಮೇತರಾಗಿ ನಮ್ಮ ಈ ಮಹಾಸಭೆಗೆ ದಯಮಾಡಿಸುವರು, ಅವರ ಸಲುವಾಗಿ ಬೇಗನೆ ಆಸನವನ್ನು ಸಿದ್ಧಮಾಡು, ಎಂದು ಹೇಳಲು, ಅದನ್ನು ಕೇಳಿ ಸಭಿಕರು ಆಶ್ಚರ್ಯಮಗ್ನರಾಗಿ, ಈಗ ಯಾವ ಮಹಾತ್ಮರ ಆಗಮನವಾಗುತ್ತಿರಬಹುದೆಂದು ಆಲೋಚಿಸುತ್ತ, ಆಚಾರ್ಯರ ಭವಿಷ್ಯವಾದಕ್ಕಾಗಿ

ಭಕ್ತಿಯುತರಾಗುತ್ತ ಮಹಾತ್ಮರ ಬರವನ್ನು ಎದುರುನೋಡತೊಡಗಿದರು. ಆಗ ಶ್ರೇಷ್ಠವಾದ ಶಾಂತಿಯ ಸಂಪತ್ತೇ ಸಾಗಿಬರುವಂತೆ ಒಬ್ಬ ವೀರಶೈವ ಲಿಂಗಾಯತ ಮಹಾತ್ಮರು ತಮ್ಮ ಶಿಷ್ಯ-ಪರಿವಾರದೊಡನೆ ಆ ಮಹಾಸಭೆಗೆ ದಯಮಾಡಿಸಿದರು!!

## ಸಜ್ಜನ ಸಮುಚ್ಚಯ ಸಂಭ್ರಮ

ಆಚಾರ್ಯರ ಆಗಮನದ ವಿಷಯವಾಗಿಯೂ, ಅವರ ಭವಿಷ್ಯವಾದನದ ವಿಷಯವಾಗಿಯೂ ಸಭಿಕರೆಲ್ಲರು ಆ ಮಹಾನುಭಾವರ ಬರವನ್ನು ಎದುರು ನೋಡುತ್ತಿರುವಾಗ ಶ್ರೇಷ್ಠವಾದ ಶಾಂತಿಯ ಸಂಪತ್ತೇ ಸಾಗಿ ಬರುವಂತೆ ಒಬ್ಬ ವೀರಶೈವ ಮಹಾತ್ಮರು ತಮ್ಮ ಶಿಷ್ಯಪರಿವಾರದೊಡನೆ ಆ ಮಹಾಸಭೆಗೆ ದಯಮಾಡಿಸಿದರೆಂಬ ವಿಷಯವು ಈ ಮೊದಲಿನ ಪ್ರಕರಣವನ್ನು ಓದಿದವರಿಗೆ ಈ ಮೊದಲೇ ಗೊತ್ತಾಗಿ ಹೋಗಿದೆ. ಹೀಗೆ ತಮ್ಮ ಶಿಷ್ಯರಾದ ಭಕ್ತ-ಮಾಹೇಶ್ವರ ಪರಿವಾರದೊಡನೆ ಹಂಪೆಯ ಹಿರಿಯ ಮಠದ ವಿರೂಪಾಕ್ಷಾರ್ಯರು ಸಭೆಗೆ ದಯಮಾಡಿಸಿದಾಗ, ಮಾಧವಾಚಾರ್ಯರು ಆದರದಿಂದ ಪ್ರತ್ಯುತ್ಥಾನಮಾಡಿ ಮುಂದಕ್ಕೆ ಬಂದು- ''ದಯಮಾಡಿಸಬೇಕು, ಆರ್ಯವರ್ಯರು ಇತ್ತ ಪೀಠದ ಮೇಲೆ ದಯಮಾಡಿಸಬೇಕು'' ಎಂದು ಹಸ್ತಲಾಘವದಿಂದ ಪೀಠದ ಕಡೆಗೆ ಕರೆದೊಯ್ಯುತ್ತಿರಲು, ಸಭೆಯೊಳಗಿನ ಯಾವತ್ತು ಸ್ತ್ರೀ-ಪುರುಷರು ಎದ್ದುನಿಂತು ವಿರುಪಾಕ್ಷಾರ್ಯರನ್ನು ಭಕ್ತಿಯಿಂದ ಸತ್ಕರಿಸಿದರು. ಆಗ ಆ ಮಹಾಸಭಾರೂಪವಾದ ಆಕಾಶಮಂಡಲದಲ್ಲಿ ಇಬ್ಬರು ಸೂರ್ಯರ ಉದಯವಾದಂತಾಗಿ ಅದು ಪ್ರಕಾಶಮಾನವಾಯಿತು ! ಈ ಮೊದಲೇ ಸಭೆಯಲ್ಲಿ ಕುಳಿತುಕೊಂಡಿದ್ದ ಶೆಟ್ಟರೇ ಮೊದಲಾದ ವೀರಶೈವ ಭಕ್ತಪರಿವಾರವು ಆರ್ಯವರ್ಯರ ಪಾದವಂದನಕ್ಕಾಗಿ ಎದ್ದು ನಿಲ್ಲಲು, ವಿನಯ-ಸೌಜನ್ಯಗಳೇ ರೂಪುಗೊಂಡಂತೆ ಇದ್ದ ಮಹಾತ್ಮರಾದ ವಿರೂಪಾಕ್ಷವರ್ಯರು ಅವರನ್ನು ಕುರಿತು— ''ಶೆಟ್ಟರು, ಮಹಾಜನರು, ಬಣಕಾರರು, ಸಾವುಕಾರರು ಸರ್ವರೂ ಕುಳಿತುಕೊಳ್ಳಬೇಕು. ಆಚಾರ್ಯವರ್ಯರ ರಾಷ್ಟ್ರೋದ್ಧಾರದ ಕಾರ್ಯಕ್ಕಾಗಿ ಟೊಂಕಕಟ್ಟಿ ಸಹಾಯಮಾಡಲು ಬಂದ ನಿಮ್ಮನ್ನು ನೋಡಿ ನಮಗೆ ಬಹಳ ಸಂತೋಷವಾಗುತ್ತದೆ. ನಮ್ಮನ್ನು ಆಚಾರ್ಯರಿಂದ ಬೇರೆಯೆಂದು ನೀವು ತಿಳಿಯತಕ್ಕದ್ದಲ್ಲ. ನಾವು ಪ್ರಾಮುಖ್ಯವಾಗಿ ಮಾಡುವ ಲಿಂಗಪೂಜಾದಿ ಧಾರ್ಮಿಕ ಕಾರ್ಯಗಳೆಲ್ಲ ಆಚಾರ್ಯರ ಕಾರ್ಯಗಳು; ಅದರಂತೆ, ಆಚಾರ್ಯರು ಪ್ರಾಮುಖ್ಯವಾಗಿ ಮಾಡುತ್ತಿರುವ ಕರ್ನಾಟಕ ಸ್ವಾತಂತ್ರ್ಯಪ್ರಾಪ್ತಿ ರೂಪ ಲೋಕಕಲ್ಯಾಣಕಾರರ ರಾಷ್ಟ್ರೀಯ ಕಾರ್ಯಗಳೆಲ್ಲ ನಮ್ಮ ಕಾರ್ಯಗಳು ! ಈ ಮಾತನ್ನು ಮುಖ್ಯವಾಗಿ ನಿಮಗೂ ಈ ಮಹಾಸಭೆಗೂ ತಿಳಿಸುವದಕ್ಕಾಗಿಯೇ ಶಿವನು ಪ್ರೇರಿಸಲು ನಾವು ಬುದ್ಧಿಪೂರ್ವಕವಾಗಿ ಹಂಪೆಯಿಂದ ಬಂದಿರುವೆವು. ಆಚಾರ್ಯರು ಆರಂಭಿಸಿರುವ ರಾಷ್ಟ್ರೋದ್ಧಾರದ ಕಾರ್ಯವು ಸಾಮಾನ್ಯವಾದದ್ದಲ್ಲ. ಅದರಿಂದ ರಾಷ್ಟ್ರದ ಪ್ರಾಣಪ್ರತಿಷ್ಠಾಪನೆಯಾಗುವದು ! ಸ್ವಾತಂತ್ರ್ಯವು ಜೀವದ ಜೀವವಾಗಿರುತ್ತದೆ. ಜೀವಾತ್ಮನು ದೇಹದಿಂದ

ಹೊರಟುಹೋದರೆ ದೇಹಕ್ಕೆ ಶವತ್ವವು ಪ್ರಾಪ್ತವಾಗುವದಷ್ಟೆ? ಅದರಂತೆ ಜೀವಾತ್ಮನ ಈಶ್ವರದತ್ತ ಸ್ವಯಂಸಿದ್ಧ ಸ್ವಾತಂತ್ರ್ಯವು ನಷ್ಟವಾದರೆ ಜೀವಾತ್ಮನಿಗೆ ಶವತ್ವವು ಪ್ರಾಪ್ತವಾಗುತ್ತದೆ ! ಒಟ್ಟಿಗೆ ಸ್ವಾತಂತ್ರ್ಯ ವಿಹೀನವಾದ ವ್ಯಕ್ತಿಯೂ– ರಾಷ್ಟ್ರವೂ ಜೀವವಿದ್ದು ಮೃತಪ್ರಾಯಗಳೇ ಸರಿ ! ಅಂಥ ವ್ಯಕ್ತಿ–ರಾಷ್ಟ್ರಗಳನ್ನು ಜೀವನಮ್ಮೃತವೆಂದು ಕರೆಯತಕ್ಕದ್ದು ! ರಾಷ್ಟ್ರಕಾರ್ಯದಲ್ಲಿ ಆಚಾರ್ಯವರ್ಯರಂತೆ ಎಲ್ಲರೂ ಬೈಲಿಗೆ ನಿಲ್ಲುವದು, ಅದರಲ್ಲೂ ಮುಂದಾಳುಗಳಾಗಿ ಬೈಲಿಗೆ ನಿಲ್ಲುವದು ಶಕ್ಯವಲ್ಲ. ಮಹಾತ್ಮರಾದ ಆಚಾರ್ಯವರ್ಯರ ಯೋಗ್ಯತೆಯನ್ನು ಯಾರು ಎಣಿಸಬೇಕು? ಮಹಾಪಂಡಿತನಾದವನು, ಸ್ವಮತವನ್ನು ಸರಸವಾಗಿ ಪ್ರತಿಪಾದಿಸಿ ಅದನ್ನು ಪ್ರತಿಷ್ಠಾಪಿಸಬಹುದು; ಅದರಂತೆ ಘೋರ ತಪಸ್ವಿಯು ತನ್ನ ತಪಃಪ್ರಭಾವದಿಂದ ಅಣಿಮಾಡಿ ಅಷ್ಟಸಿದ್ಧಿಗಳನ್ನು ಸಾಧಿಸಬಹುದು, ಬೇಕಾದರೆ ಆತನು ಈಶ್ವರನನ್ನೂ ಒಲಿಸಿಕೊಳ್ಳಬಹುದು; ಹಾಗೆಯೇ ಉಜ್ವಲ ಕ್ಷಾತ್ರತೇಜಸ್ವಿಯು ತನ್ನ ಪ್ರಖರ ತೇಜಸ್ಸಿನಿಂದ ಶತ್ರುದಮನಮಾಡಿ ಸಾಮ್ರಾಜ್ಯ ಪ್ರತಿಷ್ಠಾಪನೆಯನ್ನು ಮಾಡಬಹುದು; ಇದೇ ಮೇರೆಗೆ ಸದ್ಗುರುಸೇವಾಧುರಂಧರನು ಸದ್ಗುರುವಿಗೆ ಶರಣುಹೋಗಿ ತನ್ನ ದಿವ್ಯವಾದ ಸೇವಾಸಂಭ್ರಮದಿಂದ ಸದ್ಗುರುವನ್ನು ಪ್ರಸನ್ನೀಕರಿಸಿಕೊಂಡು ತನ್ನಮಟ್ಟಿಗೆ ಮೋಕ್ಷಸಾಮ್ರಾಜ್ಯವನ್ನಾದರೂ ಸಂಪಾದಿಸಬಹುದು; ಆದರೆ ಆಚಾರ್ಯರಂತೆ ತಮ್ಮ ಅಗಾಧ ಪಾಂಡಿತ್ಯದಿಂದ ಸರ್ವಮತಗಳ ಅವಲೋಕನ ಮಾಡಿ, ಸರ್ವಮತಗಳ ಸನಾತನತ್ವವನ್ನು ಕಂಡುಹಿಡಿದು ತದ್ವಾರಾ ಲೋಕಕಲ್ಯಾಣವನ್ನು ಮಾಡುವದೂ, ತಮ್ಮ ಅತ್ಯುಗ್ರದ ತಪಶ್ಚರ್ಯದಿಂದ ಶ್ರೀ ಭುವನೇಶ್ವರಿಯನ್ನು ಒಲಿಸಿಕೊಂಡು ಆ ಭಗವತಿಯಿಂದ ಗುಪ್ತನಿಧಿಪ್ರಾಪ್ತಿಯ ಹಾಗು ಸುವರ್ಣವೃಷ್ಟಿಯ ಅಭಿವಚನವನ್ನು ಪಡೆದು ತದ್ವಾರಾ ರಾಷ್ಟ್ರವನ್ನು ಉದ್ಧರಿಸುವದೂ ತಮ್ಮ ಉಜ್ವಲ ಬ್ರಹ್ಮತೇಜಸ್ಸಿನಿಂದ ಹುಕ್ಕದೊರೆಯಂಥ ಪ್ರತಾಪಿಯ ಕ್ಷಾತ್ರತೇಜಸ್ಸನ್ನು ಲೋಕಕಲ್ಯಾಣಕಾರಕವಾಗಿ ಮಾಡಿ ಸಾಮ್ರಾಜ್ಯವನ್ನು ಸ್ಥಾಪಿಸುವದೂ ಸರ್ವಜ್ಞ ವಿಷ್ಣುಶರ್ಮರಂಥ ತಮ್ಮ ಸದ್ಗುರುಗಳ ಕೃಪೆಯಿಂದ ತಾವು ಮೋಕ್ಷ ಸಾಮ್ರಾಜ್ಯವನ್ನು ಸೂರೆಗೊಳ್ಳಲಿಕ್ಕೆ ಸಮರ್ಥರಾಗಿದ್ದರೂ ಅದಕ್ಕೆ ಮನಸ್ಸು ಮಾಡದೆ, ಪತಿತ ಕರ್ನಾಟಕದ ಉದ್ಧಾರಕ್ಕಾಗಿ ತಾವೂ ಪತಿತರಾಗಿ ಪರಿಣಮಿಸಿ ತಮ್ಮ ಅಗಾಧವಾದ ಕರುಣಾಶಾಲಿತ್ವವನ್ನು ಜಗತ್ತಿಗೆ ತೋರಿಸುವದೂ ಘನತರವಾದ ಯೋಗ್ಯತೆಯು ಈ ಮಾಧವಾಚಾರ್ಯರಲ್ಲಿಯಲ್ಲದೆ ಅನ್ಯರಲ್ಲಿ ಹ್ಯಾಗೆ ಕಂಡುಬಂದೀತು? ಹೀಗೆ ಮಾಧವಕರುಣಾ ವಿಲಾಸವು ಕರ್ನಾಟಕದ ಉದ್ಧಾರಕ್ಕೆ ಕಾರಣವಾಗುತ್ತಿರುವದು ಕರ್ನಾಟಕದ ಭಾಗ್ಯವೇ ಸರಿ ! ಇದರ ಅಭಿಮಾನವು ಕರ್ನಾಟಕಸ್ಥ ವೈದಿಕರೆನಿಸುವ ನಮ್ಮೆಲ್ಲರಿಗೂ ವಿಶೇಷವಾಗಿ ಇದ್ದೇ ತೀರಬೇಕು ! ರಾಷ್ಟ್ರದ ಪುಣ್ಯದಿಂದ ಅಕಸ್ಮಾತ್ತಾಗಿ ಇಂಥ ವಿಭೂತಿಗಳ ಉದಯವಾಗುತ್ತದಲ್ಲದೆ, ಅನಾಯಾಸವಾಗಿ ಮೇಲೆ ಮೇಲೆ ಇಂಥ ಮಹಾತ್ಮರ ಯೋಗವು ರಾಷ್ಟ್ರಕ್ಕೆ ಆಗುತ್ತಿರುವದಿಲ್ಲ; ಆದ್ದರಿಂದ ''ಗಾಳಿಬಿಟ್ಟ ಕೈಯಲ್ಲಿ ತೂರಿಕೊಳ್ಳೆ''ಂಬ ಬೋಧದಂತೆ, ಈಗ ನಾವೆಲ್ಲರೂ ಒಕ್ಕಟ್ಟಿನಿಂದ ಈ ರಾಷ್ಟ್ರೋದ್ಧಾರಕ ಮಹಾತ್ಮರನ್ನು ಅನುಸರಿಸಿ ನಡೆದು ನಮ್ಮ ಉದ್ಧಾರವನ್ನು ಮಾಡಿಕೊಳ್ಳತಕ್ಕದ್ದು. ಪ್ರಿಯ ಕನ್ನಡಿಗರೇ, ನೀವೂ ನಾವೂ ಜಾತಿಯಿಂದ, ಧರ್ಮದಿಂದ, ಪಂಥದಿಂದ ಯಾರೇ ಇರಲಿ, ನಮ್ಮೆಲ್ಲರ ಆ ಜಾತಿ–ಧರ್ಮ–ಪಂಥಾದಿಗಳ ರಹಸ್ಯವು ಒಂದೇ ಇದ್ದು, ನಾವೆಲ್ಲರೂ ಒಬ್ಬ ಕರ್ನಾಟಕ

ಭೂಮಾತೆಯ ಉದರದಿಂದ ಜನಿಸಿ, ಆಕೆ ಕೊಡುತ್ತಿರುವ ಅನ್ನ–ನೀರುಗಳಿಂದ ಪೋಷಿಸಲ್ಪಡು ತ್ತಿರುವವರಾಗಿ, ಕರ್ನಾಟಕವೆಂಬ ಒಂದೇ ಒಂದಾದ ಮನೆಯಲ್ಲಿ ವಾಸಿಸುತ್ತಿರುವದ ರಿಂದ ನಾವೆಲ್ಲರೂ ಪರಸ್ಪರ ಬಂಧುಗಳಾಗಿರುವೆವು. ನಾವು ವಿಭಕ್ತರಾಗಿರುವದಕ್ಕಿಂತ ಅವಿಭಕ್ತರಾಗಿರುವದು ನಮ್ಮ ತೇಜೋಭಿವೃದ್ಧಿಗೆ ಕಾರಣವಲ್ಲವೇ? ಒಂದು ವಿಧದಿಂದ ಜಾತಿ–ಧರ್ಮ–ಪಂಥಾದಿಗಳ ಭಿನ್ನತ್ವದಿಂದ ನಾವು ಈ ಕೈಬೆರಳುಗಳಂತೆ ವಿಭಕ್ತರಾಗಿದ್ದರೂ, ರಾಷ್ಟ್ರಕಾರ್ಯದಲ್ಲಿ ನಾವೆಲ್ಲರೂ ಈ ಒಟ್ಟುಗೂಡಿದ ಬೆರಳಿನ ಹಸ್ತದಂತೆ ಬಹು ಬಲಶಾಲಿ ಗಳಾಗತಕ್ಕದ್ದು! ಪ್ರಿಯ ದೇಶಬಾಂಧವರೇ, ದೇಶಬಾಂಧವ್ಯದ ದೃಷ್ಟಿಯಿಂದ ನಮಗೂ ನಿಮಗೂ ಎಂದಿಗೂ ಬಿಡುಗಡೆಯಾಗುವಹಾಗಿಲ್ಲ, ನಮ್ಮ ನಿಮ್ಮ ಆ ಸಂಬಂಧವು ಲಿಂಗಕ್ಕೂ ವಸ್ತ್ರಕ್ಕೂ ಗಂಟು ಇದ್ದಹಾಗೆ ಇರುತ್ತದೆ ! ಈ ದೇಶಬಾಂಧವ್ಯವು ಅತ್ಯಂತ ಶ್ರೇಷ್ಠವೂ, ವ್ಯಾಪಕವೂ, ಅಪರಿಹಾರ್ಯವೂ ಆದದ್ದಿರುತ್ತದೆ. ಇದರೊಳಗೆ ಧರ್ಮಬಾಂಧವ್ಯ,ವ್ಯವಸಾಯ ಬಾಂಧವ್ಯ, ರಕ್ತಬಾಂಧವ್ಯ ಮೊದಲಾದ ಗೌಣ ಬಾಂಧವ್ಯಗಳು ಅಂತರ್ಭೂತವಾಗುತ್ತವೆ ! ದೇಶಬಾಂಧವ್ಯವು ಮನೆಯಿದ್ದಹಾಗೆ, ಉಳಿದ ಬಾಂಧವ್ಯಗಳು ಆ ಮನೆಯೊಳಗಿನ ಒಡವೆಗಳಿದ್ದ ಹಾಗೆ ! ರಾಷ್ಟ್ರೀಯ ಬಾಂಧವ್ಯವನ್ನು ಮರೆತು ರಾಷ್ಟ್ರ ಹಿತತತ್ಪರತೆಯನ್ನು ಕಳಕೊಳ್ಳುವವರ ಉಳಿದ ಗೌಣಬಾಂಧವ್ಯಗಳೆಲ್ಲ ನಿಶ್ಚಯವಾಗಿ ಶಿಥಿಲವಾಗುವವು. ಪ್ರಿಯ ಬಂಧುಗಳೇ, ಮನೆಗೆ ಬೆಂಕಿ ಹತ್ತಿ ಮನೆಗೆ ಮನೆಯೇ ಸುಟ್ಟು ಬೂದಿಯಾಗದೇ ಉಳಿಯಬಹುದೇ ? ಅದರಂತೆ, ನಮ್ಮ ದೇಶಬಾಂಧವ್ಯದ ಪಾರ ತಂತ್ರ್ಯದ ಪ್ರಖರವಾದ ಅಗ್ನಿಯಿಂದ ಸುಡುತ್ತಿರುವಾಗ ''ನಾವು ಈ ಜಾತಿಯವರು–ಅವರು ಆ ಜಾತಿಯವರು, ನಾವು ಈ ಪಂಥದವರು–ಅವರು ಆ ಪಂಥದವರು, ನಾವು ವೈದಿಕರು –ಅವರು ಅವೈದಿಕರು, ನಾವು ಬ್ರಾಹ್ಮಣರು–ಅವರು ಬ್ರಾಹ್ಮಣೇತರರು, ನಾವು ಈ ಪಕ್ಷದವರು–ಅವರು ಆ ಪಕ್ಷದವರು ''ಇತ್ಯಾದಿ ಏಕದೇಶೀಯ ವಿಚಾರಗಳಿಂದ ಅವಿವೇಕಿಗಳಾಗಿ ಬಡಿದಾಡಹತ್ತಿ ಒಬ್ಬರಿಂದೊಬ್ಬರು ಸಿಡಿದು ಹೋದರೆ, ನಾವೆಲ್ಲರೂ ಸುಟ್ಟು ಹೋಗದೇ ಬಿಟ್ಟೇವೆ ? ಸಾಕು, ಇದಕ್ಕೂ ಹೆಚ್ಚು ನಾವು ಹೇಳುವದಿಲ್ಲ; ಹೇಳುವದು ನಮ್ಮ ಕೆಲಸವೂ ಅಲ್ಲ; ಹೆಚ್ಚು ಹೇಳಬೇಕೆಂದು ನಾವು ಇಲ್ಲಿಗೆ ಬಂದಿರುವದೂ ಇಲ್ಲ. ನಾವು ಬಂದದ್ದು ದೇಶೋದ್ಧಾರಕರವಾದ ಆಚಾರ್ಯರ ದರ್ಶನಕ್ಕೆ ಹಾಗು ಅವರ ಲೋಕಸಂಗ್ರಹದ ವೈಭವವನ್ನು ನೋಡಿ ಆನಂದಪಡುವದಕ್ಕೆ ! ಪ್ರೀಯ ಕನ್ನಡಿಗರೇ, ನಮ್ಮ ಆಚಾರ್ಯರು ನಮ್ಮ ಸರಳ ಮನಸ್ಸಿನ ದಕ್ಷಿಣಾಮೂರ್ತಿಭಟ್ಟರ ಅಸಮಾಧಾನವನ್ನು ದೂರಮಾಡಿ, ಕಾಸಿಮಖಾನರಂಥ ಯವನವೀರನನ್ನು ಅಭಿನಂದಿಸಿ, ಕಾಶೀನಾಥಶರ್ಮರ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಹೇಳಿ ಸಮತೆಯ ಸೊಗಸಿನಿಂದ ಲೋಕಸಂಗ್ರಹವನ್ನು ಹ್ಯಾಗೆ ಮಾಡುವರೆಂಬದನ್ನು ನಾವೂ ನೀವೂ ನೋಡಿ, ಅವರು ಆರಂಭಿಸಿರುವ ರಾಷ್ಟ್ರೋದ್ಧಾರದ ಕಾರ್ಯಕ್ಕಾಗಿ ನಮ್ಮನ್ನು ಅವರಿಗೆ ಒಪ್ಪಿಸಿಬಿಡೋಣ; ಅಂದರೆ ಶಿವನು ಎಲ್ಲವನ್ನೂ ನಡಿಸಿಕೊಡುವನು !''

ಈ ಮೇರೆಗೆ ಮಹಾತ್ಮರಾದ ವಿರುಪಾಕ್ಷಾರ್ಯರು ಅಸ್ಖಲಿತ ಭಾಷಣ ಮಾಡುವಾಗ, ಮಾಧವಾಚಾರ್ಯರ ಕಣ್ಣುಗಳೊಳಗಿಂದ ಆನಂದಬಾಷ್ಪಗಳು ಉದುರುತ್ತಿರಲು, ಅವರು

ಆನಂದಾತಿಶಯದಿಂದ ತಲೆದೂಗುತ್ತ ಆಗಾಗ್ಗೆ ಆರ್ಯವರ್ಯರ ಕಡೆಗೆ ನೋಡಿ ವಿನಯದಿಂದ ಅಭಿನಂದಿಸುತ್ತಿದ್ದರು. ಅತ್ತ ಸಭೆಯಲ್ಲಿ ನಿಂತವರು ಉಲುಕಾಡದೆ ನಿಂತಲ್ಲಿ ನಿಂತುಬಿಟ್ಟಿದ್ದರು; ಕುಳಿತವರು ಕದಲದೆ ಕುಳಿತಲ್ಲಿ ಕುಳಿತುಬಿಟ್ಟಿದ್ದರು. ಹೆಣ್ಣುಮಕ್ಕಳ ಉಕ್ಕಿಬಂದಿದ್ದ ರಾಷ್ಟ್ರೀಯ ಭಾವನೆಯ ಸೌಭಾಗ್ಯದ ಸೊಬಗನ್ನಂತು ಬಣ್ಣಿಸಲು ಸಾಧ್ಯವಿದ್ದಿಲ್ಲ; ಅವರು ಪೂಜ್ಯಬುದ್ಧಿಯ ಆದರದಿಂದ ವಿರೂಪಾಕ್ಷಾರ್ಯರನ್ನು ಎವೆಯಿಕ್ಕದೆ ನೋಡುತ್ತಲಿದ್ದರು ! ಆಗ ರಾಷ್ಟ್ರೀಯ ಭಾವನೆಯ ಉಜ್ವಲ ತೇಜಸ್ಸಿನಿಂದ ದೇದೀಪ್ಯಮಾನರಾದ ವಿರೂಪಾಕ್ಷಾರ್ಯರ ದಿವ್ಯ ಮೂರ್ತಿಯು ದರ್ಶನೀಯವಾಗಿತ್ತು, ಆರ್ಯವರ್ಯರು ಈ ಮೊದಲೇ ಜರಗಿಹೋಗಿದ್ದ ದಕ್ಷಿಣಾಮೂರ್ತಿಭಟ್ಟರ ಪ್ರಸಕ್ತಿಯನ್ನೂ, ಕಾಸಿಮಾಖಾನರ ವಿಷಯವನ್ನೂ ಕಾಶೀನಾಥಶರ್ಮರ ಶಂಕೆಗಳನ್ನೂ ಕಣ್ಣುಮುಟ್ಟ ನೋಡಿ ಕಿವಿಮುಟ್ಟಿ ಕೇಳಿದವರಂತೆ ಒಡನುಡಿದದ್ದನ್ನು ಕೇಳಿಯಂತೂ ಸಭೆಗೆ ಸಭೆಯೇ ದಂಗುಬಡೆದು ಹೋಯಿತು. ಹೀಗೆ ಮಹಾತ್ಮರಾದವರ ಭವಿಷ್ಯವಾದನಾದಿ ಅಲೌಕಿಕ ಶಕ್ತಿಗಳಿಂದ ಲೋಕಸಂಗ್ರಹವು ತಟ್ಟನೆ ಆಗಿಹೋಗುತ್ತದೆ! ಯಾವ ಧರ್ಮದಲ್ಲಿಯೇನು, ಯಾವ ಜಾತಿಯಲ್ಲೇನು, ಯಾವ ಪಂಥದಲ್ಲಿಯೇನು ಮಹಾಪುರುಷರು ಇದ್ದೇ ಇರುವರೆಂತಲೂ, ಆಯಾ ಧರ್ಮ ಮಹಾಪುರುಷರಲ್ಲಿ ಪರಸ್ಪರ ದ್ವೇಷಾಸೂಯಾದಿಗಳು ಸರ್ವಥಾ ಇರುವದಿಲ್ಲ ವೆಂತಲೂ ಜನರು ಅನುಭವದಿಂದ ಕಂಡುಕೊಂಡರು. ಮಹಾತ್ಮರಾದ ವಿರೂಪಾಕ್ಷಾರ್ಯರ ಗೌರವದ ನಿರೂಪಣದಿಂದ ಸಭಿಕರ ಧರ್ಮದ ದುರಭಿಮಾನವು ದೂರವಾಯಿತು; ಸ್ವಾರ್ಥದ ಸವಿಯು ಕೆಟ್ಟಿತು; ಸೌಜನ್ಯದ ಸೌಭಾಗ್ಯವು ಸೂರೆಯಾಯಿತು ! ಆದ್ದರಿಂದ ಆ ಸಭೆಯಲ್ಲಿ ನೆರೆದಿದ್ದ ಎಲ್ಲ ಧರ್ಮದವರಲ್ಲಿಯೂ ಸ್ವಧರ್ಮನಿಷ್ಠೆ–ಪರಧರ್ಮ ಸಹಿಷ್ಣುತೆಗಳು ಉತ್ಪನ್ನವಾಗಿ ಅವರು ನಿಜವಾದ ಧಾರ್ಮಿಕ ಶಾಂತಿಯನ್ನು ಪಡೆದರು. ಒಟ್ಟಿಗೆ ಸತ್ಸಮಾಗಮದ ಸಂಭ್ರಮ ದಲ್ಲಿ ಸದ್ಬೋಧದ ಸುವರ್ಣವೃಷ್ಟಿಯಾಗಲು ಎಲ್ಲರೂ ಸುಗುಣ ಸುವರ್ಣಭೂಷಣಗಳಿಂದ ಭೂಷಿತರಾದರು! ಈ ಚಂದವನ್ನು ನೋಡಿ ಆಚಾರ್ಯ ವರ್ಯರೂ, ಆರ್ಯವರ್ಯರೂ ಸಂತೋಷಪಟ್ಟು, ಈ ಸುಯೋಗವು ಒದಗಿದ್ದಕ್ಕಾಗಿ ಮನಸ್ಸಿನಲ್ಲಿಯೇ ಒಬ್ಬರನ್ನೊಬ್ಬರು ಅಭಿನಂದಿಸಿದರು. ಹೀಗೆ ಸುಪ್ರಸಂಗಗಳ ಸುಳಿಗಾಳಿಯ ಸೊಗಸಿನಿಂದ ಎಲ್ಲರೂ ಕ್ಷಣಮಾತ್ರ ಮೌನವಾಗಿರಲು, ಆ ಮಹಾಸಭೆಯು ತನ್ನ ಜ್ಞಾನದೃಷ್ಟಿಯಿಂದ ಮುಂದಿನ ಮಾರ್ಗವನ್ನು ಕಂಡುಹಿಡಿಯುತ್ತಿರುವಂತೆ ತೋರಿತು. ಅಷ್ಟರಲ್ಲಿ ಮಾಧವಾಚಾರ್ಯರು ವಿರೂಪಾಕ್ಷಾರ್ಯ ರನ್ನು ಕುರಿತು–

ಮಾಧವಾಚಾರ್ಯ–ಮಹಾತ್ಮನ್, ಆರ್ಯವರ, ಕರ್ನಾಟಕದ ಮೇಲೆ ಇಂದು ಪರಮಾನು ಗ್ರಹವಾಯಿತಲ್ಲ!

ವಿರೂಪಾಕ್ಷಾರ್ಯ–ನಿಮ್ಮಂಥ ರಾಷ್ಟ್ರೋದ್ಧಾರಕರಾದ ಭಾಗ್ಯಶಾಲಿ ಮಹಾತ್ಮರ ಉದಯವು ಕರ್ನಾಟಕದಲ್ಲಿ ಆದ ದಿವಸವೇ ಕರ್ನಾಟಕವು ಅನುಗ್ರಹೀತವಾಗಿರುವದು ! ಮಾಧವಾಚಾರ್ಯ, ಇದಕ್ಕಿಂತ ನಾನು ಹೆಚ್ಚಿಗೆ ಹೇಳಲಾರೆನು.

ಮಾಧವಾಚಾರ್ಯ–ಲೋಕಕಲ್ಯಾಣವೇ ಕುಲವ್ರತವಾಗಿರುವ ಮಹಾಪುರುಷರನ್ನು ಗೌರವೋಕ್ತಿಗಳಿಂದ ಗೌರವಪಡಿಸುವದು ಯಾರ ಯೋಗ್ಯತೆಯು ! ನಿರಿಚ್ಛರಾಗಿದ್ದ ಅಂಥ

ಮಹಾತ್ಮರಿಗೆ ಅಂಥ ಶಾಬ್ದಿಕ ಗೌರವದಿಂದ ಪ್ರಯೋಜನವಾದರೂ ಏನಾಗುವದು ? ಪುಣ್ಯವಂತರಾದ ಸಭಾಸದರೇ, ಈಶ್ವರನಂತೆ ಅನಿಮಿತ್ತ ಬಂಧುಗಳಾಗಿ ಹಂಪೆಯ ಹಿರಿಯ ಮಠದಿಂದ ಕಂಪಲಿಯ ಈ ಪರ್ಣಕುಟೀರಕ್ಕೆ ಬಂದು ನಮ್ಮೆಲ್ಲರನ್ನು ಬೋಧಿಸಿ ಕೃತಾರ್ಥರಾಗ ಮಾಡಿದ್ದರ ಭಾರವು ಆ ಬೋಧದಂತೆ ನಾವೂ ನೀವೂ ಆಚರಿಸುವವರೆಗೆ ಹ್ಯಾಗೆ ಇಳಿಯುವದು ಹೇಳಿರಿ? ಆದ್ದರಿಂದ ದೊಡ್ಡವರ ಬೋಧದಂತೆ ಆಚರಿಸಿ ನಾವೆಲ್ಲರೂ ಈಶ್ವರಾನುಗ್ರಹಕ್ಕೆ ಪಾತ್ರರಾಗತಕ್ಕದ್ದು. ದೊಡ್ಡವರ ಬೋಧದ ಶ್ರವಣಕ್ಕಿಂತಲೂ ಅದರಂತೆ ನಡೆಯುವದು ಮಹತ್ವದ್ದಾಗಿರುವದು. ನಡೆಯುವ ನಿಶ್ಚಯವಿರದೆ ಬರಿಯ ಸದ್ಬೋಧ ಶ್ರವಣ ಮಾಡುವದು ವೃಥಾಯಾಸವಾಗುವ ಸಂಭವವಿರುತ್ತದೆ. ಈಗ ನಮ್ಮ ರಾಷ್ಟ್ರೀಯ ಸ್ವಾತಂತ್ರ್ಯವು ನಷ್ಟವಾಗಿರುವದರಿಂದ ನಾವೆಲ್ಲರೂ ಮೃತಾಶೌಚದಲ್ಲಿರುವೆವೆಂಬದನ್ನು ಆರ್ಯರು ಸೂಚಿಸಿ ದರಷ್ಟೇ? ಮೃತಾಶೌಚವನ್ನು ಮನಃಪೂರ್ವಕವಾಗಿ ಪಾಲಿಸುವ ದ್ವಿಜರೆನಿಸುವ ಬ್ರಾಹ್ಮಣ-ಕ್ಷತ್ರಿಯ-ವೈಶ್ಯರಂತೂ ಪೂರಾ ವಿಚಾರದಲ್ಲಿ ತಂದುಕೊಳ್ಳಬೇಕು. ಹೀಗೆ ಮೃತಾಶೌಚ ದಲ್ಲಿರುವ ನಮಗೆ ಒಂದು ಬಗೆಯಿಂದ ವೈದಿಕಧರ್ಮಕಾರ್ಯವನ್ನು ಮಾಡಲಿಕ್ಕೆ ಅಧಿಕಾರವೇ ಇಲ್ಲೆಂದು ಹೇಳಬೇಕಾಗುತ್ತದೆ; ಆದ್ದರಿಂದಲೇ ಅನಧಿಕಾರಿಗಳಾದ ನಾವು ಮಾಡುವ ಯಾವ ವೈದಿಕ ಕರ್ಮವೂ ಶ್ರೇಯಸ್ಕರವಾಗಿ ಪರಿಣಮಿಸುವದಿಲ್ಲೆಂದು ಒಟ್ಟಿನ ಮೇಲೆ ಹೇಳಬೇಕಾಗುವದು! ಸಜ್ಜನರೇ, ಇಂಥ ರಾಜಕೀಯ ಪಾರತಂತ್ರ್ಯದಲ್ಲಿಯೂ ಅಬಾಧಿತರಾಗಿ ಸ್ವತಂತ್ರರಾಗಿಯೇ ಇರುವ ಶೋಕವಿದೂರರರೂ ಸ್ವಸ್ವರೂಪಜ್ಞಾನಿಗಳೂ ಆದ ಮಹಾತ್ಮರ ವೈದಿಕಕರ್ಮದ ಸಫಲತೆಯ ಮಾತು ನಾನು ಇದರಲ್ಲಿ ಬೆರೆಸಿರುವದಿಲ್ಲ; ಆದರೆ ರಾಷ್ಟ್ರೀಯ ಪಾರತಂತ್ರ್ಯವು ಬಾಧಿಸುತ್ತಿರುವವರೆಲ್ಲರೂ—ಅವರು ದ್ವಿಜರೇ ಇರಲಿ—ಬೇರೆಯವರೇ ಇರಲಿ, ಅವರೆಲ್ಲರನ್ನು ದೇಶಬಾಂಧವ್ಯದ ಸಂಬಂಧದಿಂದ ರಾಷ್ಟ್ರೀಯವಾದ ಈ ಮೃತಾಶೌಚವು ಅಂಟಿಕೊಳ್ಳದೆ ಇರದು; ಯಾಕಂದರೆ ಸ್ವಾತಂತ್ರ್ಯಹಾನಿಯ ದುಃಖವು ನಮ್ಮೆಲ್ಲರಿಗೂ ಸಮನಾಗಿಯೇ ಲಾಂಛನಾಸ್ಪದ ವಾಗಿರುತ್ತದೆ. ಪ್ರಿಯ ಬಂಧುಗಳೇ, ಈ ದುಃಖವೇ ಅಶೌಚವೆಂಬದನ್ನು ಚೆನ್ನಾಗಿ ಲಕ್ಷ್ಯದಲ್ಲಿಡಿರಿ. ಹೀಗೆ ಸಾಮಾನ್ಯವಾಗಿ ಶೋಕರೂಪ ಅಶೌಚಗ್ರಸ್ಥರಾಗಿರುವ ನಮ್ಮ ನಿಮ್ಮ ಯಾವ ಧರ್ಮಕಾರ್ಯಗಳು ಶ್ರೇಯಸ್ಕರವಾದಾವು ನೀವೆ ಹೇಳಿರಿ? ನಮ್ಮ ಮನೆಯಲ್ಲಿ ನಾವು ಸ್ವತಂತ್ರದಿಂದ ಇದ್ದೇವೆಂದರೆ ರಾಜಕೀಯ ಪಾರತಂತ್ರ್ಯದ ತಾಪವು ಇರಗೊಡದಂಥ ಕಾಲವು ಒದಗಿರುವಾಗ ಸರ್ವಸಾಮಾನ್ಯವಾಗಿ ನಮ್ಮ ನಮ್ಮ ಧರ್ಮಗಳನ್ನು ಪಾಲಿಸಲು ದೇಶಕ್ಕೆ ಆಸ್ಪದವೆಲ್ಲಿ ಉಳಿದಿರುವದು ? ಪಾರಮಾರ್ಥಿಕ ಧರ್ಮಸಾಧನಕ್ಕೆ ಐಹಿಕ ವ್ಯವಹಾರದ ತೃಪ್ತಿಯು ಬೇಕು. ಐಹಿಕ ವ್ಯವಹಾರದ ತೃಪ್ತಿಗೆ ರಾಜಕೀಯ ಸ್ವಾತಂತ್ರ್ಯವು ಬೇಕು. ಒಟ್ಟಿಗೆ ನಮಗೆ ಧಾರ್ಮಿಕ ಸ್ವಾತಂತ್ರ್ಯವಿರುವದಕ್ಕಿಂತ ಮೊದಲು ರಾಜಕೀಯ ಸ್ವಾತಂತ್ರ್ಯವಿರಬೇಕಾಗುತ್ತದೆ. ರಾಜಕೀಯ ಸ್ವಾತಂತ್ರ್ಯವೆಂದರೆ – ''ಸ್ವಧರ್ಮತಃ ತಾನು ತಾನಾಗಿಯೇ ಉಳಿದು ತನ್ನ ವಿತ್ತಜೀವಿತಗಳ ಸಂರಕ್ಷಣ ವಿನಿಯೋಗಗಳು ತನ್ನ ಧರ್ಮದ ಸನಾತನತ್ವವನ್ನವಲಂಬಿಸಿರುವರೆಂಬ ಸಾಮಾನ್ಯ ಭಾವನೆಯು ದೇಶದೊಳಗಿನ ಜನರಲ್ಲಿ ಉಂಟಾಗುವದು ! ಇಂಥ ರಾಜಕೀಯ ಸ್ವಾತಂತ್ರ್ಯವು

ದೇಶದ ಪ್ರಜೆಗಳಿಗೆ ಪ್ರಜಾವತ್ಸಲನಾದ ಧರ್ಮನಿಷ್ಠ ರಾಜನಿಂದಾಗಲಿ, ಧರ್ಮಮೂಲ ವಿವೇಕದ ಲೋಕಸತ್ತೆಯಿಂದಾಗಲಿ ಉಂಟಾಗುವದು. ಪ್ರಜಾವತ್ಸಲ ರಾಜರಲ್ಲಿ ಶ್ರೀರಾಮನು ಶ್ರೇಷ್ಠನಾದ್ದರಿಂದ ರಾಮರಾಜ್ಯದ ಉಲ್ಲೇಖವು, ಮಾತು–ಮಾತಿಗೆ ನಮ್ಮಲ್ಲಿ ಈಗಲೂ ಆಗುತ್ತಿರುತ್ತದೆ. ಪ್ರಜಾವಾತ್ಸಲ್ಯವೆಂದರೆ ಪ್ರಜೆಗಳ ಹಿತಕ್ಕಾಗಿಯೇ ಅಲ್ಲ, ಒಮ್ಮೊಮ್ಮೆ ಪ್ರಜೆಗಳ ರಂಜನಕ್ಕಾಗಿಯೂ ರಾಜನು ಸರ್ವಸ್ವವನ್ನು ಪರಿತ್ಯಜಿಸುವದು! ಶ್ರೀರಾಮನು ಒಂದು ವಿಲಕ್ಷಣ ಪ್ರಸಂಗದಲ್ಲಿ ಒಬ್ಬ ಅಗಸನ ಮನೋರಂಜನಕ್ಕಾಗಿ ತನ್ನ ಅರ್ಧಾಂಗಿಯೂ ಪತಿವ್ರತಾ ಶಿರೋಮಣಿಯೂ ಆದ ಸೀತಾಮಾತೆಯನ್ನು ಆಕೆಯ ಗರ್ಭಭಾರವನ್ನು ಲೆಕ್ಕಿಸದೆ ಅಡವಿಗಟ್ಟಿದ್ದರ ರಹಸ್ಯವು ವಿಚಾರ ಮಾಡತಕ್ಕದ್ದಾಗಿದೆ! ಶ್ರೀರಾಮನು ತನ್ನ ಪ್ರಜೆಗಳ ಸಲುವಾಗಿಯೂ, ಪ್ರಜೆಗಳು ಶ್ರೀರಾಮನ ಸಲುವಾಗಿಯೂ ತಮ್ಮನ್ನು ಮರೆತುಬಿಡುತ್ತಿದ್ದದ್ದರಿಂದ ಅಂದರೆ, ಶ್ರೀರಾಮನೇ ಪ್ರಜಾರೂಪನು, ಪ್ರಜೆಗಳೇ ಶ್ರೀರಾಮರೂಪರು ಆಗುತ್ತಿದ್ದದ್ದರಿಂದ ಶ್ರೀರಾಮನ ವ್ಯಕ್ತಿನಿಷ್ಠ ರಾಜಕೀಯ ಸ್ವಾತಂತ್ರ್ಯವೇ ಆತನ ಪ್ರಜೆಗಳ ಲೋಕನಿಷ್ಠ ರಾಜಕೀಯ ಸ್ವಾತಂತ್ರ್ಯವಾಗಿ ಪರಿಣಮಿಸುತ್ತಿತ್ತು; ಆದ್ದರಿಂದ ಧರ್ಮನಿಷ್ಠನಾದ ಶ್ರೀರಾಮನಂಥ ಅರಸರೂ, ರಾಮರಾಜ್ಯದಂಥ ರಾಜ್ಯವೂ ಅಪರೂಪವೆಂದು ಹೇಳಬೇಕಾಗುವದು; ಆದರೆ ಧರ್ಮವಿಹೀನವಾದ ಈಗಿನ ರಾಜಕೀಯ ಪರಿಸ್ಥಿತಿಯನ್ನು ನೋಡಿದರೆ, ಪ್ರಜೆಗಳ ವಿತ್ತಜೀವಿತಗಳ ಸುರಕ್ಷಿತತೆಯ ನಂಬಿಗೆಯು ಎಲ್ಲಿ ಉಳಿದಿದೆ ಹೇಳಿರಿ. ನಮ್ಮವರೆಂದು ತಿಳಿದುಕೊಂಡಿದ್ದ ಸ್ವಾತಂತ್ರ್ಯೇಚ್ಛುಗಳಾದ ವರಂಗಲದ ಪ್ರತಾಪರುದ್ರದೇವನಂಥ ಹಲವು ಜನ ಪ್ರಜಾವಾತ್ಸಲ್ಯದ ಧರ್ಮಿಷ್ಠರಾಜರು ದೇಶದ ಸ್ವಾತಂತ್ರ್ಯ ರಕ್ಷಣಕ್ಕಾಗಿ ಒಬ್ಬರಹಿಂದೊಬ್ಬರು ಧಾರಾತೀರ್ಥದಲ್ಲಿ ಪತನಹೊಂದಹತ್ತಿ ಅವರ ರಾಜ್ಯಗಳು ಯವನರ ಪಾಲಾಗುತ್ತಿರುವವು. ಸ್ವಾತಂತ್ರ್ಯವನ್ನು ಕಳಕೊಂಡು ಹ್ಯಾಗಾದರೂ ಜೀವಿಸುತ್ತಿರುವ ನಮ್ಮ ಆನೆಗುಂದಿಯ ವೃದ್ಧದೇವರಾಜನಂಥ ಅರಸರು ತಾವೇ ಯವನರಿಗಧೀನರಾಗಿರುವಾಗ ಅವರ ಪ್ರಜೆಗಳಾದ ನಮಗೆ ಸ್ವಾತಂತ್ರ್ಯವೆಲ್ಲಿಂದ ಬರಬೇಕು? ಹೀಗೆ ರಾಜಕೀಯ ಸ್ವಾತಂತ್ರ್ಯ ವಿಹೀನರಾಗಿರುವ ನಮಗೆ ಧರ್ಮಸ್ವಾತಂತ್ರ್ಯವೆಲ್ಲಿ? ಧರ್ಮವೇ ಜೀವವಾಗಿವುಳ್ಳ ನಮಗೆ ಧರ್ಮಸ್ವಾತಂತ್ರ್ಯವಿಲ್ಲದಿರುವದು ಜೀವನ್ಮೃತತ್ವದ ಲಕ್ಷಣವಲ್ಲದೆ ಮತ್ತೇನು? ಆದ್ದರಿಂದಲೇ ನಮ್ಮ ದೇಶಕ್ಕೆ ದೇಶವೇ ಮೃತಶೌಚದಲ್ಲಿರುವರೆಂದು ವಿರೂಪಾಕ್ಷಾರ್ಯರು ನಿರೂಪಿಸಿರುವರೆಂದು ಇನ್ನೊಮ್ಮೆ ಹೇಳುವೆನು. ನಾವು ಧರ್ಮದಿಂದ ಕೂಡ್ರುವವರು, ಧರ್ಮದಿಂದ ಏಳುವವರು! ನಮ್ಮ ವ್ಯವಹಾರಗಳೆಲ್ಲ ಧರ್ಮಮಯವಾಗಿಯೂ, ಧರ್ಮಕ್ಕಾಗಿಯೂ ಇರುವವು! ಆದ್ದರಿಂದ ಮೊದಲು ಧರ್ಮಮೂಲವಾದ ರಾಜಕೀಯ ಸ್ವಾತಂತ್ರ್ಯದಿಂದ ತನ್ನ ಹಾಗೂ ತನ್ನ ವಿತ್ತದ ಸುರಕ್ಷಿತತೆ, ಆಮೇಲೆ ರಾಜಕೀಯ ಸ್ವಾತಂತ್ರ್ಯ ಪರಿಪೋಷಿತ ಧಾರ್ಮಿಕ ಸ್ವಾತಂತ್ರ್ಯದಿಂದ ತನ್ನ ಉದ್ಧಾರ! ಆದ್ದರಿಂದ ನಾನು ನಮ್ಮ ಬ್ರಹ್ಮವೃಂದವನ್ನು ಹೀಗೆ ಕೇಳುವೆನು —''ಒಬ್ಬ ಯವನನು ಅದರಲ್ಲಿಯೂ ಪಶ್ಚಾತ್ತಾಪದಿಂದ ಪರಿಶುದ್ಧನಾದ ನಮ್ಮ ಕಾಸಿಮಖಾನರಂಥ ಯವನರು ನಮ್ಮ ಆಶ್ರಮದ ಬಳಿಯಲ್ಲಿರುವದು ನಿಮಗೆ ಸಹನವಾಗದಿರುವಾಗ, ಅಧಿಕಾರ–ಬಲಗಳಿಂದ ಉನ್ಮತ್ತರಾದ ಈಗಿನ ರಾಜಕೀಯ ಪುರುಷರ ಹಿಂಡಿಗೆ ಹಿಂಡು, ನಮ್ಮ ಈ ಕ್ಷುದ್ರ ಆಶ್ರಮಸ್ಥಾನಕ್ಕೆ

ಆಧಾರಭೂತಳಾಗಿರುವ ಸ್ವಾತಂತ್ರ್ಯವಿಹೀನಳಾದ ಕರ್ನಾಟಕ ಭೂಮಾತೆಯನ್ನು ಕಾಲಿನಿಂದ ಒದೆಯುವರಲ್ಲ; ಆಕೆಯ ಮಕ್ಕಳಾದ ನಮ್ಮ ವಿತ್ತ-ಜೀವಿತಗಳನ್ನು ಪರಿಪರಿಯಾಗಿ ಹಿಂಡುವರಲ್ಲ; ನಮ್ಮ ಮಾತೃ-ಭಗಿನಿ-ಪತ್ನಿಯರ ಮಾನಮರ್ಯಾದೆಗಳನ್ನು ಸೆಳೆಯುವರಲ್ಲ; ಇದು ನಿಮಗೆ ಸಹನವಾಗುವದೋ? ನಿಮ್ಮಂಥ ಹೇಡಿ ಬ್ರಾಹ್ಮಣರು ಬಹುತರ ರಾಜಕೀಯ ಸೂತಕದಿಂದ ಅಸ್ಪೃಶ್ಯರಾಗಿರಲು ನಿಮ್ಮ ಆಶ್ರಮವು, ನಿಮ್ಮ ಹೋಮಶಾಲೆ, ನಿಮ್ಮ ಅಗ್ನಿಹೋತ್ರ, ನಿಮ್ಮ ವೇದಾಧ್ಯಯನ, ನಿಮ್ಮ ವ್ರತಾನುಷ್ಠಾನ, ನಿಮ್ಮ ಪೂಜೆ ಪುನಸ್ಕಾರ ಇವು ಹೇಗೆ ಸಫಲವಾಗುವವೆಂದು ನಮ್ಮ ವಿರೂಪಾಕ್ಷಾರ್ಯರೇ ನಿಮ್ಮನ್ನು ಕೇಳಿದರೆ ಏನು ಉತ್ತರ ಹೇಳುವಿರಿ? ಇಂಥ ವಿಪತ್ತಿನ ಪ್ರಸಂಗದಲ್ಲಿ ಒಮ್ಮನಸ್ಸಿನಿಂದ ರಾಷ್ಟ್ರಕಾರ್ಯದಲ್ಲಿ ತೊಡಗಿ ರಾಷ್ಟ್ರೋದ್ಧಾರ ಮಾಡುವದನ್ನು ಬಿಟ್ಟು ಜಾತಿ-ಕುಲ-ಧರ್ಮ-ಮತ-ಪಂಥ ಸ್ಪೃಶ್ಯಾಸ್ಪೃಶ್ಯ ಮೊದಲಾದವುಗಳ ನೆವದಿಂದ ಪರಸ್ಪರ ಕಲಹ ಬೆಳಿಸಿ ದೇಶದ್ರೋಹವನ್ನು ಕಟ್ಟಿಕೊಳ್ಳಬಹುದೇ? ಈಗ ನಾವೆಲ್ಲರೂ ಧರ್ಮಕ್ಕೋಸ್ಕರವಾಗಿಯೇ ರಾಷ್ಟ್ರಕಾರ್ಯದಲ್ಲಿ ತೊಡಗಿ ನಮ್ಮನ್ನೇ ನಾವು ಮರೆಯ ಬೇಕಾಗಿರಲು, ಜಾತಿ-ಕುಲ ಮುಂತಾದವುಗಳ ಗೊಂದಲ ಕಟ್ಟಿಕೊಂಡು ಮಾಡುವದೇನು? ಆದ್ದರಿಂದ ಈ ಪ್ರಸಂಗದಲ್ಲಿ ನಾವು ಭೇದಭಾವದ ಕಾರಣಗಳನ್ನೆಲ್ಲ ಕಳಚಿ ಚೆಲ್ಲಿ, ದೇಶಬಾಂಧವರೆಂಬ ಒಂದೇ ಒಂದಾದ ಭಾವನೆಯಿಂದ ರಾಷ್ಟ್ರೋದ್ಧಾರಕ್ಕೆ ಅನುಕೂಲವಾಗಿ ಔದಾರ್ಯದಿಂದ ನಡೆದುಕೊಳ್ಳತಕ್ಕದ್ದು. ಧರ್ಮ ಮುಂತಾದವುಗಳು ಮನೆಯಲ್ಲಿ ಆಚರಿಸತಕ್ಕ ವಾದ್ದರಿಂದ ಅವನ್ನು ರಾಷ್ಟ್ರಕಾರ್ಯಕ್ಕೆ ಅಡ್ಡ ತರತಕ್ಕದ್ದಲ್ಲ. ಕಾಸಿಮಖಾನರವರು ದೇಹ ದಿಂದ ಯವನರಾಗಿದ್ದರೂ ಮನಸ್ಸಿನಿಂದ ನಮ್ಮವರಾಗಿರುತ್ತಾರೆ. ದೇಹಕ್ಕಿಂತ ಮನಸ್ಸು ಶ್ರೇಷ್ಠವಾಗಿರುವದರಿಂದ ಅವರನ್ನು ನಾವು ಮನ್ನಿಸಿ ಮುಂದಕ್ಕೆ ಕರೆದು ನಾವೇ ಅವರಾಗಿ ನಡೆದುಕೊಳ್ಳಲಿಕ್ಕೆ ಬೇಕು.''

ವಿರೂಪಾಕ್ಷಾರ್ಯರು-ಆಚಾರ್ಯವರ್ಯ,ಬಹು ಯೋಗ್ಯ ವಿಚಾರಗಳು ! ನಿಮ್ಮ ಯೋಗ್ಯತೆಗೆ ನಿಮ್ಮ ಸದ್ವಿಚಾರಗಳು ಬಹಳವಾಗಿ ಒಪ್ಪುತ್ತವೆ. ನಿಮ್ಮಂಥ ಸಮಭಾವದ ಸಜ್ಜನರೇ ಔದಾರ್ಯದಿಂದ ಲೋಕಸಂಗ್ರಹ ಮಾಡಲು ಸಮರ್ಥರು. ನೀವು ಪ್ರತಿ ಒಂದು ಧರ್ಮದಲ್ಲಿಯ ಸನಾತನತ್ವದ ದೃಷ್ಟಿಯಿಂದ ಧರ್ಮಗಳ ಮರ್ಮವನ್ನು ಹೊರಗಿಟ್ಟು ಜನರ ಧರ್ಮದ ದುರಭಿಮಾನವನ್ನು ದೂರಮಾಡಬಲ್ಲಿರಿ; ಅದರಂತೆ ಸದ್ಬೋಧದಿಂದ ಜನರ ಹೃದಯದಲ್ಲಿ ಸದಮಲ ಜ್ಞಾನವನ್ನುಂಟು ಮಾಡಿ ಅವರ ಸ್ವಾರ್ಥಪರಾಯಣತೆಯನ್ನು ಸಡಲಿಸಲು ಬಲ್ಲಿರಿ; ಹಾಗೆಯೇ ಸ್ವಂತದ ಧರ್ಮವಿಶುದ್ಧವಾದ ಕಾರ್ಯತತ್ಪರತೆಯ ಪ್ರತ್ಯಕ್ಷ ಕೃತಿಯಿಂದ ಜನರ ಆಲಸ್ಯಾದಿ ದೋಷಗಳನ್ನು ಹೊಡೆದೋಡಿಸಿ ಅವರನ್ನು ಕಾರ್ಯೋನ್ಮುಖರಾಗಿ ಮಾಡಬಲ್ಲಿರಿ ! ಮಹಾತ್ಮನ್,ಆಚಾರ್ಯವರ, ನಮ್ಮ ಎಲ್ಲ ಕಾರ್ಯಗಳು ಧರ್ಮಮೂಲವಾಗಿರಬೇಕೆಂದು ನೀವು ನಿರೂಪಿಸಿದ್ದು ಯಥಾಯೋಗ್ಯವು. ಈಶ್ವರಾರ್ಪಣವೇ ಧರ್ಮಮೂಲವೆಂದು ನಾನು ತಿಳಿಯುವೆನು. ಭಗವದ್ಗೀತೆಯಲ್ಲಿ ಭಗವಂತನನ್ನು ಕುರಿತು — ''ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ! ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವಮದರ್ಪಣಂ'' ಎಂದು

ಹೇಳಿರುವನಲ್ಲವೆ! ನಮ್ಮಲ್ಲಿಯಾದರೂ ಶಿವಾರ್ಪಿತವಲ್ಲದ್ದು ತ್ಯಾಜ್ಯವೆಂದು ಹೇಳಿರುವರು; ಆದ್ದರಿಂದ ನಾವು ಏನು ಮಾಡಬೇಕಾದರೂ ಈಶ್ವರಾರ್ಪಣ ಬುದ್ಧಿಯಿಂದ ಫಲಾಪೇಕ್ಷೆಯಿಲ್ಲದೆ ಮಾಡಬೇಕು; ಅಂದರೆ ಕರ್ತವ್ಯಕ್ಕಾಗಿಯೇ ಕರ್ತವ್ಯ ಮಾಡಬೇಕಲ್ಲದೆ ಫಲಕ್ಕಾಗಿ ಮಾಡಬಾರದು. ''ಕರ್ಮಣ್ಯೇ ವ್ಯಾಧಿಕಾರಸ್ತೇ ಮಾಫಲೇಷು ಕದಾಚನ'' ಎಂದು ಅದೇ ಭಗವದ್ಗೀತೆಯಲ್ಲಿ ಹೇಳಿರುವದಲ್ಲವೆ? ಆದದ್ದರಿಂದ ನಮ್ಮ ಕರ್ತವ್ಯದ ಅಂತಿಮಸಾಧ್ಯವು ಈಶ್ವರ ಪ್ರೀತಿಯಿರಬೇಕು, ನಮ್ಮ ಅಹಂಕಾರದೂಷಿತ ಫಲವಿರಬಾರದು ! ಆಚಾರ್ಯವರ್ಯ, ನಿಮ್ಮ ರಾಜಕೀಯ ಸ್ವಾತಂತ್ರ್ಯದ ವ್ಯಾಖ್ಯೆಯನ್ನು ಕೇಳಿ ನನಗೆ ಬಹಳ ಸಂತೋಷವಾಯಿತು. ನಿಮ್ಮ ವ್ಯಾಖ್ಯೆಯಂತೆ ನಮಗೆ ಸ್ವಾತಂತ್ರ್ಯ ಪ್ರಾಪ್ತಿಯಾಗಬೇಕಾದರೆ, ಮೊದಲು ನಾವು ನೈತಿಕ ಬಲದಿಂದ ಆತ್ಮೋನ್ನತಿಯನ್ನು ಮಾಡಿಕೊಳ್ಳಬೇಕು; ಯಾಕಂದರೆ ನೀತಿಯಿದ್ದಲ್ಲಿ ವಿವೇಕವಿರುವದು, ವಿವೇಕವಿದ್ದಲ್ಲಿ ಎಲ್ಲವೂ ಇರುವದು. ನೀತಿಗೆ ಸಮ್ಮತವಲ್ಲದ, ಹಾಗು ಈಶ್ವರಾರ್ಪಣ ಬುದ್ಧಿಯಿಲ್ಲದ ಕಾರ್ಯವು ದೈವೀ ಕಾರ್ಯವಲ್ಲ; ಅದು ನಿಶ್ಚಯವಾಗಿ ಅಸುರೀ ಕಾರ್ಯವು. ಅದಕ್ಕೆ ಅಧಃಪತನ ಹೇತುವಾದ ಅಸುರೀ ಫಲವು ದೊರೆಯುವದೇ ನಿಶ್ಚಯವು ! ವಿಪ್ರಶ್ರೇಷ್ಠಾ, ಈವೊತ್ತಿನ ಸಮಾಗಮದ ಆನಂದವನ್ನೇನು ವರ್ಣಿಸಲಿ? ನಿನ್ನ ಯೋಗದಿಂದ, ಎಂದೂ ಸೂಚಿಸದೆ ಇದ್ದ ಸದ್ವಿಚಾರಗಳು ಇಂದು ನನ್ನಲ್ಲಿ ಸ್ಫುರಿಸಿದವು. ''ಜತಿಯಂತೆ ಮತಿ'' ಎಂಬ ಕನ್ನಡ ನುಡಿಯು ಸುಳ್ಳಲ್ಲ; ನೀನು ಘನ ವಿದ್ವಾಂಸನು; ನಿನ್ನ ಆ ಘನವಿದ್ವತ್ತೆಯನ್ನು ಅಲಂಕರಿಸುವಂಥ ನೀತಿಯೂ, ಆ ನೀತಿಯನ್ನು ಸಫಲಗೊಳಿಸುವ ವಿವೇಕವೂ, ಆ ವಿವೇಕವನ್ನು ಸಾರ್ಥಕವಾಗಿಮಾಡುವ ಸದ್ಭಾವವೂ ನಿನ್ನಲ್ಲಿರುವದರಿಂದ, ನೀನು ಲೌಕಿಕಪುರುಷನಾಗಿರುತ್ತೀ ಬಹಳ ಸಂತೋಷವು ! ನಾನು ಶ್ರೀ ವಿರೂಪಾಕ್ಷನ ಸನ್ನಿಧಿಯನ್ನು ಬಿಟ್ಟು ಬಂದದ್ದರ ಸಾರ್ಥಕವಾಯಿತು ! ಶ್ರೀ ವಿರೂಪಾಕ್ಷನು ನಿನ್ನ ಮುಖಾಂತರ ನಿಶ್ಚಯವಾಗಿ ಕರ್ನಾಟಕವನ್ನು ಉದ್ಧರಿಸುವನೆಂದು ಆ ಪರಶಿವನೇ ನನ್ನ ಮುಖದಿಂದ ಈಗ ಒಡನುಡಿಸುವನು ! ಪುಣ್ಯವಂತರಾದ ಸಭಾಸದರೇ, ಈ ಮಹಾತ್ಮನ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಟ್ಟು ನಡೆಯಿರಿ ಕಂಡಿರಾ ! ನಿಮ್ಮ ಕಾರ್ಯವು ಏಕಮುಖವಾಗಿ ಬಲಿಷ್ಠವಾಗಲಿ; ಬಹುಮುಖವಾಗಿಮಾಡಿ ಅದರ ಬಲವನ್ನು ಕುಗ್ಗಿಸಬೇಡಿರಿ ! ಮಹಾತ್ಮರ ಉಪಾಯ ಯೋಜನೆಯ ಗೌರವವೂ ಅದರ ರಹಸ್ಯವೂ ಸಾಮಾನ್ಯರಿಗೆ ತಿಳಿಯದ್ದರಿಂದ ನೀವು ಇಲ್ಲದ ಊಹಾಪೋಹದ ಗೊಡವೆಗೆ ಹೋಗದೆ ಶ್ರದ್ಧೆಯಿಂದ ಅವರನ್ನು ಹಿಂಬಾಲಿಸಿರಿ; ಅವರ ಆಜ್ಞಾಧಾರಕರಾಗಿರಿ; ಅವರ ಆಜ್ಞಾಪಾಲನದಲ್ಲಿ ಸರ್ವಸ್ವದ ನಾಶವಾದರೂ, ಆತ್ಮಾರ್ಪಣದ ಪ್ರಸಂಗವು ಒದಗಿದರೂ ಅಂಜಬೇಡಿರಿ;' ಯಾಕಂದರೆ ಅಭಯಪ್ರಧಾನದ ಪರಮೇಶ್ವರನು ಅಂಥವರನ್ನು ಸಂತಯಿಸಲು ಸಜ್ಜಾಗಿರುವನು. ಎಂದಿಲ್ಲೊಂದು ದಿನ ನಾವು ಈ ಲೋಕವನ್ನು ಬಿಟ್ಟು ಹೋಗತಕ್ಕವರೇ; ಆದರೆ ರಾಷ್ಟ್ರದ ಕಲ್ಯಾಣಕ್ಕಾಗಿ ಹೆಣಗುವಾಗ ಈ ಲೋಕವನ್ನು ತ್ಯಜಿಸುವದರಿಂದ ಪರಮೇಶ್ವರ ಪ್ರೀತಿಯಾಗಿ ನಿಶ್ಚಯವಾಗಿ ಅಂಥವರ ಉದ್ಧಾರವಾಗುವದು.

ಮಹಾತ್ಮರಾದ ವಿರೂಪಾಕ್ಷಾರ್ಯರು ಹೀಗೆ ಮಾತಾಡುತ್ತಿರುವಾಗ ಮಾಧವಾಚಾರ್ಯರು ಮುಖ ತಗ್ಗಿಸಿ ಕಣ್ಣುಮುಚ್ಚಿಕೊಂಡು ಕುಳಿತಿದ್ದರು. ಆ ಮಹಾತ್ಮರ ಆ ಇರವು,

ವಿರೂಪಾಕ್ಷಾರ್ಯರೇ ನಾನಾಗಿರುವದರಿಂದ ಅವರು ಮಾತಾಡುತ್ತಿರುವಾಗ ನನ್ನ ಅಸ್ತಿತ್ವದ ಪ್ರಯೋಜನವಿಲ್ಲವೆನ್ನುವದನ್ನು ತೋರಿಸುತ್ತಿತ್ತು ! ಆಗ ಸಭಿಕರೆಲ್ಲ ಸದ್ಭಾವದಿಂದ ಸ್ಫೂರ್ತಿಗೊಂಡಿದ್ದರು. ಆಗ ಕಾಶೀನಾಥಶರ್ಮನು ಎದ್ದುನಿಂತು ಕೈಜೋಡಿಸಿ–''ಸಭಾಸದರೇ, ಈಗಿನಂತೆ ಸಜ್ಜನ–ಸಜ್ಜನರು ಒತ್ತಟ್ಟಿಗೆ ಕೂಡುವದೇ ದುರ್ಲಭವು. ಒಂದು ಪಕ್ಷದಲ್ಲಿ ಒತ್ತಟ್ಟಿಗೆ ಕೂಡಿದರೂ ಈಗಿನಂತೆ ಪರಸ್ಪರ ಸಂಭಾಷಣ ಜರಗುವದು ಅತ್ಯಂತ ದುರ್ಲಭವು. ಅಂಥ ದುರ್ಲಭ ಸಂಭಾಷಣ ಯೋಗವು ಒದಗಿದಾಗ ಯಾವ ಆನಂದವುಂಟಾಗುವದೆಂಬದರ ಅನುಭವವು ಪುಣ್ಯವಂತರಾದ ನಮ್ಮೆಲ್ಲರಿಗೂ ಇಂದು ಪ್ರಾಪ್ತವಾಗಿರುವದು ! ನಿಶ್ಚಯವಾಗಿ ನಾವು ಇಂದು ಸದ್ಬೋಧಶ್ರವಣದಿಂದ ಅನುಗ್ರಹೀತರಾದೆವು; ಆದರೆ ಆ ಅನುಗ್ರಹವು ಸಫಲವಾಗಬೇಕಾದರೆ ನಾವು ಕಿವಿಯಿಂದ ಕೇಳಿದಂತೆ ಮನಃಪೂರ್ವಕ ನಡಿಯಬೇಕು. ಇಂದಿನ ಸಜ್ಜನಸಮುಚ್ಚಯದ ಸಂಭ್ರಮದಲ್ಲಿ ನನ್ನ ಮನಸ್ಸಿನ ಕಿಲ್ಮಷವೆಲ್ಲ ತೊಳೆದುಹೋದಂತೆ ನನಗೆ ಭಾಸವಾಗುತ್ತದೆ. ಈ ಆನಂದದಲ್ಲಿ ನಾನು ಉಭಯ ಮಹಾತ್ಮರ ವಿಷಯವಾಗಿ ಕೃತಜ್ಞನಾಗಿ ಅವರ ಚರಣಕ್ಕೆ ಭಕ್ತಿಯಿಂದ ನಮಸ್ಕರಿಸುವೆನು.''

## ವೈದಿಕ ಧರ್ಮಗಳು

ಹೀಗೆ ಸತ್ಸಮಾಗಮದಿಂದ ಸಭಾಸದರ ಒಂದೊಂದೇ ಸಂಶಯದ ಗಂಟುಗಳು ಸಡಿಲುತ್ತಿರಲು, ವಿರೂಪಾಕ್ಷಾರ್ಯರು ಮಾಧವಾಚಾರ್ಯರನ್ನು ಕುರಿತು – ''ಆಚಾರ್ಯವರ, ಈಗಿನ ಲೋಕಸಂಗ್ರಹದ ಕಾಲದಲ್ಲಿ ಜನರ ಪ್ರೇಮವಿಘಾತಕ ಕಾರಣಗಳನ್ನು ದೂರಮಾಡುವದು ಅವಶ್ಯವು. ನಿಮ್ಮ ಶಿಷ್ಯ ಕಾಶೀನಾಥಶರ್ಮರ ಸಂಶಯಗಳ ನಿವಾರಣವಾದರೆ ಬಹಳ ಹಿತವಾಗುವದು; ಆದ್ದರಿಂದ ಈಗ ನಿಮ್ಮ ಕಾಶೀನಾಥಶರ್ಮರೇ ನಾವಾಗಿ ನಿಮಗೆ ಪ್ರಶ್ನೆಮಾಡುವೆವು. ಅದಕ್ಕೆ ನೀವು ಉತ್ತರ ಕೊಡಬೇಕು. ಮಹಾತ್ಮನ್, ಹಿಂದುಗಳೆಂದು ಕರೆಯಲ್ಪಡುತ್ತಿರುವ ನಮ್ಮಲ್ಲಿ ವೈದಿಕರು ಯಾರು, ಅವೈದಿಕರು ಯಾರು ಇದನ್ನು ಮೊದಲು ಹೇಳಬೇಕು.''

ಮಾಧವಾಚಾರ್ಯ–ಆರ್ಯವರ, ತಮ್ಮಂಥ ಜ್ಞಾನಿಗಳು ಕುಳಿತು ಹೀಗೆ ಪ್ರಶ್ನೆಮಾಡಿದರೆ ಉತ್ತರ ಕೊಡುವದು ಕಠಿಣವೇ ಸರಿ; ಯಾಕಂದರೆ, ಜ್ಞಾನಿಗಳಿಗೆ ತಿಳಿಯದ ಧರ್ಮದ ಮರ್ಮವು ಯಾವದಿರುವದು? ಆದರೂ ಲೋಕಾನುಗ್ರಹಕ್ಕಾಗಿ ಕಾಶೀನಾಥನೇ ತಾವಾಗಿ ಆತನನ್ನೂ, ಆತನ ನೆವದಿಂದ ಹಿಂದೂ ಸಮಾಜವನ್ನೂ ಕೃತಾರ್ಥವಾಗಮಾಡುವಾಗ ನಾನು ಯಥಾಮತಿ ಉತ್ತರ ಹೇಳದೆ ಹ್ಯಾಗೆ ಇರಲಿ? ಮಹಾತ್ಮನ್, ಯಾವತ್ತು ಹಿಂದುಗಳು ವೇದವನ್ನು, ಮತ್ತು ಆ ವೇದವನ್ನೇ ಪ್ರತಿಪಾದಿಸುವ ಆಗಮ— ಸ್ಮೃತಿ–ಪುರಾಣಗಳಲ್ಲಿ ತಮಗೆ ಗ್ರಾಹ್ಯವಾದವುಗಳನ್ನು ಪ್ರಮಾಣವಾಗಿ ಎಣಿಸುವದರಿಂದಲೂ, ಆ ಪ್ರಮಾಣಗ್ರಂಥಗಳಲ್ಲಿ ಹೇಳಿರುವ ದೇವತೆಗಳನ್ನು ಆರಾಧಿಸುವದರಿಂದಲೂ ಹಿಂದುಗಳೆನಿಸುವ ನಾವೆಲ್ಲರೂ ವೈದಿಕರೇ ಆಗಿರುವೆವು; ಮತ್ತು

ನಮ್ಮೊಳಗಿನ ಅವಾಂತರ ಧರ್ಮಮಾರ್ಗಗಳು ಎಷ್ಟು ಭಿನ್ನವಾಗಿ ತೋರಿದರೂ ಅವೆಲ್ಲವೂ ವೈದಿಕ ಧರ್ಮಗಳೇ ಆಗಿರುವವು !

ವಿರೂಪಾಕ್ಷಾರ್ಯ–ಬಹು ಸಮರ್ಪಕವಾದ ಉತ್ತರವು; ಆದರೆ ವಿಪ್ರೋತ್ತಮ, ಹಿಂದುಗಳೊಳಗಿನ ಎಲ್ಲ ಅವಾಂತರ ಧರ್ಮಗಳೂ ವೈದಿಕವಾದರೂ, ವರ್ಣಾಶ್ರಮಪಾಲನದ ದೃಷ್ಟಿಯಿಂದ ಅವುಗಳನ್ನು ವರ್ಗೀಕರಿಸಬೇಕಾಗುವದಲ್ಲವೆ ?

ಮಾಧವಾಚಾರ್ಯ – ಹೌದು; ನಿಶ್ಚಯವಾಗಿ ಅವನ್ನು ವರ್ಗೀಕರಿಸಬೇಕಾಗುತ್ತದೆ. ನನ್ನ ಅಲ್ಪಮತಿಗೆ ವೈದಿಕ ಧರ್ಮದಲ್ಲಿ ಚತುರ್ವರ್ಣಾತ್ಮಕ ವೈದಿಕ ಧರ್ಮಗಳೆಂತಲೂ, ಏಕವರ್ಣಾತ್ಮಕ ವೈದಿಕ ಧಮಗಳೆಂತಲೂ ಎರಡು ವರ್ಗಗಳಾಗಬಹುದಾಗಿ ತೋರುತ್ತದೆ.

ವಿರೂಪಾಕ್ಷಾರ್ಯ – (ಕಾಶೀನಾಥನನ್ನು ಕುರಿತು) ಕಾಶೀನಾಥಶರ್ಮನ್, ನಿಮ್ಮ ಗುರುಗಳು ಹೇಳಿದ್ದು ತಿಳಿಯಿತೇ? ಇದೊಂದು ಮಾತು ತಿಳಿದರೆ ನಿಮ್ಮ ಹಲವು ಸಂಶಯಗಳ ನಿವಾರಣವಾಗುವ ಹಾಗಿದೆ.

ಕಾಶೀನಾಥ–(ಎದ್ದುನಿಂತು) ತಿಳಿಯಲಿಲ್ಲ ಮಹಾತ್ಮನ್, ವಿವರಿಸಿದ ಹೊರತು ನಮ್ಮಂಥ ಮಂದಮತಿಗಳಿಗೂ, ಮತದ ಅಭಿಮಾನದಿಂದ ಅಂಧರಾದವರಿಗೂ ಹ್ಯಾಗೆ ತಿಳಿಯಬೇಕು?

ಮಾಧವಾಚಾರ್ಯ–ಕಾಶೀನಾಥ, ಹಾಗಾದರೆ ಲಕ್ಷ್ಯವಿಟ್ಟು ಕೇಳು. ವರ್ಣಗಳು ಬ್ರಾಹ್ಮಣ– ಕ್ಷತ್ರಿಯ–ವೈಶ್ಯ–ಶೂದ್ರ ಎಂದು ನಾಲ್ಕು ಇರುತ್ತವೆಂಬ ಮಾತು ನಿನಗೆ ಗೊತ್ತಿರುವದಷ್ಟೆ? ವಿರಾಟಪುರುಷನ ಮುಖಸ್ಥಾನದಿಂದ ಬ್ರಾಹ್ಮಣರೂ, ಬಾಹುಸ್ಥಾನದಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರೂ, ಪಾದಗಳಿಂದ ಶೂದ್ರರೂ ಹುಟ್ಟಿದರೆಂಬದನ್ನು ಪುರುಷ ಸೂಕ್ತದಲ್ಲಿ ಹೇಳಿರುವದು; ಅದರಂತೆ, ಪ್ರಾಮುಖ್ಯವಾಗಿ ಸ್ಮೃತಿ–ಪುರಾಣಾದಿಗಳಲ್ಲಿ ಈ ನಾಲ್ಕೂ ವರ್ಣದವರ ಅಧಿಕಾರಗಳೂ ಕರ್ತವ್ಯಗಳೂ ಉಲ್ಲೇಖಿಸಲ್ಪಟ್ಟಿರುವವು. ಈ ಸ್ಮೃತಿ ಪುರಾಣಗಳು ಚತುರ್ವರ್ಣಾತ್ಮಕ ವೈದಿಕ ಧರ್ಮದವರಿಗೇ ವಿಶೇಷವಾಗಿ ಸಂಬಂಧಿಸಿರುತ್ತವೆಂದು, ಅಥವಾ ಚತುರ್ವರ್ಣದವರ ಸಲುವಾಗಿಯೇ ಇವು ರಚಿಸಲ್ಪಟ್ಟಿರುವವೆಂದು ಹೇಳಬಹುದು.

ಬ್ರಾಹ್ಮಣರಾದವರು ಯಜನ–ಯಾಜನ–ಅಧ್ಯಯನ–ಅಧ್ಯಾಪನ– ದಾನ–ಪ್ರತಿಗ್ರಹ ಗಳೆಂಬ ಷಟ್ಕರ್ಮಾಧಿಕಾರವುಳ್ಳವರಾಗಿ, ನಿಸ್ಪೃಹವೃತ್ತಿಯ ತಪಶ್ಚರ್ಯದಿಂದ ಲೋಕಕಲ್ಯಾಣದ ಮಾರ್ಗವನ್ನು ಕಂಡುಹಿಡಿದು. ಅದನ್ನು ಉಳಿದ ಮೂರು ವರ್ಣದವರಿಗೆ ತೋರಿಸಿ ಅವರ ದ್ವಾರದಿಂದ ಲೋಕಕಲ್ಯಾಣ ಮಾಡತಕ್ಕದ್ದು. ಹೀಗೆ ಮಾಡದವರು ಬ್ರಹ್ಮವೃತ್ತಿಯ ಬ್ರಾಹ್ಮಣರಲ್ಲ, ಜಾತಿ ಮಾತ್ರ ಬ್ರಾಹ್ಮಣರು ! ಕ್ಷತ್ರಿಯರಾದವರು ಬ್ರಾಹ್ಮಣರ ಗುರುತ್ವವನ್ನು ಒಪ್ಪಿಕೊಂಡು ಯಜನ– ಅಧ್ಯಯನ–ದಾನಗಳೆಂಬ ತ್ರಿಕರ್ಮಗಳ ಅಧಿಕಾರವುಳ್ಳವರಾಗಿ ವರ್ಣಾಶ್ರಮ ಧರ್ಮಗಳಿಗೂ, ಬೇರೆ ಆಯಾ ಧರ್ಮಗಳಿಗೂ ಅನುಸರಿಸಿ ಪ್ರಜೆಗಳನ್ನು ರಕ್ಷಿಸುತ್ತ ರಾಜೈಶ್ವರ್ಯಗಳನ್ನು ಭೋಗಿಸತಕ್ಕದ್ದು.

ಹೀಗೆ ಮಾಡದವರು ಕ್ಷತ್ರಿಯವೃತ್ತಿಯ ಕ್ಷತ್ರಿಯರಲ್ಲ, ಜಾತಿಮಾತ್ರ ಕ್ಷತ್ರಿಯರು ! ವೈಶ್ಯರಾದವರು ಬ್ರಾಹ್ಮಣರ ಗುರತ್ವವನ್ನು ಒಪ್ಪಿಕೊಂಡು, ಕ್ಷತ್ರಿಯರಂತೆ ತ್ರಿಕರ್ಮಾಧಿ

ಕಾರವುಳ್ಳವರಾಗಿ ಕೃಷಿ, ಗೋರಕ್ಷಣ, ವಾಣಿಜ್ಯಗಳಿಂದ ಧನಸಂಚಯ ಮಾಡಿ ತದ್ವಾರಾ ಜಗತ್ತನ್ನು ಪೋಷಿಸುತ್ತ ಐಶ್ವರ್ಯವನ್ನು ಭೋಗಿಸತಕ್ಕದ್ದು. ಹೀಗೆ ಮಾಡದವರು ವೈಶ್ಯವೃತ್ತಿಯ ವೈಶ್ಯರಲ್ಲ, ಜಾತಿಮಾತ್ರವೈಶ್ಯರು! ಶೂದ್ರರಾದವರು ಬ್ರಾಹ್ಮಣರ ಗುರುತ್ವವನ್ನು ಒಪ್ಪಿಕೊಂಡು, ಮೇಲಿನ ಮೂರು ವರ್ಣದವರ ವಿಷಯದಲ್ಲಿಯೂ ದಾಸಭಾವವನ್ನು ವಹಿಸಿ ತದ್ವಾರಾ ಲೋಕಹಿತವನ್ನು ಸಾಧಿಸುತ್ತ ತಮ್ಮ ಧರ್ಮದಂತೆ ಸುಖವನ್ನು ಭೋಗಿಸತಕ್ಕದ್ದು.

ಹೀಗೆ ಮಾಡದವರು ಶೂದ್ರವೃತಿಯ ಶೂದ್ರರಲ್ಲ, ಜಾತಿಮಾತ್ರ ಶೂದ್ರರು! ಈ ನಾಲ್ಕೂ ವರ್ಣದವರೂ ತಮ್ಮ ತಮ್ಮ ಕರ್ತವ್ಯದ ದೃಷ್ಟಿಯಿಂದ ತಮ್ಮ ತಮ್ಮಷ್ಟಕ್ಕೇ ಶ್ರೇಷ್ಠರಾಗಿದ್ದರೂ, ಗುರು–ಶಿಷ್ಯಭಾವದಲ್ಲಿಯೂ ಬ್ರಾಹ್ಮಣರನ್ನು ಶ್ರೇಷ್ಠರೆಂದು ತಿಳಿದು ''ವರ್ಣಾನಾಂ ಬ್ರಾಹ್ಮಣೋಗುರುಃ'' ಎಂಬ ವಚನವನ್ನು ಪಾಲಿಸಬೇಕಾಗುವದು. ತಾವು ವೇದೋಕ್ತ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರರೆಂದು ಭಾವಿಸಿ, ವೇದಾಜ್ಞೆಗೆ ವಿರೋಧವಾಗಿ ಮನಬಂದಂತೆ ನಡೆಯುವವರು ಚಾತುರ್ವರ್ಣ ವ್ಯವಸ್ಥೆಯಿಂದ ಚ್ಯುತಿಹೊಂದಿದವರೆಂದು ತಿಳಿಯತಕ್ಕದ್ದು. ಈ ಕಲಿಯುಗದಲ್ಲಿ ಶ್ರದ್ಧೆಯ ನಾಶವಾಗಿ ಸ್ವಾರ್ಥವು ಹೆಚ್ಚುವದರಿಂದ ಮನುಷ್ಯನು ಧರ್ಮದಿಂದ ಚ್ಯುತಿಹೊಂದಲಿಕ್ಕೆ ತಡವಾಗಲಾರದು; ಮತ್ತು ಅಹಂಭಾವದ ಪ್ರಾಬಲ್ಯವಾಗಿ ಶ್ರೇಷ್ಠ ಕನಿಷ್ಠ ಭಾವಗಳು ಅಳಿದುಹೋಗುವದರಿಂದ ಚಾತುರ್ವರ್ಣಗಳೊಳಗಿನ ಪವಿತ್ರವಾದ ಪರಸ್ಪರ ಸಹಕಾರತೆಯು ನಷ್ಟವಾಗಿ ಪರಸ್ಪರರು ಸ್ವತಂತ್ರರಾಗುವರು. ಸಾಮಾನ್ಯವಾಗಿ ಕಲಿಯುಗದಲ್ಲಿ ಬ್ರಾಹ್ಮಣರು ತಮ್ಮ ಕರ್ತವ್ಯವನ್ನು ಮರೆತು ಸ್ವಾರ್ಥ ಪರಾಯಣತೆಯಿಂದ ತಾವು ತೇಜೋಹೀನರಾದರೂ, ಕಲಿಯುಗದಲ್ಲಿ ಕ್ಷತ್ರಿಯ ವೈಶ್ಯ ವರ್ಣಗಳು ನಷ್ಟವಾಗಿರುವವೆಂದು ಹೇಳುತ್ತ, ಎಲ್ಲವೂ ನಮಗಿರಬೇಕೆಂಬ ಆಶಾಪಾಶದಿಂದ ಕಟ್ಟಲ್ಪಟ್ಟು ''ವರ್ಣಾನಾಂ ಬ್ರಾಹ್ಮಣೋಗುರುಃ'' ಎಂದು ವಿವೇಕವಿಲ್ಲದೆ ಎಲ್ಲರ ಮೇಲೆ ಅಧಿಕಾರ ನಡೆಸಹೋಗುವರು ! ಕಲಿಯುಗದಲ್ಲಿ ಕ್ಷತ್ರಿಯರಿಲ್ಲ– ವೈಶ್ಯರಿಲ್ಲ, ಎಲ್ಲರಲ್ಲಿಯೂ ಶ್ರೇಷ್ಠತ್ವದ ಭಾವವು ಸುಳಿದಾಡುತ್ತಿದ್ದು ಶೂದ್ರರೆಂದರೆ ಸಿಟ್ಟು ಬರುವದರಿಂದ ಶೂದ್ರರಂತೂ ಮೊದಲಿಗೇ ಇಲ್ಲ; ಅಂದಬಳಿಕ ಬ್ರಾಹ್ಮಣರು ಯಾವ ವರ್ಣಗಳ ಗುರುಗಳಾಗಬೇಕು ? ಅದರಂತೆ, ನಾವು ಕ್ಷತ್ರಿಯರು–ಶೂದ್ರರು ಎಂದು ಹೇಳಿಕೊಳ್ಳುವವರು ಬ್ರಾಹ್ಮಣರ ಸಂಬಂಧವನ್ನು ಬದಿಗೊತ್ತಿ– ''ಬ್ರಾಹ್ಮಣರದೇನು ಶ್ರೇಷ್ಠತ್ವ ? ಅವರ ಗುರುತ್ವವನ್ನೇಕೆ ನಾವು ಮನ್ನಿಸಬೇಕು ? ನಮ್ಮಲ್ಲಿಯೇ ನಾವು ಗುರುಗಳನ್ನು ಮಾಡಿಕೊಂಡರಾಯಿತು. ಶ್ರುತಿ–ಸ್ಮೃತಿ– ಪುರಾಣಾದಿಗಳನ್ನು ಬ್ರಾಹ್ಮಣರೇ ಬರೆದಿರುವದರಿಂದ ತಮಗೆ ಬೇಕಾದಹಾಗೆ ಬರೆದಿರುವರು'' ಇತ್ಯಾದಿ ಉದ್ಗಾರಗಳಿಂದ ತಮ್ಮ ಮನಸ್ಸಿಗೆ ಬಂದಂತೆ ನಡೆಯುತ್ತಿರುವರು.

ಇಂಥ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರರನ್ನು ಚಾತುರ್ವರ್ಣಗಳಿಂದ ಚ್ಯುತಿಹೊಂದಿದವರೆಂದು ತಿಳಿದು ಇವರ ವಿಷಯವಾಗಿ ನಿಜವಾದ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರರು ಉದಾಸೀನ ಭಾವವನ್ನು ತಾಳತಕ್ಕದ್ದಲ್ಲದೆ ವೃಥಾ ಕಲಹವನ್ನು ಬೆಳೆಸಬಾರದು. ಇಂಥ ಶ್ರದ್ಧಾಹೀನರಾದ ಧರ್ಮ ಲಂಡರು ಚಾತುರ್ವರ್ಣಾತ್ಮಕ ವೈದಿಕರಲ್ಲಿಯೂ ಇರುವರು; ಏಕವರ್ಣಾತ್ಮಕ ವೈದಿಕರಲ್ಲಿಯೂ ಇರುವರು. ಇಂಥವರ

ಪ್ರಾಬಲ್ಯವು ಯಾವದೊಂದು ಧರ್ಮದಲ್ಲಿ ಹೆಚ್ಚುತ್ತಹೋದ ಮಾನದಿಂದ ಆ ಧರ್ಮದ ಅವನತಿಯಾಗುತ್ತ ಹೋಗುವದೆಂದು ತಿಳಿಯತಕ್ಕದ್ದು.

ನಾರಾಯಣಾಚಾರ್ಯ—ಆಚಾರ್ಯವರ, ತಾವು ಹೇಳಿದ ಲಕ್ಷಣಗಳ ಮೇಲಿಂದ ನಿಜವಾದ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರು ಅಪರೂಪವಾಗುತ್ತಿರುವರೆಂದು ಹೇಳಬೇಕಾಗುತ್ತದೆ.

ಮಾಧವಾಚಾರ್ಯ—ಅದರಲ್ಲಿ ಸಂಶಯವೇನು? ಕೇವಲ ಜಾತ್ಯಾಭಿಮಾನದಿಂದ ಬಡಿದಾಡುವ ಬ್ರಾಹ್ಮಣ-ಕ್ಷತ್ರಿಯ, ವೈಶ್ಯ, ಶೂದ್ರರು ದಿನದಿನಕ್ಕೆ ಹೆಚ್ಚುವರಲ್ಲದೆ ಧಾರ್ಮಿಕ ಶ್ರದ್ಧಾವಂತರಾಗಿ ಧರ್ಮಮೂಲವಾದ ಪರಸ್ಪರ ಸಹಕಾರತೆಯಿಂದ ಲೋಕಕಲ್ಯಾಣ ಮಾಡಿ, ತದ್ವಾರಾ ತಮ್ಮ ಕಲ್ಯಾಣ ಮಾಡಿಕೊಳ್ಳುವ ನಿಜವಾದ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರ ಸಂಖ್ಯೆಯು ದಿನದಿನಕ್ಕೆ ಕಡಿಮೆಯಾಗುತ್ತಲೇ ಬಂದಿರುವದು ! ಹೀಗಾಗುತ್ತಾಗುತ್ತ ಕಡೆಗೆ ಜ್ಞಾನಿಗಳ ಭವಿಷ್ಯದಂತೆ ವರ್ಣಸಂಕರದ ಅನರ್ಥಕ್ಕೆ ಲೋಕವು ಗುರಿಯಾಗುವದೆಂದು ಹೇಳಬೇಕಾಗುತ್ತದೆ.

ವಿರೂಪಾಕ್ಷಾರ್ಯ—ಬ್ರಾಹ್ಮಣೋತ್ತಮ, ನಿಮ್ಮ ಯತಾರ್ಥವಾದ ನಿರೂಪಣವನ್ನು ಕೇಳಿ ನಮಗೆ ಬಹಳ ಸಂತೋಷವಾಯಿತು. ನೀವು ನಿಜವಾಗಿಯೂ ಧರ್ಮಸ್ಥಾಪಕರೇ ಸರಿ; ಆದರೆ ಏಕವರ್ಣಾತ್ಮಕ ವೈದಿಕ ಧರ್ಮದ ಲಕ್ಷಣವನ್ನು ವಿವರಿಸದಿದ್ದರೆ, ಅದನ್ನು ವರ್ಣಸಂಕರವೆಂದು ತಿಳಿಗೇಡಿಗಳು ಭಾವಿಸಬಹುದು; ಆದ್ದರಿಂದ ಲೋಕಕಲ್ಯಾಣಕ್ಕಾಗಿ ಅದನ್ನಿಷ್ಟು ವಿವರಿಸಿರಿ.

ಮಾಧವಾಚಾರ್ಯ—ಇದು ಬಹು ಯೋಗ್ಯ ಸೂಚನೆಯು. ಆರ್ಯವರ, ತಮ್ಮಂಥ ಸಜ್ಜನರ ಸಮಾಗಮದಿಂದ ಸತ್ಯದ ಸ್ಫೂರ್ತಿಯಾಗಿ ನನ್ನ ಆತ್ಮವು ಶಾಂತಿಗೊಳ್ಳುವದನ್ನು ನೋಡಿ ನನಗೆ ಪರಮಾನಂದವಾಗುತ್ತದೆ. ವರ್ಣಸಂಕರಕ್ಕೂ, ಮಹಾತ್ಮರ ಏಕವರ್ಣ ಘಟನೆಗೂ ಸಂಬಂಧವಿಲ್ಲ. ಸ್ವಚ್ಛಂದಾಚರಣೆಯೇ ಮೂಲವಾಗಿರುವ ವರ್ಣಸಂಕರವು ಲೋಕಕ್ಕೆ ಮಾರಕವಾಗಿದ್ದರೆ, ಶ್ರೀ ಸದ್ಗುರುಶಾಸನಪುನೀತವಾದ ಏಕವರ್ಣ ಘಟನೆಯು ಲೋಕಕ್ಕೆ ತಾರಕವಾಗಿರುತ್ತದೆ. ಒಂದೇ ಒಂದಾದ ಸದ್ಗುರುರೂಪ ದಿವ್ಯ ವಿಭೂತಿಯೇ ಚಾತುರ್ವರ್ಣಾತ್ಮಕ ವೈದಿಕ ಧರ್ಮವನ್ನೂ, ಏಕವರ್ಣಾತ್ಮಕ ವೈದಿಕ ಧರ್ಮವನ್ನೂ ಲೋಕೋದ್ಧಾರಕ್ಕಾಗಿಯೇ ಅನಾದಿಯಿಂದ ಪ್ರಚಾರದಲ್ಲಿ ತಂದಿರುವದು. ವಿರಾಟಪುರುಷನ ಮುಖ-ಬಾಹು-ತೊಡೆ- ಪಾದಗಳಿಂದ ಉತ್ಪನ್ನವಾದ ಬ್ರಾಹ್ಮಣ- ಕ್ಷತ್ರಿಯ-ವೈಶ್ಯ-ಶೂದ್ರ ವರ್ಣಗಳು ಜಾತಿನಿಷ್ಠವೆಂತಲೂ, ಗುಣಕರ್ಮನಿಷ್ಠವೆಂತಲೂ ನಿರ್ಣಯಿಸಲ್ಪಟ್ಟಿದ್ದು, ಅವುಗಳಲ್ಲಿ ಜಾತಿನಿಷ್ಠವೆಂಬ ನಿರ್ಣಯವು ಚತುರ್ವರ್ಣಾತ್ಮಕ ವೈದಿಕ ಧರ್ಮದ ಉತ್ಪತ್ತಿಗೂ, ಗುಣಕರ್ಮ ನಿಷ್ಠವೆಂಬ ನಿರ್ಣಯವು ಏಕವರ್ಣಾತ್ಮಕ ವೈದಿಕ ಧರ್ಮದ ಉತ್ಪತ್ತಿಗೂ ಕಾರಣವಾಗಿರುವವು. ಗುಣಕರ್ಮನಿಷ್ಠವೆಂದು ನಿರ್ಣಯಿಸಿದ ಮಹಾತ್ಮರು ಚಾತುರ್ವರ್ಣಗಳಿಗೆ ಮಹತ್ವಕೊಡದೆ ಅವನ್ನು ಮುರಿಬಡಿದು ಏಕವರ್ಣಾತ್ಮಕ ವೈದಿಕ ಧರ್ಮವನ್ನು ಪ್ರಚಾರಗೊಳಿಸಿದರು. ಆ ಏಕವರ್ಣಾತ್ಮಕ ವೈದಿಕ ಧರ್ಮದಲ್ಲಿ ಗುಣ-ಕರ್ಮಗಳಿಂದ ಬ್ರಾಹ್ಮಣ- ಕ್ಷತ್ರಿಯ-ವೈಶ್ಯ-ಶೂದ್ರರು ಇರಬಹುದು; ಆದರೆ ಇಂಥವರೇ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ- ಶೂದ್ರರೆಂತಲೂ,

ಅವರವರ ವಂಶದವರೇ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ– ಶೂದ್ರರಾಗಿ ಉಳಿಯಬೇಕೆಂತಲೂ ನಿರ್ಬಂಧವಿದ್ದಂತೆ ತೋರುವದಿಲ್ಲ. ಮತ್ತು ಚಾತುರ್ವರ್ಣಾತ್ಮಕ ವೈದಿಕ ಧರ್ಮದವರಿಗೆ ವಿಧಿಸಿರುವ ವೇದೋಕ್ತ ಯಜ್ಞಯಾಗಾದಿ ಕರ್ಮಗಳೂ, ಬೇರೆ ವರ್ಣೋಕ್ತ ಆಚರಣೆಗಳೂ ಈ ಏಕವರ್ಣಾತ್ಮಕ ವೈದಿಕ ಧರ್ಮದೊಳಗಿನ ಗುಣ–ಕರ್ಮಗಳಿಂದ ತೋರಿಬರುವ ಬ್ರಾಹ್ಮಣಾದಿ ವರ್ಣಗಳಿಗೆ ಸಂಬಂಧಿಸುವದಿಲ್ಲ. ಹ್ಯಾಗಿದ್ದರೂ, ಚಾತುವರ್ಣಾತ್ಮಕ ವೈದಿಕ ಧರ್ಮವೇ ಆಗಲಿ, ಏಕವರ್ಣಾತ್ಮಕ ವೈದಿಕ ಧರ್ಮವೇ ಆಗಲಿ, ಅವು ಗುರುಶಾಸನದಿಂದ ಶಾಶಿತವಾಗಿರುವದರಿಂದಲೇ ಧರ್ಮಗಳೆನಿಸುವವು. ಅವು ಗುರುಶಾಸನವಿಹೀನವಾಗಿ ಸ್ವಚ್ಛಂದಾಚರಣೇಯವಾದರೆ ಅವೆರಡಕ್ಕೂ ಧರ್ಮಸಂಜ್ಞೆಯು ಬರಲಾರದು. ಅವನ್ನು ಕಲಹಲಂಪಟ ಪಂಗಡಗಳೆಂದು ಭಾವಿಸತಕ್ಕದ್ದು; ಯಾಕಂದರೆ ಆ ಪಂಗಡಗಳೊಳಗಿನ ವ್ಯಕ್ತಿಗಳು ಶ್ರದ್ಧಾಪೂರ್ವಕವಾಗಿ ತಮ್ಮ ತಮ್ಮ ಧರ್ಮದಂತೆ ಆಚರಿಸಿ ಗುರುಕೃಪೆಯಿಂದ ಕೃತಾರ್ಥರಾಗು ವದನ್ನು ಬಿಟ್ಟು, ತಮ್ಮ ಧರ್ಮಕ್ಕೆ ಶ್ರೇಷ್ಠತ್ವವನ್ನು ಸ್ಥಾಪಿಸಹೋಗಿ ಕಲಹ ಬೆಳೆಸುತ್ತಾರೆ. ಇದು ಬಹಳ ದುಃಖದ ಸಂಗತಿಯು ! ಆರ್ಯವರ್ಯ, ನಾನು ಚತುರ್ವರ್ಣಾತ್ಮಕ ವೈದಿಕ ಧರ್ಮದವನಿದ್ದು, ಏಕವರ್ಣಾತ್ಮಕ ವೈದಿಕ ಧರ್ಮದ ವಿಚಾರ ಹೇಳುವ ಸಾಹಸವನ್ನು ತಮ್ಮ ಅಪ್ಪಣೆಯಂತೆ ಮಾಡಿದ್ದರೂ ಅದಕ್ಕಾಗಿ ನನ್ನನ್ನು ಕ್ಷಮಿಸಬೇಕು !

ವಿರೂಪಾಕ್ಷಾರ್ಯ— ಶ್ರೇಷ್ಠ ತತ್ವಜ್ಞಾನಿಗಳೆನಿಸುವ ಮಾಧವಾಚಾರ್ಯರ ತತ್ವನಿರೂಪಣದಲ್ಲಿ ವ್ಯತ್ಯಾಸವಿರಬಹುದೆಯೇ? ಆಚಾರ್ಯವರ, ನಿಮ್ಮ ತತ್ವವಿವೇಚನವು ಸಮಾಧಾನಕರವಾದದ್ದು. ಚಾತುರ್ವರ್ಣಗಳ ಯಥಾರ್ಥಪಾಲನವೂ, ಆಯಾಸಕರವಾದ ಕರ್ಮಕಲಾಪವೂ ಸರ್ವರಿಗೂ ಸಾಧ್ಯವಲ್ಲವೆಂಬ ಕನಿಕರದಿಂದ ಲೋಕೋದ್ಧಾರಕ್ಕಾಗಿ ಮಹಾತ್ಮರು ತಮ್ಮ ಅಗಾಧವಾದ ದಿವ್ಯಸಾಮರ್ಥ್ಯದಿಂದ, ಅಲ್ಪಶ್ರಮಕ್ಕೆ ಮಹತ್ಫಲವು ಸಿಗುವಂಥ, ಕರ್ಮಾಚರಣೆಯ ತೊಡಕಿಲ್ಲದಂಥ, ಜ್ಞಾನಪ್ರಧಾನವಾದಂಥ, ಸರ್ವಜನ ಸುಲಭವಾದಂಥ ಏಕವರ್ಣಾತ್ಮಕ ವೈದಿಕ ಧರ್ಮವನ್ನು ಸ್ಥಾಪಿಸಿದರು. ಯಾವ ಧರ್ಮಗಳಾದರೂ ಲೋಕಕಲ್ಯಾಣಕ್ಕಾಗಿಯೇ ಇರುವದರಿಂದ ಅವರವರ ಧರ್ಮಗಳು ಅವರವರಿಗೆ ತಾರಕವಾಗಿಯೇ ಇರುವವು.

ಮಾಧವಾಚಾರ್ಯ— ಆರ್ಯವರ, ಈ ಸಾರಭೂತ ಬೋಧವನ್ನು ಸಭಿಕರೆಲ್ಲರೂ ಲಕ್ಷ್ಯದಲ್ಲಿಡತಕ್ಕದ್ದು; ಸದ್ಗುರುವು ಕೊಡುವ ಆಯಾಸ–ನಿರಾಯಾಸಗಳೆರಡೂ ತಾರಕಗಳೇ ! ಇದನ್ನರಿಯದೆ, ನಿಮ್ಮ ಧರ್ಮವು ಆಯಾಸದ ವೈದಿಕ ಕರ್ಮಮಯವಾದದ್ದು; ನಿಮ್ಮ ಧರ್ಮವು ವೈದಿಕ ಕರ್ಮಹೀನವಾದದ್ದು ಎಂದು ನಿರರ್ಥಕವಾಗಿ ಪರಸ್ಪರ ಬಡಿದಾಡುವವರು ಹಾನಿಗೆ ಗುರಿಯಾಗದೆ ಇರರು.

ದಕ್ಷಿಣಾಮೂರ್ತಿಭಟ್ಟ— ಈ ಎರಡೂ ಬಗೆಯ ಧರ್ಮಗಳಲ್ಲಿ ಶ್ರೇಷ್ಠವಾದದ್ದು ಯಾವದು?

ಮಾಧವಾಚಾರ್ಯ— ವಿಪ್ರವರ್ಯ, ನನ್ನ ನಿರೂಪಣದ ತಾತ್ಪರ್ಯವು ನಿಮ್ಮ ಮನಸ್ಸಿನಲ್ಲಿ ಬರಲಿಲ್ಲವೆಂದಹಾಗಾಯಿತು. ಅವರವರ ಧರ್ಮಗಳು ಮಾತ್ರ ಅವರವರಿಗೆ ತಾರಕವಾಗಿರುವದರಿಂದ ಅವರವರ ಧರ್ಮಗಳು ಅವರವರಿಗೆ ಶ್ರೇಷ್ಠವಾಗಿರುವವು.

ವಿರೂಪಾಕ್ಷಾರ್ಯ—ಮಾಧವಪಂಡಿತ, ಈ ವಿಷಯವನ್ನು ಕುರಿತು ಇದಕ್ಕೂ ಸ್ಪಷ್ಟವಾಗಿ ನಿರೂಪಿಸುವದು ನನಗೆ ನೆಟ್ಟಗೆ ಕಾಣುತ್ತದೆ; ಯಾಕಂದರೆ, ಪ್ರತಿಯೊಬ್ಬನಿಗೆ ತನ್ನ ಧರ್ಮವು ಶ್ರೇಷ್ಠವಾಗಿರಬೇಕೆಂಬ ಇಚ್ಛೆಯು ಇದ್ದೇ ಇರುತ್ತದೆ; ಆದ್ದರಿಂದ ಬಹುಜನರು ತಮ್ಮ ಧರ್ಮವು ಅನ್ಯಧರ್ಮಗಳಿಗಿಂತ ಶ್ರೇಷ್ಠವೆಂದು ಪ್ರತಿಪಾದಿಸಹೋಗಿ ಪರಧರ್ಮವನ್ನು ನಿಂದಿಸಿದ ದ್ರೋಹಕಟ್ಟಿಕೊಳ್ಳುವರು; ಇದು ಬಹಳ ಅನ್ಯಾಯವು ! ಧರ್ಮಗಳಲ್ಲಿ ಆಚರಿಸತಕ್ಕ ಧರ್ಮಗಳೆಂತಲೂ, ವಿಚಾರಿಸತಕ್ಕ ಧರ್ಮಗಳೆಂತಲೂ ಎರಡು ವಿಧಗಳಿರುವವು. ಆಚರಿಸತಕ್ಕ ಧರ್ಮಗಳು ಸ್ವಧರ್ಮ ಮಾತ್ರ ! ಸಹಾನುಭೂತಿಯಿಂದ ವಿಚಾರಿಸತಕ್ಕ ಧರ್ಮಗಳು ಎಲ್ಲ ಪರಧರ್ಮಗಳು ! ಅಂದಬಳಿಕ ಸನಾತನತ್ವದ ದೃಷ್ಟಿಯಿಂದ ಎಲ್ಲ ಧರ್ಮಗಳು ಸಜಾತೀಯವಾದರೂ, ಆಚರಿಸತಕ್ಕವು– ವಿಚಾರಿಸತಕ್ಕವು ಎಂಬ ಭೇದದೃಷ್ಟಿಯಿಂದ ಅವು ವಿಜಾತೀಯವಾಗುವವು. ಅಂದಬಳಿಕ ವಿಜಾತೀಯವಾದವನ್ನು ಪರಸ್ಪರ ಹೋಲಿಸಿ ಶ್ರೇಷ್ಠತ್ವ ಕನಿಷ್ಠತ್ವಗಳನ್ನು ನಿರ್ಣಯಿಸುವದು ಹ್ಯಾಗೆ ಶಾಸ್ತ್ರೀಯವಾದೀತು ? ಇದಕ್ಕೊಂದು ಉದಾಹರಣವನ್ನು ಕೊಡೋಣ. ಹಣ್ಣುಗಳೆಂಬ ದೃಷ್ಟಿಯಿಂದ ಮಾವಿನಹಣ್ಣು, ಬಾಳೇಹಣ್ಣು, ದ್ರಾಕ್ಷಿಯಹಣ್ಣು ಮುಂತಾದವು ಸಜಾತೀಯವಾದರೂ, ರುಚಿ–ಆಕಾರ–ಬಣ್ಣ ಮೊದಲಾದವುಗಳ ದೃಷ್ಟಿಯಿಂದ ಅವು ವಿಜಾತೀಯವಾಗಿರುವವು. ಅಂದಬಳಿಕ ಮಾವಿನಹಣ್ಣಿಗಿಂತ ಬಾಳೆಹಣ್ಣು ಶ್ರೇಷ್ಠ, ಬಾಳೆಯ ಹಣ್ಣಿಗಿಂತ ದ್ರಾಕ್ಷಿಯಹಣ್ಣು ಶ್ರೇಷ್ಠ ಎಂದು ನಿರ್ಣಯಿಸುವದು ಶಾಸ್ತ್ರೀಯವಾಗಬಹುದೋ? ಅಭಿರುಚಿಯ ಮೂಲಕ ಯಾವ ಯಾವ ಹಣ್ಣು ಯಾರುಯಾರಿಂದ ಸೇವ್ಯವಾಗಿರುವವೋ ಅವರವರ ದೃಷ್ಟಿಯಿಂದ ಆಯಾ ಹಣ್ಣುಗಳು ಅವರವರಿಗೆ ಶ್ರೇಷ್ಠವಾಗಿರುವವು. ಅದರಂತೆ ನಮಗೆ ಸೇವ್ಯವಾದದ್ದೆಂಬ ಕಾರಣದಿಂದ ಆಚರಿಸತಕ್ಕ ಸ್ವಧರ್ಮವು ಸ್ವಭಾವತಃ ಶ್ರೇಷ್ಠವಾಗಿರುವದು; ಆದರೆ ವಿಚಾರಿಸತಕ್ಕ ಪರ ಧರ್ಮಗಳು ಆಚರಿಸತಕ್ಕವೆಂಬ ದೃಷ್ಟಿಯಿಂದ ಭಯಾವಹ ಗಳಾದದ್ದರಿಂದ ಅವು ಸ್ವಧರ್ಮಕ್ಕಿಂತ ಗೌಣವಾಗಿರುವವು !

ಸುಬ್ರಹ್ಮಣ್ಯಾವಧಾನಿ—ಏಕವರ್ಣಾತ್ಮಕ ವೈದಿಕ ಧರ್ಮದವರಿಗೆ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ– ಶೂದ್ರ ಎಂಬ ಸಂಜ್ಞೆಗಳು ಇಲ್ಲವಷ್ಟೆ ?

ಮಾಧವಾಚಾರ್ಯ— ಇದನ್ನು ಆರ್ಯವರ್ಯರು ನಿರೂಪಿಸಿದರೆ ನೆಟ್ಟಗಾಗುವದು.

ವಿರೂಪಾಕ್ಷಾರ್ಯ—ಆಚಾರ್ಯವರ, ಯಾರು ನಿರೂಪಿಸಿದರೇನು ? ನಿಮ್ಮ ಇಚ್ಛೆಯಿದ್ದರೆ ತಿಳಿದಮಟ್ಟಿಗೆ ನಾನೇ ನಿರೂಪಿಸುವೆನು. ನಮ್ಮ ವೀರಶೈವ ಲಿಂಗಾಯತರಲ್ಲಿ ವರ್ಣತಃ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರರು ಇಲ್ಲದಿದ್ದರೂ ವೃತ್ತಿಯಿಂದ, ಅಥವಾ ಗುಣ–ಕರ್ಮಗಳಿಂದ ನಮ್ಮಲ್ಲಿ ಬ್ರಾಹ್ಮಣರಿರುವರು–ಕ್ಷತ್ರಿಯರಿರುವರು–ವೈಶ್ಯರಿರುವರು–ಶೂದ್ರರಿರುವರು; ಆದರೆ ನಿಮ್ಮ ಚಾತುರ್ವರ್ಣಾತ್ಮಕ ವೈದಿಕ ಧರ್ಮಗಳಲ್ಲಿ ಗುಣಕರ್ಮಗಳಿಗಿಂತಲೂ ಜಾತಿಗೆ ಮಹತ್ವ ವಿರುವದರಿಂದ ಆಯಾ ಜಾತಿಗಳಿಗೆ ಬ್ರಾಹ್ಮಣಾದಿ ಜಾತಿವಿಭೇದಕ ಸಂಜ್ಞೆಗಳನ್ನು ಕೊಟ್ಟು ಒಂದರಿಂದೊಂದನ್ನು ವಿಂಗಡಿಸಬೇಕಾಗುವದು. ಹೀಗೆ ವಿಂಗಡಿಸುವದು ವರ್ಣವ್ಯವಸ್ಥೆ ಯಲ್ಲದೆ ನಮ್ಮ ವೈದಿಕ ಧರ್ಮದಲ್ಲಿ ಅವಶ್ಯ ವಿಲ್ಲದ್ದರಿಂದ ನಮ್ಮವರಿಗೆ ಬ್ರಾಹ್ಮಣಾದಿ ಯಾವ

ಸಂಜ್ಞೆಗಳನ್ನೂ ಪ್ರಾಮುಖ್ಯವಾಗಿ ಕೊಟ್ಟಿರುವದಿಲ್ಲ. ವೈದಿಕರೆಂಬ ದೃಷ್ಟಿಯಿಂದ ನಮ್ಮ ನಿಮ್ಮಲ್ಲಿ ಭೇದವಿಲ್ಲದಿದ್ದರೂ, ವರ್ಣವ್ಯವಸ್ಥೆಯ ಸಂಬಂಧದಿಂದ ನಮ್ಮ ನಿಮ್ಮಲ್ಲಿ ಭೇದವಿರುತ್ತದೆ. ಈ ಭೇದಲಕ್ಷಣವು ವ್ಯಕ್ತವಾಗಿ ತೋರುವದಕ್ಕಾಗಿಯೇ ಚತುರ್ವರ್ಣಾತ್ಮಕ ವೈದಿಕರಾದ ನಿಮಗೆ ಬ್ರಾಹ್ಮಣಾದಿ ವರ್ಣಭೇದ ದ್ಯೋತಕ ಸಂಜ್ಞೆಗಳಿರುವದೂ, ಏಕವರ್ಣಾತ್ಮಕ ವೈದಿಕರಾದ ನಮಗೆ ಈ ಬ್ರಾಹ್ಮಣಾದಿ ವರ್ಣಭೇದದ್ಯೋತಕ ಸಂಜ್ಞೆಗಳಿರದಿರುವದೂ ಅವಶ್ಯವಾಗಿರುತ್ತದೆ; ಅದರಿಂದಲೇ ನಮಗೆ ಸಾಮಾನ್ಯವಾಗಿ ''ಲಿಂಗಾಯತ''ವೆಂದು ಸಂಜ್ಞೆಯು ಇರುವದು; ಹಾಗಿಲ್ಲದಿದ್ದರೆ ನಮ್ಮ ನಿಮ್ಮಲ್ಲಿಯ ಭೇದವು ಹ್ಯಾಗೆ ಒಡೆದು ಕಂಡೀತು ?

ಮಾಧವಾಚಾರ್ಯ—ಬಹು ಯೋಗ್ಯ ವಿಚಾರವು. ಬ್ರಾಹ್ಮಣ–ಲಿಂಗಾಯತ ಇತ್ಯಾದಿ ಶಬ್ದಗಳು ಸಂಜ್ಞಾರೂಪವಾಗಿರುವವಲ್ಲದೆ ವಸ್ತುತಃ ಈ ಶಬ್ದಗಳಲ್ಲಿ ಮಹತ್ವವಿಲ್ಲ; ಆದರೆ ಸಂಜ್ಞಿತ ವ್ಯಕ್ತಿಯು ಗೌರವಶಾಲಿಯಾದರೆ ಮಾತ್ರ ಆ ಸಂಜ್ಞೆಯ ಶಬ್ದಗಳಿಗೆ ಗೌರವ ಬರುತ್ತದೆ. ಆದ್ದರಿಂದ ಆರ್ಯವರ್ಯರ ನಿರೂಪಣವು ಎಲ್ಲರೂ ನೆನಪಿಡತಕ್ಕದ್ದಾಗಿದೆ.

ದಕ್ಷಿಣಾಮೂರ್ತಿಭಟ್ಟ—ಹಾಗಾದರೆ ಚಾತುರ್ವರ್ಣಾತ್ಮಕ ವೈದಿಕರಿರಲಿ, ಏಕವರ್ಣಾತ್ಮಕ ವೈದಿಕರಿರಲಿ ಅವರೆಲ್ಲರೂ ವೈದಿಕರಿರುವದರಿಂದ ಎಲ್ಲರಿಗೂ ವೇದಾಧ್ಯಯನದ ಅಧಿಕಾರ ವಿರುವದೆಂದು ಹೇಳಬೇಕಾಗುವದಲ್ಲವೆ?

ಮಾಧವಾಚಾರ್ಯ—ನಿನ್ನ ಪ್ರಶ್ನದ ಉತ್ತರವು ಬಹು ತೊಡಕಿನದಾಗಿರುವದು. ಅಧ್ಯಯನಕ್ಕೆ ಗುರು–ಶಿಷ್ಯ ಸಂಬಂಧವು ಅವಶ್ಯವಾದದ್ದೆಂಬದನ್ನು ಗಟ್ಟಿಮುಟ್ಟಾಗಿ ತಿಳಿದುಕೊಂಡಿರಬೇಕು. ಅದರಲ್ಲಿ ವೇದಾಧ್ಯಯನವು ಐಹಿಕವಾಗಿರದೆ ಪಾರತ್ರಿಕವಾಗಿರುವದರಿಂದ ಅದರ ಅಧ್ಯಯನಕ್ಕೆ ಪಾರಮಾರ್ಥಿಕ ಗುರು–ಶಿಷ್ಯ ಸಂಬಂಧವೂ, ಉಪನಯನವೂ, ಗುರುಕುಲವಾಸವೂ ಅವಶ್ಯವಾಗಿರುವವು; ಆದರೆ ಇಂಥ ಪಾರಮಾರ್ಥಿಕ ಗುರು–ಶಿಷ್ಯ ಸಂಬಂಧವೂ, ಉಪನಯನ ಸಂಸ್ಕಾರವೂ, ಗುರುಕುಲ ವಾಸಾನುಕೂಲತೆಯೂ ಚಾತುರ್ವರ್ಣಾತ್ಮಕ ವೈದಿಕರಿಗೂ, ಏಕವರ್ಣಾತ್ಮಕ ವೈದಿಕರಿಗೂ ಪರಸ್ಪರ ಸರ್ವಥಾ ಇಲ್ಲದಿರುವದರಿಂದ ಒಬ್ಬರು ಮತ್ತೊಬ್ಬರಿಗೆ ವೇದಾಧ್ಯಯನ ಮಾಡಿಸಲು ಅಧಿಕಾರಿ ಗಳಾಗಲಾರರು. ಚಾತುರ್ವರ್ಣಾತ್ಮಕ ವೈದಿಕ ಧರ್ಮದಲ್ಲಿ ''ವರ್ಣಾನಾಂ ಬ್ರಾಹ್ಮಣೋ ಗುರುಃ'' ಎಂಬ ನಿಯಮದಂತೆ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರ ವರ್ಣಗಳಿಗೆ ಬ್ರಾಹ್ಮಣರೇ ಗುರುಗಳಾಗಿರುವದರಿಂದ ಬ್ರಾಹ್ಮಣರಿಗೆ ಮಾತ್ರ ತಮ್ಮ ಚಾತುರ್ವರ್ಣಗಳಲ್ಲಿ ಅಧಿಕಾರ ಸಂಪನ್ನರಿಗೆ ವೇದಾಧ್ಯಯನ ಮಾಡಿಸಲಿಕ್ಕೆ ಅಧಿಕಾರವಿರುವದು. ಈ ಅಧಿಕಾರಸಂಪನ್ನರ ಹೊರತು ಅನ್ಯರಿಗೆ, ಅಂದರೆ ಏಕವರ್ಣಾತ್ಮಕ ವೈದಿಕ ಧರ್ಮದವರಿಗಾಗಲಿ, ಬೇರೆ ಅವೈದಿಕ ಧರ್ಮದವರಿಗಾಗಲಿ ಉಪದೇಶರೂಪವಾಗಿರುವ ವೇದಾಧ್ಯಯನ ಮಾಡಿಸಲಿಕ್ಕೆ ಅಧಿಕಾರವಿಲ್ಲ.

ದಕ್ಷಿಣಾಮೂರ್ತಿಭಟ್ಟ—ಏಕವರ್ಣಾತ್ಮಕ ವೈದಿಕರಿಗೆ ವೇದಾಧಿಕಾರವಿರುವದೋ?

ಮಾಧವಾಚಾರ್ಯ—ಆ ಮಾತು ಸ್ವತಂತ್ರವಾದದ್ದು. ಅದರ ನಿರ್ಣಯವನ್ನು ಮಾಡುವ ಅಧಿಕಾರವು ಚಾತುರ್ವರ್ಣಾತ್ಮಕ ವೈದಿಕರಾಗಿರುವ ನಮಗೆ ಇರುವದಿಲ್ಲ; ಅದರ ನಿರ್ಣಯವನ್ನು

ಆಯಾ ಏಕವರ್ಣಾತ್ಮಕ ವೈದಿಕ ಧರ್ಮದ ಪೂರ್ವಾಚಾರ್ಯರು ಮಾಡಿರುವಂತೆ ಆಯಾ ವರ್ಣದವರು ನಡೆದುಕೊಳ್ಳುವರು. ಆ ವಿಷಯದಲ್ಲಿ ನಾವು ಚಾತುರ್ವರ್ಣಾತ್ಮಕ ವೈದಿಕರು ಮನಸ್ಸು ಹಾಕುವದು ಅನುಚಿತವು; ಯಾಕಂದರೆ, ಇವೆರಡೂ ಬಗೆಯ ವೈದಿಕ ಧರ್ಮಗಳಲ್ಲಿ ಮೇಲೆ ಹೇಳಿದಂತೆ ಪರಸ್ಪರ ಗುರು–ಶಿಷ್ಯ ಸಂಬಂಧವೇ ಇಲ್ಲದ್ದರಿಂದ ಒಬ್ಬರ ಧರ್ಮವಿಚಾರದಲ್ಲಿ ಮತ್ತೊಬ್ಬರು ಕೈಹಾಕುವ ಕಾರಣವೇನು ? ನಿಷ್ಕಾರಣ ಕೈಹಾಕಿದರೆ ಕಾಲುಕೆದರಿ ಜಗಳ ತೆಗೆದ ಹಾಗೆಯೇ ಸರಿ!

ವಿರೂಪಾಕ್ಷಾರ್ಯ–ಸರಿ ಸರಿ ! ಆಚಾರ್ಯವರ, ನಿಮ್ಮ ನಿರ್ಣಯವು ನಿರ್ವಿವಾದ ವಾದದ್ದು. ಪರಸ್ಪರರು ಸ್ವತಂತ್ರರಾಗಿರಲು, ಒಬ್ಬರ ವ್ಯವಹಾರದಲ್ಲಿ ಮತ್ತೊಬ್ಬರು ನಿಷ್ಕಾರಣ ಕೈಹಾಕುವದು ಅಪ್ರಾಸಂಗಿಕವೇ ಸರಿ. ಯೋಗ್ಯ ನಿರ್ಣಯವಿದು.

ತಿರುಮಲಯ್ಯಂಗಾರ– ಚಾತುರ್ವರ್ಣಗಳಲ್ಲಿ ಯಾವ ವರ್ಣಗಳಲ್ಲಿ ವೇದಾಧಿಕಾರುವಿರುವದು ?

ಮಾಧವಾಚಾರ್ಯ– ಬ್ರಾಹ್ಮಣ–ಕ್ಷತ್ರಿಯ–ವೈಶ್ಯ ಈ ಮೂರು ವರ್ಣದವರಿಗೆ ಉಪನಯನದಿಂದ ದ್ವಿಜತ್ವ ಬರುವದರಿಂದ ಈ ಮೂರುವರ್ಣದವರಿಗೂ ವೇದಾಧಿಕಾರ ವಿರುವದು. ಶೂದ್ರರಿಗೆ ಉಪನಯನಾಧಿಕಾರವಿಲ್ಲದ್ದರಿಂದ ಅವರಿಗೆ ವೇದಾಧಿಕಾರವಿಲ್ಲ; ಆದರೆ ಕಾಲಮಹಿಮೆಯಿಂದ ದ್ವಿಜರು ಅಂದರೆ ಬ್ರಾಹ್ಮಣ–ಕ್ಷತ್ರಿಯ– ವೈಶ್ಯರು ಆಚಾರ ಹೀನರಾಗಿ ಅಧಮಕೋಟಿಯಲ್ಲಿ ಸೇರಿದರೆ– ''ಸ್ತ್ರೀ ಶೂದ್ರದ್ವಿಜಬಂಧೂ ನಾಂತ್ರಯೀನ್ ಶ್ರುತಿಗೋಚರಃ'' ಎಂಬ ಸ್ಮೃತಿವಾಕ್ಯದಂತೆ ಸ್ತ್ರೀಯರಿಗೂ, ಶೂದ್ರರಿಗೂ ದ್ವಿಜಬಂಧುವೆಂದರೆ ದ್ವಿಜಾಧಮರಿಗೂ (ಅವರು ಬ್ರಾಹ್ಮಣರಿರ ಬಹುದು, ಕ್ಷತ್ರಿಯರಿರಬಹುದು, ವೈಶ್ಯರಿರ ಬಹುದು) ವೇದಾಧ್ಯಯನಕ್ಕೆ ಅಧಿಕಾರವಿಲ್ಲವು. ಅಧಮರಲ್ಲದ ದ್ವಿಜರಿಗೆ ಮಾತ್ರ ಅವರು ಬ್ರಾಹ್ಮಣರಿರಲಿ–ಕ್ಷತ್ರಿಯರಿರಲಿ–ವೈಶ್ಯರಿರಲಿ ಅವರಿಗೆ ಬ್ರಾಹ್ಮಣರು ವೇದಾಧ್ಯಯನ ಮಾಡಿಸಬಹುದು.

ತಿರುಮಲಯ್ಯಂಗಾರ— ಆಚಾರ್ಯವರ, ಪುರಾಣಗಳಲ್ಲಿ ವರ್ಣಗಳ ಸಂಬಂಧದಿಂದ ''ಕಲಾವಾದ್ಯಂತಯೋಃ ಸ್ಥಿತಿಃ'' ಎಂದು ಹೇಳಿರುವದಲ್ಲ? ಇದರ ಮೇಲಿಂದ ಕಲಿಯುಗದಲ್ಲಿ ಮೊದಲಿನ–ಕಡೆಯ ವರ್ಣಗಳಾದ ಬ್ರಾಹ್ಮಣ, ಶೂದ್ರವರ್ಣಗಳೆರಡೇ ಇರುವವೆಂದು ಗೊತ್ತಾಗುತ್ತವಾದ್ದರಿಂದ ನಡುವಿನ ಕ್ಷತ್ರಿಯ–ವೈಶ್ಯ ವರ್ಣಗಳೆರಡು ಕಲಿಯುಗದಲ್ಲಿ ಇಲ್ಲವೆಂದು ಸಿದ್ಧವಾಗುತ್ತವೆ. ಅಂದಬಳಿಕ ಈಗ ಆ ಎರಡು ವರ್ಣಗಳಿಗೆ ವೇದಾಧಿಕಾರವು ಹ್ಯಾಗೆ ಪ್ರಾಪ್ತವಾಗುವದು ?

ಮಾಧವಾಚಾರ್ಯ— ವಿಪ್ರೋತ್ತಮಾ, ನೀನು ಕೇಳಿದ ಪ್ರಶ್ನವು ವಿಚಾರಣೀಯ ವಾಗಿರುವದು. ''ಕಲಾವಾದ್ಯಂತಯೋಃ ಸ್ಥಿತಿಃ'' ಎಂದು ಪುರಾಣವಚನವಿರುವದೇನೋ ನಿಜವು; ಆದರೆ ಪರಾಶರ ಸ್ಮೃತಿಯು ಕಲಿಯುಗದ ಸಲುವಾಗಿಯೇ ಇದ್ದು, ಇದರಲ್ಲಿ ಕಲಿಯುಗದೊಳಗಿನ ಕ್ಷತ್ರಿಯ–ವೈಶ್ಯ ವರ್ಣದವರ ಸಲುವಾಗಿ ಹಲವು ಧರ್ಮಗಳನ್ನು ಹೇಳಿರುತ್ತದಲ್ಲದೆ, ಕಲಿಯುಗದಲ್ಲಿಯೇ ಧರ್ಮರಾಜನೇ ಮೊದಲಾದ ಪ್ರಾಚೀನ ಕ್ಷತ್ರಿಯ ರಾಜರೂ, ಚಾಲುಕ್ಯ ಗುಪ್ತರೇ ಮೊದಲಾದ ಅರ್ವಾಚೀನ ಕ್ಷತ್ರಿಯರಾಜರೂ, ಅಶ್ವಮೇಧ ಯಜ್ಞಮಾಡಿರುವರೆಂದು ಪುರಾಣೇತಿಹಾಸಗಳು ಹೇಳುತ್ತವೆ; ಅಂದ ಬಳಿಕ ಇದರ ಸಮಾಧಾನವೇನು? ''ಕ್ಷತ್ರಿಯೋಪಿ

ಕೃಷಿಂಕೃತ್ವಾ ದೇವಾನ್ ವಿಪ್ರಾಶ್ಚ ಪೂಜಯೇತ್ । ವೈಶ್ಯಃ ಶೂದ್ರಸ್ತಥಾ ಕುರ್ಯಾತ್ ಕೃಷಿ ವಾಣಿಜ್ಯ ಶಿಲ್ಪಕಂ॥'' ಎಂಬ ವಚನವು ಪರಾಶರ ಸ್ಮೃತಿಯೊಳಗಿನದೇ ಇರುತ್ತದೆ. ಅಂದ ಬಳಿಕ ಮೇಲಿನ ಪುರಾಣ ವಾಕ್ಯಕ್ಕೆ ಈ ಸ್ಮೃತಿವಾಕ್ಯವೂ, ಇತಿಹಾಸವೂ ವಿರುದ್ಧವಾಗಿರುವವೆಂದ ಹಾಗಾಯಿತು. ಈ ಪ್ರಸಂಗದಲ್ಲಿ– ''ಶೃತಿ–ಸ್ಮೃತಿ ಪುರಾಣಾನಾಂ ವಿರೋಧೋ ಯತ್ರ ದೃಶ್ಯತೇ । ತತ್ರ ಶ್ರೌತಂ ಪ್ರಮಾಣಂತು ತಯೋರ್ದ್ವೈಧೇಸ್ಮೃತಿರ್ವರಾ॥'' ಎಂಬ ವ್ಯಾಸಸ್ಮೃತಿ ವಚನದಂತೆ ಶೃತಿ–ಸ್ಮೃತಿ–ಪುರಾಣ ವಚನಗಳಲ್ಲಿ ವಿರೋಧ ಬಂದಾಗ ಶೃತಿ ವಚನವನ್ನೂ, ಸ್ಮೃತಿ–ಪುರಾಣಗಳಲ್ಲಿ ವಿರೋಧ ಬಂದಾಗ ಸ್ಮೃತಿವಚನವನ್ನೂ, ಅನುಸರಿಸಬೇಕಾಗುವದು; ಆದ್ದರಿಂದ ಮೇಲಿನ ಪುರಾಣದ ವಾಕ್ಯಕ್ಕೆ ಗೌಣತ್ವ ಬರುತ್ತದೆ. ಇದಲ್ಲದೆ, ಸ್ಮೃತಿವಾಕ್ಯಕ್ಕೆ ಐತಿಹಾಸಿಕ ಉದಾಹರಣಗಳೂ ಅನುಕೂಲವಾಗಿರುವವು. ಇದಲ್ಲದೆ ನಮ್ಮ ಪ್ರಾಚೀನ ಶಾಸ್ತ್ರಕಾರರಿಗೆ ಗೊತ್ತಿದ್ದಿಲ್ಲವೆಂತಲ್ಲ; ಆದರೆ ಹಿಂದಕ್ಕೆ ನಮ್ಮ ಭರತಭೂಮಿಗೆ ಅಂಥ ವಿಪನ್ನ ಸ್ಥಿತಿಯು ಒದಗಿದ್ದು, ಕ್ಷತ್ರಿಯ–ವೈಶ್ಯ ವರ್ಣಗಳು ಲುಪ್ತಪ್ರಾಯವಾದಂತೆ ಆದ್ದರಿಂದ ಪುರಾಣವಾಕ್ಯದಂತೆ ಅವರು ತಮ್ಮ ಧರ್ಮಶಾಸ್ತ್ರದಲ್ಲಿ ಬಹು ಕಷ್ಟದಿಂದ ಉಲ್ಲೇಖಿಸಿರಬಹುದು. ಒಮ್ಮೊಮ್ಮೆ ಉದ್ವೇಗದಿಂದ– ''ಊರು ಹಾಳಾಗಿ ಹೋಯಿತು; ಧರ್ಮವು ಮುಣುಗಿ ಹೋಯಿತು'' ಇತ್ಯಾದಿ ವಿಧಾನದ ವಾಕ್ಯಗಳನ್ನು ವ್ಯವಹಾರದಲ್ಲಿ ಆಡುವದುಂಟು; ಆದರೆ ಹಾಗೆ ಆಡಿದ ಮಾತ್ರದಿಂದ ಅವುಗಳು ಮುಣುಗಿ ಹೋಗುವವೋ? ಬೀಜರೂಪದಿಂದಾದರೂ ಅವು ಇರಲೇಬೇಕು. ಇದೇ ಮಾತು ಕ್ಷತ್ರಿಯ–ವೈಶ್ಯ ವರ್ಣಗಳಿಗೂ ಹತ್ತುವದೆಂದು ತಿಳಿಯತಕ್ಕದ್ದು. ಸಾಕ್ಷಾತ್ ಪರಶುರಾಮನು ಇಪ್ಪತ್ತೊಂದು ಸಾರೆ ಕ್ಷತ್ರಿಯ ವಂಶವನ್ನು ನಾಶಮಾಡಿ ''ನಿಃಕ್ಷತ್ರಿಯಾಪೃಥ್ವಿ'' ಯಾಗ ಮಾಡಹೋದರೂ, ಕಡೆಗೆ ಶ್ರೀರಾಮನಂಥ ಕ್ಷತ್ರಿಯ ರಾಜನಿಂದಲೇ ಆತನು ಸೋತು ತನ್ನ ಅವತಾರಕ್ರಿಯೆಯನ್ನು ಮುಗಿಸಬೇಕಾಯಿತು; ಅಂದಬಳಿಕ ಕ್ಷತ್ರಿಯ–ವೈಶ್ಯವರ್ಣಗಳಂಥ ವೇದೋಕ್ತ ವರ್ಣಗಳನ್ನು ನಿರ್ಬೀಜ ಮಾಡಲು ಅನ್ಯರ ಪಾಡೇನು? ಕ್ಷತ್ರಿಯ–ವೈಶ್ಯ ವರ್ಣದವರಿಗೆ ವೈದಿಕ ಧರ್ಮಾಧಿಕಾರವೂ, ವೈದಿಕ ಸಂಸ್ಕಾರಗಳೂ ಇದ್ದೇ ಇರುವವು; ಆದರೆ ನಡುವೆ ಬೌದ್ಧ–ಜೈನ ಧರ್ಮಗಳ ಗದ್ದಲವೆದ್ದದ್ದ ರಿಂದಲೂ, ಮುಸಲ್ಮಾನರ ಹಾವಳಿಯ ಮೂಲಕವಾಗಿಯೂ ಅವರ ವೈದಿಕಾಚಾರಗಳೂ, ಸಂಸ್ಕಾರಗಳೂ ನಷ್ಟವಾದವು. ಮುಖ್ಯವಾಗಿ ದ್ವಿಜರ ಮುಖ್ಯ ಸಂಸ್ಕಾರವಾದ ಮೌಂಜೀಬಂಧನವೂ ಅವರಲ್ಲಿ ಶಾಸ್ತ್ರೋಕ್ತ ನಡೆದ ಹಾಗಾಯಿತು. ಅಂದ ಬಳಿಕ ಅವರಿಗೆ ವೇದಾಧ್ಯಯನಕ್ಕೆ ಅವಸರವೆಲ್ಲಿ ದೊರೆಯಬೇಕು? ಈ ವಿಪತ್ತು ಬ್ರಾಹ್ಮಣರನ್ನು ಬಿಡದಿದ್ದರೂ, ಅವರ ಮೌಂಜಿ ಬಂಧನವನ್ನು ಅವಿಚ್ಛಿನ್ನವಾಗಿ ನಡಿಸುತ್ತ ಬಂದದ್ದಲ್ಲದೆ, ವೇದಾಧ್ಯಯನವನ್ನೂ, ಯಜ್ಞ–ಯಾಗಾದಿಗಳನ್ನೂ ಶಕ್ಯವಿದ್ದಮಟ್ಟಿಗೆ ಸಾಗಿಸುತ್ತ ಬಂದರು. ಇದಲ್ಲದೆ ಪರದೇಶದವರ ಹಾವಳಿಯ ಮೂಲಕ ಕ್ಷತ್ರಿಯರ ಅರಸೊತ್ತಿಗೆಯೂ ವೈಶ್ಯರ ಐಶ್ವರ್ಯವೂ ಕಡಿಮೆಯಾದವು; ಆದರೆ ಈಗಿನ ಕಾಲದಲ್ಲಿ—''ನಾವು ಕ್ಷತ್ರಿಯರು, ನಾವು ವೈಶ್ಯರು ನಮಗೆ ವೇದಾಧಿಕಾರವು ಯಾಕೆ ಇಲ್ಲ?'' ಎಂದು ಕೇಳುವದು ಸ್ಪೃಹಣೀಯವಾಗಿರುವದು. ಇಂಥ ಜಾಗೃತಿಯ ಕಾಲದಲ್ಲಿ ಬ್ರಾಹ್ಮಣರು ದೂರದರ್ಶಿಗಳಾದ ಪರಾಶರ ಸ್ಮೃತಿಯ ಆಧಾರದಿಂದ

ದೇಶ–ಕಾಲ–ಸ್ಥಿತಿಗನುಸರಿಸಿ ಚತುರ್ವರ್ಣಗಳನ್ನು ಕಾಯ್ದುಕೊಳ್ಳುವುದು ದೇಶದ ಹಿತದ ದೃಷ್ಟಿಯಿಂದಲೂ, ಚತುರ್ವರ್ಣಾತ್ಮಕ ವೈದಿಕ ಧರ್ಮದ ದೃಷ್ಟಿಯಿಂದಲೂ, ತಮ್ಮ ಗುರುತ್ವ ಕಾಯ್ದುಕೊಳ್ಳುವ ದೃಷ್ಟಿಯಿಂದಲೂ ಯೋಗ್ಯವಾಗಿರುವದು.

ವಿರೂಪಾಕ್ಷಾರ್ಯ—ತತ್ವತಃ ವಿಚಾರ ಮಾಡಿದರೆ ವರ್ಣವಿಭಾಗದಂತೆ ನಿಮ್ಮಲ್ಲಿ, ಹಾಗು ಗುಣಕರ್ಮವಿಭಾಗದಂತೆ ನಮ್ಮಲ್ಲಿ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರ ಎಂಬ ನಾಲ್ಕು ವರ್ಣಗಳು ಉಳಿಯದೆ, ಬರಿಯ ಬ್ರಾಹ್ಮಣ–ಶೂದ್ರ ವರ್ಣಗಳೆರಡೇ ಉಳಿದರೆ ದೇಶಕ್ಕೆ ಹಾನಿಯಾಗಬಹುದೆಂದು ತೋರುತ್ತದೆ.

ಮಾಧವಾಚಾರ್ಯ— ಅದರಲ್ಲಿ ಸಂಶಯವೇನು? ನಿಮ್ಮ ಏಕವರ್ಣಾತ್ಮಕ ವೈದಿಕ ಧರ್ಮದಲ್ಲಿಯೇ ಆಗಲಿ, ನಮ್ಮ ಚತುರ್ವರ್ರ್ಣಾತ್ಮಕ ವೈದಿಕ ಧರ್ಮದಲ್ಲಿಯೇ ಆಗಲಿ ಬ್ರಾಹ್ಮಣರಾದವರು ಶಾಪಾನುಗ್ರಹ ಶಕ್ತಿಯುಳ್ಳವರು, ಅರ್ಥಾತ್ ಬಾಯಿಪೌರುಷದವರು. ಇನ್ನು ಶೂದ್ರರು ಭಾರವಾಹಕರು, ಅರ್ಥಾತ್ ಪರಾಧೀನರು! ಹೀಗೆ ದೇಶದಲ್ಲಿ ಬರಿಯ ಬಾಯಿಪೌರುಷದವರೂ, ಪರಾಧೀನರೂ ಮಾತ್ರ ಆಗಿ, ಪರಾಕ್ರಮಿಗಳಾದ ಕ್ಷತ್ರಿಯರೂ, ಧನಿಕರಾದ ವೈಶ್ಯರೂ ಇಲ್ಲವಾದರೆ ಆ ದೇಶವು ಎಂದೂ ತಲೆ ಎತ್ತಲಾರದು. ವೇದದಲ್ಲಿ– ''ಬ್ರಾಹ್ಮಣೋ ಬ್ರಹ್ಮವರ್ಚಸಿ ಜಾಯತಾ ಮಾರಷ್ಟ್ರೇ'' ಎಂದು ಪ್ರಾರ್ಥಿಸಿರುವಂತೆ ''ರಾಜನ್ಯಃ ಶೂರಇಷವ್ಯಃ, ಮಹಾರಥಃ, ಶೂರಃ, ಜಾಯತಾಂ'' ಎಂದು ಪ್ರಾರ್ಥಿಸಿರುವದು; ಆದ್ದರಿಂದ ನಾವು ನಮ್ಮಲ್ಲಿ ಕ್ಷತ್ರಿಯ–ವೈಶ್ಯ ವರ್ಣಗಳನ್ನು, ನೀವು ನಿಮ್ಮಲ್ಲಿ ಕ್ಷತ್ರಿಯ–ವೈಶ್ಯವೃತ್ತಿಯವರನ್ನೂ ಕಾಯ್ದು ಕೊಂಡು ಇಡಿಯ ರಾಷ್ಟ್ರವನ್ನು ಚತುರ್ವರ್ಣಗಳಿಂದ ತೇಜಸ್ವಿಯಾಗಿಯೂ, ಬಲಿಷ್ಠವಾಗಿಯೂ ಮಾಡತಕ್ಕದ್ದು!

ಚನ್ನಬಸವಾರ್ಯ— ಆಚಾರ್ಯವರ, ಇಂದಿನ ಸರಸವಾದ ನಿರೂಪಣವು ಎಲ್ಲ ವೈದಿಕರ ಸಮಾಧಾನಕ್ಕೂ ಕಾರಣವಾಗಿರುವದು ! ಆದರೆ ಒಂದೆರಡು ಮಾತು ಕೇಳಬೇಕೆನ್ನುತ್ತೇನೆ, ಕೇಳಬಹುದೋ ?

ಮಾಧವಾಚಾರ್ಯ— ಆರ್ಯರು ಅವಶ್ಯವಾಗಿ ಕೇಳಬೇಕು. ಕೇಳಲಿಕ್ಕೆ ಇದಕ್ಕಿಂತ ಹೆಚ್ಚಿನ ಸಮಯವು ಹ್ಯಾಗೆ ದೊರೆಯಬೇಕು ? ಮಹಾತ್ಮರಾದ ವಿರುಪಾಕ್ಷಾರ್ಯರಂಥ ಧರ್ಮಾತ್ಮರ ಸನ್ನಿಧಿಯಲ್ಲಲ್ಲದೆ ಸಂಶಯಗಳ ನಿವಾರಣವು ಮತ್ತೆಲ್ಲಿ ಆಗಬೇಕು ?

ಚನ್ನಬಸವಾರ್ಯ—ಸ್ಮೃತಿ ಪುರಾಣಗಳಂತೆ ಆಗಮಗಳು ಶ್ರುತಿಯನ್ನು ಅನುಸರಿಸುತ್ತವೆ ಯೆಂದು ಈ ಮೊದಲೇ ಹೇಳೋಣವಾಯಿತು; ಆದರೆ ಶ್ರುತಿಗಳು ಪರಮೇಶ್ವರನ ಶ್ವಾಸದಿಂದ ಉತ್ಪನ್ನವಾಗಿರುವಂತೆ ಆಗಮಗಳು ಪರಮೇಶ್ವರನ ಮುಖದಿಂದ ಉತ್ಪನ್ನವಾಗಿರುತ್ತವೆಯೆಂದು ಕೇಳಿದ್ದೇನೆ; ಅಂದಬಳಿಕ ಶ್ರುತಿಗಳಂತೆ ಆಗಮುಗಳು ಅಪೌರುಷೇಯಗಳೇ ಆದವು. ಹೀಗಿರಲು ಆಗಮಗಳಿಗೆ ಶ್ರುತಿಗಳ ಅನುಸರಣವು ಹ್ಯಾಗೆ ಸಂಭವಿಸುವದು ? ಮೇಲಾಗಿ ಸ್ಮೃತಿಗಳು ಮನ್ವಾದಿಕರಿಂದಲೂ, ಪುರಾಣಗಳು ವ್ಯಾಸರಿಂದಲೂ ಉತ್ಪನ್ನವಾಗಿರುವದರಿಂದ ಅವು ಪೌರುಷೇಯವಾದವು. ಮಹಾತ್ಮನ್, ಸಂಶಯ ಬಂದದ್ದರಿಂದ ಕೇಳಿದ್ದೇನೆ, ಕ್ಷಮಿಸೋಣ ವಾಗಬೇಕು.

ಮಾಧವಾಚಾರ್ಯ— ಆರ್ಯೋತ್ತಮ, ನಿಮ್ಮ ಶಂಕೆಯು ಬಹು ಯೋಗ್ಯವಾದದ್ದು. ತತ್ವತಃ ನೋಡಿದರೆ ಜಗತ್ತಿನಲ್ಲಿ ಸತ್ಯಜ್ಞಾನವು ಒಂದೇ ಒಂದಾಗಿದ್ದು ಅದನ್ನೇ ನಿಗಮಾಗಮ ಶ್ರುತಿ–ಪುರಾಣೇತಿಹಾಸಗಳೂ, ಬೇರೆ ಬೇರೆ ಮತದ ಗ್ರಂಥಗಳೂ ಅನುಸರಿಸುತ್ತವೆಯೆಂದು ಹೇಳಬೇಕಾಗುವದು; ಆದ್ದರಿಂದ ಆಗಮವು ಶ್ರುತಿಯನ್ನು ಅನುಸರಿಸುತ್ತದೆಯೆಂದ ಮಾತ್ರದಿಂದ ಅದರ ಅಪೌರುಷೇಯತ್ವಕ್ಕೆ ಬಾಧೆ ಬರುವದಿಲ್ಲ. ಯಾವದೊಂದು ಗ್ರಂಥವು ಪೌರುಷೇಯ ವಿರಲಿ, ಅಪೌರುಷೇಯವಿರಲಿ ಅದು ಸತ್ಯಜ್ಞಾನಕ್ಕೆ ಸಂಬಂಧಿಸಿದ ಮಾನದಿಂದ ಅದಕ್ಕೆ ಮಾನ್ಯತೆ ಯುಂಟಾಗುತ್ತದೆ. ಶ್ರುತಿಗಳಂತೆ ಆಗಮಗಳೂ ಅಪೌರುಷೇಯಗಳೆಂಬ ಮಾತು ಎಲ್ಲ ವೈದಿಕರು ಒಪ್ಪತಕ್ಕದ್ದಾಗಿರುವದು. ಕೆಲವು ವೈದಿಕರು ಕೇವಲ ಶ್ರುತಿಯನ್ನು ಅನುಸರಿಸುವರು, ಕೆಲವರು ಕೇವಲ ಆಗಮವನ್ನು ಅನುಸರಿಸುವರು, ಕೆಲವರು ಶ್ರುತ್ಯಾಗಮಗಳೆರಡನ್ನೂ, ಕೆಲವರು ಆಗಮ ಶ್ರುತಿಗಳೆರಡನ್ನೂ ಅನುಸರಿಸುವರು ! ಆದ್ದರಿಂದಲೇ ವೈದಿಕ ಧರ್ಮದಲ್ಲಿ ವೈದಿಕ, ತಾಂತ್ರಿಕ, ವೈದಿಕ ತಾಂತ್ರಿಕ, ತಾಂತ್ರಿಕ ವೈದಿಕ ಎಂಬ ನಾಲ್ಕು ಪ್ರಭೇದಗಳುಂಟಾಗುವವು. ನಿಮ್ಮ ಏಕವರ್ಣಾತ್ಮಕ ವೈದಿಕ ಧರ್ಮವು ಮುಖ್ಯವಾಗಿ ಆಗಮವನ್ನೂ, ಅಮುಖ್ಯತ್ವೇನ ವೇದವನ್ನೂ ಅನುಸರಿಸುವ ದರಿಂದ ಅದು ತಾಂತ್ರಿಕ ವೈದಿಕವಾಗಿರಬಹುದೆಂದು ನನಗೆ ತೋರುತ್ತದೆ.

ವಿರೂಪಾಕ್ಷಾರ್ಯ— ಬ್ರಾಹ್ಮಣೋತ್ತಮ, ನಿಮ್ಮ ನಿರೂಪಣವು ಸತ್ಯವಾದದ್ದು. ಧರ್ಮದ ಸಾಂಗೋಪಾಂಗ ಜ್ಞಾನ ಮಾಡಿಕೊಳ್ಳದಿರುವದರಿಂದ ವೈದಿಕರಾದವರಲ್ಲಿ ಶಂಕಾ–ಕುಶಂಕಗಳು ಉತ್ಪನ್ನವಾಗಿ ಕಲಹಗಳು ಹುಟ್ಟುತ್ತಿರುತ್ತವೆ ! ವೇದದಲ್ಲಿಯ ಜ್ಞಾನಕಾಂಡವು ಸಂಪೂರ್ಣವಾಗಿ ನಮಗೆ ಸಂಬಂಧಿಸುವದು; ಆದರೆ ಶಿವೋಪಾಸನಾರೂಪ ಯಜ್ಞದಲ್ಲಿ ಸರ್ವ ದೇವತಾಕವಾದ ಯಜ್ಞಗಳು ಅಂತರ್ಭೂತವಾಗಿ ಹೋಗುವವೆಂದು ನಮ್ಮ ಮತದ ಸಿದ್ಧಾಂತವಿರುವದರಿಂದ, ರುದ್ರೋಪಾಸನಾತ್ಮಕವಾದ ಶ್ರೀರುದ್ರದ ಹೊರತು ಉಳಿದ ಕರ್ಮಕಾಂಡದ ವೇದಾಧ್ಯಯನವು ನಮಗೆ ನಿಷ್ಪ್ರಯೋಜಕವೂ, ವೃಥಾಯಾಸಕರವೂ ಆಗಿರುವದು. ಆದರೆ ಯಾವತ್ತೂ ಶೈವಾಗಮಗಳು ನಮಗೆ ಗ್ರಾಹ್ಯವಾಗಿರುವದರಿಂದ ತಂತ್ರಾತ್ಮಕವಾದ ಆ ಆಗಮಗಳು ನಮ್ಮ ಮತಕ್ಕೆ ಮೂಲಾಧಾರ ಗಳು. ಅವು ಪರಮೇಶ್ವರನ ಮುಖದಿಂದ ಹೊರಟ ಸ್ಪಷ್ಟ ಉಕ್ತಿಗಳಾದದ್ದರಿಂದ, ಒಂದು ಪಕ್ಷದಲ್ಲಿ ಶ್ರುತಿಗಿಂತಲೂ ಅವಕ್ಕೆ ನಾವು ಹೆಚ್ಚು ಗೌರವ ಕೊಡುವೆವು.

ಚನ್ನಬಸವಾರ್ಯ— ಹಾಗಾದಬಳಿಕ ವೇದಾಧ್ಯಯನಾಧಿಕಾರವು ನಮಗಿರುವದಷ್ಟೇ?

ವಿರೂಪಾಕ್ಷಾರ್ಯ— ನಮ್ಮವರಲ್ಲಿ ನಾವು ಅವಶ್ಯಕ ವೇದಾಧ್ಯಯನವನ್ನು ಮಾಡಬಹುದು; ಆದರೆ ಆಚಾರ್ಯರು ಈ ಮೊದಲೇ ಹೇಳಿದಂತೆ ಚತುರ್ವರ್ಣಾತ್ಮಕ ವೈದಿಕರಲ್ಲಿ ಏಕವರ್ಣಾತ್ಮಕ ವೈದಿಕರಾದ ನಾವು ವೇದಾಧ್ಯಯನ ಮಾಡಲಾಗದು; ಯಾಕಂದರೆ ನಮ್ಮಿಬ್ಬರಲ್ಲಿ ಪಾರಮಾರ್ಥಿಕ ಗುರು–ಶಿಷ್ಯ ಸಂಬಂಧವೂ, ಉಪನಯನ ಸಂಸ್ಕಾರವೂ ಗುರುಕುಲವಾಸಾನುಕೂಲತೆಯೂ ಸರ್ವಥಾ ಇರುವದಿಲ್ಲ.

ಚನ್ನಬಸವಾರ್ಯ– ಮಹಾತ್ಮನ್ ಆರ್ಯವರ, ಇಂದಿನ ಸಜ್ಜನ ಸಮಾಗಮದ ಸುಯೋಗದಿಂದ ನನ್ನ ಸಂಶಯದ ನಿವಾರಣೆಯಾಯಿತು ! ಆದರೆ ನಮ್ಮ ಏಕವರ್ಣಾತ್ಮಕ ವೈದಿಕರಿಗೆ ತಾವು ಹೇಳಿದಂತೆ ''ವೀರಶೈವ ಲಿಂಗಾಯತ'' ''ಲಿಂಗಾಯತ'' ಎಂಬ ಪ್ರಭೇದಕ

ಸಂಜ್ಞೆಗಳಿರುವಂತೆ, ಅಪ್ರಾಕೃತ ಬ್ರಾಹ್ಮಣ, ಲಿಂಗೀಬ್ರಾಹ್ಮಣ, ವೀರಶೈವಬ್ರಾಹ್ಮಣ ಎಂಬ ಸಂಜ್ಞೆಗಳಿರುವವೆಂದು ಕೇಳಿದ್ದೇನೆ; ಇದರ ವಿಚಾರವೇನು ?

ವಿರೂಪಾಕ್ಷಾರ್ಯ— ಚನ್ನಬಸವಾರ್ಯ, ಜಾತಿಭೇದವು ನಮ್ಮಲ್ಲಿ ಇಲ್ಲದ್ದನ್ನು ಸ್ಪಷ್ಟ ತೋರಿಸಬೇಕಾದದ್ದರಿಂದ ನಾನು ನಮಗೆ ''ಲಿಂಗಾಯತ'' ಎಂಬ ಸಂಜ್ಞೆಯಿರುವದೆಂದು ಈ ಮೊದಲೇ ಸ್ಪಷ್ಟವಾಗಿ ಹೇಳಿದ್ದಾಯಿತು. ನಮ್ಮಲ್ಲಿ ಜಾತಿಭೇದವಿರದಿದ್ದರೂ ನಮ್ಮ ಉಪಾಸ್ಯ ದೈವತವಾದ ವೇದಾತೀತನೆನಿಸುವ ಪರಶಿವನು ಅಪ್ರಾಕೃತ ಬ್ರಾಹ್ಮಣನೆಂದು ಪುರಾಣಾದಿಗಳಲ್ಲಿ ಹೇಳಲ್ಪಟ್ಟಿರುವದರಿಂದ, ಕೇವಲ ಆತನನ್ನು ಅಭೇದದೃಷ್ಟಿಯಿಂದ ಉಪಾಸಿಸುವ ನಾವು ಅಪ್ರಾಕೃತ ಬ್ರಾಹ್ಮಣರೇ ಸರಿ! ಅದರಂತೆ, ನಾವು ಶಿವನಲ್ಲಿಟ್ಟಿರುವ ವೀರಭಕ್ತಿಯಿಂದ ವೀರಶೈವರೆನಿಸಿ ಕೊಳ್ಳುವದರಿಂದಲೂ, ಜನ್ಮದಾರಭ್ಯ ಮರಣಪರ್ಯಂತ ಅವಿಚ್ಛಿನ್ನವಾಗಿ ನಾವು ಲಿಂಗವನ್ನು ಧರಿಸುವದರಿಂದ ಲಿಂಗಾಂಗಿಗಳೆನಿಸುವದರಿಂದಲೂ, ನಾವು ವೀರಶೈವ ಬ್ರಾಹ್ಮಣರೆಂತಲೂ ಲಿಂಗೀಬ್ರಾಹ್ಮಣರೆಂತಲೂ ಕರೆಸಿಕೊಳ್ಳಬಹುದು; ಆದರೆ ಉಪನಯನದಿಂದ ದ್ವಿಜತ್ವವನ್ನು ಪಡೆದು, ವೇದಾಧ್ಯಯನ ಮಾಡಿ ಚತುರ್ವರ್ಣಗಳ ಗುರುಗಳೆನಿಸುವ, ಷಟ್ಕರ್ಮಾಧಿಕಾರವುಳ್ಳ, ಕೇವಲ ಬ್ರಾಹ್ಮಣವೆಂಬ ಒಂದೇ ಒಂದು ಶಬ್ದದಿಂದ ಕರೆಯಲ್ಪಡುತ್ತಿರುವ ಬ್ರಾಹ್ಮಣರು ಮಾತ್ರ ನಾವು ಅಲ್ಲವೆಂಬುದನ್ನು ಚನ್ನಾಗಿ ಲಕ್ಷ್ಯದಲ್ಲಿಡತಕ್ಕದ್ದು.

ಮಾಧವಾಚಾರ್ಯ—ಒಟ್ಟಿಗೆ ಇಂದಿನ ದಿನವೇ ಸುದಿನವು; ಇಂದಿನ ಬೋಧಪ್ರ ಸಂಗವೇ ಸುಪ್ರಸಂಗವು! ಹಲವು ದೀಪಗಳ ಸಾನ್ನಿಧ್ಯದಿಂದ ಆಯಾದೀಪಗಳ ಬುಡ ದಲ್ಲಿರುವ ಕತ್ತಲೆಗಳ ಪರಸ್ಪರ ನಿವಾರಣವಾಗುವಂತೆ, ಇಂದಿನ ಸಜ್ಜನ ಸಮುಚ್ಚಯದ ಸಂಭ್ರಮದಲ್ಲಿ ಎಲ್ಲ ವೈದಿಕರ ಸಂಶಯಗಳ ನಿವಾರಣವಾಗಿ ಪರಸ್ಪರರ ಪ್ರೇಮವೃದ್ಧಿಗೆ ಕಾರಣವಾಯಿತು. ಬಹಳ ಸಂತೋಷವು ! ಪ್ರೀಯ ಕನ್ನಡಿಗರೇ, ಆರ್ಯವರ್ಯರ ನಿರೂಪಣವನ್ನು ಲಕ್ಷ್ಯದಲ್ಲಿಟ್ಟು ''ಬ್ರಾಹ್ಮಣ'' ಶಬ್ದದಿಂದ ಗೊಂದಲವಾಗದಂತೆ ಬೇಕಾದ ಜಾತಿಯವರು ತಮ್ಮ ಬ್ರಹ್ಮವೃತ್ತಿಯ ದ್ಯೋತಕವಾಗಿ ''ವಿಶ್ವಕರ್ಮ ಬ್ರಾಹ್ಮಣ'' ''ದೈವಜ್ಞ ಬ್ರಾಹ್ಮಣ'' ''ವಾಲ್ಮೀಕಿ ಬ್ರಾಹ್ಮಣ'' ಇತ್ಯಾದಿ ಹೆಸರುಗಳಿಂದ ಕರೆಯಲ್ಪಟ್ಟರೆ ಯಾರು ಯಾಕೆ ಅಸೂಯೆಪಡಬೇಕು? ಅದರಿಂದಾಗುವ ಬಾಧೆಯಾದರೂ ಏನು?

ಈ ಮೇರೆಗೆ ನಡೆದ ಧರ್ಮ ಚರ್ಚೆಯಿಂದ ಎಲ್ಲ ವೈದಿಕ ವರ್ಣದವರು ಸಮಾಧಾನಪಟ್ಟು ಪರಸ್ಪರ ಪ್ರೇಮಬದ್ಧರಾಗುತ್ತಿರಲು, ಕಾಶೀಮಖಾನನು ಕುತೂಲಹದಿಂದ– ''ವಿಪ್ರೋತ್ತಮ, ತಾವು ಮಹಾಜ್ಞಾನಿಗಳು, ತಮಗೆ ತಿಳಿಯದ್ದು ಒಂದೂ ಇಲ್ಲ, ವಜ್ರಕ್ಕೆ ಕುಂದಣ ಹಾಕಿದಂತೆ ನಮ್ಮ ಆರ್ಯವರ್ಯರೂ ಇಂದು ದಯಮಾಡಿಸಿರುವರು; ಆದ್ದರಿಂದ ನಮ್ಮ ಇಸ್ಲಾಮಿ ಧರ್ಮಕ್ಕೂ, ವೈದಿಕ ಧರ್ಮಕ್ಕೂ ಏನಾದರೂ ಸಂಬಂಧವಿರುವದೊ ಇಲ್ಲವೊ? ನಾವು ವೇದವನ್ನು ನಮ್ಮ ಧರ್ಮಗ್ರಂಥವೆಂದು ಮನ್ನಿಸುವದಿಲ್ಲವಾದ್ದರಿಂದ ನಮ್ಮ ಧರ್ಮವು ಅವೈದಿಕವಾಯಿತು. ಅಂದ ಬಳಿಕ ವೈದಿಕ ಧರ್ಮಗಳಿಗೂ ಅವೈದಿಕ ಧರ್ಮಗಳಿಗೂ ಸಂಬಂಧವು ಹ್ಯಾಗಾಗುವದು? ಧರ್ಮಗಳ ಭಿನ್ನತ್ವದಿಂದ ಪರಸ್ಪರ ಪ್ರೇಮಭಾವಕ್ಕೆ ಬಾಧೆಬರುವದೋ ಹೇಗೆ? ಎಂಬುದನ್ನು ತಿಳಿಸುವ ಕೃಪೆಯಾಗಬೇಕು.''

# ಅವೈದಿಕ ಧರ್ಮಗಳು

ಕಾಶಿಮುಖಾನನ ಈ ಪ್ರಶ್ನೆಗಳನ್ನು ಕೇಳಿ ಮಾಧವಾಚಾರ್ಯರಿಗೆ ಬಹಳ ಸಮಾಧಾನ ವಾಯಿತು. ಈ ಪ್ರಶ್ನೆಗಳಿಗೆ ಆಚಾರ್ಯರು ಏನು ಉತ್ತರ ಕೊಡುವರೆಂದು ಸಭಿಕರೆಲ್ಲರೂ ಕೌತುಕ ದಿಂದ ಮಾರ್ಗಪ್ರತೀಕ್ಷೆ ಮಾಡಹತ್ತಿದರು. ಸ್ವಧರ್ಮನಿಷ್ಠೆ-ಪರಧರ್ಮ ಸಹಿಷ್ಣುತೆಗಳು ಜಗತ್ತಿನ ಸುಖ- ಶಾಂತಿಗಳಿಗೆ ಕಾರಣವಾದ್ದರಿಂದ ಈ ಪ್ರಶ್ನೆಗಳ ಉತ್ತರವನ್ನು ಆಚಾರ್ಯರು ಕೊಡುವದರಿಂದ ಎಲ್ಲರ ಹಿತವಾಗುವದೆಂದು ವಿರೂಪಾಕ್ಷಾರ್ಯರು ಭಾವಿಸಿದರು. ಆಗ ಅವರು ಮಾಧವಾಚಾರ್ಯರನ್ನು ಕುರಿತು-

ವಿರೂಪಾಕ್ಷಾರ್ಯ— ಆಚಾರ್ಯವರ, ಖಾನರ ಪ್ರಶ್ನೆಗಳು ಮಹತ್ವವದಾಗಿರುವವು. ಈಗಿನ ಭಯಂಕರ ಕಾಲದಲ್ಲಿ ಮುಸಲ್ಮಾನರು ಧರ್ಮದ ಅಭಿಮಾನದಿಂದ ನಡೆಸಿರುವ ಅನಾಹುತದಿಂದ ಅವರು ಹಿಂದೂ ಜನರಿಗೆ ತೀರ ಬೇಡಾಗಿರುವರು. ಪರಸ್ಪರರಲ್ಲಿ ದ್ವೇಷಾಗ್ನಿಯು ದಿನದಿನಕ್ಕೆ ಪ್ರಜ್ವಲಿಸುತ್ತಿರುವದು. ಧರ್ಮದ ಹೆಸರಿನಿಂದ ರಕ್ತದ ಕಾವಲಿಗಳು ಹರಿಯುವದೊಂದು ಧರ್ಮದ ಅವಮಾನವೇ ಸರಿ! ಕಾಶೀಮುಖಾನರಂಥ ಪ್ರಮುಖ ಯವನರು ಧರ್ಮಗಳ ರಹಸ್ಯವನ್ನರಿತು ಕೊಂಡು ವಿವೇಕದಿಂದ ನಡೆದುಕೊಂಡರೆ ಲೋಕದ ದುಃಖದ ಮಾನವು ನಿಶ್ಚಯವಾಗಿ ಕಡಿಮೆಯಾಗುವದು. ಪ್ರೇಮಭಾವಕ್ಕಿಂತ ಪವಿತ್ರವಾದದ್ದು ಈ ಜಗತ್ತಿನಲ್ಲಿ ಬೇರೆ ಯಾವದಿರುವದು?

ಮಾಧವಾಚಾರ್ಯ— ಅದರಲ್ಲಿ ಸಂಶಯವೇನು? ಸ್ವಧರ್ಮನಿಷ್ಠರು ಪರರಿಗೆ ಸರ್ವಥಾ ತಾಪ ಕೊಡರು; ಅವರಿಗೆ ಜಗತ್ತೇ ಪ್ರೇಮಮಯವಾಗಿ ತೋರುವದು. ಆದರೆ ಧರ್ಮದ ದುರಭಿಮಾನವುಳ್ಳವರು ತಮ್ಮ ಧರ್ಮವೇ ಶ್ರೇಷ್ಠವೆಂದು ಭಾವಿಸಿ ಅನ್ಯ ಧರ್ಮದವರನ್ನು ಮತ್ಸರಿಸಿ ತಾಪ ಕೊಡುವರು! ಅಂಥವರಿಗೆ ಸ್ವಧರ್ಮದ ನಿಜವಾದ ಸ್ವರೂಪವೇ ತಿಳಿಯದಿರುವಾಗ ಪರಧರ್ಮದ ಸ್ವರೂಪವು ತಿಳಿಯುವದಂತೂ ದೂರೇ ಉಳಿಯಿತು. ಇಂಥ ಅಜ್ಞಾನಿ ಸ್ಥಿತಿಯಲ್ಲಿ ಅನರ್ಥಗಳೊದಗಿದರೆ ಆಶ್ಚರ್ಯವೇನು?

ನಾರಾಯಣಶಾಸ್ತ್ರಿ—ನಮ್ಮ ವೇದವು ಈಶ್ವರ ಪ್ರಣೀತವಾದ್ದರಿಂದ ವೈದಿಕ ಧರ್ಮವು ಶ್ರೇಷ್ಠವೇ ಸರಿ. ಅದನ್ನು ಅನ್ಯ ವೈದಿಕ ಧರ್ಮಗಳು ಕೃತಕಗಳಾದ್ದರಿಂದ ಸರಿಗಟ್ಟಲಾರವು!

ಮಾಧವಾಚಾರ್ಯ- ಶಾಸ್ತ್ರಿಗಳೆ, ನಿಮ್ಮ ದುಡುಕಿನ ಮಾತು ಕೇಳಿ ನನಗೆ ಬಹಳ ವಿಷಾದವಾಗುತ್ತದೆ. ವೇದದಂತೆ ಅನ್ಯ ಧರ್ಮದವರ ಕುರಾಣ, ಝುಂದಾವೆಸ್ತ, ಬಾಯಬಲ್ ಮೊದಲಾದವಾದರೂ ಈಶ್ವರ ಪ್ರಣೀತಗಳೇ ಎಂದು ನಿಮ್ಮಂಥ ಶಾಸ್ತ್ರಜ್ಞರ ಮನಸ್ಸಿನಲ್ಲಿಯೂ ಬಾರದ್ದು ದುಃಖದ ಸಂಗತಿಯೇ ಸರಿ.

ಸುಬ್ರಹ್ಮಣ್ಯಾವಧಾನಿ— ಛಿ ಛಿ! ಶಾಂತಂ ಪಾಪಂ ಶಾಂತಂ ಪಾಪಂ! ಈ ಮಾತು ಸರ್ವಥಾ ಶಕ್ಯವಲ್ಲ! ಆಚಾರ್ಯವರ, ನನ್ನನ್ನು ನೀವು ತಿರಸ್ಕರಿಸಿದರೂ ಚಿಂತೆಯಿಲ್ಲ; ವೇದೇತರ ಗ್ರಂಥಗಳು ಕೃತಕಗಳೇ ಸರಿ. ಅವು ಅಪೌರುಷೇಯಗಳು ಹ್ಯಾಗಾದವು?

ಮಾಧವಾಚಾರ್ಯ— ಅವಧಾನಿಗಳೇ, ವೇದದ ವಿಷಯದ ನಿಮ್ಮ ಅತ್ಯಂತಿಕವಾದ ಅಭಿಮಾನವನ್ನು ನೋಡಿ ನನಗೆ ಸಮಾಧಾನವಾಗುವಂತೆ, ಸುತರಾಂ ನೋಡದೆ ಇದ್ದ ಗ್ರಂಥಗಳ ವಿಷಯಕ್ಕೆ ನೀವು– ''ಅವು ಕೃತಕಗಳೇ'' ಎಂದು ಸ್ಪಷ್ಟವಾಗಿ ನುಡಿಯುವ ಸಾಹಸ ಮಾಡುವದಕ್ಕಾಗಿ ನನಗೆ ದುಃಖವೂ ಆಗುತ್ತದೆ. ನೀವು ವೇದದ ಹೊರತು ಉಳಿದ ಧರ್ಮಗ್ರಂಥಗಳ ಅಧ್ಯಯನವನ್ನು ಅರ್ಥವರಿತು ಶ್ರದ್ಧೆಯಿಂದ ಮಾಡಿರುವಿರೋ ?

ಸುಬ್ರಹ್ಮಣ್ಯಾವಧಾನಿ— ಇಲ್ಲ ಮಹಾತ್ಮನ್, ದೊಡ್ಡವರ ಮುಂದೆ ನಾನು ಸುಳ್ಳು ಹೇಳಲಾರೆನು. ನಮ್ಮ ವೇದವನ್ನೇ ಅರ್ಥವರಿತು ನಾನು ಅಧ್ಯಯನ ಮಾಡದಿರುವಾಗ ನನಗೆ ಉಳಿದ ಧರ್ಮಗ್ರಂಥಗಳ ಅಧ್ಯಯನದ ಸುದ್ದಿ ಏಕೆ ? ನೀವು ಹೇಳುವದಕ್ಕೆ ಮೊದಲು ಆ ಧರ್ಮಗ್ರಂಥಗಳ ಹೆಸರೂ ನನಗೆ ಗೊತ್ತಿದ್ದಿಲ್ಲ. ನಾನು ಋಗ್ವೇದದ ಅಧ್ಯಯನವನ್ನು ಘನಾಂತ ವಾಗಿ ಮಾಡಿದ್ದೇನೆ. ಸ್ವರಗಳ ವ್ಯತ್ಯಾಸವಾದಲ್ಲಿ ನನ್ನ ನಾಲಿಗೆ ಕೊಯ್ಯಬೇಕು ! ಆದರೆ ವೇದಾರ್ಥದ ಸಂಬಂಧದಿಂದ ಕೇಳಿದರೆ, ನನಗೆ ರಾಮಶಬ್ದದ ಜ್ಞಾನವಿಲ್ಲ. ಸುಳ್ಳು ಹೇಳಲಾರೆನು!

ಮಾಧವಾಚಾರ್ಯ— ನಿಮ್ಮಂಥಾ ನಿಸ್ಪೃಹವೃತ್ತಿಯ ಕರ್ಮಶೀಲರಾದ ಬ್ರಾಹ್ಮಣರು ಸ್ವಾರ್ಥತ್ಯಾಗ ಮಾಡಿ ಹೀಗೆ ಏಕನಿಷ್ಠೆಯಿಂದ ವೇದ ಮಾತೆಯನ್ನು ಸೇವಿಸದಿದ್ದರೆ ಆಕೆಯು ಎಂದೋ ಗುಪ್ತವಾಗಿ ಹೋಗುತ್ತಿದ್ದಳು! ವೇದದ ಸಾಂಪ್ರದಾಯಪೂರ್ವಕವಾದ ಅಧ್ಯಯನವು ಇನ್ನೂವರೆಗೆ ಉಳಿದಿರುವದು ನಿಮ್ಮಂಥ ವೈದಿಕರ ಪುಣ್ಯದಿಂದ! ಆದರೆ ಅವಧಾನಿಗಳೇ, ವೇದದ ವಿಷಯದ ಶ್ರದ್ಧೆಯ ಸಂಗಡ ನಿಮ್ಮಲ್ಲಿ ವಾಸವಾಗಿರುವ ಅನ್ಯಮತ ಗ್ರಂಥದ ವಿಷಯದ ಅನುದಾರವಾದ ವಿಚಾರವು ನನಗೆ ಸರ್ವಥಾ ಮನಸ್ಸಿಗೆ ಬರುವದಿಲ್ಲ.

ನಾರಾಯಣಶಾಸ್ತ್ರಿ— ಮಹಾತ್ಮನ್, ಜಗತ್ತಿನೊಳಗಿನ ಎಲ್ಲ ಮತ ಗ್ರಂಥಗಳ ಅಧ್ಯಯನ ಮಾಡಿಯೇ ತೀರಲಿಕ್ಕೆ ಯಾರಿಗೆ ಶಕ್ಯವಿರುವದು? ಅಂದ ಬಳಿಕ ವೇದದಂತೆ ಎಲ್ಲ ಮತಗ್ರಂಥಗಳೂ ಅಪೌರುಷೇಯವೆಂದು ಹೇಳುವದನ್ನಾದರೂ ಹ್ಯಾಗೆ ನಂಬಬೇಕು? ನನ್ನ ಅಧಿಕ ಪ್ರಸಂಗಕ್ಕಾಗಿ ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ; ನನ್ನ ಅಜ್ಞಾನ ದೂರಮಾಡಿ ಕೊಳ್ಳಲಿಕ್ಕೆ ಹೀಗೆ ಕೇಳಿರುವೆನು.

ಮಾಧವಾಚಾರ್ಯ— ಅಧಿಕಪ್ರಸಂಗವಿದ್ದರಲ್ಲವೆ ಕ್ಷಮಿಸುವದು? ಶಾಸ್ತ್ರಿಗಳೇ, ನಿಮ್ಮ ಸಮಂಜಸ ಪ್ರಶ್ನಕ್ಕಾಗಿ ನನಗೆ ಬಹಳ ಸಂತೋಷವಾಗಿದೆ; ಆದರೆ ನನ್ನದೊಂದು ಪ್ರಶ್ನವದೆ, ಅದಕ್ಕೆ ಉತ್ತರ ಕೊಡಿರಿ. ನಮಗೆ ಸುತರಾಂ ಪರಿಚಯವಿಲ್ಲದ, ಅಥವಾ ನಾವು ಎಂದೂ ನೋಡದೆ ಇದ್ದ ಒಬ್ಬ ಮನುಷ್ಯನು ನಮ್ಮ ಮನೆಗೆ ಬಂದಿದ್ದಾನೆ. ಅಂಥವನನ್ನು ಸಜ್ಜನನೆಂದು ಭಾವಿಸುವಲ್ಲಿ ನಿಮ್ಮ ಸಜ್ಜನತೆಯೋ, ಅಥವಾ ದುರ್ಜನನೆಂದು ಭಾವಿಸುವಲ್ಲಿ ನಿಮ್ಮ ಸಜ್ಜನತೆಯೋ?

ನಾರಾಯಣಶಾಸ್ತ್ರಿ (ತಟ್ಟನೇ)— ತಾನು ಸಜ್ಜನನಿದ್ದರೆ ತನಗೆ ಜಗತ್ತೇ ಸಜ್ಜನವಾಗಿ ತೋರುವದೆಂಬ ನಿಯಮದಂತೆ, ನಾನು ಸಜ್ಜನನಾಗಿದ್ದರೇ, ನನ್ನ ಮನೆಗೆ ಬಂದ ಆ ಅಪರಿಚಿತ ಮನುಷ್ಯನನ್ನು ನಾನು ಸಜ್ಜನನೆಂತಲೇ ಭಾವಿಸತಕ್ಕದ್ದು !

ಮಾಧವಾಚಾರ್ಯ— ಬಹಳ ಸಂತೋಷವು, ಶಾಸ್ತ್ರಿಗಳೇ, ನಿಮ್ಮ ಮಾತು ಕೇಳಿ ನನಗೆ ಪರಮಾನಂದವಾಯಿತು ! ನಿಮ್ಮ ಧರ್ಮದ ಆದಿಗ್ರಂಥವೆನಿಸುವ ವೇದವನ್ನು ಅಪೌರುಷೇಯ ವೆಂದು ನಂಬಿರುವ ನಿಮ್ಮ ಮುಂದೆ ನಾನು– ''ಇವು ಧರ್ಮಗ್ರಂಥಗಳು'' ಎಂದು ಹೇಳಿ ಕುರಾಣ ವನ್ನು, ಬಾಯಿಬಲ್ಲನ್ನು, ಝುಂದಾವೆಸ್ತವನ್ನೂ, ಬೇರೆ ಧರ್ಮದ ಆದಿಗ್ರಂಥಗಳನ್ನೂ ಭಕ್ತಿಪುರಸ್ಸರ ಇಟ್ಟು, ನಿಮ್ಮನ್ನು ಕುರಿತು– ''ಈ ಪರಕೀಯ ಪೂಜ್ಯ ಧರ್ಮ ಗ್ರಂಥಗಳು, ಅಪೌರುಷೇಯ ಗಳೋ, ಎಂದು ಕೇಳಿದರೆ ಏನು ಉತ್ತರ ಕೊಡುವಿರಿ?

ನಾರಾಯಣಶಾಸ್ತ್ರಿ (ತಲೆ ತುರಿಸುತ್ತ)— ಆಚಾರ್ಯವರ, ನಿಮ್ಮ ಮುಂದೆ ಮಾತಾಡಿ ಯಾರು ಗೆಲ್ಲುವರು ? ನಮ್ಮ ಧರ್ಮಗ್ರಂಥವು ಅಪೌರುಷೇಯವೆಂಬ ಭಾವನೆಯು ನಿಜವಾಗಿಯೇ ನನ್ನಲ್ಲಿ ಇದ್ದದ್ದಾದರೆ, ಧರ್ಮಗ್ರಂಥವೆಂದ ಕೂಡಲೇ ''ಧರ್ಮ'' ಎಂಬ ಶಬ್ದಶ್ರವಣಮಾತ್ರದಿಂದ ಆ ಗ್ರಂಥಗಳನ್ನು ಅಪೌರುಷೇಯವೆಂದು ನಾನು ಒಪ್ಪಿಕೊಳ್ಳಬೇಕಾಗುವದು ! ಮಹಾತ್ಮನ್, ಬೇರೆಯವರ ಧರ್ಮಗ್ರಂಥಗಳ ವಿಷಯವಾಗಿ ಏನೂ ಅರಿಯದ ನಾನು ಆ ಧರ್ಮಗ್ರಂಥಗಳಿಗೆ ದೋಷಾರೋಪಣೆ ಮಾಡುವದಕ್ಕಿಂತ ಗುಣಾರೋಪಣೆ ಮಾಡುವದು, ಅರ್ಥಾತ್ ಅವು ಅಪೌರುಷೇಯವೆಂದು ಭಾವಿಸುವದು ನನ್ನ ಕಲ್ಯಾಣಕ್ಕೂ, ಶಾಂತಿಗೂ ಕಾರಣವಾಗಿರುವ ದೆಂಬುದನ್ನು ಒಪ್ಪಿಕೊಳ್ಳಬೇಕಾಗುವದು, ಆಚಾರ್ಯವರ, ಅಜ್ಞಾನದಿಂದಾದ ಅಪರಾಧಕ್ಕಾಗಿ ನನ್ನನ್ನು ಕ್ಷಮಿಸಬೇಕು.

ಮಾಧವಾಚಾರ್ಯ—ಕ್ಷಮೆಯ ಮಾತು ಬೇಡ; ತಿರುಗಿ ಕೇಳಿದರೆ ಖಂಡ–ತುಂಡ ಮಾತಾಡಿ ಸಭೆಯಲ್ಲಿ ನಿಮ್ಮನ್ನು ನಿರುತ್ತರ ಮಾಡಹೋದ ನನ್ನ ಅಪರಾಧಕ್ಕಾಗಿ ನೀವೇ ನನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುವೆನು. ಪ್ರಾಣಿಮಾತ್ರಗಳ ಅವಮಾನವೇ ಹಾನಿಕರವಾಗಿರಲು, ನಿಮ್ಮಂಥ ವಿದ್ವಾಂಸರ ಅವಮಾನವು ಕ್ಷೇಮಕರವಾಗಬಹುದೇ?

ನಾರಾಯಣಶಾಸ್ತ್ರಿ (ಕೈಜೋಡಿಸಿ)— ಛೇ ! ಛೇ ! ತಮ್ಮ ಅಪರಾಧವೆ ? ಆಚಾರ್ಯವರ, ನಮ್ಮನ್ನು ಅಜ್ಞಾನದಿಂದ ಉದ್ಧರಿಸುವದಕ್ಕಾಗಿ ಕರ್ನಾಟಕ ಭೂಮಾತೆಯ ಅಗಾಧ ಪುಣ್ಯದಿಂದ ಹುಟ್ಟಿ ಬಂದ ನೀವು, ನಮ್ಮಂಥ ಪಾಮರ ಬ್ರಾಹ್ಮಣರಿಗೆ ಅಪರಾಧಿಗಳಾಗುವಿರಾ? ನನಗೆ ಅವಮಾನವಾಗಿದ್ದರಷ್ಟೇ ನೀವು ನನ್ನನ್ನು ಸಭೆಯಲ್ಲಿ ಅವಮಾನಿಸಿದಿರೆಂದು ಹೇಳುವದು ! ನಿಮ್ಮ ಬೋಧದಿಂದ ನನ್ನ ಅಜ್ಞಾನವು ದೂರವಾಗತೊಡಗಿದೆ. ನಾನು ನನ್ನ ಧರ್ಮಮೂರ್ತಿಯೆನಿಸುವ ತಮ್ಮ ಚರಣಗಳಿಗೆ ವಿನಯದಿಂದ ನಮುಸ್ಕರಿಸುವೆನು. ಭಗವನ್, ಅನ್ಯ ಧರ್ಮಗ್ರಂಥಗಳು ಅಪೌರುಷೇಯಗಳೆಂದು ತಿಳಿಯಲಿಕ್ಕೆ ಇದಕ್ಕಿಂತ ಹೆಚ್ಚಿನ ಆಧಾರಗಳಿದ್ದರೆ ಹೇಳೋಣವಾಗಬೇಕು, ಅಂದರೆ ಪರಮಾನುಗ್ರಹ ಮಾಡಿದಹಾಗಾಗುವದು.

ಮಾಧವಾಚಾರ್ಯ— ವಿಪ್ರವರ, ಸದ್ಭಾವದಿಂದ ಅನ್ಯ ಮತಗ್ರಂಥಗಳನ್ನು ಅಪೌರುಷೇಯುವೆಂದು ತಿಳಿದುಕೊಳ್ಳಬೇಕೆಂದು ಈಗ ನಾನು ನಿಮಗೆ ಹೇಳಿದ್ದು ಪ್ರಧಾನ ಕಾರಣವು. ಅದಕ್ಕಿಂತ ಗೌಣವಾಗಿ ಎರಡನೆಯ ಕಾರಣವೆಂದರೆ, ನಿಮ್ಮ ಶ್ರದ್ಧೆಗೆ ಪಾತ್ರರಾದ ಜನರು ಹೇಳುವದನ್ನು ಆಪ್ತಾಲೋಚನೆಯೆಂದು ಸದ್ಭಾವದಿಂದ ನಂಬುವದು. ಇದಕ್ಕೂ

ಗೌಣವಾದ ಮೂರನೇ ಕಾರಣವು ಬೇಕಾಗಿದ್ದರೆ, ಆಪ್ತರು ಮಾಡುವ ವಿವರಣೆಯನ್ನು ವಿವೇಕದಿಂದ ಒಪ್ಪಿಕೊಂಡು ಸಮಾಧಾನಪಡುವದು. ನನ್ನಲ್ಲಿ ನೀವು ಶ್ರದ್ಧೆಯಿಟ್ಟಿರುವದು ಕಂಡುಬರುವದರಿಂದ ನಾನು ಈಗ ಮಾಡುವ ಸಂಕ್ಷಿಪ್ತ ವಿವರಣೆಯನ್ನು ಕೇಳಿರಿ. ವೇದವು ಅನಂತವೆಂದು ನಾವು ಹೇಳುವೆವಲ್ಲವೆ? ಅದರಂತೆ ಸೃಷ್ಟಿಯು ಅನಂತವೆಂತಲೂ ನಾವು ಹೇಳುವೆವು. ಅನಂತವಾದ ವೇದವು ಅನಂತವಾದ ಸೃಷ್ಟಿಯಲ್ಲಿ ಹಂಚಿ ಹೋಗಿದ್ದರೆ ಆಶ್ಚರ್ಯವೇನು ? ಸೃಷ್ಟಿಕರ್ತನಿಗೆ ಸೃಷ್ಟಿಯೊಳಗಿನ ಜನರೆಲ್ಲರೂ ಸಂಬಂಧಿಕರಲ್ಲವೆ? ನ್ಯಾಯಿಯಾದ ಪರಮಾತ್ಮನು ಅವರವರ ಅಧಿಕಾರದ ತಾರತಮ್ಯದಂತೆ ಸೃಷ್ಟಿಯ ಸುಖೋಪಭೋಗಗಳನ್ನು ಅವರವರಿಗೆ ಒದಗಿಸಿ ಕೊಡುವಂತೆ, ಜ್ಞಾನರಾಶಿಯಾದ ವೇದವನ್ನು ಆತನು ಅವರವರಿಗೆ ಒದಗಿಸಿ ಕೊಡುವದು ನ್ಯಾಯಪ್ರಾಪ್ತವಲ್ಲವೆ? ಆದ್ದರಿಂದ ಕರುಣಾಳುವಾದ ಸೃಷ್ಟಿಕರ್ತನು ತನ್ನ ಗುರುತು ಮಾಡಿಕೊಂಡ, ಅಂದರೆ ತನ್ನನ್ನು ಅರಿತ ಮಹಾತ್ಮರಾದ ಧರ್ಮಪ್ರವರ್ತಕರ ಮುಖಾಂತರವಾಗಿ ಜ್ಞಾನರಾಶಿಯನ್ನು ಹಂಚಿ ಕೊಟ್ಟಿರುವನು. ಈ ಜ್ಞಾನರಾಶಿಯಲ್ಲಿ ನಮ್ಮ ಪೂರ್ವಜರಾದ ತಪೋನಿಷ್ಠ ಋಷಿಗಳು ದೇವರ ಮುಖದಿಂದ ಕೇಳಿ ಪ್ರಕಟಿಸಿದ ಜ್ಞಾನವು ಸಂಸ್ಕೃತ ಭಾಷೆಯಲ್ಲಿ ಪ್ರಕಟವಾಗಿ ವೇದವೆಂಬ ಹೆಸರು ಪಡೆಯಿತು; ಅದರಂತೆ ಮಹಮ್ಮದ ಪೈಗಂಬರರೇ ಮೊದಲಾದ ಮಹಾತ್ಮರ ಮುಖಾಂತರ ಈಶ್ವರನಿಂದ ಕರುಣಿಸಲ್ಪಟ್ಟ ಜ್ಞಾನವು ಕುರಾಣ, ಝುಂದಾವೆಸ್ತ, ಬಾಯಬಲ್ ಮೊದಲಾದ ಹೆಸರುಗಳಿಂದ ಆಯಾ ಭಾಷೆಗಳಲ್ಲಿ ಪ್ರಸಿದ್ಧವಾಯಿತು. ಇವರೆಲ್ಲರ ಜ್ಞಾನರಹಸ್ಯದಲ್ಲಿ ಸರ್ವಥಾ ಭೇದವಿರಲಾರದು. ಬ್ರಾಹ್ಮಣಶ್ರೇಷ್ಠನೇ, ವೈದಿಕರು ನಾವು ಭಕ್ತಿ–ಜ್ಞಾನ–ವೈರಾಗ್ಯಗಳನ್ನು ಆದರಿಸುವಂತೆ ಉಳಿದವರೂ ಆದರಿಸುವರು. ವೈದಿಕರು ನಾವು ಸದ್ಗುರು ಕೃಪೆಯಿಂದ ಮೋಕ್ಷವನ್ನು ಸಾಧಿಸುವಂತೆ ಬೇರೆ ಧರ್ಮದವರು ಸಾಧಿಸುವರು. ವೈದಿಕ ಧರ್ಮದವರಾದ ನಮ್ಮಲ್ಲಿ ಕಾಲಕಾಲಕ್ಕೆ ಮಹಾಪುರುಷರು ಉತ್ಪನ್ನವಾಗುವಂತೆ ಬೇರೆ ಧರ್ಮದವರಲ್ಲಿಯವೂ ಉತ್ಪನ್ನವಾಗುತ್ತಿರುವರು. ನಮ್ಮಲ್ಲಿಯೂ ಹಿಂದಿನ ಮಹಾಪುರುಷರ ಮಹಿಮೆಗಳಿರುವವು, ಅವರಲ್ಲಿಯೂ ಇರುವವು. ಅಂದ ಬಳಿಕ ನಮ್ಮಲ್ಲಿ ಹೆಚ್ಚೇನು ಅವರಲ್ಲಿ ಕಡಿಮೆಯೇನು? ನಮ್ಮಲ್ಲಿಯವು ನಿಜವಿದ್ದರೆ ಅವರಲ್ಲಿಯೂ ನಿಜವಿರಬಹುದು, ಅವರಲ್ಲಿಯವು ಸುಳ್ಳಿದ್ದರೆ ನಮ್ಮಲ್ಲಿಯವೂ ಸುಳ್ಳು ಇರಬಹುದು. ಇದಕ್ಕಿಂತ ಹೆಚ್ಚಿಗೆ ಹೇಳಲವಶ್ಯವಿಲ್ಲ, ಇಷ್ಟರಿಂದ ನಿಮಗೆ ಸಮಾಧಾನವಾಗದಿದ್ದರೆ ಸಮಾಧಾನ ಮಾಡಿಕೊಳ್ಳುವ ಗೊಡವಿಗೂ ಸದ್ಯಕ್ಕೆ ನೀವು ಹೋಗಬೇಡಿರಿ. ಸಮಾಧಾನವಾಗತಕ್ಕ ಕಾಲವು ಒದಗಿ ಬಂತೆಂದರೆ ತಾನೇ ಸಮಾಧಾನವಾಗುವದು !

ವಿರೂಪಾಕ್ಷಾರ್ಯ— ವಿವೇಕಿಗಳಿಗೆ ಇದಕ್ಕೂ ಹೆಚ್ಚಿನ ವಿವರಣೆಯ ಅವಶ್ಯವಿಲ್ಲ; ಆದರೆ ಒಂದು ಮಾತಿನ ಸಂಶಯ ಬರುವಸಂಭವವಿದೆ, ಅದಕ್ಕಾಗಿ ಪ್ರಶ್ನೆ ಮಾಡುವೆನು, ಸಮಾಧಾನ ಪಡಿಸಬೇಕು.

ಮಾಧವಾಚಾರ್ಯ— ಮಹಾತ್ಮನ್, ಅವಶ್ಯವಾಗಿ ಪ್ರಶ್ನೆ ಮಾಡಬೇಕು. ಲೋಕಹಿತಕ್ಕಾಗಿ ದೊಡ್ಡವರು ಮಾಡುವ ಪ್ರಶ್ನಕ್ಕೆ ತಿಳಿದಮಟ್ಟಿಗೆ ಉತ್ತರ ಕೊಟ್ಟೇ ತೀರಬೇಕಾಗುವದು.

ವಿರೂಪಾಕ್ಷಾರ್ಯ— ಎಲ್ಲ ಧರ್ಮಗಳ ಮೂಲ ಧರ್ಮಗ್ರಂಥಗಳು ಈಶ್ವರ ಪ್ರಣೀತಗಳೇ ಆಗಿದ್ದ ಪಕ್ಷದಲ್ಲಿ, ತಮ್ಮ ತಮ್ಮ ಧರ್ಮದ ಪುಸ್ತಕಗಳಷ್ಟೇ ಈಶ್ವರಪ್ರಣೀತ ಗಳೆಂತಲೂ, ಅನ್ಯ ಧರ್ಮಗ್ರಂಥಗಳು ಕೃತಕಗಳೆಂತಲೂ ದೊಡ್ಡವರೇ ಕುಳಿತು ಪ್ರತಿಪಾದಿಸುವ ಕಾರಣವೇನು?

ಮಾಧವಾಚಾರ್ಯ—ಆಯಾ ಧರ್ಮದ ಮಹಾತ್ಮರು ಆಯಾ ಧರ್ಮದವರ ಕಲ್ಯಾಣಕ್ಕಾಗಿಯೇ ಹಾಗೆ ಹೇಳಿರುವರು. ಮಹಾತ್ಮರಾದ ತಮ್ಮ ತಮ್ಮ ಧರ್ಮಸ್ಥಾಪಕರು ಹೇಳಿದ ಹಾದಿಯಲ್ಲಿ ಶ್ರದ್ಧೆಯಿಟ್ಟು ಆಯಾ ಧರ್ಮದವರು ಏಕನಿಷ್ಠೆಯಿಂದ ಹಾದಿ ನಡೆದರೆ ಮಾತ್ರ ಗೊತ್ತು ಮಾಡಿದ ಆನಂದದ ಸ್ಥಾನಕ್ಕೆ ಅವರು ಮುಟ್ಟಬಹುದಲ್ಲದೆ, ಆ ಹಾದಿ ನಡೆಯುವದನ್ನು ಬಿಟ್ಟು ಬೇರೆ ಬೇರೆ ಹಾದಿಗಳ ಊಹಾಪೋಹ ಮಾಡುತ್ತ ನಿಂತುಬಿಟ್ಟರೆ ಸಂಶಯವು ಉತ್ಪನ್ನವಾಗಿ ''ಸಂಶಯಾತ್ಮಾ ವಿನಶ್ಯತಿ'' ಎಂಬಂತೆ ಕಡೆಗೆ ನಾಶವನ್ನು ಹೊಂದಬಹುದಲ್ಲದೆ ಬೇರೆ ಫಲವೇನು ಆಗುವದು? ಆಯಾ ಧರ್ಮದವರಿಗೆ ಆಯಾ ಧರ್ಮದ ಮಹಾತ್ಮರಾದ ಪೂರ್ವಜರು ತಪಶ್ಚರ್ಯದಿಂದ ಸತ್ಯ ಮಾರ್ಗವನ್ನು ಕಂಡುಹಿಡಿದು ತೋರಿಸಿ ಕೊಟ್ಟಿರುವರು, ಆ ಮಹಾತ್ಮರು ತೋರಿಸಿಕೊಟ್ಟಿದ್ದ ಅಬಾಧಿತವಾದ ಆ ನಿರ್ಮಲ ಮಾರ್ಗಗಳು ಆಯಾ ಧರ್ಮದವರಿಗಾಗಿ ಸಂಪಾದಿಸಿ ಇಟ್ಟಿರುವ ದಿವ್ಯವಾದ ಗುಪ್ತನಿಧಿಗಳಂತೆ ಇರುವವು! ನಮ್ಮವರು ಸಂಪಾದಿಸಿದ ಸೊತ್ತು ನಮಗಾದೀತಲ್ಲದೆ ಪರರು ಸಂಪಾದಿಸಿ ಸೊತ್ತು ನಮಗಾದೀತೆ? ಹಾಗೆ ಪರರ ಸೊತ್ತನ್ನು ಇಚ್ಛಿಸುವದು, ಅಥವಾ ಅದನ್ನು ಕಣ್ಣೆತ್ತಿ ನೋಡುವದು, ಅಥವಾ ನಿರರ್ಥಕವಾಗಿ ಅದರ ಸಂಬಂಧದಿಂದ ಉಹಾಪೋಹ ಮಾಡುತ್ತ ಕುಳಿತುಕೊಳ್ಳುವದು ನ್ಯಾಯವಾದೀತೆ? ಪರದ್ರವ್ಯವು ವಮನಸಮಾನವೆಂದು ಹೇಳಿದ ಮಾತ್ರದಿಂದ ಪರದ್ರವ್ಯವು ವಸ್ತುತಃ ವಮನವಾದೀತೇ? ಪರದ್ರವ್ಯವನ್ನು ಆಶಿಸಬಾರದೆಂಬ ಮಾತನ್ನು ನೆನಪಿನಲ್ಲಿಡಬೇಕೆಂದು ಹಾಗೆ ಹೇಳಬೇಕಾಯಿತಲ್ಲವೆ? ಪರಸೊತ್ತು ನಮಗೆ ವಮನಸಮಾನವು; ನಮ್ಮ ಸೊತ್ತು ಪರರಿಗೆ ವಮನ–ಸಮಾನವು; ಆದರೆ ವಸ್ತುತಃ ನಮ್ಮ ಸೊತ್ತು ವಮನವಲ್ಲ, ಪರರ ಸೊತ್ತೂ ವಮನವಲ್ಲ. ಅದರಂತೆ ವಸ್ತುತಃ ಯಾವ ಧರ್ಮವೂ ತಿರಸ್ಕರಣೀಯವಾದದ್ದಲ್ಲ; ಒಬ್ಬರು ಮತ್ತೊಬ್ಬರ ಧರ್ಮದ ಗೊಡವಿಗೆ ಹೋಗಿ ತಮ್ಮ ಧರ್ಮದ ವಿಷಯವಾದ ಅಶ್ರದ್ಧೆಯನ್ನಾಗಲಿ, ಪರಧರ್ಮದ ವಿಷಯದ ದ್ವೇಷಬುದ್ಧಿಯನ್ನಾಗಲಿ ತಾಳಬಾರದೆಂದು ನಿರ್ಬಂಧಿಸುವದಕ್ಕಾಗಿ ಎಲ್ಲ ಧರ್ಮದ ಮಹಾತ್ಮರೂ ಹಾಗೆ ತಮ್ಮ ಧರ್ಮವೇ ಶ್ರೇಷ್ಠವೆಂದು ಹೇಳಿರುವರು. ''ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹ'' ಎಂಬ ಭಗವದುಕ್ತಿಯಾದರೂ ಇದೇ ಮಾತನ್ನು ಹೇಳುತ್ತದೆ. ಹೀಗೆ ನಿರ್ಬಂಧಿಸದೆ ಬೇಕಾದವರು ಬೇಕಾದ ಧರ್ಮವನ್ನು ಸ್ವೀಕರಿಸಬೇಕೆಂದು ಹೇಳಿಬಿಟ್ಟಿದ್ದರೆ, ನಿರ್ಧಾರದಿಂದ ಯಾರೂ ಯಾವ ಧರ್ಮವನ್ನೂ ಪಾಲಿಸುತ್ತಿದ್ದಿಲ್ಲ. ಯಾವ ಧರ್ಮವೂ ಸ್ಥಿರವಾಗಿ ಉಳಿಯುತ್ತಿಲ್ಲ, ಆನಂದ ಸ್ಥಾನವೂ ಯಾರಿಗೂ ಸಿಗುತ್ತಿದ್ದಿಲ್ಲ !

ವಿರೂಪಾಕ್ಷ—ಸರಿ ಸರಿ ! ಸಮರ್ಪಕ ಉತ್ತರವು; ಆದರೆ ದೊಡ್ಡವರ ಈ ನಿರ್ಬಂಧವಾದರೂ ಎಲ್ಲಿ ಉಳಿದಿದೆ? ಆಗಾಗ್ಗೆ ಧರ್ಮ ಸುಧಾರಣೆಯಾಗುತ್ತ ಬಂದಿರುವದು;

ಹೊಸ ಧರ್ಮಗಳು ಉದಯವಾಗುತ್ತ ಬಂದಿರುವವು; ಒಂದು ಧರ್ಮದವರು ತಮ್ಮ ಧರ್ಮವನ್ನು ಬಿಟ್ಟು ಅನ್ಯ ಧರ್ಮಗಳನ್ನು ಸ್ವೀಕರಿಸುತ್ತ ಬಂದಿರುವರು; ಹೀಗೇಕೆ ಆಗಬೇಕು ''ಧರ್ಮಕೀರ್ತಿದ್ವಯಂ ಸ್ಥಿರಂ'' ಎಂಬ ಉಕ್ತಿಯಂತೆ ಧರ್ಮವು ಸ್ಥಿರವಾದದ್ದಿದ್ದು ಹೀಗೆ ಅದರ ಅಸ್ಥಿರತೆಯು ಕಂಡಬರುತ್ತದಲ್ಲ. ಇದರ ಕಾರಣವೇನು?

ಮಾಧವಾಚಾರ್ಯ–ಮಹಾತ್ಮನ್, ಲೋಕಕಲ್ಯಾಣಕ್ಕಾಗಿ ತಾವು ಮಾಡುವ ಪ್ರಶ್ನೆಗಳನ್ನು ಕೇಳಿ ನನ್ನ ಮನಸ್ಸಿಗೆ ಬಹಳ ಸಮಾಧಾನವಾಗುತ್ತದೆ. ಲೋಕಹಿತಕ್ಕಾಗಿ ಜ್ಞಾನಿಗಳೂ ಅಜ್ಞಾನಿಗಳಂತೆ ನಟಿಸುವ ಕೌತುಕವನ್ನು ನಾನು ಇಂದು ಕಂಡೆನು! ಆರ್ಯವರ,ತಮ್ಮ ಪ್ರಶ್ನೆಗಳಿಗೆ ಯಥಾಮತಿ ಉತ್ತರ ಕೊಡಲಿಕ್ಕೆ ನನ್ನ ಮನಸ್ಸು ಸಂತೋಷಪಡುತ್ತದೆ. ''ದೊಡ್ಡವರ ನಿರ್ಬಂಧವಾದರೂ ಎಲ್ಲಿ ಉಳಿದಿದೆ'' ಎಂದು ಪ್ರಶ್ನೆ ಮಾಡೋಣವಾಯಿತಲ್ಲವೆ? ಮಹಾತ್ಮನ್, ಇಲ್ಲ, ಉಳಿಯಲಿಲ್ಲ. ಲೋಕವು ಸ್ವಾರ್ಥದ ಬಲೆಗೆ ಬಿದ್ದು ಸ್ವಧರ್ಮಶ್ರದ್ಧೆಯನ್ನು ಕಳಕೊಂಡು ದೊಡ್ಡವರ ನಿರ್ಬಂಧವನ್ನು ಮೀರಿ ಧರ್ಮಭ್ರಷ್ಟವಾಗಹತ್ತಿದ್ದರಿಂದಲೇ ಧರ್ಮ ಸುಧಾರಣೆಯು, ಅಥವಾ ಹೊಸ ಧರ್ಮದ ಉತ್ಪತ್ತಿಯು ಆಗಬೇಕಾಯಿತು ! ಇಂಥ ಧರ್ಮಭ್ರಷ್ಟರ ಸಂಖ್ಯೆಯು ಹೆಚ್ಚಾಗಿ ಲೋಕಕ್ಕೆ ಲೋಕವೇ ನಾಶದ ಪಂಥವನ್ನು ಹಿಡಿದಾಗ ದೊಡ್ಡವರೇ ಕನಿಕರಪಟ್ಟು ಲೋಕೋದ್ಧಾರಕ್ಕಾಗಿ ಆಗಾಗ್ಗೆ ಧರ್ಮದ ಸುಧಾರಣೆಯನ್ನಾಗಲಿ, ಹೊಸ ಧರ್ಮದ ಸ್ಥಾಪನೆಯನ್ನಾಗಲಿ, ಮಾಡುತ್ತಬಂದಿರುವರು, ಇದರಂತೆಯೇ ಮುಂದೆ ಪ್ರಸಂಗವಶಾತ್ ಮಾಡುತ್ತಲೂ ಹೋಗುವರು ! ಮಹಾತ್ಮನ್, ಧರ್ಮವು ಸ್ಥಿರವಾಗಿದ್ದರೂ ಅದರಂತೆ ನಡೆಯಲಿಕ್ಕೆ ಜನರಲ್ಲಿ ಸ್ಥೈರ್ಯವೆಲ್ಲಿ ಇರುವದು? ಜನರ–ಚಾಂಚಲ್ಯದ ಮೂಲಕವಾಗಿ ಧರ್ಮವೂ ಚಂಚಲವಾಗಿರುವಂತೆ ತೋರುವದು.

ಧರ್ಮದ ಅಂತರಂಗ ಬೇರೆ, ಬಹಿರಂಗ ಬೇರೆ. ಅಂತರಂಗವು ಅವಿನಾಶಿಯಾದ ಸನಾತನವೆನಿಸುವ ಆತ್ಮದರ್ಶಕ ತತ್ವಮಯವಾದದ್ದು; ಬಹಿರಂಗವು ವಿನಾಶಿಯಾದ ಜೀವನಾನುಕೂಲವೆನಿಸುವ ಕರ್ಮಮಯವಾದದ್ದು. ಕರ್ಮಮಯವಾದ ಬಹಿರಂಗವನ್ನು ಶ್ರದ್ಧೆಯಿಂದ ಪಾಲಿಸಿದಹೊರತು ಧರ್ಮದ ಅಂತರಂಗದ ತತ್ವಮಯ ಸ್ವರೂಪವು ಸಾಧ್ಯವಾಗಿ ಆತ್ಮದರ್ಶನ ಪ್ರಾಪ್ತವಾದ ಸದಾನಂದ ರೂಪ ಮೋಕ್ಷವನ್ನು ಹೊಂದಲಾಗುವದಿಲ್ಲ.

ಲೋಕವು ಶ್ರದ್ಧಾಹೀನವಾಗಿ ಸ್ವಾರ್ಥದ ಬಲೆಗೆ ಬಿದ್ದು ನೀತಿಭ್ರಷ್ಟವಾಗಿ ಧರ್ಮದ ಬಹಿರಂಗವೆನಿ ಸುವ ಕರ್ಮಾಚರಣೆಯನ್ನು ದಾಂಭಿಕತನದಿಂದಾದರೂ ಮಾಡುವದು, ಇಲ್ಲವೆ ಸ್ವಚ್ಛಂದದಿಂದಾದರೂ ವರ್ತಿಸುವದು; ಇದೇ ಧರ್ಮಭ್ರಷ್ಟತೆಯ ಲಕ್ಷಣವು ! ಇದಕ್ಕೇ ಧರ್ಮಗ್ಲಾನಿಯೆನ್ನುವರು. ಭಗವಂತನು ಗೀತೆಯಲ್ಲಿ— ''ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ! ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ'' ಎಂದು ಹೇಳುವಂತೆ, ಇಂಥವರ ಸಲುವಾಗಿಯೇ ಧರ್ಮಸುಧಾರಣೆಯು ಅಥವಾ ಹೊಸ ಧರ್ಮದ ಉತ್ಪತ್ತಿಯು ! ಇಂಥವರ ಸಲುವಾಗಿಯೇ ಧರ್ಮಸ್ಥಾಪಕರ ಅವತಾರವು ! ಯಾವಾಗಾದರೂ ಇಂಥವರೇ, ಅಂದರೆ ಧರ್ಮಭ್ರಷ್ಟರೇ ಬಹುತರ ಧರ್ಮಾಂತರ ಮಾಡುವರಲ್ಲದೆ, ಸ್ವಧರ್ಮದಲ್ಲಿ ನಿಜವಾದ ಶ್ರದ್ಧೆಯುಳ್ಳವರು ಎಂದೂ ಧರ್ಮಾಂತರ ಮಾಡುವದಿಲ್ಲ.

ಹೀಗೆ ಎಷ್ಟೋ ಜನರು ಎಷ್ಟೋ ಸಾರೆ ಧರ್ಮಾಂತರ ಮಾಡುತ್ತ ಬಂದಿದ್ದರೂ ಆಯಾ ಧರ್ಮಗಳಲ್ಲಿಯ ಶ್ರದ್ಧಾಳುಗಳ ಪರಂಪರೆಯಿಂದ ಆಯಾ ಧರ್ಮಗಳು ಈವೊತ್ತಿಗೂ ಉಳಿದಿರುತ್ತವೆ! ಧರ್ಮದ ಗ್ಲಾನಿಯೆಂದರೆ ಅದರ ನಾಶವಲ್ಲ. ಅದರ ಬಹಿರಂಗವೆನಿಸುವ ವಿನಾಶಿಯಾದ ಕರ್ಮರೂಪ ಕವಚದ ರೂಪಾಂತರವು! ಅಂದಬಳಿಕ ಅಂತರಂಗದ ಸನಾತನತ್ವದ ನಾಶವಂತೂ ಅಲ್ಲವೇ ಅಲ್ಲ.

ಮಹಾತ್ಮರಾದ ಜ್ಞಾನಿಗಳು ಧರ್ಮಸುಧಾರಣೆಯನ್ನೇ ಮಾಡಲಿ, ಹೊಸ ಧರ್ಮವನ್ನೇ ಪ್ರಚಾರದಲ್ಲಿ ತರಲಿ ಅವರು ದೇಶ–ಕಾಲ–ಪರಿಸ್ಥಿತಿಗನುಸರಿಸಿ ಧರ್ಮದ ಬಹಿರಂಗರೂಪ ಕರ್ಮಕಲಾಪದಲ್ಲಿ ಹೆಚ್ಚುಕಡಿಮೆ ಮಾಡುವರಲ್ಲದೆ, ಧರ್ಮದ ಅಂತರಂಗದ ಸನಾತನತ್ವಗಳಿಗೆ ಬಾಧೆಯನ್ನುಂಟು ಮಾಡುವದಿಲ್ಲ.

ಧರ್ಮವು ಸ್ಥಿರವಾದರೂ, ಮತ್ತು ಅದು ದ್ವೈತಾದ್ವೈತ–ವಿಶಿಷ್ಟಾದ್ವೈತ ಇತ್ಯಾದಿ ಹಲವು ಪಂಥರೂಪದಿಂದಿದ್ದರೂ, ಅದು ಪರಮ ಪುರುಷಾರ್ಥವಾದ ಸದಾನಂದ ರೂಪಮೋಕ್ಷದ ಮಾರ್ಗವಲ್ಲದೆ, ಅದು ಸ್ವತಃ ಆನಂದರೂಪವಲ್ಲವು! ಜನರ ತುಳಿತವು ಹೆಚ್ಚಾದಹಾಗೆ ಮಾರ್ಗವು ಕೆಡುವಂತೆ, ಯಾವದೊಂದು ಧರ್ಮಪಂಥದವರಲ್ಲಿ ಸ್ವಾರ್ಥವು ಹೆಚ್ಚಾದಂತೆ ಶ್ರದ್ಧೆಯು ನಷ್ಟವಾಗುತ್ತ ಧರ್ಮಮಾರ್ಗದ ಬಹಿರಂಗವು ಕೆಟ್ಟು, ಅದರ ಅಂತರಂಗದ ಸಂಬಂಧವಾಗದೆ ಹೋಗುವದು.

ಇದರಿಂದ ಸದಾನಂದ ಪ್ರಾಪ್ತಿಯ ಬದಲು ಲೋಕಕ್ಕೆ ದುಃಖಪ್ರಾಪ್ತಿಯಾಗುವದು! ಹೀಗೆ ಲೋಕವು ದುಃಖಪೀಡಿತವಾಗಲು ಪುನಃ ಧರ್ಮಮಾರ್ಗದ ಸುಧಾರಣೆಯು, ಅಥವಾ ಹೊಸ ಧರ್ಮದ ಉತ್ಪತ್ತಿಯು ಒಟ್ಟಿಗೆ, ಆನಂದದಿಂದ ಇಚ್ಛಿಸುವವರಿರುವವರೆಗೆ ಆನಂದಪ್ರಾಪ್ತಿಯ ಮಾರ್ಗವಾದ ಧರ್ಮದ ಸನಾತನತ್ವವು ಸ್ಥಿರವಾಗಿಯೇ ಇರುವದು; ಆದರೆ ಧರ್ಮದ ಬಹಿರಂಗವು ಆಗಾಗ್ಗೆ ಹೆಚ್ಚುಕಡಿಮೆಯಾದ ಹಾಗೆ ತೋರುವದರಿಂದ ಮಾತ್ರ ಧರ್ಮವು ಅಸ್ಥಿರವಿದ್ದಂತೆ ಕಂಡುಬರುವದು.

ಜಗತ್ತಿನಲ್ಲಿ ಈಗ ಹಲವು ವೈದಿಕ ಧರ್ಮಗಳೂ, ಹಲವು ಅವೈದಿಕ ಧರ್ಮಗಳೂ ಪ್ರಚಲಿತವಾಗಿರಲಿಕ್ಕೆ ಮೇಲೆ ಹೇಳಿದ ಮನುಷ್ಯನ ಧರ್ಮಭ್ರಷ್ಟತೆಯೇ ಕಾರಣವು. ಧರ್ಮಗಳು ಎಷ್ಟು ಇದ್ದರೂ "ನಾಸತ್ಯಾತ್ ಪರತೋ ಧರ್ಮಃ" "ಆತ್ಮವತ್ಸರ್ವಭೂತಾನಿ ಯಃ ಪಶ್ಯತಿ ಸಪಶ್ಯತಿ" ಅಂದರೆ "ಸತ್ಯಕ್ಕಿಂತ ಹೆಚ್ಚಿನ ಧರ್ಮವಿಲ್ಲ" "ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಣವಕ್ಕು" ಇತ್ಯಾದಿ ಸನಾತನ ತತ್ವಗಳು ಸರ್ವಧರ್ಮಸಾಧಾರಣವಾಗಿಯೇ ಇರುವವು; ಮತ್ತು ಯಾವ ಮಾರ್ಗದಿಂದಲೇ ಆಗಲಿ ಆನಂದಸ್ಥಾನವನ್ನು ಮುಟ್ಟಿದವರಿಗೆ ಧರ್ಮಮಾರ್ಗಗಳೆಲ್ಲ ತನ್ನ ಆನಂದಸ್ಥಾನಕ್ಕೆ ಬರುವ ಮಾರ್ಗಗಳೇ ಇರುವವೆಂಬದರ ಅನುಭವವಾಗದೆ ಇರದು.

ವಿರೂಪಾಕ್ಷಾರ್ಯ— ಆಚಾರ್ಯವರ್ಯ, ಈ ಸಂಬಂಧದಿಂದ ನಮ್ಮ ಮಹಾತ್ಮರಾದ ನಿಜಗುಣ ಶಿವಯೋಗಿಗಳು ಹೇಳಿರುವದು ನಿಮ್ಮ ಮಾತಿಗೆ ಒಳಿತಾಗಿ ಪುಷ್ಟಿಯನ್ನುಂಟು ಮಾಡುತ್ತದೆ. ಆ ಮಹನೀಯರು ತಮ್ಮ ಪರಮಾರ್ಥಗೀತೆಯ 6ನೇ ಗತಿಯಲ್ಲಿ ಹೇಳಿದ್ದೇನೆಂದರೆ– "ಸರ್ವ ಭೂತಗಳ ಒಳಹೊರಗೆ ತುಂಬಿತುಳುಕಿಯಾಡಿ ವಿವಿಧವಾಗಿ ಹೊಳೆಯುವ ಚೈತನ್ಯವನ್ನು

ವೇದಾಂತಿಗಳು ಶುದ್ಧಾದ್ವೈತಬ್ರಹ್ಮವೆಂತಲೂ, ತಾಂತ್ರಿಕರು ಪರಶಿವನೆಂತಲೂ, ಆರಾಧ್ಯರು ನಿಜಲಿಂಗವೆಂತಲೂ, ವೈಷ್ಣವರು ನಾರಾಯಣನೆಂತಲೂ, ಸಾಂಖ್ಯರು ಪುರುಷನೆಂತಲೂ, ವೈಶೇಷಿಕರು ಈಶ್ವರನೆಂತಲೂ, ಬೌದ್ಧರು ಶೂನ್ಯವೆಂತಲೂ, ಕ್ಷಪಣಕರು ವಿಜ್ಞಾನವೆಂತಲೂ, ಇದರಂತೆಯೇ ವೈಯಾಕರಣರು ಸ್ಫೋಟವೆಂತಲೂ, ಶಾಕ್ತರು ಶಕ್ತಿಯೆಂತಲೂ, ನಾಸ್ತಿಕರು ಇಲ್ಲವೆಂತಲೂ, ಆಸ್ತಿಕರು ಉಂಟೆಂತಲೂ ತಮತಮಗೆ ಅನುಭವ ಬಂದಂತೆ ಸಂಶಯರಹಿತರಾಗಿ ಹೇಳಿ ಸಮಾಧಾನಪಟ್ಟಿರುವರು ! ಆದರೆ ಈ ವಿವಿಧೋಕ್ತಿಗಾಗಿ ಕಂಗೆಡುವದು ವಿವೇಕವಲ್ಲ.

ಯಾರು ಏನೆಂದು ಹೇಳಿದರೂ, ಅವರು ಅದನ್ನು ಕಂಡೇ ಹೇಳಿರುವದರಿಂದ ಕಾಣೋಣವು ಅಂದರೆ ಜ್ಞಾನವು, ಅಥವಾ ಆ ಚೈತನ್ಯ ವಸ್ತುವಿನ ಚಿತ್‌ಸ್ವರೂಪವು ಸರ್ವಸಮ್ಮತವಾದಂತಾಯಿತು. ಅದರಂತೆ ಆ ಚೈತನ್ಯ ವಸ್ತುವು ಜ್ಞಾನಕ್ಕೆ ವಿಷಯವಾದದ್ದರಿಂದ ಅದಕ್ಕೆ ಒಂದಿಲ್ಲೊಂದು ಬಗೆಯ ಅಸ್ತಿತ್ವವು ಸಿದ್ಧವಾಗಿರುವದರಿಂದ ಅದು ಸದ್ರೂಪವೂ ಆಗಿರಬೇಕು. ಆ ಸಚ್ಚಿದ್ರೂಪ ವಸ್ತುವನ್ನು ಮೇಲೆ ಹೇಳಿದಂತೆ ಯಾವದೊಂದು ಬಗೆಯಿಂದ ಕಂಡವರಿಗೆ ಆನಂದವು ಪ್ರಾಪ್ತವಾಗಿರಲೇ ಬೇಕಾದದ್ದರಿಂದ ಆ ವಸ್ತುವು ಆನಂದರೂಪವೂ ಇದ್ದಹಾಗಾಯಿತು ! ಒಟ್ಟಿಗೆ ಆ ಸರ್ವವ್ಯಾಪಿಯಾದ ಚೈತನ್ಯವಸ್ತುವನ್ನು ಯಾರು ಏನೆಂದು ಕರೆದರೂ ಅದು ಎಲ್ಲರ ದೃಷ್ಟಿಯಿಂದ ಸಚ್ಚಿದಾನಂದರೂಪವಿರುತ್ತದೆಂಬ ಒಂದೇ ಒಂದಾದ ಮಾತು ಸಿದ್ಧವಾಗುತ್ತದೆ'' ಆದ್ದರಿಂದ ಆಚಾರ್ಯಶ್ರೇಷ್ಠ, ನಿಮ್ಮ ನಿರೂಪಣವು ಜ್ಞಾನಿಗಳಿಗೆ ಸಮ್ಮತವಾದದ್ದೆಂಬದರಲ್ಲಿ ಸಂಶಯವಿಲ್ಲ. ನಮ್ಮ ಈ ಇಸ್ಲಾಮಿಗಳು ''ಅಲ್ಲಾ'' ಎಂದು ಕರೆಯುವದೂ ಆ ಚೈತನ್ಯವಸ್ತುವನ್ನೇ ಅಲ್ಲವೆ ? ಅಂದಬಳಿಕ ಬೇರೆ ಬೇರೆ ಧರ್ಮದವರೂ, ಬೇರೆ ಬೇರೆ ಮತದವರೂ ಶಬ್ದಭೇದಕ್ಕಾಗಿ ಕಲಹ ಬೆಳಿಸಿ ಪ್ರೇಮಭಂಗಮಾಡಿ ಕೊಳ್ಳುವದು ಅಜ್ಞಾನವಲ್ಲದೆ ಮತ್ತೇನು?

ಕಾಶಿಮಖಾನ— ಉಭಯಮಹಾತ್ಮರ ವಿವರಣದಿಂದ ಬಹಳ ಸಮಾಧಾನವಾಯಿತು. ಧರ್ಮದ ಅಂತರಂಗವು ಸಾಧಿಸಲಿಕ್ಕೆ ಅನುಕೂಲವಾಗುವಂತೆ ದೇಶ ಕಾಲ ಪರಿಸ್ಥಿತ್ಯನುರೂಪವಾಗಿ ಈ ಲೋಕದ ಜೀವನಯಾತ್ರೆಯನ್ನು ಸಾಗಿಸಿಕೊಂಡು ಹೋಗತಕ್ಕ ಕರ್ಮಮಾರ್ಗವನ್ನು ಆಯಾ ಧರ್ಮಪ್ರವರ್ತಕರು ಹಾಕಿಕೊಟ್ಟರೆಂದಹಾಗಾಯಿತು. ಅದನ್ನೇ ಧರ್ಮದ ಬಹಿರಂಗವೆಂದು ಕರೆಯಬೇಕಾದೀತೆಂಬ ಹಾಗೆ ನನಗೆ ತೋರುತ್ತದೆ; ಮತ್ತು ಈ ಬಹಿರಂಗದ ಆಚರಣೆಗಳು ಎಷ್ಟು ಭಿನ್ನಭಿನ್ನವಾಗಿದ್ದರೂ ಧರ್ಮದ ಅಂತರಂಗವು ಸರ್ವ ಸಾಧಾರಣವಾಗಿ ಒಂದೇ ಇರುವದರಿಂದ ಅದರಲ್ಲಿ ದೃಷ್ಟಿಯನ್ನಿಟ್ಟು ವೈದಿಕರೂ–ಅವೈದಿಕರೂ ನಾವೆಲ್ಲರೂ ಈಶ್ವರನ ಸಂಬಂಧಿಕರೆಂದು ತಿಳಿದು ಪರಸ್ಪರ ಬಂಧುಪ್ರೇಮದಿಂದ ನಡೆದುಕೊಳ್ಳಬಹುದೆಂತಲೂ ನನಗೆ ತೋರುತ್ತದೆ.

ಮಾಧವಾಚಾರ್ಯ— ಕಾಶಿಮಖಾನ, ಕೆಲಸವಾಯಿತು ! ನಾವೂ ನೀವೂ ಹೀಗೆ ತಿಳಿದುಕೊಂಡು ಬಂಧುಗಳಾಗಿ ನಡೆಯಬೇಕೆಂತಲೇ ನಮ್ಮ ಉದ್ದೇಶವಿತ್ತು. ನಿಮ್ಮ ಮಾತಿನಿಂದ ನಮ್ಮ ಉದ್ದೇಶವು ಸಫಲವಾದದ್ದರಿಂದ ನಮಗೆ ಬಹಳ ಸಂತೋಷವಾಯಿತು.

# ಶಾಂತಿಯ ಪ್ರತ್ಯಕ್ಷ ಕಾರಣವು ಅಧ್ಯಯನವಲ್ಲ ಗುರುಕೃಪೆಯು

ಹೀಗೆ ಆಚಾರ್ಯವರ್ಯರೂ, ಆರ್ಯವರ್ಯರೂ ನಿರೂಪಿಸಿದ್ದನ್ನು ಮನನ ಮಾಡಲು, ಕಾಸಿಮನಿಗೆ ಬಹಳ ಸಮಾಧಾನವಾಗಿ, ಎಲ್ಲ ಧರ್ಮಗ್ರಂಥಗಳ ಅಧ್ಯಯನದಿಂದ ಶಾಂತಿಯು ಸಹಜವಾಗಿ ದೊರೆಯಬಹುದೆಂಬ ಭಾವನೆಯು ಆತನಲ್ಲಿ ಉತ್ಪನ್ನವಾಯಿತು ! ಆಗ ಆತನು ಉತ್ಸಾಹದಿಂದ ಆಚಾರ್ಯರನ್ನು ಕುರಿತು –

ಕಾಸಿಮಖಾನ—ವೈದಿಕರೂ, ಅವೈದಿಕರೂ ಪರಸ್ಪರರ ಧರ್ಮಗ್ರಂಥಗಳ ಅಧ್ಯಯನವನ್ನು ಮಾಡಬಹುದಲ್ಲವೆ?

ಮಾಧವಾಚಾರ್ಯ—ಈ ಮಾತಿನ ಉತ್ತರವನ್ನು ಆಗಲೆ ವೈದಿಕಧರ್ಮದವರ ಸಂಬಂಧದಿಂದ ಹೇಳುವಾಗ ಕೊಟ್ಟಂತೆ ಆಗಿರುತ್ತದೆ; ಆದರೂ ಇನ್ನೊಮ್ಮೆ ಹೇಳುವೆನು ಕೇಳು. ಉಪದೇಶ ರೂಪವಾದ ಅಧ್ಯಯನಾಧ್ಯಾಪನಗಳಿಗೆ ಸ್ವಮತದ ಗ್ರಂಥಗಳ ವಿಷಯದಲ್ಲಿ ಮಾತ್ರ ಅಧಿಕಾರವಿರುವದರಿಂದ, ಒಂದು ಮತದವರು ತಮ್ಮ ಮತದ ಮೂಲ ಮಂತ್ರರೂಪ ಗ್ರಂಥಗಳನ್ನು ಪರಮತದವರಿಗೆ ಉಪದೇಶ್ಯೋಪದೇಶಕ ಭಾವದಿಂದ ಸರ್ವಥಾ ಅಧ್ಯಯನ ಮಾಡಿಸಲಾಗದು. ಇಂಥ ಅಧ್ಯಯನಕ್ಕೆ ಸ್ವಮತದ ಅಧಿಕಾರಸಂಪನ್ನನಾದ ಶಿಷ್ಯನೇ ಇರಬೇಕಾಗುವದೆಂಬದು ಸಾಮಾನ್ಯ ನಿಯಮವು. ಈ ನಿಯಮಕ್ಕೆ ಹೊರಗಾದ ಉದಾಹರಣೆಗಳು ಎಲ್ಲಿಯಾದರೂ ಕಂಡುಬಂದರೆ ಅವು ಕೇವಲ ಅಪವಾದವೆಂದಾಗಲಿ, ಧರ್ಮಬಾಹಿರವೆಂದಾಗಲಿ ತಿಳಿಯಬೇಕು; ಯಾಕಂದರೆ ತಮ್ಮ ಮತದ ಗೂಢಮಂತ್ರಗಳನ್ನು ಅನ್ಯಮತದವರಿಗೂ, ಅಧಿಕಾರವಿಲ್ಲದ ಸ್ವಮತದವರಿಗೂ ಉಪದೇಶಿಸಲಾಗದೆಂದು ಸಾಧಾರಣವಾಗಿ ಎಲ್ಲ ಧರ್ಮಗಳಲ್ಲಿಯೂ ನಿರ್ಬಂಧವಿರುವದೆಂದು ಹೇಳಬಹುದು; ಆದರೆ ಸ್ವಸ್ವರೂಪ ಜ್ಞಾನಕ್ಕಾಗಿ ಸತತವಾದ ಗುರುಸೇವಾರೂಪ ತಪಶ್ಚರ್ಯವು ಅವಶ್ಯವೆಂದು ವೈದಿಕ ಧರ್ಮದವರೂ, ಅವೈದಿಕ ಧರ್ಮದವರೂ ಒಪ್ಪಿಕೊಂಡಿರಲೇಬೇಕು.

ಧರ್ಮಗ್ರಂಥಗಳ ಅಧ್ಯಯನಕ್ಕಿಂತ ಈ ತಪಶ್ಚರ್ಯವು ಕೃತಾರ್ಥತೆಗೆ ಅವಶ್ಯವಾಗಿರುವದು. ಯಾವ ಧರ್ಮಗ್ರಂಥಗಳ ಅಧ್ಯಯನವನ್ನೂ ಮಾಡದ ಇಂಥ ತಪಸ್ವಿಯು ಗುರುಕೃಪೆಯಿಂದ ಕೃತಾರ್ಥನಾಗಬಹುದು; ಆದರೆ ಗುರುಕೃಪೆಗೆ ಪಾತ್ರನಲ್ಲದ ಧರ್ಮಶಾಸ್ತ್ರ ಪ್ರವೀಣನು ಅನುಭವ ಜ್ಞಾನವಿಲ್ಲದ ಶಬ್ದಪಾಂಡಿತ್ಯದಿಂದ ಬಾಯ್ಬಡಕನು ಮಾತ್ರ ಆಗಬಹುದು; ಆದ್ದರಿಂದ ಯಾವ ಧರ್ಮದವರಿಗೇ ಆಗಲಿ, ಧರ್ಮಗ್ರಂಥಗಳ ಅಧ್ಯಯನಕ್ಕಿಂತ ಸದ್ಗುರು ಸೇವೆಯೇ ಶಾಂತಿಗೆ ಸಾಧನವಾದದ್ದು.

ಸದ್ಗುರುಕೃಪೆಯಿಂದ ಸರ್ವ ಧರ್ಮಶಾಸ್ತ್ರ ಸಾರವಾದ ಸ್ವಸ್ವರೂಪ ಜ್ಞಾನವು ಸಾಧಿಸಿ ಹೋಗುವದು; ಆದ್ದರಿಂದ–ಹಲವು ಧರ್ಮಗ್ರಂಥಗಳ ಅಧ್ಯಯನದ ಆಯಾಸದಲ್ಲಿ ವ್ಯರ್ಥ ದಣಿಯುವದಕ್ಕಿಂತ ಶ್ರೀ ಸದ್ಗುರುಸೇವೆಯಲ್ಲಿ ದೇಹವನ್ನು ಸವಿಸಿ ಕೃತಾರ್ಥರಾಗುವದರ ಕಡೆಗೆ ಮನಸ್ಸು ಮಾಡುವದು ಹಿತಕರವು.

ಕಾಸಿಮಖಾನ—ಸದ್ಗುರುಸೇವೆಯೆಂದರೇನು?

ಮಾಧವಾಚಾರ್ಯ—ಸದ್ಗುರುಗಳ ಅಜ್ಞಾಪಾಲನವು; ಅವನ್ನೇ ಶ್ರದ್ಧಾ ಯುಕ್ತವಾದ ತಪಸ್ಸು! ಎಂದು ಕರೆಯುವರು.

ಕಾಸಿಮ—ಮಹಾತ್ಮನ್, ಗೌರವದ ರಹಸ್ಯಪೂರ್ಣವಾದ ಉಪದೇಶದಿಂದ ನಾನು ಹಿಂದಕ್ಕೆ ನಮ್ಮಲ್ಲಿಯ ದೊಡ್ಡವರಿಂದ ಕೇಳಿದ ಮಾತುಗಳು ಈಗ ನನಗೆ ನೆನಪಾಗ ಹತ್ತಿವೆ; ಆದರೆ ಸದ್ಗುರೋ, ಸಚ್ಛಿಷ್ಯನು ಸದ್ಗುರುವಿನ ಸೇವೆಮಾಡಿ ಕೃತಾರ್ಥನಾದ ನಿಮ್ಮೊಳಗಿನದೊಂದು ಉದಾಹರಣೆಯನ್ನು ಹೇಳುವ ಕೃಪೆಯಾಗಬೇಕು; ಅಂದರೆ ನಾನು ಕೇಳಿದ್ದಕ್ಕೆ ಅದನ್ನು ಹೋಲಿಸಿ ನೋಡಲಿಕ್ಕೆ ನೆಟ್ಟಗಾಗುವದು.

ಮಾಧವಾಚಾರ್ಯ—ಕಾಸಿಮಖಾನ, ಇಂಥ ಉದಾಹರಣೆಗಳು ಉಪನಿಷತ್ತಿನಲ್ಲಿಯೂ, ಪುರಾಣಗಳಲ್ಲಿಯೂ ಹಲವು ಹೇಳಿರುವವಲ್ಲದೆ,ಪ್ರಾಚೀನ ಕಾಲದಿಂದ ಇಂದಿನವರೆಗೆ ಎಷ್ಟೋ ಸಚ್ಛಿಷ್ಯರು ಹಾಗೆ ಸದ್ಗುರುಸೇವೆ ಮಾಡುತ್ತ ಅವರ ಕೃಪೆಯಿಂದ ಕೃತಾರ್ಥರಾಗುತ್ತಬಂದಿರುವರು. ಅಂಥವರ ಸೇವೆಯಿಂದುಂಟಾದ ಕೃತಾರ್ಥತೆಯೇ ಅನುಕರಣಕ್ಕಾಗಿ ಗ್ರಂಥಾಂತರಗಳಲ್ಲಿ ಪ್ರಸಿದ್ಧವಾಗಿರುವದಲ್ಲದೆ, ತನ್ನ ಹಾಗು ಪರರ ಧರ್ಮಗಳ ರುಕ್ಷವಾದ ಅಧ್ಯಯನದಿಂದ ಬರಿಯ ಶಬ್ದಪಾಂಡಿತ್ಯ ಸಂಪಾದಿಸಿ ಕೃತಾರ್ಥರಾದವರ ಒಂದಾದರೂ ಉದಾಹರಣದ ಉಲ್ಲೇಖವಾಗಿರುವದಿಲ್ಲ; ಆದ್ದರಿಂದ ಗುರುಸೇವೆಯಿಲ್ಲದ ಬರಿಯ ಧರ್ಮಗ್ರಂಥಗಳ ಅಧ್ಯಯನದ, ವಿಶೇಷವಾಗಿ ಪರಧರ್ಮಗ್ರಂಥಗಳ ಅಧ್ಯಯನದ ಮಹತ್ವಾಕಾಂಕ್ಷೆಯು ಶ್ರೇಯಸ್ಕರವಾಗಲಾರದು. ''ಓದಿ ಮರುಳಾದೆಯೋ ಕೂಸಿಭಟ್ಟ'' ಎಂಬ ಉಕ್ತಿಯೊಳಗಿನ ಗ್ರಾಹ್ಯಾಂಶವನ್ನು ಗ್ರಹಿಸತಕ್ಕದ್ದು.

ಇರಲಿ, ಸದ್ಗುರುಸೇವೆಯ ಮಹತ್ವವನ್ನು ತೋರಿಸುವ ಉಪನಿಷತ್ತಿನೊಳಗಿನದೊಂದು ಉದಾಹರಣವನ್ನು ಹೇಳವೆನು ಕೇಳು. ಈ ಸಂಬಂಧದಿಂದ ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದ ಕಥೆಯೇನಂದರೆ –ಸತ್ಯಕಾಮನೆಂಬವನು ತನ್ನ ತಾಯಿಯಾದ 'ಜಬಲಾ' ಎಂಬವಳನ್ನು ಕುರಿತು–ಪೂಜ್ಯಮಾತೆಯೇ, ಸ್ವಾಧ್ಯಾಯಗ್ರಹಣಕ್ಕಾಗಿ ಆಚಾರ್ಯಕುಲದಲ್ಲಿ ಬ್ರಹ್ಮಚರ್ಯ ವಾಸಮಾಡಲಿಚ್ಛಿಸುವೆನು; ಆದ್ದರಿಂದ ನಾನು ಯಾವ ಗೋತ್ರದವನು? ಕುಲಗೋತ್ರಗಳು ಗೊತ್ತಾದ ವಟುವಿನ ಉಪನಯನವನ್ನೇ ಆಚಾರ್ಯರು ಮಾಡುವರಾದ್ದರಿಂದ ನನಗೆ ನನ್ನ ಗೋತ್ರವನ್ನು ಹೇಳು'' ಎಂದು ಕೇಳಲು, ಜಬಲೆಯು– ''ಅಪ್ಪಾ, ನೀನು ಯಾವ ಗೋತ್ರದವ ನೆಂಬದು ನನಗೆ ಗೊತ್ತಿಲ್ಲವು. ಗಂಡನ ಮನೆಯಲ್ಲಿ ಅತಿಥಿ ಅಭ್ಯಾಗತರ ಸೇವೆಯಲ್ಲಿ ತತ್ಪರಳಾಗಿದ್ದ ನಾನು ಗೋತ್ರಾದಿಗಳನ್ನು ಕೇಳಲಿಲ್ಲ; ಅದನ್ನು ಕೇಳಿ ನೆನಪಿನಲ್ಲಿಟ್ಟುಕೊಳ್ಳುವದರ ಕಡೆಗೆ ಆಗ ನನ್ನ ಮನಸ್ಸು ಇದ್ದಿಲ್ಲ. ಹೀಗೆ ಸೇವಾತತ್ಪರಳಾಗಿದ್ದ ನನಗೆ ತಾರುಣ್ಯದಲ್ಲಿ ನೀನು ಪ್ರಾಪ್ತನಾದೆ; ಕೂಡಲೆ ನಿನ್ನ ತಂದೆಯು ಪರಲೋಕವಾಸಿಯಾದನು. ಮೊದಲು ಲಜ್ಜೆಯಿಂದಲೂ, ಕಾರ್ಯವ್ಯಗ್ರತೆ ಯಿಂದಲೂ ಗೋತ್ರಾದಿಗಳನ್ನು ನಾನು ಕೇಳಲಿಲ್ಲ; ಮುಂದೆ ನೀನು ಹುಟ್ಟಿದ ಕೂಡಲೆ ನಿನ್ನ ತಂದೆಯು ಮರಣಹೊಂದಿದ್ದರಿಂದ ಅದನ್ನು ಕೇಳಲಿಕ್ಕೆ ಮಾರ್ಗವುಳಿಯಲಿಲ್ಲ, ಎರಡನೆಯವರನ್ನು ಕೇಳಬೇಕೆಂದರೆ ದುಃಖದಲ್ಲಿ ನನಗೆ ಕೇಳುವ ಮನಸ್ಸಾಗಲಿಲ್ಲ; ಆದ್ದರಿಂದ ಹೀಗೆ ಹಲವು

ತೊಂದರೆಗಳಿಗೊಳಗಾದ ನನಗೆ ನಿನ್ನ ಗೋತ್ರವು ಗೊತ್ತಾಗಲಿಲ್ಲ. ನಾನು ಜಬಲಾ ಎಂಬ ಹೆಸರಿನವಳಿದ್ದೇನೆ, ನೀನು ಸತ್ಯಕಾಮನೆಂಬ ಹೆಸರಿನವನಿರುತ್ತೀ, ಇಷ್ಟೇ ನನಗೆ ಗೊತ್ತಿರುವದು; ಆದ್ದರಿಂದ ಆಚಾರ್ಯರು ನಿನ್ನನ್ನು ಕೇಳಿದರೆ ನಾನು 'ಜಬಲಾ ಪುತ್ರನಾದ ಸತ್ಯಕಾಮನಿರುತ್ತೇನೆ' ಎಂದು ಅಥವಾ ಜಾಬಾಲ ಸತ್ಯಕಾಮನಿರುತ್ತೇನೆಂದು ಹೇಳು.''

ಹೀಗೆ ತಾಯಿಯ ಮಾತನ್ನು ಕೇಳಿ ಜಾಬಾಲ ಸತ್ಯಕಾಮನು ಗೌತಮ ಗೋತ್ರದವನಾದ ಹಾರಿದ್ರುಮತನೆಂಬ ಆಚಾರ್ಯನ ಬಳಿಗೆ ಹೋಗಿ–ಭಗವಾನ್, ಪೂಜ್ಯನಾದ ನಿನ್ನ ಬಳಿಯಲ್ಲಿ ನಾನು ಬ್ರಹ್ಮಚರ್ಯ–ವಾಸಮಾಡಲಿಚ್ಛಿಸುವೆನು; ಆದ್ದರಿಂದ ಶಿಷ್ಯತ್ವದಿಂದ ನಿಮ್ಮ ಬಳಿಯಲ್ಲಿ ಬರುತ್ತೇನೆ; ಎಂದು ಹೇಳಿದನು. ಅದಕ್ಕೆ ಹಾರಿದ್ರುಮತನು– ''ಸೌಮ್ಯನೇ, ನೀನು ಯಾವ ಗೋತ್ರದವನಿರುವೆ? ಕುಲಗೋತ್ರಗಳು ಗೊತ್ತಾಗಿರುವ ಶಿಷ್ಯನ ಉಪನಯನ ಮಾಡಬೇಕೆಂದು ವಿಧಿಯಿರುವದರಿಂದ ನಿನ್ನ ಗೋತ್ರವನ್ನು ಹೇಳು'' ಎಂದು ಕೇಳಲು, ಸತ್ಯಕಾಮನು–ಭೋ ಆಚಾರ್ಯ, ನಾನು ಯಾವ ಗೋತ್ರದವನೆಂಬದು ನನಗೆ ಗೊತ್ತಿಲ್ಲ, ನಾನು ಸತ್ಯಕಾಮ ಜಾಬಾಲನಿರುತ್ತೇನೆ. ಎಂದು ಹೇಳಿ, ತನ್ನ ತಾಯಿಯೊಡನೆ ನಡೆದ ಸಂಭಾಷಣವನ್ನು ಇದ್ದಕ್ಕಿದ್ದ ಹಾಗೆ ಹೇಳಿದನು.

ಅದಕ್ಕೆ ಹಾರಿದ್ರುಮತನು—''ಸರಳ ಅರ್ಥದಿಂದ ಯುಕ್ತವಾದ ಇಂಥ ಮಾತುಗಳನ್ನು ಬ್ರಾಹ್ಮಣನಲ್ಲದವನು ವಿಶೇಷವಾಗಿ ಆಡಲು ಸಮರ್ಥನಾಗಲಾರನು; ಯಾಕಂದರೆ ಬ್ರಾಹ್ಮಣರು ಸ್ವಭಾವತಃ ಸರಳರಿರುವಂತೆ ಬೇರೆಯವರು ಇರುವದಿಲ್ಲ. ನೀನು ''ಸತ್ಯ'' ಎಂಬ ಬ್ರಾಹ್ಮಣಜಾತಿಯ ಧರ್ಮದಿಂದ ಭ್ರಷ್ಟನಾಗದಿರುವದರಿಂದ ಬ್ರಾಹ್ಮಣನಾದ ನಿನ್ನ ಉಪನಯನ ಮಾಡುತ್ತೇನೆ. ಆದ್ದರಿಂದ ಎಲೈ ಸೌಮ್ಯನೇ, ಹೋಮಕ್ಕಾಗಿ ಸಮಿತ್ತುಗಳನ್ನು ತಕ್ಕೊಂಡು ಬಾ'' ಎಂದು ಹೇಳಿ, ಆತನ ಉಪನಯನ ಮಾಡಿ ಆತನನ್ನು ಅನುಗ್ರಹಿಸುವದಕ್ಕಾಗಿ ಆತನಿಗೆ ಸೇವೆಯನ್ನು ನಿಯಮಿಸಿಕೊಡಬೇಕೆಂದು ಆಕಳ ಹಿಂಡಿನೊಳಗಿನ ಸೊರಗಿದ ಬಲಹೀನವಾದ ನೂರಾರು ಆಕಳುಗಳನ್ನು ಆರಿಸಿ ತೆಗೆದು ಅವನ್ನು ಸತ್ಯಕಾಮನಿಗೆ ಒಪ್ಪಿಸಿದನು.

ಆಮೇಲೆ ಆ ಮಹಾತ್ಮನು ಶಿಷ್ಯನನ್ನು ಕುರಿತು – ''ಸೌಮ್ಯನೆ, ನೀನು ಇವನ್ನು ಹಿಂಬಾಲಿಸಿ ಹೋಗು'' ಎಂದು ಆಜ್ಞಾಪಿಸಲು, ಆಗ ಸತ್ಯಕಾಮನು ಗುರುವಿನ ಆಜ್ಞೆಯನ್ನು ಶಿರಸಾವಹಿಸಿ ಶ್ರದ್ಧಾಪೂರ್ವಕವಾಗಿ ತಪಶ್ಚರ್ಯ ಮಾಡುವ ಬುದ್ಧಿಯಿಂದ ಮನಸ್ಸಿನಲ್ಲಿ ಈ ನೂರಾರು ಆಕಳು ಸಹಸ್ರವಾಗುವವರೆಗೆ ಗುರುಗೃಹಕ್ಕೆ ಬರಲಿಕ್ಕಿಲ್ಲವೆಂಬ ನಿಶ್ಚಯದಿಂದ ಹುಲ್ಲು ನೀರು ಇದ್ದ ನಿರುಪದ್ರವದ ಅರಣ್ಯವನ್ನು ಪ್ರವೇಶಿಸಿ ಗುರುಸೇವಾರೂಪ ಗೋಸೇವೆಯನ್ನು ಮಾಡ ತೊಡಗಿದನು.

ಹೀಗೆ ಸತ್ಯಕಾಮನು ಹಲವು ವರ್ಷಗಳವರೆಗೆ ಗೋಸೇವೆಯನ್ನು ಮಾಡಲು, ಸಹಸ್ರ ಗೋಗಳಾದವು. ಆಗ ಶ್ರದ್ಧಾಯುಕ್ತ ತಪಶ್ಚರ್ಯಗಳಿಂದ ಸಿದ್ಧನಾದ ಸತ್ಯಕಾಮನನ್ನು ನೋಡಿ ದಿಕ್ಸಂಬಂಧನೀ ವಾಯು ದೇವತೆಯು ಸಂತುಷ್ಟವಾಗಿ ಆಕಳ ಹಿಂಡಿನೊಳಗಿನದೊಂದು ಗೂಳಿಯನ್ನು ಪ್ರವೇಶಿಸಲು, ಆ ಗೂಳಿಯು ಸತ್ಯಕಾಮನನ್ನು ಕುರಿತು–ಎಲೈ ಸೌಮ್ಯನೆ, ನಾವು

ಈಗ ಸಹಸ್ರಸಂಖ್ಯಾಕರರಾಗಿರುವವು; ಆದ್ದರಿಂದ ನಮ್ಮನ್ನು ಗುರುಗೃಹಕ್ಕೆ ಅಟ್ಟಿಕೊಂಡು ಹೋಗು; ಹಾಗು ನಾನು ನಿನಗೆ ಹೇಳುವ ಪರಬ್ರಹ್ಮದ ಒಂದು ಪಾದವನ್ನು ಶ್ರವಣಮಾಡು, ಎಂದು ಹೇಳಿ, ಬ್ರಹ್ಮದ ''ಪ್ರಕಾಶವಾನ್'' ಎಂಬ ಹೆಸರಿನ ಒಂದು ಪಾದವನ್ನು ಉಪದೇಶಿಸಿತು.

ಅದರಂತೆ ಪರಬ್ರಹ್ಮದ ಉಳಿದ ಮೂರು ಪಾದಗಳಲ್ಲಿ ''ಅನಂತವಾನ್'' ಎಂಬ ಎರಡನೆಯ ಪಾದವನ್ನು ಅಗ್ನಿಯೂ, ''ಜ್ಯೋತಿಷ್ಮಾನ್'' ಎಂಬ ಮೂರನೇ ಪಾದವನ್ನು ಸೂರ್ಯದೇವತಾಪ್ರೇರಿತ ಹಂಸವೂ, ''ಆಯತನವಾನ್'' ಎಂಬ ನಾಲ್ಕನೇ ಪಾದವನ್ನು ಪ್ರಾಣದೇವತಾ ಪ್ರೇರಿತವಾದ ಜಲಸಂಚಾರ ಮದ್ಗು ಎಂಬ ಪಕ್ಷಿಯೂ ಉಪದೇಶಿಸಿದವು.

ಈ ಪ್ರಕಾರ ವಾಯು, ಅಗ್ನಿ, ಸೂರ್ಯ, ಪ್ರಾಣ ಈ ದೇವತೆಗಳಿಂದ ಕ್ರಮವಾಗಿ ಪ್ರೇರಿಸಲ್ಪಟ್ಟ ವೃಷಭ, ಅಗ್ನಿ, ಹಂಸ, ಮದ್ಗು ಇವುಗಳಿಂದ ಪರಬ್ರಹ್ಮದ ನಾಲ್ಕು ಪಾದಗಳನ್ನು ಉಪದೇಶಿಸಲ್ಪಟ್ಟ ಸತ್ಯಕಾಮನು ಗುರುಗಳ ಬಳಿಗೆ ಗೋಗಳನ್ನು ಅಟ್ಟಿಕೊಂಡು ಹೋಗಲು, ಗುರುಗಳು ಆತನ ಬ್ರಹ್ಮ ತೇಜಸ್ಸನ್ನು ನೋಡಿ– ಎಲೈ ಪ್ರಿಯದರ್ಶನನೇ, ನೀನು ಬ್ರಹ್ಮಜ್ಞನಂತೆ ತೋರುತ್ತಿ; ಯಾಕಂದರೆ ನಿನ್ನ ಇಂದ್ರಿಯಗಳು ಪ್ರಸನ್ನವಾಗಿರುವವು, ನಿನ್ನ ಮುಖವು ಪ್ರಹಸಿತವೂ ಆನಂದಯುಕ್ತವೂ ಆಗಿರುವದು. ನೀನು ನಿಶ್ಚಿಂತನೂ ಕೃತಾರ್ಥನೂ ಆಗಿರುತ್ತಿ; ಈ ಬ್ರಹ್ಮಜ್ಞನ ಲಕ್ಷಣಗಳು ನಿನ್ನಲ್ಲಿ ಸ್ಪಷ್ಟವಾಗಿ ತೋರುತ್ತವೆ; ಆದ್ದರಿಂದ ನಿನಗೆ ಬ್ರಹ್ಮೋಪದೇಶವನ್ನು ಯಾರು ಮಾಡಿದರು ಹೇಳು? ಎಂದು ಪ್ರಶ್ನೆಮಾಡಲು ಸತ್ಯಕಾಮನು–ಮನುಷ್ಯರಿಂದ ಅನ್ಯರಾದ ದೇವತೆಗಳು ನನಗೆ ಉಪದೇಶ ಮಾಡಿರುವರು. ನಿನ್ನ ಶಿಷ್ಯನಾದ ನಾನು ಬೇರೆ ಮನುಷ್ಯರಿಂದ ಉಪದೇಶಹೊಂದಲು ಇಚ್ಛಿಸ ಬಹುದೆಯೇ ? ಆದರೆ ಭಗವಾನ್ ದೇವತೆಗಳು ಉಪದೇಶಿಸಿದರೂ ನನಗೆ ಅದರ ಮಹತ್ವವಿಲ್ಲ; ಯಾಕಂದರೆ ಆಚಾರ್ಯ ಮುಖದಿಂದ ಸಂಪಾದಿಸಿದ ಜ್ಞಾನವೇ ಸಫಲವಾಗುವದೆಂದು ತಮ್ಮಂಥ ಬೇರೆ ಋಷಿಗಳಿಂದ ನಾನು ಕೇಳಿದ್ದೇನೆ; ಆದ್ದರಿಂದ ತಾವು ನನ್ನನ್ನು ಬೋಧಿಸಬೇಕೆಂದು ಪ್ರಾರ್ಥಿಸುವೆನು. ಎಂದು ಬೇಡಿಕೊಳ್ಳಲು, ಶಿಷ್ಯನ ಈ ಪ್ರಾರ್ಥನೆಯಂತೆ ಹಾರಿದ್ರುಮತನು ಪರಬ್ರಹ್ಮದ ನಾಲ್ಕು ಪಾದಗಳನ್ನು ವಾಯು, ಅಗ್ನಿ, ಸೂರ್ಯ, ಪ್ರಾಣ ಎಂಬ ನಾಲ್ಕು ದೇವತೆಗಳಿಂದ ಪ್ರೇರಿಸಲ್ಪಟ್ಟ ವೃಷಭ, ಅಗ್ನಿ, ಹಂಸ, ಮದ್ಗುಗಳು ಈ ಮೊದಲೆ ಬೋಧಿಸಿದಂತೆಯೇ ಪುನಃ ಒಟ್ಟುಗೂಡಿಸಿ ಬೋಧಿಸಲು, ಸತ್ಯಕಾಮನು ಕೃತಾರ್ಥನಾದನು !

ಈ ಮೇರೆಗೆ ಕಥೆ ಹೇಳಿ ಮಾಧವಾಚಾರ್ಯರು– ಕಾಸಿಮಖಾನ, ಈ ಕಥೆಯ ರಹಸ್ಯವನ್ನು ವಿಚಾರಿಸುವ ನಿನಗೆ, ಮುಖ್ಯವಾಗಿ ಪರಧರ್ಮಗ್ರಂಥಗಳ ಅಧ್ಯಯನದ ಹುಚ್ಚು ಕಡಿಮೆಯಾಗ ಬಹುದು. ಸತ್ಯಜ್ಞಾನಕ್ಕೆ ಶ್ರದ್ಧೆಯಿಂದ ಗುರುಸೇವಾರೂಪ ತಪಶ್ಚರ್ಯವು ಮುಖ್ಯ ಸಾಧನವಾಗಿರುವದೆಂಬುದು ನಿನ್ನ ಮನಸ್ಸಿನಲ್ಲಿ ನಡೆಯಬಹುದು.

ಆಚಾರ್ಯರ ಈ ಮಾತುಗಳನ್ನು ಕೇಳಿ ಕಾಸಿಮಖಾನನಿಗೆ ಬಹಳ ಸಂತೋಷವಾದ ಹಾಗೆ ತೋರಿತು. ಆತನು ನಗೆಮೊಗದ ಪ್ರಫುಲ್ಲಿತಾಂತಃಕರಣದಿಂದ ಆಚಾರ್ಯರನ್ನು ಕುರಿತು– ಭಗವನ್, ನಾನು ಹಿಂದಕ್ಕೆ ನಮ್ಮ ಒಬ್ಬ ಸತ್ಪುರುಷರ ಮುಖದಿಂದ ಇಂಥದೇ ಒಂದು ಗುರುಸೇವೆಯ ಕಥೆಯನ್ನು ಕೇಳಿದ್ದೇನೆ. ಐಶ್ವರ್ಯ ಮದದಿಂದ ಮತ್ತನಾಗಿದ್ದ ನನಗೆ ಆಗ ಆ ಕಥೆಯ

ಮಹತ್ವವು ತೋರಿದ್ದಿಲ್ಲ; ಆದರೆ ಈಗಿನ ತಮ್ಮ ಕಥಾಶ್ರವಣದಿಂದ ನಮ್ಮ ನಿಮ್ಮ ಧರ್ಮರಹಸ್ಯದಲ್ಲಿ ಏನೂ ಹೆಚ್ಚುಕಡಿಮೆಯಿದ್ದಂತೆ ತೋರುವದಿಲ್ಲ; ಆದ್ದರಿಂದ ಅಪ್ಪಣೆಯಾದರೆ ಆ ಕತೆಯನ್ನು ಸಭೆಯ ಮುಂದೆ ಹೇಳುವೆನು ಎಂದು ಕೇಳಿಕೊಳ್ಳಲು, ಮಾಧವಾಚಾರ್ಯರು ಸಂತೋಷದ ಆದರದಿಂದ– ವಿವೇಕಿಯಾದ ಖಾನನೇ, ಹೇಳು ಹೇಳು, ಅವಶ್ಯವಾಗಿ ಆ ಕತೆಯನ್ನು ಹೇಳು. ಶಾಶ್ವತವಾದ ಎಲ್ಲರ ಧರ್ಮತತ್ವಗಳು ಒಂದೇ ಇರುವವೆಂಬ ಸಮಾಧಾನದಿಂದ ಉಂಟಾದ ಪರಸ್ಪರ ಪ್ರೇಮವು ಸ್ಥಿರವಾದ ಹಾಗೆ, ಸ್ವರಾಜ್ಯಪ್ರಾಪ್ತಿಯೇ ಮೊದಲಾದ ಐಹಿಕ ಸುಖದ ಆಸೆಯಿಂದ ಬಳಿಸಲ್ಪಟ್ಟ ಪರಸ್ಪರ ಪ್ರೇಮವು ಸ್ಥಿರವಾಗಲಾರದು; ಯಾಕಂದರೆ ಧರ್ಮವು ಸ್ಥಿರವಿದ್ದಂತೆ ಐಹಿಕ ಸುಖಸಾಧನಗಳು ಸ್ಥಿರವಿರುವದಿಲ್ಲ; ಆದ್ದರಿಂದ ಅಸ್ಥಿರ ಸುಖಕ್ಕಾಗಿ ಉಂಟಾದ ಪ್ರೇಮವು ಸ್ಥಿರವಾಗಲಾರದು. ಅದಕ್ಕಾಗಿ ನಿನ್ನ ಇಸ್ಲಾಮಿ ಮತದಲ್ಲಿಯ ಗುರುಸೇವೆಯ ಕಥೆಯನ್ನು ಈಗ ನೀನು ಅವಶ್ಯವಾಗಿ ಹೇಳತಕ್ಕದ್ದು. ಅದರಿಂದ ಹಿಂದೂ ಮುಸಲ್ಮಾನರ ಪ್ರೇಮದ ಸ್ಥಿರತೆಗೆ ಸಹಾಯವಾಗಬಹುದು.

ಹೀಗೆ ಮಾಧವಾಚಾರ್ಯರು ಸಮ್ಮತಿಸಲು, ಕಾಸಿಮಖಾನನು ಉತ್ತೇಜೀತನಾಗಿ ಆಚಾರ್ಯರನ್ನು ಕುರಿತು–ಭಗವನ್, ನಾನು ಹಿಂದಕ್ಕೆ ಕಥೆಯನ್ನು ಅನಾದರದಿಂದ ಹ್ಯಾಗೆಹ್ಯಾಗೋ ಕೇಳಿದ್ದರಿಂದ ಅದರೊಳಗಿನ ಪಾತ್ರಗಳ ಹೆಸರು ಗೊತ್ತಿಲ್ಲ, ಕಥೆಯ ವಿವರಣದಲ್ಲಿಯೂ ಸ್ವಲ್ಪ ಹೆಚ್ಚು ಕಡಿಮೆಯಾಗಬಹುದು; ಆದರೂ ತಾತ್ಪರ್ಯವನ್ನು ಸ್ಪಷ್ಟೀಕರಿಸುವಂತೆ ಕಥೆ ಹೇಳಲಿಕ್ಕೆ ನಾನು ಧೈರ್ಯಗೊಳ್ಳುತ್ತೇನೆ; ಇದಕ್ಕಾಗಿ ಮಹಾತ್ಮರೂ, ಈ ಸಭೆಯೂ ಕ್ಷಮಾವಿಶಿಷ್ಟವಾಗಿ ಶ್ರವಣಮಾಡಬೇಕು.

ಈ ಮೇರೆಗೆ ನುಡಿದು ಕಾಸಿಮನು ಕಥೆ ಹೇಳತೊಡಗಿದನು– ''ಒಂದು ಊರಲ್ಲಿ ಒಬ್ಬ ತಾಯಿಯೂ ಮಗನೂ ಇದ್ದರು. ತಾಯಿಯು ಮಹಾಜ್ಞಾನಿಯಿದ್ದಳು. ಆಕೆಯನ್ನು ಕುರಿತು ಮಗನು– ಅವ್ವಾ, ನನಗೆ ಶಾಂತಿಯು ಹ್ಯಾಗೆ ದೊರೆಯಬೇಕು ? ಎಂದು ಕೇಳಲು, ಆಕೆಯು– ಮಗನೇ, ಮನೆಯಲ್ಲಿ ಉಂಡುಟ್ಟು ಸುಖದಿಂದಿದ್ದರೆ ಶಾಂತಿಯು ಹ್ಯಾಗೆ ದೊರೆತೀತು ? ಅದಕ್ಕಾಗಿ ನೀನು ಅಡವಿಗೆ ಹೋಗಿ ಅಹಿಂಸಾ ವ್ರತದಿಂದ ತಪಶ್ಚರ್ಯ ಮಾಡಬೇಕು, ಎಂದು ಹೇಳಿದಳು. ಅದರಂತೆ ಮಗನು ಅಡವಿಗೆ ಹೋಗಿ ಗಡ್ಡೆ–ಬೇರು ತಿನ್ನುತ್ತ ಹನ್ನೆರಡು ವರ್ಷ ತಪಶ್ಚರ್ಯ ಮಾಡಿದನು; ಆದರೂ ಶಾಂತಿಯು ದೊರೆಯಲಿಲ್ಲ. ಆಗ ಆತನು ಪುನಃ ತಾಯಿಯ ಬಳಿಗೆ ಬಂದು ತನಗೆ ಶಾಂತಿಯು ದೊರೆಯದ್ದನ್ನು ಹೇಳಿ ಮತ್ತೆ ಶಾಂತಿಯ ಮಾರ್ಗವನ್ನು ಕೇಳಿಕೊಂಡನು. ಅದಕ್ಕೆ ತಾಯಿಯು ಮಿಡುಕಿ ಮಗನನ್ನು ಸಂತಯಿಸಿ ಆತನ ಜಡೆಗಟ್ಟಿದ ಕೂದಲುಗಳನ್ನು ಎಣ್ಣೆ ಹಚ್ಚಿ ಬಿಡಿಸಿ ಹಿಕ್ಕಹತ್ತಿದಳು. ಆಗ ಕೂದಲುಗಳು ಪೀಕಹತ್ತಲು, ಆತನು ಹಾಯುಗುಡಹತ್ತಿದನು. ಆಗ ತಾಯಿಯು–ಮಗನೇ, ಹೀಗೇಕೆ ಹಾಯಗುಡುತ್ತೀ? ಎಂದು ಕೇಳಲು— ಅವ್ವಾ, ಕೂದಲುಗಳು ಪೀಕುವವು, ಎಂದು ಉತ್ತರಕೊಟ್ಟನು. ಅದಕ್ಕೆ ತಾಯಿಯು–ಮಗನೇ, ಕೂದಲು ಪೀಕಿದರೆಯೇ ನೀನು ಇಷ್ಟು ಹಾಯಗುಡುತ್ತೀ; ಆದರೆ ಅಡವಿಯಲ್ಲಿ ನೀನು ಗಡ್ಡೆ–ಬೇರುಗಳನ್ನು ಕಿತ್ತು ತಿನ್ನುವಾಗ ಅವು ಎಷ್ಟು ವ್ಯಥೆಪಟ್ಟಿರಬಹುದು ! ಇಂಥ ಹಿಂಸಾಕರ್ಮಪ್ರವರ್ತಕನಾದ ನಿನಗೆ ಹ್ಯಾಗೆ

ಶಾಂತಿಯು ದೊರಕೀತು? ಎಂದು ಕೇಳಿದಳು. ಅದಕ್ಕೆ ಮಗನು– ಅವ್ವಾ, ಗಡ್ಡೆ ಬೇರುಗಳನ್ನೂ ತಿನ್ನದಿದ್ದರೆ ದೇಹಧಾರಣವು ಹ್ಯಾಗಾದೀತು? ಎಂದು ಕೇಳಲು ತಾಯಿಯು– ಮಗನೇ, ನಾನು ನಿನಗೆ ಒಂದು ಮಂತ್ರೋಪದೇಶ ಮಾಡುವೆನು, ಅದರಿಂದ ನಿನಗೆ ಹಸಿವೆ ನೀರಡಿಕೆಗಳ ಬಾಧೆಯಾಗುವದಿಲ್ಲ; ನೀನು ಸಮಾಧಾನದಿಂದ ಶಾಂತಿಯ ಮಾರ್ಗವನ್ನು ಶೋಧಿಸಬಹುದು, ಎಂದು ಹೇಳಿ ಮಂತ್ರ ವನ್ನು ಉಪದೇಶಿಸಿ ಆತನನ್ನು ಪುನಃ ಅಡವಿಗೆ ಅಟ್ಟಿದಳು. ಮಗನು ಪುನಃ ಹನ್ನೆರಡು ವರ್ಷಶಾಂತಿಯ ಮಾರ್ಗವನ್ನು ಶೋಧಿಸಿದನು; ಆದರೂ ಶಾಂತಿಯು ದೊರೆಯಲಿಲ್ಲ, ಆಗ ಆತನು ಅಸಮಾಧಾನದಿಂದ ತಾಯಿಯ ಬಳಿಗೆಬಂದು ಬೇಡಿಕೊಳ್ಳಲು, ಆಕೆಯು– ''ಮಗನೇ, ಇಂಥಲ್ಲಿ ಒಬ್ಬ ಜ್ಞಾನಿಗಳಿರುವರು, ಅವರ ಲಕ್ಷಣವು ಹೀಗೆ ಹೀಗೆ ಇರುವದು. ಅವರು ಪರಕಾಯ ಪ್ರವೇಶಮಾಡಲು ಸಮರ್ಥರಿರುವರು. ಹೋಗು, ಅವರನ್ನು ಹುಡುಕಿಕೊಂಡು ಅವರ ಸೇವೆ ಮಾಡಿ ಶಾಂತಿಯನ್ನು ಸಂಪಾದಿಸು'' ಎಂದು ಹೇಳಿದಳು ! ತಾಯಿಯ ಮಾತಿನಲ್ಲಿ ತುಂಬಾ ಶ್ರದ್ಧೆಯುಳ್ಳ ಮಗನು ಸತ್ಪುರುಷರನ್ನು ಹುಡುಕುತ್ತ ಹೋದನು. ತಾಯಿಯು ಹೇಳಿದ ಲಕ್ಷಣಗಳುಳ್ಳ ಸತ್ಪುತ್ರನು ಒಂದು ಕಡೆಯಲ್ಲಿ ಹುಡುಗರೊಡನೆ ಚೆಂಡು ಆಡುತ್ತಿದ್ದರು. ಪರಕಾಯ ಪ್ರವೇಶದ ಸಾಮರ್ಥ್ಯದಿಂದ ಒಮ್ಮೊಮ್ಮೆ ಅವರು ಚೆಂಡಿನಲ್ಲಿ ಪ್ರವೇಶಿಸುವದು ಆತನಿಗೆ ಗೊತ್ತಾಯಿತು. ಆಗ ಆ ಸತ್ಪುರುಷನು ಇವರೇ ಆ ಸತ್ಪುರುಷರೆಂದು ಗೊತ್ತುಹಿಡಿದು ಅವರ ಬೆನ್ನುಹತ್ತಿನಡೆದನು. ಅವರು ತಮ್ಮ ವಾಸಸ್ಥಳಕ್ಕೆ ಹೋದಕೂಡಲೆ ಒಂದು ಮಣ್ಣಿನ ಕೊಡವನ್ನು ತಕ್ಕೊಂಡು ತಮ್ಮ ಬಳಿಗೆ ಬಂದ ಆ ಸತ್ಪುತ್ರನ ಕೈಯಲ್ಲಿ ಕೊಟ್ಟು— ''ಹೋಗು, ದಿನಾಲು ಈ ಕೊಡದಿಂದ ನೀರು ತಂದು ಹಾಕು'' ಎಂದು ಆಜ್ಞಾಪಿಸಿದರು ! ಅದರಂತೆ ಆ ಪುಣ್ಯವಂತನು ಹನ್ನೆರಡು ವರ್ಷ ಗುರುಗಳ ಮನೆಯಲ್ಲಿ ನೀರು ಹೊತ್ತನು. ಆದರೂ ಶಾಂತಿಯು ದೊರೆಯಲಿಲ್ಲ, ಆಗ ಆತನು ತನ್ನ ಮೂವತ್ತಾರು ವರ್ಷಗಳ ಆಯುಷ್ಯವು ವ್ಯರ್ಥವಾದದ್ದನ್ನು ಸ್ಮರಿಸಿ ಅಸಮಾಧಾನಪಟ್ಟನು. ಒಂದು ದಿನ ಆತನು ನೀರು ತರುವದಕ್ಕಾಗಿ ಜಲಾಶಯಕ್ಕೆ ಹೋಗಿ ಕೊಡದಿಂದ ನೀರು ಹಿಂದೆ ಮುಂದೆ ಮಾಡಿ ನೀರು ತುಂಬುವಷ್ಟರಲ್ಲಿ ಕೊಡವು ಕೈಜಾರಿ ಮುಂದಕ್ಕೆ ಹೋಗಲು, ಆಗ ಸೇವೆ ಮಾಡಿ ಬೇಸತ್ತು ಹೋಗಿದ್ದ ಆ ಸತ್ಪುತ್ರನು– ''ಕೊಡವು ತಾನಾಗಿ ಹೋಯಿತು. ಹೋಗಿಬಿಡಲಿ, ನೀರು ಹೊರುವದು ಸಾಕು'' ಎಂದು ಕೊಡವನ್ನು ಬಿಟ್ಟು ಹಿಂದಕ್ಕೆ ತಿರುಗುತ್ತಿದ್ದನು ! ಅಷ್ಟರಲ್ಲಿ ಆ ಮಣ್ಣಿನ ಕೊಡವು ಗಹಗಹಿಸಿ ನಗತೊಡಗಿತು. ಹೀಗೆ ಅಚೇತನ ಪದಾರ್ಥವು ನಗುವದನ್ನು ನೋಡಿ ಆ ಭಾಗ್ಯಶಾಲಿಯು ಬೆರಗಾಗಿ ಕೊಡದ ಕಡೆಗೆ ನೋಡುತ್ತ– ''ಹೀಗೆ ಯಾಕೆ ನಗುವೆ ?'' ಎಂದು ಕೇಳಲು, ಅದು– ''ಅಪ್ಪಾ , ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವೆಂಬಂತೆ, ಮೂವತ್ತಾರು ವರ್ಷ ಕಷ್ಟಪಟ್ಟಿದ್ದ ನೀನು, ಗುರುವು ಅನುಗ್ರಹಿಸುವ ಕಾಲವು ಸಮೀಪಿಸಿರಲು, ಸದ್ಗುರು ಸೇವೆಯನ್ನು ಬಿಟ್ಟು ಹೊರಟುಬಿಟ್ಟೆಯಲ್ಲ, ಇದನ್ನು ನೋಡಿ ನನಗೆ ನಗೆಯು ಬಂದಿತು. ಆದರೆ ಭಾಗ್ಯಶಾಲಿಯಾದ ತಪಸ್ವಿಯೇ, ಸತ್ಯಜ್ಞಾನದಿಂದ ಶಾಂತಿಯನ್ನು ಪಡೆಯುವದಕ್ಕಾಗಿ ಪರಿಪರಿಯಿಂದ ಕಷ್ಟಬಟ್ಟ ನೀನು, ನನ್ನ ಕಷ್ಟವನ್ನಷ್ಟು ಕೇಳುವಿಯಾ?'' ಅನ್ನಲು ಆತನು, ಅದಕ್ಕೆ ಒಪ್ಪಿಕೊಳ್ಳಲು, ಕೊಡವು ತನ್ನ ಕಥೆಯನ್ನು ಹೇಳತೊಡಗಿತು– ''ಅಪ್ಪಾ,

ನಾನು ಮೊದಲು ಉತ್ಪನ್ನವಾದ ಒಂದು ಪರ್ವತದ ಮೇಲೆ ಕಲ್ಲುಬಂಡೆಯ ರೂಪದಿಂದ ಇದ್ದೆನು. ಆ ಬಂಡೆಯು ಬಿಸಿಲು, ಚಳಿ, ಮಳೆಗಳ ಯೋಗದಿಂದ ಹುಡಿಯಾಗಲು, ಎಷ್ಟೋ ವರ್ಷ ನಾನು ಹುಡಿಯರೂಪದಿಂದ ಗುಡ್ಡದಲ್ಲಿಯೇ ಅಲ್ಲಲ್ಲಿ ಸರವು ನೋಡಿ ಬಿದ್ದುಕೊಂಡೆನು. ಮುಂದೆ ಕ್ರಮಕ್ರಮವಾಗಿ ಮಳೆಯ ನೀರಿನ ಸೆಳೆತದಿಂದ ನಾನು ಗುಡ್ಡದಿಂದ ಜಾರುತ್ತ ಸರವುಹಿಡಿದು ಗುಡ್ಡದ ಕಂದರದಲ್ಲಿ ಬಿದ್ದುಕೊಂಡೆನು. ಅಲ್ಲಿಂದ ಪುನಃ ನೀರಿನ ಸರವು ಹಿಡಿದು ಹಳ್ಳಕ್ಕೆ, ಹಳ್ಳದಿಂದ ದೊಡ್ಡದೊಂದು ಕೆರೆಗೆ, ಸಾಗಿಹೋಗಿ ಕೆರೆಯ ಬುಡದಲ್ಲಿ ಬಿದ್ದುಕೊಂಡೆನು. ಇಲ್ಲಿ ಮಾತ್ರ ನಾನು ಸಮಾಧಾನದಿಂದ ಬಿದ್ದುಕೊಂಡಿರಬಹುದೆಂದು ಭಾವಿಸಿದ್ದೆನು; ಆದರೆ ಬೇಸಿಗೆಯಲ್ಲಿ ಕೆರೆಯ ನೀರೆಲ್ಲ ಆಟ್ಟಿಸಿ ಕೆರೆಯು ಬತ್ತಲು, ಕುಂಬಾರನು ನನ್ನನ್ನು ಚೀಲದಲ್ಲಿ ತುಂಬಿಕೊಂಡು ಕತ್ತೆಯ ಮೇಲೆ ಹೇರಿ ಊರೊಳಗಿನ ಬೀದಿಯಲ್ಲಿ ನನ್ನನ್ನು ಮೆರೆಸುತ್ತ ತಕ್ಕೊಂಡು ಹೋದನು. ಇಷ್ಟರಿಂದ ಆತನು ಸಮಾಧಾನಪಡದೆ ನನ್ನಲ್ಲಿ ಬೂದಿ ಉಸುಕು ಕೂಡಿಸಿ ನೀರುಹಾಕಿ ಕಲಿಸಿ ಕಾಲಿನಿಂದ ತುಳಿತುಳಿದು ನನ್ನನ್ನು ವ್ಯಥೆಗೊಳಿಸಿದನು. ತರುವಾಯ ಆತನು ಒಂದು ಗಾಲಿಯಮೇಲೆ ನನ್ನನ್ನು ಹಾಕಿ ಗರಗರ ತಿರುಗಿಸಿದಾಗ ನನ್ನ ಭವಣೆಯನ್ನೇನು ಹೇಳಲಿ? ನನ್ನ ತಲೆ ತಿರುಗಿ ಕತ್ತಲುಗೂಡಿಸಲು ನಾನು ಕಣ್ಣು ಮುಚ್ಚಿಕೊಂಡೆನು. ನನಗೆ ಭೂಮಿಯು ಆಕಾಶವೂ ಒಂದೇ ಆಯಿತು ! ಆಮೇಲೆ ಆ ಕುಂಬಾರನು ಗಾಲಿಯಿಂದ ನನ್ನನ್ನು ಇಳಿಸಿಕೊಂಡು ಸ್ವಲ್ಪ ಒಣಗಿಸಿ ತನ್ನ ಬಡಿಮಣೆಯಿಂದ ನನ್ನನ್ನು ಬಡಿಬಡಿದು ಹಣ್ಣುಮಾಡಿ ಬಿಸಿಲಲ್ಲಿ ಒಣಗ ಇಟ್ಟನು. ಇಷ್ಟಕ್ಕೆ ನನ್ನ ಕಷ್ಟವು ಮುಗಿಯಲಿಲ್ಲ. ಆ ಕಠಿಣಹೃದಯದ ಕುಂಬಾರನು ನನ್ನನ್ನು ಒಂದು ಭಯಂಕರವಾದ ಒಲೆಯಲ್ಲಿ ಇಟ್ಟು ಬೆಂಕಿ ಇಕ್ಕಿ ಸುಡಹತ್ತಿದನು ! ಆಗಿನ ನನ್ನ ತಾಪವನ್ನು ನಾನೇನು ವರ್ಣಿಸಲಿ? ಆದರೂ ಅದನ್ನೆಲ್ಲ ನಾನು ತಾಳಿಕೊಂಡೆನು. ಮುಂದೆ ಆ ಕುಂಬಾರನು ಒಲೆಯೊಳಗಿಂದ ನನ್ನನ್ನು ಹೊರತೆಗೆದು ಹಲವು ಪಾತ್ರೆಗಳೊಡನೆ ನನ್ನನ್ನು ಪೇಟೆಯಲ್ಲಿ ಮಾರಲಿಟ್ಟನು. ಆಗ ನಾನು ಅನುಭವಿಸಿದ ಅಪಮಾನವನ್ನು ಕೇಳು. ಜನರು ಬರಬೇಕು, ನನ್ನನ್ನು ಬಾರಿಸಿ ಇಟ್ಟು, ಹೋಗಬೇಕು. ಹೀಗಾಗುತ್ತಾಗುತ್ತ ನಿನ್ನ ಗುರುವು ನನ್ನನ್ನು ಬಾರಿಸಿ ನನ್ನನ್ನು ಕೊಂಡು ಪುಣ್ಯಶಾಲಿಯಾದ ನಿನ್ನ ಹೆಗಲಮೇಲೆ ಏರುವ ಸುಯೋಗವನ್ನು ಒದಗಿಸಿಕೊಟ್ಟನು; ಆದರೆ ಭಾಗ್ಯಶಾಲಿಯೇ ಇಂಥ ಸುಯೋಗವು ಹಲವು ಕಷ್ಟಗಳನ್ನು ನಾನು ಸಹಿಸಿದ್ದರಿಂದಲೇ ಒದಗಿ ಬರಲಿಲ್ಲವೇ? ಅದರಂತೆ ತಪಸ್ವಿಯಾದ ಈಗ ನಿನಗೆ ಅನುಗ್ರಹದ ಕಾಲವು ಸಮೀಪಿಸಿರಲು, ಗುರುಸೇವೆಯನ್ನು ನಿರಾಕರಿಸುವೆಯಲ್ಲ! ಇದು ಸರಿಯಲ್ಲ, ದಿನದಂತೆ ನನ್ನನ್ನು ಕರೆದುಕೊಂಡು ಗುರುಗೃಹಕ್ಕೆ ನೀರು ತಕ್ಕೊಂಡು ಹೋಗು'' ಎಂದು ಹೇಳಲು, ಆ ಸತ್ಪುತ್ರನು ತನ್ನ ಅಜ್ಞಾನಕ್ಕಾಗಿ ಪಶ್ಚಾತ್ತಾಪಪಟ್ಟು, ನೀರು ತಕ್ಕೊಂಡು ಗುರುವಿನ ಮನೆಗೆ ಹೋದನು. ಇದನ್ನೆಲ್ಲ ಜ್ಞಾನದೃಷ್ಟಿಯಿಂದ ತಿಳಿದುಕೊಂಡಿದ್ದ ಗುರುಗಳು ಕನಿಕರಪಟ್ಟು ಶಿಷ್ಯನು ಬಂದಕೂಡಲೆ ಅನುಗ್ರಹಿಸಿ, ಆತನಿಗೆ ಶಾಂತಿದಾಯಕವಾದ ಸತ್ಯಜ್ಞಾನವನ್ನು ಸ್ಫೂರ್ತಿಸಿ ಕೃತಾರ್ಥನನ್ನಾಗಿ ಮಾಡಿದರು.

ಈ ಮೇರೆಗೆ ನುಡಿದು ಕಾಸಿಮನು ಸುಮ್ಮನಾಗಲು, ಮಾಧವಾಚಾರ್ಯರು ಸಭಿಕರನ್ನು ಕುರಿತು– ''ನೋಡಿದಿರಾ ಹಿಂದು ಮುಸಲ್ಮಾನ ಧರ್ಮಗಳ ರಹಸ್ಯವು ಒಂದಿರುವ ಸೊಬಗನ್ನು !

ಅದಕ್ಕಾಗಿಯೇ ಅಜ್ಞಾನಮೂಲವಾದ ಧರ್ಮದ್ವೇಷವನ್ನು ಪರಿತ್ಯಜಿಸಿ ಎಲ್ಲರೂ ನಿಜವಾದ ಧರ್ಮಜ್ಞಾನದಿಂದ ಪರಸ್ಪರ ಪ್ರೇಮಭಾವವನ್ನು ತಾಳತಕ್ಕದ್ದು. ಹೀಗೆ ಯಾವತ್ತೂ ಧರ್ಮಗಳ ರಹಸ್ಯವನ್ನು ವಿಚಾರಿಸಿ ವಿವೇಕದಿಂದ ಆಚರಿಸಹತ್ತಿದರೆ ಧರ್ಮದ್ವೇಷದ ಗಂಧವು ಉಳಿಯಲಿಕ್ಕಿಲ್ಲ. ಇಂಥ ಧಾರ್ಮಿಕ ಪ್ರೇಮವು ಮಾತ್ರ ಶಾಶ್ವತವಾದದ್ದೆಂದು ತಿಳಿಯಬೇಕು !''

ತಿರುಮಲಯ್ಯಂಗಾರ— ಜಗತ್ತಿನ ತುಂಬೆಲ್ಲ ಒಂದೇ ಧರ್ಮದ ಪ್ರಸಾರವಾಗಿದ್ದರೆ ನೆಟ್ಟಗಾಗುತ್ತಿದ್ದಿಲ್ಲವೆ ? ಹೀಗೆ ಹಲವು ಧರ್ಮಗಳುಂಟಾದದ್ದು ಕಲಹಕ್ಕೆ ಕಾರಣವಾಗಿರುವದು.

ಮಾಧವಾಚಾರ್ಯ— ಧರ್ಮವು ಕಲಹದ ಕಾರಣವು ಸರ್ವಥಾ ಆಗಲಾರದು. ಅದು ಉದ್ಧಾರದ ಕಾರಣವು ! ಕಲಹದ ನಿಜವಾದ ಕಾರಣವು ಸ್ವಾರ್ಥಮೂಲವಾದ ಮಾತ್ಸರ್ಯವಾಗಿರುವದು. ವಿಪ್ರವರ, ಧರ್ಮದ ಬಹಿರಂಗಗಳು ದೇಶ-ಕಾಲ ಪರತ್ವದಿಂದ ಭಿನ್ನಭಿನ್ನವಾಗಿರುವದರಿಂದ ತೋರಿಕೆಗೆ ಜಗತ್ತಿನೊಳಗಿನ ಧರ್ಮಗಳು ಬೇರೆ ಬೇರೆ ಇರುವಂತೆ ತೋರಿದರೂ, ಹಿಂದೆ ಹೇಳಿದಂತೆ ಎಲ್ಲ ಧರ್ಮಗಳ ಅಂತರಂಗಗಳು ಒಂದೇ ಇರುವದರಿಂದ, ಜಗತ್ತಿನಲ್ಲಿ ಒಂದೇ ಧರ್ಮದ ಪ್ರಸಾರ ವಾಗಿದೆಯೆಂದು ತಿಳಿಯಬೇಕು;? ಯಾಕಂದರೆ ಧರ್ಮವು ಸತ್ಯಸ್ವರೂಪವಾಗಿರುವದರಿಂದ ಸತ್ಯವು ಎಲ್ಲಿ ಹೋದರೂ ಒಂದೇ ಇರುವದು ! ಸತ್ಯವಲ್ಲದ್ದು, ಅಂದರೆ ಅಂತರಂಗವು ಅನೇಕವಾಗಿ ಕಾಣುವದು ಧರ್ಮವೇ ಅಲ್ಲ, ಧರ್ಮನಿಷ್ಠರು ಪರಸ್ಪರ ಕಲಹ ಬೆಳಿಸಲಾರರು; ಯಾಕಂದರೆ ಮಾತ್ಸರ್ಯ ಮೂಲವಾದ ಕಲಹವನ್ನು ಬಿಡುವದೂ, ತನ್ನಂತೆ ಪ್ರಾಣಿಮಾತ್ರಗಳನ್ನು ನೋಡುವದೂ ಧರ್ಮನಿಷ್ಠರ ಲಕ್ಷಣವಾಗಿರುತ್ತದೆ. ಎಲ್ಲ ಧರ್ಮಗಳೊಳಗಿನ ಮಹಾತ್ಮರ ನಡತೆಯನ್ನು ನೋಡಿದರೆ ಇದರ ಸತ್ಯತೆಯು ಕಂಡುಬಂದೀತು. ಈ ಲಕ್ಷಣಗಳಿಲ್ಲದ ಕಲಹಲಂಪಟರನ್ನು ಧರ್ಮದ್ರೋಹಿಗಳೆಂದು ತಿಳಿಯಬೇಕು. ಇವರು ಆತ್ಮಘಾತಕಿಗಳಾಗಿರುವರಲ್ಲದೆ, ಇವರ ಅನುಕರಣ ಮಾಡುವವರ ಘಾತವೂ ಆಗುವದು. ಹೀಗೆ ಧರ್ಮರೂಪವಾದ ದಿವ್ಯಸಾಧನವನ್ನು ಅಜ್ಞಾನದಿಂದ ತನ್ನ ಘಾತಕ್ಕಾಗಿ ಉಪಯೋಗಿಸಿಕೊಂಡರೆ ಅದರಲ್ಲಿ ಧರ್ಮದ ದೋಷವೂ ಇಲ್ಲ, ಧರ್ಮಸ್ಥಾಪಕರ ದೋಷವೂ ಇಲ್ಲ. ಒಟ್ಟಿಗೆ ಜಗಳಗಂಟರು ಯಾವ ಧರ್ಮದವರಿದ್ದರೂ ಅವರು ಧರ್ಮಿಷ್ಠರಲ್ಲವೆಂದು ತಿಳಿಯತಕ್ಕದ್ದು. ''ಹುಟ್ಟುತ್ತ ಬಂಧು ಬೆಳೆಯುತ್ತ ಭಾಗಾದಿ'' ಎಂದು ಲೋಕೋಕ್ತಿಯಿರುವದಷ್ಟೆ? ಭಾಗಾದಿತನಕ್ಕೆ ಸ್ವಾರ್ಥಮೂಲವಾದ ಮಾತ್ಸರ್ಯವು ಕಾರಣವಲ್ಲದೆ ಬಂಧುತ್ವವು ಕಾರಣವಲ್ಲ. ಇದೇ ಮಾತು ಧಾರ್ಮಿಕ ಕಲಹಕ್ಕೂ ಹತ್ತುವದು. ಹುಟ್ಟುತ್ತಲೇ ಎಲ್ಲ ಧರ್ಮದವರು ಪರಸ್ಪರ ಬಂಧುಗಳು, ಮುಂದೆ ಸ್ವಾರ್ಥಮೂಲಕ ಮಾತ್ಸರ್ಯವು ಹೆಚ್ಚಾದಂತೆ ಪರಸ್ಪರ ಶತ್ರುಗಳಾಗುವರು. ಆದ್ದರಿಂದ ಹೊರಗೆ ಕಾಣುವ ಧರ್ಮದ ಅನೇಕತ್ವದಲ್ಲಿ ಒಳಗೆ ಕಾಣುವ ಧರ್ಮದ ಏಕತ್ವವನ್ನು ನೋಡಿ, ಎಲ್ಲ ಧರ್ಮದವರೊಡನೆ ಬಾಂಧವ್ಯ ಬಳಿಸುವವನೇ ನಿಜವಾದ ಧರ್ಮನಿಷ್ಠನು !

ವಿರೂಪಾಕ್ಷಾರ್ಯ ಶಾಬಾಸ ! ಆರ್ಯವರ, ನಿಮ್ಮ ನಿರೂಪಣವು ನಿಶ್ಚಯವಾಗಿ ಜಗತ್ಕಲ್ಯಾಣ ಕಾರಕವಾಗಿರುವದು. ನಿಮ್ಮ ಹಾಗು ಕಾಸಿಮುಖಾನರ ಕಥೆಗಳೂ ರಹಸ್ಯಪೂರ್ಣವಾಗಿರುವವು. ಒಂದು ಇದ್ದದ್ದನ್ನು ಒಂದಾಗಿ ನೋಡುವದು ದೊಡ್ಡದಲ್ಲ; ಬಹಿರಂಗದಲ್ಲಿ ಹಲವಾಗಿ ತೋರಿದರೂ ಅಂತರಂಗದಲ್ಲಿ ಒಂದಾಗಿರುವ ಗೂಢತತ್ತ್ವವನ್ನು ನೋಡುವವನೇ ಜ್ಞಾನಿಯು ! ವಿಪ್ರೋತ್ತಮ,

ಬಾಹ್ಯವು ಎಂದಾದರೂ ಒಂದಾಗಬಹುದೆ ? ಪಿಂಡಗಳಷ್ಟು ಪ್ರಕೃತಿಗಳು ! ಪಿಂಡಗಳ ರೂಪ-ಗುಣ- ಕ್ರಿಯೆಗಳಲ್ಲಿಯೂ ಸಾಮ್ಯವಿಲ್ಲ; ಅಂದಬಳಿಕ ಬಹುರೂಪ, ಬಹುಗುಣ, ಬಹು ಕ್ರಿಯಾತ್ಮಕತ್ವವೇ ಸೃಷ್ಟಿಯ ಧರ್ಮವಾಗಿರಲು, ಧರ್ಮದ್ವಂತೂ ಇರಲಿ, ಸೃಷ್ಟಿಯಲ್ಲಿ ಯಾತರ ಬಹಿರಂಗವು ಒಂದಾಗಿರಬಹುದು ? ಆದ್ದರಿಂದ ಧರ್ಮಾಂತರಂಗದ ಕಡೆಗೆ ಮನಸ್ಸನ್ನು ತಿರುಗಿಸುವ ನಿಮ್ಮ ಬೋಧವು ನಿಶ್ಚಯವಾಗಿ ತಾರಕವಾದದ್ದು. ಸಾಧನಗಳಾದ ದ್ವೈತಾದ್ವೈತಾದಿ ಧರ್ಮದ ಪಂಥಗಳು ಎಷ್ಟಿದ್ದರೇನು ? ಸದಾನಂದ ರೂಪವಾದ ಸಾಧ್ಯವು ಒಂದೇ ಆಗಿರುವದಷ್ಟೆ? ಶ್ರೀಗುರು ಕೃಪೆಯಿಂದ ಸಾಧ್ಯವು ಸಾಧಿಸಿದಾಗ ದ್ವೈತವೂ ಇರುವದಿಲ್ಲ; ಅದ್ವೈತವೂ ಇರುವದಿಲ್ಲ; ವಿಶಿಷ್ಟಾದ್ವೈತವೂ ಇರುವದಿಲ್ಲ. ಆ ಸಾಧನಗಳೆಲ್ಲ ಸಾಧ್ಯದಲ್ಲಿ ಲಯಹೊಂದುವವು !

ಈ ಮೇರೆಗೆ ನುಡಿಯುತ್ತ ವಿರೂಪಾಕ್ಷಾರ್ಯರು ಮಾಧವಾಚಾರ್ಯರಿಗೆ— "ನಿಮಗೆ ಸಂಧ್ಯಾಕಾಲವಾಯಿತಲ್ಲವೆ ?" ಎಂದು ಕೇಳಲು, ಅವರು— "ಹೌದು, ತಮಗೂ ಲಿಂಗ ಪೂಜೆಯ ಸಮಯವಾಯಿತು. ಕಾಸಿಮಖಾನರೂ ನಮಾಜಿಗೆ ಹೋಗಬೇಕಾಗಿರಬಹುದು. ಎಂದು ಹೇಳುತ್ತ ಅತ್ತ ಅಂತ್ಯಜ ವರ್ಗದೊಳಗಿನ ಎದ್ದುನಿಂತುಕೊಂಡಿದ್ದ ಒಬ್ಬ ಧರ್ಮಬಾಂಧವ ನನ್ನು ಕುರಿತು ಮಹಾತ್ಮರು— "ಏನಯ್ಯಾ, ಮಾದಿಗರ ದುರಗಪ್ಪಾ, ನಿಮ್ಮ ಅಂತ್ಯಜರ ಸಂಬಂಧದಿಂದ ವಿಚಾರವಾಗುವದೊಂದು ಉಳಿಯಿತು ! ಕಡೆಹುಟ್ಟಿದ ಮಗನು ತಾಯಿಗೆ ಪ್ರಿಯನಾಗಿರುವಂತೆ, ನಮ್ಮ ಭೂಮಾತೆಗೆ ಅಂತ್ಯಜರಾಗಿರುವ ನೀವು ಅತ್ಯಂತ ಪ್ರಿಯರಾಗಿರುವಿರಿ! ಆದ್ದರಿಂದ ಪ್ರಿಯ ಬಂಧುವೇ, ಸಂದಿಯಲ್ಲಿ ಸಮಾರಾಧನೆ ಮಾಡಿದಂತೆ ಈಗಿನ ಸಂಧ್ಯಾಕಾಲದ ಅವಸರದಲ್ಲಿ ನಿಮ್ಮ ವಿಷಯದ ಮಹತ್ವದ ವಿಚಾರವು ಬೇಡ; ನಾಳೆ ಅದನ್ನು ಮಾಡೋಣ. ಅಂತ್ಯಜರಿರಲಿ ಆದಿಜರಿರಲಿ ಭೂಮಾತೆಗೆ ನಾವೆಲ್ಲರೂ ಮಕ್ಕಳಾದ್ದರಿಂದ ನಾವೆಲ್ಲರೂ ಬಂಧುಗಳೇ ಸರಿ" ಅನ್ನಲು, ದುರಗಪ್ಪನು "ಆಗಲಿ ಬುದ್ದಿ! ಎಷ್ಟು ಸನಿಯಕ್ಕೆ ನಮ್ಮನ್ನು ಬರಮಾಡಿಕೊಂಡೆಯಲ್ಲ!—ನಮ್ಮಪ್ಪಾ ! ದೂರಿದ್ದರೂ ನಾವು ನಿಮ್ಮ ಮಕ್ಕಳು, ಹತ್ತಿರವಿದ್ದರೂ ನಾವು ನಿಮ್ಮ ಮಕ್ಕಳು, ತಂದೆ-ಮಕ್ಕಳಿಗೆ ಬಿಡುವದೆಲ್ಲಿ? ನೀನೆಲ್ಲ ಹತ್ತರ ಬಾ ಅಂದೀ ! ಆದರೆ ಬರುವಾಗ ಬಂದೇನು ! ಸಿಕ್ಕಾಗ  ಬಂದರೆ ಸುಟ್ಟುಹೋದೇನು ! ದೇವರು, ಕೆಳಗೆ ಹರಿಯುವ ನೀರು ಕೆಳಗೇ ಹರಿಯಬೇಕು; ಮೇಲೆ ಹರಿಯುವ ನೀರು ಮೇಲೇ ಹರಿಯಬೇಕು. ಮನೆಯ ದೀಪವೆಂದು ಮುದ್ದು ಕೊಡಲಿಕ್ಕೆ ಬಂದೀತೆ? ಅದರಂತೆ, ನಮ್ಮ ಅಪ್ಪನೆಂದು ಲೆಕ್ಕತಪ್ಪಿ ಅಪ್ಪಿಕೊಳ್ಳಲಿಕ್ಕೆ ಬಂದೀತೆ? ಎಂದು ಮುಜುರೆಮಾಡಿ ಕುಳಿತುಕೊಳ್ಳಲು, ದುರುಗಪ್ಪನ ಸಮರ್ಪಕ  ಮಾತುಗಳನ್ನು ಶ್ಲಾಘಿಸುತ್ತ ಸಂಧ್ಯಾದಿ ಕರ್ಮಗಳಿಗಾಗಿ ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು.

# ಅಸ್ಪೃಶ್ಯತೆಯೂ, ಧಾರ್ಮಿಕ ವ್ಯವಹಾರವೂ

ಮೇಲೆ ಹೇಳಿದಂತೆ ಮುನ್ನಾದಿನ ಸಭಾ ವಿಸರ್ಜನೆಯ ಕಾಲದಲ್ಲಿ ಆದ ಮಾದಿಗರ ದುರುಗಪ್ಪನ, ಹಾಗು ಮಾಧವಾಚಾರ್ಯರ ಸಂಭಾಷಣವನ್ನು ಕೇಳಿ ಸಭಿಕರೆಲ್ಲರೂ ಕೌತುಕಭರಿತರಾಗಿದ್ದರು. ಜನರಲ್ಲಿ ತರ್ಕವಿತರ್ಕಗಳು ನಡೆದವು. ಮಾದಿಗರ ನೆರಳು ಬಿದ್ದರೆ ಸ್ನಾನ ಮಾಡುವ ಜಾತಿಯವರಾದ ಮಾಧವಾಚಾರ್ಯರು ಮಾದಿಗರ ದುರಗಪ್ಪನೊಡನೆ ಬಾಂಧವ್ಯ ಬೆಳಿಸಿದ್ದು ಕೆಲವರಿಗೆ ವಿಲಕ್ಷಣವಾಗಿ ತೋರಿತು. ಭಾನಸಸ್ವಭಾವದ ಕೆಲವರು ಬ್ರಾಹ್ಮಣರಂತು ''ಶಿವ ಶಿವ ! ಎಂಥ ಭ್ರಷ್ಟಾಚಾರದ ಕಾಲವು ಒದಗಿತಲ್ಲ!'' ಎಂದು ಮರಮರನೆ ಮರುಗಿದರು. ನಾಳೆ ಈ ವಿಷಯದ ಸಂಬಂಧದಿಂದ ಏನು ನಿರ್ಣಯವಾಗುವದೆಂಬುದನ್ನು ನೋಡುವದಕ್ಕಾಗಿ ಎಲ್ಲರೂ ಆತುರಪಡತೊಡಗಿದರು. ರಾಷ್ಟ್ರೋದ್ಧಾರದ ಕಾಲಲ್ಲಿ ಆಚಾರ್ಯರು ವರ್ಣಾಶ್ರಮ ಧರ್ಮಗಳನ್ನೆಲ್ಲಿ ಮಣ್ಣುಗೂಡಿಸುವರೋ ಎಂಬ ಶಂಕೆಯೂ ಆ ದೂರದರ್ಶಿಗಳಾದ ಬಹುಜನ ಶ್ರದ್ಧಾಳುಗಳ ಮನಸ್ಸಿನಲ್ಲಿ ಉತ್ಪನ್ನವಾಗದೆ ಇರಲಿಲ್ಲ ! ಪಾಪ ! ಬಹುದಿನದ ಸಂಸ್ಕಾರದಿಂದ ಮನಸ್ಸಿನಲ್ಲಿ ನಟ್ಟು ಹೋಗಿದ್ದ ಸಂಗತಿಗಳನ್ನು ಒಮ್ಮೆಲೆ ಕಿತ್ತುಹೋದರೆ ಯಾರಿಗೆ ತಾನೆ ವ್ಯಥೆಯಾಗಲಿಕ್ಕಿಲ್ಲ! ಹೀಗೆ ಜನರ ಚಿತ್ತವೃತ್ತಿಗಳು ಚಂಚಲವಾಗಿರುವಾಗ ಮುಂದಿನ ಪ್ರವಚನದ ಸಮಯವಾಯಿತು. ಜನರು ಆತುರದಿಂದ ಸಭೆಗೆ ಬಂದರು. ಅಂತ್ಯಜ ವರ್ಗದವರ ಸಮ್ಮರ್ದನವು ಆ ದಿನ ವಿಶೇಷವಾಗಿ ಆಯಿತು. ಅವರು ಸಭಾಸ್ಥಾನದಿಂದ ಸ್ವಲ್ಪ ದೂರದಲ್ಲಿ ಕುಳಿತುಕೊಂಡಿದ್ದರು. ಮಾಧವಾಚಾರ್ಯರ ದೃಷ್ಟಿಯಿಂದಲೂ ಅಂದಿನ ವಿಷಯವು ಬಹು ಮಹತ್ವದ್ದಾಗಿತ್ತು, ರಾಷ್ಟ್ರವು ಸ್ವತಂತ್ರವಾಗಿದ್ದು ಎಲ್ಲರೂ ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುತ್ತ ತಮ್ಮ ತಮ್ಮ ಧರ್ಮದಂತೆ ತಮ್ಮ ತಮ್ಮಷ್ಟಕ್ಕೆ ತಾವು ವ್ಯವಸ್ಥೆಯಿಂದ ವ್ಯವಹರಿಸುತ್ತಿದ್ದಾಗ ವಿಶೇಷವಾಗಿ ಒಬ್ಬರ ಗೊಡವೆಗೆ ಒಬ್ಬರು ಹೋಗುವ ಕಾರಣವಿದ್ದಿಲ್ಲ, ಪ್ರಾಚೀನ ಮನುವಿನ ರಾಜ್ಯಪದ್ಧತಿಯೇ ಮೂಲವಾಗಿ ನಡೆದ ರಾಜಕೀಯ ವ್ಯವಹಾರದಿಂದ ವರ್ಣಾಶ್ರಮ ಧರ್ಮಗಳ ವಿಷಯದ ವಿತುಷ್ಟತೆಗೆ ಕಾರಣಗಳಿದ್ದಿಲ್ಲ; ಆದರೆ ಈಗ ಮುಸಲ್ಮಾನರಂಥ ವಿಧರ್ಮೀಯರಾದ ಪ್ರಬಲ ಶತ್ರುಗಳು ಸಮಾಜದ ಈ ಸುವ್ಯವಸ್ಥಿತ ಮಡಿಕೆಯನ್ನು ಕೆಡಿಸಿ ಸರ್ವಸಾಮಾನ್ಯ ಶತ್ರುಗಳಾಗಿ ದೇಶದ ಸ್ವಾತಂತ್ರ್ಯಹರಣಮಾಡಹತ್ತಿದ್ದರಿಂದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಲಿಕ್ಕೆ ದೇಶದೊಳಗಿನವರೆಲ್ಲರೂ ಒಟ್ಟುಗೂಡಿ ಹೆಣಗದಿದ್ದರೆ ಪರಿಣಾಮವಾಗುವ ಹಾಗಿದ್ದಿಲ್ಲ, ಇಂಥ ಪ್ರಸಂಗದಲ್ಲಿ ಲೋಕಸಂಗ್ರಹ ಮಾಡುವ ತೊಡಕಿನ ಕೆಲಸವನ್ನು ಆಚಾರ್ಯರು ಮಾಡಬೇಕಾಯಿತು ! ಇತ್ತ ಧರ್ಮದ ಪಕ್ಷವನ್ನು ಕಾಯ್ದುಕೊಳ್ಳಬೇಕು, ಅತ್ತ ರಾಷ್ಟ್ರದ ಪಕ್ಷವನ್ನು ಕಾಯ್ದುಕೊಳ್ಳಬೇಕು. ಇಂಥ ಇಕ್ಕಟ್ಟಿನ ಕೆಲಸವನ್ನು ಆಚಾರ್ಯರಂಥ ಮಹಾತ್ಮರಲ್ಲದೆ ಮತ್ತೆಯಾರು ಕೈಕೊಳ್ಳಲು ಸಮರ್ಥರಾದಾರು? ಆಚಾರ್ಯರು ತಮ್ಮ ಪ್ರವಚನಕ್ಕಾಗಿ ತಮ್ಮ ಕುಟೀರದಿಂದ ಹೊರಬಿದ್ದ ಕೂಡಲೆ ಎಲ್ಲರೂ ಪೂಜ್ಯಭಾವದಿಂದ ಎದ್ದುನಿಂತರು. ಆ ಮಹಾತ್ಮರ ವೈರಾಗ್ಯದ ಉಡಿಗೆ–ತೊಡಿಗೆಗಳೂ, ಅವರ ಸಾತ್ವಿಕವಾದ ದೈವೀತೇಜಸ್ಸೂ ಜನರ ಚಿತ್ತವೃತ್ತಿಗಳನ್ನು ತಟ್ಟನೆ ಹರಣಮಾಡಿಬಿಟ್ಟವು. ಆಚಾರ್ಯರು ಪ್ರವಚನಕ್ಕಾಗಿ ಆಸನದಲ್ಲಿ

ಕುಳಿತುಕೊಳ್ಳುತ್ತ ಅಂತ್ಯಜವರ್ಗದ ಕಡೆಗೆ ನೋಡಿ— ''ಮಾದಿಗರ ದುರಗಪ್ಪನು ಬಂದಿರುವನೋ''? ಎಂದು ಪ್ರಶ್ನೆಮಾಡಲು, ದುರಗಪ್ಪನು ಎದ್ದುನಿಂತು ನೆಲಮುಟ್ಟಿ ಮುಜುರೆ ಮಾಡಿ— ''ಬಂದಿರುವೆವು ಬುದ್ಧೀ, ಮಾದಿಗರು ಬಂದಿರುವೆವು, ಹೊಲೆಯರು ಬಂದಿರುವೆವು, ಮೊಚ್ಚೆಗಾರರು ಬಂದಿರುವೆವು, ಚಲವಾದಿಗಳು ಬಂದಿರುವೆವು, ಮಾಸಾಳರು ಬಂದಿರುವೆವು; ನಿಮ್ಮ ಮಕ್ಕಳು ಎಲ್ಲರೂ ಬಂದಿರುವೆವು'' ಎಂದು ಉತ್ತರಕೊಟ್ಟು ಮತ್ತೆ ನೆಲಮುಟ್ಟಿ ಮುಜುರೆಮಾಡಿ ಕುಳಿತುಕೊಂಡನು.

ಕೆಲವು ಹೊತ್ತು ಸಭೆಯು ಸ್ತಬ್ಧವಾಯಿತು. ಸಭೆಯಲ್ಲಿ ಏನು ಕೇಳಬೇಕೆಂಬದು ಯಾರಿಗೂ ತಿಳಿಯಲೊಲ್ಲದು. ಆಚಾರ್ಯರ ವಿಷಯವಾಗಿ ಬಹುಜನ ಸಮಾಜದಲ್ಲಿರುವ ಅಂಥ ಅಕೃತ್ರಿಮವಾದ ಭಕ್ತಿವಿಶ್ವಾಸಗಳು! ಅಂದಬಳಿಕ ಯಾರು ಬಾಯಿಬಿಟ್ಟು ಅವರನ್ನು ಕೇಳಬೇಕು? ಈ ಪ್ರಸಂಗದಲ್ಲಿ ಏನಾದರೂ ಆಚಾರ್ಯರನ್ನು ಕೇಳಿದರೆ ಹಿರಿಯ ಮಠದ ವಿರೂಪಾಕ್ಷಾರ್ಯರೇ ಕೇಳಬೇಕೆಂದು ಬಗೆದು ಒಮ್ಮೆ ಆರ್ಯರ ಕಡೆಗೆ, ಒಮ್ಮೆ ಆಚಾರ್ಯರ ಕಡೆಗೆ ಸಭಿಕರು ನೋಡತೊಡಗಿದರು. ಅಷ್ಟರಲ್ಲಿ ಮಾಧವಾಚಾರ್ಯರೇ ವಿರೂಪಾಕ್ಷಾರ್ಯರನ್ನು ಕುರಿತು—

ಮಾಧವಾಚಾರ್ಯರು— ಆರ್ಯವರ್ಯ, ಇಂದಿನ ವಿಷಯವು ಬಹು ಸೂಕ್ಷ್ಮವಾದದ್ದು. ಈಗ ಜಾತಿ- ಕುಲ-ಸ್ಪೃಶ್ಯಾಸ್ಪೃಶ್ಯಾದಿ ಗೌಣಸಂಗತಿಗಳಿಗೆ ಮಹತ್ವಕೊಟ್ಟು, ಒಬ್ಬರಿಂದೊಬ್ಬರು ಸಿಡಿದು ಹೋಗದೆ, ದೇಶಕಾರ್ಯಕ್ಕಾಗಿ ಎಲ್ಲರೂ ಒಟ್ಟುಗೂಡಬೇಕಾಗಿದೆ. ಹಾಗೆ ಒಟ್ಟುಗೂಡುವದು ಧಾರ್ಮಿಕ ವ್ಯವಹಾರಕ್ಕೆ ಬಾಧಕವಾಗುವ ಹಾಗೆ ತೋರಿದರೂ, ರಾಷ್ಟ್ರಕಾರ್ಯಕ್ಕೆ ಮಹತ್ವಕೊಡಬೇಕಾಗಿರುವ ಈಗಿನ ಕಾಲದಲ್ಲಿ ಧಾರ್ಮಿಕ ಬಂಧನಗಳನ್ನು ಸ್ವಲ್ಪ ಸಡಿಲಿಸಬೇಕಾದರೂ ಹಿಂದೆಮುಂದೆ ನೋಡಲಾಗದು. ಹೀಗೆ ಎಲ್ಲರೂ ದೊಡ್ಡ ಮನಸ್ಸಿನಿಂದ ನಡೆಯುವದು ದೇಶಕಾರ್ಯಕ್ಕಾಗಿ ಒಂದು ಬಗೆಯ ಸ್ವಾರ್ಥತ್ಯಾಗ ಮಾಡಿದಹಾಗೆಯೇ ಸರಿ.

ವಿರೂಪಾಕ್ಷಾರ್ಯ—ಹೌದು, ಹಾಗೆ ಸ್ವಾರ್ಥತ್ಯಾಗ ಮಾಡುವ ಪ್ರಸಂಗವು ಈಗ ನಿಶ್ಚಯವಾಗಿ ಒದಗಿರುವದು; ಆದರೂ ಧಾರ್ಮಿಕ ವ್ಯವಹಾರದಲ್ಲಿ ಧಾರ್ಮಿಕ ವೃತ್ತಿಯನ್ನೂ, ರಾಷ್ಟ್ರೀಯ ವ್ಯವಹಾರದಲ್ಲಿ ರಾಷ್ಟ್ರೀಯ ವೃತ್ತಿಯನ್ನೂ ಕಾಯ್ದುಕೊಂಡರೆ, ಯಾವ ಬಾಬಿಗೂ ಬಾಧೆ ಬಾರದೆ ಲೋಕಸಂಗ್ರಹದ ಕಾರ್ಯವು ಆಗಬಹುದು. ಧಾರ್ಮಿಕ ವ್ಯವಹಾರಗಳನ್ನು ತಮ್ಮತಮ್ಮ ಧರ್ಮಗಳಂತೆ ಬಿಂಗಡವಾಗಿ ಮಾಡಬೇಕು; ಅಲ್ಲಿ ಸ್ಪೃಶ್ಯಾಸ್ಪೃಶ್ಯಾದಿ ನಿರ್ಬಂಧಗಳನ್ನು ಪಾಲಿಸಬೇಕು. ಇನ್ನು ರಾಷ್ಟ್ರೀಯ ವ್ಯವಹಾರವು ಸರ್ವರಿಗೂ ಒಂದೇ ಆಗಿರುವದರಿಂದ ಅಲ್ಲಿ ಧಾರ್ಮಿಕ ಭಾವನೆಯನ್ನು ಬದಿಗಿಟ್ಟು ಸ್ಪೃಶ್ಯಾಸ್ಪೃಶ್ಯಾದಿ ಭೇದವೆಣಿಸದೆ ಒಟ್ಟುಗೂಡಿ ಕಾರ್ಯಮಾಡಬೇಕು. ಹೀಗೆ ಒಟ್ಟುಗೂಡಿ ರಾಷ್ಟ್ರೀಯ ವ್ಯವಹಾರ ಮಾಡಿದವರು ಧಾರ್ಮಿಕ ವ್ಯವಹಾರದಲ್ಲಿ ಸೇರುವಾಗ ಆಯಾ ಧರ್ಮದಲ್ಲಿ ಹೇಳಿದಂತೆ ಸ್ನಾನಾದಿ ಶುದ್ಧೀಕರಣದ ಉಪಾಯಗಳನ್ನು ಆಚರಿಸಿದರಾಯಿತು. ಹೀಗೆ ಕಾರ್ಯದ ತಾರತಮ್ಯವರಿತು ನಡೆಯದೆ ಕೇವಲ ರಾಷ್ಟ್ರೀಯ ವ್ಯವಹಾರಮಗ್ನತೆಯಿಂದ ಧಾರ್ಮಿಕ ವ್ಯವಹಾರವನ್ನು ಮರೆಯುವದೂ, ಕೇವಲ ಧಾರ್ಮಿಕ ವ್ಯವಹಾರಮಗ್ನತೆಯಿಂದ ರಾಷ್ಟ್ರೀಯ ವ್ಯವಹಾರವನ್ನು ಮರೆಯುವದೂ ಸರ್ವಥಾ ಹಿತಕರವಲ್ಲ; ಇವೆರಡೂ ವ್ಯವಹಾರಗಳೂ

ಮನುಷ್ಯನ ಕಲ್ಯಾಣಕ್ಕೇ ಕಾರಣಗಳಾದದ್ದರಿಂದ ಅವು ಪರಸ್ಪರ ಸಹಕಾರಿತೆಯಿಂದ ನಡೆಯಬೇಕಾಗುವದು. ಇವುಗಳಲ್ಲಿ ಧಾರ್ಮಿಕ ವ್ಯವಹಾರವು ಮುಖ್ಯವಾಗಿ ಆತ್ಮಿಕೋನ್ನತಿಗೆ ಸಂಬಂಧಿಸಿದ್ದರಿಂದ ಅದು ನಿತ್ಯವೂ, ರಾಷ್ಟ್ರೀಯ ವ್ಯವಹಾರವು ಮುಖ್ಯವಾಗಿ ದೈಹಿಕೋನ್ನತಿಗೆ ಸಂಬಂಧಿಸಿದ್ದರಿಂದ ಅದು ನೈಮಿತ್ತಿಕವೂ ಆಗಿರುವವು. ಆದರೂ ದೇಹಾತ್ಮಗಳ ಸಂಬಂಧದಂತೆ ರಾಷ್ಟ್ರೀಯ ಧಾರ್ಮಿಕ ವ್ಯವಹಾರಗಳ ಸಂಬಂಧವೂ ಕಾರಣಪರತ್ವದಿಂದ ಪರಸ್ಪರ ಸಾಪೇಕ್ಷವಾಗಿರುವದರಿಂದ ನೀವು ಹೇಳಿದಂತೆ ನೈಮಿತ್ತಿಕ ಸ್ವರೂಪದ ರಾಷ್ಟ್ರೀಯ ವ್ಯವಹಾರದಲ್ಲಿ ಪ್ರಸಂಗವಶಾತ್ ಧಾರ್ಮಿಕೌದಾರ್ಯವನ್ನು ತೋರಿಸಲೇಬೇಕು.!

ಕಾಸಿಮಖಾನ— ಉಭಯ ಮಹಾತ್ಮರಲ್ಲಿಯೂ ನನ್ನ ವಿಜ್ಞಾಪನೆಯು. ಯಾವ ದೇಶದಲ್ಲಿಯೂ ಇಲ್ಲದ ಈ ಅಸ್ಪ ೃಶ್ಯ ವಿಚಾರವು ಹಿಂದುಗಳಲ್ಲಿಯೇ ಯಾಕೆ ಇರಬೇಕು? ಹೀಗೆ ಒಂದು ವರ್ಗದವರನ್ನು ಸ್ಪರ್ಶಮಾಡದೆ ಇರುವದು ನಿರ್ದಯದ ಲಕ್ಷಣವಲ್ಲವೇ? ಮಹಾತ್ಮರ ಮುಂದೆ ನಿಜವಾಗಿ ಹೇಳಬೇಕಾದರೆ, ಅಸ್ಪೃಶ್ಯರ ಸಂಬಂಧದಿಂದ ಶ್ರೇಷ್ಠ ವರ್ಣದವರಲ್ಲಿ ಒಂದು ಬಗೆಯ ದ್ವೇಷಭಾವವು ಇರುವಂತೆ ನನಗೆ ತೋರುತ್ತದೆ. ನನ್ನ ಈ ಅಧಿಕಪ್ರಸಂಗಕ್ಕಾಗಿ ಕ್ಷಮೆ ಇರಬೇಕು.

ಮಾಧವಾಚಾರ್ಯ— ಕಾಸಿಮಖಾನ, ಹೀಗೆ ನೀವು ಪ್ರಶ್ನೆಮಾಡುವದನ್ನು ನಾವು ಅಪರಾಧವೆಂದು ಭಾವಿಸುವದಿಲ್ಲ; ಯಾಕಂದರೆ ಹಿಂದೂಧರ್ಮದ ವಿಶಿಷ್ಟತ್ವವನ್ನು ಅರಿಯದ ನೀವು ಹೀಗೆ ಪ್ರಶ್ನೆಮಾಡುವದು ಸೋಜಿಗದ ಮಾತಲ್ಲ; ಆದರೆ ನಮ್ಮಲ್ಲಿಯ ಅಸ್ಪ ೃಶ್ಯವಿಚಾರವು ಸಮಾಜದ ಆತ್ಮಶುದ್ಧಿಯ ರಕ್ಷಣದ ಉಪಾಯವಾಗಿರುವದಲ್ಲದೆ, ಅಸ್ಪ ೃಶ್ಯ ಜಾತಿಯ ಹೀನತ್ವದ ದರ್ಶಕವಾಗಲಿ, ಅದರ ವಿಷಯದ ದ್ವೇಷಬುದ್ಧಿಯ ಅಥವಾ ನಿರ್ದಯತ್ವದ ಲಕ್ಷಣವಾಗಲಿ ಸರ್ವಥಾ ಇರುವದಿಲ್ಲ. ಎಲ್ಲ ದೇಶಗಳಲ್ಲಿ ಎಲ್ಲ ಧರ್ಮಗಳಲ್ಲಿ— ವರ್ಣಭೇದಗಳು, ಜಾತಿಭೇದಗಳು, ಸ್ಪ ೃಶ್ಯಾಸ್ಪ ೃಶ್ಯ ವಿಚಾರವು ಹೆಚ್ಚು ಕಡಿಮೆ ಪ್ರಮಾಣದಿಂದ ಒಂದಿಲ್ಲೊಂದು ಬಗೆಯಾಗಿ ಇರಲೇಬೇಕು; ಯಾಕಂದರೆ ಎಲ್ಲಿಹೋದರೂ ಮನುಷ್ಯಸ್ವಭಾವವು ಒಂದೇ ಇರುವದು. ತಮಗೆ ಸೇರಿಕೆ ಬಾರದ ವಸ್ತುವಿನಿಂದ ದೂರವಾಗಿರುವದು, ಅಥವಾ ಅದನ್ನು ಸ್ಪರ್ಶ ಮಾಡದೆ ಇರುವದು ಮನುಷ್ಯ ಸ್ವಭಾವವಾಗಿರುವದು. ತಮ್ಮವರ ಆಚಾರ ವಿಚಾರಗಳು ಬೇರೆಯವರ, ವಿಶೇಷವಾಗಿ ಅತ್ಯಂತ ಮಲಿನರಾಗಿರುವವರ ಆಚಾರವಿಚಾರಗಳಿಂದ ಭಿನ್ನವಾಗಿರುವಂತೆಯೂ, ಅಂಥವರ ಆಚಾರ ವಿಚಾರಗಳಿಂದ ತಮ್ಮವರ ಆಚಾರವಿಚಾರಗಳು ದೂಷಿತವಾಗದಂತೆಯೂ ಎಚ್ಚರ ಪಡುವದು ಮನುಷ್ಯಸ್ವಭಾವವಾಗಿರುತ್ತದೆ. ಒಟ್ಟಿಗೆ ಸ್ಪ ೃಶ್ಯಾಸ್ಪ ೃಶ್ಯ ವಿಚಾರವು ಕೇವಲ ಪವಿತ್ರಾಚರಣೆಯನ್ನವಲಂಬಿಸಿರುವದಲ್ಲದೆ, ವ್ಯಕ್ತಿದೋಷವನ್ನವಲಂಬಿಸಿರುವದಿಲ್ಲ. ಮನುವು ತನ್ನ ಸ್ಮೃತಿಯಲ್ಲಿ ಆರ್ಯರು ಅನಾರ್ಯರಿಂದ ದೂರ ಇರಬೇಕೆಂದು ಹೇಳಿ— ''ಆರ್ಯರೂಪಮಿವಾನಾರ್ಯಂ ಕರ್ಮಭಿಃ ಸ್ವೈರ್ವಿಭಾವಯೇತ್'' ಅಂದರೆ, ಆರ್ಯನ ಹಾಗೆ ಕಾಣುವ ಅನಾರ್ಯನನ್ನು ಅವನ ಕೃತಿಯಿಂದ ತಿಳಿದುಕೊಳ್ಳಬೇಕೆಂದು ಹೇಳಿರುವನು. ಒಟ್ಟಿಗೆ ಆರ್ಯ ಮತ್ತು ಅನಾರ್ಯರೊಳಗಿನ ಭೇದವನ್ನು ಅವರ ಕೃತಿಗಳಿಂದ ಗೊತ್ತುಮಾಡಿಕೊಳ್ಳಬೇಕೆಂದು ಮನುವು ಹೇಳುತ್ತಾನೆ.

ಅನಾರ್ಯರಂತೆ ಆಚರಿಸುವವರು, ಅಂದರೆ ನಿಷಿದ್ಧಮಾಂಸಭಕ್ಷಣ ಮಾಡುವವರು, ಹೊಲಸು ಅರಿವೆಗಳನ್ನು ಬಳಸುವವರು, ನಿಂದ್ಯವಾದ ಮಾರ್ಗದಿಂದ ಹೊಟ್ಟೆತುಂಬಿಕೊಳ್ಳುವವರು, ಊರಿಂದ ದೂರ ಇರುವವರು, ಹೆಣದ ಮೇಲಿನ ಅರಿವೆಗಳನ್ನು ಉಪಯೋಗಿಸುವವರು, ಧರ್ಮಾಧರ್ಮದ ವಿಚಾರದಿಂದ ದೂರವಾದವರು. ಇಂಥವರನ್ನು ವ್ಯವಹಾರಕ್ಕೆ ಅಯೋಗ್ಯರೆಂದು ಮನುವು ನಿರ್ಣಯಿಸಿದ್ದರೆ ಅಪರಾಧವಾಗಬಹುದೋ? ತಾವು ತಿದ್ದುಪಡೆ ಹೊಂದಿದವರೂ, ಧರ್ಮಾಧರ್ಮದ ವಿಚಾರವುಳ್ಳವರೂ ಎಂದು ಅಭಿಮಾನಪಡುವ ಯಾವ ದೇಶದವರಾಗಲಿ, ಯಾವ ಧರ್ಮದವರಾಗಲಿ ಇಂಥವರೊಡನೆ ಸರಿಬೆರಿಕೆಯಿಂದ ವ್ಯವಹರಿಸುತ್ತಿರಬಹುದೋ ? ಅನ್ಯರ ಮಾತು ಹ್ಯಾಗೆ ಇರಲಿ, ಆರ್ಯರೆನಿಸುವ ನಾವಂತು ಹಾಗೆ ವ್ಯವಹರಿಸಲಾರೆವು. ಇಷ್ಟರ ಮೇಲಿಂದ ಅಸ್ಪೃಶ್ಯರ ವಿಷಯವಾಗಿ ನಮ್ಮಲ್ಲಿ ನಿರ್ದಯವಾಗಲಿ, ದ್ವೇಷವಾಗಲಿ ಇರುತ್ತದೆಂದು ಸರ್ವಥಾ ತಿಳಿಯಕೂಡದು; ಯಾಕಂದರೆ ಈ ಸ್ಪೃಶ್ಯಾಸ್ಪೃಶ್ಯ ವಿಚಾರವು ಕೇವಲ ಅಂತ್ಯಜರ ಮಟ್ಟಿಗೇ ಇರುತ್ತದೆಂದು ತಿಳಿಯಲಾಗದು, ಪ್ರಸಂಗವಶಾತ್ ನಮ್ಮನಮ್ಮೊಳಗೂ ಅದು ಉಂಟಾಗುತ್ತದೆ. ಅಸ್ಪೃಶ್ಯತೆಯ ಮುಖ್ಯ ಕಾರಣವು, ಮಡಿ–ಮೈಲಿಗೆಯ ಧಾರ್ಮಿಕ ಭಾವನೆಯು ! ಬ್ರಾಹ್ಮಣರಲ್ಲಿಯೇ ಸ್ನಾನಮಾಡಿದ ಬ್ರಾಹ್ಮಣನು ಸ್ನಾನಮಾಡದ ಬ್ರಾಹ್ಮಣನನ್ನು ಮುಟ್ಟುವದಿಲ್ಲ; ಸ್ನಾನಮಾಡದ ಬ್ರಾಹ್ಮಣನು ಬಹಿರ್ದಿಶೆಗೆ ಹೋಗಿ ಬಂದ ಬ್ರಾಹ್ಮಣನನ್ನು ಮುಟ್ಟುವದಿಲ್ಲ, ಮುಟ್ಟಾದ ಹೆಂಗಸರನ್ನು ಬ್ರಾಹ್ಮಣರು ಚಾಂಡಾಲರಿಗೆ ಸಮಾನರೆಂದು ಭಾವಿಸಿ ಅವರ ಮುಖಾವಲೋಕನವೂ ನಿಷೇಧವೆಂದು ತಿಳಿದು ಅವರನ್ನು ದೂರದಲ್ಲಿಡುವರು; ಅಂದಬಳಿಕ ಬ್ರಾಹ್ಮಣರು ತಮ್ಮ ತಾಯಿ, ಗುರುಪತ್ನಿ, ಅಕ್ಕತಂಗೆಯರು, ಹೆಂಡಿರು ಮುಂತಾದವರ ಮೇಲಿನ ದ್ವೇಷ–ನಿರ್ದಯಗಳ ಮೂಲಕವಾಗಿಯೇ ಹೀಗೆ ಅಸ್ಪೃಶ್ಯತೆಯ ವ್ಯವಹಾರವನ್ನು ಬಳಕೆಯಲ್ಲಿ ತಂದಿರುವರೆಂದು ಹೇಳಬೇಕಾಯಿತಲ್ಲ ! ಈ ಸ್ಪೃಶ್ಯಾ ಸ್ಪೃಶ್ಯತೆಯ ವಿಚಾರವು ಬ್ರಾಹ್ಮಣರಲ್ಲಿಯಷ್ಟು ಬ್ರಾಹ್ಮಣೇತರರಲ್ಲಿ ಸೂಕ್ಷ್ಮವಾಗಿ ಇರದಿದ್ದರೂ ''ನಮ್ಮಲ್ಲಿ ಈ ವಿಚಾರವು ಸರ್ವಥಾ ಇಲ್ಲವೆಂ''ದು ಒಬ್ಬನಾದರೂ ವೈದಿಕ ಧರ್ಮದವನು ಕೈ ಎತ್ತಿ ಹೇಳಬಹುದೋ? ಅದೂ ಹೋಗಲಿ, ಅಸ್ಪೃಶ್ಯರೆನಿಸಿಕೊಳ್ಳುವ ಈ ಮಾದಿಗರು, ಹೊಲೆಯರು, ಮುಚ್ಚಿಗಾರರು, ಮಾಸಾಳರು ಮುಂತಾದವರು ಪರಸ್ಪರ ಸಮಾನಸ್ಕಂದತ್ವದಿಂದ ತಮ್ಮತಮ್ಮೊಳಗೆ ಸರಿಬೆರಿಕೆಯಾಗಿ ಬಳಿಕೆ ಮಾಡುವರೋ? ಕಾಸಿಮಖಾನ, ನಿಮ್ಮಲ್ಲಿಯದೇ ಒಂದು ಉದಾಹರಣವನ್ನು ಹೇಳುವೆನು. ನೀವು ಕಾಫರರನ್ನು ಪವಿತ್ರರೆಂದು ಭಾವಿಸಿ ಅವರೊಡನೆ ಸಹಾನುಭೂತಿಯ ಸರಿಬೆರಿಕೆಯಿಂದ ಎಲ್ಲ ವ್ಯವಹಾರಗಳಲ್ಲಿ ಬಳಿಕೆ ಮಾಡುವಿರಾ? ನಿಮ್ಮ ಪವಿತ್ರವಾದ ಕುತಬಿಯ ಹಬ್ಬದ ದಿವಸ ಮಲಿನ ವಸ್ತ್ರಧಾರಣಮಾಡಿ ನಮಾಜಿಗೆ ಬಂದರೆ ನಿಮ್ಮ ಮನಸ್ಸು ಒಪ್ಪುವದೋ? ಅಯೋಗ್ಯಾಚರಣೆಯ ಇಂಥ ಪ್ರಸಂಗಗಳಲ್ಲಿ ನಾವಾಗಲಿ, ನೀವಾಗಲಿ, ಆಯಾ ವ್ಯಕ್ತಿಗಳನ್ನು ತಿರಸ್ಕರಿಸುವದು, ಅವರ ಅಯೋಗ್ಯ, ಆಚರಣೆಗಾಗಿಯಲ್ಲದೆ ವ್ಯಕ್ತಿ ವಿಷಯದ ಅಥವಾ ಜಾತಿ–ವಿಷಯದ ದ್ವೇಷಕ್ಕಾಗಿಯಲ್ಲ! ಇದನ್ನರಿಯದೆ ವ್ಯಕ್ತಿಯನ್ನಾಗಲಿ, ಜಾತಿಯನ್ನಾಗಲಿ ದ್ವೇಷಿಸಿದರೆ ಅದು ಅಜ್ಞಾನತನದ ತಪ್ಪು ! ಕಾಸಿಮಖಾನ, ಹ್ಯಾಗೇ ಇರಲಿ, ಸ್ಪೃಶ್ಯಾಸ್ಪೃಶ್ಯದ ಧಾರ್ಮಿಕ ವಿಚಾರವು

ವೈದಿಕ ಧರ್ಮದ ವಿಶಿಷ್ಟ ಲಕ್ಷಣವಾಗಿರುತ್ತದೆ, ಅದನ್ನು ಪಾಲಿಸಲು ಧರ್ಮದ ಆಜ್ಞೆಯಿರುತ್ತದೆ. ವೈದಿಕರಲ್ಲದವರೂ, ವೈದಿಕರಾಗಿಯೂ ಧರ್ಮದ ಔದಾಸೀನ್ಯವುಳ್ಳವರೂ ''ನಮಗೆ ಅಯೋಗ್ಯವಾಗಿ ತೋರುವದರಿಂದ ಸ್ಪೃಶ್ಯಾಸ್ಪೃಶ್ಯತೆಯನ್ನು ಪಾಲಿಸುವದಿಲ್ಲವೆಂ''ದಾಗಲಿ, ''ಒಂದು ಮಹತ್ವದ ಕಾರ್ಯಕ್ಕಾಗಿ ಇದನ್ನು ಕಿತ್ತುಹಾಕುವೆವೆಂ''ದಾಗಲಿ ಹೇಳಿದರೆ ನಿಜವಾದ ವೈದಿಕ ಧರ್ಮಿಯು ಅದಕ್ಕೆ ಒಪ್ಪಲಾರನು. ಒಂದು ಪಕ್ಷದಲ್ಲಿ ಅವನು ಒಪ್ಪಿದರೂ ಅವನ ಮನಸ್ಸು ಒಪ್ಪಲಾರದು. ಬಹಳ ಹೇಳುವದೇನು? ದೇವರ ಒಂಭತ್ತನೇ ಅವತಾರವೆಂದು ನಾವು ಭಾವಿಸುವ ಸಾಕ್ಷಾತ್ ಬುದ್ಧದೇವನೂ, ಈ ಏಕಬಳಿಕೆಯ ಕೆಲಸದಲ್ಲಿ ಕೈಯೂರಿರುವನು, ಅಂದಬಳಿಕ ವರ್ಣಸಂಕರದ ಕಾಲವು ಈಶ್ವರೇಚ್ಛೆಯಿಂದ ಒದಗುವವರೆಗೆ ವೈದಿಕ ಭಾವನೆಯನ್ನು ಕಿತ್ತುಹಾಕಲು ಅನ್ಯರ ಪಾಡೇನು? ಒಟ್ಟಿಗೆ ಸ್ಪೃಶ್ಯಾಸ್ಪೃಶ್ಯ ವಿಚಾರವು ವೈದಿಕಧರ್ಮದ, ಅಥವಾ ಹಿಂದೂಧರ್ಮದ ವಿಶಿಷ್ಟಲಕ್ಷಣವಾಗಿದ್ದು, ಈ ವೈಶಿಷ್ಟ್ಯವು ಸಂಪೂರ್ಣವಾಗಿ ಅಳಿದುಹೋದ ದಿವಸವೇ ವೈದಿಕಧರ್ಮವು, ಅದರಲ್ಲಿಯೂ ಚತುರ್ವರ್ಣಾತ್ಮಕ ವೈದಿಕ ಧರ್ಮವು ಅಳಿದುಹೋಯಿತೆಂದು ತಿಳಿಯತಕ್ಕದ್ದು.

ಸುಬ್ರಹ್ಮಣ್ಯಾವಧಾನಿ— ಈ ಸ್ಪೃಶ್ಯಾಸ್ಪೃಶ್ಯ ವಿಚಾರದ ವೈಶಿಷ್ಟ್ಯವು ಹಿಂದೂ ಧರ್ಮಕ್ಕೇ ಯಾಕಿರಬೇಕು?

ಮಾಧವಾಚಾರ್ಯ— ಅವಧಾನಿಗಳೇ, ಇದು ಈ ಧರ್ಮಕ್ಕೆ ಯಾಕಿರಬೇಕು ಇದು ಈ ಧರ್ಮಕ್ಕೆ ಯಾಕಿರಬಾರದು ಎಂದು ಆಕ್ಷೇಪಿಸುವದೂ, ಇದ್ದದ್ದರಲ್ಲಿ ಹೆಚ್ಚುಕಡಿಮೆ ಮಾಡ ಹೋಗುವದೂ ಧರ್ಮದ್ರೋಹವೇ ಸರಿ. ಧರ್ಮದ ಆಜ್ಞೆಗಳನ್ನು ಪಾಲಿಸುವದು ತಮ್ಮ ಕರ್ತವ್ಯವೆಂತಲೇ ಆಯಾ ಧರ್ಮದವರು ಪ್ರಸಂಗವಶಾತ್ ಸ್ವಾರ್ಥತ್ಯಾಗ ಮಾಡಿಯಾದರೂ ತಮ್ಮ ತಮ್ಮ ಧರ್ಮದ ಆಜ್ಞೆಗಳನ್ನು ಶ್ರದ್ಧೆಯಿಂದ ಪಾಲಿಸಬೇಕಾಗುವದು! ಭಿನ್ನ ಭಿನ್ನ ಧರ್ಮದವರ ಆಚರಣೆಗಳ ಭಿನ್ನತ್ವದ ಉಹಾಪೋಹ ಮಾಡುವ ಅಧಿಕಾರವು ನಮ್ಮಂಥ ಪಾಮರರಿಗೆ ಸರ್ವಥಾ ಬರಲಾರದು. ಧರ್ಮಾಚರಣೆಗಳ ವಿಚಾರವನ್ನು ಲೋಕಕಲ್ಯಾಣೇಚ್ಛುಗಳಾದ ಆಯಾ ಧರ್ಮದ ಅಲೌಕಿಕ ಯೋಗ್ಯತೆಯ ಮಹಾತ್ಮರೇ ಆಗಾಗ್ಗೆ ಹುಟ್ಟಿ ಬಂದುಮಾಡಿ, ದೇಶ–ಕಾಲ–ಪರಿಸ್ಥಿತಿಗನುಸರಿಸಿ ತಿದ್ದುವದನ್ನು ತಿದ್ದಬೇಕಾಗುವದು.

ಸುಬ್ರಹ್ಮಣ್ಯಾವಧಾನಿ— ಆಗಲಿ, ಮಹಾತ್ಮನ್, ಸ್ಪೃಶ್ಯಾಸ್ಪೃಶ್ಯದ ಗೂಢ ರಹಸ್ಯವನ್ನು ಬೋಧಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕು.

ಮಾಧವಾಚಾರ್ಯ— ತಿಳಿದಷ್ಟು ಅವಶ್ಯವಾಗಿ ಹೇಳುವೆನು. ದುಷ್ಟ ಪದಾರ್ಥಗಳಿಂದ ದೂರವಾಗಿರಬೇಕೆಂಬದೊಂದು ವೈದಿಕ ಧರ್ಮದ ಸಾಮಾನ್ಯ ನಿಯಮವು. ''ಆಹಾರಶುಧ್ಧಾ ಚಿತ್ತಶುದ್ಧಿಃ!'' ಎಂಬ ನಿಯಮದಂತೆ ಚಿತ್ತಶುಧ್ಯರ್ಥವಾಗಿ ಪಂಚೇಂದ್ರಿಯಗಳಿಗೆ ಶುದ್ಧವಾದ ಆಹಾರವನ್ನು ಒದಗಿಸಿ ಕೊಡಬೇಕಾಗುವದು. ಈ ನಿಯಮವೇ ಅಸ್ಪೃಶ್ಯದ ಮೂಲಕಾರಣ ವಾಗಿರುವದೆಂದು ಹೇಳಬಹುದು. ದುಷ್ಟ ಪದಾರ್ಥವು ಸ್ವತಃ ತಾನು ಇರಲಿ, ತನ್ನವರಿರಲಿ, ಅನ್ಯರಿರಲಿ, ಜಡವಿರಲಿ, ಚೇತನವಿರಲಿ ಅವುಗಳಲ್ಲಿಯ ದುಷ್ಟತನವು ಹೋಗುವವರೆಗೆ

ಅವುಗಳಿಂದ ದೂರವಾಗಿರಬೇಕೆಂಬದು, ಅರ್ಥಾತ್ ಅವುಗಳನ್ನು ಅಸ್ಪೃಶ್ಯವೆಂದು ತಿಳಿಯಬೇಕೆಂಬದು ವೈದಿಕ ಧರ್ಮದ ಸಾಮಾನ್ಯ ನಿಯಮವು. ಸ್ವತಃ ತಾನೇ ಮಹಾಪಾತಕದಿಂದ ಜಾತಿ ಭ್ರಷ್ಟನಾಗಿ ಪತಿತನಾದರೆ ತನ್ನವರಿಗೆ ಅಸ್ಪೃಶ್ಯನಾಗುವನು. ತನ್ನವರು ಹಾಗೆ ಪತಿತರಾದರೆ ತನಗೆ ಅಸ್ಪೃಶ್ಯರಾಗುವರು ! ಒಟ್ಟಿಗೆ ಅಸ್ಪೃಶ್ಯತೆಯು ಪಾಪಕ್ಕಲ್ಲದೆ ವ್ಯಕ್ತಿಗಲ್ಲ.

ವಿರೂಪಾಕ್ಷಾರ್ಯ— ಇದು ಸತ್ಯವಾದ ಬಹು ಗಂಭೀರ ವಿಚಾರವು ಆಚಾರ್ಯವರ, ಅಂತ್ಯಜರಿಗೆ ಅಸ್ಪೃಶ್ಯ ದೋಷವು ಯಾಕೆ? ಅವರನ್ನು ದುಷ್ಟ ಪದಾರ್ಥಗಳಲ್ಲಿ ಎಣಿಸ ಬಹುದೋ? ಈ ಸಂಬಂಧದಿಂದ ಸ್ಪಷ್ಟವಾಗಿ ವಿವರಿಸುವದು ಹಿತಕರವು.

ಮಾಧವಾಚಾರ್ಯ– ಮಹಾತ್ಮನ್, ಕ್ಷಮಿಸಬೇಕು ! ಅಂತ್ಯಜರು ವಸ್ತುತಃ ದುಷ್ಟರಲ್ಲ! ಗುಣದಿಂದಲೂ ಅವರು ದುಷ್ಟರಿರಲಿಕ್ಕಿಲ್ಲ; ಆದರೆ ದುಷ್ಟಪದಾರ್ಥಗಳ ಸೇವನದಿಂದಲೂ, ಸಂಸರ್ಗದಿಂದಲೂ ದೇಹದೃಷ್ಟಿಯಿಂದ ಮಾತ್ರ ಅವರು ದುಷ್ಟರಾಗಿರುವರೆಂದು ಕಷ್ಟದಿಂದ ಹೇಳ ಬೇಕಾಗುವದು. ಶವಸ್ಪರ್ಶಮಾಡಿದವರನ್ನು ಅವರು ಶುದ್ಧರಾಗುವವರೆಗೆ ಅಸ್ಪೃಶ್ಯರೆಂದು ಹಿಂದೂಜನರು ಸಾಧಾರಣವಾಗಿ ಭಾವಿಸುವಾಗ, ಸದಾ ಶವದ ಮೈಮೇಲಿನ ವಸ್ತ್ರಗಳನ್ನು ಉಪಯೋಗಿಸುವವರೂ, ಸದಾ ಸ್ಮಶಾನದ ವ್ಯವಹಾರಕ್ಕೆ ಸಂಬಂಧಪಟ್ಟವರೂ, ಗೋಮಾಂಸಾದಿ ನಿಷಿದ್ಧ ಪದಾರ್ಥಗಳ ಭಕ್ಷಣ ಮಾಡುವವರೂ ಆದ ಪಂಚಮರು ಅಥವಾ ಅಂತ್ಯಜರು ವೈದಿಕರಿಗೆ ವಿಶೇಷವಾಗಿ ಚತುರ್ವರ್ಣಾತ್ಮಕ ವೈದಿಕರಿಗೆ ಪ್ರಾಚೀನ ಋಷಿ ಸಮ್ಮತವಾಗಿ ಧಾರ್ಮಿಕ ವ್ಯವಹಾರದಲ್ಲಿ ಸ್ಪರ್ಶರು ಹ್ಯಾಗಾದಾರು?

ನಾರಾಯಣಾಚಾರ್ಯ— ಅಸ್ಪೃಶ್ಯರು ವೈದಿಕರೋ ಅವೈದಿಕರೋ?

ಮಾಧವಾಚಾರ್ಯ— ಇವರು ವೈದಿಕರು; ಯಾಕಂದರೆ ಇವರು ವೈದಿಕರಿಗೆ ಮಾನ ಕೊಡುತ್ತಿದ್ದು ವೈದಿಕ ದೇವತೆಗಳನ್ನೇ ಪೂಜಿಸುವರು; ಮತ್ತು ವೈದಿಕರ ಕೆಲವು ವ್ಯವಹಾರದಲ್ಲಿ ಇವರ ಅಂಗವಿರುತ್ತದೆ; ಇವರಲ್ಲಿಯ ಧರ್ಮಕಾರ್ಯಗಳಿಗಾಗಿ ಬ್ರಾಹ್ಮಣರು ಹೋಗುವದುಂಟು. ಪ್ರಾಚೀನ ಕಾಲದ ಆರ್ಯರು ತಮ್ಮ ವೈದಿಕ ಧರ್ಮದಲ್ಲಿ ಅನ್ಯರನ್ನು ಸೇರಿಸಿಕೊಳ್ಳುವಲ್ಲಿ ಪರಮೌದಾರ್ಯವನ್ನು ತೋರಿಸಿರುವರು. ದಸ್ಯುಗಳನ್ನು ತಮ್ಮ ಧರ್ಮದಲ್ಲಿ ಸೇರಿಸಿಕೊಳ್ಳಲಿಕ್ಕೂ ಅವರು ಹಿಂದೆಮುಂದೆ ನೋಡಿರುವದಿಲ್ಲ. ದಸ್ಯುಗಳು ತಮ್ಮ ಕಾಡುತನವನ್ನೂ, ಕ್ರೂರತನವನ್ನೂ ಬಿಟ್ಟು, ನಾಗರಿಕತ್ವವನ್ನು ಕೈಕೊಂಡ ಮಾನದಂತೆ ಅವರನ್ನು ತಮ್ಮವರನ್ನಾಗಿ ಮಾಡಿಕೊಂಡು ಹೆಚ್ಚು ಹೆಚ್ಚು ಸನಿಯಕ್ಕೆ ಕರೆದುಕೊಂಡರು. ಅವರಲ್ಲಿ ಹೆಚ್ಚು ತಿದ್ದುಪಡೆ ಹೊಂದಿ ಸ್ಪರ್ಶಕ್ಕೆ ಯೋಗ್ಯ ರಾದವರನ್ನು ಅವರದೊಂದು ಸ್ವತಂತ್ರ ಜಾತಿಯನ್ನು ಮಾಡಿ ಶೂದ್ರರಲ್ಲಿ ಸೇರಿಸಿಕೊಂಡರು. ತಕ್ಕಷ್ಟು ತಿದ್ದುಪಡೆ ಹೊಂದದವರನ್ನು ಅಸ್ಪೃಶ್ಯರೆಂದು ತಿಳಿದರೂ ತಮ್ಮ ಧರ್ಮದವರೆಂದು ತಿಳಿದು ಊರ ಹೊರಗೆ ಇಟ್ಟುಕೊಂಡರು. ಅಂಥವರಿಗೆ ಅತಿ ಶೂದ್ರರು, ಅಥವಾ ಪಂಚಮರು ಎಂದು ಹೆಸರು ಕೊಟ್ಟರು. ಅಂತ್ಯಜರೆಂತಲೂ ಇವರಿಗೆ ಅನ್ನುವರು. ಈ ಅತಿಶೂದ್ರರಲ್ಲಿ ಅಥವಾ ಪಂಚಮರಲ್ಲಿ ಅಥವಾ ಚಾಂಡಾಲರಲ್ಲಿಯೂ ಹಲವು ಒಳಜಾತಿಗಳಿರುವವು ! ಒಟ್ಟಿಗೆ ಆರ್ಯರು ತಮ್ಮ ವೈದಿಕ ಧರ್ಮದಲ್ಲಿ ಒಬ್ಬೊಬ್ಬರನ್ನಾಗಿ ತಕ್ಕೊಳ್ಳದೆ ಗುಂಪಿಗೆ ಗುಂಪನ್ನೇ ತಕ್ಕೊಂಡು

ಅದನ್ನು ಸೇರಿಸತಕ್ಕ ವರ್ಣದಲ್ಲಿ ಸ್ವತಂತ್ರ ಪಂಗಡವನ್ನು ಅಥವಾ ಜಾತಿಯನ್ನಾಗಮಾಡಿ ಸೇರಿಸಿಕೊಂಡರು. ಇದಲ್ಲದೆ ಯಾವದೊಂದು ಜಾತಿಯೊಳಗಿನ ಜನರು ಕಾರಣಾಂತರ ದಿಂದ ಒಂದು ಜಾತಿಯೊಳಗಿನ ಒಳಭೇದದ ಜಾತಿಯಾಗಿ ಪರಿಣಮಿಸುವದೂ ವೈದಿಕರ ಸಾಂಪ್ರದಾಯವಾಗಿರುವದು. ಹೀಗೆ ಆರ್ಯರು ಧರ್ಮೌದಾರ್ಯವನ್ನು ತೋರಿಸಿದ್ದರಿಂದಲೇ ತಾವು ಸ್ವತಃ ಅಲ್ಪಸಂಖ್ಯಾಕರಾಗಿದ್ದರೂ, ಭರತಖಂಡವನ್ನೆಲ್ಲ ವೈದಿಕರಿಂದ ಅಥವಾ ಹಿಂದುಗಳಿಂದ ತುಂಬಿದರು; ಆದರೂ ಅಧಿಕಾರದ ತಾರತಮ್ಯಕ್ಕೆ ಭಂಗ ತರಲಿಲ್ಲ; ಜಾತಿಸಂಕರಕ್ಕೆ ಆಸ್ಪದ ಕೊಡಲಿಲ್ಲ ! ಈಗಿನ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರ–ಅತಿ ಶೂದ್ರರೊಳಗಿನ ಒಳಭೇದಗಳನ್ನು ಮನಸ್ಸಿನಲ್ಲಿ ತಂದರೆ, ಕರ್ತುಮಕರ್ತುಮನ್ಯಥಾ ಕರ್ತುಂ ಸಮರ್ಥರಾದ ಮಹಾತ್ಮರ ಇಚ್ಛೆಯಿಂದಲೂ, ಗಹನವಾದ ಕಾಲಪುರುಷನ ಮಹಿಮೆಯಿಂದಲೂ ಆಗಬಹು ದಾಗಿರುವ ರೂಪಾಂತರದ ನೆಲೆಯು ಯಾರಿಗೂ ತಿಳಿಯದೆ ಹೋಗುವದು !

ಕಾಸಿಮಖಾನ— ಭಗವನ್, ಹೀಗೆ ಒಂದೊಂದು ಜಾತಿಯಲ್ಲಿ ಬೇರೆ ಬೇರೆ ಪಂಗಡಗಳ ನ್ನುಂಟುಮಾಡದೆ, ಎಲ್ಲ ಪಂಗಡದವರನ್ನೂ ಒಂದೇ ಮುಖ್ಯ ಜಾತಿಯವರಾಗಮಾಡಿದ್ದರೆ ನೆಟ್ಟಗಾಗುತ್ತಿದ್ದಿಲ್ಲವೆ?

ಮಾಧವಾಚಾರ್ಯ— ಕಾಸಿಮಖಾನ, ಹೀಗೆ ಮಾಡುವದು ಅಶಕ್ಯವೆಂದು ಹೇಳುವ ದಕ್ಕಿಂತ, ಹೀಗಾಗುವದು ಅಶಕ್ಯವೆಂದು ಹೇಳುವದು ಯೋಗ್ಯವಾಗಿರುವದು; ಯಾಕಂದರೆ, ಯಾವದೊಂದು ಜಾತಿಯಲ್ಲಿ ಮೊದಲಿಗೇ ಇದ್ದವರು ಹೊಸದಾಗಿ ತಮ್ಮ ಜಾತಿಯಲ್ಲಿ ಬಂದವರನ್ನು ಪಾವಿತ್ರ್ಯದ ದೃಷ್ಟಿಯಿಂದ ಹೀನರನ್ನಾಗಿ ನೋಡುವ ಸಾಂಪ್ರದಾಯವಿದೆ. ಇದಲ್ಲದೆ ದೇಶ–ಕಾಲ–ಪರಿಸ್ಥಿತಿಗನುಸರಿಸಿ ಒಂದೇ ಜಾತಿಯ ಬೇರೆ ಬೇರೆ ಕಡೆಯವರ ಧರ್ಮಾಚರಣೆಗಳು ಭಿನ್ನವಾಗಿ ಅದರಿಂದಲೂ ಒಳಜಾತಿಗಳು ಆಗುವವು. ನಿಮ್ಮಲ್ಲಿ ಶೇಖ–ಸೈಯದ–ಮೊಗಲ– ಪಠಾಣಾದಿ ವರ್ಗಗಳಾಗಲಿಕ್ಕೂ, ನಿಮ್ಮಂಥ ಅಚ್ಚ ಮುಸಲ್ಮಾನರು ಕುಲಗೆಟ್ಟ ಮುಸಲ್ಮಾನರನ್ನು ಭಿನ್ನ ವರ್ಗದವರೆಂದು ತಿಳಿಯಲಿಕ್ಕೂ ಇದೇ ಕಾರಣವು. ಇದೇ ಮಾತು ನಮ್ಮ ಪಂಚವರ್ಣ ಗಳೊಳಗಿನ ಒಳಭೇಧಗಳಿಗೆ ವೈದಿಕ ಶೀಲಕ್ಕನುಸರಿಸಿ ವಿಶೇಷವಾಗಿ ಸಂಬಂಧಿಸುತ್ತದೆ.

ಕಾಸಿಮಖಾನ— ಒಳಜಾತಿಗಳು ಹೆಚ್ಚಾಗುವದರಿಂದ ಜಾತಿಗಳ ಶ್ರೇಷ್ಠತ್ವದ ವಿಷಯದ ಕಲಹವು ಹೆಚ್ಚಾಗುವದಲ್ಲವೇ ?

ಮಾಧವಾಚಾರ್ಯ— ತಮ್ಮ ತಮ್ಮ ಜಾತಿಗಳು ತಮತಮಗೆ ಶ್ರೇಷ್ಠವಾಗಿರಲು, ಜಾತಿಗಳ ಶ್ರೇಷ್ಠತ್ವದ ವಿಷಯವಾಗಿ ಕಲಹ ಬೆಳೆಸುವದು ಮೂರ್ಖತನವೇ ಸರಿ ! ಈ ಮೂರ್ಖತನಕ್ಕೆ ದುರಭಿಮಾನದ ಅಹಂಕಾರದ ಹೊರತು ಬೇರೆ ಕಾರಣವಿಲ್ಲ. ಆಯಾ ವೈದಿಕ ಧರ್ಮದವರು ತಮ್ಮ ತಮ್ಮ ವರ್ಣೋಚಿತ ಕರ್ಮಗಳನ್ನು ತಮ್ಮ ಧರ್ಮವೆಂದು ತಿಳಿದು ನಿಸ್ಪೃಹವೃತ್ತಿಯಿಂದ ಆಚರಿಸುತ್ತ ತಮ್ಮ ನಿರ್ಮಲಾಂತಃಕರಣದಲ್ಲಿ ಸದ್ಭಾವವನ್ನು ಸ್ಥಾಪಿಸಿಕೊಂಡರೆ ತಮ್ಮ ತಮ್ಮ ವರ್ಣದಲ್ಲಿಯೇ ತಾವು ಕೃತಾರ್ಥರಾಗುವರು. ಹೀಗೆ ಆಚರಿಸಿದ ಎಷ್ಟು ಜನ ಅಂತ್ಯಜರು ಈಶ್ವರ ಪ್ರೀತಿಗೆ ಪಾತ್ರರಾಗಿ ಕೃತಾರ್ಥರಾಗಿಲ್ಲ? ಮತ್ತು ಹೀಗೆ ಆಚರಿಸದೆ ಇದ್ದ ಶ್ರೇಷ್ಠವರ್ಣದವರೆಂದು ಅಭಿಮಾನಪಡುವ

ಬ್ರಾಹ್ಮಣಾದಿಕರೆಷ್ಟು ಜನರು ಅಧಃಪತನವನ್ನು ಹೊಂದಲಿಲ್ಲ? ಕಾಸಿಮಖಾನ ದೇಹವು ಬ್ರಾಹ್ಮಣನದಾದರೇನು? ಅಂತ್ಯಜನದಾದರೇನು? ಇದು ನಾಶವಂತವಾಗಿದ್ದು ಧರ್ಮಾಚರಣೆಗೆ ಸಾಧನವು ಮಾತ್ರ ಆಗಿರುವದು. ಬ್ರಾಹ್ಮಣನು ಕೃತಾರ್ಥನಾಗಲಿಕ್ಕೆ ಬ್ರಾಹ್ಮಣ ದೇಹವು ಎಷ್ಟು ಅನುಕೂಲವೋ, ಅಷ್ಟೇ ಅಂತ್ಯಜನು ಕೃತಾರ್ಥನಾಗಲಿಕ್ಕೆ ಅಂತ್ಯಜದೇಹವು ಅನುಕೂಲ ವಾಗಿರುವದು; ಆದರೆ ಯಾವ ದೇಹವಿದ್ದರೂ ದೇಹಧಾರಣಮಾಡುವವನ ಅಂತಃಕರಣವು ಶುದ್ಧವಾಗಿದ್ದು, ಅದರಲ್ಲಿ ಸದ್ಭಾವದ ಪ್ರತಿಷ್ಠಾಪನೆಯಾಗಿರಬೇಕು ! ಬ್ರಾಹ್ಮಣ ದೇಹರಕ್ಷಣಕ್ಕೆ ತಕ್ಕಂತೆ ಬ್ರಾಹ್ಮಣ ಧರ್ಮಗಳು ಹೇಳಿರುವವು ! ಅಂತ್ಯಜನ ದೇಹರಕ್ಷಣಕ್ಕೆ ತಕ್ಕಂತೆ ಅಂತ್ಯಜ ಧರ್ಮಗಳು ಹೇಳಿರುವವು. ಬ್ರಾಹ್ಮಣರ ಯಾಜ್ಞಿಕ ಪಶು ಹಿಂಸೆಯೂ, ಧರ್ಮವೆಂದು ತಿಳಿದು ಆಚರಿಸುವದರಿಂದ ಹಿಂಸೆಯ ದೋಷವನ್ನುಂಟುಮಾಡುವದಿಲ್ಲ. ಇದರ ಮೇಲಿಂದ ಆಯಾ ವೈದಿಕ ವರ್ಣದವರ ಆಚರಣೆಗಳ ಯುಕ್ತತೆಯ ಮರ್ಮವನ್ನು ತಿಳಿದುಕೊಂಡರಾಯಿತು. ಬ್ರಾಹ್ಮಣರ ಯಾಜ್ಞಿಕ ಪಶುಹಿಂಸೆಯು ಅಧರ್ಮವಾಗದಂತೆ, ಬೇರೆ ಕೆಲವು ವೈದಿಕ ವರ್ಣ ದವರು ಕೇವಲ ಧರ್ಮವೆಂದು ದೇವರಿಗೆ ಕೊಡುವ ಬಲಿಯೂ ಅಧರ್ಮವಾಗದು; ಆದರೆ ಹಿಂಸೆಮಾಡಲೇಬೇಕೆಂದು ಬ್ರಾಹ್ಮಣನಿಗೂ ಆಗ್ರಹವಿಲ್ಲ; ಇತರ ವೈದಿಕ ಧರ್ಮದವರಿಗೂ ಆಗ್ರಹವಿಲ್ಲ; ಮತ್ತು ಪ್ರಾಣಿಹಿಂಸೆ ಮಾಡದೆ ಧರ್ಮಕಾರ್ಯವಾಗುವದಿಲ್ಲೆಂದಾಗಲಿ, ದೇಹರಕ್ಷಣ ವಾಗುವದಿಲ್ಲೆಂದಾಗಲಿ ಅನ್ನುವಹಾಗಿಲ್ಲ. ಹಿಂಸಾಧರ್ಮಕ್ಕಿಂತ ಅಹಿಂಸಾಧರ್ಮವು ಶ್ರೇಷ್ಠತರವೂ, ಸಾತ್ವಿಕಫಲದಾತ್ರಿಯೂ, ಪರಮಪುರುಷಾರ್ಥಸಾಧನವೂ ಇರುತ್ತದೆಂಬುದನ್ನು ಯಾವ ವೈದಿಕ ಧರ್ಮದವನೂ ಮರೆಯತಕ್ಕದ್ದಲ್ಲ. ಜಗತ್ತು ತತ್ವತಃ ಹಿಂಸಾಮಯವಾಗಿರುವಾಗ ಪ್ರಾಣಿಹಿಂಸೆ ಬಿಡುವದು ಅವಶ್ಯಕವಿದ್ದಪಕ್ಷದಲ್ಲಿ ಅದನ್ನು ಕೇವಲ ಹೊಟ್ಟೆಯ ಸಲುವಾಗಿ ಮಾಡುವದಕ್ಕಿಂತ ''ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್। ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ'' ಎಂಬ ಭಗವದ್ವಚನದಂತೆ ಈಶ್ವರಾರ್ಪಣ ಬುದ್ಧಿಯಿಂದ ಮಾಡುವದು ಕ್ಷಮ್ಯವಾಗಿರುವದಲ್ಲದೆ ಹಿಂಸೆಗೆ ಪ್ರತಿಬಂಧಕವೂ ಆಗಿರುವದು. ಒಟ್ಟಿಗೆ ಹಿಂದಕ್ಕೊಮ್ಮೆ ನಾನು ಹೇಳಿದಂತೆ ಧರ್ಮದ ಕರ್ಮಮಯ ಬಹಿರಂಗವು ದೇಹರಕ್ಷಣಕ್ಕಾಗಿದ್ದು, ಅದರ ಜ್ಞಾನಮಯವಾದ ಅಂತರಂಗವು ಆತ್ಮದರ್ಶಕವಾಗಿರುವದರಿಂದ, ಆಯಾ ಜಾತಿಯವರು ತಮ್ಮ ತಮ್ಮ ಜಾತಿಗಳಿಗನುಸರಿಸಿದ ಕರ್ಮಗಳಿಂದ ಹ್ಯಾಗಾದರೂ ದೇಹವನ್ನು ರಕ್ಷಿಸಿಕೊಂಡು ಸದ್ಗುರು ಕೃಪೆಯಿಂದ ಭಕ್ತಿ–ಜ್ಞಾನ–ವೈರಾಗ್ಯಮಯವಾದ ಅಂತರಂಗದಿಂದ ಆತ್ಮದರ್ಶನ ಮಾಡಿ ಕೊಂಡರಾಯಿತು ! ಹೀಗೆ ಆತ್ಮೋದ್ಧಾರ ಮಾಡಿಕೊಳ್ಳಲಿಕ್ಕೆ ಜಾತಿ–ಧರ್ಮಗಳು ಅಡ್ಡಬಾರದ್ದರಿಂದ ನಮ್ಮ ವೈದಿಕ ಧರ್ಮದಲ್ಲಿ ಉದ್ಧಾರಕ್ಕಾಗಿ ಜಾತ್ಯಾಂತರ ಧರ್ಮಾಂತರ ಮಾಡಲಿಕ್ಕೆ ಬಹುತರ ಒಪ್ಪಿಗೆಯಿಲ್ಲ. ಆಯಾ ಜಾತಿ–ಧರ್ಮದವರು ತಮ್ಮ ತಮ್ಮ ಧರ್ಮ–ಜಾತಿಗಳಂತೆ ಭಕ್ತಿಯಿಂದ ನಡೆದುಕೊಂಡರಾಯಿತು. ಇದೇ ಮಾತನ್ನೇ– ''ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥'' ಎಂಬ ಭಗವದುಕ್ತಿಯು ಸೂಚಿಸುತ್ತದೆ.

ತಿರಮಲಯ್ಯಂಗಾರ— ಭಗಾವನ್, ವಿಶ್ವಾಮಿತ್ರನು ಕ್ಷತ್ರಿಯನಿದ್ದು ಅದೇ ಜನ್ಮದಲ್ಲಿ ಬ್ರಾಹ್ಮಣನಾಗಲಿಲ್ಲವೆ ?

ಮಾಧವಾಚಾರ್ಯ— ಬ್ರಾಹ್ಮಣೋತ್ತಮರೇ, ಪುರಾಣದ ಯಾವದೊಂದು ಕಥೆಯ ಮೇಲ್ಮೈಯಲ್ಲಿ ಸುತ್ತಿಯಾಡುವದಕ್ಕಿಂತ ಅದರ ಅಂತರಂಗದಲ್ಲಿ ಪ್ರವೇಶಿಸಿ ಆ ಕಥೆಯ ಮರ್ಮವನ್ನು ಅರಿತುಕೊಳ್ಳಲಿಕ್ಕೆ ನಾವು ಯಾವಾಗಲೂ ಯತ್ನಿಸತಕ್ಕದ್ದು. ವಿಶ್ವಾಮಿತ್ರ ಮಹರ್ಷಿಗಳ ಉದಾಹರಣವನ್ನೂ, ಅದೇ ಜನ್ಮದಲ್ಲಿ ಬ್ರಾಹ್ಮಣರಾಗುವದಕ್ಕೆ, ಅಥವಾ ಜಾತ್ಯಂತರ ಮಾಡಲಿಕ್ಕೆ ಸಾಧಕವಾಗಿ ಕೊಡುವದಕ್ಕಿಂತ ಬಾಧಕವಾಗಿ ಕೊಡುವದು ಯೋಗ್ಯವು. ವಿಶ್ವಾಮಿತ್ರನ ಜನ್ಮದ ವಿಲಕ್ಷಣ ಪ್ರಸಂಗವನ್ನೂ, ಆತನು ಬ್ರಾಹ್ಮಣನಾಗಲಿಕ್ಕೆ ಮಾಡಿದ ವಿಶ್ವಸಾಹಸವನ್ನೂ, ಕಡೆಗೆ ಆತನು ವಶಿಷ್ಠರ ಮತದಂತೆ ಹೃದಯದಿಂದ ಬ್ರಾಹ್ಮಣನೆನಿಸಿದರೂ ದೇಹದಿಂದ ಬ್ರಾಹ್ಮಣ ನಾಗದಿರುವದರಿಂದ ಆತನು ತನ್ನ ತಪೋಬಲದಿಂದ ಶ್ರೀ ಸೂರ್ಯನಾರಾಯಣನ ಸಹಸ್ರಕಿರಣ ಗಳಿಂದ ತನ್ನ ಕ್ಷತ್ರಿಯ ದೇಹವನ್ನು ಶುದ್ಧೀಕರಿಸಿಕೊಂಡದ್ದನ್ನೂ ಮನಸ್ಸಿನಲ್ಲಿ ತಂದರೆ, ಮುಖ್ಯವಾಗಿ ಚತುರ್ವರ್ಣಾತ್ಮಕ ವೈದಿಕಮತದಂತೆ ಒಂದೇ ಜನ್ಮದಲ್ಲಿ ಜಾತ್ಯಂತರ ಮಾಡುವದು ಅಶಕ್ಯವೆಂತಲೇ ಹೇಳಬೇಕಾಗುತ್ತದೆ. ನಮ್ಮ ಉದ್ಧಾರವಾಗುವದು ಮುಖ್ಯ ಕೆಲಸವಲ್ಲದೆ ಯಾವದೊಂದು ಜಾತಿಯವರಾಗುವದು ಮುಖ್ಯ ಕೆಲಸವಲ್ಲ! ಕೇವಲ ಜಾತಿ ಮಾತ್ರದಿಂದ ಉದ್ಧಾರವಾಗುವರೆಂದು ಯಾವ ಜಾತಿಯಲ್ಲಿಯೂ ಹೇಳಿಲ್ಲ. ಅಂದಬಳಿಕ ತಮ್ಮ ತಮ್ಮ ಜಾತಿಗಳೇ ಉದ್ಧಾರಕ್ಕೆ ಸಾಧನವಾಗಿರುವಾಗ ಬೇರೆ ಜಾತಿಯವರಾಗುವ ಭಯಪ್ರದ ಕೆಲಸಕ್ಕೆ ಯಾಕೆ ಹೋಗಬೇಕು.

ಕಾಸಿಮುಖಾನ— ನಮ್ಮವರು ನಿಮ್ಮ ಹಿಂದುಗಳೊಳಗಿನ ಬೇಕಾದ ಜಾತಿಯವರನ್ನು ಸುನತಿಮಾಡಿ ನಮ್ಮ ಜಾತಿಯಲ್ಲಿ ತಕೊಳ್ಳುವರಲ್ಲ?

ಮಾಧವಾಚಾರ್ಯ— ಹಾಗೆ ತಕ್ಕೊಳ್ಳಲಿಕ್ಕೆ ಮಹಾತ್ಮರಾದ ನಿಮ್ಮ ಮಹಮ್ಮದ ಪೈಗಂಬರರ ಅಪ್ಪಣೆಯಿರುವದರಿಂದ ನೀವು ಹಾಗೆ ಮಾಡಬಹುದು; ಹಾಗೆ ನಮ್ಮ ಧರ್ಮದ ಆಜ್ಞೆಯಿಲ್ಲದ್ದರಿಂದ ನಾವು ಹಾಗೆ ಮಾಡಲಾಗದು, ದೊಡ್ಡವರ ಆಜ್ಞೆಗೆ ಹೊರಗಾಗುವದು ಹ್ಯಾಗೆ? ಈಗ ನಮ್ಮ ವೈದಿಕ ಧರ್ಮದೊಳಗಿನದೇ ಒಂದು ಉದಾಹರಣೆಯನ್ನು ಹೇಳುವೆನು ಕೇಳಿರಿ. ನಮ್ಮ ಬ್ರಾಹ್ಮಣ ಋಷಿಗಳು ಸೂತಕಗಳನ್ನು ಪಾಲಿಸಬೇಕೆಂದು ಹೇಳಿರುವದರಿಂದ ''ಜಾತಾಶೌಚ, ಮೃತಾಶೌಚ, ರಜಸ್ವಲಾದೋಷ'' ಮೊದಲಾದವನ್ನು ನಾವು ಪಾಲಿಸುವೆವು; ಆದರೆ ನಮ್ಮ ವೀರಶೈವ ಬಾಂಧವರ ಪೂರ್ವಾಚಾರ್ಯರವರು ಲಿಂಗಧರಿಸಿದವರನ್ನು ಸೂತಕಗಳು ಬಾಧಿಸಲಾರವೆಂದು ಹೇಳಿದ್ದರಿಂದ ಅವರು ಸೂತಕಗಳನ್ನು ಪಾಲಿಸುವದಿಲ್ಲ; ಆದರೆ ಅದೇ ಲಿಂಗಾಯತರಿಗೆ ಲಿಂಗಧಾರಣವಿಲ್ಲದ ಭವಿಗಳೊಡನೆ ಪ್ರಾಮುಖ್ಯವಾಗಿ ಧಾರ್ಮಿಕ ಬಳಿಕೆ ಮಾಡಲಿಕ್ಕೆ ಆಜ್ಞೆಯಿಲ್ಲ. ಆದ್ದರಿಂದ ಧರ್ಮಸ್ಥಾಪಕರಾದ ಆಚಾರ್ಯರ ವಚನವೇ ಪ್ರಮಾಣವೆಂದು ತಿಳಿಯಬೇಕು.

ಕಾಶಿಮುಖಾನ— ಹಾಗಾದರೆ ಅಂತ್ಯಜೋದ್ಧಾರ ಮಾಡುತ್ತೇವೆನ್ನುವವರ ಕಥೆಯೇನು?

ಮಾಧವಾಚಾರ್ಯ– ಹಾಗೆ ಅನ್ನುವವರ ಕೃತಿಯು ಸಶಾಸ್ತ್ರವಾದದ್ದಿದ್ದರೆ, ಅವರ ಉದ್ದೇಶವೇನು ಕೆಡಕಲ್ಲ. ನಿಜವಾದ ಸಂಗತಿಯೆಂದರೆ, ಒಬ್ಬರ ಉದ್ಧಾರವನ್ನು ಒಬ್ಬರು ಮಾಡಲಾರರು. ''ಆತ್ಮೈವಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ'' ಎಂಬ ಉಕ್ತಿಯಂತೆ ತನ್ನ ಉದ್ಧಾರವನ್ನು ತಾನು ಮಾಡಿಕೊಂಡು ತನ್ನ ಬಂಧುವು ತಾನೇ ಆಗಲಿಕ್ಕೂ, ತನ್ನ ಅಧಃಪತನವನ್ನು

ತಾನು ಮಾಡಿಕೊಂಡು ತನ್ನ ಶತ್ರುವು ತಾನೇ ಆಗಲಿಕ್ಕೂ ಆತ್ಮನು ಸ್ವತಂತ್ರನಿರುತ್ತಾನೆ ! ಉದ್ಧಾರವೆಂದರೆ ವಿಷಯ ವಾಸನೆಯಿಲ್ಲದ ಮನಸ್ಸಿನವನಾಗುವದು; ಅಧಃಪತನವೆಂದರೆ, ವಿಷಯ ವಾಸನೆಯುಳ್ಳ ಮನಸ್ಸಿನವನಾಗುವದು : ಆದ್ದರಿಂದಲೇ ಮುಕ್ತಿಬಿಂದೂಪನಿಷತ್ತಿನಲ್ಲಿ– ''ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ! ಬಂಧಂಚ ವಿಷಯಾಸಕ್ತಂ ಮೋಕ್ಷಂ ನಿರ್ವಿಷಯಂ ಸ್ಮೃತಂ'' ಎಂದು ಹೇಳಿರುವದು. ''ಜತಿಯಂತೆ ಮತಿ'' ಎಂಬ ಕನ್ನಡ ನುಡಿಯಂತೆ ಮನಸ್ಸಿನ ಘಟನೆಯು ಸಹವಾಸದಂತೆ ಆಗುವದರಿಂದ ಅನ್ಯರನ್ನು ಉದ್ಧರಿಸ ಹೋಗುವವರು ಆ ಉದ್ಧೃತರಾಗುವವರಿಗೆ ಸತ್ಸಮಾಗಮವನ್ನು ಒದಗಿಸಿಕೊಡಬಹುದು. ಸತ್ಸಮಾಗಮವು ಅಂತರಂಗಕ್ಕೆ ಸಂಬಂಧಿಸಿದ್ದೆಂತಲೂ, ಬಹಿರಂಗಕ್ಕೆ ಸಂಬಂಧಿಸಿದೆಂತಲೂ ಎರಡು ವಿಧವಾಗಿರುವದು. ಅಂತರಂಗಕ್ಕೆ ಸಂಬಂಧಿಸಿದ ಸತ್ಸಹವಾಸವೆಂದರೆ ಅಂತಃಕರಣ ಶುದ್ಧಿಯುಳ್ಳ ಸದಾತ್ಮನ ಸಹವಾಸವು; ಬಹಿರಂಗಕ್ಕೆ ಸಂಬಂಧಿಸಿದ ಸತ್ಸಹವಾಸವೆಂದರೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ ಕ್ರಮವಾಗಿ ಸದ್ವಿಷಯ ಸತ್ಕಾರ್ಯಗಳ ಸಹವಾಸವನ್ನೊದಗಿಸಿ ಕೊಡವದು. ಒಟ್ಟಿಗೆ ಅಂತಃಕರಣ ಶುದ್ಧಿಯುಳ್ಳ ಹಾಗೂ ಸದ್ವಿಷಯ ಸತ್ಕರ್ಮಗಳಲ್ಲಿ ವ್ಯವಹರಿಸುವ ಸ್ವಸ್ವರೂಪಜ್ಞಾನಿಯಾದ ಮಹಾತ್ಮನ ಸಹವಾಸವು ಮಾತ್ರ ಅನ್ಯರ ಉದ್ಧಾರಕ್ಕೆ ಅಪ್ರತ್ಯಕ್ಷ ಕಾರಣವಾಗಬಹುದು; ಯಾಕಂದರೆ ಅಂಥ ಸತ್ಪುರುಷನ ಆಜ್ಞಾಪಾಲನರೂಪವಾದ, ನಿಸ್ಪೃಹತೆಯ ತಪಶ್ಚರ್ಯವನ್ನು ಆಚರಿಸಿದ ಹೊರತು ಸತ್ಸಮಾಗಮ ಪಡೆದವನ ಉದ್ಧಾರವು ಆಗಲಾರದು; ಆದ್ದರಿಂದಲೇ ಸಜ್ಜನರು ಆಗಾಗ್ಗೆ ಜಗತ್ತಿನಲ್ಲಿ ಉತ್ಪನ್ನವಾಗುತ್ತಿದ್ದರೂ ಅಂಥವರ ಸಹವಾಸವು ಔಪಚಾರಿಕವಾಗಿ ಹಲವರಿಗೆ ಆಗುತ್ತಿದ್ದರೂ ತಪಸ್ವಿತೆಯ ಅಭಾವದ ಮೂಲಕ ಸಹವಾಸದವರು ಉದ್ಧಾರವಾಗದೆ ಹೋಗಲು ಸಜ್ಜನರು ಪಶ್ಚಾತ್ತಾಪಪಡುತ್ತ ಬಂದಹಾಗೆ ಹೊರಟುಹೋಗುತ್ತಿರುವರು; ಆದ್ದರಿಂದ ಮಂದಿಯನ್ನು ಉದ್ಧರಿಸುತ್ತೇನೆನ್ನುವದು ಅತ್ತವರ ಕಣ್ಣು ಒರಿಸಿದ ಹಾಗೆಯೇ ಸರಿ ! ನಿಜವಾಗಿಯೇ ಅನ್ಯರನ್ನು ಉದ್ಧರಿಸುವ ಸಾಮರ್ಥ್ಯವುಳ್ಳವರು ಹೀಗೆ ಹುರುಳಿಲ್ಲದ ಮೇಲುಪಚಾರದ ಮಾತುಗಳನ್ನು ಆಡುವುದಿಲ್ಲ.

ಕಾಶಿಮುಖಾನ, ಒಟ್ಟಿಗೆ ನಾವು ಹೀನರಾಗಲಿಕ್ಕೂ, ಉಚ್ಚರಾಗಲಿಕ್ಕೂ ಸಮಾಗಮ ಮೂಲವಾದ ಕರ್ಮಗಳೇ ಕಾರಣವು. ಆದ್ದರಿಂದ ದುಷ್ಟ ಸಹವಾಸದಿಂದ ಉತ್ಪನ್ನವಾಗುವ ಪಾಪದ ಪರಮಾವಧಿಯಿಂದ ಚಾಂಡಾಲರಾಗಿ ಹುಟ್ಟಿದವರು, ಸತ್ಸಮಾಗಮದಿಂದ ಪುಣ್ಯಶಾಲಿಗಳಾಗಿ ಚಾಂಡಾಲತ್ವವನ್ನು ನೀಗಬೇಕಾಗುವದಲ್ಲದೆ, ಮಂದಿ ಉದ್ಧರಿಸಿದರೆ ಉದ್ಧೃತರಾಗಲಾರರು. ಈಗ ಚಾಂಡಾಲರಾಗಿ ಹುಟ್ಟಿರುವವರೇ ಪುನಃ ಚಾಂಡಾಲರಾಗಿ ಹುಟ್ಟುವರಂತಲ್ಲ; ಬ್ರಾಹ್ಮಣರೂ–ಬೇರೆ ಶ್ರೇಷ್ಠವರ್ಣದವರೂ ತಮ್ಮ ತಮ್ಮ ದುಷ್ಕರ್ಮದ ಪರಿಪಾಕದಿಂದ ಚಾಂಡಾಲರಾಗಿ ಹುಟ್ಟಬಹುದು. ಪ್ರತಿ ಒಬ್ಬನು ತಾನು ಮಾಡಿದ ಕರ್ಮದ ಫಲವನ್ನು ತಾನು ಉಣ್ಣುವನು; ಅಂದಬಳಿಕ ಚಾಂಡಾಲಜನ್ಮಕ್ಕೆ ಕಾರಣರಲ್ಲದ ನಾವು, ಅನ್ಯರ ಚಾಂಡಾಲಜನ್ಮವನ್ನು ನೀಗಲಿಕ್ಕೆ ಹ್ಯಾಗೆ ಸಮರ್ಥರಾದೇವು? ಅಂಥ ಮಹಾತ್ಮರು ಕರುಣಾಶಾಲಿಗಳಾಗಿ ತಮ್ಮ ಅಗಾಧವಾದ ದೈವೀ ಸಾಮರ್ಥ್ಯದಿಂದ ಹೊಸ ಪಂಥವನ್ನು ಸ್ಥಾಪಿಸಿ

ಅಂತ್ಯಜಜಾತಿಯವರನ್ನು ತಾವು ಉತ್ಪನ್ನ ಮಾಡಿದ ಹೊಸಜಾತಿಯಲ್ಲಿ ಸೇರಿಸಿಕೊಳ್ಳದಿದ್ದರೆ, ಅಂತ್ಯಜರು ನ್ಯಾಯತಃ ತಮ್ಮ ಜಾತಿಯಲ್ಲಿಯೇ ತಾವಿರಬೇಕಾಗುವದು ! ಆತ್ಮವಸ್ತುವು ಸ್ವತಂತ್ರವಿದ್ದು, ಅದು ಸ್ವಸ್ವರೂಪಜ್ಞಾನದಿಂದ ಉಂಟಾಗುವ ಸ್ವಾತಂತ್ರ್ಯದ ಅಖಂಡಾನಂದವನ್ನಾದರೂ ಭೋಗಿಸಬಹುದು.ಇಲ್ಲದಿದ್ದರೆ ತನಗಿಂತಲು ಗೌಣವಾಗಿರುವ ತನ್ನ ಕರ್ತೃತ್ವಶಕ್ತಿಯ ಫಲದಿಂದ ಉತ್ಪನ್ನವಾಗುವ ಪರಾಧೀನತೆಯ ಖಂಡಾನಂದವನ್ನಾದರೂ ಭೋಗಿಸಬಹುದು. ಈ ಖಂಡಾನಂದವೇ ಸುಖ-ದುಃಖಗಳೆಂದು ಕರೆಸಿಕೊಳ್ಳುವದು. ಒಟ್ಟಿಗೆ ಮನುಷ್ಯನ ನೀಚೋಚ್ಚಾವಸ್ಥೆಗಳು ಅವನ ಮನೋವೃತ್ತಿಯನ್ನನುಸರಿಸಿರುವವಲ್ಲದೆ, ಅವನ ಬಾಹ್ಯಾಡಂಬರವನ್ನು ಅನುಸರಿಸಿರುವದಿಲ್ಲ. ಇದನ್ನರಿಯದೇ ಅಂತ್ಯಜೋದ್ಧಾರಕರು ಒಳಗೆ ಹೆಗ್ಗಣವಿಟ್ಟು ಮೇಲೆ ಗಿಲಾಯ ಮಾಡುವ ಚಂದದಿಂದ ಸ್ವಚ್ಛತೆ, ವಿದ್ಯಾಭ್ಯಾಸ, ದ್ರವ್ಯೋತ್ಪಾದನ, ಅಸ್ಪೃಶ್ಯತೆಯ ನಿವಾರಣ ಮುಂತಾದ ಬಾಹ್ಯೋಪಚಾರಗಳಿಂದ ಅಂತ್ಯಜರ ಉದ್ಧಾರ ಮಾಡಹೋಗುವದರಿಂದ ಅಂತ್ಯಜರ ನಿಜವಾದ ಉದ್ಧಾರವಾಗಲಾರದು. ಕೊಳಕ ಅವಯವದ ಸಂಸರ್ಗದಿಂದ ದೇಹದ ಉಳಿದ ಅವಯವಗಳು ಕೊಳೆಯುತ್ತ ಹೋಗುವಂತೆ, ಸಮಾಜದ ಅಸ್ಪೃಶ್ಯರ ಸರಿಬಿರಕೆಯ ಬಳಿಕೆಯಿಂದ ವೈದಿಕ ಸದ್ಭಾವನೆಯ ನಾಶವಾಗಿ ಸಮಾಜದ ಸಾರ್ವತ್ರಿಕ ಹಾನಿಯಾಗುವ ಸಂಭವವು ವಿಶೇಷವಾಗಿರುತ್ತದೆ. ''ಅಸ್ಪೃಶ್ಯರ ಕೆಲಸಗಳಂತು ಸಮಾಜದಲ್ಲಿ ಇದ್ದೇ ಇರತಕ್ಕವಾದ್ದರಿಂದ, ಈಗಿನ ಅಸ್ಪೃಶ್ಯರು ತಮ್ಮ ಹೀನ ಕರ್ಮಗಳನ್ನು ಬಿಟ್ಟು ಸ್ಪೃಶ್ಯರಾಗುವದರೊಳಗೆ ಬೇರೆಯವರು ಆ ಕರ್ಮಗಳನ್ನು ಮಾಡಿ ನ್ಯಾಯದಿಂದ ಅಸ್ಪೃಶ್ಯರಾಗಬೇಕಾಗುವದು. ಹೀಗೆ ಆರ್ಯಭಾವನೆಯ ಸಮಾಜಘಟನೆಯ ವಿಧ್ವಂಸ ಮಾಡುವದು ಧಾರ್ಮಿಕ ದೃಷ್ಟಿಯಿಂದ ಸರ್ವಥಾ ಹಿತಕರವಲ್ಲ; ಅದು ನಡೆಯುವ ಮಾತೂ ಅಲ್ಲ; ಅದು ಸಂಪೂರ್ಣವಾಗಿ ನಡೆದ ದಿವಸ ಆಮೂಲಾಗ್ರ ಅಸ್ಪೃಶ್ಯತೆಯ ನಾಶವಾಗಿ, ಆರ್ಯಸಂಸ್ಕೃತಿಯ, ಹಾಗು ಆರ್ಯರ ಉದಾತ್ತವಾದ ಭಾವನೆಯ ಲೋಪವು ಆಗದೆ ಇರಲಿಕ್ಕಿಲ್ಲ! ಕಲಿಯುಗದಲ್ಲಿ ಹೀಗಾಗುವ ಭವಿಷ್ಯವನ್ನು ಜ್ಞಾನಿಗಳು ದುಃಖದಿಂದ ಬರೆದು ಇಟ್ಟಿದ್ದರೂ, ಅವರ ಆ ದುಃಖದ ದಿವಸಗಳನ್ನು ಬೇಗನೆ ಬರಮಾಡುವದು ವೈದಿಕರಲ್ಲಿಯ ಶ್ರೇಷ್ಠರೆನಿಸಿಕೊಳ್ಳುವವರಿಗೆ ಭೂಷಣವಲ್ಲ.

ಕಾಶಿಮುಖಾನ, ನಾವು ಯಾವದೊಂದು ಶ್ರೇಷ್ಠ ಜಾತಿಯಲ್ಲಿ ಹುಟ್ಟಿದ ಮಾತ್ರದಿಂದ ಚಾಂಡಾಲತ್ವದಿಂದ ಮುಕ್ತರಾಗಲಿಲ್ಲ; ಅಥವಾ ಚಾಂಡಾಲರು ಚಾಂಡಾಲ ಜಾತಿಯಲ್ಲಿ ಹುಟ್ಟಿದಮಾತ್ರದಿಂದ ಚಾಂಡಾಲರಾಗಿ ಹೋದರೆಂತಲೂ ಹೇಳಲಾಗುವದಿಲ್ಲ. ಶ್ರೇಷ್ಠ ಜಾತಿಯವರು ತಮ್ಮ ದುಷ್ಟಭಾವದ ಬರಿಯ ಆಡಂಬರದ ಬಾಹ್ಯ ಸತ್ಕರ್ಮಗಳಿಂದ ಚಾಂಡಾಲರಿಗಿಂತಲೂ ಕಡೆಯಾಗಿರಬಹುದು; ಮತ್ತು ಚಾಂಡಾಲರು ಸದ್ಭಾವದ ಬರಿಯ ಕರ್ತವ್ಯರೂಪ ಬಾಹ್ಯ ದುಷ್ಕರ್ಮಗಳಿಂದ ಶ್ರೇಷ್ಠ ವರ್ಣದವರಿಗೂ ಗುರುಗಳಾಗುವ ಯೋಗ್ಯತೆಯವರಿರಬಹುದು; ಆದ್ದರಿಂದಲೇ ಶ್ರೀಮಚ್ಛಂಕರಾಚಾರ್ಯರು—''ಚಾಂಡಾಲೋಸ್ತು ಸತುದ್ವಿಜ್ಯೋಸ್ತು ಗುರುರಿತ್ಯೇತಾ ಮನೀಷಾ ಮಮ'' ಎಂದು ಹೇಳಿದ್ದನ್ನು ಪುನಃ ಇಲ್ಲಿ ಹೇಳುವೆವು ! ಇದನ್ನರಿತು ಅಶಾಸ್ತ್ರೀಯ ರೀತಿಯಿಂದ ಚಾಂಡಾಲರನ್ನು ಉದ್ಧರಿಸಹೋಗುವವರು, ತಾವು

ಮೊದಲು ಚಾಂಡಾಲತ್ವದಿಂದ ಮುಕ್ತರಾಗಿರುವೆವೋ ಇಲ್ಲವೋ ಎಂಬುದನ್ನು ವಿವೇಕದಿಂದ ನೋಡಿಕೊಳ್ಳಬೇಕು. ಚಾಂಡಾಲರು ಸತ್ತದನಗಳನ್ನು ತಿಂದರೆ, ಎಷ್ಟೋ ಶ್ರೇಷ್ಠ ವರ್ಣದವರು ಮನುಷ್ಯರ ಬಹಿಃಪ್ರಾಣವೆನಿಸುವ ಪರದ್ರವ್ಯ ಶೋಷಣ ಮಾಡಿ ಜೀವಂತ ಮನುಷ್ಯರ ರಕ್ತ ಶೋಷಣ ಮಾಡುತ್ತಿರುವದನ್ನು ಮರೆಯಬಾರದು; ಅದರಂತೆ, ಅಂತ್ಯಜರು ದೇಹ ವಸ್ತ್ರಾದಿಗಳ ಮಾಲಿನ್ಯದಿಂದ ಅಸ್ಪೃಶ್ಯರಾಗಿದ್ದರೆ, ಶ್ರೇಷ್ಠ ವರ್ಣದವರೆನಿಸುವವರು ಅಸತ್ಯ ಭಾಷಣ, ಪರನಿಂದೆ, ಪರವಧೂಸಂಗ, ಕುಟಿಲ ಕುಯುಕ್ತಿ, ಕಪಟ, ನಿರ್ದಯ, ಪಾರತಂತ್ರ್ಯ ಪ್ರೀತಿ, ಮೊದಲಾದ ಆತ್ಮಘಾತಕ ಗುಣಗಳಿಂದ ಅಸ್ಪೃಶ್ಯರಿಗೂ ಅಸ್ಪೃಶ್ಯರಾಗಿರುವರು; ಆದ್ದರಿಂದ ನಿಜವಾದ ಚಾಂಡಾಲತ್ವವು ಯಾವನೊಬ್ಬ ವ್ಯಕ್ತಿಯ ಜಾತಿಯಿಲ್ಲಿರದೆ ಆ ವ್ಯಕ್ತಿಯ ಮನೋವೃತ್ತಿಯಲ್ಲಿರುತ್ತದೆಂದು ತಿಳಿದು, ಚಾಂಡಾಲರ ಉದ್ಧಾರ ಮಾಡುವೆವೆನ್ನುವರು ಸ್ಪೃಶ್ಯಾಸ್ಪೃಶ್ಯದ ತೋರಿಕೆಯ ಕ್ಷುದ್ರ ಗೊಂದಲದಲ್ಲಿ ಸೇರದೆ, ವ್ಯಕ್ತಿಯ ಮನೋವೃತ್ತಿಯ ತಿದ್ದುಪಡೆಗಾಗಿ ಯತ್ನಿಸತಕ್ಕದ್ದು. ಕಾಶಿಮಖಾನ , ''ಶಾಸ್ತ್ರಾದ್ರೂಢಿರ್ಬಲೀಯಸಿ'' ಎಂಬ ನಿಯಮದಂತೆ ಕಾಲ-ಪರಿಸ್ಥಿತಿಗನುಸರಿಸಿ ಅಸ್ಪೃಶ್ಯ ವಿಚಾರವು ತಾನಾಗಿ ಶಿಥಿಲವಾಗುತ್ತದೆನ್ನಲಿಕ್ಕೆ, ಸ್ವತಃ ಮುಸಲ್ಮಾನರಾದ ನೀವು ಈಗ ನಮ್ಮ ಸಮಾಜದ ಮಧ್ಯದಲ್ಲಿ ಬಂದು ಕುಳಿತದ್ದೂ, ನಮ್ಮ ಅಂತ್ಯಜ ವರ್ಗವು ಈಗ ಇಷ್ಟು ಸನಿಯದಲ್ಲಿ ಬಂದು ಕುಳಿತದ್ದೂ ಸಾಕ್ಷಿಯಾಗಿರುವದು ! ಸಣ್ಣ ಕೆಲಸಕ್ಕೆ ಇಲ್ಲದ ಮಹತ್ವ ಕೊಟ್ಟು ಸಮಾಜವನ್ನು ಗೊಂದಲದಲ್ಲಿ ಹಾಕಿ ಮನಸ್ಸನ್ನು ವ್ಯಗ್ರಗೊಳಿಸುವದು ದೂರದರ್ಶಿಗಳ ಕೆಲಸವಲ್ಲ. ಎಲ್ಲರೂ ಕೂಡುವ ಪ್ರಸಂಗವನ್ನು ತರಬೇಕಲ್ಲದೆ, ಮುಂದೆ ಪ್ರಸಂಗ ಬರುವದೆಂದು ಈಗಲೇ ಎಲ್ಲರನ್ನೂ ಕೂಡಿಸಹೋಗಬಾರದು; ಕೂಡಿ ಇರುವದು ಅಗಲಿ ಇರುವದು ಪ್ರಸಂಗದ ಮೇಲಿರುವದರಿಂದ ಅದನ್ನು ಪ್ರಧಾನ ವಿಷಯವೆಂದು ತಿಳಿದು ಅದಕ್ಕಾಗಿ ದೀರ್ಘಪ್ರಯತ್ನ ಮಾಡುವದು ತಕ್ಕದ್ದಲ್ಲ.

ಕಾಶಿಮಖಾನ, ನಿಜವಾದ ಅಂತ್ಯಜೋದ್ಧಾರಕರು ಅಂತ್ಯಜರ ಉದ್ಧಾರಕ್ಕಾಗಿ ಮಾಡಬೇಕಾದ ಯತ್ನಗಳನ್ನು ಹೇಳುವೆನು ಕೇಳು. ಸಮಾಜದ ಹೀನ ಕಾರ್ಯಗಳನ್ನು ಮಾಡಿ ಸಮಾಜವನ್ನು ಋಣಿಯಾಗಮಾಡುವ ಅಂತ್ಯಜರು ಪರಮೋದಾರರೆಂದು ತಿಳಿದು ಅವರ ಸ್ಥಿತಿಗತಿಯ ತಿದ್ದುಪಡೆಗಾಗಿ ಶ್ರೇಷ್ಠ ವರ್ಣದವರು, ತತ್ರಾಪಿ ಅಂತ್ಯಜೋದ್ಧಾರರೆನ್ನಿಸಿಕೊಳ್ಳುವವರು ಧನತ್ಯಾಗರೂಪವಾದ ಔದಾರ್ಯವನ್ನು ಮೊಟ್ಟಮೊದಲು ಸ್ವತಃ ಮಾಡಿ ತೋರಿಸಬೇಕು. ಆಮೇಲೆ ಅಂತ್ಯಜರು ನೀತಿವಂತರೂ, ಆರೋಗ್ಯವಂತರೂ ವಿದ್ಯಾವಂತರೂ ಆಗುವಂತೆಯೂ, ಅವರು ತಮ್ಮ ಜೀವನಕ್ರಮವನ್ನು ಹತ್ತು ಜನರಂತೆ ಸಮಾಧಾನಕರವಾಗಿ ಸಾಗಿಸಿಕೊಂಡು ಹೋಗಲು ಯೋಗ್ಯರಾಗುವಂತೆಯೂ ಯತ್ನಿಸುವ ವಿಷಯದಲ್ಲಿ ಆ ಉದ್ಧಾರಕರು ದೇಹದಂಡನ ಮಾಡತಕ್ಕದ್ದು. ಹೀಗೆ ಅಂತ್ಯಜರ ಸಲುವಾಗಿ ತಾವು ಬಡವರಾಗುವದರಲ್ಲಿಯೂ, ಕಷ್ಟಪಡುವದರಲ್ಲಿಯೂ ಅವರ ಉದ್ಧಾರದ ಬೀಜವಿರುತ್ತದಲ್ಲದೆ, ಅವರನ್ನು ಮುಟ್ಟಿ ಬಳಿಕೆ ಮಾಡುವದರಲ್ಲಿ ಅಥವಾ ಅವರೊಡನೆ ಊಟ ಮಾಡುವದರಲ್ಲಿ ಇಲ್ಲವೆ ಅವರ ಕೈಯಿಂದ

ಕೆರಕಟ್ಟೆಗಳನ್ನು ಮುಟ್ಟಿಸಿ ಆರ್ಯಭಾವನೆಯ ವಿಧ್ವಂಸ ಮಾಡುವದರಲ್ಲಿ ಏನೂ ಅರ್ಥವಿಲ್ಲ! ಅಂತ್ಯಜೋದ್ಧಾರಕ್ಕಾಗಿ ಸರ್ವಸ್ವವನ್ನು ಅರ್ಪಿಸಿ ಬಡವರಾಗಿ ಪರಿಪರಿಯ ಕಷ್ಟಗಳನ್ನು ಭೋಗಿಸುವವರು, ಅಂತ್ಯಜೋದ್ಧಾರರೆನಿಸಿಕೊಳ್ಳುವವರಲ್ಲಿ ಎಷ್ಟು ಜನರಿರುವರು? ಕೆರೆಯ ನೀರು ಕೆರೆಗೆ ಹಾಕಿ ವರವ ಪಡೆಯಹೋಗುವ ನಿರರ್ಥಕ ಜನರಂತೆ, ಕೈಯಿಂದ ಕಾಸು ವೆಚ್ಚ ಮಾಡದೆ ಮೊದಲು ತಮ್ಮ ಭಾವನೆಯನ್ನು ಅಧರ್ಮಾಚರಣೆಯಿಂದ ಮಲಿನವಾಗಿ ಮಾಡಿಕೊಂಡು ಮಂದಿಯ ಭಾವನೆಯನ್ನು ಹಾಗೆ ಮಾಡಹೋಗುವವರು ನಿಶ್ಚಯವಾಗಿ ವೈದಿಕ ಧರ್ಮದ ದ್ರೋಹವನ್ನು ಕಟ್ಟಿಕೊಳ್ಳಬೇಕಾಗುವದು. ನಮ್ಮ ಸನ್ಮಾನ್ಯರಾದ ವಿರೂಪಾಕ್ಷಾರ್ಯರು ಹೇಳಿದ ತತ್ವವನ್ನು ಅಂದರೆ — ''ಬಹಿರಂಗದ ಬಹುತ್ವದಲ್ಲಿ ಅಂತರಂಗದ ಏಕತ್ವವನ್ನು ಕಾಣಬೇಕೆಂಬ'' ಅಬಾಧಿತ ತತ್ವವನ್ನು ಲಕ್ಷದಲ್ಲಿಟ್ಟು ಆರ್ಯಸಂಸ್ಕೃತಿಗೆ ಬಾಧೆಬಾರದಂತೆ ಬೇಕಾದ ಸುಧಾರಣೆಯನ್ನು ಮಾಡಬಹುದು. ಹಾಗೆ ಮಾಡದೆ ಬಹಿರಂಗದ ಏಕತ್ವ ಘಟನೆಯ ಅಶ್ಯಕ್ಯ ಕಾರ್ಯಕ್ಕೆ ತೊಡಗಿದರೆ,ಬಹುತ್ವವನ್ನು ಮಾತ್ರ ಹೆಚ್ಚಿಸಿದ ಹಾಗಾಗುತ್ತದೆಂಬುದನ್ನು ಅನುಭವವೂ–ಇತಿಹಾಸವೂ ಹೇಳುತ್ತಿರುವದನ್ನು ದುರ್ಲಕ್ಷಿಸಿದ ಹಾಗಾಗುತ್ತದೆ. ಧಾರ್ಮಿಕ ಪಾವಿತ್ರ್ಯವನ್ನು ಕೆಡಿಸಿಕೊಂಡು ಏನು ಸಂಪಾದಿಸಿದರೂ ಅದು ನಿರರ್ಥಕವೇ ಸರಿ! ಯಾಕಂದರೆ ಧರ್ಮಕ್ಕಿಂತ ಶ್ರೇಷ್ಠವಾದ ಆತ್ಮೋದ್ಧಾರದ ಸಾಧನವು ಮತ್ತೊಂದಿಲ್ಲ; ಆದ್ದರಿಂದ ವೈದಿಕ ಧರ್ಮದವರು ತಮ್ಮ ಧರ್ಮದ ವಿಶಿಷ್ಟ ಲಕ್ಷಣವಾದ ಸ್ಪೃಶ್ಯಾಸ್ಪೃತೆಯನ್ನು ಧಾರ್ಮಿಕ ವ್ಯವಹಾರದಲ್ಲಿ ಪಾಲಿಸಲೇಬೇಕು.

## ಅಸ್ಪೃಶ್ಯತೆಯೂ, ರಾಜಕೀಯ ವ್ಯವಹಾರವೂ

ಮಾಧವಾಚಾರ್ಯರ ಈ ನಿರೂಪಣದಿಂದ ಎಲ್ಲರೂ ಸಮಾಧಾನಪಟ್ಟರು.ಅವರ ಮಾತಿನಿಂದ ಅಸ್ಪೃಶ್ಯರಿಗೂ ಸಮಾಧಾನವಾಯಿತು. ಅವರ ಮುಖ್ಯಸ್ಥನಾದ ದುರುಗಪ್ಪನು ಎದ್ದುನಿಂತು– ''ಯಪ್ಪಾ, ನೀವು ಹೇಳಿದ್ದು ಬರಾಬರಿ ! ದೇವರು–ದಿಂಡರ ಕೆಲಸದಲ್ಲಿ ನಿಮ್ಮನ್ನು ಮುಟ್ಟಿ ನಾವು ಯಾವ ಪಾಪಕ್ಕೆ ಹೋಗೋಣ ? ನೀವು ನಿಮ್ಮಷ್ಟಕ್ಕೆ – ನಾವು ನಮ್ಮಷ್ಟಕ್ಕೆ; ನಿಮ್ಮ ದೇವರು ನಿಮಗೆ –ನಮ್ಮ ದೇವರು ನಮಗೆ; ನಮ್ಮ ಪೂಜೆಯ ದೇವರು ದುರಗವ್ವ–ಕಾಳವ್ವ–ದೇಮವ್ವ ! ಅವರ ಪೂಜೆಯನ್ನು ನಮ್ಮ ಕೇರಿಯಲ್ಲಿ ನಾವು ನಮ್ಮ ರೀತಿಯಿಂದ ಮಾಡೇಮಾಡುವೆವು, ನಿಮಗೂ – ನಿಮ್ಮ ದೇವರಿಗೂ ನಾವು ದೂರದಿಂದ ಶರಣು ಮಾಡಿದರಾಯಿತು. ನೀವು ನಿಮ್ಮ ಹಾಗಿರಬೇಕು–ನಾವು ನಮ್ಮ ಹಾಗಿರಬೇಕು ನಮ್ಮ ಹಾಗೆ ನೀವು ಹ್ಯಾಗಾದೀರಿ; ನಿಮ್ಮ ಹಾಗೆ ನಾವು ಹ್ಯಾಗಾದೇವು? ನನ್ನೊಡೆಯಾ, ನಮಗೂ–ನಿಮಗೂ ಎಲ್ಲಿ ಬಿಟ್ಟುಹೋಗಿರುವದು? ಊರು ಇದ್ದಲ್ಲಿ ಹೊಲಿಗೇರಿ ಇರತಕ್ಕದ್ದೇ. ನಮ್ಮ ಹೊಲಿಯತನ ದಿಂದ ಊರ ಮರ್ಯಾದೆ–ಊರತನದಿಂದ ಹೊಲೆಯರ ಮರ್ಯಾದೆ. ಹೊಲಿಹದಿನೆಂಟು

ಜಾತಿ ಕೂಡಿದರೆ ದೈವವಾಗುವದು ! ನಾವಿಲ್ಲದೆ ನಿಮ್ಮ ಕೆಲಸ ನಡೆಯುವುದಿಲ್ಲ, ನೀವಿಲ್ಲದೆ ನಮ್ಮ ಕೆಲಸ ನಡೆಯುವದಿಲ್ಲ, ನಾವಿಬ್ಬರಿದ್ದರೆಯೇ ಊರ ಪಂಚಾಯಿತಿ, ನಾವಿಬ್ಬರಿದ್ದರೆಯೇ ಊರ ಆಡಳಿತ,ನಾವಿಬ್ಬರಿದ್ದರೆಯೇ ಊರ ಒಗರು ! ಊರ ಸುತ್ತುಬಂದರೆ ಊರು ಹೊಲಿಗೇರಿಯೂ ಒಂದೇ ! ಅಂದ ಬಳಿಕ ಊರತನದಲ್ಲಿನಾವು ಹೆಚ್ಚೇನು ನೀವು ಕಡಿಮೆಯೇನು? ನೀವು ಹೆಚ್ಚೇನು ನಾವು ಕಡಿಮೆಯೇನು? ಯಪ್ಪಾ, ಹೊತ್ತುಬಂದರೆ ನಮ್ಮ ಜೀವಕ್ಕೆ ನೀವು ಜೀವಾ ಕೊಟ್ಟೇರಿ, ನಿಮ್ಮ ಜೀವಕ್ಕೆ ನಾವು ಜೀವಾ ಕೊಟ್ಟೇವು. ಅದೂ ಇರಲಿ, ನಮ್ಮನ್ನು ಬಿಟ್ಟು ಊರ ಕೆಲಸವು ಯಾವದು ಆಗುವದು? ಜಾತರಿ ಬಂದರೆ ನಾವು ಬೇಕು; ತೇರು ಬಂದರೆ ನಾವು ಬೇಕು; ಸುಖಸೋಬನಕ್ಕೆ ನಾವು ಬೇಕು; ಸತ್ತರೆ–ಕೆಟ್ಟರೆ ನಾವು ಬೇಕು; ನಾವು ನಿಮಗೆ ಯಾತಕ್ಕೆ ಬೇಡ! ಬರೇ ಮುಟ್ಟಲಿಕ್ಕೆ ಬೇಡ! ಬಿಡ ಯಪ್ಪಾ ಅದಾವ ದೊಡ್ಡ ಮಾತು.ಯಾವಾಗಲೂ ಎಲ್ಲರೂ ಮುಟ್ಟಿಕೊಂಡೇ ಇರುತ್ತಾರೋ? ಮುಟ್ಟುವ ಹೊತ್ತು ಬಂದರೆ ಮುಟ್ಟೇ ಮುಟ್ಟುವೆವು. ನಮ್ಮೊಳಗಿನ ಒಳಜಾತಿಗಳ ಶೀಲಗಳಲ್ಲಿಯೇ ಹೆಚ್ಚು–ಕಡಿಮೆ ಇರುವಾಗ, ನಮ್ಮ ನಿಮ್ಮ ಶೀಲದಲ್ಲಿ ಹೆಚ್ಚು–ಕಡಿಮೆಯಾಕಿರಬಾರದು? ಶಿವ ಮಾಡಿದ ಹಾಗೆ ನಾವೂ–ನೀವೂ ಇದ್ದರಾಯಿತು. ಹೊಲೆಯನಾದರೇನು, ಹಾರುವನಾದರೇನು? ತಾವಿರುವ ಹಾಗಿದ್ದರೆ ಚಂದ, ಹಾರುವನು ಹೊಲೆಯನಾದರೆ–ಹೊಲೆಯರು ಹಾರುವನಾದರೆ ದೇವರು ಮೆಚ್ಚಿಯಾನೆ? ಪಾಪ! ನಮ್ಮ ಖಾನಸಾಹೇಬರಿಗೆ ನಮ್ಮದೇನು ಗೊತ್ತು! ಅವರು ಪರನಾಡ ಪಕ್ಷಿ! ಅವರ ನಡತೆ ಬೇರೆ–ನಮ್ಮ ನಡತೆ ಬೇರೆ, ನಮ್ಮ ದೇವರು ಬೇರೆ–ಅವರ ದೇವರು ಬೇರೆ. ಅವರದು ಅವರಿಗೇ ಹಸನ–ನಮ್ಮದು ನಮಗೇ ಹಸನ; ಆದರೆ ನಮ್ಮ ಖಾನಸಾಹೇಬರು ಬಲು ದೊಡ್ಡ ಮಂದಿ ! ಅವರ ಮನಸ್ಸು ಬಲು ಒಳ್ಳೆಯದು. ಹೊಲಿಯರ ಮೇಗೆ ನಮ್ಮಪ್ಪನು ಎಷ್ಟು ಜೀವಾಮಾಡುವನು ! ಆಗಲಿ ನನ್ನೊಡಯಾ, ಎಲ್ಲರೂ ಕೂಡಿ ಹೊಲಿಯರ ಹೊಲಸು ತೊಳೆಯಬೇಕೆನ್ನುವಿರಿ, ತೊಳೆಯಿರಿ'' ಎಂದು ನುಡಿದು ಮುಜರೆ ಮಾಡಿ ಕುಳಿತುಕೊಳ್ಳಲು, ಸಭಿಕರೆಲ್ಲರೂ ಆತನ ಮಾತಿಗೆ ಅಚ್ಚಿಮೆಚ್ಚಿ ತಲೆದೂಗಿದರು! ಆತನ ಮಾತಿನ ಯಥಾರ್ಥತೆಯ ಅಭಿನಂದನ ಮಾಡುವಾಗ ಸಭಾಸ್ಥಾನವು ಗುಜುಗುಟ್ಟತೊಡಗಿತು. ಅಷ್ಟರಲ್ಲಿ ಹುಕ್ಕದೊರೆಯು ಏನೋ ಕೇಳಬೇಕೆಂದು ಎದ್ದು ನಿಲ್ಲಲು, ಸಭಾಮಂಡಲವು ಮತ್ತೆ ಸ್ತಬ್ಧವಾಯಿತು.

ಹುಕ್ಕದೊರೆಯ ಪರಿಚಯವನ್ನು ನಾವು ವಾಚಕರಿಗೆ ಮಾಡಿಕೊಡುವ ಕಾರಣವಿಲ್ಲ. ಆತನು ಸದ್ಗುರು ಸೇವೆಯಿಂದ ಧನ್ಯನಾದವನು. ಇತ್ತಿತ್ತಲಾಗಿ ಶ್ರೀಸಮರ್ಥ ರಾಮದಾಸ ಸ್ವಾಮಿಗಳ ಶಿಷ್ಯತ್ವದಿಂದ ಶಿವಾಜಿಯು ಧನ್ಯನಾಗಿ ಮಹಾರಾಷ್ಟ್ರ ರಾಜ್ಯವನ್ನು ಸ್ಥಾಪಿಸಿ ಧರ್ಮರಕ್ಷಣ ಮಾಡಿದಂತೆ, ಆತನಿಂದ ಹಿಂದಕ್ಕೆ 300 ವರ್ಷಗಳ ಹಿಂದೆ ಮಹಾತ್ಮರಾದ ಶ್ರೀ ಮಾಧವಾಚಾರ್ಯರ ಸೇವೆಯಿಂದ ಹುಕ್ಕ ದೊರೆಯು ಧನ್ಯನಾಗಿ ಕರ್ನಾಟಕದ ಸಿಂಹಾಸನವನ್ನು ಸ್ಥಾಪಿಸಿ ಧರ್ಮರಕ್ಷಣ ಮಾಡಿದನು.ಆ ಪುಣ್ಯವಂತನಿಗೆ ಆಚಾರ್ಯರ ಆಜ್ಞೆಯೇ ವೇದವಾಕ್ಯವು. ತನ್ನ ಗುರುವಿನ ಮಾತಿಗೆ ಪ್ರತಿಯಾಗಿ ಮಾತಾಡುವದು ಮಹಾಪರಾಧವೆಂದು ಆ ಕ್ಷತ್ರಿಯ ವೀರನು ಭಾವಿಸಿದ್ದನು. ವಶಿಷ್ಠರಿಗೆ ಶ್ರೀ ರಾಮನಂತೆ, ಶ್ರೀ ವಿದ್ಯಾರಣ್ಯರಿಗೆ ಹುಕ್ಕ

ದೊರೆಯಾಗಿದ್ದನೆಂದು ಹೇಳಬಹುದು. ಇಂಥ ಗುರುಭಕ್ತನು ಸಭೆಯಲ್ಲಿ ಶ್ರೀ ಗುರುವಿಗೆ ಸನ್ಮುಖನಾಗಿ ಎದ್ದು ನಿಂತದ್ದನ್ನು ನೋಡಿ ಸಭೆಯು ಬೆರಗಾಯಿತು. ಈ ವೀರಾಗ್ರಾಣಿಯು ಏನು ಪ್ರಶ್ನ ಮಾಡುವನೋ ಎಂದು ಜನರು ಕೌತುಕದಿಂದ ಎದುರು ನೋಡಹತ್ತಿದರು. ಹೀಗೆ ಸಭೆಯು ಸ್ತಬ್ಧವಾಗಿ ಹುಕ್ಕ ದೊರೆಯ ಕಡೆಗೆ ಆಶ್ಚರ್ಯದ ಮುದ್ರೆಯಿಂದ ನೋಡುತ್ತಿರುವಾಗ ಕೈಜೋಡಿಸಿ ನಿಂತುಕೊಂಡಿದ್ದ ಶಿಷ್ಯನನ್ನು ನೋಡಿ ಮಾಧವಾಚಾರ್ಯರು ವಾತ್ಸಲ್ಯದಿಂದ ''ಹುಕ್ಕರಾಯಾ, ಕುಳಿತುಕೊಳ್ಳಯ್ಯಾ! ನಿನ್ನ ಮನಸ್ಸಿನಲ್ಲಿದ್ದದ್ದು ಗೊತ್ತಾಯಿತು. ರಾಜಕೀಯ ವ್ಯವಹಾರದಲ್ಲಿ ಅಸ್ಪೃಶ್ಯತೆಯ ಪಾಲನವು ಅಶಕ್ಯವೆಂದು ನೀನು ಅನ್ನುವೆಯಲ್ಲವೆ? ಹೌದು, ನೀನು ಅನ್ನುವದು ಯಥಾರ್ಥವಾದದ್ದು. ರಾಜಕೀಯ ವ್ಯವಹಾರದಲ್ಲಿ ಅಸ್ಪೃಶ್ಯತೆಯ ಪಾಲನವು ನಡೆಯದು. ನಾನು ಈ ವರೆಗೆ ಹೇಳಿದ್ದು ಧಾರ್ಮಿಕ ವ್ಯವಹಾರದ ಸಂಬಂಧದಿಂದ. ರಾಜಕೀಯ ವ್ಯವಹಾರದಲ್ಲಿ ಅಸ್ಪೃಶ್ಯತೆಯ ನಿರ್ಬಂಧವು ಕೆಲಸದ್ದಲ್ಲದ್ದರಿಂದ ಅದನ್ನು ತೆಗೆದು ಹಾಕಲೇಬೇಕೆಂತಲೂ, ಆ ವ್ಯವಹಾರದಲ್ಲಿ ಅಸ್ಪೃಶ್ಯದ ಬಂಧನವನ್ನು ಮುರಿದವರು ಪುನಃ ಧಾರ್ಮಿಕ ವ್ಯವಹಾರದಲ್ಲಿ ಸೇರುವಾಗ ಧರ್ಮಾಜ್ಞೆಯಂತೆ ಪರಿಶುದ್ಧರಾಗಬೇಕೆಂತಲೂ ನಾವು ಸ್ಪಷ್ಟವಾಗಿ ಹೇಳುತ್ತೇವೆ. ರಾಷ್ಟ್ರೀಯ ವ್ಯವಹಾರದಲ್ಲಿ ರಾಷ್ಟ್ರೀಯ ಬಾಂಧವ್ಯದ ಆಚರಣೆಯು, ಧಾರ್ಮಿಕ ವ್ಯವಹಾರದಲ್ಲಿ ಧಾರ್ಮಿಕ ಬಾಂಧವ್ಯದ ಆಚರಣೆಯು. ರಾಷ್ಟ್ರೀಯ ವ್ಯವಹಾರಕ್ಕಿಂತ ಧಾರ್ಮಿಕ ವ್ಯವಹಾರವು ಉಚ್ಚವಾದದ್ದೂ, ಆತ್ಮೋದ್ಧಾರಕ ಸಾಧನವಾದದ್ದೂ ಇದ್ದರೂ, ಅದು ರಾಷ್ಟ್ರೀಯ ವ್ಯವಹಾರದಿಂದ ಪೋಷಿತವಾಗಿರುತ್ತದೆಂಬುದನ್ನು ಮರೆಯಲಾಗದು. ರಾಷ್ಟ್ರೀಯ ವ್ಯವಹಾರವು ಪ್ರಾಮುಖ್ಯವಾಗಿ ದೇಹರಕ್ಷಣದ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ್ದಾಗಿದ್ದರೆ ಧಾರ್ಮಿಕ ವ್ಯವಹಾರವು ಆತ್ಮದರ್ಶನಕ್ಕೆ ಸಂಬಂಧಿಸಿದ್ದಾಗಿರುತ್ತದೆ. ಆತ್ಮದರ್ಶನವೇ ಮಾನವಪ್ರಾಣಿಯ ಉಚ್ಚತರ ಸಾಧ್ಯವಾಗಿರುವದರಿಂದ, ಧಾರ್ಮಿಕ ವೈಭವದ ಸಂಪಾದನಕ್ಕಾಗಿಯೇ ರಾಷ್ಟ್ರೀಯ ವೈಭವವನ್ನು ಸಂಪಾದಿಸಬೇಕೆಂಬುದನ್ನು ಲಕ್ಷದಲ್ಲಿಡಬೇಕು. ಕೇವಲ ಐಹಿಕ ಸುಖಭೋಗಕ್ಕಾಗಿ ರಾಷ್ಟ್ರೀಯ ವೈಭವವನ್ನು ಸಂಪಾದಿಸುವದು ಪಾಪವು! ''ಶರೀರಮಾದ್ಯಂ ಖಲುಧರ್ಮಸಾಧನಂ'' ಎಂಬ ನಿಯಮದಂತೆ ಶಾರೀರಿಕ ಸ್ವಾತಂತ್ರ್ಯ ರಕ್ಷಣದ ರಾಷ್ಟ್ರೀಯ ವೈಭವದ ಸಂಪಾದನೆಗಾಗಿ ಪ್ರಸಂಗವಶಾತ್ ಮಾಡಬೇಕಾಗುವ ಧರ್ಮಪರಿತ್ಯಾಗವು, ಸ್ವಾರ್ಥತ್ಯಾಗದ ದೃಷ್ಟಿಯಿಂದ ಸ್ತುತ್ಯವೂ–ತಾರಕವೂ ಆಗಬೇಕಾದರೆ, ಅದು ಸ್ವಾರ್ಥದೃಷ್ಟಿಯದಾಗಿರದೆ ಆತ್ಮದರ್ಶನ ದೃಷ್ಟಿಯದು, ಅಂದರೆ ಧಾರ್ಮಿಕ ದೃಷ್ಟಿಯದು ಆಗಿರಬೇಕು. ಹುಕ್ಕರಾಯಾ, ನೀನು ಮಹಾಭಾರತ–ರಾಮಾಯಣಗಳೆಂಬ ನಮ್ಮ ರಾಷ್ಟ್ರೀಯ ಪವಿತ್ರಗ್ರಂಥಗಳ ಶ್ರವಣಮಾಡಿ ರುವೆಯಷ್ಟೇ ? ಆ ಗ್ರಂಥಗಳ ರಹಸ್ಯವನ್ನು ವಿಚಾರಿಸುತ್ತ ಹೋದರೆ ಆರ್ಯರಾದ ನಮ್ಮ ಎಲ್ಲ ವ್ಯವಹಾರಗಳೂ ಆತ್ಮದರ್ಶನಕ್ಕೋಸ್ಕರವಾಗಿಯೇ ಇರುತ್ತವೆಂಬುದು ನಿನಗೆ ಗೊತ್ತಾಗಬಹುದು. ನಮ್ಮ ಪಿತೃಧರ್ಮ–ಪುತ್ರಧರ್ಮ, ಪತಿಧರ್ಮ–ಪತ್ನಿಧರ್ಮ, ಗುರುಧರ್ಮ–ಶಿಷ್ಯಧರ್ಮ, ರಾಜಧರ್ಮ–ಪ್ರಜಾಧರ್ಮ, ಮುಂತಾದ ಎಲ್ಲ ಧರ್ಮಗಳ ಗುರಿಯು ಆತ್ಮದರ್ಶನವೇ ಆಗಿರುವದು. ಹೀಗೆ ಆತ್ಮದರ್ಶನ–ದೃಷ್ಟಿಯಿಂದ ಮಾಡುವ

ವ್ಯವಹಾರಗಳೇ ದೈವೀ ವ್ಯವಹಾರಗಳು. ಇದಕ್ಕೆ ವಿರುದ್ಧವಾಗಿ, ಅಂದರೆ ಆತ್ಮವಿಸ್ಮೃತಿಕಾರಕವಾಗಿ ನೀಚ ಸ್ವಾರ್ಥದೃಷ್ಟಿಯಿಂದ ಮಾಡುವ ಎಲ್ಲ ವ್ಯವಹಾರಗಳು – ಅವು ರಾಜಕೀಯವಿರಲಿ– ಸಾಮಾಜಿಕವಿರಲಿ–ಧಾರ್ಮಿಕವೇ ಇರಲಿ– ಮತ್ತೆ ಯಾವವೇ ಇರಲಿ ಅವು ಆಸುರೀ ವ್ಯವಹಾರಗಳೆನಿಸುವವು. ಅಂಥ ವ್ಯವಹಾರಗಳು ಸರ್ವಥಾ ಅಕಲ್ಯಾಣಕಾರಕಗಳು ! ಆದ್ದರಿಂದ ನೀಚ ಸ್ವಾರ್ಥದ ಆಶೆಯಿಲ್ಲದೆ ಆತ್ಮದರ್ಶನದಲ್ಲಿ ದೃಷ್ಟಿಯನ್ನಿಟ್ಟು ರಾಷ್ಟ್ರೀಯ ಸ್ವಾತಂತ್ರ್ಯವನ್ನು ಸಂಪಾದಿಸತಕ್ಕದ್ದು; ಹೀಗೆ ಅದನ್ನು ಸಂಪಾದಿಸುವಾಗ ''ಸರ್ವನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿ ಪಂಡಿತಃ'' ಎಂಬ ನಿಯಮದಂತೆ ಪ್ರಸಂಗವಶಾತ್ ಧರ್ಮಪರಿತ್ಯಾಗವನ್ನೂ ಮಾಡಬಹುದಾಗಿರಲು, ಅಸ್ಪೃಶ್ಯತ್ವದ ಪರಿತ್ಯಾಗ ಮಾಡುವಲ್ಲಿ ವಿಶೇಷವೇನು?

ವಿರೂಪಾಕ್ಷಾರ್ಯ—ಆರ್ಯವರ, ನಿಮ್ಮ ವಿವರಣೆಯು ಬಹು ಗಂಭೀರವಾದದ್ದೂ ಸತ್ಯವಾದದ್ದೂ ಇರುವದು. ನೀವು ಹೇಳಿದಂತೆ ಮನುಷ್ಯನು ಎರಡು ಬಗೆಯ ಸ್ವಾತಂತ್ರ್ಯವನ್ನು ಸಂಪಾದಿಸಬೇಕಾಗುವದು. ಅವುಗಳಲ್ಲಿ ಮೊದಲನೆಯದು, ವಿತ್ತಜೀವಿಗಳ ಸಂರಕ್ಷಣದಲ್ಲಿಯ ಸ್ವಪೌರುಷಪ್ರಾಪ್ತ ಸ್ವಸತ್ತಾತ್ಮಕವಾಗಿರುವದು ! ಎರಡನೆಯದು ಆತ್ಮದರ್ಶನದಲ್ಲಿಯ ಗುರುಕೃಪಾಪ್ರಾಪ್ತ ಪರಸತ್ತಾತ್ಮಕವಾಗಿರುವದು ! ಇವುಗಳಲ್ಲಿ ಮೊದಲನೆಯದಾದ ಸ್ವಸತ್ತಾತ್ಮಕ ಸ್ವಾತಂತ್ರ್ಯವು ರಾಜಕೀಯ ಸ್ವಾತಂತ್ರ್ಯರೂಪವಾಗಿರುವದರಿಂದ ಅದನ್ನು ಸ್ವಾರ್ಥತ್ಯಾಗ ಪೂರ್ವಕವಾದ ಸ್ವಪೌರುಷದಿಂದ ಸಂಪಾದಿಸಬೇಕಾಗುವದು. ಎರಡನೆಯ ಪರಸತ್ತಾತ್ಮಕ ಸ್ವಾತಂತ್ರ್ಯವು ಧಾರ್ಮಿಕ ಸ್ವಾತಂತ್ರ್ಯ ರೂಪವಾಗಿರುವದರಿಂದ ಅದನ್ನು ಸರ್ವಸಂಗಪರಿತ್ಯಾಗ ಪೂರ್ವಕವಾದ ಸದ್ಗುರು ಸೇವೆಯಿಂದ ಸಂಪಾದಿಸಬೇಕಾಗುವದು. ನಮ್ಮ ವೈದಿಕರ ಮುಖ್ಯ ಸಾಧ್ಯವು ಎರಡನೆಯ ಬಗೆಯ ಆತ್ಮಿಕ ಸ್ವಾತಂತ್ರ್ಯವಾಗಿದ್ದರೂ, ಅದನ್ನು ಸಂಪಾದಿಸುವ ಮುಖ್ಯ ಸಾಧನವಾದ ಮೊದಲನೆಯ ಬಗೆಯ ದೈಹಿಕ ಸ್ವಾತಂತ್ರ್ಯವನ್ನು ಮೊದಲು ಪಡೆಯಬೇಕಾಗಿರುವದರಿಂದ, ಅದರ ಸಂಪಾದನದಲ್ಲಿ ದೇಹಪಾತದವರೆಗೆ ಸ್ವಾರ್ಥತ್ಯಾಗ ಮಾಡುವ ಪ್ರಸಂಗ ಬಂದರೂ ಮಾಡಲೇ ಬೇಕಾಗುವದು; ಅಂದ ಬಳಿಕ ಕೇವಲ ದೇಹಕ್ಕೆ ಸಂಬಂಧಿಸಿದ ಅಸ್ಪೃಶ್ಯದ ಪರಿತ್ಯಾಗವನ್ನು ಪ್ರಸಂಗವಶಾತ್ ಮಾಡಬೇಕೆಂದು ಹೇಳುವದರಲ್ಲಿ ವ್ಯತ್ಯಾಸವೇನಿರುವದು ? ಒಟ್ಟಿಗೆ ಆಚಾರ್ಯವರ, ನಿಮ್ಮ ವಿಚಾರವು ಬಹು ಸಮಂಜಸವಾದದ್ದು.

ಸುಬ್ರಹ್ಮಣ್ಯಾವಧಾನಿ—ಮಹಾತ್ಮನ್, ಯಾರಾದರೂ ಬ್ರಾಹ್ಮಣರು ಹೀಗೆ ರಾಷ್ಟ್ರಹಿತಕ್ಕಾಗಿ ಸ್ವಧರ್ಮತ್ಯಾಗವನ್ನು ಮಾಡಿರುವರೋ ?

ಮಾಧವಾಚಾರ್ಯ–ಸದಾ ಪುರಾಣಶ್ರವಣ ಮಾಡುವ ನೀವು ಹೀಗೆ ಲೋಕ ಶಿಕ್ಷಣಕ್ಕಾಗಿ ಪ್ರಶ್ನೆ ಮಾಡುವದರಲ್ಲಿ ಆಶ್ಚರ್ಯವಿಲ್ಲ. ಜಮದಗ್ನಿ ಪುತ್ರನಾದ ಪರಶುರಾಮನ ವೃತ್ತಾಂತವು ನಿಮಗೆ ಗೊತ್ತಿಲ್ಲವೊ ? ತ್ರೇತಾಯುಗದಲ್ಲಿ ಕಾರ್ತವೀರ್ಯಾದಿ ಕ್ಷತ್ರಿಯ ರಾಜರು ಮದಾಂಧರಾಗಿ ಸಾತ್ವಿಕ ಪ್ರಜೆಗಳನ್ನು ಪೀಡಿಸಹತ್ತಲು, ಆ ರಾಷ್ಟ್ರಪೀಡೆಯ ನಿವಾರಣಕ್ಕಾಗಿ ಬ್ರಾಹ್ಮಣನಾದ ಪರಶುರಾಮನು ಕ್ಷಾತ್ರಧರ್ಮದಿಂದ ಇಪ್ಪತ್ತೊಂದು ಸಾರೆ ಕ್ಷತ್ರಿಯ ಕುಲವನ್ನು ನಷ್ಟಪಡಿಸಿದನೆಂದು ಪುರಾಣವು ಹೇಳುವದಿಲ್ಲವೊ ? ಅದರಂತೆ ದ್ವಾಪರದಲ್ಲಿ ದ್ರುಪದರಾಜನು

ಮದಾಂಧನಾದ ತನ್ನ ಮನೆಗೆ ಬಂದ ತನ್ನ ಮಿತ್ರನಾದ ದ್ರೋಣಾಚಾರ್ಯನೆಂಬ ಬ್ರಾಹ್ಮಣನ ಗುರುತು ಹತ್ತದವನಂತೆ ನಟಿಸಿ ವಚನಭ್ರಷ್ಟನಾಗಲು, ಆ ಮಹಾತೇಜಸ್ವಿಯಾದ ನಿಸ್ಪೃಹ ವೃತ್ತಿಯ ಬ್ರಾಹ್ಮಣನು ದ್ರುಪದನ ಶಾಸನಕ್ಕಾಗಿ ದುರ್ಯೋಧನನಂಥ ನೀತಿಭ್ರಷ್ಟನ ಸೇವಾವೃತ್ತಿಯನ್ನಾದರೂ ಕೈಕೊಂಡು ಕ್ಷಾತ್ರ ಧರ್ಮವನ್ನು ಸ್ವಿಕರಿಸಿ, ''ಶಾಪಾದಪಿ ಶರಾದಪಿ'' ಎಂಬ ಅಪೂರ್ವ ಸಾಮರ್ಥ್ಯದಿಂದ ಶತ್ರುದಮನ ಮಾಡಿದ ಸಂಗತಿಯು ನಿಮಗೆ ಗೊತ್ತಿಲ್ಲವೆ ? ರಾಷ್ಟ್ರಕ್ಕೆ ಪೀಡೆಯೊದಗಿದಾಗ, ಅಥವಾ ರಾಷ್ಟ್ರದ ಸ್ವಾತಂತ್ರ್ಯವು ನಷ್ಟವಾದಾಗ ರಾಷ್ಟ್ರದೊಳಗಿನ ಜನರು ತಮ್ಮ ತಮ್ಮ ಧರ್ಮಪರಿತ್ಯಾಗ ಮಾಡಿಯಾದರೂ ರಾಷ್ಟ್ರೋದ್ಧಾರದ ಕಾರ್ಯವನ್ನು ಮಾಡಬೇಕಾಗುವದು. ಈ ಯುಗಾಂತರದ ಮಾತು ಹೋಗಲಿ, ಇದೇ ಕಲಿಯುಗದಲ್ಲಿ ಮೊನ್ನೆ ಮೊನ್ನೆ ಚಂದ್ರಗುಪ್ತನ ಕಾಲದಲ್ಲಿ ರಾಷ್ಟ್ರದ ಸ್ವಾತಂತ್ರ್ಯ ರಕ್ಷಣಕ್ಕಾಗಿ ಬ್ರಾಹ್ಮಣರು ಸೈನ್ಯದಲ್ಲಿ ಸೇರುತ್ತಿದ್ದರೆಂಬುದು ಚಾಣಕ್ಯ ನೀತಿಯ ಗ್ರಂಥದಿಂದ ಗೊತ್ತಾಗುತ್ತದೆ. ರಾಷ್ಟ್ರಕ್ಕೆ ಆಪತ್ತು ಒದಗದೆಯಿದ್ದಾಗ, ಅಂದರೆ ಅದು ಸ್ವಾತಂತ್ರ್ಯದಿಂದ ಇದ್ದಾಗ ರಾಷ್ಟ್ರದೊಳಗಿನ ಜನರು ತಮ್ಮ ತಮ್ಮ ಧರ್ಮಗಳಂತೆ ನಡೆದು ಇಹಪರಗಳನ್ನು ಸಾಧಿಸಬಹುದು; ಆದರೆ ರಾಷ್ಟ್ರವು ವಿಪತ್ತಿನಲ್ಲಿ ಮುಣುಗಿದ ಕೂಡಲೆ ತಮ್ಮ ಧರ್ಮ ಪರಿತ್ಯಾಗ ಮಾಡಿಯಾದರೂ ರಾಷ್ಟ್ರದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಬೇಕಾಗುವದು. ಬ್ರಾಹ್ಮಣೋತ್ತಮರೇ, ಗಿರಿಕಂದರಗಳ ಏಕಾಂತ ಸ್ಥಳಗಳಲ್ಲಿ ಕುಳಿತು ಕಂದಮೂಲ ಭಕ್ಷಣಮಾಡಿ ತಪಶ್ಚರ್ಯ ಮಾಡುವ ಬ್ರಾಹ್ಮಣರಿಗೂ ಸಮರಾಂಗಣದಲ್ಲಿ ಎದುರಾದವರನ್ನು ಸವರಿ ಚಲ್ಲಲು ಸಿದ್ಧರಾಗಿ ನಿಂತಿದ್ದ ಬ್ರಾಹ್ಮಣರಿಗೂ ಸ್ಪೃಶ್ಯಾಸ್ಪೃಶ್ಯತೆಯ ವಿಚಾರದಲ್ಲಿ ಎಷ್ಟರಮಟ್ಟಿಗೆ ಸಾಮ್ಯವಿರಬಹುದೆಂಬುದರ ವಿಚಾರವನ್ನು ನೀವೇ ಮಾಡಿರಿ.

ಕಾಶಿಮಖಾನ—ತಾಪದಾಯಕರಾದ ಕ್ಷತ್ರಿಯರನ್ನು ಪರಶುರಾಮಾದಿಕರಾದ ಬ್ರಾಹ್ಮಣರು ದಂಡಿಸಿದರೆಂದ ಬಳಿಕ, ರಾಷ್ಟ್ರಪೀಡಾಕಾರಕವಾದ ಕ್ಷಾತ್ರವೃತ್ತಿಯ ಲೋಪವಾಗಿ ಬರಿಯ ಶಾಂತವಾದ ಬ್ರಾಹ್ಮಣವೃತ್ತಿಯ ಪ್ರತಿಷ್ಠಾಪನೆಯು ಜಗತ್ತಿನಲ್ಲಿ ಆಗುವದು ನೆಟ್ಟಗಿಲ್ಲವೊ?

ಮಾಧವಾಚಾರ್ಯ—ಕಾಶಿಮಖಾನ, ರಾಷ್ಟ್ರೀಯ ವ್ಯವಹಾರವು ಬರಿಯ ಬ್ರಹ್ಮವೃತ್ತಿಯಿಂದಲೂ ನಡೆಯದು, ಬರಿಯ ಕ್ಷಾತ್ರವೃತ್ತಿಯಿಂದಲೂ ನಡೆಯದು; ಮೇಲಾಗಿ ಶುದ್ಧ ಬ್ರಹ್ಮವೃತ್ತಿಯೂ ಶುದ್ಧ ಕ್ಷಾತ್ರವೃತ್ತಿಯೂ ಜಗತ್ತಿನಲ್ಲಿ ಕಣ್ಣಿಗೆ ಬೀಳುವದು ಅತ್ಯಂತ ದುರ್ಮಿಳವು. ಎಲ್ಲಿಹೋದರೂ ರಾಷ್ಟ್ರದಲ್ಲಿ ಇವೆರಡು ವೃತ್ತಿಗಳ ವಿವಿಧ ಮಿಶ್ರವೃತ್ತಿಗಳೇ ಕಣ್ಣಿಗೆ ಬೀಳುವವು; ಆದ್ದರಿಂದ ರಾಷ್ಟ್ರೀಯ ವ್ಯವಹಾರಕ್ಕೆ ಇವೆರಡು ವೃತ್ತಿಗಳ ಸಹಕಾರತೆಯ ಸಂಗಮದ ಅವಶ್ಯಕತೆಯಿರುತ್ತದೆಂಬುದನ್ನು ಮರೆಯಲಾಗದು. ಬ್ರಹ್ಮವೃತ್ತಿಯು ಅತ್ಯಂತ ಶಾಂತವಾದದ್ದರಿಂದ ಅದನ್ನು ಬರ್ಫಕ್ಕೆ ಹೋಲಿಸಬಹುದು; ಕ್ಷತ್ರಿಯ ವೃತ್ತಿಯು ಅತ್ಯಂತ ತಾಪದಾಯಕವಾದದ್ದರಿಂದ ಅದನ್ನು ಕುದಿಯುವ ನೀರಿಗೆ ಹೋಲಿಸಬಹುದು. ಬರ್ಫವಾಗಲಿ–ಕುದಿಯುವ ನೀರಾಗಲಿ ಬಳಿಕೆಗೆ ಉಪಯೋಗವಾಬಹುದೋ? ಬಳಕೆಗೆ ಉಪಯೋಗ್ಯವಾಗಬೇಕಾದರೆ ಕುದಿಯುವ ನೀರಿನಂತೆ ಇದ್ದ ಕ್ಷಾತ್ರವೃತ್ತಿಯ ತಾಪದಲ್ಲಿ ಅತ್ಯಂತ ಶೀತವಾದ ಬ್ರಹ್ಮವೃತ್ತಿರೂಪ ಬರ್ಫವನ್ನು ತಕ್ಕಷ್ಟು ಬೆರೆಸಿ ಹವಣೆಯ ನೀರಿನಂತೆ ಬ್ರಾಹ್ಮಣ–ಕ್ಷಾತ್ರವೃತ್ತಿಗಳ ಮಿಶ್ರಣ ಮಾಡಿದರೆ ಅದು

ರಾಷ್ಟ್ರೀಯ ಕಾರ್ಯಕ್ಷಮವಾಗುವದು. ಇಷ್ಟಾದರೂ ರಾಷ್ಟ್ರೀಯ ಕಾರ್ಯದ ಕೊರತೆಯು ತಪ್ಪುವುದಿಲ್ಲ; ಆ ದಿವ್ಯ ಮಿಶ್ರಣಕ್ಕೆ ವೈಶ್ಯ–ಶೂದ್ರವೃತ್ತಿಗಳ ಸಹಾಯವಷ್ಟೇ ಅಲ್ಲ, ಅತಿಶೂದ್ರವೃತ್ತಿಯ ಸಹಾಯವೂ ಬೇಕಾಗುವದು ! ಒಟ್ಟಿಗೆ ರಾಷ್ಟ್ರೀಯ ವ್ಯವಹಾರವು ಸುಸೂತ್ರವಾಗಿ ಸಾಗಬೇಕಾದರೆ ಬ್ರಾಹ್ಮ–ಕ್ಷಾತ್ರ–ವೈಶ್ಯ–ಶೂದ್ರ–ಅತಿಶೂದ್ರ ವೃತ್ತಿಗಳು ಬೇಕೆ ಬೇಕು. ಅಂತೇ ಪ್ರಾಚೀನ ಋಷಿಗಳು ಆಯಾ ವೃತ್ತಿಗೊಂದು ಜಾತಿಯಂತೆ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರ–ಅತಿಶೂದ್ರ ಎಂಬ ಐದು ಜಾತಿಗಳನ್ನು ಉತ್ಪನ್ನ ಮಾಡಿ, ಅವುಗಳಲ್ಲಿ ಎಂದೂ ನಷ್ಟವಾಗದಂಥ ಸಹಕಾರತೆಯನ್ನುಂಟು ಮಾಡಿದರು.

ವಿರೂಪಾಕ್ಷಾರ್ಯ— ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರ–ಅತಿಶೂದ್ರ (ಅಸ್ಪೃಶ್ಯ) ವೃತ್ತಿಯವರೆಲ್ಲರೂ ರಾಷ್ಟ್ರಕಾರ್ಯಕ್ಕೆ ತಕ್ಕವರಾಗಬೇಕಾದರೆ, ಅವರಿಗೆ ಸರ್ವಸಾಮಾನ್ಯವಾದ ರಾಷ್ಟ್ರೀಯ ಶಿಕ್ಷಣವು ದೊರೆಯಬೇಕಾಗುವದಲ್ಲವೆ? ಆ ಶಿಕ್ಷಣವು ಯಾವದು? ಅದನ್ನು ಸಂಪಾದಿಸುವ ರೀತಿ ಯಾವುದು? ಇದನ್ನು ಹೇಳಲು, ಲೋಕಸಂಗ್ರಹ ಧುರೀಣರಾದ ತಮ್ಮ ಹೊರತು ಬೇರೆ ಯಾರೂ ಸಮರ್ಥರಾಗಲಾರರು.

ಮಾಧವಾಚಾರ್ಯ— ಆಗಲಿ ಮಹಾತ್ಮನ್, ಅದನ್ನು ನನ್ನ ತಿಳುವಳಿಕೆಯಂತೆ ತತ್ವತಃ ನಿರೂಪಿಸುವೆನು ; ಯಾಕಂದರೆ ರಾಷ್ಟ್ರೀಯ ಶಿಕ್ಷಣದ ವಿಷಯಗಳನ್ನು ಸಾಂಗೋಪಾಂಗವಾಗಿ ವಿವರಿಸಲು ಇದು ಸಮಯವಲ್ಲ, ಈಗ ಹಾಗೆ ವಿವರಿಸುವದಶಕ್ಯವೂ ಅಲ್ಲ. ರಾಷ್ಟ್ರೀಯ ಸಾಮಾನ್ಯ ಶಿಕ್ಷಣವು ಮುಖ್ಯವಾಗಿ ಆತ್ಮಪೋಷಣ–ಆತ್ಮರಕ್ಷಣ ಸಮರ್ಥವಾಗಿರಬೇಕೆಂದು ಸ್ವಲ್ಪದರಲ್ಲಿ ಹೇಳಬಹುದು. ಆತ್ಮಪೋಷಣಕ್ಕೆ ಅನ್ನ–ವಸ್ತ್ರ–ಆಪದ್ಧನಗಳ ಅವಶ್ಯಕತೆಯಿರುವದು. ಆತ್ಮರಕ್ಷಣಕ್ಕೆ ಅಂತಶ್ಶತ್ರು ಬಹಿಃಶತ್ರು ನಿವಾರಣದ ಸಾಮರ್ಥ್ಯವು ಅವಶ್ಯಕತೆ ಇರವದು. ಒಟ್ಟಿಗೆ ರಾಷ್ಟ್ರವು ತನ್ನ ಪೋಷಣಕ್ಕಾಗಿ ತನಗೆ ಬೇಕಾಗುವ ಅನ್ನ–ವಸ್ತ್ರಗಳನ್ನು ತಾನೇ ಪೂರೈಸಿಕೊಳ್ಳುವದೂ, ತನಗೊದಗಿದ ಶತ್ರುಭಾದೆಯನ್ನು ತಾನೇ ನಿವಾರಿಸಿಕೊಳ್ಳುವ ಸಾಮರ್ಥ್ಯ ಪಡೆಯುವದೂ ರಾಷ್ಟ್ರೀಯ ಶಿಕ್ಷಣದ ಮುಖ್ಯೋದ್ದೇಶವಾಗಿರುವದು. ಈ ಉದ್ದೇಶವನ್ನು ಸಾಧಿಸಿಕೊಳ್ಳುವುದೆಂದರೆ ರಾಷ್ಟ್ರೀಯ ಸ್ವಾತಂತ್ರ್ಯವನ್ನು ಸಂಪಾದಿಸುವದು. ಇದಕ್ಕೆ ವಿರುದ್ಧವಾಗಿ ರಾಷ್ಟ್ರದ ಪಾರತಂತ್ರ್ಯದ ಬಾಬುಗಳು ಹೆಚ್ಚುತ್ತ ಹೋದಂತೆ ಆ ರಾಷ್ಟ್ರದ ಸ್ವಾತಂತ್ರ್ಯವು ನಷ್ಟವಾಗುತ್ತ ಹೋಗಿ ಅದು ಅಧಃಪತನದ ಹಾದಿಯನ್ನು ಹಿಡಿಯುವದೆಂದು ತಿಳಿಯಬೇಕು. ಯಾವ ರಾಷ್ಟ್ರದೊಳಗಿನ ಪೌಷ್ಟಿಕಾನ್ನವು ಜನರ ಅಜ್ಞಾನ–ದಾರಿದ್ರ್ಯ–ಪರಾಧೀನತೆಗಳ ಮೂಲಕ ಪರದೇಶವನ್ನು ಸೇರಿ ಕದನ್ನವು ಮಾತ್ರ ಆ ರಾಷ್ಟ್ರದ ಪಾಲಿಗೆ ಉಳಿಯುವದೋ, ಯಾವ ರಾಷ್ಟ್ರವು ಬಟ್ಟೆಬರೆಗಾಗಿ ಪರದೇಶದ ಮೋರೆಯನ್ನು ನೋಡುತ್ತ ಕೈ ಮುಚ್ಚಿಕೊಂಡು ಕುಳಿತುಕೊಳ್ಳುವದೋ, ಯಾವ ರಾಷ್ಟ್ರವು ಉದರಪೋಷಣದ ಅವಸರದಲ್ಲಿ ಆರೋಗ್ಯವರ್ಧಕವಾದ ವಿರಾಮವನ್ನು ಮರೆಯುವದೋ, ಯಾವ ರಾಷ್ಟ್ರವು ಸೇವಾವೃತ್ತಿಯೇ ಪರಮಪುರುಷಾರ್ಥವೆಂದು ತಿಳಿಯುವದೋ, ಯಾವ ರಾಷ್ಟ್ರವು ಶಸ್ತ್ರ ಧರಿಸಲಾರದೆ ಹೇಡಿಯಾಗಿ ತನ್ನ ಅಂತಃಶತ್ರು ಗಳೆನಿಸುವ ಅನೀತಿಯ ಜನರ ಉಪಟಲವನ್ನು, ಹಾಗು ಕ್ರೂರ ಮೃಗಗಳ ಉಪದ್ರವವನ್ನು

ಪರಿಹರಿಸಿಕೊಳ್ಳಲಾರದೆ ಗದಗದ ನಡುಗುತ್ತ ಪರರನ್ನು ಬೇಡಿಕೊಳ್ಳುವದೊ, ಯಾವ ರಾಷ್ಟ್ರವು ಬಹಿಃಶತ್ರುಗಳ ಭಯದಿಂದ ಗತಿಗೆಟ್ಟು ಶತ್ರು–ಮಿತ್ರರ ವಿಮರ್ಶೆಗೂ ಅವಕಾಶವಿಲ್ಲದೆ ಅಂಧವೃತ್ತಿಯಿಂದ ಪರರ ಪದರನ್ನು ಸೇರುವದೋ, ಯಾವ ರಾಷ್ಟ್ರವು ಸ್ವಾರ್ಥತ್ಯಾಗದ ಸ್ಮರಣದಿಂದ ಕೈಕಾಲುಗೆಡುವದೋ ಆ ರಾಷ್ಟ್ರವು ಸ್ವತಂತ್ರವಾದದ್ದೆಂದು ಯಾರು ಹೇಳುವರು? ಆದ್ದರಿಂದ ರಾಷ್ಟ್ರೀಯ ಸ್ವಾತಂತ್ರ್ಯವನ್ನು ಸಂಪಾದಿಸಲಿಚ್ಛಿಸುವವರೂ,ಇದ್ದ ಸ್ವಾತಂತ್ರ್ಯವನ್ನು ಕಾಯ್ದು ಕೊಳ್ಳಲಿಚ್ಛಿಸುವವರೂ ರಾಷ್ಟ್ರದೊಳಗಿನ ಪ್ರತಿಯೊಂದು ವ್ಯಕ್ತಿರೂಪಘನಕ್ಕೆ, ಅದು ಬ್ರಾಹ್ಮವೃತ್ತಿಯದಿರಲಿ,ಕ್ಷಾತ್ರವೃತ್ತಿಯದಿರಲಿ, ವೈಶ್ಯವೃತ್ತಿಯದಿರಲಿ, ಶೂದ್ರವೃತ್ತಿಯದಿರಲಿ, ಅತಿಶೂದ್ರವೃತ್ತಿಯದಿರಲಿ, ಅಥವಾ ಯಾವ ಜಾತಿಯದೆ ಇರಲಿ, ಅವಕ್ಕೆ ಒಕ್ಕಲುತನ,ಕೈಗಾರಿಕೆ, ವ್ಯಾಪಾರ, ಯುದ್ಧ ಈ ವಿಷಯಗಳ ಪ್ರಾಥಮಿಕ ಶಿಕ್ಷಣವನ್ನು ಅವಶ್ಯವಾಗಿ ಕೊಡಬೇಕು; ಮತ್ತು ಆಯಾ ವಿಷಯಗಳ ಉಚ್ಚ ಶಿಕ್ಷಣವನ್ನು ಒಲವಿಗನುಸರಿಸಿ ಅವರವರಿಗೆ ಸ್ವತಂತ್ರವಾಗಿ ಕೊಡತಕ್ಕದ್ದು. ಈ ಶಿಕ್ಷಣದಲ್ಲಿ ಕೊರತೆಯಿದ್ದ ಮಾನದಿಂದ ಆ ರಾಷ್ಟ್ರವು ಪರತಂತ್ರವಾಗುವದು. ಈ ಶಿಕ್ಷಣವನ್ನು ರಾಷ್ಟ್ರೀಯ ಶಾಲೆಗಳಲ್ಲಿ ರಾಷ್ಟ್ರೀಯ ಘಟಕಗಳೆನಿಸುವ ವ್ಯಕ್ತಿಗಳೆಲ್ಲ ಸ್ಪೃಶ್ಯಾ–ಸ್ಪೃಶ್ಯಾದಿಭೇದವ ಲೆಕ್ಕಿಸದೆ ಎಲ್ಲರೂ ಭುಜಕ್ಕೆ ಭುಜವಾನಿಸಿ ಹೊಂದಲು ಸಿದ್ಧರಾಗಿರಬೇಕು. ರಾಷ್ಟ್ರೀಯತ್ವದ ರಕ್ಷಕವಾದ ಈ ರಾಷ್ಟ್ರೀಯ ಶಿಕ್ಷಣದಲ್ಲಿ ಎಲ್ಲಿಯ ಜಾತಿ–ಕುಲಗಳ ವಿಚಾರ; ಎಲ್ಲಿಯ ಸ್ಪೃಶ್ಯಾಸ್ಪೃಶ್ಯದ ವಿಚಾರ; ಎಲ್ಲಿಯ ಧನಿಕ–ದರಿದ್ರರ ವಿಚಾರ? ತಾವೆಲ್ಲರೂ ರಾಷ್ಟ್ರಭಕ್ತರು; ಅಥವಾ ದೇಶಬಾಂಧವರು; ಎಂಬ ಒಂದೇ ಒಂದಾದ ಭಾವದಿಂದಲೂ, ಒಂದೇ ಒಂದಾದ ಹೆಸರಿನಿಂದಲೂ ಭೂಷಿತರಾದ ರಾಷ್ಟ್ರೀಯ ಶಿಕ್ಷಣವನ್ನು ಎಲ್ಲರೂ ಒತ್ತಟ್ಟಿಗೆ ಹೊಂದಲಿಕ್ಕೂ ಸಿದ್ಧರಾಗಿರಬೇಕು.

ಕಾಶೀನಾಥಶರ್ಮ—ಹೀಗೆ ರಾಷ್ಟ್ರೀಯ ಶಿಕ್ಷಣ ಹೊಂದುವಾಗ ಆದ ಅಸ್ಪೃಶ್ಯತೆಯ ದೋಷವು ಧಾರ್ಮಿಕ ವ್ಯವಹಾರಕ್ಕೆ ಬಾಧಕವಾಗುತ್ತದಲ್ಲ! ಧಾರ್ಮಿಕ ವ್ಯವಹಾರದಲ್ಲಿ ಸ್ಪೃಶ್ಯಾಸ್ಪೃಶ್ಯತೆಯನ್ನು ಪಾಲಿಸಬೇಕೆಂದು ಆಗಲೆ ಅಪ್ಪಣೆ ಕೊಡಿಸಲಿಲ್ಲವೆ ?

ಮಾಧವಾಚಾರ್ಯ—ಹೌದು, ಕಾಶೀನಾಥ, ಈಗಾದರೂ ನಾನು ಪಾಲಿಸಬಾರದೆಂದು ಎಲ್ಲಿ ಹೇಳುವೆನು ? ರಾಷ್ಟ್ರೀಯ ಶಿಕ್ಷಣಾನಂತರ ಆಯಾ ವರ್ಣೋಕ್ತವಾದ ಸ್ನಾನಾದಿ ಪ್ರಾಯಶ್ಚಿತ್ತಗಳಿಂದ ಶುದ್ಧವಾಗಿ ಧಾರ್ಮಿಕ ವ್ಯವಹಾರಗಳನ್ನು ನಡೆಸಿದರಾಯಿತು.

ಕಾಶೀನಾಥಶರ್ಮ—ಪ್ರತಿನಿತ್ಯವೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಯಿತಲ್ಲ!

ಮಾಧವಾಚಾರ್ಯ—ಹೌದು, ಮಾಡಿಕೊಳ್ಳಬೇಕು! ತಪ್ಪಿಗೆ ಪ್ರಾಯಶ್ಚಿತ್ತವು ಇರಲೇಬೇಕು. ರಾಷ್ಟ್ರೋದ್ಧಾರಕ್ಕಾಗಿ ನಿತ್ಯ ಪ್ರಾಯಶ್ಚಿತ್ತ ಮಾಡಿಕೊಳ್ಳಲಾರದ ಬ್ರಾಹ್ಮಣರು ನೀವು, ಯಾವ ಮಹಾಕಾರ್ಯ ಮಾಡಲು ಸಮರ್ಥರಾದೀರಿ? ದಿನಾಲು ಹಸಿವೆಯಾಗುವದರಿಂದ ದಿನಾಲು ನೀವು ಬಿಟ್ಟದ್ದು ಬಿಟ್ಟು, ಮಾಡಬಾರದ್ದು ಮಾಡಿ ಉಣ್ಣುವದಿಲ್ಲವೆ? ಅದರಂತೆ ರಾಷ್ಟ್ರೋದ್ಧಾರದ ಹಸಿವೆಯು ನಿಮಗೆ ಆದ ಪಕ್ಷದಲ್ಲಿ, ಹಾಗು ಧರ್ಮವು ಬೇಕಾದ ಪಕ್ಷದಲ್ಲಿ ನೀವು ದಿನಾಲು ಪ್ರಾಯಶ್ಚಿತ್ತವನ್ನಾದರೂ ಮಾಡಿಕೊಂಡೀರಿ, ಇದಕ್ಕೂ ಹೆಚ್ಚಿನ ತಾಪವನ್ನಾದರೂ ಅನುಭವಿಸೀರಿ!

ಮೇಲಾಗಿ ರಾಷ್ಟ್ರೀಯ ಶಿಕ್ಷಣವನ್ನು ಎಲ್ಲ ಜಾತಿಯವರು ಒತ್ತಟ್ಟಿಗೆ ಕುಳಿತೇ ಹೊಂದಬೇಕೆಂದು ಆಗ್ರಹಪಡುವ ಕಾರಣವೂ ಇಲ್ಲ; ಬೇಕಾದರೆ ಬೇರೆ ಬೇರೆ ಪಂಗಡದವರು ತಮ್ಮ ಸಲುವಾಗಿ ಬೇರೆ ಬೇರೆ ರಾಷ್ಟ್ರೀಯ ಶಾಲೆಗಳನ್ನು ಸ್ಥಾಪಿಸಿಕೊಳ್ಳಬಹುದು; ಯಾಕಂದರೆ ಯಾವಾಗಲೂ ಎಲ್ಲರೂ ಒತ್ತಟ್ಟಿಗೆ ಕೂಡಿ ಇರಬೇಕೆಂದಾಗಲಿ, ಯಾವಾಗಲೂ ಎಲ್ಲರೂ ಅಗಲಿ ಇರಬೇಕೆಂದಾಗಲಿ ಹೇಳುವ ಉದ್ದೇಶವು ನಮ್ಮದಿರವುದಿಲ್ಲ, ಎಲ್ಲರೂ ಒಟ್ಟುಗೂಡುವ ಪ್ರಸಂಗದಲ್ಲಿ ಒಟ್ಟುಗೂಡಲಿಕ್ಕೂ, ಅಗಲಿ ಇರುವ ಪ್ರಸಂಗದಲ್ಲಿ ಅಗಲಿ ಇರಲಿಕ್ಕೂ ಮೂಗು ಮುರಿಯ ಬಾರದೆಂದು ನಾವು ಸ್ಪಷ್ಟವಾಗಿ ಹೇಳುವೆವು. ಹೀಗೆ ಹೊತ್ತುಬಂದ ಹಾಗೆ ವಿವೇಕದಿಂದ ನಡೆಯುವ ಅಭ್ಯಾಸವಾಗಬೇಕಾದರೆ ಎಲ್ಲ ವರ್ಣದವರೂ ಒತ್ತಟ್ಟಿಗೆ ಕುಳಿತುಕೊಳ್ಳುವ ಪ್ರಸಂಗಗಳನ್ನು ತಂದುಕೊಳ್ಳಬೇಕೆಂದು ಹೇಳುವದು ನಮ್ಮ ತಾತ್ಪರ್ಯವು. ತಮ್ಮ ತಮ್ಮ ಪಂಗಡದ ಶಾಲೆಗಳಲ್ಲಿ ಕಲಿಯಲಿಕ್ಕೆ ಪಡುವಷ್ಟು ಉತ್ಸಾಹವನ್ನೇ ಎಲ್ಲ ಪಂಗಡದವರ ಶಾಲೆಯಲ್ಲಿ ಕಲಿಯಲಿಕ್ಕೆ ಎಲ್ಲ ಪಂಗಡದವರೂ ಪಡಬೇಕೆಂಬುದು ನಮ್ಮ ಬೋಧದ ತಾತ್ಪರ್ಯವಾಗಿರುವದು.

ವಿರೂಪಾಕ್ಷಾರ್ಯ—ಹೀಗೆ ಎಲ್ಲರೂ ಒತ್ತಟ್ಟಿಗೆ ಕುಳಿತು ಶಿಕ್ಷಣ ಹೊಂದಬೇಕಾದರೆ ಅಸ್ಪೃಶ್ಯ ವರ್ಗದವರ ಇರುವಿಕೆಯಲ್ಲಿ ತಿದ್ದುಪಡೆಯಾಗಬೇಕಾಯಿತಲ್ಲವೆ ?

ಮಾಧವಾಚಾರ್ಯ — ಹೌದು, ಅವಶ್ಯವಾಗಿ ಆಗಬೇಕು. ಇದನ್ನು ಕುರಿತು ಆಗಲೆ ಧಾರ್ಮಿಕ ವ್ಯವಹಾರವನ್ನು ಕುರಿತು ಹೇಳುವಾಗ ನಾಲ್ಕು ಮಾತು ಹೇಳಿರುವೆನು; ಆದರೂ ಮಹತ್ವದ ವಿಷಯವಾದದ್ದರಿಂದ ಮತ್ತೂ ಹೇಳುವೆನು. ಸ್ಪೃಶ್ಯರೆನಿಸುವವರ ತಿದ್ದುಪಡೆಯಲ್ಲಿ, ಹಾಗು ಅಸ್ಪೃಶ್ಯರೆನಿಸುವವರ ತಿದ್ದುಪಡೆಯಲ್ಲಿ ಈಗಿರುವವರ ಮಹದಂತರವೇ ಅಸ್ಪೃಶ್ಯತೆಯ ಕಸುವನ್ನು ಹೆಚ್ಚಿಸಿರುವದಲ್ಲದೆ, ರಾಷ್ಟ್ರದ ಕಸುವು ಕುಗ್ಗಲಿಕ್ಕೂ ಅದು ಕಾರಣವಾಗಿರುತ್ತದೆ. ವೈದಿಕ ಧರ್ಮದ ಉದಾತ್ತತೆಗನುಸರಿಸಿ ಎಷ್ಟೋ ಅಸ್ಪೃಶ್ಯ ವರ್ಗಗಳು ತಿದ್ದುಪಡೆ ಹೊಂದುತ್ತ ಹೊಂದುತ್ತ ಸ್ಪೃಶ್ಯಕೋಟಿಯಲ್ಲಿ ಸೇರಿರಬಹುದು. ಹಾಗಲ್ಲದಿದ್ದರೆ ಅಸ್ಪೃಶ್ಯರ ಸಂಖ್ಯೆಯು ಈಗ ಇಷ್ಟು ಅಲ್ಪವಾಗಿ ಉಳಿಯುತ್ತಿದ್ದಿಲ್ಲ, ಈಗ ಉಳಿದಿರುವ ಅಸ್ಪೃಶ್ಯರಲ್ಲಿಯೂ ಕೆಲವರು ಸ್ಪೃಶ್ಯರಾಗಲಿಕ್ಕೆ ಸಮೀಪಿಸಿರುವರೆಂಬುದನ್ನು ಅಸ್ಪೃಶ್ಯತ್ವದ ತಾರತಮ್ಯದಿಂದ ಅರಿತುಕೊಳ್ಳಬಹುದಾಗಿದೆ. ಹೀಗೆ ಅತಿಶೂದ್ರರು ತಿದ್ದುಪಡೆ ಹೊಂದುತ್ತ ಹೊಂದುತ್ತ ತಮ್ಮದೊಂದು ಜಾತಿಯನ್ನು ಮಾಡಿಕೊಂಡು ಶೂದ್ರ ವರ್ಗದಲ್ಲಿ ಸೇರಿಕೊಳ್ಳುವ ಸಂಭವವು ಇರುವದು. ಅಸ್ಪೃಶ್ಯರಾದವರು ತಾವು ಸ್ಪೃಶ್ಯರಾಗಬೇಕೆಂಬ ಸದ್ಭಾವನೆಯಿಂದ ತಮ್ಮ ದೈಹಿಕ–ಮಾನಸಿಕ–ವ್ಯಾವಹಾರಿಕ ಪಾವಿತ್ರ್ಯವನ್ನು ಕಾಯ್ದುಕೊಳ್ಳಲು ಮನಃಪೂರ್ವಕವಾಗಿ ಯತ್ನಿಸಬೇಕು. ಯಾವಾಗಲೂ ಹೊಲಸು ಉದ್ಯೋಗ ಮಾಡುವವರು ತಮ್ಮ ಮನೆಯೊಳಗೆ, ಮನೆಯ ಹೊರಗೆ, ಹಗಲು, ರಾತ್ರಿ ಯಾವಾಗಲೂ ಹೊಲಸು ಇರತಕ್ಕವರೇ ! ಅಂಥವರ ಇರವು, ಅರಿವೆ ಅಂಚಡಿ, ತಿಂಬುಂಬುವ ಪದಾರ್ಥಗಳು, ಆಡುವ ಮಾತು, ಸ್ವಭಾವ, ವಿಚಾರಗಳು ಅವರ ಉದ್ಯೋಗದ ಮೂಲಕವಾಗಿ ದೂಷಿತವಾಗಿರತಕ್ಕವೇ. ಇಂಥವರ ಸ್ಪರ್ಶವನ್ನು ಅವರ ಹೀನತ್ವಕ್ಕಿಂತ ಸಮಾಜದ ಆತ್ಮಶುದ್ಧಿಯ ರಕ್ಷಣಕ್ಕಾಗಿ ಮಾಡುವದಿಲ್ಲೆಂದು ನಾನು ಹಿಂದೆ ಹೇಳಿದ್ದನ್ನು ಮರೆಯಬಾರದು, ಒಟ್ಟಿಗೆ

ಅಸ್ಪೃಶ್ಯತೆಯು ಹಿಂದೂ ಧರ್ಮದ ಕಲಂಕವಾಗಿರದೆ ಸಮಾಜದ ಸ್ವಚ್ಛತೆಯ ಸಂರಕ್ಷಣದ ಉಪಾಯವಾಗಿರುತ್ತದೆ. ಅಸ್ಪೃಶ್ಯರು ತಮ್ಮ ಕೆಲಸದ ಹೊಲಸುತನವನ್ನು ಕೆಲಸದವಟ್ಟಿಗೆ ಅಂಗೀಕರಿಸಿ, ತಮ್ಮ ಕೇರಿ, ತಮ್ಮ ಓಣಿ, ತಮ್ಮ ಮನೆ ಇವನ್ನು ಸ್ವಚ್ಛವಾಗಿ ಇಟ್ಟುಕೊಂಡು ತಾವು ಸ್ವಚ್ಛವಾಗಿ ಇರತೊಡಗಿದ ಮಾನದಿಂದ ಅಸ್ಪೃಶ್ಯತ್ವದ ದೋಷವು ಕಡಿಮೆಯಾಗುತ್ತ ಹೋಗಬಹುದು. ನಮ್ಮ ಧರ್ಮಾಜ್ಞೆಗಳೂ, ರೂಢಿಗಳೂ ಬಿಕ್ಕಟ್ಟಿನವಾಗಿದ್ದರೂ ಪ್ರಸಂಗ ವಶಾತ್ ಅವು ಸಡಿಲೂ ಆಗುವವು. ''ದೇವಯಾತ್ರಾ ವಿವಾಹೇಷು ಯಜ್ಞಪ್ರಕರಣೇಷು ಚ। ಉತ್ಸವೇಷು ಚ ಸರ್ವೇಷು ಸ್ಪೃಷ್ಟಾಸ್ಪೃಷ್ಟಿರ್ನವಿದ್ಯತೇ'' ಅಂದರೆ ದೇವಸ್ಥಾನ, ಯಾತ್ರೆ, ವಿವಾಹ, ಯಜ್ಞಸಮಾರಂಭ, ಉತ್ಸವಗಳು ಮೊದಲಾದ ಜನಸಮ್ಮರ್ದದ ಹಲವು ಪ್ರಸಂಗದಲ್ಲಿ ಸ್ಪೃಶ್ಯಾಸ್ಪೃಶ್ಯತೆಯ ನಿಯಮವು ಶಿಥಿಲವಾಗುತ್ತದೆಂಬ ಧರ್ಮಶಾಸ್ತ್ರೋಕ್ತಿಯು, ಅಂತ್ಯಜರಿಗೆ ಸಮ್ಮಂಧಿಸಿದ್ದೆಂದು ಹೇಳುವದು ವಾದಗ್ರಸ್ತವಿಷಯವಾಗಿದ್ದರೂ, ಪರಿಸ್ಥಿತಿಗನುಸರಿಸಿ ಈ ನಿಯಮದ ವ್ಯಾಪ್ತಿಯನ್ನು ಹೆಚ್ಚಿಸಿದರೆ, ರಾಷ್ಟ್ರೀಯ ವ್ಯವಹಾರಕ್ಕೆ ಅಸ್ಪೃಶ್ಯ ಬಾಧೆಯು ತಟ್ಟಲಾರದು; ಆದರೆ ಅಸ್ಪೃಶ್ಯರಲ್ಲಿ ಸ್ಪೃಶ್ಯಯೋಗ್ಯತೆಯ ಸ್ಥಿತಿಯನ್ನುಂಟುಮಾಡದೆ ಒಮ್ಮೆಲೆ ಅಸ್ಪೃಶ್ಯದೋಷವನ್ನು ತೆಗೆಯಹೋದರೆ ಕಾರ್ಯವು ಸುಖಕರವಾಗದು. ಹಿಂಸಾಕರ್ಮವ ತ್ಯಜಿಸಿದ ಅಂತ್ಯಜ ಸಾಧು-ಸಂತರನ್ನು ದೇವರೇ ಹತ್ತರ ಕರೆದುಕೊಳ್ಳುವಾಗ ಹಿಂದೂ ಸಮಾಜವು ಅಂಥವರನ್ನು ಆ ದೃಷ್ಟಿಯಿಂದ ಹತ್ತರ ಕರೆದುಕೊಳ್ಳುವಲ್ಲಿ ಆಶ್ಚರ್ಯವೇನು ? ಒಟ್ಟಿಗೆ ಅಂತ್ಯಜರು ಶಿಕ್ಷಣ ಸ್ವಚ್ಛತೆ, ಸ್ವಾಭಿಮಾನ, ಆತ್ಮಜ್ಞಾನ ಮೊದಲಾದವುಗಳ ಸಂಬಂಧದಿಂದ ಸ್ಪೃಶ್ಯ ಯೋಗ್ಯಸ್ಥಿತಿಯನ್ನು ಪಡೆಯಲು ಯತ್ನಿಸತಕ್ಕದ್ದು; ಮತ್ತು ಅಂತ್ಯಜೋದ್ಧಾರಕರು ತನುಮನೋಧನಗಳಿಂದ ಅವರ ಆ ಯತ್ನಕ್ಕೆ ಮನಃಪೂರ್ವಕ ಸಹಾಯ ಮಾಡತಕ್ಕದ್ದು. ಹಾಗೇನೂ ಮಾಡದೆ ಅಂತ್ಯಜೋದ್ಧಾರಕರು ಅಂತ್ಯಜರೊಡನೆ ಬಳಿಕೆ ಮಾಡಿ, ಅಥವಾ ಅವರೊಡನೆ ಊಟ-ಉಡಿಗೆ ಮಾಡಿದರೆ, ಇವರು ಧರ್ಮಲಂಡರೆಂದು ತಿಳಿದು ಸಮಾಜವು ಅವರನ್ನು ಧಿಕ್ಕರಿಸುವದೇ ನಿಶ್ಚಯವು. ಅಂತ್ಯಜರು ತಾವೇನು ತಿದ್ದಿಕೊಳ್ಳದೆ ರಾಷ್ಟ್ರೀಯ ವ್ಯವಹಾರದ ನೆವದಿಂದ ಮೊದಲು ತಮ್ಮನ್ನು ಸ್ಪರ್ಶ ಮಾಡಿರೆಂದು ಸಮಾಜಕ್ಕೆ ಹೇಳುವ ಸಾಹಸ ಮಾಡುವದಕ್ಕಿಂತ, ಅಥವಾ ಅಂತ್ಯಜೋದ್ಧಾರಕರು ರಾಷ್ಟ್ರೀಯ ಕಾರ್ಯಕ್ಕಾಗಿ ಅಸ್ಪೃಶ್ಯದೋಷವನ್ನು ತೆಗೆದು ಹಾಕಿರೆಂದು ಹಾದಿಯಬಿಟ್ಟು ಸಮಾಜಕ್ಕೆ ಹೇಳುವ ಸಾಹಸ ಮಾಡುವದಕ್ಕಿಂತ, ಅಸ್ಪೃಶ್ಯಪರಿತ್ಯಾಗವು ಅವಶ್ಯವಾಗಿರುವ ರಾಷ್ಟ್ರೀಯ ವ್ಯವಹಾರದಲ್ಲಿ ಅಸ್ಪೃಶ್ಯರು ಮೇಲಾಟದಿಂದ ಮುಂದುವರಿದರೆ, ಹಾಗು ಅಂತ್ಯಜೋದ್ಧಾರಕರು ಅವರು ಮುಂದುವರಿಯುವಂತೆ ಯತ್ನಿಸಿದರೆ ತಕ್ಕ ಸಮಯವು ಒದಗಿದ ಕೂಡಲೆ ತಾನೇ ಕಾರ್ಯವಾಗುತ್ತದೆ. ಧರ್ಮ, ಜಾತಿ, ವಿದ್ಯೆ, ಸಂಸ್ಕಾರ ಮುಂತಾದವುಗಳೆಲ್ಲ ರಾಷ್ಟ್ರದಲ್ಲಿ ಅಂತರ್ಭೂತವಾಗುತ್ತಿದ್ದು, ರಾಷ್ಟ್ರಧರ್ಮದಿಂದಲೇ ಅವು ಪರಿಪೋಷಿಸಲ್ಪಡ ತಕ್ಕವಾದ್ದರಿಂದ, ಅವುಗಳ ಸಂಬಂಧದ ಅಲ್ಪ ಸ್ವಲ್ಪ ಹಾನಿಯಾದರೂ ಸೋಸಿ ಎಲ್ಲರೂ ರಾಷ್ಟ್ರಹಿತವನ್ನು ಸಾಧಿಸಬೇಕಾಗುವದು.

ಕಾಶಿಮಖಾನ–ರಾಷ್ಟ್ರಭಕ್ತರು ಅಸ್ಪೃಶ್ಯತೆಯ ನಿರ್ಬಂಧಾದಿಗಳನ್ನು ಮುರಿದು ಸ್ವಚ್ಛಂದವಾಗಿ ವರ್ತಿಸಿದರೂ ಅವರು ಕ್ಷಮ್ಯರಲ್ಲವೋ? ಅವರು ರಾಷ್ಟ್ರಹಿತಕ್ಕಾಗಿ ಸ್ವಾರ್ಥತ್ಯಾಗ ಮಾಡುವದರಿಂದ ಅವರನ್ನು ಧರ್ಮಿಷ್ಠರೆಂದು ತಿಳಿದು ಅವರೊಡನೆ ಯಾಕೆ ಬಳಿಕೆ ಮಾಡಬಾರದು?

ಮಾಧವಾಚಾರ್ಯ–ಕಾಸಿಮಖಾನ, ಇಂಥ ಔಪಚಾರಿಕವಾದ ಹುರುಳಿಲ್ಲದ ಧರ್ಮನಿಷ್ಠೆಯನ್ನು ನಮ್ಮ ವೈದಿಕ ಧರ್ಮವೇ ಏಕೆ, ಯಾವ ಧರ್ಮವೂ ಮನ್ನಿಸಲಿಕ್ಕಿಲ್ಲ. ಧರ್ಮದ ನಿರ್ಬಂಧಕ್ಕೊಳಗಾಗದೆ ಸ್ವಚ್ಛಂದವಾಗಿ ನಡೆದು ರಾಷ್ಟ್ರೋದ್ಧಾರ ಮಾಡುವವರೂ, ನಾವು ರಾಷ್ಟ್ರೋದ್ಧಾರ ಮಾಡುವೆವೆಂಬ ನೆವದಿಂದ ಯಾವದೊಂದು ಬಗೆಯ ಪ್ರತಿಫಲವನ್ನು ಬಯಸುವವರೂ ನಿಜವಾದ ರಾಷ್ಟ್ರೋದ್ಧಾರಕರಲ್ಲವೇ ಅಲ್ಲ! ಆತ್ಮಕ್ಕೆ ದೇಹವು ಆವರಣ ವಾಗಿರುವಂತೆ, ಆತ್ಮೀಯ ಸ್ವಾತಂತ್ರ್ಯಕ್ಕೆ ದೈಹಿಕ ಸ್ವಾತಂತ್ರ್ಯವು ಆವರಣ ವಾಗಿರುವದೆಂಬುದನ್ನು ಹಿಂದೆ ಹೇಳಿರುವೆನು. ಸಂರಕ್ಷಣದ ದೃಷ್ಟಿಯಿಂದ ಆವರಣಕ್ಕೆ ಮಹತ್ವವಿದ್ದರೂ, ಆತ್ಮವಿಲ್ಲದಿದ್ದರೆ ಆವರಣವು ನಿರರ್ಥಕವಾದದ್ದೆಂಬದನ್ನು ಮರೆಯಲಾಗದು. ಅದರಂತೆ ಆತ್ಮೀಯ ಸ್ವಾತಂತ್ರ್ಯದ, ಅಂದರೆ ಧಾರ್ಮಿಕ ಸ್ವಾತಂತ್ರ್ಯದ ದೃಷ್ಟಿಯಿಲ್ಲದೆ ಬರಿಯ ದೈಹಿಕಸ್ವಾತಂತ್ರ್ಯದ ಅಂದರೆ ರಾಷ್ಟ್ರೀಯ ಸ್ವಾತಂತ್ರ್ಯದ ಸ್ವಚ್ಛಂದಾಚರಣವು ನಿರರ್ಥಕವೇ ಸರಿ! ನಮ್ಮಿಂದ ರಾಷ್ಟ್ರೋದ್ಧಾರ ವಾಗುವದರಿಂದ ನಾವು ಹೇಗೆ ನಡೆದರೂ ನಮ್ಮನ್ನು ಧರ್ಮಿಷ್ಠರೆಂದು ತಿಳಿಯಿರೆಂದು ಹೇಳುವದು, ಅಥವಾ ಧರ್ಮಶೀಲರೊಡನೆ ಒತ್ತಾಯದ ಪ್ರಯತ್ನದಿಂದ ವ್ಯವಹರಿಸಹೋಗುವದು ಧರ್ಮನಿಷ್ಠೆಯ ಹುರುಳಿಲ್ಲದ ಸಮಾಜದ ಒಪ್ಪಿಗೆಗಾಗಿ ತಮ್ಮ ರಾಷ್ಟ್ರೋದ್ಧಾರತೆಯನ್ನು ಮುಂದೆ ಮಾಡಿದಂತಾಗುವದಿಲ್ಲವೊ ? ಅಂದಬಳಿಕ ಇಂಥವರು ನಿಜವಾದ ಸ್ವಾರ್ಥ ತ್ಯಾಗಿಗಳು ಹ್ಯಾಗೆ ? ರಾಷ್ಟ್ರೀಯ ವ್ಯವಹಾರವೇ ಇರಲಿ, ಧಾರ್ಮಿಕ ವ್ಯವಹಾರವೇ ಇರಲಿ ಅದರಲ್ಲಿ ಸತ್ಯವೂ, ಸರಳತನವೂ ಗರ್ಭಿತವಾಗಿರಬೇಕು; ಆದ್ದರಿಂದ ರಾಷ್ಟ್ರೋದ್ಧಾರದ ಮುರವತ್ತಿನಿಂದ ಧರ್ಮಿಷ್ಠರೆನಿಸಿಕೊಳ್ಳುವದಕ್ಕಿಂತ ಸತ್ಯವನ್ನು ಸ್ಮರಿಸಿ ಧಾರ್ಮಿಕ ವ್ಯವಹಾರಭ್ರಷ್ಟತೆಯನ್ನು ಸರಳತನದಿಂದ ಒಪ್ಪಿಕೊಳ್ಳುವದರಲ್ಲಿಯೇ ಹೆಚ್ಚು ಗೌರವವೂ, ಪೂಜ್ಯತೆಯೂ ಇರುವವು. ಇದು ನಿಷ್ಕಾಮದ ಉಚ್ಚತರ ಸ್ವಾರ್ಥತ್ಯಾಗವಾದದ್ದರಿಂದ, ಅದು ನಿಶ್ಚಯವಾಗಿ ಭಗವತ್ಪ್ರೀತಿಗೆ ಕಾರಣವಾಗುವದು! ಇನ್ನು ರಾಷ್ಟ್ರೋದ್ಧಾರಕನು ಅನಿವಾರ್ಯ ಕಾರಣದ ಮೂಲಕ ಧರ್ಮಭ್ರಷ್ಟನಾಗಿದ್ದು, ನಿಜವಾಗಿ ಪಶ್ಚಾತ್ತಾಪವುಳ್ಳವನಾಗಿದ್ದರೆ ಧರ್ಮೋಕ್ತಪ್ರಾಯಶ್ಚಿತ್ತಗಳು ಅಂಥವರ ಶುದ್ಧೀಕರಣಕ್ಕಾಗಿ ಇದ್ದೇ ಇರುವವು. ಒಟ್ಟಿಗೆ, ಧರ್ಮದ ಪತಿತನಾದ ರಾಷ್ಟ್ರೋದ್ಧಾರಕನು ಪ್ರಾಯಶ್ಚಿತ್ತದಿಂದ ಶುದ್ಧವಾಗುವ ಹಾಗಿದ್ದರೆ ಆತನ ಪಶ್ಚಾತ್ತಾಪಾದಿ ಧಾರ್ಮಿಕಭಾವನೆಗಳು ಬಲವತ್ತರವಿದ್ದ ಮಾನದಿಂದ ಆತನು ಪ್ರಾಯಶ್ಚಿತ್ತದಿಂದ ಶುದ್ಧವಾಗಬಹುದು; ಹಾಗಾಗಲಿಕ್ಕೆ ಮಾರ್ಗವಿಲ್ಲದಿದ್ದರೆ ಆತನು ಪತಿತನಾಗಿಯೇ ಇರಬೇಕು. ಹೀಗೆ ಆ ಮಹಾತ್ಮನು ದೇಹ ದೃಷ್ಟಿಯಿಂದ ಪತಿತನಾಗಿದ್ದರೂ, ಆತ್ಮದ ಉಚ್ಚತರ ಪಾವಿತ್ರ್ಯದ ದೃಷ್ಟಿಯಿಂದ ಲೋಕವಂದ್ಯನೂ, ಭಗವತ್ಪ್ರೀತಿಪಾತ್ರನೂ ಆಗಿರುವನು ! ಇದನ್ನು ಮರೆತು ''ನನ್ನ ಜೋಡಿಗೊಂದು ಗಡರಗಪ್ಪೆ'' ಅನ್ನುವಹಾಗೆ ಯಾವ ರಾಷ್ಟ್ರೋದ್ಧಾರಕನೂ ಧಾರ್ಮಿಕ–ನೈತಿಕ ವಿಷಯದಲ್ಲಂತು ಮಾಡತಕ್ಕದ್ದಲ್ಲ.

ಈ ಮೇರೆಗೆ ನುಡಿಯಲು, ಅವರ ಮಾತಿನಿಂದ ಎಲ್ಲರಿಗೂ ಸಮಾಧಾನವಾಯಿತು. ಆಗ ದುರಗಪ್ಪನು ಎದ್ದುನಿಂತು ಕೈಜೋಡಿಸಿ–''ನನ್ನೊಡೆಯಾ, ನಮ್ಮ ಮೇಲೆ ಎಷ್ಟು ದಯಮಾಡಿದೆಯಲ್ಲ! ರಾಷ್ಟ್ರವೋ ಪಾಷ್ಟ್ರವೋ ಅದೇನು ನನಗೆ ತಿಳಿಯದು. ಈಗ ನೀನು ದಡ್ಡರಾಗಿರುವ ನಮ್ಮನ್ನು ಜಾಣರನ್ನಾಗಿಮಾಡಬೇಕೆನ್ನುತ್ತೀಯಾ–ಹತ್ತರ ಕರಕೊಳ್ಳಬೇಕೆನ್ನುತ್ತೀಯಾ? ಮಾಡು, ಜಾಣರನ್ನೂ ಮಾಡು, ಹತ್ತರವೂ ಕರಕೋ. ನಿನ್ನ ಈ ಉಪಕಾರವನ್ನು ನಾವು ಎಂದೂ ಇಟ್ಟುಕೊಳ್ಳಲಿಕ್ಕಿಲ್ಲ ಬಿಡು. ನಿನ್ನ ಪಾದವಿದ್ದಲ್ಲಿ ನಮ್ಮ ತಲೆ ! ಬೆಂಕಿಯಲ್ಲಿ ಹಾರೆಂದರೆ ನಾವು ಹಾರತಕ್ಕವರು ! ನಮ್ಮೊಡೆಯಾ, ನಮ್ಮನ್ನು ಯಾವ ಕೆಲಸಕ್ಕೆ ಹಚ್ಚುತ್ತೀ ಹಚ್ಚು; ಹಚ್ಚಿಯಾದರೂ ನೋಡು. ನಿನ್ನ ಮಕ್ಕಳು ಹೊಲೆಯರು ನಾವು ಸೈ ಅನಿಸಿಕೊಂಡರೆ ಆಯಿತೋ ಇಲ್ಲವೋ ? ಇಷ್ಟು ದಿವಸ ಹೊರಗಿಟ್ಟಿದ್ದಿ, ಹೊರಗಿದ್ದು ದೇಶದ ಹಾಗು ನಿಮ್ಮ ಚಾಕರಿ ಮಾಡಿದೆವು. ಈಗ ಹತ್ತರ ಕರೆದರೆ ಹತ್ತರ ಬಂದು ಚಾಕರಿ ಮಾಡುವೆವು. ನೀನು ಮನುಷ್ಯನಲ್ಲ, ದೇವರು; ನೀನು ಮನುಷ್ಯನೆನ್ನುವವನ ಬಾಯಲ್ಲಿಮಣ್ಣೇ ಸರಿ.ನಮ್ಮಪ್ಪಾ, ನಮ್ಮೊಡೆಯಾ ! ಏನು ಮಾಡಿದರೂ ನಮ್ಮ ಹೊಲೆಯತನವನ್ನು ಮಾತ್ರ ಕಳೆಯಬೇಡ ! ನಾನು ಆಗಲೆ ಹೇಳಿರುವೆನಲ್ಲವೇ ? ಹೊಲೆಯನು ಹೊಲೆಯನಾಗಿಯೇ ಇರಬೇಕು; ಹಾರುವನು ಹಾರುವನಾಗಿಯೇ ಇರಬೇಕು; ಹೊಲೆಯನು ಹಾರುವನಾದರೆ ಹಾರುವನು ಹೊಲೆಯನಾದರೆ ದೇವರು ಮೆಚ್ಚನೆಂದು ! ಯಪ್ಪಾ, ಇದ್ದದ್ದು ಆದೀತು ಇಲ್ಲದ್ದು ಹ್ಯಾಗಾದೀತು ? ಆಗಬಾರದ್ದು ಆದರೆ ಸೋಗುಮಾತ್ರ ಆದೀತು! ಹಾರುವನು ಕೆಟ್ಟು ಹೊಲೆಯನಾಗಲಿಕ್ಕೆ ತಡವಾಗಲಿಕ್ಕಿಲ್ಲ; ಆದರೆ ಯಪ್ಪಾ ಹೊಲೆಯನು ಹೋಗಿ ಹಾರುವನಾಗಲಿಕ್ಕೆ ಏಸು ಜನ್ಮಬೇಕೋ ದೇವರೇ ಬಲ್ಲ? ಹೊಲೆಯನಾದರೇನು, ಹಾರುವನಾದರೇನು ಅವರು ಇರುವ ಹಾಗೆ ಒಬ್ಬರ ಮೇಲೊಬ್ಬರು ಪ್ರೀತಿಯಿಂದ ಇದ್ದರೆ ಇಬ್ಬರೂ ದೇವರಿಗೆ ಬೇಕಾಗುವರು. ದೇವರೂ, ಇಗೊ ನನಗೆ ಇವರಿಬ್ಬರು ಮಕ್ಕಳಿರುವರು. ಇವನ ಹೆಸರು ಸಿಡ್ಲ, ಇವನ ಹೆಸರು ಗೋಣ್ಯಾ. ಸಿಡ್ಲನು ದಿನದಿಂದ ಹಿರಿಯನು, ಗುಣದಿಂದ ಕಿರಿಯನು. ಗೋಣ್ಯಾ ಗುಣದಿಂದ ಹಿರಿಯನು, ದಿನದಿಂದ ಕಿರಿಯನು; ಆದ್ದರಿಂದ ಇವರಿಬ್ಬರು ತಮ್ಮ ಹಿರಿಯ–ಕಿರಿಯತನದ ಸಲುವಾಗಿ ಹೊಟ್ಟೇಕಿಚ್ಚುಪಡದೆ ತಮ್ಮ ತಮ್ಮೊಳಗೆ ಪ್ರೀತಿಯಿಂದ ನಡೆದುಕೊಂಡರೆ ನನ್ನ ಮನಸ್ಸಿಗೆ ಹಸನಾದೀತು. ಹಾಗೆ ಮಾಡದೆ ''ನಾನು ಹೆಚ್ಚಿನವ, ನಾನು ಹೆಚ್ಚಿನವ'' ಎಂದು ಹೊಲೆಯರಿಗಿಂತಲೂ ಹೊಲೆಯರಾಗಿ ಬಡಿದಾಡಹತ್ತಿದರೆ ನನಗೆ ಹಸನಾದೀತೇ ? ಹಾಗೆಯೇ ದೇವರ ಮಾತು ! ಯಪ್ಪಾ, ನಾವೆಲ್ಲರೂ ದೇವರ ಮಕ್ಕಳು. ಒಬ್ಬರು ಒಂದರಿಂದ ಹಿರಿಯರಾಗಿದ್ದರೆ ಒಬ್ಬರು ಒಂದರಿಂದ ಹಿರಿಯರಾಗಿರುವೆವು. ಒಬ್ಬರು ಒಂದರಿಂದ ಕಿರಿಯರಾಗಿದ್ದರೆ, ಒಬ್ಬರು ಒಂದರಿಂದ ಕಿರಿಯರಾಗಿರುವೆವು. ಇದನ್ನು ಮರೆತು ಹಿರಿಯ–ಕಿರಿಯತನದ ಸಲುವಾಗಿ, ಅಥವಾ ಹೆಚ್ಚಿನವರು ಕಡಿಮೆಯವರೆನ್ನುವದರ ಸಲುವಾಗಿ ತಿಳಿಗೇಡಿತನದಿಂದ ಬಡಿದಾಡಿದರೆ ಶಿವನು ಮೆಚ್ಚಿಯಾನೆಯೆ? ಶಿವನು ನಮ್ಮ ದೊಡ್ಡಿಸ್ತನ ನೋಡುವದಿಲ್ಲ; ನಮ್ಮ ದೊಡ್ಡಮನಸ್ಸು ನೋಡುವನು; ಶಿವನು ನಮ್ಮ ಮೈ–ಅರಿವೆ–ಅಂಚಡಿ–ಮನೆಮಾರಿನ ಜಳಜಳ ನೋಡುವದಿಲ್ಲ; ನಮ್ಮ ಮನಸ್ಸಿನ ಜಳಜಳ

ನೋಡುವನು! ಯಪ್ಪಾ, ದೇವರು ನೋಡುವದು ಒಳಗಿನ ಜಳಜಳ, ಮನುಷ್ಯರು ನೋಡುವದು ಹೊರಗಿನ ಜಳಜಳ ! ದೇವರೂ, ಮನಶಾ ಮೆಚ್ಚಿ ಮಾಡುವದೇನು? ದೇವರು ಮೆಚ್ಚಿದರೆ ಪಾರಾದೇವು. ಆಗಲಿ ನಮ್ಮೊಡೆಯಾ! ನಮ್ಮನ್ನು ದೇವರು ಮೆಚ್ಚುವ ಹಾಗೂ ಮಾಡು, ಮನುಷ್ಯರು ಮೆಚ್ಚುವ ಹಾಗೂ ಮಾಡು. ಬರೆ ಮನುಷ್ಯರು ಮೆಚ್ಚುವಹಾಗೆ ಮಾತ್ರ ಮಾಡಬೇಡ. ಬೇಕಾದರೆ ಮನುಷ್ಯರು ಮೆಚ್ಚದಿದ್ದರೂ ದೇವರು ಮೆಚ್ಚುವಹಾಗೆ ಮಾಡು. ಇಬ್ಬರೂ ಮೆಚ್ಚಿದರೆ ಮತ್ತಿಷ್ಟು ನೆಟ್ಟಗಲ್ಲವೆ ?'' ಎಂದು ನುಡಿದು, ಮುಜುರೆಮಾಡಿ ಕುಳಿತುಕೊಳ್ಳಲು, ಜ್ಞಾನಿಗಳು ಹೊಲೆಯನ ಮಾತಿಗೆ ಮೆಚ್ಚಿ, ''ಈ ಹೊಲೆಯನ ಯೋಗ್ಯತೆಯೇ ಯೋಗ್ಯತೆಯು'' ಎಂದು ಅವನನ್ನು ಕೊಂಡಾಡಿದರು. ಅಷ್ಟರಲ್ಲಿ ಕಾಸಿಮಖಾನನು ಎದ್ದುನಿಂತು– ''ಭಗವನ್, ದಿವ್ಯವಾದ ಹಲವು ಬಗೆಯ ಬೋಧಗಳಿಂದ ನನ್ನ ಅಜ್ಞಾನವು ದೂರವಾಯಿತು; ಆದರೆ ವ್ಯಾವಹಾರಿಕ ಯೋಗತ್ರಯಗಳು–ಸಹಕಾರ, ಅಸಹಕಾರ, ಪ್ರತಿಕಾರ ಎಂದು ಮೂರು ಇರುತ್ತವೆಂದು ಹಿಂದಕ್ಕೆ ಅಪ್ಪಣೆ ಕೊಡಿಸೋಣವಾಯಿತು. ಆದರೆ ಅವನ್ನಷ್ಟು ವಿವರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ಪ್ರಾರ್ಥಿಸುವೆನು'' ಅನ್ನಲು, ಆಚಾರ್ಯರು–''ನಾಳೆ ಅವಶ್ಯವಾಗಿ ಅವುಗಳ ವಿಚಾರವಾಗಲಿ'' ಎಂದು ಹೇಳಿ, ಸಂಧ್ಯಾಕಾಲವಾದದ್ದರಿಂದ ಅಂದಿನ ಪ್ರವಚನವನ್ನು ನಿಲ್ಲಿಸಿದರು.

## ಸಹಯೋಗ

ಕಂಪಲಿಯ ಹಿರಿಯ ಮಠದ ಮುಂದಿನ ವಿಶಾಲವಾದ ಅಂಗಳವು. ಆ ಅಂಗಳದಿಂದ ಮಠವನ್ನು ಪ್ರವೇಶಿಸಲಿಕ್ಕೆ ಪೂರ್ವದಿಕ್ಕಿಗೊಂದು ಭವ್ಯವೂ, ಸುಂದರವೂ ಆದ ಮಹಾದ್ವಾರವಿತ್ತು. ಆ ಮಹಾದ್ವಾರದ ಮೇಲಿನ ನಗಾರ ಖಾನೆಯಲ್ಲಿ ವಿವಿಧ ಮಂಗಲವಾದ್ಯಗಳು ತ್ರಿಕಾಲದ ಶಿವಪೂಜೆಯ ಕಾಲಕ್ಕೆ ಬಾರಿಸುತ್ತಲಿರುವವು. ಇಂದು ಹೊರಗೆ ತಾಸು ಹೊತ್ತು ಏರಿರಲು, ಆ ವಾದ್ಯಗಳು ಗಂಭೀರಧ್ವನಿಯಿಂದ ಬಾರಿಸುತ್ತಿರುವಾಗ, ಮಠದಲ್ಲಿ ಶ್ರೀ ವಿರೂಪಾಕ್ಷಾರ್ಯರೇ ಮೊದಲಾದ ಶಿವಮೂರ್ತಿಗಳು ಲಿಂಗಪೂಜಾತತ್ಪರರಾಗಿದ್ದರು. ವಿರೂಪಾಕ್ಷಾರ್ಯರು ಲಿಂಗಪೂಜೆಯಲ್ಲಿ ಮಹಾಬಲ್ಲಿದರು. ಆ ಸತ್ವಶಾಲಿಗಳಾದ ಮಹಾಮಹಿಮರ ತಪಸ್ಸಾಮರ್ಥ್ಯವು ಸುಪ್ರಸಿದ್ಧವಾದದ್ದು. ಅವರು ವಾಕ್ ಸಿದ್ಧಿ–ಹಸ್ತಸಿದ್ಧಿ–ಕ್ರಿಯಾಸಿದ್ಧಿಗಳ ಮೂಲಕವಾಗಿ ಬಹುದೂರದ ಸರ್ವವರ್ಣದವರೂ ಅವರಿಂದ ಇಷ್ಟಾರ್ಥಗಳನ್ನು ಪಡೆದು ಕೃತಾರ್ಥ ರಾಗುತ್ತಲಿದ್ದರು. ಅವರ ಭೂತದಯೆ–ದೀನವಾತ್ಸಲ್ಯ–ಸಜ್ಜನಾನುರಾಗ– ವಾಙ್ಮಾಧುರ್ಯ–ಸರ್ವತ್ರಸಮಭಾವ ಮುಂತಾದ ದಿವ್ಯಗುಣಗಳ ಮೂಲಕ ನಾಸ್ತಿಕರ ಹೃದಯವೂ ಕರಗಿ, ಅದರಲ್ಲಿ ಆಸ್ತಿಕಭಾವದ ಉದಯವಾಗುತ್ತಿತ್ತು. ಇಂಥ ಮಹಾತ್ಮರು ಕಂಪಲಿಯ ಹಿರಿಯಮಠಕ್ಕೆ ಅಪರೂಪದ ಹಾಗೆ ಅತಿಥಿಗಳಾಗಿ ದಯಮಾಡಿಸಿದ್ದರಿಂದ, ಕಂಪಲಿಗೆ ಕಂಪಲಿಯೇ ಅವರನ್ನು

ಉಪಚರಿಸುವಲ್ಲಿ ಉತ್ಸಾಹಪಡುತ್ತಲಿತ್ತು, ಮಠದಲ್ಲಿ ಭಕ್ತಮಾಹೇಶ್ವರರ ಸಮ್ಮರ್ದವು ವಿಶೇಷವಾದದ್ದರಿಂದ, ಸತ್ಕಾರದ ಸಂಭ್ರಮಕ್ಕೆ ವಿಶೇಷವಾಗಿ ಕಳೆಯೇರಿ, ಎಲ್ಲಿ ನೋಡಿದರೂ ಲಿಂಗಾಂಗ ಸಾಮರಸ್ಯದ ಸೌಭಾಗ್ಯವು ಸೂರೆಯಾಗುತ್ತಿರುವದು! ಹಿರಿಮಠದ ಪಾಠಶಾಲೆಯ ವಟುಗಳು ತಮ್ಮ ಲಿಂಗಪೂಜೆಯನ್ನು ತೀರಿಸಿಕೊಂಡು, ಹಣೆಯಲ್ಲಿ ವಿಭೂತಿಯೂ – ಕೊರಳಲ್ಲಿ ಲಿಂಗವೂ ಒಪ್ಪುತ್ತಿರಲು, ಯಾರು ಕಪನಿ ಕಿವಿಟೊಪ್ಪಿಗೆಗಳನ್ನು ಹಾಕಿಕೊಂಡು, ಯಾರು ಬರಿಯ ಕೌಪೀನವನ್ನು ಹಾಕಿಕೊಂಡು ಅತಿಥಿಗಳ ಸತ್ಕಾರದ ಅವರಸರದಲ್ಲಿ ಚಟುವಟಿಕೆಯಿಂದ ಓಡಾಡುತ್ತಿದ್ದರು. ಹಿರಿಯಮಠದ ವ್ಯವಹಾರವು ಗೃಹಸ್ಥಾಶ್ರಮಿಗಳಾದದ್ದರಿಂದ ಅಲ್ಲಿ ಯತ್ಯಾಶ್ರಮವ್ಯವಹಾರದ ರುಕ್ಷತೆಯು ಸರ್ವಥಾ ತೋರುತ್ತಿದ್ದಿಲ್ಲ. ಹೆಣ್ಣುಮಕ್ಕಳೂ, ಹುಡುಗರೂ ದಿವ್ಯವಾದ ದೈವೀತೇಜಸ್ಸಿನಿಂದ ಮಠಕ್ಕೆ ಅಲಂಕಾರಭೂಷಿತರಾಗಿ ಒಪ್ಪುತ್ತಿದ್ದರು. ಅಂದಿನ ದಿವಸವು ಮಠದವರಿಗೆಲ್ಲ ಅತ್ಯಂತ ಉತ್ಸಾಹಜನಕವಾಗಿತ್ತು. ಹೀಗೆ ಮಠದಲ್ಲಿ ಪ್ರಾತಃಕಾಲದ ವೀರಶೈವ ಧರ್ಮೋಚಿತಾಚರಣೆಗಳು ಜರುಗುತ್ತಿರಲು, ಹೊರಗೆ ಅಂಗಳದಲ್ಲಿ ಗದ್ದಲವಾದಂತೆ ಜನಸಮ್ಮರ್ದವು ಕೂಡುತ್ತಲಿತ್ತು.

ಮುಂಜಾವಿನ ಎಳೆಬಿಸಿಲು ಏರುತ್ತಿದ್ದರೂ, ಮಠದ ಮುಂದುಗಡೆಯಲ್ಲಿ ವಿಶಾಲವಾದ ಮಂಟಪವನ್ನು ಹಾಕಿಬಿಟ್ಟಿದ್ದರಿಂದ ಬಿಸಿಲಬಾಧೆಯಾಗಲಿಕ್ಕೆ ಮಾರ್ಗವಿದ್ದಿಲ್ಲ. ಅಂಗಳವನ್ನು ಸಾರಿಸಿ ಪ್ರಶಸ್ತವಾಗಿ ಗುಡಾರವನ್ನು ಹಾಸಿದ್ದರು. ತೋರಣ ಪತಾಕಾದಿಗಳಿಂದ ಅಲಂಕೃತವಾಗಿದ್ದ ಈ ಮಂಟಪದಲ್ಲಿ ಸಹಸ್ರಾವಧಿ ಜನರು ಸುಖದಿಂದ ಕುಳಿತುಕೊಳ್ಳಬಹುದಾಗಿತ್ತು. ಇಂದು ಆ ಮಂಟಪದಲ್ಲಿ ರಾಷ್ಟ್ರೀಯ ವ್ಯವಹಾರಕ್ಕಾಗಿ ಕನ್ನಡಿಗರು ಜಾತಿಭೇದ–ಸ್ಪೃಶ್ಯಾಸ್ಪೃಶ್ಯಾದಿ ಭೇದಗಳನ್ನೆಣಿಸದೆ ತಾವೆಲ್ಲರೂ ದೇಶಬಾಂಧವರೆಂಬ ಉದಾತ್ತಭಾವನೆಯಿಂದ ಕೂಡತಕ್ಕವರಿದ್ದರು. ಹೊತ್ತು ಏರುತ್ತ ಬಂದಂತೆ ಮಂಟಪವು ಜನರಿಂದ ತುಂಬತೊಡಗಿತು. ಅಂದು ಯಾವ ಭೇದವನ್ನೂ ಎಣಿಸದೆ ಬೇಕಾದವರು ಬೇಕಾದಲ್ಲಿ ಕುಳಿತುಕೊಳ್ಳಬಹುದಾಗಿದ್ದರೂ, ಅಸ್ಪೃಶ್ಯರು ತಾವು ಸರಿಬೆರಿಕೆಯಾಗಿ ಜನರಲ್ಲಿ ಬೆರೆಯಲಿಕ್ಕೆಒಪ್ಪದೆ, ಮುಟ್ಟಿ ಕುಳಿತರೂ ತಾವು ಒತ್ತಟ್ಟಿಗೆ ಕುಳಿತುಕೊಳ್ಳುವೆವೆಂದು ಹೇಳಿ, ಅದರಂತೆ ಒತ್ತಟ್ಟಿಗೆ ಗುಡಾರದ ಮೇಲೆ ಕುಳಿತುಕೊಂಡರು. ಉಳಿದ ಜನರೂ ಅನುವು ನೋಡಿ ಅಲ್ಲಲ್ಲಿ ಕುಳಿತುಕೊಂಡರು. ಅಂದು ಅಸ್ಪೃಶ್ಯರು ಸ್ವಚ್ಛವಾದ ಉಡಿಗೆ ತೊಡಿಗೆಗಳನ್ನು ಧರಿಸಿದ್ದರು. ಅವರ ಆ ಉಡಿಗೆ–ತೊಡಿಗೆಗಳಿಂದ ಅವರ ಮನಸ್ಸಿನ ಸ್ವಚ್ಛತೆಗೂ ಆಸ್ಪದವುಂಟಾಯಿತು. ಮಲಿನ ವ್ಯವಹಾರವು ತಮ್ಮ ಹೊಲೆಯತನದ ಲಕ್ಷಣವಾಗಿದ್ದರೂ, ಮಾಲಿನ್ಯವನ್ನು ತಮ್ಮ ಹೊಲೆಯತನದ ವ್ಯವಹಾರದ ಮಟ್ಟಿಗೆ ಇಟ್ಟು ಕೊಂಡು ಉಳಿದ ಪ್ರಸಂಗದಲ್ಲಿ ನಾಗರಿಕಾಚರಣೆಯನ್ನು ತಾವು ಕಾಯ್ದುಕೊಳ್ಳದಿದ್ದರೆ, ಹೀಗೆ ದೊಡ್ಡಿಸ್ತನದಿಂದ ಅಸ್ಪೃಶ್ಯತೆಯ ಬಾಧೆಯಿಲ್ಲದೆ ತಾವು ನಾಲ್ವರೊಳಗೆ ಕುಳಿತುಕೊಳ್ಳುವದು ಸಮಾಧಾನಕರ ವಲ್ಲವೆಂದು ಅವರು ಭಾವಿಸಹತ್ತಿದರು. ಹೀಗೆ ಮಹಾತ್ಮರ ಒತ್ತಾಯದಿಂದ ಅಸ್ಪೃಶ್ಯತೆಯ ಪ್ರತಿಬಂಧವನ್ನು ದುರ್ಲಕ್ಷಿಸಿದರೂ, ಮನಸ್ಸಿನ ಸಂಕೋಚವೃತ್ತಿಯು ಒಮ್ಮೆಲೆ

ಹೋದದ್ದರಿಂದ ಎಲ್ಲರಿಗೂ ಹಿಡಿದು ಬಿಟ್ಟಹಾಗಾಗಿತ್ತು; ಆದರೂ ದೇಶ–ಕಾಲ–ಪರಿಸ್ಥಿತಿಗನುಸರಿಸಿ, ಲೋಕಕಲ್ಯಾಣ ಮಾಡುವದಕ್ಕಾಗಿಯೇ ಅವತರಿಸುವ ಮಹಾತ್ಮರ ಮಾತು ನಡೆಸುವದು ಅವಶ್ಯವೆಂದು ತಿಳಿದು, ತಾವು ಹಾಗೆ ಮಹಾತ್ಮರ ಆಜ್ಞೆ ಪಾಲಿಸಹತ್ತಿದ್ದಕ್ಕಾಗಿ ಎಲ್ಲರೂ ಸಮಾಧಾನಪಡುತ್ತ ಮಹಾತ್ಮರ ಬರವನ್ನು ಎದುರು ನೋಡುತ್ತ ಕುಳಿತುಕೊಂಡರು ! ಹಿಂದಿನ ಪ್ರಕರಣದಲ್ಲಿ ಕಾಸಿಮಖಾನನು ಕೇಳಿಕೊಂಡಂತೆ ವ್ಯಾವಹಾರಿಕ ಯೋಗತ್ರಯಗಳಾದ ಸಹಯೋಗ–ಅಸಹಯೋಗ–ಪ್ರತಿಯೋಗಗಳನ್ನು ಕುರಿತು ಅಂದು ಆಚಾರ್ಯರು ತಿಳಿಸಿ ಹೇಳತಕ್ಕವರಿದ್ದರು. ಸಾಮಾನ್ಯ ಜನರ ಶಿಕ್ಷಣಕ್ಕೆ ಪ್ರವಚನ ಪದ್ಧತಿಗಿಂತ ಪ್ರಶ್ನೋತ್ತರ ಪದ್ಧತಿಯೇ ಯೋಗ್ಯವೆಂದು ತಿಳಿದು ಆಚಾರ್ಯರು ಬಹುತರಅದೇ ಪದ್ಧತಿಯನ್ನು ಉಪದೇಶ ಪ್ರಸಂಗದಲ್ಲಿ ಅನುಸರಿಸುತ್ತಿದ್ದರು; ಮೇಲಾಗಿ ಪುರಾಣಪ್ರಿಯರಾದ ನಮಗೆ ಆ ಸಂಭಾಷಣದ ಪದ್ಧತಿಯು ಅಪ್ರಿಯವಾದದ್ದಲ್ಲ !

ಸರ್ವರಿಗೂ ಸರ್ವವ್ಯವಹಾರಗಳಲ್ಲಿಯೂ ಉಪಯೋಗಿಸುವ ಈ ಯೋಗತ್ರಯಗಳ ಸಾಂಗೋಪಾಂಗ ವಿವರಣವನ್ನು ಕೇಳುವುದಕ್ಕಾಗಿ ಊರ ಮಧ್ಯದಲ್ಲಿರುವ, ಹಾಗು ಸರ್ವಸಾಮಾನ್ಯರಾದ ವಿರೂಪಾಕ್ಷಾರ್ಯರು ಇಳಿದುಕೊಂಡಿದ್ದ ಹಿರಿಯಮಠದ ವಿಶಾಲವಾದ ಅಂಗಳವೇ ಯೋಗ್ಯವಾದ ಸ್ಥಳವೆಂದು ತಿಳಿದು, ಅಲ್ಲಿಯೇ ಪ್ರವಚನವಾಗತಕ್ಕದ್ದೆಂದು ಆಚಾರ್ಯರು ನಿಯಮಿಸಿದ್ದರು. ಹೀಗೆ ಮಾಡುವದರಿಂದ ತಾವು ವಿರೂಪಾಕ್ಷಾರ್ಯರಿದ್ದಲ್ಲಿಗೆ ಹೋಗಿ ಅವರನ್ನು ಅನಾಯಾಸವಾಗಿ ಸತ್ಕರಿಸಿದಂತೆ ಆಚಾರ್ಯರಿಗೆ ಆಗುತ್ತಿತ್ತು. ಆಚಾರ್ಯರ ಲೋಕಸಮ್ಮತವಾದ ಪ್ರವಚನಗಳ ಕೀರ್ತಿಯು ಎಲ್ಲಕಡೆಯಲ್ಲಿಯೂ ಹಬ್ಬಿದ್ದರಿಂದ, ಕಂಪಲಿಯ ಬಾಲವೃದ್ಧ ಸ್ತ್ರೀ–ಪುರುಷರು ಪ್ರವಚನವನ್ನು ಕೇಳುವದಕ್ಕಾಗಿ ಆತುರಪಟ್ಟರು. ಸ್ವಲ್ಪ ಹೊತ್ತಿನಲ್ಲಿಯೇ ಅಂಗಳವು ಜನರಿಂದ ತುಂಬಿಹೋಯಿತು. ಆಚಾರ್ಯರ ಪ್ರವಚನ ಶ್ರವಣಕ್ಕಿಂತ ಅವರ ದರ್ಶನಕ್ಕಾಗಿ ಜನರು ಮುಗಿಬೀಳುವದು ಹೆಚ್ಚು. ಅದರಲ್ಲಿ ಮೂವರು ಶ್ರೇಷ್ಠಪುರುಷರ ಸಂದರ್ಶನದ ಲಾಭವು ಒಮ್ಮೆಲೆ ಆಗುವ ಯೋಗವು ಒದಗಿಬಂದದ್ದರಿಂದ ಲೋಕಸಂಗ್ರಹಕ್ಕೆ ಮತ್ತಿಷ್ಟು ಅನುಕೂಲವಾಯಿತು. ಆಚಾರ್ಯರು ಬರುವದರೊಳಗಾಗಿ ಅಂಗಳವು ಕಿಕ್ಕಿರಿದು ತುಂಬಿಹೋಯಿತು. ಮೂರು ತಾಸಾಗುತ್ತಿರಲು, ವಿರೂಪಾಕ್ಷಾರ್ಯರು ತಮ್ಮ ಲಿಂಗಪೂಜೆಯನ್ನು ತೀರಿಸಿಕೊಂಡು ಕಂಪಲಿಯ ಹಿರಿಮಠದ ಸಂಗನಬಸವಾರ್ಯರೊಡನೆ ಮಠದ ಮಹಾದ್ವಾರದಿಂದ ಹೊರಗೆ ಬರಲು, ಶಿವನಾಮ ಘೋಷಮಾಡಲು ಸಭೆಗೆ ಸಭೆಯೇ ಪೂಜ್ಯಬುದ್ಧಿಯಿಂದ ಪ್ರತ್ಯುತ್ಥಾನ ಮಾಡಿತು ! ಸಂಗನಬಸವಾರ್ಯರೂ ಸತ್ಪುರುಷರಲ್ಲಿ ಗಣ್ಯರಾಗಿದ್ದರು. ಅವರು ಈಗ ಎಂಟು ದಿನ ಕಾರಣವಶದಿಂದ ಗ್ರಾಮಾಂತರಕ್ಕೆ ಹೋಗಿದ್ದರಾದ್ದರಿಂದ, ಇಷ್ಟು ದಿನ ಉಪವನದಲ್ಲಾದ ಮಾಧವಾಚಾರ್ಯರ ಧಾರ್ಮಿಕ ಪ್ರವಚನಗಳಿಗಾಗಿ ಅವರಿಗೆ ಬರುವದಾಗಿದ್ದಿಲ್ಲ ! ಸಂಗನಬಸವಾಚಾರ್ಯರನ್ನು ಕಂಪಲಿಯ ಸರ್ವಜನರೂ ಪೂಜ್ಯಭಾವದಿಂದ ಮನ್ನಿಸುತ್ತಿದ್ದರು. ಹೀಗೆ ಮಾನ್ಯರಾದ ಇಬ್ಬರು ಆರ್ಯರೂ ಆಸನದಲ್ಲಿ ಕುಳಿತುಕೊಳ್ಳಲು, ಜನರೂ

ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಂಡು, ಕುಳಿತಲ್ಲಿಯೇ ಕೆಲವರು ಮನಸ್ಸಿನಿಂದ ಅವರನ್ನು ಅಭಿವಂದಿಸಿದರು; ಕೆಲವರು ಪ್ರತ್ಯಕ್ಷ ಅವರಿಗೆ ತಲೆಬಾಗಿ ಕೈಮುಗಿದರು.

ಇಂದಿನ ಸಭೆಯ ಯಾವತ್ತು ವ್ಯವಸ್ಥೆಯು ಹುಕ್ಕದೊರೆಯ ಸೂಚನೆಯಂತೆ ವೀರಕೃಷ್ಣನಾಯಕನ ಅಧಿಪತ್ಯದಲ್ಲಿ ಯಥಾಸ್ಥಿತವಾಗಿ ಮಾಡಲ್ಪಟ್ಟಿತ್ತು. ಕೃಷ್ಣನಾಯಕನು ಕೈಜೋಡಿಸಿಕೊಂಡು ಆರ್ಯರ ಪೀಠದ ಬಳಿಯಲ್ಲಿ ನಿಂತುಕೊಂಡಿದ್ದನು. ಆಗ ಸಂಗನಬಸವಾ ಚಾರ್ಯರು– ''ವೀರಕೃಷ್ಣದೊರೆಗಳು ಕುಳಿತುಕೊಳ್ಳಬೇಕು, ನಿಂತುಕೊಳ್ಳುವ ಆಯಾಸವೇಕೆ ? ವೀರಶ್ರೇಷ್ಠ, ಆಚಾರ್ಯರು ಬರುವ ಹೊತ್ತಾಯಿತಲ್ಲವೆ ? ಅವರು ಅನುಷ್ಠಾನವನ್ನು ತೀರಿಸಿಕೊಂಡು ಇಷ್ಟು ಹೊತ್ತಿಗೆ ಹೊರಟು ಬರುತ್ತಿರಬಹುದು'' ಅನ್ನುತ್ತಿರಲು, ರಾಜದೂತನು ಧಾವಿಸುತ್ತ ಬಂದು ವಂದಿಸಿ– ''ಮಹಾತ್ಮರ ಆಗಮನವಾಯಿತು'' ಎಂದು ಸೂಚಿಸಿದನು. ಆಗ ಸಭಿಕರು ಒಮ್ಮೆ ಆರ್ಯದ್ವಯರ ಕಡೆಗೆ, ಒಮ್ಮೆ ಮಾಧವಾಚಾರ್ಯರು ಬರುವ ಮಾರ್ಗದ ಕಡೆಗೆ ನೋಡುತ್ತ ಕುಳಿತುಕೊಂಡರು. ವೀರಕೃಷ್ಣನಾಯಕನು ಆರ್ಯದ್ವಯರ ಅಪ್ಪಣೆ ಪಡೆದು ಆಚಾರ್ಯರನ್ನು ಕರೆತರುವದಕ್ಕಾಗಿ ಜನಸಮ್ಮರ್ದವನ್ನು ದಾಟಿಹೋಗುವಷ್ಟರಲ್ಲಿ ಎಲ್ಲ ರಾಜಕೀಯ ಪರಿವಾರದೊಡನೆ ಆಚಾರ್ಯರ ಸವಾರಿಯು ಸಭೆಗೆ ದಯಮಾಡಿಸಿತು. ಆಗ ಆಚಾರ್ಯರು ಕೃಷ್ಣನಾಯಕನನ್ನು ಕುರಿತು– ''ನಾಯಕ, ಆರ್ಯರ ಲಿಂಗಪೂಜೆ ಯಾಗಿದೆಯೋ ? '' ಎಂದು ಕೇಳಲು, ನಾಯಕನು ಕೈಜೋಡಿಸಿ– ''ಭಗವಾನ್, ಗುರುವರ, ಆರ್ಯವರ್ಯರು ಲಿಂಗಪೂಜೆಯನ್ನು ತೀರಿಸಿಕೊಂಡು ಇದೇ ಸಭಾಸ್ಥಾನಕ್ಕೆ ದಯಮಾಡಿಸಿ ಆಸನದಲ್ಲಿ ಮಂಡಿಸಿರುವರು'' ಎಂದು ನುಡಿಯುತ್ತ ಮುಂದಕ್ಕೆ ಸಾಗಿಬರಲು, ಆಚಾರ್ಯರು ಪರಿವಾರದೊಡನೆ ಹಿರಿಯಮಠದ ಅಂಗಳಕ್ಕೆ ಬಂದರು. ಉಟ್ಟ ಧೋತರ, ಹೊತ್ತ ಧೋತರಗಳ ಮಾತ್ರದಿಂದ ಬಂದಿದ್ದ ಮಹಾತ್ಮರಾದ ಆಚಾರ್ಯರು ಮೂರ್ತಿಮಂತ ವೈರಾಗ್ಯದಂತೆ ಕಾಲುನಡಿಗೆಯಿಂದ ಬರುತ್ತಿರಲು, ದರ್ಬಾರದ ಉಡಿಗೆ–ತೊಡಿಗೆಯಿಂದೊಪ್ಪುವ ಯಾವತ್ತು ರಾಜಪುರುಷರು ಅವರನ್ನು ಅನುಸರಿಸಿ ಕಾಲನಡಿಗೆಯಿಂದಲೇ ಬಂದಿದ್ದರು. ಹೀಗೆ ಆಚಾರ್ಯರು ಯಾವತ್ತು ಪರಿವಾರದೊಡನೆ ಕೃಷ್ಣನಾಯಕನನ್ನು ಅನುಸರಿಸಿ ಸಭಾಸ್ಥಾನವನ್ನು ಪ್ರವೇಶಿಸುವಾಗ ಆರ್ಯವರ್ಯರಿಬ್ಬರೊಡನೆ ಯಾವತ್ತು ಸಭೆಯು ಪ್ರತ್ಯುತ್ಥಾನ ಮಾಡಿ– ''ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರ ಜಯಜಯಕಾರವು'' ಎಂದು ಆನಂದದಿಂದ ಉದ್ಘೋಷಿಸಿತು. ಆಗ ವಿರೂಪಾಕ್ಷಾರ್ಯರು ಬಹುಮಾನದಿಂದ ಸ್ವಲ್ಪ ಮುಂದಕ್ಕೆ ಬಂದು–''ಬರಬೇಕು, ಆಚಾರ್ಯವರ್ಯರು ಇತ್ತ ಪೀಠದ ಮೇಲೆ ದಯಮಾಡಿಸಬೇಕು'' ಎಂದು ಹಸ್ತಲಾಘವದಿಂದ ಆಚಾರ್ಯರನ್ನು ಬರಮಾಡಿಕೊಳ್ಳುತ್ತಿರಲು, ಹಸನ್ಮುಖರಾದ ಆಚಾರ್ಯರು ಬಹುಮಾನದಿಂದ ತಲೆಬಾಗಿಸಿ ಆರ್ಯವರ್ಯರನ್ನು ಅಭಿವಂದಿಸುತ್ತ ಸಂಗನಬಸವಾರ್ಯರ ಪರಿಚಯ ಮಾಡಿಕೊಳ್ಳುತ್ತ ಪೀಠದ ಮೇಲೆ ಕುಳಿತುಕೊಂಡರು. ಆಗ ಯಾವತ್ತೂ ರಾಜಪರಿವಾರವೂ, ಆಚಾರ್ಯರ ಸಂಗಡ ಬಂದಿದ್ದ ಶಿಷ್ಯ ಬ್ರಾಹ್ಮಣರೂ ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಂಡರು. ಆಗ ಪುಣ್ಯಪುರುಷರ

ಸಾನ್ನಿಧ್ಯದಿಂದ ಸುಖಸ್ಪರ್ಶದ ಸುಳಿಗಾಳಿಯು ಬೀಸುತ್ತಿದ್ದದ್ದರಿಂದ ಸಭೆಯೊಳಗಿನ ಜನರ ಮನಸ್ಸು ಉಲ್ಲಸಿತವಾಯಿತು. ಆಚಾರ್ಯರು ಕೂಡಿದ ಆ ಪ್ರಚಂಡ ಸಭೆಯನ್ನು ಹಸನ್ಮುಖರಾಗಿ ಬಹುಮಾನದಿಂದ ನೋಡಿ ತಲೆಯಲ್ಲಾಡಿಸಿ ಅಭಿನಂದಿಸುತ್ತ–''ನಮ್ಮ ಅಂತ್ಯಜ ಬಾಂಧವರು ಬಂದಿರುವರೆಯೆ? ನಮ್ಮ ದುರಗಪ್ಪನು ಬಂದಿದ್ದಾನೆಯೇ ? ಅವರೆಲ್ಲರೂ ಎಲ್ಲಿ ಕುಳಿತಿರುವರು? ಇಲ್ಲಿ ನಮ್ಮ ಬಳಿಯಲ್ಲಿ ಯಾಕೆ ಕುಳಿತುಕೊಂಡಿಲ್ಲ?'' ಎಂದು ಕೇಳುತ್ತಿರಲು, ಆನಂದಾತಿಶಯದಿಂದ ಎಲ್ಲ ಅಂತ್ಯಜ ಬಾಂಧವರ ಮೈಗಳುಬ್ಬಿ ಮೈಯಲ್ಲಿ ಬಟ್ಟು ಮಾಂಸ ಬಂದಂತಾಯಿತು! ಆಗ ದುರುಗಪ್ಪನು ಎದ್ದುನಿಂತು ಕೈಜೋಡಿಸಿ– ''ಗುರುಮೂರ್ತಿಯೇ, ಕರ್ನಾಟಕದ ಉದ್ಧಾರಕರನೇ, ಪಾಮರರಾದ ನಿಮ್ಮ ಮಕ್ಕಳು ಇಗೋ, ಇದೇ ನಿನ್ನ ಬಳಿಯಲ್ಲಿಯೇ ಕುಳಿತಿದ್ದೇವೆ, ಬುದ್ಧಿ, ಮುಕ್ಕಣ್ಣನೇ ಮೂರು ರೂಪ ತಾಳಿ ಮೂಡಿದಂತೆ ನೀವು ಮೂವರು ಮಹಾಪುರುಷರು ಸಭೆಯಲ್ಲಿ ಮೂಡಿ ನಮ್ಮನ್ನು ಕೃಪಾದೃಷ್ಟಿಯಿಂದ ನೋಡುವಾಗ ನಮ್ಮ ಅಪವಿತ್ರತೆಯು ಹ್ಯಾಗೆ ಉಳಿಯುವದು? ಇಂದು ನಿಶ್ಚಯವಾಗಿ ನಮ್ಮ ಉದ್ಧಾರವಾಯಿತು. ಅಪ್ಪಾ, ನಮ್ಮ ಮನಸ್ಸು ನಮ್ಮನ್ನು ತಿನ್ನುತ್ತಿರುವದರಿಂದ ನಾವು ಹತ್ತರ ಬರಲಿಕ್ಕೆ ಒಲ್ಲೆವು; ಆದರೆ ಬರುವೆವು, ನಿನ್ನ ಅಂತಃಕರಣದಿಂದ ನಾವು ಅಂತಶ್ಶುದ್ಧರೂ–ಬಹಿಶ್ಶುದ್ಧರೂ ಆಗುತ್ತಹೋದಂತೆ ನಿನ್ನ ಹತ್ತಿರವೂ ಬಂದು ಕುಳಿತುಕೊಳ್ಳುವೆವು ! ಸಾಕು, ಮಕ್ಕಳನ್ನು ಕನಿಕರದಿಂದ ಮುಂದಕ್ಕೆ ಕರೆದದ್ದೇ ಸಾಕು'' ಎಂದು ನುಡಿದು ಕುಳಿತುಕೊಳ್ಳುತ್ತಿರಲು, ಯಾವತ್ತು ಅಸ್ಪೃಶ್ಯವರ್ಗದವರು ಆಚಾರ್ಯರ, ಹಾಗೂ ಆರ್ಯರ ಹೆಸರಿನಿಂದಜಯಘೋಷ ಮಾಡಿದರು ! ಆಗ ಅಸ್ಪೃಶ್ಯರ ಸ್ಪರ್ಶದ ಭಾವನೆಯಿಂದ ಬ್ರಾಹ್ಮಣ ಮೊದಲಾದ ಸ್ಪೃಶ್ಯವರ್ಗದವರ ಮೈಜುಮ್ಮೆಂದು ಮನಸ್ಸು ಚಂಚಲವಾಯಿತು. ಚಿರಕಾಲದ ಸಂಸ್ಕಾರವು ಎಷ್ಟು ಬಲವಾದದ್ದೋ ತಿಳಿಯದು. ''ಏಕಾಕಾರವಾಯಿತಲ್ಲ'' ಎಂದು ಎಷ್ಟೋ ಜನ ಶಿಷ್ಟ ಬ್ರಾಹ್ಮಣರು ಕುಳಿತಲ್ಲಿಯೇ ಮೈಮುದುಡಿಕೊಂಡರು ! ಆದರೂ ಮಹಾತ್ಮರ ಬೋಧದಂತೆ ನಾವು ರಾಜಕೀಯ ವ್ಯವಹಾರದಲ್ಲಿ ಅಸ್ಪೃಶ್ಯದ ಆತಂಕವನ್ನು ದೂರಮಾಡಿ ಕೊಂಡೇವೆಂಬ ಸಮಾಧಾನವು ಬೇಗನೆ ಅವರ ಮನಸ್ಸಿಗೆ ಆಯಿತು ! ಆಗ ವಿರೂಪಾಕ್ಷಾರ್ಯರು ಆಚಾರ್ಯರನ್ನು ಕುರಿತು –

ವಿರೂಪಾಕ್ಷಾರ್ಯ–ವಿಪ್ರೋತ್ತಮ, ಕಾಶಿಮುಖಾನರ ಮಹತ್ವದ ಪ್ರಶ್ನೆಗಳನ್ನು ಕುರಿತು ಇನ್ನು ನಿರೂಪಿಸತಕ್ಕದ್ದು. ನಿಮ್ಮಂಥ ಲೋಕಸಂಗ್ರಹ ಧುರೀಣರಿಗೆ ವಿಶ್ರಾಂತಿ ಎಲ್ಲಿಂದ ದೊರೆಯಬೇಕು? ಯಾವಾಗಲೂ ನಿಮ್ಮ ಸುತ್ತ ಜನರ ಹರತರವಿರತಕ್ಕದ್ದೇ! ಲೋಕವಾದರೂ ನಿಮ್ಮಂಥ ಮಹಾತ್ಮರನ್ನಲ್ಲದೆ ಬೇರೆ ಯಾರನ್ನು ಕೇಳಿಕೊಳ್ಳಬೇಕು? ಕಷ್ಟಕಾಲದಲ್ಲಿ ಇಡಿಯ ಲೋಕಕ್ಕೇ ಪ್ರಶಸ್ತವಾದ ಮಾರ್ಗವನ್ನು ತೋರಿಸುವ ಯೋಗ್ಯತೆಯು ಅನ್ಯರಲ್ಲಿರುವ ಸಂಭವವುಂಟೆ ? ಆದ್ದರಿಂದ ಈಗ ನಾಲ್ಕು ದಿನಗಳ ಪ್ರವಚನದಿಂದ ತಮಗಾದ ಆಯಾಸವನ್ನು ತಾಳಿಕೊಂಡು, ನಮ್ಮ ಈ ಹಿರಿಯಮಠವು ನಿಮ್ಮ ದಿವ್ಯಾಗಮನದಿಂದ ಧನ್ಯವಾದಂತೆ, ನಿಮ್ಮ ಪವಿತ್ರ ವಾಣಿಯಿಂದ ಈ ಮಠದ ವಾತಾವರಣವೂ, ತದ್ದ್ವಾರಾ ಶ್ರೋತೃಗಳ ಕರ್ಣ–ಹೃದಯಗಳೂ ಪವಿತ್ರವಾಗಿ ಜನರಿಗೆ ಸನ್ಮಾರ್ಗದ ಸಂದರ್ಶನವಾಗುವಂತೆ ನಮ್ಮನ್ನು ನೀವು ಬೋಧಿಸತಕ್ಕದ್ದು.

ಕಾಸಿಮಖಾನ–ಆರ್ಯರ ಸೂಚನೆಯು ನಿಶ್ಚಯವಾಗಿ ಕಲ್ಯಾಣಕರವಾದದ್ದು. ಭಗವನ್, ವ್ಯಾವಹಾರಿಕ ಯೋಗತ್ರಯಗಳಲ್ಲಿ ಮೊದಲು ಸಹಯೋಗವನ್ನು ಕುರಿತು ನಿರೂಪಿಸುವ ಕೃಪೆಯಾಗಬೇಕು.

ಮಾಧವಾಚಾರ್ಯ–ಆಗಲಿ, ಅದನ್ನೇ ಮೊದಲು ಹೇಳುವೆವು, ಲಕ್ಷ್ಯವಿಟ್ಟು ಕೇಳತಕ್ಕದ್ದು. ವ್ಯಾವಹಾರಿಕವಾದ ಆ ಮೂರು ಯೋಗಗಳಲ್ಲಿ ಸಹಯೋಗವೇ ಅತ್ಯಂತ ಗೌರವದ್ದಾದ್ದರಿಂದಲೂ,ಅದೇ ಮೊದಲನೆಯ ಯೋಗವಾದದ್ದರಿಂದಲೂ ನಿಮ್ಮ ಪ್ರಶ್ನೆಯು ಅಕ್ರಮವಾದದ್ದು ಇರುವದಿಲ್ಲ. ಆ ''ಸಹಯೋಗ'' ಎಂಬ ಸಮಸ್ತಪದದ ಅರ್ಥವು ಸಾಧಾರಣ ಸ್ಪಷ್ಟವಾಗಿ ತಿಳಿಯಬೇಕೆಂದು ಅದನ್ನು ಸ್ವಲ್ಪ ವಿವರಿಸಿ ಹೇಳುವದು ಅವಶ್ಯವಾಗಿರುವದು. 'ಸಹ' ಮತ್ತು ''ಯೋಗ'' ಎಂಬೀ ಎರಡು ಸಂಸ್ಕೃತ ಶಬ್ದಗಳು ಕೂಡಿ ''ಸಹಯೋಗ'' ಎಂಬ ಪದವಾಗಿರುತ್ತದೆ. ''ಸಹ'' ಎಂಬದು ಅವ್ಯಯವಿದ್ದು ಅದು ತೃತಿಯಾ ವಿಭಕ್ತಿಯ ಮೇಲೆ ಬರುತ್ತದೆಂಬದು ಪ್ರಸಿದ್ಧವು. ಅದರ ಅರ್ಥವನ್ನು ಕೂಡಿ ಎಂದು ಮಾಡಬಹುದು. ಇನ್ನು ''ಯೋಗ'' ಎಂಬ ನಾಮಪದಕ್ಕೆ–ಹಲವು ಅರ್ಥಗಳಿರುವವು. ಇಲ್ಲಿನಾವು ಯೋಗಶಬ್ದಾರ್ಥವನ್ನು ಇರುವದು ಎಂದು ಮಾಡೋಣ. ಅಂದ ಬಳಿಕ ''ಸಹಯೋಗ''ವೆಂದರೆ ''ಕೂಡಿರೋಣ'' ಎಂದು ಅರ್ಥವಾಗುವದು. ''ಪತ್ಯಾಸಹಗಮನ'' ಅಂದರೆ ''ಪತಿಯಿಂದ ಕೂಡಿಹೋಗೋಣ'' ಎಂಬ ಪ್ರಸಿದ್ಧ ಶಬ್ದದ ಸಾಮ್ಯದಿಂದ ''ಗುರುಣಾಸಹಯೋಗ'' ಅಂದರೆ ''ಗುರುವಿನಿಂದ ಕೂಡಿ ಇರೋಣ'' ಎಂದು ಮನಸ್ಸಿನಲ್ಲಿತಂದುಕೊಳ್ಳಬೇಕು. ಇದರಂತೆ ಸಹ ಎಂಬ ಅವ್ಯಯದ ಹಿಂದೆ, ಬೇಕಾದ ತೃತೀಯಾ ವಿಭಕ್ತ್ಯಂತ ಪದವನ್ನಿಟ್ಟು ಅದರ ಮುಂದೆ ಯೋಗಶಬ್ದವನ್ನು ಇಡಬಹುದು; ಆದ್ದರಿಂದ ವಾಡಿಕೆಯಾಗಿ ಹಿಂದೆ ಯಾವ ಪದವನ್ನೂ ಇಡದೆ, ಬರಿಯ ''ಸಹಗಮನ'' ಎಂಬ ಒಂದೇ ಪದವನ್ನು ವ್ಯವಹಾರದಲ್ಲಿ ಉಪಯೋಗಿಸುವರು.ಈ ಜಗತ್ತು ಒಂದೇ ಒಂದಾದ ಶ್ರೇಷ್ಠ ವಸ್ತುವಿಗೆ ಸಂಬಂಧಿಸಿದ್ದದ್ದರಿಂದ, ಒಂದುಗೂಡಿ ಇರುವದರಲ್ಲಿಯೇ ಅಂದರೆ ಸಹಯೋಗದಲ್ಲಿಯೇ ನಿಜವಾದ ಶಾಂತಿಯು ಇರುವದು. ಕಾಶಿಮಖಾನ, ನಿಮ್ಮ ಅನುಭವವನ್ನೇ ಈಗ ನೀವು ನೆನಪಿಗೆ ತಂದುಕೊಳ್ಳಿರಿ. ನೀವು ನಮ್ಮ ಹಿಂದೂ ಜನರಿಂದ ಅಗಲಿಹೋಗಿ ಅವರನ್ನು ದ್ವೇಷಿಸುತ್ತಿದ್ದಾಗ ಪರಿಪರಿಯ ತಾಪಗಳಿಗೆ ಗುರಿಯಾಗಿದ್ದೀರಿ. ಈಗ ನೀವು ಅದೇ ಹಿಂದೂ ಜನರಲ್ಲಿ ಕೂಡಿ ಅವರನ್ನು ಪ್ರೀತಿಸುತ್ತಿರುವದರಿಂದ ಸಮಾಧಾನವನ್ನು ಪಡೆದಿರುವಿರಿ. ಈ ಮಾತು ನಮ್ಮವರಿಗೂ ಸಂಬಂಧಿಸುವದು. ಹೀಗೆ ಒಟ್ಟುಗೂಡುವದರಿಂದುಂಟಾಗುವ ಗುರುತ್ವವು ಸಮಾಧಾನಕ್ಕೂ, ಅಗಲಿ ಇರುವದರಿಂದುಂಟಾಗುವ ಲಘುತ್ವವು ತಾಪಕ್ಕೂ ಕಾರಣವಾಗುವದೆಂಬದನ್ನು ಜಡ ಪದಾರ್ಥಗಳಲ್ಲಿಯೂ ಕಂಡುಕೊಳ್ಳಬಹುದು; ಪ್ರವಾಹರೂಪನಾಗಿರುವ ಸಮುದ್ರನಾಥನ ವೈಭವವನ್ನೂ, ಆತನಿಂದ ಆಗಲಿ ಬೇರೆಯಾಗಿ ಆಕಾಶದಲ್ಲಿ ತೂರುವ ತುಂತುರ್ವನಿಗಳ ಅಂತ್ರತೆಯನ್ನು ಮನಸ್ಸಿನಲ್ಲಿ ತಂದುಕೊಳ್ಳಿರಿ. ಅದರಂತೆ ಘನರೂಪಳಾದ ಭೂಮಾತೆಯ ಸೌಭಾಗ್ಯವನ್ನೂ, ಆಕೆಯಿಂದ ಅಗಲಿ ಹೋಗಿ ಗಾಳಿಯ ಬಳಿವಿಡಿದು ಆಕಾಶದಲ್ಲಿ ಸುತ್ತುತ್ತಿರುವ ಧೂಳಿಯ ಕಣಗಳ ದೆಸೆಗೇಡಿತನವನ್ನೂ ಮನಸ್ಸಿನಲ್ಲಿ ತೂಗಿನೋಡಿರಿ. ಅದರಂತೆ, ಅಗ್ನಿ ಹಾಗು

ಅದರ ಕಿಡಿಗಳು ಹೀಗೆ ಬೇಕಾದಲ್ಲಿ ಹುಡುಕಿದರೂ ಒಂದುಗೂಡಿ, ಅಂದರೆ ಪ್ರತಿಕೂಲಿಸಿ ಇರುವದರಲ್ಲಿ ಮಹತ್ವವೂ-ಸಮಾಧಾನವೂ,ಆಗಲಿ ಅಂದರೆ ಪ್ರತಿಕೂಲಿಸಿ ಇರುವುದರಲ್ಲಿ ಲಘುತ್ವವೂ-ತಾಪವೂ ಇರುವವೆಂಬದು ನಿಮಗೆ ಗೊತ್ತಾಗಬಹುದು. ಸಚೇತನ ಪದಾರ್ಥಗಳ ಒಂದುಗೂಡುವಿಕೆಯ ಕಾರಣವನ್ನು ಆಕರ್ಷಣ ಶಕ್ತಿಯೆಂತಲೂ ಕರೆಯುವರು. ಹ್ಯಾಗೆ ಕರೆದರೂ ಎಲ್ಲದರ ಕಾರ್ಯಕಾರಣ ಭಾವವು ಒಂದೇ ಇರುತ್ತದೆ; ಆದ್ದರಿಂದ ಕಾಸಿಮಖಾನ, ಸಚೇತನ ಪದಾರ್ಥಗಳ ಒಂದುಗೂಡುವ ಪರಮ ಸಾಧನವಾದ ಪ್ರೇಮವು ಸಹಯೋಗದಲ್ಲಿ ಓತಪ್ರೋತವಾಗಿ ತುಂಬಿರುವದರಿಂದ, ಆ ವ್ಯಾವಹಾರಿಕ ಪ್ರಥಮ ಯೋಗವನ್ನು ಪರಮ ಶ್ರೇಷ್ಠವೆಂದು ತಿಳಿದು, ಅದನ್ನು ಸಾಧಿಸಲು ಮನುಷ್ಯಮಾತ್ರರು ವಿಶ್ವಪ್ರಯತ್ನ ಮಾಡತಕ್ಕದ್ದು; ಯಾಕಂದರೆ ಪ್ರೇಮವಿಘಾತಕವಾದ ದ್ವೇಷದಿಂದ ಸಹಯೋಗವು ನಷ್ಟವಾಗಿ ಅಸಹಯೋಗ ದಿಂದ ನಾವು ತಾಪಕ್ಕೆ ಒಳಗಾಗುವ ಸಂಭವವು ವಿಶೇಷವಾಗಿರುತ್ತದೆ.

ಕಾಶಿಮಖಾನ-ನಾವು ಶಾಂತಿದಾಯಕವಾದ ಪ್ರೇಮಭಾವವನ್ನು ತಾಳುವದನ್ನು ಬಿಟ್ಟು ತಾಪದಾಯಕವಾದ ದ್ವೇಷಭಾವವನ್ನು ಯಾಕೆ ತಾಳಬೇಕು?

ಮಾಧವಾಚಾರ್ಯ-ಕಾಸಿಮಖಾನ, ಕಾರಣವಿಲ್ಲದೆ ಕಾರ್ಯವಾಗುವದಿಲ್ಲ, ನಾವು ಪ್ರೇಮಭಾವ ತಾಳಲಿಕ್ಕೂ ಕಾರಣವುಂಟು. ದ್ವೇಷಭಾವ ತಾಳಲಿಕ್ಕೂ ಕಾರಣವುಂಟು. ದೇವರು ನಮ್ಮಲ್ಲಿ ಇಚ್ಛಾಶಕ್ತಿಯೆಂಬ ಪ್ರಬಲ ಶಕ್ತಿಯನ್ನು ಇಟ್ಟಿರುತ್ತಾನೆ. ಅದರ ಯೋಗದಿಂದ ನಾವು ನಮ್ಮ ಮನಸ್ಸಿನೊಳಗೆ ಅಡಗಿರುವ ದೇವರನ್ನಾದರೂ ಸಂಪಾದಿಸಲು ಇಚ್ಛಿಸಬಹುದು. ಇಲ್ಲವೆ ಆತನ ಕಾರ್ಯವಾದ ಹೊರಗೆ ಕಾಣುವ ಸೃಷ್ಟಿಯನ್ನಾದರೂ ಸಂಪಾದಿಸಲು ಇಚ್ಛಿಸಬಹುದು. ಸೃಷ್ಟಿಕರ್ತೃವಾದ ದೇವರ ಸ್ವರೂಪದಲ್ಲಿಯೂ, ದೇವರ ಕಾರ್ಯವಾದ ಸೃಷ್ಟಿಯ ಸ್ವರೂಪದಲ್ಲಿಯೂ ಹೆಚ್ಚುಕಡಿಮೆಯಿರುವದು. ದೇವರು ಪ್ರೇಮಮಯ ಸೂಕ್ಷ್ಮರೂಪ ನಾಗಿರುವದರಿಂದ ನಮಗೆ ಆತನು ದೃಶ್ಯನೂ-ಏಕರೂಪನೂ- ಅಂತರ್ಮುಖಗಮ್ಯನೂ ಆಗಿರುವನು; ಆದರೆ ಆತನ ಕಾರ್ಯವಾದ ಸೃಷ್ಟಿಯು ವಿಕಾರಮಯ ಸ್ಥೂಲರೂಪ ವಾಗಿರುವದರಿಂದ ಅದು ದೃಶ್ಯವು-ಬಹುರೂಪವೂ- ಬಹಿರ್ಮುಖಗಮ್ಯವೂ ಆಗಿರುವದು. ದೇವರು ಮನಸ್ಸನ್ನು ನಿರಹಂಕಾರವಾಗಮಾಡಿ ಅದನ್ನು ಶಾಂತಗೊಳಿಸುವವನಾಗಿದ್ದರೆ, ಆತನ ಸೃಷ್ಟಿಯು ಮನಸ್ಸನ್ನು ಅಹಂಕಾರಿಯಾಗ ಮಾಡಿ ಅದನ್ನು ರಂಜಿಸುವದಾಗಿರುತ್ತದೆ. ನಮ್ಮಲ್ಲಿ ಈಶ್ವರನಿಗೆ ಸಂಬಂಧಿಸಿದ ಜೀವತ್ವವು ಸೂಕ್ಷ್ಮಾಂಶದಿಂದಲೂ, ಸೃಷ್ಟಿಗೆ ಸಂಬಂಧಿಸಿದ ಜಡದೇಹವು ಬಹ್ವಂಶದಿಂದಲೂ ಇರುವದರಿಂದ ನಾವು ಮನಶ್ಶಾಂತಿಗಿಂತ ಮನೋರಂಜನಕ್ಕೆ ಅಂದರೆ, ಈಶ್ವರನೊಡನೆ ನಿರಹಂಕಾರದಿಂದ ಬಳಿಕೆ ಮಾಡುವದಕ್ಕಿಂತ, ಸೃಷ್ಟಿಯೊಡನೆ ಅಹಂಕಾರದಿಂದ ಬಳಿಕೆ ಮಾಡಲಿಕ್ಕೆ ಸ್ವಾಭಾವಿಕವಾಗಿ ಮೆಚ್ಚಿದವರಾಗಿರುವೆವು; ಯಾಕಂದರೆ, ದಶೇಂದ್ರಿ ಯಾತ್ಮಕವಾದ ಈ ಸ್ಥೂಲದೇಹ ರಚನೆಯನ್ನು ಬಹಿರ್ಮುಖವಾಗಿ ಸ್ಥೂಲಸೃಷ್ಟಿಯಲ್ಲಿ ವ್ಯವಹರಿಸುವಂತೆಯೇ ಸೃಷ್ಟಿಕರ್ತಾರನು ಮಾಡಿರುವನು! ''ಪರಾಂಚಿಖಾನಿವ್ಯತೃಣತ್

ಸ್ವಯಂಭೂಸ್ತಸ್ಮಾತ್ಪರಾಜ್‌ಪಶ್ಯತಿ ನಾಂತರಾತ್ಮನ್'' ಎಂಬ ಶ್ರುತಿವಚನವು ಇದಕ್ಕೆ ಆಧಾರವಾಗಿರುವದು. ''ಸೃಷ್ಟಿಕರ್ತೃವಾದ ಬ್ರಹ್ಮನು ಇಂದ್ರಿಯಗಳನ್ನು ಬಹಿರ್ಮುಖವಾಗಿಯೇ ನಿರ್ಮಿಸಿರುವದರಿಂದ ಜೀವನು ಇಂದ್ರಿಯದ್ವಾರಾ ಬಹಿರ್ಮುಖವಾಗಿ ಸೃಷ್ಟಿಯನ್ನೇ ನೋಡುವನಲ್ಲದೆ, ಅಂತರ್ಮುಖವಾಗಿ ಆತ್ಮನನ್ನು ನೋಡುವದಿಲ್ಲ'' ಎಂಬುದು ಈ ಶ್ರುತಿವಚನದ ತಾತ್ಪರ್ಯವಾಗಿರುವದು, ನಾವು ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಂಡು ಅಹಂಕಾರ ರಹಿತರಾಗಿ ಅಂತರ್ಮುಖದಿಂದ ಆತ್ಮನಿರೀಕ್ಷಣ ಮಾಡಿದರೆ ನಮಗೆ ಪ್ರೇಮರೂಪ ಪರಮಾತ್ಮನ ದರ್ಶನವಾಗಿ ಜಗತ್ತೇ ನಮಗೆ ಪ್ರೇಮಮಯವಾಗಿ ತೋರಲು, ನಮ್ಮಲ್ಲಿ ಅಖಂಡವಾದ ಸಹಯೋಗವುಂಟಾಗುವದು; ಆದರೆ ಇದು ಸರ್ವರಿಗೂ ಸುಲಭವಾದದ್ದಲ್ಲ. ನಾವು ಸಾಮಾನ್ಯವಾಗಿ ಇಂದ್ರಿಯಗಳಿಗೆ ಅಧೀನರಾಗಿ ನೆಲೆಗಾಣದ ವಿಕೃತವಾದ ವಿಷಯ ಸುಖಕ್ಕೆ ಮೆಚ್ಚಿ ಅಹಂಕಾರದಿಂದ ಮೇಲಾಟಕ್ಕೆ ಬಿದ್ದರೆ ನಮ್ಮಲ್ಲಿಯ ಪ್ರೇಮಭಾವವೂ ವಿಕಾರಹೊಂದಿ ಅದರ ರೂಪಾಂತರವು ದ್ವೇಷಭಾವದಲ್ಲಿ ಆಗಿ ನಮ್ಮಲ್ಲಿ ಸಹಯೋಗದ ಬದಲು ಅಸಹಯೋಗ ವುಂಟಾಗುವದು ! ಸಹಯೋಗಕ್ಕೆ ಶಾಂತಿಯೂ, ಅಸಹಯೋಗಕ್ಕೆ ತಾಪವೂ ಫಲಗಳಾಗಿರು ವದರಿಂದ, ಆತ್ಮದೃಷ್ಟಿಯ ಜ್ಞಾನಿಗಳು ಸಹಯೋಗದಿಂದ ಶಾಂತರೂ, ವಿಷಯದೃಷ್ಟಿಯ ಅಜ್ಞಾನಿಗಳು ಅಸಹಯೋಗದಿಂದ ತಾಪಗ್ರಸ್ತರೂ ಆಗುವರು !

ವಿರೂಪಾಕ್ಷಾರ್ಯ–ಆಚಾರ್ಯವರ, ನಿಮ್ಮ ಸುಲಭವಾದ ತಾತ್ವಿಕ ಬೋಧವನ್ನು ಕೇಳಿ ನಮಗೆ ಹಿಡಿಸಲಾರದಷ್ಟು ಆನಂದವಾಯಿತು; ಆದರೆ ಬಹಿರ್ಮುಖವಾದ ಇಂದ್ರಿಯಗಳನ್ನು ಶಕ್ಯವಿದ್ದಮಟ್ಟಿಗೆ ಪ್ರತಿಬಂಧಿಸಿ ಶ್ರೇಷ್ಠ ಇಂದ್ರಿಯವಾದ ಮನಸ್ಸಿಗೆ ಅಂತರ್ಮುಖದ ಹಾದಿಯನ್ನು ತೋರಿಸಲಿಕ್ಕೆ ಉಪಾಯವಿಲ್ಲವೋ? ದೇಹವಿರುವವರೆಗೆ ಹೊರಗಿನ ಸೃಷ್ಟಿಯ ಸಂಬಂಧವನ್ನು ಕಡಿಯಹೇಳುವದಕ್ಕಿಂತ, ಅದರ ಸಂಬಂಧವು ಸಡಿಲಾಗುವಂತೆ ಉಪಾಯ ಮಾಡಹೇಳುವದು ಯೋಗ್ಯವಲ್ಲವೆ?

ಮಾಧವಾಚಾರ್ಯ–ಹೌದು ಮಹಾತ್ಮನ್, ತಮ್ಮ ಸೂಚನೆಯು ಯೋಗ್ಯವಾದದ್ದು. ತಾವು ಹೇಳಿದಂತೆ ಸೃಷ್ಟಿಯ ಸಂಬಂಧವನ್ನು ಸಡಿಲಿಸುತ್ತ ಸರ್ವೇಂದ್ರಿಯಾಧಿಪತಿಯೆನಿಸುವ ಮನಸ್ಸನ್ನು ಪರಮಾತ್ಮನ ಕಡೆಗೆ ಒಲಿಸಲಿಕ್ಕೆ ಧರ್ಮಾಚರಣೆಯು ಸಾಧನವಾಗಿರುವದು ! ''ಧರ್ಮಸ್ಯ ಪ್ರಭುರಚ್ಯುತಃ''ಎಂಬ ಉಕ್ತಿಯಂತೆ, ನಾಶರಹಿತನಾದ ಪರಮಾತ್ಮನೇ ಧರ್ಮಕ್ಕೆ ಪ್ರಭುವಾದದ್ದರಿಂದ, ಧರ್ಮಾಚರಣೆಯಿಂದ ಆತನು ಸಂತುಷ್ಟನಾಗಿ ನಮ್ಮನ್ನು ಅನುಗ್ರಹಿಸುವನು. ಧರ್ಮದಿಂದಲೇ ಜಗತ್ತು ನಿಂತಿರುವದಾದ್ದರಿಂದ ಪ್ರತಿ ಒಬ್ಬನು ಧರ್ಮದಂತೆ ಆಚರಿಸಬೇಕು. ಧರ್ಮಗಳು ವ್ಯಷ್ಟಿಧರ್ಮ–ಸಮಷ್ಟಿಧರ್ಮ ಎಂದು ಎರಡು ವಿಧಗಳಾಗಿರುವವೆಂತಲೂ, ವ್ಯಷ್ಟಿಧರ್ಮದಲ್ಲಿ ಪಿತೃಧರ್ಮ–ಪುತ್ರಧರ್ಮ, ಪತಿಧರ್ಮ–ಪತ್ನೀಧರ್ಮ, ಗುರುಧರ್ಮ–ಶಿಷ್ಯಧರ್ಮ, ರಾಜಧರ್ಮ–ಪ್ರಜಾಧರ್ಮ ಮುಂತಾದವೂ, ಸಮಷ್ಟಿಧರ್ಮದಲ್ಲಿ ಕೌಟುಂಬಿಕ ಧರ್ಮ, ಸಾಮಾಜಿಕ ಧರ್ಮ, ರಾಷ್ಟ್ರೀಯ ಧರ್ಮ ಮುಂತಾದವೂ ಬರುತ್ತವೆಂತಲೂ, ವ್ಯಷ್ಟಿಧರ್ಮ

ಪಾಲನಕ್ಕಿಂತ ಸಮಷ್ಟಿಧರ್ಮಪಾಲನದಲ್ಲಿ ಸ್ವಾರ್ಥತ್ಯಾಗವೂ, ತಪಸ್ಸೂ ಉಗ್ರತರವಾಗಿರುವದರಿಂದ ಸಮಷ್ಟಿಧರ್ಮಪಾಲನವು ವ್ಯಷ್ಟಿಧರ್ಮಪಾಲನಕ್ಕಿಂತ ಜಗತ್ಕಲ್ಯಾಣಕ್ಕೂ, ಈಶ್ವರಾನುಗ್ರಹಕ್ಕೂ ಶ್ರೇಷ್ಠ ಸಾಧನವಾಗಿರುತ್ತದೆಂತಲೂ ಸಾಧಾರಣವಾಗಿ ಈ ಮೊದಲೆ ಪ್ರಸಂಗವಶಾತ್ ಕಾಸಿಮಖಾನರಿಗೆ ಹೇಳಲಾಗಿದೆ. ಒಟ್ಟಿಗೆ ಜಗತ್ತಿನ ಧಾರಣೆಗೂ, ಈಶ್ವರಾನುಗ್ರಹಕ್ಕೂ ಧರ್ಮಪಾಲನವು ಕಾರಣವಾಗಿರುವದರಿಂದ ಎಲ್ಲರೂ ತಮ್ಮ ತಮ್ಮ ಧರ್ಮದಂತೆ ನಡೆದರೆ ಪರಸ್ಪರರಲ್ಲಿ ಸ್ವಾಭಾವಿಕವಾಗಿಯೇ ಸಹಯೋಗವು ಉಂಟಾಗಿ, ಸೃಷ್ಟಿಯ ಭೋಗಗಳನ್ನು ಭೋಗಿಸಿ ದೇವರ ಅನುಗ್ರಹಕ್ಕೂ ನಾವು ಪಾತ್ರರಾಗಬಹುದಾಗಿರುವದು !

ಕಾಸಿಮಖಾನ– ಹೌದು ಮಹಾತ್ಮನ್, ಈ ಮೊದಲು ತಾವು ಮಾಡಿದ ನಿರೂಪಣವು ನನ್ನ ಮನಸ್ಸಿನಲ್ಲಿರುವದು; ಆದರೆ ವ್ಯಷ್ಟಿಧರ್ಮಗಳ ಪಾಲನದ ಸಂಬಂಧದಿಂದ, ಒಬ್ಬರು ತಮ್ಮ ಧರ್ಮವನ್ನು ಪಾಲಿಸಿದರೆ ಮತ್ತೊಬ್ಬರು ತಮ್ಮ ಧರ್ಮ ಪಾಲಿಸಲಿಕ್ಕೆ ಅನುಕೂಲವಾಗುವದು. ಉದಾಹರಣಾರ್ಥ, ಪಿತೃವು ತನ್ನ ಪಿತೃಧರ್ಮವನ್ನು ಪಾಲಿಸಿದರೆ ಪುತ್ರನು ತನ್ನ ಪುತ್ರಧರ್ಮವನ್ನು ಪಾಲಿಸಲಿಕ್ಕೆ ಅನುಕೂಲವಾಗಿ ಪರಸ್ಪರರಲ್ಲಿ ಸಹಯೋಗವು ಉಂಟಾಗಲಿಕ್ಕೆ ಸಹಾಯವಾಗುವದು.

ಮಾಧವಾಚಾರ್ಯ– ಹೌದು, ನಿಮ್ಮ ಮಾತು ಒಪ್ಪತಕ್ಕದ್ದೇ ಸರಿ. ಪಿತೃವು ನಿಸ್ವಾರ್ಥ ಬುದ್ಧಿಯಿಂದ ತ್ರಿಕರಣಪೂರ್ವಕವಾಗಿ ಪುತ್ರನ ಕಲ್ಯಾಣ ಮಾಡುವ ತನ್ನ ಧರ್ಮವನ್ನು ಪಾಲಿಸುವದರಿಂದಲೂ,ಅದರಂತೆ ಪುತ್ರನು ಪಿತ್ರಾಜ್ಞಾಪಾಲನರೂಪವಾದ ತನ್ನ ಧರ್ಮವನ್ನು ಪಾಲಿಸುವದರಿಂದಲೂ ಸ್ವಾಭಾವಿಕವಾಗಿಯೇ ಪಿತಾ–ಪುತ್ರರಲ್ಲಿ ಪ್ರೇಮವು ಉತ್ಪನ್ನವಾಗಿ ಪರಸ್ಪರರಲ್ಲಿ ಸಹಯೋಗವುಂಟಾಗುವದು. ಹೀಗೆ ಒಬ್ಬರು ಮತ್ತೊಬ್ಬರ ಧರ್ಮಪಾಲನದಲ್ಲಿ ದೃಷ್ಟಿಯನ್ನಿಟ್ಟು ತಮ್ಮ ತಮ್ಮ ಧರ್ಮದಂತೆ ನಡೆಯುವದರಿಂದುಂಟಾಗುವ ಸಹಯೋಗಕ್ಕೆ ಧರ್ಮಾತ್ಮಕ ಸಹಯೋಗವೆನ್ನುವರು. ಯಾವದೊಂದು ಸಮಾಜದಲ್ಲಿ ಅಥವಾ ರಾಷ್ಟ್ರದಲ್ಲಿ ಈ ಧರ್ಮಾತ್ಮಕ ಸಹಯೋಗದ ಅಭಿವೃದ್ಧಿಯಾದ ಮಾನದಿಂದ ಸುಖ–ಶಾಂತಿಗಳು ನೆಲೆಗೊಳ್ಳುವವು; ಇದರ ಹ್ರಾಸವಾದ ಮಾನದಿಂದ ದುಃಖತಾಪಗಳು ಹೆಚ್ಚುವವು. ಕೃತಯುಗದಲ್ಲಿ ಧರ್ಮವು ನಾಲ್ಕು ಕಾಲುಗಳೂರಿ ನಿಂತಿದ್ದರಿಂದ ಆಗ ಜನರಲ್ಲಿ ಸುಖ–ಶಾಂತಿಗಳು ನೆಲೆಗೊಂಡಿದ್ದವೆಂದು ಹೇಳುವದುಂಟು. ಅದಕ್ಕೆ ಪರಸ್ಪರರು ತಮ್ಮ ತಮ್ಮ ಧರ್ಮಗಳನ್ನು ಪಾಲಿಸುತ್ತಿದ್ದದ್ದೇ ಕಾರಣವು. ಮುಂದೆ ಯುಗಾಂತರದಲ್ಲಿ ಈ ಪರಸ್ಪರ ಧರ್ಮಪಾಲನವು ಅಂದರೆ ಧರ್ಮಾತ್ಮಕ ಸಹಯೋಗವು ಕುಗ್ಗುತ್ತ ಬಂದದ್ದರಿಂದ ಧರ್ಮವು ಕಾಲೂರಿ ನಿಲ್ಲದಂತಾಗುತ್ತ ಬಂದು ಕಡೆಗೆ ಈ ಕಲಿಯುಗದಲ್ಲಿ ಧರ್ಮವು ಒಂದು ಕಾಲಿನಿಂದ ನಿಂತರೂ ಆ ಕಾಲೂ ಕುಂಟುಬಿದ್ದಿರುವದಂತೆ ! ಇದರ ಮೇಲಿಂದ ಈ ಧರ್ಮಾತ್ಮಕ ಸಹಯೋಗವು ಯಾವ ಮನೆಗೆ ಬಂದಿರುತ್ತದೆಂಬದನ್ನು ಮನಸ್ಸಿನಲ್ಲಿ ತಂದುಕೊಳ್ಳತಕ್ಕದ್ದು.

ಕಾಸಿಮಖಾನ– ಆ ಇಬ್ಬರಲ್ಲಿ ಒಬ್ಬರು ತಮ್ಮ ಧರ್ಮವನ್ನು ಪಾಲಿಸದಿದ್ದರೆ?

ಮಾಧವಾಚಾರ್ಯ– ಒಬ್ಬರು ತಮ್ಮ ಧರ್ಮವನ್ನು ಪಾಲಿಸದೆ ಇದ್ದ ಮಾತ್ರದಿಂದ ಮತ್ತೊಬ್ಬರು ಧರ್ಮಭ್ರಷ್ಟರಾಗುವದು ನ್ಯಾಯವಲ್ಲ; ಯಾಕಂದರೆ ಅನ್ಯರ ಧರ್ಮಾಚರಣೆಗಾಗಿ

ನಾವು ಧರ್ಮವನ್ನು ಆಚರಿಸತಕ್ಕದ್ದಾಗಿರದೆ, ನಮ್ಮ ಕರ್ತವ್ಯವೆಂದು ತಿಳಿದು ನಿಸ್ವಾರ್ಥಬುದ್ಧಿಯಿಂದ ನಮ್ಮ ಧರ್ಮವನ್ನು ಆಚರಿಸಬೇಕಾಗುವದು. ಇಂಥ ಪ್ರತಿಫಲಾಪೇಕ್ಷೆಯಿಲ್ಲದ ಸ್ವಾರ್ಥರಹಿತವಾದ ಪವಿತ್ರ ಧರ್ಮಾಚರಣೆಯೇ ಈಶ್ವರಪ್ರೀತಿಗೆ ಕಾರಣವಾಗುವದು. ಒಬ್ಬರ ಧರ್ಮಪಾಲನಕ್ಕಾಗಿ ತಾನು ಧರ್ಮವನ್ನು ಪಾಲಿಸುವದು, ಒಬ್ಬರು ಧರ್ಮವನ್ನು ಪಾಲಿಸದಿದ್ದರೆ ತಾನು ಧರ್ಮವನ್ನು ಪಾಲಿಸದಿರುವದು, ಕ್ರಿಯೆಗೆ ಪ್ರತಿಕ್ರಿಯೆ, ಅಥವಾ ಫಲಕ್ಕೆ ಪ್ರತಿಫಲರೂಪವಾಗಿರುವದರಿಂದ ಅದರಲ್ಲಿ ದೇವರಿಗೆ ಅರಿಕೆಯಾಗುವಂಥ ಮಹತ್ವವೇನು ಇರುವದಿಲ್ಲ. ಹೀಗೆ ಧರ್ಮಕ್ಕಾಗಿ ಧರ್ಮವನ್ನು, ಅಧರ್ಮಕ್ಕಾಗಿ ಅಧರ್ಮವನ್ನು ಆಚರಿಸುವ ಬುದ್ಧಿಯಿಂದ ಪಾಲಿಸುವ ಸಹಯೋಗಕ್ಕೆ ಪ್ರತಿಯೋಗ ಸಹಯೋಗವೆನ್ನುವರು. ಇದು ಅಹಂಕಾರದ ಗೊಂದಲ ವಾಗಿರುವದು. ಇಂಥ ಅಹಂಕಾರದ ಗೊಂದಲದಲ್ಲಿ ದೇವರು ಕೈಹಾಕದಿರುವದರಿಂದ ಅಹಂಕಾರಿಗಳೇ ಪರಸ್ಪರ ಹೊಡೆದಾಡಿ ಪರಿಣಾಮವನ್ನು ಕಂಡುಕೊಳ್ಳಬೇಕಾಗುವದು ! ಇದು ಲೌಕಿಕರಿಗೆ ಮಾನ್ಯವಾದರೂ ದೇವರಿಗೆ ಮಾನ್ಯವಾಗಲಾರದು. ಸಂಬಂಧದಿಂದ ಧರ್ಮ ಗಳುಂಟಾಗುವವು. ಸಂಬಂಧಗಳು ಭಿನ್ನವಾಗಿದ್ದಂತೆ ಧರ್ಮಗಳೂ ಭಿನ್ನವಾಗುವವು. ತನಗೆ ಜನಕನೆಂಬ ದೃಷ್ಟಿಯಿಂದ ಸಂಬಂಧಪಟ್ಟಿದ್ದ ಪಿತೃವು ತನ್ನ ಧರ್ಮವನ್ನು ಪಾಲಿಸಲಿ–ಪಾಲಿಸದಿರ ಆತನ ಧರ್ಮಪಾಲನದಲ್ಲಿ ದೃಷ್ಟಿಯನ್ನಿಡನೆ ತನ್ನೊಡನೆಯಿದ್ದ ಆತನ ಸಂಬಂಧದಲ್ಲಿ ದೃಷ್ಟಿಯನ್ನಿಟ್ಟು ಪುತ್ರನು ತನ್ನ ಧರ್ಮವನ್ನು ಪಾಲಿಸುವದರಲ್ಲಿ ಉದಾತ್ತತೆಯಿದ್ದು ಅದೇ ಈಶ್ವರ ಪ್ರೀತಿಗೆ ಕಾರಣವಾಗುವದು. ಹೀಗೆ ಸಂಬಂಧಿಕರ ಧರ್ಮಪಾಲನದಲ್ಲಿ ದೃಷ್ಟಿಯನ್ನಿಡದೆ, ಕೇವಲ ಅದರ ಸಂಬಂಧದಲ್ಲಿ ಮಾತ್ರ ದೃಷ್ಟಿಯನ್ನಿಟ್ಟು ಕರ್ತವ್ಯಬುದ್ಧಿಯಿಂದ ತಮ್ಮ ತಮ್ಮ ಧರ್ಮವನ್ನು ಪಾಲಿಸಿ ಸಂಬಂಧಿಕರೊಡನೆ ಬಳಿಸುವ ಸಹಯೋಗಕ್ಕೆ ಸಂಬಂಧಾತ್ಮಕ ಯೋಗವೆನ್ನುವರು. ಇದು ಮೇಲೆ ಹೇಳಿದ ಧರ್ಮಾತ್ಮಕ ಸಹಯೋಗಕ್ಕಿಂತಲೂ ಶ್ರೇಷ್ಠವಾದದ್ದು. ಯಾಕಂದರೆ ಈಶ್ವರಪ್ರೀತಿಗೆ ಕಾರಣವಾದ ನಿಸ್ಪೃಶ್ಯತೆಯು ಇದರಲ್ಲಿ ಗರ್ಭಿತವಾಗಿರುತ್ತದೆ. ದಶರಥನು ತನ್ನ ನಡುವಿನ ಹೆಂಡತಿಯಾದ ಕೈಕೆಯಿಯ ಮಾತಿನಿಂದ ಶ್ರೀ ರಾಮನನ್ನು ಅನ್ಯಾಯವಾಗಿ ಅಡವಿಗಟ್ಟಿದರೂ, ಶ್ರೀ ರಾಮನು ರಾಜ್ಯಪ್ರಾಪ್ತಿರೂಪ ಸ್ವಾರ್ಥವನ್ನು ಪರಿತ್ಯಜಿಸಿ ಪಿತ್ರಾಜ್ಞಾಪಾಲನ ರೂಪವಾದ ತನ್ನ ಧರ್ಮವನ್ನು ಪಾಲಿಸಿ ತಂದೆಯೊಡನೆ ಸಹಯೋಗವನ್ನು ಬಳಿಸಿದ್ದೂ, ಅದರಂತೆ, ಶಂತನುರಾಜನು ಮತ್ಸ್ಯಗಂಧಿಯ ಮೇಲಿನ ಮೋಹದಿಂದ ತನ್ನ ಮಗನಾದ ಭೀಷ್ಮನ ಬ್ರಹ್ಮಚರ್ಯವ್ರತ ಪಾಲನಪೂರ್ವಕ ರಾಜ್ಯಪರಿತ್ಯಾಗಕ್ಕೆ ಕಾರಣನಾದರೂ, ಭೀಷ್ಮನು ಪಿತ್ರಾಜ್ಞಾಪಾಲನರೂಪ ಧರ್ಮದಿಂದ ತಂದೆಯೊಡನೆ ಸಹಯೋಗವನ್ನು ಬಳಸಿದ್ದೂ ಸಂಬಂಧಾತ್ಮಕ ಸಹಯೋಗದ ಉದಾಹರಣಗಳಾಗಿರುವವು. ಇದರಂತೆ ಲೋಕಮಾತೆಯಾದ ಸೀತಾದೇವಿಯು ನಿರಪರಾಧಿ ಯಾದ ತನ್ನನ್ನು ಪ್ರಜಾರಂಜನಕ್ಕಾಗಿ ಶ್ರೀರಾಮನು ಅಡವಿಗಟ್ಟಿದರೂ ಪತಿಯೇ ದೈವವೆಂದು ತಿಳಿದು ಪತಿಯಾದ ಶ್ರೀರಾಮನೊಡನೆ ಸಹಯೋಗವನ್ನು ಕಾಯ್ದುಕೊಂಡದ್ದು ಸಂಬಂಧಾತ್ಮಕ ಸಹಯೋಗವೇ ಆಗಿರುವದು. ಇಂಥ ಮಹಾತ್ಮರ ಹಲವು ಉದಾಹರಣಗಳು ಪುರಾಣಗಳಲ್ಲಿಯೂ ವ್ಯವಹಾರದಲ್ಲಿಯೂ ಕೂಡ ಇರುವವು. ಈ ಉದಾತ್ತ ಧರ್ಮಪಾಲನದಿಂದ ಶ್ರೀರಾಮನು

ಲೋಕಪೂಜ್ಯನೂ,ಭೀಷ್ಮನು ಇಚ್ಛಾಮರಣಿಯೂ, ಆದಂತೆ, ಶ್ರೀ ಸೀತಾದೇವಿಯು ಪತಿವ್ರತಾ ಶಿರೋಮಣಿಯೆನಿಸಿ ಲೋಕಮಾತೆಯ ಪದವಿಯನ್ನು ಹೊಂದಿದಳು !

ಕಾಶಿಮಖಾನ–ಭಗವನ್, ಹೊಸ ಹೊಸ ಸಂಗತಿಗಳ ಜ್ಞಾನದಿಂದ ಚಿತ್ತದಲ್ಲಿ ಹೊಸ ಹೊಸ ಆನಂದದ ತೆರೆಗಳು ಉತ್ಪನ್ನವಾಗುತ್ತಿರುವವು. ಒಟ್ಟಿಗೆ ಸಹಯೋಗದಲ್ಲಿ ಧರ್ಮಾತ್ಮಕ ಸಹಯೋಗ ವೆಂತಲೂ, ಸಂಬಂಧಾತ್ಮಕ ಸಹಯೋಗವೆಂತಲೂ ಎರಡು ವಿಧಗಳಿದ್ದು, ಧರ್ಮಾತ್ಮಕ ಸಹಯೋಗ ಕ್ಕಿಂತ ಸಂಬಂಧಾತ್ಮಕ ಸಹಯೋಗವು ಹೆಚ್ಚು ಉದಾತ್ತವೆಂದು ಹೇಳಿದ ಹಾಗಾಯಿತು; ಆದರೆ ಸಂಬಂಧದಿಂದ ಧರ್ಮಗಳುಂಟಾಗುತ್ತಿದ್ದು, ಧರ್ಮಪಾಲನದಿಂದ ಸಹಯೋಗವುಂಟಾಗುತ್ತಿರುವದರಿಂದ ಪೃಥ್ವಿಯೊಳಗಿನ ಮನುಷ್ಯಕೋಟಿಯಲ್ಲಿಸಾರ್ವತ್ರಿಕವಾದ ಪರಸ್ಪರ ಸಂಬಂಧವುಂಟಾಗುವ ಸಂಬಂಧವಿಲ್ಲದ್ದರಿಂದ ಮನುಷ್ಯಕೋಟಿಯಲ್ಲಿ ಪರಸ್ಪರ ಸಹಯೋಗುವುಂಟಾಗುವದು ಶಕ್ಯವಿಲ್ಲವೆಂದ ಹಾಗಾಯಿತು. ಪ್ರಕೃತಕ್ಕೆ ಉದಾಹರಣಾರ್ಥವಾಗಿ ನಮ್ಮ ನಿಮ್ಮ ಮಾತನ್ನೇ ತಕ್ಕೊಳ್ಳುವಾ. ಕರ್ನಾಟಕರೆನಿಸುವ ನಿಮಗೂ, ಪರದೇಶದ ಪಠಾಣರೆನಿಸುವ ನಮಗೂ ಯಾವ ಬಗೆಯ ಸಂಬಂಧವುಂಟಾಗಬೇಕು ? ಅಂದ ಬಳಿಕ ನಮ್ಮ ನಿಮ್ಮಲ್ಲಿ ಸಹಯೋಗದ ಬಳಿಕೆಗೆ ಆಸ್ಪದವೇ ಇಲ್ಲವಾಯಿತಲ್ಲ !

ಮಾಧವಾಚಾರ್ಯ–ಕಾಶಿಮಖಾನ, ನಿಮ್ಮ ಮಾರ್ಮಿಕ ಪ್ರಶ್ನಗಳಿಂದ ನಮಗೆ ಬಹಳ ಸಂತೋಷವಾಗಿ ಉತ್ತರ ಕೊಡಲಿಕ್ಕೆ ಉತ್ತೇಜನವಾಗುತ್ತದೆ. ನನ್ನ ಮಾತುಗಳ ಕಡೆಗೆ ನಿಮ್ಮ ಸಂಪೂರ್ಣ ಲಕ್ಷವಿರತಕ್ಕದ್ದು. ಸಂಬಂಧಗಳಲ್ಲಿ–1.ರಕ್ತಸಂಬಂಧ, 2. ವೃತ್ತಿಸಂಬಂಧ, 3. ಭಾವ ಸಂಬಂಧ ಎಂಬ ಮೂರು ಬಗೆಯ ಸಂಬಂಧಗಳಿರುವುವು. ಪಿತಾ–ಪುತ್ರಾದಿ ಬಂಧು–ಬಾಂಧವರೊಳಗಿನ ಸಂಬಂಧವು ರಕ್ತಸಂಬಂಧವೆನಿಸುವದು; ಗುರು–ಶಿಷ್ಯಾದಿ ಇಷ್ಟ ಮಿತ್ರರೊಳಗಿನ ಸಂಬಂಧವು ವೃತ್ತಿ ಸಂಬಂಧವೆನಿಸುವದು; ಬರಿಯ ಮನುಷ್ಯ ಕೋಟಿಯೇ ಏಕೆ, ಪ್ರಾಣಿಕೋಟಿಗಳೆಲ್ಲವೂ ಆತ್ಮರೂಪವಾಗಿರುವದರಿಂದ ಅಥವಾ ಒಬ್ಬ ದೇವರಿಗೆ ಸಂಬಂಧಪಟ್ಟವರಿರುವದರಿಂದ ಸರ್ವತ್ರಆತ್ಮಭಾವವನ್ನು ಅಥವಾ ದೈವೀಭಾವವನ್ನು ವಹಿಸುವದು ಭಾವಸಂಬಂಧವಾಗಿರುವದು. ಕಾಶಿಮಖಾನ, ಈ ಆತ್ಮದೃಷ್ಟಿಯಿಂದ ಅಥವಾ ದೈವೀಸಂಬಂಧದ ದೃಷ್ಟಿಯಿಂದ ಬರಿಯ ನಾವೂ–ನೀವೂ ಸಂಬಂಧಿಕರಾಗುವದಂತು ಇರಲಿ, ಮನುಷ್ಯ ಕೋಟಿಯಷ್ಟೇ ಅಲ್ಲ, ಪ್ರಾಣಿಕೋಟಿಯೂ ಸಂಬಂಧಿಕವಾಗುವದಿಲ್ಲವೆ ? ಇಂಥ ಈ ಭಾವಸಂಬಂಧವನ್ನನುಸರಿಸಿ ಭಾವನಾತ್ಮಕ ಸಹಯೋಗವೆಂಬುದೊಂದು ಮೂರನೆಯ ಸಹಯೋಗವುಂಟಾಗುವದು! ಆದರೆ ಈ ಉಚ್ಚತರ ಸಹಯೋಗವು ಮಹಾತ್ಮರಲ್ಲಿ ಮಾತ್ರ ಕಂಡುಬರತಕ್ಕದ್ದಾದ್ದರಿಂದ, ಅದು ಲೌಕಿಕರ ಅನುಭವಕ್ಕೆ ಬರತಕ್ಕದ್ದಾಗಿರುವದಿಲ್ಲ.

ಕಾಶಿಮಖಾನ–ಸದ್ಗುರೋ, ಕೇಳುವ ಪಾತ್ರತೆಯಿದ್ದರೆ ಆ ಶ್ರೇಷ್ಠತರ ಸಹಯೋಗವನ್ನು ವಿವರಿಸಿ ಹೇಳುವ ಕೃಪೆಯಾಗಬೇಕು. ವ್ಯಕ್ತಿಶಃ ನಾನು ಅದನ್ನು ಕೇಳಲಿಕ್ಕೆ ಅಪಾತ್ರನಿದ್ದರೂ ಈ ಮಹಾಸಭೆಗೆ ಶ್ರವಣದಲ್ಲಿ ನಿಶ್ಚಯವಾಗಿ ಪಾತ್ರತೆಯಿರುವದೆಂದು ನಾನು ಭಾವಿಸುತ್ತೇನೆ.

ಮಾಧವಚಾರ್ಯ–ಕಾಶಿಮಖಾನ, ಶ್ರವಣಕ್ಕೆ ಮುಮುಕ್ಷತ್ವದ ದೃಷ್ಟಿಯಿಂದ ಈ ಮಹಾಸಭೆಯಂತು ಇರಲಿ, ನೀವೂ ಅಧಿಕಾರಿಗಳಿರುತ್ತೀರಿ; ಆದ್ದರಿಂದ ಈಗ ನಾನು ಹೇಳುವದನ್ನು ಲಕ್ಷಪೂರ್ವಕವಾಗಿ ಕೇಳಬೇಕು. ಮಹಾತ್ಮರು ಜಗತ್ತನ್ನು ಆತ್ಮವೆಂದು ಭಾವಿಸಿ, ಪ್ರಾಣಿಮಾತ್ರಗಳ ಗುಣಾವಗುಣಗಳನ್ನು, ಧರ್ಮಾಧರ್ಮಗಳನ್ನೂ, ಸಂಬಂಧಾದಿಗಳನ್ನೂ ನೋಡದೆ ಕೇವಲ ಆತ್ಮದೃಷ್ಟಿಯಿಂದ ಜಗತ್ತಿನೊಡನೆಯೇ ಸಹಯೋಗವನ್ನು ಬಳಿಸಿ ಸದಾನಂದದಲ್ಲಿರುವರು !! ಇಂಥ ದುಲರ್ಭವಾದ ಶ್ರೇಷ್ಠತಮ ಸಹಯೋಗವನ್ನೇ ಭಾವನಾತ್ಮಕ ಸಹಯೋಗವೆಂದು ಕರೆಯತಕ್ಕದ್ದು. ಒಟ್ಟಿಗೆ ಸಹಯೋಗದಲ್ಲಿ– 1. ಧರ್ಮಾತ್ಮಕ ಸಹಯೋಗ, 2.ಸಂಬಂಧಾತ್ಮಕ ಸಹಯೋಗ, 3. ಭಾವನಾತ್ಮಕ ಸಹಯೋಗ ಎಂದು ಮೂರು ವಿಧಗಳಿರುವವು. ಇವುಗಳಲ್ಲಿ ಧರ್ಮಾತ್ಮಕ ಸಹಯೋಗವು ಕ್ರಿಯೆಯಂತೆ ಪ್ರತಿಕ್ರಿಯೆ ಎಂಬ ನಿಯಮದಂತೆ, ಒಬ್ಬರ ಧರ್ಮಾಚರಣೆಯು ಸಹಯೋಗದಿಂದ ಇನ್ನೊಬ್ಬರ ಧರ್ಮಾಚರಣೆಯ ಸಹಯೋಗದ ಉತ್ಪತ್ತಿಗೆ ಸಹಾಯಕಾರಿಯಾಗುವದರಿಂದ ಅದು ಜಗತ್ತಿನ ಸುರಕ್ಷಿತತೆಗೆ ಪರಮ ಸಾಧನವಾಗಿರುವದು. ''ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ'' ಎಂಬ ಶ್ರುತಿಯು ಇದಕ್ಕೆ ಸಾಕ್ಷಿಯಾಗಿರುವದು. ಆದರೆ ಸಂಬಂಧಾತ್ಮಕ–ಭಾವನಾತ್ಮಕ ಸಹಯೋಗಗಳ ಮಾತು ಹಾಗಲ್ಲ. ಅವು ನಿಸ್ಪೃಹತೆಯ ತಪೋಮೂಲವಾದ ದಿವ್ಯ ತೇಜಸ್ಸಿನಿಂದ ಉತ್ತರೋತ್ತರ ಶ್ರೇಷ್ಠವಾಗಿದ್ದು ಅವು ಕೃತ್ರಿಮಗಳೂ, ಕೇವಲ ವ್ಯಕ್ತಿಯ ಮಹಿಮೆಗೆ ಸಂಬಂಧಿಸಿದವೂ ಆಗಿರುವವು ! ಜಗತ್ತಿನ ಸಾಮಾನ್ಯವಾದ ಸುರಕ್ಷಿತತೆಗೆ ಅವುಗಳಿಂದ ಪ್ರತ್ಯಕ್ಷ ಪ್ರಯೋಜನವಾಗದು; ಆದ್ದರಿಂದ ಜಗತ್ತಿನ ಸಾಮಾನ್ಯ ಹಿತದ ದೃಷ್ಟಿಯಿಂದ ಧರ್ಮಾತ್ಮಕ ಸಹಯೋಗವು ಉಳಿದ ಎರಡು ಬಗೆಯ ಸಹಯೋಗಗಳಿಗಿಂತ ಹೆಚ್ಚು ವ್ಯವಹಾರ್ಯವಾಗಿರುವದು. ಒಟ್ಟಿಗೆ ಜಗತ್ತಿನ ಸುಖ–ಶಾಂತಿಗಳಿಗೆ ಸಹಯೋಗವೇ ಆತ್ಯಂತಿಕ ಸಾಧನವಾದದ್ದರಿಂದ ಅವರವರು ತಮ್ಮ ತಮ್ಮ ಅಧಿಕಾರವಿದ್ದಂತೆ ಪ್ರಯತ್ನಪೂರ್ವಕವಾಗಿ ಒಂದಿಲ್ಲೊಂದು ಬಗೆಯ ಸಹಯೋಗಿಗಳಾಗತಕ್ಕದ್ದು.

ಮಾದಿಗರ ದುರಗಪ್ಪ–ಬುದ್ಧೀ, ನಮ್ಮಪ್ಪನ ಮಾತು ಹಸಿಗೋಡೆಯ ಮೇಲೆ ಹರಳು ಇಟ್ಟಹಾಗೆ ! ನಾವೆಲ್ಲರೂ ಒಬ್ಬ ದೇವರ ಮಕ್ಕಳಾದ್ದರಿಂದ ಅಣ್ಣ–ತಮ್ಮಂದಿರಾದೆವು; ಅಂದ ಬಳಿಕ ನಾವೆಲ್ಲರೂ ಹಾಲು–ಹಣ್ಣಿನಂತೆ ಒಂದುಗೂಡಿ ಇರದಿದ್ದರೆ ತಂದೆಯನ್ನು ಮರೆತಹಾಗೆಯೇ ಸರಿ! ಅದರಲ್ಲಿನಮ್ಮಂಥ ತಿಳಿಗೇಡಿಗಳಾದ ಕಗ್ಗಜನರು ಒಂದುಗೂಡಿ ಇರದೆ,ಎಟ್ಟಿತನದಿಂದ ಸಿಡಿದು ಅಡ್ಡ ದಾರಿಯ ಹಿಡಿದು ತಮ್ಮಷ್ಟಕ್ಕೆ ತಾವು ಕೆಟ್ಟರೆ ಜಾಣರಾದವರು ಹಾಗೆ ಯಾಕೆ ಮಾಡಬೇಕು? ಅವರ ಪಾಪ ಅವರಸುತ್ತ, ಅವರ ಕರ್ಮ ಅವರನ್ನು ತಿನ್ನುವದು ! ತಿಳಿದವರು ದೇವರು ಮೆಚ್ಚುವ ಹಾಗೆ ಒಂದುಗೂಡಿದ್ದರೆ ಆಯಿತು ! ಸರಿ ಸರಿ ! ಬಹಳ ಸಂತೋಷ ! ದೇವರೂ, ನಿನ್ನ ಮಕ್ಕಳು ಹೊಲೆಮಾದಿಗರ ಮನಸ್ಸಿಗೆ ನಿನ್ನ ಮಾತು ಒಳಿತಾಗಿ ಬಂತುಬಿಡು ! ಆದರೆ, ಯಪ್ಪಾ, ಒಂದು ಸವಾಲು ಹಾಕಬೇಕೆನ್ನುತ್ತೇನೆ – ಕೆಲವು ಮೂಳಗಳು ಅಡವಿ ಬಿದ್ದು ತಮ್ಮಷ್ಟಕ್ಕೆ ತಾವು ಕೆಟ್ಟು ಹಾಳಾಗಿ ಹೋಗದೆ ತಮ್ಮ ರಟ್ಟೆಯ ಕಸುವಿನ ಸೊಕ್ಕಿನಿಂದಲೂ, ದುಡ್ಡಿನ ಮಬ್ಬಿನ ಹಮ್ಮಿನಿಂದಲೂ ನಾಡಜನರ ಗತಿಗೆಡಿಸಿ ಅವರ ಹಕ್ಕು–ಬಾಬುಗಳನ್ನು ನುಂಗಿ ನೀರುಹಿಡಿಯುವರಲ್ಲ; ಅಂಥ

ಸೊಕ್ಕಿನ ಮುಕ್ಕಮೂಳಗಳು ಇಸ ಇದ್ದ ಹಾಗೆ ! ಯಪ್ಪಾ, ಆ ಇಸಮೂಳಗಳಲ್ಲಿ ಒಂದುಗೂಡಿ ಇರುವದು ಹ್ಯಾಗಾದೀತು? ಗುರುದೇವಾ, ನನ್ನ ಮನಸ್ಸಿನಲ್ಲಿ ಬಿದ್ದಿರುವ ಈ ಕಗ್ಗಂಟನ್ನಿಷ್ಟು ಬಿಡಿಸಬಾರದೆ? ನಿನಗೆ ಬಾರದ್ದು ಯಾವದಿರವದು?

ಈ ಮೇರೆಗೆ ನುಡಿದು ದುರುಗಪ್ಪನು ನೆಲಮುಟ್ಟಿ ಮುಜರೆ ಮಾಡಿ ಕುಳಿತುಕೊಳ್ಳಲು, ಮಾಧವಾಚಾರ್ಯರು— ''ಶಾಬಾಸ ! ದುರಗಪ್ಪಾ, ನೀಸು ನಮಗೆ ಮುಂದೆ ಮಾತಾಡಲಿಕ್ಕೆ ಹಾದಿಯ ಮಾಡಿಕೊಟ್ಟೆ ಬಿಡು; ನಿನ್ನ ಬುದ್ಧಿಗೆ ಮೆಚ್ಚಿದೆವು ! ಆದರೆ ನಮಗೆ ಮಧ್ಯಾಹ್ನ ಸಂಧ್ಯಾಕಾಲವಾಯಿತು; ಆರ್ಯರೂ ಲಿಂಗಪೂಜೆಗೆ ಹೋಗಲಿ; ಕಾಶಿಮಖಾನರೂ ನಮಾಜಿಗಾಗಿ ಚಡಪಡಿಸುತ್ತಿರಬಹುದು. ಇದಲ್ಲದೆ ಸರಿಹೊತ್ತಾದದ್ದರಿಂದ ನಮ್ಮ ನಿಮ್ಮ ಹೊಟ್ಟೆಯಲ್ಲಿ ಕಾಗೆಗಳು ಆಡುತ್ತಿರುವವಲ್ಲವೆ? ದುರಗಪ್ಪಾ, ಮೊದಲು ಹೊಟ್ಟೆಪ್ಪ, ಆ ಮೇಲೆ ಇಟ್ಟಪ್ಪ ! ನಿನ್ನ ಸಮಂಜಸ ಪ್ರಶ್ನದ ಉತ್ತರವನ್ನು ಮಧ್ಯಾಹ್ನದ ಮೇಲೆ ಹೇಳುವೆನು. ಇಂದಿಗೆ ಈ ಧರ್ಮೋಪದೇಶವನ್ನು ಮುಗಿಸಿಬಿಡೋಣ. ಉಪದೇಶದಂತೆ ಕೈಮುಟ್ಟಿ ಕೆಲಸ ಮಾಡದೆ, ಬರಿಯ ಉಪದೇಶ ಮಾಡುವವರ ನಾಲಿಗೆಯೂ, ಕೇಳುತ್ತ ಕುಳಿತುಕೊಳ್ಳುವವರ ಕಿವಿಗಳೂ ಮಾತ್ರ ಉದ್ದವಾಗುವ ಸಂಭವವಿರುವದು; ಆದ್ದರಿಂದ ಆ ಅನಿಷ್ಟ ಸ್ಥಿತಿಯು ಒದಗದಂತೆ ಹೇಳುವ ನಾವೂ, ಕೇಳುವ ನೀವೂ ಹೀಗೆ ಎಲ್ಲರೂ ರಾಷ್ಟ್ರೋದ್ಧಾರದ ಕಾರ್ಯರೂಪ ಕಠಿಣ ತಪಶ್ಚರ್ಯ ಮಾಡಲು ಇನ್ನು ಉದ್ಯುಕ್ತರಾಗೋಣ. ಈಗ ಹೀಗೆ ನಾವು ಒಂದೇಸವನೆ ಧರ್ಮೋಪದೇಶ ಮಾಡುತ್ತ ಕುಳಿತುಕೊಂಡಿದ್ದರ ಅನಿಷ್ಟ ಪರಿಣಾಮವನ್ನು ಬೇಗನೆ ಭೋಗಿಸಬೇಕಾದೀತು; ಆದರೂ ''ಜಾನಾತಿ, ಇಚ್ಛತಿ, ಯತತೆ'' ಎಂಬ ಶ್ರುತ್ಯುಕ್ತ ಕ್ರಮದಂತೆ, ಮೊದಲು ತಿಳಕೊಳ್ಳುವದು, ಆ ಮೇಲೆ ಇಚ್ಛಿಸುವದು, ಬಳಿಕ ಇಚ್ಛೆಯಂತೆ ಯತ್ನಿಸುವದು ಅವಶ್ಯವಿರುವದರಿಂದ, ಈಗ ತಿಳಕೊಳ್ಳುವದಕ್ಕಾಗಿ ನಾವು ಹೀಗೆ ಉಪದೇಶ ಮಾಡಬೇಕಾಯಿತು! ಇಂದಿನ ಉಪನ್ಯಾಸವೇ ಕಡೆಯದು'' ಎಂದು ಹೇಳಿ, ವಿರೂಪಾಕ್ಷಾರ್ಯರ ಹಾಗು ಸಂಗನಬಸವಾರ್ಯರ ಮುಖವನ್ನು ನೋಡಲು, ಆ ಆರ್ಯಶ್ರೇಷ್ಠರರೊಡನೆ ಸಭೆಗೆ ಸಭೆಯೇ ಎದ್ದು ನಿಂತು ಕೃತಕೃತ್ಯತೆಯ ಉತ್ಸಾಹದಿಂದ ಮನೆಯ ಹಾದಿಯನ್ನು ಹಿಡಿಯಿತು.

## ಅಸಹಯೋಗದ ಪ್ರಭೇದಗಳು

ಮಾಧವಾಚಾರ್ಯರ ಸರಸವಾದ ತಾತ್ವಿಕ ನಿರೂಪಣದಿಂದ ಜನರ ಚಿತ್ತವೃತ್ತಿಗಳು ಆಕರ್ಷಿಸಿ ಹೋಗಿದ್ದವು; ಅವರ ಉಪನ್ಯಾಸಗಳೆಂದರೆ ಜನರು ಮುಗಿಬೀಳುತ್ತಿದ್ದರು. ಆ ಮಹಾತ್ಮರ ಇಂದಿನ ಅಸಹಯೋಗವೆಂಬ ಸೂಕ್ಷ್ಮವಿಷಯದ ನಿರೂಪಣವನ್ನು

ಯಾವಾಗ ಕೇಳೇವೆಂಬ ಲವಲವಿಕೆಯು ಜನರಲ್ಲಿ ಉತ್ಪನ್ನವಾಗಿತ್ತು. ಊಟವಾದಕೂಡಲೆ ಹೊತ್ತಿಗೆ ಸರಿಯಾಗಿ ಹಿರಿಯಮಠದ ಭವ್ಯ ಮಂಟಪದಲ್ಲಿ ಸಭೆಯು ನೆರೆಯಿತು. ಇಂದಿನ ಉಪನ್ಯಾಸವೇ ಕಡೆಯದೆಂದು ಆಚಾರ್ಯರು ಹೇಳಿದ್ದರಿಂದಲೂ, ಇಂದು ಅಸಹಯೋಗದಂಥ ತ್ರಾಸದಾಯಕ ವಿಷಯದ ವಿವೇಚನ ವಾಗತಕ್ಕದ್ದಿರುವದರಿಂದಲೂ ಸಭೆಯಲ್ಲಿ ಜನರ ಸಮ್ಮರ್ದವು ವಿಶೇಷವಾಯಿತು. ಸಭಾಮಂಟಪವು ಕಾಲಿಡಲಿಕ್ಕೆ ಬಾರದಂತೆ ತುಂಬಿಹೋಗಿ, ಜನರು ಮಂಟಪದ ಹೊರಗೆ ಬಿಸಿಲು-ನೆರಳು ನೋಡದೆ ಸಂದಟಿತವಾಗಿ ನಿಂತುಕೊಂಡಿದ್ದರು. ಆಚಾರ್ಯರ ವೈರಾಗ್ಯಸಂಪನ್ನವಾದ ತೇಜಃಪುಂಜ ಮೂರ್ತಿಯನ್ನು ನೋಡಲಿಕ್ಕೆ ಜನರು ಪುನಃ ಪುನಃ ಆತುರಪಡುತ್ತಿದ್ದರು. ಅದರಲ್ಲಿ ವಿರೂಪಾಕ್ಷಾರ್ಯ, ಸಂಗನಬಸವಾರ್ಯರಂಥ ಮಹಾತ್ಮರ ಯೋಗವಾದದ್ದರಿಂದಂತು, ಜನರ ಉತ್ಸುಕತೆಗೆ ವಿಶೇಷ ಕಳೆಯೇರಿತ್ತು. ಹೀಗೆ ಸಭೆಯು ಸಂಘಟಿತವಾಗಿ ನೆರೆದು ಆರ್ಯರ ಹಾಗು ಆಚಾರ್ಯರ ಬರವನ್ನು ಎದುರು ನೋಡುತ್ತಿರಲು, ಆರ್ಯವರ್ಯರಿಬ್ಬರೂ ಬಂದು ತಮ್ಮ ತಮ್ಮ ಆಸನಗಳನ್ನು ಅಲಂಕರಿಸಿದರು; ಅಷ್ಟರಲ್ಲಿ ಆಚಾರ್ಯವರ್ಯರೂ ದಯಮಾಡಿಸಿದರು. ಆಚಾರ್ಯರು ಆರ್ಯರನ್ನು ಸಂಭಾವಿಸುತ್ತ ಪೀಠದಲ್ಲಿ ಕುಳಿತುಕೊಳ್ಳುತ್ತ ಮಾದಿಗರ ದುರಗಪ್ಪನನ್ನು ಕುರಿತು- ''ದುರಗಪ್ಪಾ, ಇಂದಿನ ನಮ್ಮ ಭಾಷಣಕ್ಕೆ ನೀನೆ ದಾರಿ ತೋರಿಸಿಕೊಟ್ಟಹಾಗಾಗಿದೆ. ''ದುಷ್ಟರು ತಾವು ತಮ್ಮ ಧರ್ಮಬಿಟ್ಟು ನಡೆಯುವದಲ್ಲದೆ, ತಮ್ಮ ಅಧಿಕಾರಬಲ-ಶರೀರಬಲ-ದ್ರವ್ಯಬಲಗಳಿಂದ ಉನ್ಮತ್ತರಾಗಿ ಅನ್ಯರನ್ನು ತಮ್ಮ ಅಧರ್ಮಾಚರಣೆಗೆ ಅಂಕಿತರಾಗುವಂತೆ ಬಲಾತ್ಕರಿಸಿದರೆ ಏನು ಮಾಡಬೇಕೆ''ಂದು ನೀನು ಕೇಳಿದ್ದು ಬಹು ಮಾರ್ಮಿಕವಾಗಿರುವದು. ಹೀಗೆ ಅನ್ಯರನ್ನು ಬಲಾತ್ಕರಿಸುವ ದುಷ್ಟರು, ಅಧಾರ್ಮಿಕ ನೀಚ ಸಾರ್ಥಪರಾಯಣರಾದದ್ದರಿಂದ ಅವರು ಧರ್ಮವಿಘಾತಕರಾಗುವರು. ಧರ್ಮದಿಂದಲೇ ಜಗತ್ತು ನಿಂತಿರುವದರಿಂದ, ಅವರ ಧರ್ಮ ವಿಘಾತಕ ದುಷ್ಟ ಕೃತಿಯು ಜಗತ್ತಿನ ಸುರಕ್ಷಿತತೆಗೆ ಬಾಧಕವಾಗಿರುವದು. ಜಗತ್ತು ಈಶ್ವರ ನಿರ್ಮಿತವಾಗಿದ್ದು ಈಶ್ವರನು ಆ ಜಗದ್ರೂಪ ಕುಟುಂಬದ ಯಜಮಾನನೂ, ಪ್ರಾಣಿಮಾತ್ರಗಳು ಆ ಯಜಮಾನನ ಕೌಟುಂಬಿಕ ಪರಿವಾರವೂ, ವಿವಿಧ ಸೃಷ್ಟ ಪದಾರ್ಥಗಳು ಆ ಕುಟುಂಬದ ಪೋಷಕಸಾಮುಗ್ರಿಗಳೂ ಆಗಿರುವವು; ಆದ್ದರಿಂದ ಕುಟುಂಬದ ಸುರಕ್ಷಿತತೆಗಾಗಿ ಕುಟುಂಬ ದೊಳಗಿನ ವಿವೇಕಿಗಳು ತಮ್ಮ ತಮ್ಮ ಧರ್ಮಗಳಂತೆ ನಡೆದು ಯಜಮಾನನಿಗೆ ಸಹಾಯ ಮಾಡುವದು ಅವಶ್ಯವಾಗಿರುವದು. ಜಗದ್ರೂಪ ಕುಟುಂಬದ ಈಶ್ವರರೂಪ ಯಜಮಾನನು, ತನ್ನ ಪರಿವಾರಕ್ಕೆ ಧರ್ಮದಂತೆ ನಡೆದು ಉನ್ನತಿ ಪಡೆಯಲಿಕ್ಕೆ, ಅಥವಾ ಅಧರ್ಮದಂತೆ ನಡೆದು ಪತಿತರಾಗಲಿಕ್ಕೆ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟದ್ದು, ಅಧರ್ಮಿಷ್ಠರಾದ ದುಷ್ಟರನ್ನು ಶಿಕ್ಷಿಸುವ, ಹಾಗು ಧರ್ಮಿಷ್ಠರಾದ ಶಿಷ್ಟರನ್ನು ರಕ್ಷಿಸುವ, ಅದರಂತೆ ಕುಟುಂಬವು ಪೂರ್ಣ ಅಧರ್ಮಿಷ್ಠವಾದಾಗ ತನ್ನ ಮನಸ್ಸಿಗೆ ಬಂದರೆ ಅದನ್ನು ನಾಶಮಾಡುವ ಸಂಪೂರ್ಣ ಅಧಿಕಾರವನ್ನು ತನ್ನ ಕೈಯಲ್ಲಿ ಇಟ್ಟುಕೊಂಡಿರುತ್ತಾನೆ; ಆದ್ದರಿಂದ ಧರ್ಮದಂತೆ ನಡೆದು ಜಗತ್ಕುಟುಂಬವನ್ನು ಸುರಕ್ಷಿತವಾಗಿ ಇಟ್ಟುಕೊಳ್ಳುವ ಜವಾಬುದಾರಿಯೂ, ಅಧರ್ಮದಿಂದ ನಡೆದು ಆ

ಕುಟುಂಬವನ್ನು ನಾಶಕ್ಕೆ ಗುರಿಮಾಡುವ ಜವಾಬುದಾರಿಯೂ ಕೌಟುಂಬಿಕ ಪರಿವಾರದ ತಲೆಯ ಮೇಲೆ ಸಂಪೂರ್ಣವಾಗಿರುವದು. ಇದನ್ನರಿತು ಧರ್ಮಾಧರ್ಮದ ಪರಿಜ್ಞಾನವುಳ್ಳ, ಹಾಗು ಆ ಪರಮೇಶ್ವರನ ಕುಟುಂಬದ ಪರಿವಾರದೊಳಗಿನವರಾದ ಮನುಷ್ಯರು ನಾವು, ಕುಟುಂಬದೊಳಗಿನ ಒಂದು ವ್ಯಕ್ತಿಯು ಅಥವಾ ಕೆಲವು ವ್ಯಕ್ತಿಗಳ ಅಧಾರ್ಮಿಕ ಹಿತಕ್ಕಿಂತ ಇಡಿಯ ಕುಟುಂಬದ ಧಾರ್ಮಿಕ ಹಿತವು ಮಹತ್ವದ್ದೆಂದು ತಿಳಿದು, ಪ್ರಸಂಗವಶಾತ್ ಕುಟುಂಬ ವಿಘಾತಕ, ಅಂದರೆ, ಈಶ್ವರದತ್ತವಾದ ಸ್ವಾತಂತ್ರ್ಯ ವಿಘಾತಕ ಅಧಾರ್ಮಿಕ ವ್ಯಕ್ತಿಯನ್ನು ಅಥವಾ ವ್ಯಕ್ತಿಗಳನ್ನು ನಿಗ್ರಹಿಸಲೇಬೇಕಾಗುವದು. ದುರಗಪ್ಪಾ, ಈ ಸಂಬಂಧದಿಂದ ಮಹಾಭಾರತದಲ್ಲಿ ಧರ್ಮಜ್ಞನಾದ ವಿದುರನು ಧೃತರಾಷ್ಟ್ರನನ್ನು ಕುರಿತು– ''ಭೂಪತೇ, ನೀನು ಕುರುಕುಲ ವಿನಾಶಕನಾದ ದುರ್ಯೋಧನನನ್ನು ಮಗನೆಂದು ನೋಡದೆ ಪರಿತ್ಯಾಗ ಮಾಡೆ'ಂದು ಬೋಧಿಸುವಾಗ– ''ರಾಜಾ, ಕುಲನಾಶವನ್ನು ನಿಲ್ಲಿಸುವದಕ್ಕಾಗಿ ಒಂದು ವ್ಯಕ್ತಿಯನ್ನೂ, ಊರ ನಾಶವನ್ನು ನಿಲ್ಲಿಸುವದಕ್ಕಾಗಿ ಒಂದು ಕುಟುಂಬವನ್ನೂ, ದೇಶದ ನಾಶವನ್ನು ನಿಲ್ಲಸುವದಕ್ಕಾಗಿ ಒಂದು ಊರನ್ನೂ ನಾಶಮಾಡಬಹುದು'' ಎಂದು ಹೇಳಿರುವನು; ಆದ್ದರಿಂದ ದುರಗಪ್ಪಾ, ಜಗದ್ರೂಪ ಕುಟುಂಬದೊಳಗಿನ ಮನುಷ್ಯ ಮಾತ್ರರ ಸ್ವಾತಂತ್ರ್ಯ ಹರಣಮಾಡುವ ದುಷ್ಟರೊಡನೆ, ಅವರ ಸಂಬಂಧ, ಯೋಗ್ಯತೆ, ಕಾಲ, ಪರಿಸ್ಥಿತಿ, ಇವುಗಳನ್ನು ನೋಡಿ, ಔದಾಸೀನ್ಯದಿಂದಾಗಲಿ, ಅಸಹಯೋಗದಿಂದಾಗಲಿ ನಡೆದುಕೊಳ್ಳತಕ್ಕದ್ದಲ್ಲದೆ, ಅವರೊಡನೆ ಅಸಹಕಾರಿತೆಯನ್ನು ಸರ್ವಥಾ ಬಳಿಸಬಾರದು. ಈ ಸೂಕ್ಷ್ಮ ವಿಷಯವನ್ನು ಕುರಿತು ಮಾಡತಕ್ಕ ವಿಚಾರಗಳು ಹಲವು ಇರುವವು. ಈಗ ಮುಸಲ್ಮಾನರು ತಾವು ಭರತ ಭೂಮಿಯೆಂಬ ಪಟ್ಟಣದವರಾಗಬೇಕೆಂದಲ್ಲ ಆ ಪಟ್ಟಣದವರ ಸ್ವಾತಂತ್ರ್ಯ ಹರಣ ಮಾಡಿ, ಆ ಪಟ್ಟಣವನ್ನು ಬಲಾತ್ಕಾರದಿಂದ ತಾವು ಆಕ್ರಮಿಸಬೇಕೆಂದು ಯತ್ನಿಸುತ್ತಿರುವದರಿಂದ, ಕರ್ನಾಟಕರೂಪ ಕುಟುಂಬದೊಳಗಿನ ಜನರೆಲ್ಲರೂ, ತಾವು ಯಾವ ಜಾತಿಯವರೇ ಇರಲಿ, ಯಾವ ಧರ್ಮದವರೇ ಇರಲಿ,ಯಾವ ಪಂಥದವರೇ ಇರಲಿ, ತಮ್ಮ ಕುಟುಂಬದ ಸ್ವಾತಂತ್ರ್ಯ ರಕ್ಷಣಕ್ಕಾಗಿ ಮುಸಲ್ಮಾನರೊಡನೆ ಒಕ್ಕಟ್ಟಿನಿಂದ ಅಸಹಯೋಗವನ್ನು ಬಳಸಬೇಕಾಗುವದು. ನಮ್ಮ ಭರತಭೂಮಿಯೆಂಬ ರಾಷ್ಟ್ರರೂಪ ಪಟ್ಟಣದಲ್ಲಿ ಕರ್ನಾಟಕ, ಮಹಾರಾಷ್ಟ್ರ, ಗುರ್ಜರ, ಬಂಗಾಲ ಮೊದಲಾದ ಪ್ರಾಂತರೂಪ ಕುಟುಂಬಗಳು ಹಲವು ಇರುವವು. ಆ ಎಲ್ಲ ಕುಟುಂಬದವರು ತಮ್ಮ ತಮ್ಮ ಕುಟುಂಬಗಳ ಸ್ವಾತಂತ್ರ್ಯರಕ್ಷಣಕ್ಕಾಗಿ ಇದರಂತೆ ಒಕ್ಕಟ್ಟಿನಿಂದ ಯತ್ನಿಸಿದರೆ ಇಡಿಯ ಭರತಭೂಮಿಯೆಂಬ ಪಟ್ಟಣದ ಸ್ವಾತಂತ್ರ್ಯರಕ್ಷಣಕ್ಕಾಗಿ ಎಲ್ಲರೂ ಯತ್ನಿಸಿದ ಹಾಗಾಗುವದು; ಇದಲ್ಲದೆ ಒಂದು ಕುಟುಂಬದವರು ತಮ್ಮ ನೆರೆಯ ಕುಟುಂಬಕ್ಕೆ ಒದಗಿದ ಸಂಕಟದ ನಿವಾರಣಕ್ಕಾಗಿ ಸಹಾಯ ಮಾಡದಿದ್ದರೆ, ಆ ಸಂಕಟವು ನಾಳೆ ನಮ್ಮ ಕುಟುಂಬಕ್ಕೂ ಬರತಕ್ಕದ್ದೇ ಎಂದು ತಿಳಿದು,ಇಡಿಯ ಪಟ್ಟಣದ ಹಿತದದೃಷ್ಟಿಯಿಂದ ನೆರೆಯ ಕುಟುಂಬಕ್ಕೆ ಬೇರೆ ಕುಟುಂಬದವರು ಸ್ವಾರ್ಥತ್ಯಾಗ ಮಾಡಿ ಸಹಾಯ ಮಾಡಲೇಬೇಕಾಗುವದು; ಹಾಗೆ ಸಹಾಯ ಮಾಡದಿದ್ದರೆ, ಇಂದು ಈ ಕುಟುಂಬವು ಹಾಳಾಯಿತು, ನಾಳೆ ಆ ಕುಟುಂಬವು ಹಾಳಾಯಿತು

ಎಂದು, ಇಡಿಯ ಭಾರತ ರಾಷ್ಟ್ರರೂಪ ಪಟ್ಟಣವೇ ಹಾಳಾಗುವ ಪ್ರಸಂಗ ಬರುವದು! ನಮ್ಮ ಈ ಮಾತು, ನಮ್ಮ ಕಾಶಿಮಖಾನರ ಜ್ಞಾತಿಗಳಾದ ಮುಸಲ್ಮಾನರ ನಾಶಕಾರಕ ಉತ್ಕರ್ಷಕ್ಕೆ ಪ್ರತಿಕೂಲವಾಗಿದ್ದರೂ, ಮುಸಲ್ಮಾನರ ಆ ಉತ್ಕರ್ಷವು ಅಧಾರ್ಮಿಕವಾಗಿರುವದರಿಂದಲೂ, ಧರ್ಮತಃ ನಮ್ಮ ಅಧಃಪತನ ಮಾಡಿಕೊಳ್ಳುವದು ಕನ್ನಡಿಗರಾದ ನಮ್ಮ ಮನುಷ್ಯತ್ವದ ಲಕ್ಷಣವಿಲ್ಲದ್ದರಿಂದಲೂ ನಮ್ಮ ಸ್ವಾತಂತ್ರ್ಯಹರಣಕ್ಕಾಗಿ ನಾವು ಯತ್ನಿಸಲೇಬೇಕಾಗುವದು. ದುರಗಪ್ಪಾ, ಸ್ವಾತಂತ್ರ್ಯವೆಂದರೆ, ಸ್ವಚ್ಛಂದಾಚರಣೆಗೆ ಆಸ್ಪದವಲ್ಲ; ಅವರವರ ಧರ್ಮಾಚರಣೆಗೆ ಆಸ್ಪದವೆಂಬುದನ್ನು ಮಾತ್ರ ಚೆನ್ನಾಗಿ ನೆನಪಿನಲ್ಲಿಡು''

ಈ ಮೇರೆಗೆ ನುಡಿದು ಮಾಧವಾಚಾರ್ಯರು ಕಾಶಿಮಖಾನನ ಕಡೆಗೆ ನೋಡಲು ಕಾಶಿಮಖಾನನು ಎದ್ದು ನಿಂತು ಭಕ್ತಿಯುಕ್ತ ವಿನಯದಿಂದ–''ಆಚಾರ್ಯವರ, ಅಷ್ಟಮದಗಳಿಂದ ಮೈಮರೆತವರ ಹಾಗೆ ಪರದೇಶಗಳನ್ನು ಗೆಲ್ಲುತ್ತ ನಡೆದಿದ್ದವರಿಗೆ ಈ ವಿವೇಕದ ವಿಚಾರವೆಲ್ಲಿಂದ ಬರಬೇಕು? ಈ ಹುಂಬತನದ ಔದ್ಧತ್ಯವು ಮಿತಿಮೀರಿ, ಅದು ಜಗತ್ತನ್ನೆಲ್ಲ ವ್ಯಾಪಿಸಿದರೆ, ಕಡೆಗೆ ಅದು ನಮ್ಮ ನಾಶಕ್ಕಷ್ಟೇ ಅಲ್ಲ, ಜಗತ್ತಿನ ನಾಶಕ್ಕೂ ಕಾರಣವಾಗುವದೆಂಬದರ ಅರಿವು ನಮಗಿರುವದಿಲ್ಲ! ಸುಖಲೋಲುಪರಾದ ನಾವು ಮಂದಿಯನ್ನು ಸುಲಿದು ನಮ್ಮ ಸುಖವನ್ನಷ್ಟು ಹೆಚ್ಚಿಸಿಕೊಳ್ಳ ಬೇಕೆಂದು ನೋಡುತ್ತೇವಲ್ಲದೆ, ನಮ್ಮನ್ನು ಒಳಕೊಂಡಿರುವ ಜಗತ್ತಿನ ಕ್ಷೇಮವನ್ನು ನೋಡುವದಿಲ್ಲ! ಅಂತ್ಯಜನಾದ ಈ ಮಾದರ ದುರಗುಪ್ಪನಿಗಿರುವಷ್ಟು ಬುದ್ಧಿಯೂ ನಮಗಿರುವದಿಲ್ಲ, ಈತನ ತಾತ್ವಿಕ ನಿರ್ದಿಷ್ಟ ವಿಚಾರಗಳು ನನ್ನನ್ನು ಬೆರಗು ಮಾಡಿಬಿಟ್ಟಿವೆ ! ದೇಶ–ಕಾಲ–ಪರಿಸ್ಥಿತಿಗನುಸರಿಸಿ ಆಗಿರುವ ಹಿಂದೂ ಸಮಾಜದ ಗೌರವದ ಘಟನೆಯನ್ನರಿಯದ ನಾವು ಅಂತ್ಯಜರ ವಿಷಯವಾಗಿ ಏನೇನೋ ತಿಳಕೊಂಡದ್ದಕ್ಕಾಗಿ ನನಗೆ ಬಹಳ ಪಶ್ಚಾತ್ತಾಪವಾಗಿದೆ. ಶ್ರೇಷ್ಠ ತತ್ವಜ್ಞಾನಿಯಂತೆ ಇರುವ ಈ ಪವಿತ್ರ ಹೃದಯದ ದುರಗಪ್ಪನ ಮಲಿನ ವಸ್ತ್ರಾ ಪ್ರಾವರಣಗಳ ಮುಂದೆ, ಮಂದಿಯನ್ನು ಬರಿಯ ಬತ್ತಲೆ ಮಾಡಿ ಹಾಕಿಕೊಂಡಂತೆ ಇರುವ ಮಲಿನ ಹೃದಯದ ನಮ್ಮ ಈ ಬೆಲೆಯುಳ್ಳ ಸ್ವಚ್ಛ ವಸ್ತ್ರಪ್ರಾವರಣಗಳು ಅತಿ ತುಚ್ಛವಾಗಿ ತೋರಹತ್ತಿ ಅದನ್ನು ಧರಸಿದ್ದಕ್ಕಾಗಿ ನನಗೆ ಈಗ ನಾಚಿಕೆ ಬರತೊಡಗಿದೆ; ಅದರಂತೆ ಮಂದಿಯ ರಕ್ತ ಅಟ್ಟಿಸಿ ಮಾಡಿದಂತೆ ಇದ್ದ ನಮ್ಮ ಬಗೆಬಗೆಯ ಮಿಷ್ಟವಾದ ಆಹಾರಗಳು. ನಮ್ಮ ಈ ಸಾತ್ವಿಕ ವೃತ್ತಿಯ ದುರಗಪ್ಪನ ಆಧಾರ್ಮಿಕ ಹಿಂಸಾಶೂನ್ಯವಾದ ಪವಿತ್ರ ಹಿಂಡಿ ರೊಟ್ಟಿಯ ಮುಂದೆ ತುಚ್ಛವಾಗಿ ತೋರಹತ್ತಿ ನಾವು ಮಿಷ್ಟಾನ್ನಗಳನ್ನು ತಿನ್ನುವ ತಪ್ಪಿಗಾಗಿ ದೇವರ ಮುಂದೆ ಏನು ಜವಾಬು ಕೊಡಬೇಕಾದೀತೆಂಬುದನ್ನು ನೆನಿಸಿ ನನ್ನ ಹೃದಯವು ಕಂಪಿಸಹತ್ತಿದೆ; ಹಾಗೆಯೇ ಮಂದಿಯನ್ನು ಮೋಸಗೊಳಿಸುವದಕ್ಕಾಗಿಯೇ ಸಂಪಾದಿಸಿದಂತೆ ಆಗಿದ್ದ ತಪೋಹೀನವಾಗಿದ್ದ ನಮ್ಮ ಕ್ಷತ್ರಿಮ ಜ್ಞಾನವು, ಪುಣ್ಯವಂತನಾದ ದುರಗಪ್ಪನ ದಯಾಯುಕ್ತ ಸತ್ಯಾಚರಣೆಯಿಂದುಂಟಾದ ಸ್ವಾಭಾವಿಕವೆನಿಸುವ ಅಂತಸ್ಫೂರ್ತಿಯ ನಿರ್ದಿಷ್ಟ ಜ್ಞಾನದ ಮುಂದೆ ಹುರುಳಿಲ್ಲದ್ದಾಗಿ ತೋರಿ, ನಮ್ಮ ಆ ಘಾತಕ ಜ್ಞಾನವು, ನಮ್ಮನ್ನು ನರಕದಲ್ಲಿ ಕೆಡವಲು ಕಾರಣವಾಗಿರುತ್ತದೆಂಬ ಅಂಜಿಕೆಯು ಈಗ್ಗ ನನಗೆ ಬರತೊಡಗಿದೆ! ಒಟ್ಟಿಗೆ ನಮ್ಮ ಈ ಸುಂದರ ವಸ್ತ್ರಪ್ರಾವರಣಗಳು ನಮ್ಮ ಆ

ಸ್ವಾದಿಷ್ಟವಾದ ಆಹಾರ, ಮಂದಿಯ ಕಣ್ಣು ಕುಕ್ಕಿ ಅವರು ಕಣ್ಣುಮುಚ್ಚಿದಾಗ ಅವರಿಗೆ ತಿಳಿಯದಂತೆ ಅವರ ರಕ್ತಶೋಷಣ ಮಾಡಲು ಉಪಯುಕ್ತವಾದ ನಮ್ಮ ಜ್ಞಾನವೆಂಬ ಈ ತಾಮಸ ಸಾಧನಗಳ ಪ್ರಾಬಲ್ಯದಿಂದಲೇ ಜಗತ್ತಿನ ಸಾತ್ವಿಕ ಭಾವವು ಊನವಾಗಿ ತೊಳಲುತ್ತಿರುವದು! ನಮ್ಮಂಥ ಮೋಸಗಾರರಾದ ಉದ್ದಾಮರಿಂದಲೇ ಜಗತ್ತು ಸುಲಿದು ಸೂರೆ ಮಾಡಲ್ಪಡುತ್ತಿರುವದು! ಇಂಥ ನಾವು ಅನ್ಯರನ್ನು ಉದ್ಧರಿಸುವೆವೆಂಬುದು ಕೇವಲ ಡಾಂಭಿಕ-ವಾಗ್ಜಾಲವಲ್ಲದೆ ಮತ್ತೇನು? ಮಹಾತ್ಮನ್, ಈ ದುರಗಪ್ಪನನ್ನು ನೋಡುವ ಕಣ್ಣುಗಳನ್ನು ನನಗೆ ಕೊಟ್ಟದ್ದಕ್ಕಾಗಿ ತಮ್ಮ ಚರಣಗಳಲ್ಲಿ ನಾನು ಅತ್ಯಂತ ಕೃತಜ್ಞನಾಗಿರುವೆನು. ಈ ದುರಗಪ್ಪನ ಸಾತ್ವಿಕ ಸ್ಥಿತಿಯು ನನಗೆ ಈ ಜನ್ಮದಲ್ಲಿ ಉಂಟಾಗುವದೇ ಅಶಕ್ಯವಾಗಿರಲು, ನಾನು ಈತನನ್ನು ಉದ್ಧರಿಸಲಿಕ್ಕೆ ಹೊರಟಿದ್ದೆನು! ಈ ಸಾತ್ವಿಕನಿಗೆ ತನ್ನ ಜಾತಿಯೇ ತನಗೆ ದೊಡ್ಡದಾಗಿ ತೋರುವ ಬಗೆಯನ್ನೂ, ಮಾನ್ಯರ ವಿಷಯದಲ್ಲಿಯ ಈತನ ಭಯಭಕ್ತಿಯನ್ನೂ, ಅನ್ಯರ ಗುಣಗಳ ವಿಷಯದ ಈತನ ನಿರ್ಮಾತ್ಸರ್ಯ-ಬುದ್ಧಿಯನ್ನೂ, ಅನ್ಯರ ದೋಷಗಳ ವಿಷಯದ ಈತನ ಅನುಕಂಪಯುಕ್ತ ತ್ವೇಷವನ್ನೂ ನೋಡುವ ನನಗೆ ಈತನ ವಿಷಯವಾಗಿ ಅತ್ಯಂತ ಆದರವು ಉತ್ಪನ್ನವಾಗಿರುವದು. ಇಂಥ ಉದಾರಮತವಾದಿಗಳು ಹೊಲೆಯರಲ್ಲಿರುವದರಿಂದ, ಅವರ ಹೊಲೆತನವನ್ನು ನಾವು ನಿರಾಕರಿಸುವದೇಕೆ? ಜಾತಿ ಭೇದ-ಉದ್ಯೋಗ ಭೇದಗಳು ಮನುಷ್ಯರ ಯೋಗ್ಯತೆ ತಿಳಿದುಕೊಳ್ಳುವ ಸಾಧನಗಳಾಗಿರದೆ, ಅವರವರ ಜಾತಿಧರ್ಮಕ್ಕನುಸರಿಸಿ, ಕೇವಲ ಧರ್ಮಕ್ಕಾಗಿಯೇ ಎಂದು ಅವರವರು ಮಾಡುವ ಆಚಾರ-ವಿಚಾರಗಳಿಂದ ಅವರವರ ಯೋಗ್ಯತೆಯು ನಿರ್ಣಯ ವಾಗುವದೆಂಬುದನ್ನು ನಾನು ಇಂದು ಮನಗಂಡೆನು! ಧರ್ಮಜ್ಞಾನಯುಕ್ತ ಹಾಗು ಧರ್ಮಕ್ಕಾಗಿಯೇ ಆಚರಿಸುವ ಉದಾತ್ತ ಆಚಾರ-ವಿಚಾರಗಳಿಲ್ಲದ ಬಿಳಿಛಾಯದ ಹುರುಳಿಲ್ಲದ ವಿದ್ಯೆಯ ಸ್ವಾರ್ಥಮಗ್ನ ಬಾಯ್ಬಡಕರು ನಾವು ''ಅಂತ್ಯಜೋದ್ಧಾರ ಮಾಡಬೇಕೆಂದು'' ವಿವೇಕವಿಲ್ಲದೆ ಹೇಳುವದರಲ್ಲಿ ಅರ್ಥವಿಲ್ಲೆಂಬುದನ್ನು ದುರಗಪ್ಪನು ಕಿವಿ ಹಿಂಡಿ ನನ್ನ ಅನುಭವಕ್ಕೆ ಚನ್ನಾಗಿ ತಂದುಕೊಟ್ಟನು! ಇರಲಿ, ಮಹಾತ್ಮನ್, ಇನ್ನು ಕೇಳಬೇಕಾಗಿರುವ ವಿಷಯಗಳನ್ನು ಕೇಳಿಕೊಳ್ಳುವೆನು. ದುಷ್ಟರು ಯಾವದೊಂದು ಪ್ರಾಂತದ ಅಥವಾ ಇಡಿಯ ರಾಷ್ಟ್ರದ ಸ್ವಾತಂತ್ರ್ಯ ಹರಣ ಮಾಡಬಂದರೆ, ಅವರೊಡನೆ ಒಕ್ಕಟ್ಟಿನಿಂದ ಅಸಹಯೋಗ ಬಳಿಸಬೇಕೆಂದು ಅಪ್ಪಣೆ ಕೊಡಿಸೋಣವಾಯಿತು; ಅದರಂತೆ ಅಸಹಯೋಗದಲ್ಲಿ ಹಿಂಸಾತ್ಮಕವೆಂತಲೂ, ಅಹಿಂಸಾತ್ಮಕವೆಂತಲೂ ಎರಡು ವಿಧವಿರುತ್ತಿದ್ದು, ಅಹಿಂಸಾತ್ಮಕ ಅಸಹಯೋಗದಲ್ಲಿ ಪ್ರತೀಕಾರ, ಪ್ರತಿಯೋಗಿ ಸಹಕಾರ ಎಂಬ ಬೇರೆ ಎರಡು ವಿಧಗಳಿರುತ್ತವೆಂತಲೂ ಈ ಮೊದಲೇ ನಿರೂಪಿಸೋಣವಾಗಿರುವುದು. ಆದರೆ ಸ್ವಾತಂತ್ರ್ಯವಿನಾಶಕ ದುಷ್ಟರೊಡನೆ ಧರ್ಮಿಷ್ಟರು ಪ್ರತೀಕಾರವನ್ನು ಯಾವಾಗ ಬಳಿಸಬೇಕು? ಪ್ರತಿಯಾಗಿ ಸಹಕಾರವನ್ನು ಯಾವಾಗ ಬಳಿಸಬೇಕು? ಅಹಿಂಸಾತ್ಮಕ ಅಸಹಕಾರವನ್ನು ಯಾವಾಗ ಬಳಿಸಬೇಕು ? ಎಂಬುದನ್ನಿಷ್ಟು ನಿರೂಪಿಸುವ ಕೃಪೆಯಾಗಬೇಕು.''

ಕಾಶಿಮುಖಾನನ ಈ ಪ್ರಶ್ನಗಳನ್ನು ಕೇಳಿ ಮಾಧವಾಚಾರ್ಯರು ಯಾವತ್ತೂ ಕನ್ನಡಿಗರನ್ನು ಕುರಿತು – 'ದೇಶಬಾಂಧವರೇ, ಕಾಶಿಮುಖಾನರ ಸಮರ್ಪಕ ಪ್ರಶ್ನೆಗಳಿಗಾಗಿ ನಾನು ಕೊಡುವ ಉತ್ತರವನ್ನು ಲಕ್ಷಪೂರ್ವಕವಾಗಿ ಕೇಳಿರಿ. ಹೇಳುವ ಕಾಲಕ್ಕೆ ಮತ್ತೆ ನಾಲ್ಕು ಮಾತು ಹೇಳಿಬಿಡುವದು ನನಗೆ ಯೋಗ್ಯವಾಗಿ ತೋರುತ್ತದೆ. ತಾತ್ವಿಕಗಳೂ, ಕಲ್ಯಾಣಕಾರಕಗಳೂ ಆಗಿರುವ ನನ್ನ ಉತ್ತರಗಳನ್ನು ದುರ್ಲಕ್ಷಿಸುವದು ಹಿತಕರವಲ್ಲ. ಜಗತ್ತಿನಲ್ಲಿ ಸ್ವಾತಂತ್ರ್ಯ ವಿಘಾತಕರಾದ ದುಷ್ಟರು ಸಂಪೂರ್ಣವಾಗಿ ಇಲ್ಲದಂತೆ ಆಗುವದು ಅಸಂಭವವೇ ಇರುವದು. ಯಾಕಂದರೆ, ಈಶ್ವರನು ತನ್ನ ಕ್ರೀಡೆಗಾಗಿ ರಚಿಸಿರುವ ಈ ಭುವನದಲ್ಲಿ ಸುಷ್ಟ–ದುಷ್ಟ ವ್ಯವಹಾರಗಳು ಕೂಡಿಯೇ ನಡೆಯದಿದ್ದರೆ, ಆ ಪರಮಾತ್ಮನ ಕ್ರೀಡೆಗೆ ಕಳೆಯೇರದು. ಆದ್ದರಿಂದ ದುಷ್ಟರೂ, ಸುಷ್ಟರೂ ಈ ಸೃಷ್ಟಿಯ ಆದಿಯಿಂದಲೇ ಇರುತ್ತಿದ್ದು, ಮುಂದೆ ಈ ಸೃಷ್ಟಿಯ ಅಂತ್ಯದವರಗೆ ಅವರು ಈಶ್ವರಸಂಕೇತದಂತೆ ಇದ್ದೇ ಇರುವರು. ದೇಹದೊಳಗಿನ ಹೇಯಾವಯಗಳು ದೇಹವಿರುವತನಕ ಇರುವಂತೆ, ಸೃಷ್ಟಿಯ ಹೇಯಾವಯವೆನಿಸುವ ದುಷ್ಟರು ಸೃಷ್ಟಿಯು ಇರುವತನಕ ಇರತಕ್ಕವರೆ; ಆದರೆ ರಾಷ್ಟ್ರದ ವೃತ್ತಿಯು ಸ್ವಾರ್ಥಪರಾಯಣತೆಯ ಹೆಚ್ಚಳದಿಂದ ಹೀನವಾಗುತ್ತ ಹೋದಂತೆ, ಇಂಥ ದುಷ್ಟರ ವ್ಯಾಪ್ತಿಯೂ ಪ್ರಾಬಲ್ಯವೂ ಹೆಚ್ಚುತ್ತ ಹೋಗುತ್ತವೆ. ರಾಷ್ಟ್ರವು– ೧. ಬ್ರಾಹ್ಮಣವೃತ್ತಿ ೨. ಕ್ಷಾತ್ರವೃತ್ತಿ ೩. ವೈಶ್ಯವೃತ್ತಿ ೪. ಶೂದ್ರವೃತ್ತಿ ೫. ಶ್ವವೃತ್ತಿ ಎಂಬ ಐದು ವೃತ್ತಿಗಳೊಳಗೆ ಯಾವದೊಂದು ವೃತ್ತಿಯಲ್ಲಿ ಇರುವದು. ಈ ವೃತ್ತಿಗಳಲ್ಲಿ ಬ್ರಾಹ್ಮವೃತ್ತಿಯು ಶ್ರೇಷ್ಠವಾದದ್ದು; ಮುಂದಿನ ವೃತ್ತಿಗಳು ಒಂದರಿಂದೊಂದು ಹೀನವಾಗಿರುವವು. ಈ ವೃತ್ತಿಗಳು ಸೃಷ್ಟಿಯ ನಾಶವಾಗುವವರೆಗೆ ಕ್ರಮವಾಗಿ, ಮೇಲಿನ ಬ್ರಹ್ಮಾದಿ ಒಂದು ವೃತ್ತಿಯಿಂದ ಮತ್ತೊಂದು ವೃತ್ತಿಗೆ ಅಧಃಪತನ ಹೊಂದುತ್ತಲೂ, ಮತ್ತೆ ಪುನಃ ಕೆಳಗಿನ ಶ್ವವೃತ್ತಿ ಮೊದಲಾದ ಒಂದು ವೃತ್ತಿಯಿಂದ ಮತ್ತೊಂದು ವೃತ್ತಿಗೆ ಉತ್ಕರ್ಷ ಹೊಂದುತ್ತಲೂ ಹೋಗುವವು; ಅಂದರೆ ಒಟ್ಟಿನಲ್ಲಿ ಸೃಷ್ಟಿಯೂ, ಸೃಷ್ಟಿಯ ವೃತ್ತಿಗಳೂ ಕಾಲಮಹಿಮೆಯಿಂದ ಯಾವಾಗಲೂ ರೂಪಾಂತರ ಹೊಂದುತ್ತಿರುವವು ! ದೇಶಬಾಂಧವರೇ, ಈ ಐದೂ ವೃತ್ತಿಗಳ ಲಕ್ಷಣಗಳನ್ನೂ,ಅವು ರೂಪಾಂತರ ಹೊಂದುವ ಬಗೆಯನ್ನೂ,ಯಾವ ಯಾವ ವೃತ್ತಿಯಲ್ಲಿ ರಾಷ್ಟ್ರವು ದುಷ್ಟರೊಡನೆ ಯಾವ ಯಾವ ಬಗೆಯ ಅಸಹಯೋಗವನ್ನು ಆಚರಿಸಬೇಕೆಂಬುದನ್ನೂ ನಿಮಗೆ ಹೇಳವೆನು ಕೇಳಿರಿ.

೧. ರಾಷ್ಟ್ರದ ಬ್ರಾಹ್ಮವೃತ್ತಿಯು – ಬ್ರಾಹ್ಮವೃತ್ತಿಯ ರಾಷ್ಟ್ರದಲ್ಲಿ ನಿಃಸ್ವಾರ್ಥ ಬುದ್ಧಿಯ ದಿವ್ಯ ತಪಃಸಂಪಾದಿತವಾದ ಆತ್ಮಬಲವು ಪ್ರಕಾಶಿಸುತ್ತಿರುವದು. ಶಮಪ್ರಧಾನತೆಯೇ ಈ ವೃತ್ತಿಯ ಧರ್ಮವಾಗಿರುವದು. ಆಧ್ಯಾತ್ಮಪ್ರಗತಿಯೇ ಈ ವೃತ್ತಿಯ ಧ್ಯೇಯವಾಗಿರುವದು. ಹೀಗೆ ರಾಷ್ಟ್ರವು ತಪಸ್ವಿಯಾಗಿ ಆತ್ಮಬಲಸಂಪನ್ನವಾಗಿರುವ ಕಾಲಕ್ಕೆ ಕೃತಯುಗವೆಂತಲೂ, ಸತ್ಯಯುಗವೆಂತಲೂ ಅನ್ನುವರು. ಈ ಯುಗದ ನಿಃಸ್ವಾರ್ಥ ತಪಃಸಂಪಾದಿತ ಆತ್ಮಬಲದ ಮೂಲಕ ರಾಷ್ಟ್ರಕ್ಕೆ ಶಾಪಾನುಗ್ರಹ ಶಕ್ತಿಯುಂಟಾಗಿರುವದು.ಈ ಯುಗದಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯ ವಿಘಾತಕ ದುಷ್ಟರು, ಅಂದರೆ ಅಹಂಕಾರಿಗಳಾದ ದೈತ್ಯರು ಮಹಾ ಬಲಿಷ್ಠರಾಗಿ ಇರುತ್ತಿದ್ದರೂ ಇವರ ಕಾಟವು, ಅಂದರೆ ರಾಷ್ಟ್ರೀಯ ಸ್ವಾತಂತ್ರ್ಯಹರಣ ವ್ಯಾಪಾರವು ರಾಷ್ಟ್ರದ ಮೇಲೆ ಅಷ್ಟರ ಮಟ್ಟಿಗೆ

ಆಗುವದಿಲ್ಲ; ಯಾಕಂದರೆ ಆ ಯುಗದಲ್ಲಿ ರಾಷ್ಟ್ರವು ಕೇವಲ ಆತ್ಮನಿಷ್ಠವಾಗಿರುವದರಿಂದ, ಈ ದೇಹಾತ್ಮವಾದಿ ದುಷ್ಟರ ಕಾಟವನ್ನು ಅದು ಉದಾಶೀನ ಮಾಡುವದು; ಇದರ ಮೇಲೆಯೂ ದುಷ್ಟರಕಾಟವು ಹೆಚ್ಚಿದರೆ ರಾಷ್ಟ್ರವು ತನ್ನ ದಿವ್ಯ ತಪಃಪ್ರಭಾವದಿಂದ ಆತ್ಮಬಲದಿಂದ ದುಷ್ಟ ಸಂಹಾರಕ ದೈವೀ ಶಕ್ತಿಯನ್ನು ಉಂಟುಮಾಡಿಯಾಗಲಿ, ಸ್ವಂತದ ಶಾಪಾನುಗ್ರಹ ಶಕ್ತಿಯಿಂದಾಗಲಿ ದುಷ್ಟರ ನಿವಾರಣ ಮಾಡುವದು. ಇವೆರಡಕ್ಕೂ ಪುರಾಣಾಂತರಗಳಲ್ಲಿ ಉದಾಹರಣಗಳಿರುವವು. ಭಗವಂತನು ಸಜ್ಜನರ ಮೊರೆ ಕೇಳಿ ವರಾಹ–ನರಸಿಂಹಾದಿ ಅವತಾರಗಳನ್ನು ತಾಳಿ ದುಷ್ಟರನ್ನು ಸಂಹರಿಸಿದ್ದು ಮೊದಲನೆಯ ಪ್ರಸಂಗದ ಉದಾಹರಣವು; ತಪೋಧನರಾದ ಬ್ರಾಹ್ಮಣರು ತಮ್ಮ ಆತ್ಮಬಲದಿಂದ ಸ್ವತಃ ವೇನನಂಥ ದುಷ್ಟ ರಾಜನ ಶಾಸನ ಮಾಡಿ,ಪೃಥುರಾಜನಂಥ ಧರ್ಮಿಷ್ಠ ರಾಜನನ್ನು ಹುಟ್ಟಿಸಿದ್ದು ಎರಡನೆಯ ಪ್ರಸಂಗದ ಉದಾಹರಣವು. ಒಟ್ಟಿಗೆ, ರಾಷ್ಟ್ರವು ಬ್ರಾಹ್ಮವೃತ್ತಿಯಲ್ಲಿರುವಾಗ ದುಷ್ಟರ ನಾಶವನ್ನು ಭಗವದವತಾರದ ಮುಖಾಂತರವಾಗಿಯಾಗಲಿ, ಪ್ರತ್ಯಕ್ಷ ಶಾಪ ಕೊಡವದರಿಂದಾಗಲಿ ಆತ್ಮಬಲದ ಹಿಂಸಾತ್ಮಕ ಅಸಹಕಾರವನ್ನು,ಅಂದರೆ ಸಾತ್ವಿಕ ಪ್ರತೀಕಾರವನ್ನು ಬಳಿಸಿ, ತನ್ನ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವದು. ಒಟ್ಟಿಗೆ ಆತ್ಮಬಲದ ಈ ಯುಗದಲ್ಲಿ ಆತ್ಮಬಲದ ಹಿಂಸೆಯ ಪ್ರತೀಕಾರವೇ ದುಷ್ಟರ ನಾಶದ ಉಪಾಯವಾಗಿರುವದು; ಯಾಕಂದರೆ ಆತ್ಮಬಲದಲ್ಲಿ ದೈವೀ ಅವತಾರವನ್ನು ಮಾಡಿಸುವ, ಅಥವಾ ಶಾಪದಿಂದ ಶಾಸನಮಾಡುವ ಸಾಮರ್ಥ್ಯವಿರುತ್ತದೆ!

**೨. ರಾಷ್ಟ್ರದ ಕ್ಷಾತ್ರ ವೃತ್ತಿಯು** — ಕನ್ನಡಿಗರೇ, ಈ ಮೊದಲೇ ಹೇಳಿದಂತೆ ಪರಮಾತ್ಮನು ತನ್ನ ಕ್ರೀಡೆಗಾಗಿ ರಚಿಸಿರುವ ಈ ಸೃಷ್ಟಿಯು, ಆತನು ಅದನ್ನು ನಾಶಮಾಡುವವರೆಗೆ, ಆತನ ಕ್ರೀಡಿಸುವ ಇಚ್ಛೆಯಂತೆ ವಿಹಾರಹೊಂದುವದಾದ್ದರಿಂದ, ನೆಟ್ಟಗಿದ್ದದ್ದು ಕೆಡುವದೂ,ಕೆಟ್ಟದ್ದು ಪುನಃನೆಟ್ಟಗಾಗುವದೂ ಅದರ ಸ್ವಭಾವವಾಗಿರುವದು; ಆದ್ದರಿಂದ ಒಮ್ಮೆ ಒಂದು ರಾಷ್ಟ್ರವು ಉತ್ಕರ್ಷವನ್ನು ಹೊಂದಿದ್ದರೆ ಮತ್ತೊಮ್ಮೆ ಅದೇ ರಾಷ್ಟ್ರವು ಅಪಕರ್ಷವನ್ನು ಹೊಂದುವದು; ಆದ್ದರಿಂದ ರಾಷ್ಟ್ರದ ಈ ಬ್ರಾಹ್ಮವೃತ್ತಿಯು ಕಡೆತನಕ ಉಳಿಯುವದು ಶಕ್ಯವಿಲ್ಲದಿರಲು, ಆ ಬ್ರಾಹ್ಮವೃತ್ತಿಯ ರಾಷ್ಟ್ರವು ಮೆಲ್ಲ ಮೆಲ್ಲನೆ ಕೆಡುತ್ತ ಅಂದರೆ ಅದರಲ್ಲಿಯ ನಿಃಸ್ವಾರ್ಥ ಬುದ್ಧಿಯ ಸ್ಥಳದಲ್ಲಿ ಧಾರ್ಮಿಕ ಸ್ವಾರ್ಥಬುದ್ಧಿಯು ಉತ್ಪನ್ನವಾಗುತ್ತ ಹೋಗಿ, ಕಾಲಾಂತರದಲ್ಲಿ ಆ ಸಾತ್ವಿಕ ಬ್ರಾಹ್ಮವೃತ್ತಿಯ ರಾಷ್ಟ್ರದ ರೂಪಾಂತರವು ರಾಜಸ ಕ್ಷಾತ್ರವೃತ್ತಿಯಲ್ಲಿ ಆಗುವದು; ಅಂದರೆ ದಿವ್ಯವಾದ ನಿಃಸ್ವಾರ್ಥ ಬುದ್ಧಿಯ ತಪಃಸಂಪಾದಿತ ಆತ್ಮಬಲದಿಂದ ಒಪ್ಪುತ್ತಿದ್ದ ಬ್ರಾಹ್ಮವೃತ್ತಿಯ ರಾಷ್ಟ್ರವು, ಧಾರ್ಮಿಕ ಸ್ವಾರ್ಥದ ಬಲೆಗೆ ಬಿದ್ದು ಕ್ಷಾತ್ರವೃತ್ತಿಯನ್ನು ತಾಳಿ ಆತ್ಮಬಲವನ್ನು ಕಳೆದುಕೊಂಡು ಶಾರೀರಬಲವನ್ನು ತಾಳುವದು. ಒಟ್ಟಿಗೆ ತಾಪಾನುಗ್ರಹ ಸಮರ್ಥವಾದ, ಅಥವಾ ಬೇಕಾದಾಗ ದೇವರನ್ನು ಅವತಾರ ತಾಳಲು ಹಚ್ಚುವ ಸಾಮರ್ಥ್ಯವುಳ್ಳ ರಾಷ್ಟ್ರದ ಆತ್ಮಬಲದ ಬ್ರಾಹ್ಮವೃತ್ತಿಯು ಹೋಗಿ, ಶಾರೀರ ಬಲದ ಕ್ಷಾತ್ರವೃತ್ತಿಯು ರಾಷ್ಟ್ರಕ್ಕೆ ಉಂಟಾಗುವದು. ಇದು ರಾಷ್ಟ್ರದ ಒಂದನೆಯ ಅಧಃಪತನವೆಂದು ತಿಳಿಯಬೇಕು. ಹೀಗೆ ರಾಷ್ಟ್ರವು ಕ್ಷಾತ್ರವೃತ್ತಿಯದಾಗಿ, ರಾಜಸಗುಣದಿಂದ ಧಾರ್ಮಿಕ ಸ್ವಾರ್ಥಕ್ಕೋಸ್ಕರ ಹೆಣಗತೊಡಗಲು, ಅದಕ್ಕೆ

ಪ್ರತಿಯಾಗಿ ಈಶ್ವರೀ ಸಂಕೇತದಂತೆ ಅಧಾರ್ಮಿಕ ಸ್ವಾರ್ಥವೂ ರಾಷ್ಟ್ರದಲ್ಲಿ ಹೆಚ್ಚುತ್ತ ಹೋಗುವದು. ಅಂದ ಬಳಿಕ ರಾಷ್ಟ್ರದ ಸುಸ್ಥಿತಿಯನ್ನು ಕಾಯ್ದುಕೊಳ್ಳುವದಕ್ಕಾಗಿ ''ದುಷ್ಟಶಾಸನ ಶಿಷ್ಟಪರಿಪಾಲನ'' ಎಂಬ ಕ್ಷಾತ್ರಧರ್ಮದ ಬಳಿಕೆಯು ಮೇಲೆ ಮೇಲೆ ಆಗಹತ್ತಿ, ಧರ್ಮಿಷ್ಟರಾದ ಕ್ಷತ್ರಿಯರು ದುಷ್ಟರೊಡನೆ ಶರೀರಬಲದ ಹಿಂಸಾತ್ಮಕ ಅಸಹಕಾರವನ್ನು, ಅಂದರೆ ಶಾರೀರ ಬಲದ ಪ್ರತೀಕಾರವನ್ನು ಬಳಸಿ, ಬಾಹುಬಲದಿಂದ ಅವರನ್ನು ನಿಗ್ರಹಿಸಿ ಶಿಷ್ಟರನ್ನು ಪರಿಪಾಲಿಸ ತೊಡಗುವರು. ದೇಶಬಾಂಧವರೆ, ಹೀಗೆ ರಾಷ್ಟ್ರವು ಕ್ಷಾತ್ರವೃತ್ತಿಯಲ್ಲಿರುವಾಗ, ಬ್ರಾಹ್ಮವೃತ್ತಿಯ ಆಧಿಪತ್ಯವು ಹೋಗಿ, ಕ್ಷತ್ರಿಯರು ರಾಷ್ಟ್ರದ ಮುಖಂಡರಾಗುವರು. ಮೇಲೆ ಹೇಳಿದಂತೆ ಆ ಕ್ಷತ್ರಿಯರು ದುಷ್ಟಶಾಸನ–ಶಿಷ್ಟ ಪರಿಪಾಲನ ಮಾಡುತ್ತ ಧರ್ಮದಿಂದ ರಾಜೈಶ್ವರ್ಯವನ್ನು ಭೋಗಿಸುವಾಗ, ನಿಸ್ಪೃಹ ಬ್ರಾಹ್ಮವೃತ್ತಿಯು, ಕ್ಷಾತ್ರವೃತ್ತಿಗೆ ಮಂತ್ರಾಲೋಚಕವಾಗುವದು; 'ಯಾಕೆಂದರೆ ಶಾರೀರ ಬಲದ ಕ್ಷಾತ್ರವೃತ್ತಿಗೆ ಅದು ಧಾರ್ಮಿಕವಾಗಬೇಕಾದರೆ ಆತ್ಮಬಲದ ಬ್ರಾಹ್ಮವೃತ್ತಿಯ ಸಹಾಯವು ಅದಕ್ಕೆ ಅವಶ್ಯವಾಗಿ ಬೇಕೇಬೇಕಾಗುವದು. ಈ ಶಾರೀರಬಲ– ಆತ್ಮಬಲಗಳ ತಳಕಿಲ್ಲದೆ ಯಾವ ಕಾರ್ಯವು ಸರಿಯಾಗಿ ಸಾಗದು. ಹೀಗೆ ಸಾತ್ವಿಕವಾದ ಬ್ರಾಹ್ಮತೇಜಸ್ಸಿನ ಆಲೋಚನೆಯಿಂದ ರಾಜಸವಾದ ಕ್ಷಾತ್ರವೃತ್ತಿಯ ತೀವ್ರತೆಯು ಕಡಿಮೆಯಾಗಿ ಅದು ರಾಷ್ಟ್ರದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಲು ಸಮರ್ಥವಾಗುವದು. ಹೀಗೆ ರಾಷ್ಟ್ರವು ಕ್ಷಾತ್ರವೃತ್ತಿಯಲ್ಲಿರುವಾಗ ಜನರು ಧನಕ್ಕಿಂತ ಕೀರ್ತಿಗೆ, ಧನಸಂಚಯಕ್ಕಿಂತ ಸುಖವರ್ಧಕ ಹಾಗು ಕೀರ್ತಿಕಾರಕವಾದ ತ್ಯಾಗಕ್ಕೆ, ಪರಪೀಡೆಗಿಂತ ಪರೋಪಕಾರಕ್ಕೆ, ದುಷ್ಕೃತ್ಯಕ್ಕಿಂತ ಸತ್ಕೃತ್ಯಕ್ಕೆ ಮಹತ್ವ ಕೊಡುವರು. ಆದ್ದರಿಂದ ಬ್ರಾಹ್ಮವೃತ್ತಿಯ ರಾಷ್ಟ್ರದಲ್ಲಿ ಆಧ್ಯಾತ್ಮಿಕದ ಉದಾತ್ತತೆಯು ಕಂಡು ಬರುವಂತೆ ಈ ಕ್ಷಾತ್ರವೃತ್ತಿಯ ರಾಷ್ಟ್ರದಲ್ಲಿ ಲೌಕಿಕದ ಉದಾತತ್ತೆಯು ಕಂಡುಬರುವದು. ವಿವೇಕಿಗಳಾದ ಕನ್ನಡಿಗರೇ, ರಾಷ್ಟ್ರವು ಬ್ರಾಹ್ಮವೃತ್ತಿಯಲ್ಲಿರುವ ಕಾಲಕ್ಕೆ ಕೃತಯುಗವೆಂತಲೂ, ಸತ್ಯಯುಗವೆಂತಲೂ ಅನ್ನುವರೆಂದು ಈ ಮೊದಲೆ ಹೇಳಿದ್ದು ನಿಮ್ಮ ಸ್ಮರಣೆಯಲ್ಲಿರುವದಷ್ಟೆ? ಅದರಂತೆ ರಾಷ್ಟ್ರದ ಕ್ಷಾತ್ರವೃತ್ತಿಯ ಕಾಲಕ್ಕೆ ತ್ರೇತಾಯುಗವೆನ್ನುವರು. ಈ ಯುಗದಲ್ಲಿ ಅತ್ಯಂತ ಪ್ರಬಲರಾಗಿದ್ದ ಕ್ಷತ್ರಿಯರು ಐಶ್ವರ್ಯಮದಾಂಧರಾಗಿ ಬ್ರಾಹ್ಮವೃತ್ತಿಗೆ ಕೇಡುಬಗೆಯ ಹೋಗಿ ಪೆಟ್ಟು ತಿನ್ನುವ ಪ್ರಸಂಗವೂ ಬರುವದು; ಯಾಕಂದರೆ, ಈ ತ್ರೇತಾಯುಗದಲ್ಲಿ ಬ್ರಾಹ್ಮವೃತ್ತಿಯ ಆಧಿಪತ್ಯವಿಲ್ಲದಿದ್ದರೂ, ಅದರ ತೇಜಸ್ಸು ಜಾಗೃತವಾಗಿರುವದು. ಕಾರ್ತವೀರ್ಯಾರ್ಜುನನೂ, ಅವನ ಮಕ್ಕಳೂ ಕಾಮಧೇನುವಿಗಾಗಿ ಜಮದಗ್ನಿಯೊಡನೆ ಉದ್ಧಾಮತನದಿಂದ ನಡೆದದ್ದಕ್ಕಾಗಿ, ಜಮದಗ್ನಿಯ ಮಗ ಪರಶುರಾಮನು 21 ಸಾರೆ ನಿಃಕ್ಷತ್ರಿಯಾ–ಪೃಥ್ವಿಯನ್ನು ಮಾಡಿದ್ದು ಪುರಾಣಪ್ರಸಿದ್ಧವಾಗಿರುವದು; ಆದರೂ ಪ್ರಸಂಗವಶಾತ್ ಈ ತ್ರೇತಾಯುಗದಲ್ಲಿ ಬ್ರಾಹ್ಮ–ಕ್ಷಾತ್ರ ವೃತ್ತಿಯವರಲ್ಲಿ ಕಲಹವಾಗದೆ ಇರುವದಿಲ್ಲ; ಯಾಕಂದರೆ ರಾಜೈಶ್ವರ್ಯೋಪಭೋಗದಿಂದ ನಿರ್ಮಲ ಕ್ಷತ್ರಿಯವೃತ್ತಿಯೂ, ಅಂಥ ಐಶ್ವರ್ಯ ಭೋಗಾಸಕ್ತ ಮಲೀನ ಕ್ಷಾತ್ರವೃತ್ತಿಯ ನಿಕಟ ಸಹವಾಸದಿಂದ ನಿರ್ಮಲ ಬ್ರಾಹ್ಮವೃತ್ತಿಯೂ ಅಭಿಮಾನಪೀಡಿತವಾಗತೊಡಗುವವು. ಹೀಗೆ ಪರಸ್ಪರರ ಅಧಾರ್ಮಿಕ ವೃತ್ತಿಯ ನಿವಾರಣದ ನೆವದಿಂದ ಬ್ರಾಹ್ಮಣ–ಕ್ಷತ್ರಿಯರಲ್ಲಿ ವಿಶೇಷವಾಗಿ

ಕ್ಷತ್ರಿಯ–ಕ್ಷತ್ರಿಯರಲ್ಲಿ ಕಲಹಗಳುಂಟಾಗಿ ಶರೀರಬಲದ ಹಿಂಸಾತ್ಮಕ ಅಸಹಕಾರವು, ಅಂದರೆ ಶರೀರಬಲದ ಪ್ರತೀಕಾರವು ಕಲಹದ ನಿರ್ಣಯದ ಸಾಧನವಾಗುವದು. ಒಟ್ಟಿಗೆ ರಾಷ್ಟ್ರವು ಕ್ಷಾತ್ರವೃತ್ತಿಯಲ್ಲಿರುವಾಗ ಶಾರೀರಬಲದ ಪ್ರತೀಕಾರವೇ ದುಷ್ಟ ಶಾಸನದ, ಹಾಗು ಇಷ್ಟಾರ್ಥಪೂರ್ತಿಯ ಸಾಧನವಾಗಿರುವದೆಂದು ತಿಳಿಯಬೇಕು.

**೩. ರಾಷ್ಟ್ರದ ವೈಶ್ಯವೃತ್ತಿಯು**— ಪುಣ್ಯವಂತರಾದ ಕನ್ನಡಿಗರೇ, ಸೃಷ್ಟಿಯ ನಿಯಮವನ್ನು, ಅಂದರೆ ಈಶ್ವರೀ ಸಂಕೇತವನ್ನು ಅನುಸರಿಸಿ ರಾಷ್ಟ್ರದ ಈ ಕ್ಷಾತವೃತ್ತಿಯೂ ಸ್ಥಿರವಾಗಿ ಉಳಿಯುವದಿಲ್ಲ. ಕ್ಷತ್ರಿಯ ವೃತ್ತಿಯ ರಾಷ್ಟ್ರವು ಐಶ್ವರ್ಯ ಭೋಗದ ಸವಿಗಂಡು ಐಶ್ವರ್ಯವೇ ಸುಖದ ಸ್ಥಾನವೆಂದು ತಿಳಿಯಹತ್ತಿ ಅದು ಕೇವಲ ಐಶ್ವರ್ಯವೃದ್ಧಿಯಲ್ಲಿ ತೊಡಗುತ್ತ ತನ್ನ ಶುದ್ಧ ಕ್ಷಾತ್ರವೃತ್ತಿಯನ್ನು ಕಳಕೊಂಡು ವೈಶ್ಯವೃತ್ತಿ–ಮಿಶ್ರಿತ ಕ್ಷಾತ್ರ ವೃತ್ತಿಯನ್ನು ತಾಳುವದು; ಆದ್ದರಿಂದಲೇ ಪರಶುರಾಮನು ನಿಃಕ್ಷತ್ರಿಯಾಪೃಥ್ವಿಯನ್ನು ಮಾಡಿದ ಬಳಿಕ ಉತ್ಪನ್ನರಾದ ಕ್ಷತ್ರಿಯರು ಮಿಶ್ರಕ್ಷತ್ರಿಯರೆಂದು ಪುರಾಣಗಳಲ್ಲಿ ವರ್ಣನವಿರಲಿಕ್ಕೆ, ಕ್ಷತ್ರಿಯರಲ್ಲಿ ವೈಶ್ಯ–ವೃತ್ತಿಯ ಧರ್ಮವಾದ ಐಶ್ವರ್ಯಲಾಲಸವು ಉಂಟಾದದ್ದೊಂದು ಕಾರಣವಾಗಿರುವದೆಂದು ಹೇಳಬೇಕಾಗುವದು. ಹೀಗೆ ರಾಷ್ಟ್ರವು ತನ್ನ ಶುದ್ಧ ಕ್ಷಾತ್ರವೃತ್ತಿಯನ್ನು ಕಳಕೊಂಡು ಮಲಿನ ಕ್ಷಾತ್ರವೃತ್ತಿಯನ್ನು, ಅಥವಾ ಒಂದು ಬಗೆಯ ವೈಶ್ಯವೃತ್ತಿಯನ್ನು ತಾಳಿದ್ದು ರಾಷ್ಟ್ರದ ಎರಡನೆಯ ಅಧಃಪತನವಾಗಿರುವದು. ಈ ಮೊದಲು ರಾಷ್ಟ್ರವು ಬ್ರಾಹ್ಮವೃತ್ತಿಯಿಂದ ಕ್ಷಾತ್ರವೃತ್ತಿಗೆ ಬಂದದ್ದು ಅದರ ಒಂದನೆಯ ಅಧಃಪತನವೆಂದು ಹೇಳಿದ್ದು ಸ್ಮರಣದಲ್ಲಿರಬಹುದು. ಹೀಗೆ ಕ್ಷತ್ರಿಯರೂ ಒಂದು ಬಗೆಯ ವೈಶ್ಯವೃತ್ತಿಯವರಾಗಲು, ಅವರ ಮಂತ್ರಾಲೋಚಕರಾದ ಬ್ರಾಹ್ಮಣರ ಬ್ರಾಹ್ಮವೃತ್ತಿಯೂ ಒಂದು ಬಗೆಯ ವೈಶ್ಯವೃತ್ತಿಯನ್ನು ಹೊಂದಿ, ಅರಸರು ತಮ್ಮ ಶರೀರ ಬಲವನ್ನೂ, ಮಂತ್ರಾಲೋಚಕರು ತಮ್ಮ ಬುದ್ಧಿಬಲವನ್ನೂ ಐಶ್ವರ್ಯಕ್ಕೆ ಮಾರಿಕೊಳ್ಳ ತೊಡಗಲು, ಇಡಿಯ ರಾಷ್ಟ್ರವೇ ವೈಶ್ಯವೃತ್ತಿಯದಾಗಿ, ಅದು ದ್ರವ್ಯಬಲವುಳ್ಳದ್ದಾಗುವದು. ಈ ಸ್ಥಿತಿಯಲ್ಲಿ ರಾಷ್ಟ್ರದ ಮಹಾಕಾರ್ಯಗಳು ದ್ರವ್ಯಬಲದಿಂದಲೇ ಆಗತೊಡಗುವವು. ಪ್ರಿಯ ಕನ್ನಡಿಗರೇ, ಬ್ರಾಹ್ಮವೃತ್ತಿಯ ರಾಷ್ಟ್ರದ ಆತ್ಮಬಲಕ್ಕಿಂತ ಕ್ಷಾತ್ರವೃತ್ತಿಯ ರಾಷ್ಟ್ರದ ಶಾರೀರ ಬಲವು ಜಡವೂ, ಹೀನವೂ ಆಗಿರುವದು; ಅದರಂತೆ ಕ್ಷಾತ್ರವೃತ್ತಿಯ ರಾಷ್ಟ್ರದ ಶಾರೀರಬಲಕ್ಕಿಂತ ವೈಶ್ಯವೃತ್ತಿಯ ರಾಷ್ಟ್ರದ ದ್ರವ್ಯಬಲವು ಜಡವೂ, ಹೀನವೂ ಆಗಿರುವದು; ಈ ವೈಶ್ಯವೃತ್ತಿಯ ರಾಷ್ಟ್ರಕ್ಕೆ ದ್ವಾಪರಯುಗವೆಂದು ಕರೆಯಬಹುದು. ಕುಟಿಲತನವು ಸಂಪತ್ತಿನ ಲಕ್ಷಣ ವಾಗಿರುವದರಿಂದ, ದ್ವಾಪರಯುಗದಲ್ಲಿ ಕೌಟಿಲ್ಯಕ್ಕೆ ಕಳೆ ಏರುವದು. ಈ ಯುಗದ ಜನರು ಐಶ್ವರ್ಯಕ್ಕಾಗಿ ಎಂಥ ಕುಟಿಲತನ ಮಾಡಲಿಕ್ಕೂ ಹಿಂದೆ–ಮುಂದೆ ನೋಡುವದಿಲ್ಲವೆಂಬುದಕ್ಕೆ ದುರ್ಯೋಧನಾದಿಕರ ಆಚರಣೆಯೇ ಸಾಕ್ಷಿಯಾಗಿರುವದು. ಈ ಯುಗದಲ್ಲಿ ದ್ರವ್ಯವೇ ರಾಷ್ಟ್ರದ ಇಷ್ಟಾರ್ಥ ಪೂರ್ತಿಯ ಮುಖ್ಯ ಸಾಧನವಾಗಿರುವದು. ಆಗ ರಾಷ್ಟ್ರವು ದುಷ್ಟ ಶಾಸನಕ್ಕಾಗಿ, ಅಥವಾ ಇಷ್ಟಾರ್ಥಪೂರ್ತಿಗಾಗಿ ದ್ರವ್ಯಬಲದಿಂದ ಪ್ರಾಪ್ತವಾಗುವ ದೊಡ್ಡ ದೊಡ್ಡ ಸೈನ್ಯಗಳನ್ನೂ,

ವಿವಿಧ ಘಾತಕ ಯುದ್ಧೋಪಕರಣಗಳನ್ನೂ ಉಪಯೋಗಿಸುತ್ತ, ನಾಚಿಕೆಯಿಂದಲೇ ಆಗಲೊಲ್ಲದೇಕೆ, ಧರ್ಮಹೀನವಾದ ಮಾಯಾವೀ ಯುದ್ಧಕ್ರಮವನ್ನು ಕೈಕೊಂಡು ಶಾರೀರ ಬಲವನ್ನು ಕಳಕೊಳ್ಳುವದು. ಧರ್ಮದಲ್ಲಿಯಲ್ಲ, ಕೇವಲ ಲಾಭದಲ್ಲಿ ದೃಷ್ಟಿಯನ್ನಿಟ್ಟು ಮುಯ್ಯಕ್ಕೆ ಮುಯ್ಯವೆಂದು ತಿಳಿದು ಅನ್ಯರು ತನ್ನನ್ನು ಸಹಕರಿಸಿದಾಗ ತಾನು ಅವರೊಡನೆ ಸಹಕರಿಸುತ್ತಲೂ, ಅನ್ಯರು ತನ್ನನ್ನು ಅಸಹಕರಿಸಿದಾಗ ತಾನೂ ಅವರೊಡನೆ ಅಸಹಕರಿಸುತ್ತಲೂ ಅಂದರೆ ಪ್ರಯೋಗಿ ಸಹಕಾರವನ್ನು ಬಳಿಸುತ್ತ ರಾಷ್ಟ್ರವು ತನ್ನ ಇಷ್ಟಾರ್ಥವನ್ನು ಪೂರಯಿಸಿಕೊಳ್ಳುವದು. ಒಟ್ಟಿಗೆ ಈ ವೈಶ್ಯವೃತ್ತಿಯ ರಾಷ್ಟ್ರದಲ್ಲಿ ಧರ್ಮಕ್ಕಿಂತ ಲಾಭಕ್ಕೆ ಹೆಚ್ಚು ಮಹತ್ವವಿರುವದರಿಂದ, ಧರ್ಮ ಸಾಧನಕ್ಕಾಗಿಯಲ್ಲ, ಅರ್ಥಸಾಧನಕ್ಕಾಗಿ ಪ್ರಯೋಗಿ ಸಹಕಾರವನ್ನು ರಾಷ್ಟ್ರವು ಬಳಿಸುವದು! ಹೀಗೆ ವೈಶ್ಯವೃತ್ತಿಯ ರಾಷ್ಟ್ರವು ತನ್ನ ದ್ರವ್ಯಬಲದಿಂದ ಉನ್ಮತ್ತವಾಗಿ ದೊಡ್ಡ ದೊಡ್ಡ ಸೈನ್ಯಗಳನ್ನೂ, ಪ್ರಾಣವಿಘಾತಕ ಯುದ್ಧೋಪಕರಣಗಳನ್ನೂ ಕೂಡಿಸಿ, ನ್ಯಾಯಾನ್ಯಾಯಗಳ ವಿಚಾರವಿಲ್ಲದೆ ಕೈಗೆ ಬಂದಂತೆ ಪರರಾಷ್ಟ್ರಗಳನ್ನು ಗೆಲ್ಲುತ್ತ, ತಾನು ಸಂಪತ್ತಿನಿಂದ ತುಂಬಿ ತುಳುಕುವದು. ಹೀಗೆ ಸಂಪತ್ತು ಬಂದಬಂದಂತೆ ಸಂಪತ್ತೇ ಸರ್ವ ಸಾಧನವೆಂದು ತಿಳಿದು ಸಂಪತ್ತಿನ ಅಮಲೇರಿ ಮತ್ತೂ ಮಾಡಬಾರದ ಯುಕ್ತಿ ಪ್ರಯುಕ್ತಿಯಿಂದ ರಾಷ್ಟ್ರವು ಸಂಪತ್ತನ್ನೇ ತುಂಬಿಕೊಳ್ಳತೊಡಗಲು, ಅದಕ್ಕೆ ಸಂಪತ್ತಿನ ಅಜೀರ್ಣವಾಗಿ ಆ ರಾಷ್ಟ್ರವು ಹೊಟ್ಟೆ ಜಾಡಿಸುವ ರೋಗವಾದಂತೆ ದುರಾಚಾರ ಪ್ರವೃತ್ತವಾಗುವದು ! ಪ್ರಿಯ ವಾಚಕರೇ, ಸಂಪತ್ತಿನ ಮಿತಿಯು ಮೀರಿದರೆ ಆಗುವ ದುಷ್ಟ ಪರಿಣಾಮವೇ ಇದು; ಆದ್ದರಿಂದಲೇ ''ಅತಿ ಸರ್ವತ್ರ ವರ್ಜಯೇತ್'' ಎಂಬ ನೀತಿಯನ್ನು ವಿವೇಕಿಗಳು ಲಕ್ಷದಲ್ಲಿಡತಕ್ಕದ್ದು. ನಮ್ಮ ಭರತಭೂಮಿಯ ಮೇಲೆ ಆಗಿರುವ ಈಗಿನ ಮುಸಲ್ಮಾನರ ದಾಳಿಗೆ ನಮ್ಮ ರಾಷ್ಟ್ರವು ವೈಶ್ಯವೃತ್ತಿಯದಾಗಿ, ಆತ್ಮಬಲ–ಶರೀರಬಲಗಳನ್ನು ಕಳಕೊಂಡು ಸಂಪತ್ತಿನಿಂದ ತುಂಬಿ ತುಳಕಿದ್ದೇ ಕಾರಣವು, ದೇಶಬಾಂಧವರೇ, ನಮ್ಮಂಥ ಮನುಷ್ಯರಂತು ಇರಲಿ, ಬಂಗಾರದ ಗಂಟೆ, ಬಂಗಾರದ ಸಮೆ, ಬಂಗಾರದ ಸರಪಳಿ, ಬಂಗಾರದ ಬಾಗಿಲು ಹೀಗೆ ಎಲ್ಲಿ ನೋಡಿದರೂ ಬಂಗಾರವೇ ಬಂಗಾರವಾಗಿ ಮುತ್ತು–ರತ್ನಗಳ ಹೊಳಪಿನಿಂದ ಝಗಝಗಿಸಿ ಗುಡಿ ತುಂಬ ಹೊನ್ನು ತುಂಬಿಕೊಂಡು ದುಷ್ಟರ ಬಾಯಲ್ಲಿ ನೀರೊಡಿಸಿದ ಸೌರಾಷ್ಟ್ರದ ಸೋಮನಾಥನು ಗಿಝನಿಯ ಮಹಮ್ಮದನಿಂದ ಲತ್ತಿಯನ್ನು ತಿನ್ನಬೇಕಾಯಿತು ! ರಾಷ್ಟ್ರದ ಸತ್ವಹಾರಕವಾದ ಕೆಟ್ಟ ಐಶ್ವರ್ಯವು ಯಾರಿಗೆ ಏನು ಮಾಡೀತು ಏನು ಮಾಡಲಿಕ್ಕಿಲ್ಲ ! ಹೀಗೆ ನಮ್ಮ ಭರತಭೂಮಿಯು ವೈಶ್ಯ ವೃತ್ತಿಯಿಂದ ಸಿರಿವಂತರಾದದ್ದೇ ಅದರ ಅಧಃಪತನಕ್ಕೆ ಹ್ಯಾಗೆ ಕಾರಣವಾಯಿತೆಂಬುದನ್ನು ಹೇಳುವೆನು, ಲಕ್ಷಕೊಟ್ಟು ಕೇಳಿರಿ; ಹೀಗೆ ರಾಷ್ಟ್ರದ ವೈಶ್ಯವೃತ್ತಿಯಲ್ಲಿರುವಾಗ ಇಷ್ಟಾರ್ಥ ಪೂರ್ತಿಗಾಗಿ ದ್ರವ್ಯಬಲದ ಪ್ರತಿಯೋಗಿ ಸಹಕಾರವನ್ನು ಇಷ್ಟಾರ್ಥಪೂರ್ತಿಗಾಗಿ ಉಪಯೋಗಿಸುವದೆಂಬುದನ್ನು ಚನ್ನಾಗಿ ನೆನಪಿನಲ್ಲಿಡಿರಿ.''

# ಅಸಹಯೋಗದ ಪ್ರಭೇದಗಳು

ಈ ಮೇರೆಗೆ ಮಾಧವಾಚಾರ್ಯರು ಸಭಿಕರಿಗೆ– ''ಆತ್ಮಬಲದ ಹಿಂಸೆಯ ಅಸಹಕಾರವನ್ನು, ಅಂದರೆ ಸಾತ್ವಿಕ ಪ್ರತೀಕಾರವನ್ನು ರಾಷ್ಟ್ರವು ಬಾಹ್ಮವೃತ್ತಿಯಲ್ಲಿರುವಾಗೂ, ಶಾರೀರ ಬಲದ ಹಿಂಸೆಯ ಅಸಹಕಾರವನ್ನು, ಅಂದರೆ ರಾಜಸ ಪ್ರತೀಕಾರವನ್ನು ರಾಷ್ಟ್ರವು ಕ್ಷಾತ್ರವೃತ್ತಿಯಲ್ಲಿರುವಾಗೂ, ತಾಮಸವಾದ ದ್ರವ್ಯಬಲಸಾಧಿತ ಪ್ರತಿಯೋಗಿ ಸಹಕಾರವನ್ನು ರಾಷ್ಟ್ರವು ವೈಶ್ಯವೃತ್ತಿಯಲ್ಲಿರುವಾಗೂ ಇಷ್ಟಾರ್ಥಪ್ರಾಪ್ತಿಗೋಸ್ಕರ ಪ್ರಾಮುಖ್ಯವಾಗಿ ಉಪಯೋಗಿಸುತ್ತಲಿರುವದೆಂ''ಬುದನ್ನು ಹೇಳಿದ ಬಳಿಕ ಮತ್ತೆ ಸಭಿಕರನ್ನು ಕುರಿತು– ''ಸಭಿಕರೇ, ಹೀಗೆ ಸಂಪತ್ತಿನಿಂದ ತುಂಬಿತುಳುಕುವ ರಾಷ್ಟ್ರದ ವೈಶ್ಯವೃತ್ತಿಯೂ ಸ್ಥಿರವಾಗಿ ಉಳಿಯುವದಿಲ್ಲ. ಅಜೀರ್ಣವಿಕಾರದಂತೆ ರಾಷ್ಟ್ರವು ವಿಲಾಸಕ್ಕೆ ಮೆಚ್ಚಿ ಬಗೆಬಗೆಯ ದುರ್ವ್ಯಸನಗಳಿಗೆ ಗುರಿಯಾಗಿ ಸಂಪತ್ತನ್ನು ಕಳೆದುಕೊಳ್ಳತೊಡಗುವದು. ಮೊದಲೇ ಆತ್ಮಬಲ–ಶಾರೀರ ಬಲಗಳನ್ನು ಕಳೆದುಕೊಂಡು ಸತ್ವಹೀನವಾಗಿದ್ದ ರಾಷ್ಟ್ರದ ದ್ರವ್ಯಬಲವೂ ಹೀಗೆ ನಷ್ಟವಾಗಲು, ಅದು ಅತ್ಯಂತ ಬಲಹೀನವಾಗಿ ಕ್ಷುದ್ರ ಅಂತಃಕಲಹಗಳು ಅದರಲ್ಲಿ ತಲೆದೋರುವವು ! ವಿಲಾಸಕ್ಕೆ ಮೆಚ್ಚಿದ ರಾಷ್ಟ್ರಕ್ಕೆ ದ್ರವ್ಯವಂತು ಬೇಕು, ಹೊಸ ದ್ರವ್ಯವನ್ನು ಉತ್ಪನ್ನಮಾಡುವ ಯಾವ ಸಾಮರ್ಥ್ಯವೂ ಅದರಲ್ಲಿಲ್ಲ. ಹೀಗಾಗಿ ತಿನಸುಬಕ್ಕ ದರಿದ್ರ ಕುಟುಂಬದಲ್ಲಿಯ ಅಂತಃಕಲಹದ ಮೂಲಕ ಕುಟುಂಬದ ವ್ಯಕ್ತಿಗಳು ಒಡೆದು ಬೇರೆ ಬೇರೆಯಾಗಿ, ಕುಟುಂಬವು ಕಸುವುಗೆಡುವಂತೆ, ವಿಲಾಸಕ್ಕೆ ಮೆಚ್ಚಿದ ರಾಷ್ಟ್ರವು, ತನ್ನಲ್ಲಿಯ ಒಬ್ಬನ ಧನವನ್ನು ಮತ್ತೊಬ್ಬನು ಆಶಿಸಹತ್ತಿ ಅಂತಃಕಲಹದಿಂದ ಬೇರೆ ಬೇರೆ ಪಂಗಡಗಳುಳ್ಳದ್ದಾಗಿ ಅತ್ಯಂತ ದುರ್ಬಲವಾಗುವದು ! ರಾಷ್ಟ್ರದ ಹೀನಸ್ಥಿತಿಯನ್ನೇ ಎದುರು ನೋಡುತ್ತಿರುವ ಬಲಿಷ್ಟ–ಪರರಾಷ್ಟ್ರಗಳು, ಆ ವೈಶ್ಯವೃತ್ತಿಯ ದುರ್ಬಲ ರಾಷ್ಟ್ರವನ್ನು ಗೆದ್ದುಕೊಳ್ಳಲಾಗಿ ಆ ವೈಶ್ಯವೃತ್ತಿಯ ರಾಷ್ಟ್ರವು ಅಧಃಪತನ ಹೊಂದಿ ಅದು ಶೂದ್ರವೃತ್ತಿಯದಾಗುವದು. ಇದು ರಾಷ್ಟ್ರದ ಮೂರನೆಯ ಅಧಃಪತನವು ! ಪ್ರಿಯ ಕನ್ನಡಿಗರೇ, ಶೂದ್ರವೃತ್ತಿಯ ಧರ್ಮವು ಸೇವೆಯಷ್ಟೇ? ಅದರಂತೆ ಆ ಗೆಲ್ಲಲ್ಪಟ್ಟ ರಾಷ್ಟ್ರವು ಗೆದ್ದ ರಾಷ್ಟ್ರದ ಸೇವೆಯನ್ನು ಮಾಡಹತ್ತಿ ಬರಬರುತ್ತ ಸೇವಾಧರ್ಮವೇ ತನ್ನ ತರಣೋಪಾಯವೆಂದು ತಿಳಿದುಕೊಳ್ಳುವದು. ಹೀಗೆ ಸೇವಾವೃತ್ತಿಯು ರಾಷ್ಟ್ರದಲ್ಲಿ ಹಬ್ಬಿದ ಕಾಲಕ್ಕೆ ಕಲಿಯುಗವೆನ್ನುವರು. ಕನ್ನಡಿಗರೇ, ಭಗವಾನ್ ವೇದವ್ಯಾಸರು ಭಾಗವತ ಪುರಾಣದ 12ನೆಯ ಸ್ಕಂಧದಲ್ಲಿ ಕಲಿಯುಗದ ಧರ್ಮವನ್ನು ಭವಿಷ್ಯ ರೂಪದಿಂದ ಯಥಾರ್ಥವಾಗಿ ವರ್ಣಿಸಿರುವರು, ಅದನ್ನು ನಿಮಗೋಸ್ಕರ ಹೇಳುವೆನು ಕೇಳಿರಿ.

ಶ್ರೀಮದ್ಭಾಗವತೋಕ್ತ ಕಲಿಯುಗದ ಧರ್ಮವು–ಕಲಿಯುಗದಲ್ಲಿ ದಿನ ದಿನಕ್ಕೆ ಧರ್ಮ, ಸತ್ಯ, ಶುದ್ಧಿ, ಕ್ಷಮಾ, ದಯಾ, ಆಯುಷ್ಯ, ಬಲ, ವಿವೇಕ ಇವೆಲ್ಲ ನಷ್ಟವಾಗುತ್ತ ಹೋಗುವವು. ದುಡ್ಡಿದ್ದವನೇ ಕುಲೀನನೂ, ಸಜ್ಜನನೂ, ಗುಣವಂತನೂ ಎನಿಸುವನು, ಧರ್ಮ–ನ್ಯಾಯಗಳು ಶಕ್ತಿಯ ಪ್ರಾಬಲ್ಯವನ್ನನುಸರಿಸುವವಲ್ಲದೆ, ಅವುಗಳಲ್ಲಿ ಸತ್ಯಾಸತ್ಯದ ವಿಚಾರವು ತಲೆದೋರದು. ವಧೂ–ವರರ ಕುಲಗೋತ್ರಗಳ ವಿಚಾರ ಮಾಡುತ್ತ ಕುಳಿತುಕೊಳ್ಳದೆ, ಪರಸ್ಪರರ ಮನಸ್ಸು

ಕೊಡುವದರಿಂದಲೇ ಸ್ತ್ರೀ–ಪುರುಷ ಯೋಗವು ಉಂಟಾಗುವದು. ಕ್ರಯ–ವಿಕ್ರಯಾದಿ ವ್ಯವಹಾರಗಳಲ್ಲಿ ಕಪಟಕ್ಕೆ ಪ್ರಾಧಾನ್ಯವುಂಟಾಗುವದು. ಸ್ತ್ರೀ–ಪುರುಷರಲ್ಲಿ ರತಿಕೌಶಲ್ಯದ ಚಾತುರ್ಯ ಮಾತ್ರ ಕಂಡುಬಂದೀತಲ್ಲದೆ ಶಾಂತಿ, ತಿತಿಕ್ಷಾ, ದಾತೃತ್ವ ಮೊದಲಾದ ಗುಣಗಳು ಕಂಡುಬರಲಾರವು. ಬ್ರಾಹ್ಮಣರಲ್ಲಿ ಬ್ರಹ್ಮಜ್ಞಾನವಿಲ್ಲದೆ ಅವರನ್ನು ಬರಿಯ ಯಜ್ಞೋಪವೀತದಿಂದ ಗುರುತಿಸಬೇಕಾಗುವದು. ದಂಡ, ಚರ್ಮ ಇತ್ಯಾದಿ ಚಿಹ್ನೆಗಳಿಂದ ಆಶ್ರಮವನ್ನು ಗುರುತಿಸಬೇಕಾಗುವದು; ಮತ್ತು ಆಶ್ರಮಾಂತರವೆಂದರೆ ವೇಷಾಂತರ ಮಾಡುವದಕ್ಕಿಂತ ಹೆಚ್ಚಿನ ಅರ್ಥವೇನೂ ಉಳಿಯಲಿಕ್ಕಿಲ್ಲ ''ದುಡ್ಡಿದ್ದವನಿಗೆ ನ್ಯಾಯವು'' ಎಂಬ ಅನರ್ಥ ಉಂಟಾಗಿ ನ್ಯಾಯ ನಿರ್ಣಯಗಳಲ್ಲಿ ಅಸತ್ಯವು ಕಂಡುಬರುವದು. ಸಿಕ್ಕ ಹಾಗೆ ಬೊಗಳುವದೇ ಪಾಂಡಿತ್ಯದ ಲಕ್ಷಣವಾಗುವದು. ಡಾಂಭಿಕರು ಸಾಧುಗಳಾಗುವರು. ವಿವಾಹವಿಧಿ ಮೊದಲಾದವುಗಳ ಅವಶ್ಯಕತೆಯು ಇಲ್ಲವಾಗುವದು. ಗುರು ಮೊದಲಾದ ಸತ್ಪಾತ್ರ ಪುರುಷರ ಪ್ರತಿಷ್ಠೆಯು ಕಡಿಮೆಯಾಗುವದು. ದೂರದಲ್ಲಿರುವ ತೀರ್ಥಗಳು ಪುಣ್ಯಕಾರಕಗಳಾಗಿ ತೋರುವವು. ಕೂದಲು ಬಿಡಿಸುವದೇ ಸೌಂದರ್ಯದ ಲಕ್ಷಣವಾಗುವದು. ಹೊಟ್ಟೆ ತುಂಬಿಕೊಳ್ಳುವದೇ ಪುರುಷಾರ್ಥವಾಗಿ ಕುಳಿತುಕೊಳ್ಳುವದು. ಸ್ತ್ರೀ ಪುತ್ರಾದಿಗಳ ಪೋಷಣವೇ ಜಾಣತ್ಯವೂ, ಧರ್ಮಾಚರಣೆಯಲ್ಲಿ ಕೀರ್ತಿಯೇ ಉದ್ದಿಷ್ಟ ಹೇತುವೂ ಆಗುವವು ! ಹೀಗೆ ಭೂತಳದಲ್ಲಿ ಅಧರ್ಮವು ಹೆಚ್ಚುತ್ತಿರಲು, ಬ್ರಾಹ್ಮಣ– ಕ್ಷತ್ರಿಯ–ವೈಶ್ಯ–ಶೂದ್ರರಲ್ಲಿ ಬಲಿಷ್ಠರಾದವರು ಅರಸರಾಗಿ ಎಲ್ಲರ ಮೇಲೆ ಅಧಿಕಾರ ನಡಿಸುವರು. ಆ ಮೇಲೆ ಅವರ ಸೇವಕರೂ, ಆಪ್ತಜನರೂ ಕಳ್ಳರಂತೆ ಆಚರಿಸುವರು. ಇಂದ್ರಿಯ ತೃಪ್ತಿಯ ಹೊರತು ಬೇರೆ ಯಾವ ವಿಷಯಗಳಿಗೂ ಅವರು ಮಹತ್ವ ಕೊಡರು. ಅವರು ಲೋಭಾವಿಷ್ಟರಾಗಿ ನಿರ್ದಯದಿಂದ ಪ್ರಜೆಗಳ ಸಂಪತ್ತನ್ನೂ, ಸ್ತ್ರೀಯರನ್ನೂ ಅಪಹರಿಸುವರು. ಆಗ ಪ್ರಜೆಗಳಿಗೆ ಮಹಾವಿಪತ್ತು ಉಂಟಾಗಿ ಅವರು ಕಂಗೆಡುವರು. ಅವರು ಗುಡ್ಡ, ಗವಿಗಳನ್ನು ಸೇರಿ ಕಂದ, ಮೂಲ, ಮಾಂಸ ಜೇನುತುಪ್ಪ, ಫಲಗಳನ್ನು ತಿಂದು ಜೀವಿಸಬೇಕಾಗವದು. ಮಳೆಯಾಗುವದಿಲ್ಲವು; ಮೇಲೆ ಮೇಲೆ ಬರಬೀಳುವವು; ಕರಗಳ ಭಾರದಿಂದ ಪ್ರಜೆಗಳು ಜರ್ಜರರಾಗುವರು. ಶೀತೋಷ್ಣ ಗಾಳಿ–ಮಳೆ, ಒಳಜಗಳಗಳ–ಹೊಡೆದಾಟ, ಇವುಗಳಿಂದ ಪ್ರಜಾಜನದ ದುರ್ದೆಶೆಯಾಗಿ, ಅದು ಬಹುತರ ಕ್ಷೀಣವಾಗುವದು. ಉಳಿದದ್ದು ದುರ್ಬಲವಾಗುವದು. ಮನುಷ್ಯರ ಆಯುರ್ಮರ್ಯಾದೆಯು ಇಪ್ಪತ್ತು ವರ್ಷಗಳಿಂದ ಮೂವತ್ತು ವರ್ಷಗಳ ಮನೆಗೆ ಬರುವದು. ಪ್ರಾಣಿಗಳ ದೇಹಗಳು ಸಣ್ಣವಾಗುವವು. ಧರ್ಮಗಳಲ್ಲಿ ಪಾಖಂಡ ಧರ್ಮದ ವರ್ಚಸ್ಸು ಹೆಚ್ಚುವದು; ಅರಸರು–ಕಳ್ಳರು ಇವರಲ್ಲಿ ಹೆಚ್ಚುಕಡಿಮೆಯು ಉಳಿಯಲಾರದು. ಪ್ರಜೆಗಳೂ ರಾಜರಂತೆ ನೀತಿಹೀನರಾಗುವರು. ಜನರು ಅಕರ್ಮ, ಹಿಂಸೆ ಇವುಗಳಿಂದ ಜೀವಿಸುವರು. ನಾಲ್ಕು ವರ್ಣಗಳೂ ಶೂದ್ರಪ್ರಾಯ ವಾಗುವವು. ನಾಲ್ಕೂ ಆಶ್ರಮಗಳ ಜನರು ಗೃಹಸ್ಥಾಶ್ರಮಿಗಳಂತೆ ಆಚರಿಸುವರು. ಆಕಳು ಆಡಿನ ಹಾಗೆ ಕ್ಷುದ್ರವಾಗುವವು. ಆಪ್ತೇಷ್ಟರಲ್ಲಿ ಬೀಗರ ಪ್ರತಿಷ್ಠೆ ಹೆಚ್ಚುವದು. ವನಸ್ಪತಿಗಳಲ್ಲಿ ಸತ್ವವು ಉಳಿಯಲಾರದು. ವೃಕ್ಷಗಳು ಶಮೀ ವೃಕ್ಷದಂತೆ ಛಾಯಾಹೀನವಾಗುವವು. ಮೇಘಗಳು ಬರಿಯ ಮಿಂಚು ಸುರಿಸುವವು. ಮನೆ–ಮನೆಗಳಲ್ಲಿ ಧರ್ಮಾಚರಣೆಯು ಲೋಪವಾಗುವದು.

''ಪ್ರಿಯ ಕನ್ನಡಿಗರೇ, ಈಗ ಪ್ರತ್ಯಕ್ಷ ಕಲಿಯುಗದಲ್ಲಿ ನಾವು ಇರುತ್ತಿದ್ದು, ಭಾಗವತದೊಳಗಿನ ಈ ಭವಿಷ್ಯದಂತೆ ನಮ್ಮ ಸ್ಥಿತಿಯು ಇರುತ್ತದೆಯೋ ಇಲ್ಲವೋ ನೋಡಿರಿ; ಇನ್ನೂ ಬರಬರುತ್ತ ಸಂಪೂರ್ಣ ಭವಿಷ್ಯದಂತೆ ನಮ್ಮ ಸ್ಥಿತಿಯುಂಟಾಗುವದಲ್ಲದೆ, ಅದಕ್ಕೂ ಹೆಚ್ಚಿನ ಹೀನ ಸ್ಥಿತಿಯು ನಮ್ಮದಾಗುವದು! ಮುಂದಿನ ಭಯಂಕರ ಸ್ಥಿತಿಯಿಂದ ಸೃಷ್ಟಿಯೇ ನಡುಗುವಾಗ, ಸೃಷ್ಟಿಯೊಳಗಿನ ಕಃಪದಾರ್ಥಗಳು ನಾವು ನಡಗುವದೇನಾಶ್ಚರ್ಯವು? ಶೂದ್ರವೃತ್ತಿಯ ರಾಷ್ಟ್ರದ ಜನರು, ಬರಬರುತ್ತ ತುಣುಕು ರೊಟ್ಟಿಗಾಗಿ ನಾಯಿಯಂತೆ ಬಾಲಬಡಿಯುತ್ತ ಮಂದಿಯ ಮೋರೆಯನ್ನು ನೋಡುತ್ತ ಕಂಗಾಲ ಸ್ಥಿತಿಯಲ್ಲಿ ಕಾಲಹರಣ ಮಾಡಬೇಕಾಗುವದು. ಇದನ್ನೇ ಶ್ವವೃತ್ತಿಯೆಂದು ಕರೆಯಬೇಕು. ಶ್ವವೃತ್ತಿಯ ಈ ಯುಗಕ್ಕೆ ನಾಶಯುಗವೆಂಬ ಹೆಸರು; ಕಲಿಯುಗದ ಕಟ್ಟಕಡೆಯ ಈ ಯುಗದಲ್ಲಿ ಧರ್ಮಾಧರ್ಮದ ವಿಚಾರವಾಗಲಿ, ನ್ಯಾಯಾನ್ಯಾಯ ವಿಚಾರವಾಗಲಿ ಲೇಶವಾದರೂ ಉಳಿಯದೆ, ಬಲಿಷ್ಠರು ದುರ್ಬಲರನ್ನು ಹಿಂಡಿ ಹಿಪ್ಪಿ ಮಾಡುವದೂ, ದುರ್ಬಲರು ವಿಧಿನಿಷೇಧವಿಲ್ಲದೆ ದೈನ್ಯದಿಂದ ತುಣುಕು ರೊಟ್ಟಿಗಾಗಿ ಬಲಿಷ್ಠರ ಮುಂದೆ ಬಾಲ ಗುಂಡಾಡಿಸುವುದೂ ಧರ್ಮವಾಗಿ ಕುಳಿತುಕೊಳ್ಳುವವು! ಹೀಗೆ ಬಲಿಷ್ಠರಲ್ಲಿಯೂ, ದುರ್ಬಲರಲ್ಲಿಯೂ ನಿಶ್ಶೇಷ ಧರ್ಮಹ್ರಾಸವಾಗಿ ನೋಡಿದತ್ತ ಮಾತ್ಸರ್ಯ, ದ್ವೇಷ, ನಿರ್ದಯ, ನೀಚಸ್ವಾರ್ಥ ಇವು ಕಣ್ಣಿಗೆ ಬೀಳುವವು! ಈ ಸ್ಥಿತಿಯೇ ಪರಮಾವಧಿಗೆ ಮುಟ್ಟಿದರೆ, ಧರ್ಮಲೋಪವಾಗಿ ಜಗತ್ತು ನಾಶಹೊಂದುವದು; ಆದರೆ ಧರ್ಮಜಾಗ್ರತಿಯಿಂದ ಜಗತ್ತನ್ನು ನಾಶವಾಗದಂತೆ ಮಾಡಬೇಕೆನ್ನುವವರು, ಅಧರ್ಮದ ನಾಶಕ್ಕಾಗಿ ಅಧರ್ಮಿಷ್ಠರೊಡನೆ, ಅವರಲ್ಲಿಯ ಅಧರ್ಮಕ್ಕಾಗಿ ಅಹಿಂಸಾತ್ಮಕ ಅಸಹಯೋಗವನ್ನು ಬಳಿಸಬೇಕು; ಯಾಕಂದರೆ ಶೂದ್ರವೃತ್ತಿಯ ಅಥವಾ ಶ್ವವೃತ್ತಿಯ ರಾಷ್ಟ್ರದಲ್ಲಿ ಬ್ರಾಹ್ಮವೃತ್ತಿಯ ಆತ್ಮಬಲವಾಗಲಿ, ಕ್ಷಾತ್ರವೃತ್ತಿಯ ಶಾರೀರಬಲವಾಗಲಿ, ವೈಶ್ಯವೃತ್ತಿಯ ದ್ರವ್ಯಬಲವಾಗಲಿ ಇರುವದಿಲ್ಲ; ಆದ್ದರಿಂದ ಈ ಪರತಂತ್ರವೃತ್ತಿಯ, ಅಥವಾ ಶ್ವವೃತ್ತಿಯ ರಾಷ್ಟ್ರಕ್ಕೆ ಅಹಿಂಸಾತ್ಮಕ ಅಸಹಯೋಗವೇ ತರುಣೋಪಾಯವಾಗಿರುವದು; ಯಾಕಂದರೆ ಅಧರ್ಮಿಷ್ಠರಾದ ಬಲಿಷ್ಠರೊಡನೆ ಧರ್ಮಿಷ್ಠರಾದ ದುರ್ಬಲರು—''ನಾವು ನಿಮ್ಮ ಅಧರ್ಮಾಚರಣೆಯನ್ನು ಅನುಸರಿಸಲಾರೆವು; ಬೇಕಾದದ್ದು ಮಾಡಿರಿ'' ಎಂದು ಹೇಳಿ ತಾವು ಸ್ವತಃ ಧರ್ಮದಿಂದ ಆಚರಿಸಿ ಅವರೊಡನೆ ಅಹಿಂಸಾತ್ಮಕ ಅಸಹಯೋಗವನ್ನು ಬಳಸದಿದ್ದರೆ ಗತ್ಯಂತರವೇ ಇಲ್ಲವು! ಯಾಕೆ ಕಾಶಿಮಖಾನ, ನಾನು ಹೇಳಿದ ವಿಷಯ ಮನಸ್ಸಿನಲ್ಲಿ ಬಂದಿತಷ್ಟೇ?''

ಈ ಮೇರೆಗೆ ಮಾಧವಾಚಾರ್ಯರು ವಾತ್ಸಲ್ಯದಿಂದ ಕೇಳಲು, ಕಾಶಿಮಖಾನನು– ''ಮಹಾತ್ಮನ್, ತಮ್ಮ ಗಂಭೀರವಾದ ನಿರೂಪಣವು ಮನಸ್ಸಿನಲ್ಲಿ ಬಂದಿತು. ಅನಾದಿ ಕಾಲದಿಂದ ರಾಷ್ಟ್ರವು ಬ್ರಾಹ್ಮವೃತ್ತಿಯಿಂದ ಕ್ಷಾತ್ರವೃತ್ತಿಗೂ, ಕ್ಷಾತ್ರವೃತ್ತಿಯಿಂದ ವೈಶ್ಯವೃತ್ತಿಗೂ, ವೈಶ್ಯವೃತ್ತಿಯಿಂದ ಶೂದ್ರವೃತ್ತಿಗೂ, ಶೂದ್ರವೃತ್ತಿಯಿಂದ ಶ್ವವೃತ್ತಿಗೂ ಹ್ಯಾಗೆ ಪತನ ಹೊಂದುತ್ತ ಬರುವದೆಂಬುದನ್ನೂ, ಅದರಂತೆ, ಬ್ರಾಹ್ಮವೃತ್ತಿಯೇ ಮೊದಲಾದ ಆಯಾ ವೃತ್ತಿಗಳಲ್ಲಿರುವಾಗ ರಾಷ್ಟ್ರವು ಧರ್ಮಯುಕ್ತ ಸ್ವಾತಂತ್ರ್ಯ ರಕ್ಷಣಕ್ಕಾಗಿ ಧರ್ಮಹೀನರಾದ ದುಷ್ಟರೊಡನೆ ಕ್ರಮವಾಗಿ ಆತ್ಮಬಲದ ಹಿಂಸೆಯ ಸಾತ್ವಿಕ ಪ್ರತೀಕಾರ, ಶಾರೀರಬಲದ ಹಿಂಸೆಯ ರಾಜಸ ಪ್ರತೀಕಾರ, ದ್ರವ್ಯಬಲದ ಹಿಂಸೆಯ ಪ್ರತಿಯೋಗಿ

ಸಹಕಾರ, ಅಹಿಂಸಾತ್ಮಕ ಅಸಹಕಾರಗಳನ್ನು ಬಳಸಬೇಕೆಂಬುದನ್ನು ಕುರಿತು ತಾವು ಮಾಡಿದ ನಿರೂಪಣವೂ ಸರಸವಾಗಿ ತಿಳಿಯಿತು; ಆದರೆ ರಾಷ್ಟ್ರಕ್ಕೆ ರಾಷ್ಟ್ರವೇ ಬ್ರಾಹ್ಮವೃತ್ತಿ–ಕ್ಷಾತ್ರವೃತ್ತಿ–ವೈಶ್ಯವೃತ್ತಿ–ಶೂದ್ರವೃತ್ತಿ– ಶ್ವವೃತ್ತಿಗಳನ್ನು ಹೊಂದುವದು ನನಗೆ ಅಶಕ್ಯವಾಗಿ ತೋರುತ್ತದೆ. ಯಾವ ಕಾಲಕ್ಕಾದರೂ ರಾಷ್ಟ್ರದಲ್ಲಿ ಕೇವಲ ಅಲ್ಪ ಪ್ರಮಾಣದಿಂದಲೇ ಆಗಲೊಲ್ಲದೇಕೆ, ಈ ಐದೂ ವೃತ್ತಿಯ ಜನರು ಇರುತ್ತಿರಬಹುದು. ಯಾಕಂದರೆ ಈಗಿನ ಶೂದ್ರವೃತ್ತಿಯ ಕರ್ನಾಟಕದಲ್ಲಿ ತಮ್ಮಂಥ ಹಾಗು ಆರ್ಯದ್ವಯರಂಥ ಬ್ರಾಹ್ಮವೃತ್ತಿಯವರೂ, ಹುಕ್ಕ–ಬುಕ್ಕ–ಕೃಷ್ಣನಾಯಕ–ಮಲ್ಲಸರ್ಜರಂಥ ಕ್ಷಾತ್ರವೃತ್ತಿಯವರೂ ಇರುತ್ತಿರಲು, ರಾಷ್ಟ್ರವು ಯಾವಾಗಾದರೂ ಒಂದೇ ವೃತ್ತಿಯಲ್ಲಿರುತ್ತದೆಂದು ಹೇಳುವದು ನನಗೆ ಶಕ್ಯವಾಗಿ ತೋರುವದಿಲ್ಲ. ಆದ್ದರಿಂದ ಮಹಾತ್ಮನ್, ಕರುಣಿಸಿ ನನ್ನ ಈ ಸಂಶಯವನ್ನು ದೂರ ಮಾಡುವದಾಗಬೇಕು.''

ಕಾಶಿಮಖಾನನ ಈ ಶಂಕೆಗಳನ್ನು ಕೇಳಿ ಮಾಧವಾಚಾರ್ಯರು—''ಖಾನಸಾಹೇಬ, ನಿಮ್ಮ ಪ್ರಶ್ನವು ಯೋಗ್ಯವಾದದ್ದೇ ಸರಿ; ಯಾಕಂದರೆ, ನೀವು ಹೇಳಿದಂತೆ ರಾಷ್ಟ್ರವು ಒಂದೇ ವೃತ್ತಿಯದಾಗಿ ಇರಲಾರದು; ಆದರೆ ಇಡಿಯ ರಾಷ್ಟ್ರದಲ್ಲಿಯಾವ ವೃತ್ತಿಯ ಜನರ ಸಂಖ್ಯೆಯು ಹೆಚ್ಚು ಇರುವದೋ ಅಥವಾ ರಾಷ್ಟ್ರವು ಯಾವ ವೃತ್ತಿಯು ತನ್ನ ತರುಣೋಪಾಯವೆಂದು ಹೆಚ್ಚು ಪ್ರಮಾಣದಿಂದ ತಿಳಿಯುವದೋ ಆ ವೃತ್ತಿಯದೇ ರಾಷ್ಟ್ರವು ಇರುತ್ತದೆಂದು ತಿಳಿಯಬೇಕು. ಎಲ್ಲ ಕಡೆಯ ಭೂಮಿಯಲ್ಲಿ ಹೆಚ್ಚು–ಕಡಿಮೆ ಪ್ರಮಾಣದಿಂದ ಬಹುತರ ಎಲ್ಲ ಧಾನ್ಯಾದಿಗಳು ಬೆಳೆಯುತ್ತಿದ್ದರೂ, ಹತ್ತಿಯು ಬಹಳ ಬೆಳೆಯುತ್ತಿರುವ ಸೀಮೆಗೆ ಹತ್ತಿಯ ಸೀಮೆಯೆಂತಲೂ ಬತ್ತವು ಬಹಳ ಬೆಳೆಯುತ್ತಿರುವ ಸೀಮೆಗೆ ಬತ್ತದ ಸೀಮೆಯಂತಲೂ ಅನ್ನುವದಿಲ್ಲವೆ? ಹಾಗೆಯೇ ರಾಷ್ಟ್ರದ ವೃತ್ತಿಗಳ ಸಂಬಂಧದಿಂದಲೂ ತಿಳಿದುಕೊಳ್ಳಬೇಕು. ಈಗಿನ ನಮ್ಮ ಕರ್ನಾಟಕವು ವೈಶ್ಯವೃತ್ತಿ– ಶೂದ್ರವೃತ್ತಿಗಳ ಸಂಧಿಕಾಲದಲ್ಲಿರುತ್ತದೆಂದು ಹೇಳಬಹುದು. ಆದ್ದರಿಂದ ಇದರ ಶಕ್ತಿಪಾತವು ಇನ್ನೂ ಅಷ್ಟರಮಟ್ಟಿಗೆ ಆಗಿರುವದಿಲ್ಲ; ಆದ್ದರಿಂದ ರಾಷ್ಟ್ರದ ಈಗಿನ ಸ್ಥಿತಿಯನ್ನನು ಸರಿಸಿ ಕನ್ನಡಿಗರು ನಾವು ಪ್ರಸಂಗದಲ್ಲಿ ಸಹಕಾರವನ್ನೂ, ಪ್ರಸಂಗದಲ್ಲಿ ಪ್ರತೀಕಾರವನ್ನೂ, ಪ್ರಸಂಗದಲ್ಲಿ ಅಹಿಂಸಾತ್ಮಕ ಅಸಹಕಾರವನ್ನೂ ಧರ್ಮದಿಂದಲ್ಲದಿದ್ದರೂ ಧರ್ಮದಲ್ಲಿ ದೃಷ್ಟಿಯನ್ನಿಟ್ಟು ಧರ್ಮಸ್ಥಾಪನೆಗಾಗಿ ಸ್ವಾತಂತ್ರ್ಯಾಪಹಾರಕ ದುಷ್ಟರೊಡನೆ ಬಳಿಸಿ, ನಮ್ಮ ಸ್ವಾತಂತ್ರ್ಯರಕ್ಷಣರೂಪ ಕಾರ್ಯವನ್ನು ಸಾಧಿಸಬೇಕಾಗಿರುವದು. ಕಾಶಿಮಖಾನ, ಹ್ಯಾಗೆ ಸಾಧಿಸಿದರೂ ಈಗಿನ ಹೀನಕಾಲದ ನಮ್ಮ ಸ್ವಾತಂತ್ರ್ಯವು ನಿಜವಾದ ಸ್ವಾತಂತ್ರ್ಯವಲ್ಲವೇ ಅಲ್ಲ; ಯಾಕಂದರೆ ಅದು ಕೃತಯುಗದ ಪರಿಶುದ್ಧವಾದ ಸತ್ವಗುಣಯುಕ್ತ ಶಾಂತಿಮಯ ಸ್ವಾತಂತ್ರ್ಯದಂತೆ, ನಿಃಸ್ವಾರ್ಥಬುದ್ಧಿಯ ತಪಸ್ಸಿನಿಂದ ಸಿದ್ಧವಾದ ಆತ್ಮಬಲ ಪ್ರಕಾಶಿತವಾದದ್ದೂ ಇರುವದಿಲ್ಲ; ಅದರಂತೆ ತ್ರೇತಾಯುಗದ ರಾಜಸಗುಣ ದೂಷಿತ ಸುಖಮಯ ಸ್ವಾತಂತ್ರ್ಯದಂತೆ, ಧಾರ್ಮಿಕ ಸ್ವಾರ್ಥದ ತಪಸ್ಸಿನಿಂದ ಸಿದ್ಧವಾದ ಪೌರುಷ– ಬಲಪ್ರಕಾಶಿತವಾದದ್ದಾದರೂ ಇರುವದಿಲ್ಲ; ಹಾಗೆಯೇ ದ್ವಾಪರಯುಗದ ತಾಮಸ ಗುಣದೂಷಿತ ಅತೃಪ್ತಿಮಯ ಸ್ವಾತಂತ್ರ್ಯದಂತೆ ಕುಟಿಲತಂತ್ರ ಸಿದ್ಧವಾದ ಕೌಟಿಲ್ಯಪ್ರಕಾಶಿತವಾದದ್ದಾದರೂ ಇರುವದಿಲ್ಲ. ಈಗಿನ ಸ್ವಾತಂತ್ರ್ಯವು

ವಿಕಾರವಶವಾದ ಸಂಘಶಕ್ತಿಯಿಂದ ಸಾಧಿತ ವಾದದ್ದಿರುವದರಿಂದ ತಾಪಮಯವೂ, ಕ್ಷಣಭಂಗುರವೂ ಆಗಿರುವದು; ಆದ್ದರಿಂದಲೇ ಕಾಶಿಮುಖಾನ, ಈಗಿನ ರಾಜ್ಯಸುಖಾದಿ ವಿಷಯ ಸುಖಶರಣ್ಯವಾದ ಸ್ವಾತಂತ್ರ್ಯವು ತತ್ವತಃ ಸ್ವಾತಂತ್ರ್ಯವಲ್ಲವೇ ಅಲ್ಲವೆಂದು ಹೇಳಿದೆನು. ನಾವು ಸ್ವತಂತ್ರರೆಂದು ಹೇಳಿಕೊಳ್ಳುವ ಈಗಿನ ರಾಷ್ಟ್ರದವರ ಅಧಿದೈವತಗಳಾದ ವಿಷಯಗಳೇ ನಾಶವಂತವಾದವುಗಳು; ಅಂದ ಬಳಿಕ ಆ ಅಶಾಶ್ವತ ವಿಷಯಗಳಿಗಾಗಿ ಬಡಿದಾಡುವವರು ಸ್ವತಂತ್ರರು ಹೇಗೆ? ಈಗಿನ ವಿಷಯದಾಸರಲ್ಲಿ, ಅಶಾಶ್ವತ ವಿಷಯಗಳನ್ನು ಸ್ವೇಚ್ಛೆಯಿಂದ ಭೋಗಿಸಲು ಅನುಕೂಲತೆಯುಳ್ಳವರು ಸ್ವತಂತ್ರರೆಂತಲೂ, ಆ ವಿಷಯಗಳನ್ನು ಪರೇಚ್ಛೆ ಯಿಂದ ಭೋಗಿಸುವಾಗ ಕಂಡುಬರುವ ಕೊರತೆಯಿಂದ ದುಃಖಪಡುವವರು ಪರತಂತ್ರ ರೆಂತಲೂ ತಿಳಿಯಲ್ಪಡುವರು!

''ಕಾಶಿಮುಖಾನ, ಇನ್ನು ಮಾಡುವ ನನ್ನ ಸೂಕ್ಷ್ಮ ನಿರೂಪಣದ ಕಡೆಗೆ ನಿಮ್ಮೆಲ್ಲರ, ಲಕ್ಷ್ಯವಿರಲಿ. ದೇಹಾತ್ಮವಾದಿಗಳಿಗೆ ಸಲ್ಲತಕ್ಕ ಈ ವೈಷಯಿಕ–ಲೌಕಿಕ ಪಾರತಂತ್ರ್ಯವನ್ನು, ಆತ್ಮದೃಷ್ಟಿಯವರು ಪಾರತಂತ್ರ್ಯವೆಂತಲೇ ಎಣಿಸುವರು. ವಿಷಯಗಳ ವಿನಾಶಿತ್ವವನ್ನೂ, ಆತ್ಮದ ಅವಿನಾಶಿತ್ವವನ್ನೂ ಮನಸ್ಸಿನಲ್ಲಿ ತಂದರೆ, ಆತ್ಮನಿಷ್ಠರು ಸ್ವತಂತ್ರರೆಂತಲೂ, ವಿಷಯನಿಷ್ಠರು ಪರತಂತ್ರರೆಂತಲೂ ತಿಳಿಯಬೇಕಾಗುವದು. ಆತ್ಮನಿಷ್ಠರ ಸ್ವಾತಂತ್ರ್ಯವು ಶಾಶ್ವತವೂ ಶಾಂತಿರೂಪವೂ ಆದ ಆಧ್ಯಾತ್ಮಿಕ ಸ್ವಾತಂತ್ರ್ಯವೆನಿಸುವದು. ವಿಷಯ ನಿಷ್ಠರ ಸ್ವಾತಂತ್ರ್ಯವು ಅಶಾಶ್ವತವೂ, ಶಾಂತಿರೂಪವೂ ಆದ ಲೌಕಿಕ ಸ್ವಾತಂತ್ರ್ಯವೆನಿಸುವದು. ಸ್ವಾತಂತ್ರ್ಯದ ನಿಜವಾದ ಅರ್ಥದ ದೃಷ್ಟಿಯಿಂದ ವಿಚಾರ ಮಾಡಿದರೆ, ಕೃತಯುಗದ ಆತ್ಮನಿಷ್ಠರ ಸ್ವಾತಂತ್ರ್ಯವೇ ನಿಜವಾದ ಸ್ವಾತಂತ್ರ್ಯವಿದ್ದು, ಮುಂದೆ ಯುಗಾಂತರದಲ್ಲಿ ಆತ್ಮನಿಷ್ಠೆಯು ಕಡಿಮೆಯಾಗುತ್ತ ವಿಷಯನಿಷ್ಠೆಯು ಹೆಚ್ಚಾಗುತ್ತ ಹೋಗಿ, ಈಗಿನ ಕಲಿಯುಗದಲ್ಲಿ ಕೇವಲ ವಿಷಯನಿಷ್ಠೆಯೇ ಪ್ರಧಾನವಾಗಿರುವದರಿಂದ, ಕೇವಲ ವಿಷಯಾ ಧೀನರಾದ ಈಗಿನವರನ್ನು ಸ್ವಾಭಾವಿಕವಾಗಿಯೇ ಪರಾಧೀನರೆಂದು ಕರೆಯ ಬೇಕಾಗುವದು; ಆದರೆ ಕಾಶಿಮುಖಾನ, ಈಗಿನ ನಮ್ಮ ಕರ್ನಾಟಕಕ್ಕೆ ಆತ್ಮಾನುಭವದ ಗಂಧವೂ ಇಲ್ಲ; ಅದು ವಿಷಯಾನುಭವವನ್ನಾದರೂ ಸ್ವೇಚ್ಛೆಯಿಂದ ಹೊಂದೇನೆಂದರೆ, ಅದಕ್ಕೂ ನಿಮ್ಮಿಂದ ಬಾಧೆ ಬರತೊಡಗಿದೆ! ನಿಜವಾಗಿಯೆಂದರೆ, ಸೃಷ್ಟಿಕರ್ತೃವು ಎಲ್ಲ ಇಂದ್ರಿಯಗಳನ್ನೂ ಬಹಿರ್ಮುಖ ವಾಗಿಯೇ ಮಾಡಿರುವದರಿಂದ ಜಗತ್ತು ವೈಷಯಿಕ–ಲೌಕಿಕ ಸ್ವಾತಂತ್ರ್ಯದ ಕಡೆಗೆ ಒಲಿಯುವದೇ ಹೆಚ್ಚೆಂದು ಹಿಂದಕ್ಕೆ ನಾನು ಶ್ರುತಿಯ ಆಧಾರ ಕೊಟ್ಟು, ಹೇಳಿದ್ದು ನಿನ್ನ ಸ್ಮರಣದಲ್ಲಿರಬಹುದು ಅಂದ ಬಳಿಕ ನಮ್ಮ ಸ್ವಾಭಾವಿಕ ಒಲವಿನಂತೆ ನಮಗೆ ವೈಷಯಿಕ–ಲೌಕಿಕ ಸ್ವಾತಂತ್ರ್ಯವೂ ಇರಬಾರದೆಂಬುದು. ನ್ಯಾಯವಲ್ಲವೆ? ಇದ್ದರೆ ಸ್ವಸ್ವರೂಪಜ್ಞಾನದ ಆಧ್ಯಾತ್ಮಿಕ ಸ್ವಾತಂತ್ರ್ಯ ವಿರಬೇಕು; ಇಲ್ಲದಿದ್ದರೆ ವೈಷಯಿಕ–ಲೌಕಿಕ ಸ್ವಾತಂತ್ರ್ಯವಾದರೂ ಇರಬೇಕು. ಈ ವೈಷಯಿಕ ಸ್ವಾತಂತ್ರ್ಯವನ್ನು ಮನುಷ್ಯರ ಸಹವಾಸವಿಲ್ಲದ ಮನುಷ್ಯೇತರ ಪ್ರಾಣಿಗಳು ಸಹ ಅನುಭವಿಸುತ್ತಿರಲು; ಮನುಷ್ಯರೆನಿಸುವ ನಮಗೆ ಅದು ಇರದಿರುವದು ಲಾಂಛನವಲ್ಲವೆ? ಇಂಥ ನಾವು ಬದುಕಿಯಾದರೂ ಇರುತ್ತೇವೆಂದು ಹ್ಯಾಗೆ ಹೇಳಬೇಕು? ಇಂಥ ನಮ್ಮ

ಜೀವನ್ಮೃತ ಸ್ಥಿತಿಯು ಹೋಗಿ ನಾವೂ ಮನುಷ್ಯರ ಬಟ್ಟೆಯನ್ನು ಕೂಡಬೇಕೆಂತಲೇ ವಿಷಯಸುಖ ಭೋಗಕ್ಕಾದರೂ ನಮಗೆ ಅನ್ಯರಿಂದ ಆತಂಕವಾಗಬಾರದೆಂದು ವೈಷಯಿಕ, ಅಂದರೆ ಲೌಕಿಕ ಸ್ವಾತಂತ್ರ್ಯ ಸಂಪಾದನಕ್ಕಾಗಿ ಈಗ ನಾವು ಯತ್ನಿಸುತ್ತಿರುವೆವೆಂದು ತಿಳಿ. ಹಾಳು ವಿಷಯನಿಷ್ಠರನ್ನು ಯಾವ ಧರ್ಮದ ಜ್ಞಾನಿಗಳೂ ಸ್ವತಂತ್ರರೆಂದು ಹೇಳಿರುವದಿಲ್ಲ; ಆದರೆ ವಿಷಯಸುಖಗಳನ್ನು ಸ್ವೇಚ್ಛೆಯಿಂದ ಭೋಗಿಸಲನುಕೂಲತೆಯುಳ್ಳವರಿಗೆ ವಿಷಯಗಳೊಳಗಿನ ಹೇಯಗುಣಗಳ ಅನುಭವವು ಇಂದಿಲ್ಲ ನಾಳೆಯಾದರೂ ಆಗಿ, ಅವರು ಆ ವಿಷಯಸುಖದ ವಿಷಯವಾಗಿ ಔದಾಶೀನ್ಯ ತಾಳಿ, ಸ್ವಸ್ವರೂಪಜ್ಞಾನದ ನಿಜವಾದ ಸ್ವಾತಂತ್ರ್ಯದ ಸಂಪಾದನದ ಹಾದಿಯನ್ನು ಹಿಡಿಯುವ ಸಂಭವವಿರುವದರಿಂದ, ಅಷ್ಟರಮಟ್ಟಿಗೆ ವೈದಿಕರು ನಾವು ಈಗಿನ ದೈಹಿಕ ಅಂದರೆ ಲೌಕಿಕ ಅಥವಾ ವೈಷಯಿಕ ಸ್ವಾತಂತ್ರ್ಯವನ್ನು ಇಚ್ಛಿಸುತ್ತಿರುವೆವಲ್ಲದೆ, ಇದು ಪರಮ ಪುರುಷಾರ್ಥವೆಂದು ನಾವು ಇಚ್ಛಿಸುವದಿಲ್ಲ! ಚೇಳಿನ ಮಂತ್ರ ಬಾರದವನು ಹಾವಿನ ಮಂತ್ರಕ್ಕೆ ಕೈ ಹಾಕುವಂತೆ, ವೈಷಯಿಕ ಅಥವಾ ದೈಹಿಕ ಅರ್ಥಾತ್ ಲೌಕಿಕ ಸ್ವಾತಂತ್ರ್ಯವಿಲ್ಲದವನು, ಸ್ವಸ್ವರೂಪ ಜ್ಞಾನದ ಅಂದರೆ, ಆತ್ಮನಿಷ್ಠೆಯ ಅರ್ಥಾತ್ ಆಧ್ಯಾತ್ಮಿಕ ಸ್ವಾತಂತ್ರ್ಯವನ್ನು ಪಡೆಯುವದು ಅಶಕ್ಯವಾಗಿರುವದರಿಂದ, ನಾವು ಈ ಲೌಕಿಕ ಸ್ವಾತಂತ್ರ್ಯವನ್ನು ಸಂಪಾದಿಸಲೇ ಬೇಕಾಗಿರುವದು. ವಿಷಯಸುಖವಿಮುಕ್ತನೇ ಮುಕ್ತನು, ಅವನೇ ನಿಜವಾದ ಸ್ವತಂತ್ರ್ಯನು ಎಂಬ ನಮ್ಮ ಸಿದ್ಧಾಂತವು ತ್ರಿಕಾಲಾಬಾಧಿತವಾಗಿರುವದು. ಕೃತಯುಗದ ರಾಷ್ಟ್ರದಲ್ಲಿ ಮುಕ್ತರ ಸಂಖ್ಯೆಯು ಹೆಚ್ಚು ಇದ್ದು, ವಿಷಯಸುಖಮಗ್ನ ದೇಹಾತ್ಮವಾದಿಗಳ ಸಂಖ್ಯೆಯು ಕಡಿಮೆಯಿತ್ತು; ಆದರೆ ಈಶ್ವರೀತಂತ್ರದಿಂದ ದೇಹಾತ್ಮವಾದಿಗಳ ಸಂಖ್ಯೆಯು ಹೆಚ್ಚುತ್ತ ಬಂದು, ಈಗಿನ ಯುಗದಲ್ಲಿ ಅವರಿಂದಲೇ ಜಗತ್ತುತುಂಬಿ ಹೋಗಿ, ಆತ್ಮನಿಷ್ಠರು ಎಲ್ಲಿಯೋ ಅಲ್ಲಿಯೊಬ್ಬರು ಇಲ್ಲಿಯೊಬ್ಬರು ಮರೆಯಾಗಿ ಇರುವರು! ಈ ಸ್ಥಿತಿಯು ಸೃಷ್ಟಿಯ ನಿಯಮದಂತೆ ಅಪರಿಹಾರ್ಯ ವಾದದ್ದಿರುವದರಿಂದ, ಇದ್ದ ಸ್ಥಿತಿಯಲ್ಲಿಯೇ ನಾವು ಲೌಕಿಕ ಸ್ವಾತಂತ್ರ್ಯವನ್ನು ಸಂಪಾದಿಸಲು ಯತ್ನಿಸುತ್ತಿರುವೆವು. ಹಾಗೆ ಮಾಡದಿದ್ದರೆ ಲೌಕಿಕ ಸ್ವಾತಂತ್ರ್ಯವಿಲ್ಲದ ರಾಷ್ಟ್ರವು, ತಾನು ವಿಷಯೋಪಭೋಗದ ಸ್ವಾತಂತ್ರ್ಯಕ್ಕೂ ಪಾತ್ರವಿಲ್ಲವೆಂಬ ಭಾವನೆಗೆ ಗುರಿಯಾಗಿ ದಿನ ದಿನಕ್ಕೆ ಅಧಃಪತನ ಹೊಂದುತ್ತ ಹೋಗುವದು. ಒಟ್ಟಿಗೆ ಈಗಿನ ಯುಗದಲ್ಲಿ ಆತ್ಮನಿಷ್ಠರಾದ ಬ್ರಾಹ್ಮವೃತ್ತಿಯವರೂ, ಧರ್ಮಿಷ್ಠರಾದ ಕ್ಷಾತ್ರವೃತ್ತಿಯವರೂ! ವೈಭವನಿಷ್ಠರಾದ ವೈಶ್ಯವೃತ್ತಿ ಯವರೂ ಇರುತ್ತಿದ್ದರೂ, ವಿಷಯಸುಖದ ಸ್ವಾತಂತ್ರ್ಯ ಕೂಡ ಇಲ್ಲದ ಶೂದ್ರವೃತ್ತಿಯ ಪರಾಧೀನರು ದಿನದಿನಕ್ಕೆ ಹೆಚ್ಚುತ್ತಿರುವದರಿಂದ ಈಗಿನ ರಾಷ್ಟ್ರವು ಶೂದ್ರ–ಶ್ವವೃತ್ತಿಗಳ ದೆಂದು ನಾನು ಹೇಳಿರುವೆನು!''

ಆಚಾರ್ಯರ ಈ ಗಂಭೀರ ನಿರೂಪಣವನ್ನು ಕೇಳಿ, ಕಾಶಿಮಖಾನನು ಸಮಾಧಾನ ಪಟ್ಟು– ''ಭಗವನ್, ನಿಮ್ಮ ತಾತ್ವಿಕ ಬೋಧಶ್ರವಣದಿಂದ ನಾನು ಧನ್ಯನಾದೆನು; ಈಗಿನವರು ಹೊತ್ತು ಬಿದ್ದ ಹಾಗೆ ಕೊಡೆ ಹಿಡಿದು ಕಾರ್ಯ ಸಾಧಿಸುವರೆಂಬುದನ್ನು, ನಮ್ಮ ಬಖತ್ಯಾರ ಖಿಲಜಿಯವರು ನನ್ನೊಡನೆ ಪ್ರಸಂಗವಶಾತ್ ಸಹಕಾರ, ಪ್ರತೀಕಾರ, ಅಹಿಂಸಾತ್ಮಕ ಅಸಹಕಾರಗಳ

ಬಳಿಕೆ ಮಾಡಿದ್ದರ ಮೇಲಿಂದ ನಾನು ಮನಗಂಡಿರುವೆನು; ಆದರೆ ಗುರುದೇವರೇ, ರಾಷ್ಟ್ರವು ಕೇವಲ ಶ್ವವೃತ್ತಿಯಲ್ಲಿರು ವಾಗ, ಅಂದರೆ ತುಣುಕು ರೊಟ್ಟಿಗಾಗಿ ನ್ಯಾಯಾನ್ಯಾಯಗಳ ವಿಚಾರವಿಲ್ಲದೆ ಒಬ್ಬರನ್ನು ಸೇವಿಸುವ ಸವಿಗಂಡಾಗ, ಅದು ಬಲಿಷ್ಠರೊಡನೆ ಅವರ ಕ್ಷೋಭಕ್ಕೆ ಗುರಿಯಾಗಿ ಅಹಿಂಸಾತ್ಮಕ ಅಸಹಯೋಗ ವನ್ನು ಬಳಿಸಲು ಹ್ಯಾಗೆ ಸಮರ್ಥವಾದೀತು! ಅಂಥ ದುರ್ಬಲರು ಅಸಹಯೋಗದಿಂದ ನಡೆದು, ಸೆರೆಮನೆಯನ್ನು ಸೇರುವದರಿಂದಾಗಲಿ, ಪ್ರಾಣ ಕೊಡುವದರಿಂದಾಗಲಿ ಏನು ಪ್ರಯೋಜನ ವಾದೀತು? ಬಲಿಷ್ಠರ ಮುಂದೆ ಇಂಥ ದುರ್ಬಲರ ನಿರುಪದ್ರವಿಯಾದ ಅಹಿಂಸಾತ್ಮಕ ಅಸಹ ಯೋಗದ ಉಪಾಯವು ನಡೆಯಬಹುದೆ? ಕ್ಷೋಭಿಸಿದರೆ ಬಲಿಷ್ಠರು ಅಂಥ ದುರ್ಬಲ–ಅಸಹ ಯೋಗಿಗಳನ್ನು ತಗಣೆ ಒರೆದಂತೆ ಕಾಲಿನಿಂದ ಒರಿಸಿ ಬಿಡಬಹುದಲ್ಲ!''

ಮಾಧವಾಚಾರ್ಯ– ಕಾಶಿಮುಖಾನ, ಮನುಷ್ಯ ವಿಚಾರದಿಂದ ನಿನ್ನ ಪ್ರಶ್ನವು ಯೋಗ್ಯವಿರುವದು. ''ನಾಯಿಯ ಹೊಡೆಯಲಿಕ್ಕೆ ಬಣ್ಣದ ಕೋಲೇಕೆ'' ಅನ್ನುವಂತೆ ಶ್ವವೃತ್ತಿಯ ದುರ್ಬಲರನ್ನು ಮಹಾ ಬಲಿಷ್ಠರು ಕಾಲಿನಿಂದ ತಿಕ್ಕಿ ಒರಿಸಲಿಕ್ಕೆ ತಡವಾಗಲಿಕ್ಕಿಲ್ಲ. ಅದರಲ್ಲಿ ಇನ್ನು ಮುಂದೆ ಕಾಲಮಹಿಮೆಯಿಂದ ಮನುಷ್ಯ ಸಂಹಾರಕ ಭಯಂಕರ ಸಾಧನಗಳ ಶೋಧವಾಗ ಬಹುದಾದ್ದರಿಂದ, ಇಂಥ ದುರ್ಬಲರ ನಾಶವನ್ನು ಕ್ಷಣದಲ್ಲಿ ಮಾಡಬಹುದೆಂಬುದು ನಿಜವು; ಆದರೆ ಬಲಿಷ್ಠರಿಗೂ ಬಲವನ್ನೀಯದ ದೈವೀ ಬಲವೂ, ತಂತ್ರಗಾರರಿಗೂ ತಂತ್ರವನ್ನೀಯುವ ದೈವೀ ತಂತ್ರವು ಜಗತ್ತಿನಲ್ಲಿರುವ ದೆಂಬುದನ್ನು ಮರೆಯಬೇಡ. ಮುಸಲ್ಮಾನರು ನೀವು ಮಸೀದೆಗಳಲ್ಲಿ ಯಾರನ್ನು ಕುರಿತು ಪ್ರಾರ್ಥಿಸುವಿರೋ, ವೈದಿಕರು ನಾವು ಗುಡಿಗಳಲ್ಲಿ ಘಂಟಾನಾದದಿಂದ ಯಾರನ್ನು ಪೂಜಿಸುವೆವೋ, ಅದರಂತೆ ಬೇರೆ ಬೇರೆ ಧರ್ಮದವರು ಬೇರೆ ಬೇರೆ ವಿಧದಿಂದ ಯಾರನ್ನು ಆರಾಧಿಸುವರೋ ಆ ಸರ್ವತಂತ್ರ–ಸ್ವತಂತ್ರನ ಸಾಮರ್ಥ್ಯವೇ ದೈವೀ ಸಾಮರ್ಥ್ಯವು. ಇಚ್ಛಾಮಾತ್ರದಿಂದ ಸೃಷ್ಟಿಯನ್ನೇ ರಚಿಸಿ–ಪೋಷಿಸಿ–ಸಂಹರಿಸುವ ಆ ಅಚಿಂತ್ಯನ ಸಾಮರ್ಥ್ಯದ ಮುಂದೆ ನಮ್ಮ ಮನುಷ್ಯರ ಸಾಮರ್ಥ್ಯವು ಎಷ್ಟಿದ್ದರೂ ಅದರ ಪಾಡೇನು? ಆ ನರನೊರಜುಗಳು ಸೃಷ್ಟಿಕರ್ತನ ಮುಂದೆ ಕಃಪದಾರ್ಥವಲ್ಲವೆ ? ಆ ಅಗಾಧ ಸಾಮರ್ಥ್ಯದ ಪರಮಾತ್ಮನನ್ನು ನಾವು ಮರೆತಿರುವದರಿಂದಲೇ ನಮ್ಮ ಭುಜಗಳನ್ನು ನಾವು ನೋಡಿಕೊಂಡು ನಮ್ಮೊಳಗೆ ನಾವು ಉಬ್ಬಿ, ನಮ್ಮ ಬೆನ್ನು ನಾವು ಚಪ್ಪರಿಸಿಕೊಂಡು ನಾವು ಮಹಾ ಬಲಾಢ್ಯರೆಂದು ನಾವೇ ಉಬ್ಬುತ್ತೇವೆ; ಅಥವಾ ನಾವು ದುರ್ಬಲರೆಂದು ಭಾವಿಸಿ, ಅನ್ಯರ ಬಲವು ಅಗಾಧವಾದದ್ದೆಂದು ತಿಳಿದು ಅದಕ್ಕಾಗಿ ಅಂಜಿ ನಡಗುತ್ತೇವೆ. ಮತ್ತು ಆ ಷಡ್ಗುಣೈಶ್ವರ್ಯಸಂಪನ್ನ ಪರಮಾತ್ಮನ ತಂತ್ರಕ್ಕನುಸರಿಸಿ, ಸೃಷ್ಟಿಯು ಕೆಡುತ್ತ–ನೆಟ್ಟಗಾಗುತ್ತ, ಮತ್ತೆ ಕೆಡುತ್ತ–ನೆಟ್ಟಗಾಗುತ್ತ ನಡೆದಿರಲು, ಅದಕ್ಕೆ ನಾವೇ ಕಾರಣವೆಂತಲೂ, ನಾವು ದೇಶೋದ್ಧಾರಕರೂ, ಅನ್ಯರು ದೇಶ ದ್ರೋಹಿಗಳು ಎಂತಲೂ ಅಭಿಮಾನಪಡುತ್ತೇವೆ. ಪರಮಾತ್ಮನ ಇಚ್ಛೆಯ ಹೊರತು ಈ ಸೃಷ್ಟಿಯೊಳಗಿನ ಒಂದು ಕಡ್ಡಿಯು ಕೂಡ ಅಲ್ಲಾಡಲು ಅಸಮರ್ಥವಾಗಿರಲು, ನಮ್ಮ ಈ ಬಯಲನುಡಿಯು ಅಹಂಕಾರದ್ದಲ್ಲದೆ ಮತ್ತೇನು? ಕಾಶಿಮುಖಾನ, ಹೀಗೆ ನಾವು ಅಹಂಕಾರದಿಂದ ದೇವರನ್ನು ಮರೆತು, ಮನಸ್ಸಿಗೆ

ಬಂದಂತೆ ನಡೆದರೆ, ''ಮಾಡಿದವನು ಉಂಡಾನು ಮಣೆಯಂತಹ ಕಡಬು'' ಎಂದು ತಿಳಿದು, ಆತ್ಮನ ಸ್ವಾತಂತ್ರ್ಯಹರಣ ಮಾಡಲಾರದೆ ಆ ದೇವರು ನಾವು ಮಾಡಿದ್ದನ್ನು ಸುಮ್ಮನೆ ನಡೆಯಗೊಡುವನು. ಆದ್ದರಿಂದ ದೇವರು ನಮಗೆ ಕೊಟ್ಟಿರುವ ಈ ಸ್ವಾತಂತ್ರ್ಯದ ದುರುಪಯೋಗ ಮಾಡಿ ನಾವು ಅಹಂಕಾರದಿಂದ ದುಷ್ಕರ್ಮಗಳನ್ನೂ, ಸತ್ಕರ್ಮಗಳನ್ನೂ ಮಾಡುತ್ತ ನಮ್ಮ ಕರ್ಮಪ್ರವಾಹದಲ್ಲಿಯೇ ನಾವು ಅಳುತ್ತ ನಗುತ್ತ ತೇಲಿಹೋಗಹತ್ತಿದರೆ, ಅದಕ್ಕೆ ದೇವರೇನು ಮಾಡಬೇಕು? ಆದರೆ ನಾವು ಹೀಗೆ ಮಾಡದೆ ಅಹಂಕಾರ ತ್ಯಾಗ ಮಾಡಿ, ಅಂದರೆ ಆತ್ಮಶುದ್ಧಿಯನ್ನು ಪಡೆದು ಆತನಿಗೆ ಶರಣು ಹೋದರೆ ಆತನು ನಮ್ಮ ಯೋಗಕ್ಷೇಮವನ್ನು ತಲೆಯ ಮೇಲೆ ಹೊತ್ತು ನೋಡುವನು ! ಆದ್ದರಿಂದಲೇ ಭಗವಂತನು ಗೀತೆಯಲ್ಲಿ ''ಅನನ್ಯಾಶ್ಚಿತಂಯಂತೋ ಮಾಂ ಯೆಜನಾಃ ಪರ್ಯುಪಾಸತೇ । ತೇಷಾಂನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ॥'' ಎಂದು ಕಂಠರವದಿಂದ ಹೇಳಿರುತ್ತಾನೆ. ಹಾಗೆ ಶರಣುಹೋಗಿ ಕಾರ್ಯ ಮಾಡದೆ ನಾವು ಅಹಂಕಾರದಿಂದ ನೆಟ್ಟಗಾಗಲಿ, ಸೊಟ್ಟಗಾಗಲಿ ನಡೆಯುತ್ತಿರಲು ನಮ್ಮ ಅಹಂಕಾರದ ಮೂಲಕ ಆ ಲೀಲಾಮೂರ್ತಿಯ ವಕ್ರದೃಷ್ಟಿಯಾದರೆ, ನಮ್ಮ ಬಲವು ಎಷ್ಟಿದ್ದರೂ, ಮತ್ತೂ ನಮ್ಮ ಅಹಂಕಾರದ ಸತ್ಕೃಯೆ– ದುಷ್ಕ್ರಿಯೆಗಳು ಎಂತಹವಿದ್ದರೂ ಅವೆಲ್ಲ ಮಣ್ಣುಗೂಡಿ ಹೋಗುವವು. ಕಾಶಿಮಖಾನ, ದೇವತೆಗಳನ್ನೂ ಬಗ್ಗುಬಡೆದು ಮಹಾ ಸಮರ್ಥನೆನಿಸಿದ ರಾವಣನ ವೈಭವವನ್ನು ಈಶ್ವರೇಚ್ಛೆಯಿಂದ ಅವನ ಕಣ್ಣು ಮುಂದೆಯೇ ಮಂಗಗಳು ಮಣ್ಣುಗೂಡಿಸಲಿಲ್ಲವೆ? ತಾನು ಲೋಕವಿಜಯಿಯೆಂದು ಅಹಂಕಾರಪಡುತ್ತಿದ್ದ ಗ್ರೀಕ ಚಕ್ರವರ್ತಿಯಾದ ಅಲೆಕ್ಸಂದರನು ಸತ್ತುಬೀಳಲು, ಅವನ ಶವವನ್ನು ಕೇಳುವವರೇ ಇದ್ದಿಲ್ಲವಂತಲ್ಲ! ಅದರಂತೆ ಅಶೋಕನ ಅಖಂಡ ಸಾಮ್ರಾಜ್ಯ, ಚಾಲುಕ್ಯ 2ನೇ ಪುಲಕೇಶಿಯ ಪರಮೇಶ್ವರನೆಂಬ ಬಿರುದು ಎತ್ತಕಡೆಗೆ ಹೋದವು? ಆದ್ದರಿಂದ ಕಾಶಿಮಖಾನ, ಈ ನಾಶವಂತ ಜಗತ್ತಿನ ವ್ಯವಹಾರವೆಲ್ಲ ಈಶ್ವರೇಚ್ಛೆಯಿಂದಲೇ ನಡೆದಿರುವದೆಂಬ ಎಚ್ಚರದಿಂದ ನಾವು ಅಹಂಕಾರ ಪರಿತ್ಯಾಗ ಮಾಡಿ, ಅಂದರೆ ಆತ್ಮಶುದ್ಧಿಯಿಂದ ಆತನಿಗೆ ಶರಣುಹೋದರೆ ನಮ್ಮನ್ನು ಆತನು ಸಂಕಟಮುಕ್ತಮಾಡಿಯೇ ಮಾಡುವನು; ಇದಕ್ಕೆ ನಮ್ಮ ಪುರಾಣದಲ್ಲಿ ದ್ರೌಪದಿ–ಗಜೇಂದ್ರ ಮೊದಲಾದವರ ಹಲವು ಉದಾಹರಣೆಗಳಿರುವವು; ಆದ್ದರಿಂದ ಅಹಂಕಾರಿಗಳಾದ ಕ್ಷುದ್ರ ನರರು ಎಷ್ಟು ಸಮರ್ಥರಿದ್ದರೂ ಅಸಹಯೋಗಿಗಳು ಅವರನ್ನು ಲೆಕ್ಕಸದೆ, ಪರಮಾತ್ಮನಿಗೆ ಶರಣು ಹೋಗಿ, ಆತ್ಮಶುದ್ಧಿಯಿಂದ ದೇಹತ್ಯಾಗ ಮಾಡಲಿಕ್ಕೂ ಸಿದ್ಧರಾಗುವದಲ್ಲದೆ, ದೇಹತ್ಯಾಗವಾದರೆ ಪುನರ್ಜನ್ಮದಿಂದ ದೇವರಿಗೆ ದಾದು ಹಚ್ಚಿಯೇ ತೀರೇನೆಂಬ ದೈವೀಭಾವವಹಿಸಿ, ದುಷ್ಟರೊಡನೆ ಅಸಹಯೋಗವನ್ನು ಬಳಸಿದರೆ ಈಶ್ವರೇಚ್ಛೆಯಿಂದ ಏನಾದೀತು, ಏನಾಗಲಿಕ್ಕಿಲ್ಲ! ಮುಖ್ಯ ಮಾತು, ಆತ್ಮಶುದ್ಧಿಯಿಂದ ಅಂದರೆ, ಅಹಂಕಾರತ್ಯಾಗ ಪೂರ್ವಕವಾಗಿ ದೇವರಿಗೆ ಶರಣು ಹೋಗತಕ್ಕದ್ದು. ಹೀಗೆ ಮಾಡಿದರೂ ಕಾರ್ಯವಾಗದಿದ್ದರೆ ದೇವರು ಸತ್ತಿರುವನೆಂದು ಹೇಳಬೇಕಾದೀತು; ಆದರೆ ಆತನು ಆಧಾರ ದಿಂದಲೇ ನಿಂತಿರುವ ಸೃಷ್ಟಿಯು ಇನ್ನೂ ಇರುತ್ತಿರಲು ಅವನು ಸತ್ತಿರುವದು ಹ್ಯಾಗೆ? ಅಂದ ಬಳಿಕ ಅಸಹಯೋಗಿಗಳು ತಮ್ಮ ಅಹಂಕಾರ ತ್ಯಾಗವಾಗುವವರೆಗೆ ಸೆರೆಮನೆಗಾದರೂ ಹೋಗಬೇಕು; ಸತ್ತಾದರೂ ಸಾಯಬೇಕು.

ಕಾಶಿಮಖಾನ– ಮಹಾತ್ಮನ್, ತಮ್ಮ ಚರಣಕ್ಕೆ ಅನಂತ ಪ್ರಣಾಮಗಳು! ಗುರುದೇವಾ, ಮದಾಂಧನಾದ ನನ್ನ ಕಣ್ಣುಗಳು ಈಗ ಚನ್ನಾಗಿ ತೆರೆದವು! ಹೌದು, ನೀವು ಹೇಳಿದಂತೆ ಈ ಜಗತ್ತಿನ ಒಡೆಯನು–ಸಾರ್ವಭೌಮರ ಸಾರ್ವಭೌಮನು ಒಬ್ಬನಿರುವನು ಹೌದು. ಆತನನ್ನೇ ನಾವು 'ಅಲ್ಲಾ' ಎಂದು ಪ್ರಾರ್ಥಿಸುವೆವು. ನೀವು ಹೇಳಿದಂತೆ ನಾವೆಲ್ಲರೂ ಆ ಪರಮಾತ್ಮನು ತನ್ನ ಆಟಕ್ಕಾಗಿ ರಚಿಸಿದ ಆಟಿಕೆಗಳೇ ಸರಿ! ಅಂದಬಳಿಕ ನಮ್ಮ ಆಗುಹೋಗುಗಳು ಆತನನ್ನಲ್ಲದೆ ಬೇರೆ ಯಾರನ್ನು ಕೂಡಿರುವವು? ಆದರೆ ಗುರುದೇವಾ, ನೀನು ಕನಿಕರದಿಂದ ಬೋಧ ಮಾಡಿದೆ; ನಿನ್ನ ವಾತ್ಸಲ್ಯದ ಬೋಧವನ್ನು ನಾವು ಪರವಶರಾಗಿ ಕೇಳಿಯೂ ಕೇಳಿದೆವು; ಆದರೆ ಆತ್ಮಶುದ್ಧಿಯನ್ನು ಪಡೆದು ಅಂದರೆ ಅಹಂಕಾರ ಪರಿತ್ಯಾಗ ಮಾಡಿ ನಾವು ದೇವರಿಗೆ ಹ್ಯಾಗೆ ಶರಣು ಹೋಗಬೇಕು? ದೇವರಿಗೆ ದಾದು ಹತ್ತುವಷ್ಟು ಆತ್ಮಬಲವು ನಮ್ಮಲ್ಲಿ ಹ್ಯಾಗೆ ಉಂಟಾದೀತು?

ಮಾಧವಾಚಾರ್ಯ–ಕಾಶಿಮಖಾನ, ಅಹಿಂಸಾತ್ಮಕ ಅಸಹಯೋಗ ಮಾಡುವದು ಹಾದಿಯ ಮೇಲೆ ಬಿದ್ದಿಲ್ಲ, ನಮ್ಮ ಹದಿನೆಂಟು ಪುರಾಣಗಳಲ್ಲಿ ಸರ್ವಶ್ರುತನಾದ ಅಹಿಂಸಾತ್ಮಕ ಅಸಹಯೋಗಿಯೆಂದರೆ ಮಹಾತ್ಮನಾದ ಒಬ್ಬ ಪ್ರಹ್ಲಾದನು! ಆ ಸತ್ವಶಾಲಿಯು ಕೇವಲ ಈಶ್ವರನಿಗೆ ಶರಣು ಹೋದವನಾದ್ದರಿಂದ ಲೌಕಿಕ ದೃಷ್ಟಿಯಿಂದ ಅತ್ಯಂತ ದುರ್ಬಲನಾಗಿದ್ದನು. ಈತನ ಹೊರತು ಅಹಿಂಸಾತ್ಮಕ ಅಸಹಯೋಗ ಬಳಸಿದವರು ಅಪರೂಪವೆಂದು ಹೇಳಬಹುದು. ಹಿಂಸಾತ್ಮಕ ಅಸಹಕಾರವನ್ನು ಅಂದರೆ ಪ್ರತಿಯೋಗವನ್ನು ಬಳಿಸಿದವರಿಂದಲೇ ಎಲ್ಲ ಪುರಾಣಗಳೂ, ಮಹಾಭಾರತ–ರಾಮಾಯಣಗಳೂ, ಆಧುನಿಕ ಇತಿಹಾಸಗಳೂ, ವಿಶೇಷವಾಗಿ ತುಂಬಿರುತ್ತವೆ. ವ್ಯವಹಾರದಲ್ಲಿಯಾದರೂ ಸಹಯೋಗ–ಪ್ರತಿಯೋಗ ಮುಂತಾದವುಗಳೇ ಸಾರ್ವತ್ರಿಕ ಬಳಕೆಗೆ ಯೋಗ್ಯವಾಗಿರುವವು; ಅವುಗಳಂತೆ ಅಹಿಂಸಾತ್ಮಕ ಅಸಹಯೋಗವನ್ನು ಬಳಸುವದು ಸರ್ವರಿಗೆ ಶಕ್ಯವಲ್ಲ, ಮಹಾತ್ಮನಾದ ಪ್ರಹ್ಲಾದನಂತೆ ಆತ್ಮಶುದ್ಧಿಯುಳ್ಳ ದೇವಭಕ್ತರು ಮಾತ್ರ ಅಹಿಂಸಾತ್ಮಕ ಅಸಹಯೋಗವನ್ನು ಬಳಿಸಬಹುದು; ಅಥವಾ ಅಸಹಯೋಗದ ವ್ರತವನ್ನು ಕೈಕೊಂಡು ದೀಕ್ಷಿತನಾದ ಬಳಿಕ, ಅಸಹಯೋಗವನ್ನು ಆಚರಿಸುತ್ತಾಚರಿಸುತ್ತ ಅದೇ ಜನ್ಮದಲ್ಲಿ ಅಥವಾ ಜನ್ಮಾಂತರದಲ್ಲಿ ಆತ್ಮಶುದ್ಧಿಯನ್ನು ಪಡೆಯಲಿಚ್ಛಿಸುವವನೊಬ್ಬನು ಅಸಹಯೋಗವನ್ನು ಆಚರಿಸಬಹುದು. ಹ್ಯಾಗಂದರೆ, ಹೃದಯವು ಸನ್ಯಸ್ತವಾದ ಬಳಿಕ ತಲೆ ಬೋಳಿಸಿಕೊಂಡು ಕ್ಯಾವಿಯ ಬಟ್ಟೆಗಳನ್ನು ಹೊದ್ದು, ಜುಟ್ಟು–ಜನಿವಾರಗಳನ್ನು ಕಿತ್ತೊಗೆದು, ಸನ್ಯಾಸಾಶ್ರಮವನ್ನು ಸ್ವೀಕರಿಸ ಬಹುದು. ಅಥವಾ ಮೊದಲೇ ತಲೆ ಬೋಳಿಸಿಕೊಂಡು ಕ್ಯಾವಿಯ ಬಟ್ಟೆಗಳನ್ನು ಹೊದ್ದು, ಜುಟ್ಟು– ಜನಿವಾರಗಳನ್ನು ಕಿತ್ತೊಗೆದು ಸನ್ಯಾಸಿಯ ಸೋಗು ಹಾಕಿಕೊಂಡ ತಪ್ಪಿಗಾಗಿ ಸನ್ಯಾಸ ಧರ್ಮಗಳನ್ನು ಮನಃಪೂರ್ವಕವಾಗಿ ಆಚರಿಸಿ, ಸನ್ಯಸ್ತಹೃದಯನಾಗಬಹುದು. ಅದರಂತೆಯೇ ಆತ್ಮಶುದ್ಧಿಯುಳ್ಳವನೂ, ಆತ್ಮಶುದ್ಧಿಯನ್ನು ಪಡೆಯಲಿಚ್ಛಿಸುವವನೂ ಮಾತ್ರ ಅಹಿಂಸಾತ್ಮಕ ಅಸಹಕಾರವನ್ನು ಬಳಿಸಬಹುದು. ಹೀಗೆ ಮಾಡದೆ ಕುಣಿಯುವವರನ್ನು ನೋಡಿ, ಕುಣಿಯುವದಕ್ಕಾಗಿ ಅಸಹಯೋಗಿಗಳ ಸೋಗು ಹಾಕಿ ಅಸಹಯೋಗವ್ರತವನ್ನು ಆಚರಿಸಲಾರದ ಡಾಂಭಿಕರ ಸ್ವರೂಪ ನಿರ್ಣಯವು ಬೇಗನೆ ಆಗದೆ ಇರದು! ಅಂಥವರ ಬೆನ್ನುಹತ್ತಿ ರಾಷ್ಟ್ರವು

ಪಶ್ಚಾತ್ತಾಪಕ್ಕೆ ಮಾತ್ರ ಗುರಿಯಾಗಬೇಕಾದೀತು. ಒಟ್ಟಿಗೆ ದೇವರಿಗೆ ದಾದು ಹಚ್ಚಿಯೇ ತೀರುವೆನು, ಈ ಕೆಲಸದಲ್ಲಿ ದೇಹಪಾತವಾದರೆ ಪುನರ್ಜನ್ಮ ಹೊಂದಿಯಾದರೂ ದೇವರಿಗೆ ದಾದು ಹಚ್ಚೇನು, ಎಂಬ ನಿರ್ಧಾರದಿಂದ ಅಸಹಯೋಗಿಗಳು ದೇವರಿಗೆ ಮೊರೆಯಿಡುತ್ತ ಆತ್ಮಶುದ್ಧಿಯನ್ನು ಪಡೆಯುತ್ತ ಹೋದರೆ ಅಂಥ ಮಹಾತ್ಮರಿಂದ ಅವರ ಸಹವಾಸಿಗಳಾದ ದುರ್ಬಲರ ಆತ್ಮಶುದ್ಧಿಯಾಗುವದಂತು ಇರಲಿ, ಮದಾಂಧರಾದ ಬಲಿಷ್ಠರ ಮದವಿಳಿದು, ಅವರೂ ಆತ್ಮಶುದ್ಧಿಯನ್ನು ಪಡೆದು ಪುನಃ ಕೃತಯುಗಕ್ಕೆ ಅಥವಾ ಸತ್ಯಯುಗಕ್ಕೆ ಆರಂಭವಾದೀತು! ಅನಾಥರಿಗೆ ದೇವರೇ ರಕ್ಷಕನಲ್ಲವೆ ? ಆದ್ದರಿಂದ ಶ್ವವೃತ್ತಿಯ ಅನಾಥ ರಾಷ್ಟ್ರವು ಆತ್ಮಶುದ್ಧಿಯಿಂದ ದೇವರಿಗೇ ಮೊರೆಯಿಡತಕ್ಕದ್ದು. ಕಾಶಿಮಖಾನ, ಜಗತ್ತು ಈಗ ನಾಶದ ಪಂಥವನ್ನು ಹಿಡಿದಿದ್ದರೂ ನಮ್ಮ ಪುರಾಣಗಳ ಮತದಂತೆ ಅದರ ನಾಶಕಾಲವು ಇನ್ನೂ ಒದಗಿ ಬಂದಿರುವದಿಲ್ಲ, ಆ ಕಾಲವು ಒದಗಿ ಬರಲಿಕ್ಕೆ ಚತುರ್ಯುಗಗಳು ಹಲವು ಸಾರೆ ಸುತ್ತಬೇಕಾಗಿರುವದು; ಆದ್ದರಿಂದ ನಮ್ಮ ಪುರಾಣಮತದಂತೆ ಈ ಕಲಿಯುಗವು ಹೋಗಿ ಪುನಃ ಕೃತಯುಗವು ಬರಬೇಕಾಗಿರುವದು. ಆ ಸತ್ಯಯುಗದ ಬರುವಿಕೆಗೆ ಸಹಾಯವಾದರೆ, ಅಹಿಂಸಾತ್ಮಕ ಅಸಹಯೋಗದಿಂದಲೇ ಸಹಾಯವಾದೀತಲ್ಲದೆ, ಒಳಗೆ ಹೆಗ್ಗಣವಿಟ್ಟು ಮೇಲೆ ಗಿಲಾಯಿ ಮಾಡಿದಂತೆ ಇರುವ ಆತ್ಮಶುದ್ಧಿಯಿಲ್ಲದ ಸಹಯೋಗ, ಪ್ರತಿಯೋಗ, ಪ್ರತಿಯೋಗಿ ಸಹಯೋಗ ಮುಂತಾದ ಉಪಾಯಗಳಿಂದ ಸಹಾಯವಾಗುವ ಸಂಭವವು ತೀರ ಕಡಿಮೆ. ಇನ್ನು ಶ್ರೀ ಭಾಗವತದಲ್ಲಿ ಹೇಳಿದಂತೆ ಅವತಾರ ತಾಳಿದ ಪರಮಾತ್ಮನ ಮೈಮೇಲಿನ ಗಾಳಿ ತಾಕಿ, ರಾಷ್ಟ್ರದ ಆತ್ಮಶುದ್ಧಿಯು ಆದರೆ ಆಗಬೇಕು.

ಕಾಸಿಮಖಾನ—ಭಗವನ್, ಈಶ್ವರಾವತಾರದ ಮಾತು ಹ್ಯಾಗೇ ಇರಲಿ; ಅದು ನಮ್ಮ ಕೈಯೊಳಗಿನದಲ್ಲ; ಮನುಷ್ಯ ವಿಚಾರದಂತೆ ಎಂದಾದರೂ ವ್ಯಕ್ತಿಯ ಶುದ್ಧಿಗಾಗಿ ಅಥವಾ ರಾಷ್ಟ್ರದ ಶುದ್ಧಿಗಾಗಿ ಅಥವಾ ಜಗತ್ತಿನ ಶುದ್ಧಿಗಾಗಿ ಅಧರ್ಮಿಷ್ಠರೊಡನೆ ಅಹಿಂಸಾತ್ಮಕ ಅಸಹಯೋಗವನ್ನು ಬಳಿಸುವದೇ ತಿಳಿಬೀಜದಂತೆ ಶುದ್ಧಿಕಾರಕವಾದದ್ದಾಗುವದರಿಂದ, ಇದರ ಜ್ಞಾನವಿರುವದು ಅವಶ್ಯವು; ಆದ್ದರಿಂದ ಆತ್ಮಶುದ್ಧಿಯುಳ್ಳ ಈಶ್ವರನಿಷ್ಠ ಅಸಹ ಯೋಗಿಯು ಲೋಕಕಲ್ಯಾಣವನ್ನು ಹ್ಯಾಗೆ ಸಾಧಿಸಬೇಕು? ಆತ್ಮಶುದ್ಧಿಯಿಲ್ಲದ ವಿಷಯನಿಷ್ಠ ಅಸಹಯೋಗಿಯು ಲೋಕಕಲ್ಯಾಣವನ್ನು ಹ್ಯಾಗೆ ಮಾಡಬೇಕು, ಎಂಬದನ್ನು ನಿರೂಪಿಸುವ ಕೃಪೆಯಾಗಬೇಕು.

ಮಾಧವಾಚಾರ್ಯ—ಕಾಸಿಮಖಾನ, ಆತ್ಮಶುದ್ಧಿಯುಳ್ಳ ಈಶ್ವರನಿಷ್ಠ ಅಸಹಯೋಗಗಳು ಲೋಕಕಲ್ಯಾಣ ಮಾಡುವ ರೀತಿಯನ್ನು ತೋರಿಸಲಿಕ್ಕೆ ಕೃತಯುಗದಲ್ಲಿ ಆಗಿಹೋದ ಮಹಾ ಭಗವದ್ಭಕ್ತ ಪ್ರಹ್ಲಾದನು ಉದಾಹರಣವಾಗಿರುವನು. ಆತನ ತಂದೆಯಾದ ಹಿರಣ್ಯಕಶಿಪುವು ತ್ರೈಲೋಕ್ಯದ ಸ್ವಾತಂತ್ರ್ಯವನ್ನು ಅಪಹರಿಸಿ, ತ್ರಿಲೋಕಗಳಿಗೂ ಕಂಟಕಪ್ರಾಯನಾಗಿರಲು, ತನ್ನ ಆ ತಂದೆಯೊಡನೆ ಆ ಪ್ರಹ್ಲಾದನೊಬ್ಬನೇ ಅಸಹಯೋಗವನ್ನು ಬಳಿಸಿ ಈಶ್ವರನ ಸಹಾಯದಿಂದ ತ್ರಿಲೋಕಗಳನ್ನು ಸಂಕಟಮುಕ್ತಮಾಡಿದನು. ಹಿರಣ್ಯಕಶಿಪುವು ಅಹಿಂಸಾತ್ಮಕ ಅಸಹಯೋಗಿಯಾದ ತನ್ನ ಮಗ ಪ್ರಹ್ಲಾದನನ್ನು ಬಗ್ಗುಬಡಿಯುವದಕ್ಕಾಗಿ ಮಾಡಿದ ಘೋರತರದ ಉಪಾಯಗಳು

ಒಂದೆರಡಲ್ಲ. ಆ ದುಷ್ಟ ತಂದೆಯು ಸಾತ್ವಿಕನಾದ ಮಗನನ್ನು ಗುಡ್ಡದ ಮೇಲಿಂದ ಕೆಳಕ್ಕೆ ದೂಡಿಸಿದನು, ಸಮುದ್ರದಲ್ಲಿಮುಣುಗಿಸಿದನು, ಬೆಂಕಿಯಲ್ಲಿ ಒಗಿಸಿದನು,ತನ್ನ ಮುದ್ದುಮಗನಿಗೆ ತಾಯಿಯ ಕೈಯಿಂದ ವಿಷ ಕುಡಿಸಿದನು;' ಆದರೆ ಅವುಗಳಿಗೆಲ್ಲ ಪ್ರಹ್ಲಾದನು ಸಂತೋಷದಿಂದ ಈಡಾಗುತ್ತಿರಲು,ಅಷ್ಟು ಸಾರೆ ದೇಹಪಾತವಾಗಿ ಪುನರ್ಜನ್ಮ ಹೊಂದಿದವನಂತೆ, ಈಶ್ವರನೇ ಕೈ ಹಿಡಿದು ಅವನನ್ನು ಸಂಕಟದಿಂದ ಮುಕ್ತಮಾಡುತ್ತ ಬಂದನು. ಇಷ್ಟು ಮಾಡಿದರೂ ಪ್ರಹ್ಲಾದನು ತಂದೆಗೆ ಕೇಡುಬಗೆಯಲಿಲ್ಲ; ತಂದೆಯ ಮೇಲೆ ಸಿಟ್ಟಾಗಲಿಲ್ಲ; ತಂದೆಯ ವಿಷಯವಾಗಿ ಅಪೂಜ್ಯ ಬುದ್ಧಿಯನ್ನು ತಾಳಲಿಲ್ಲ; ತನ್ನ ಪೂಜ್ಯತಂದೆಯು ವಿಧಿಸಿದ ಶಿಕ್ಷೆಗಳನ್ನು ಅವಮಾನ್ಯ ಮಾಡಲಿಲ್ಲ! ಆ ಪುಣ್ಯಶಾಲಿಯು,ತಂದೆಯೊಡನೆ ಸಹಯೋಗ ಬಳಿಸಿದ್ದರೆ, ಪ್ರಾಪ್ತವಾಗತಕ್ಕ ತ್ರೈಲೋಕ್ಯಾಧಿಪತ್ಯದ ಆಸೆಯನ್ನಂತು ಎಂದೋ ಬಿಟ್ಟುಬಿಟ್ಟಿದ್ದನು! ಹೀಗೆ ಶ್ರೇಷ್ಠತರ ಸ್ವಾರ್ಥತ್ಯಾಗಿಯಾದ ನಿರ್ಮಲಾಂತಃಕರಣದ ಭಗವದ್ಭಕ್ತನು ಅನನ್ಯಗತಿಕನಾಗಿ ಈಶ್ವರನಿಗೆ ಶರಣು ಹೋದದ್ದರಿಂದ, ಈಶ್ವರನೇ ಆತನನ್ನು ಎಲ್ಲ ಸಂಕಟಗಳಿಂದ ಮುಕ್ತಮಾಡಿದನು. ಕಡೆಗೆ ಆತನ ತಂದೆಯು ಸಂತಾಪದ ಭರದಿಂದ ಮೈಮರೆತು ಮಗನಿಗೆ—''ನಿನ್ನನ್ನು ರಕ್ಷಿಸುವ ದೇವರೆಲ್ಲಿ? ತೋರಿಸು!'' ಎಂದು ಸಿಂಹಾಸನದಿಂದ ಧುಮುಕಿ ಮಗನನ್ನು ಹಿರಿದ ಖಡ್ಗದಿಂದ ಸಂಹರಿಸಹೋಗಲು, ಮಹಾತ್ಮನಾದ ಪ್ರಹ್ಲಾದನು ಶಾಂತವೃತ್ತಿಯಿಂದ—''ತಂದೆಯೇ, ದೇವರು ನಿನ್ನಲ್ಲಿ, ನನ್ನಲ್ಲಿ,ಸರ್ವತ್ರದಲ್ಲಿ ಇರುವನೆ''ಂದು ಹೇಳಿದನು. ಅದನ್ನು ಕೇಳಿ ಹಿರಣ್ಯಕಶಿಪುವು ಮತ್ತಿಷ್ಟು ರೊಚ್ಚಿಗೆದ್ದು—''ನಿನ್ನ ದೇವರು ಈ ಕಂಬದಲ್ಲಿರುವನೆಯೇ'' ಎಂದು ಕೇಳಲು—''ಇದೋ ಈ ಕಂಬದಲ್ಲಿಯು ಇರುವನು'' ಎಂದು ಆ ಮಹಾತ್ಮನು ಬೆರಳು ಮಾಡಿ ತೋರಿಸಿದ ಕೂಡಲೆ ಭಕ್ತಾಧೀನನಾದ ಪರಮಾತ್ಮನು ಕಂಬದಿಂದ ಹೊರಹೊರಟು ಹಿರಣ್ಯಕಶಿಪುವನ್ನು ಸಂಹರಿಸಿ, ತ್ರೈಲೋಕ್ಯದ ಸಂಕಟವನ್ನು ದೂರಮಾಡಿದ್ದಲ್ಲದೆ, ಹಿರಣ್ಯಕಶಿಪುವಿನ ಅಭೇದ್ಯ ಅಹಂಕಾರವನ್ನು ಶಿಥಿಲ ಮಾಡಿದನು! ಕಾಸಿಮಖಾನ, ಈವೊತ್ತಿಗೂ ಮನುಷ್ಯರಂತು ಇರಲಿ, ದೇವತೆಗಳು ಕೂಡ ಪ್ರಹ್ಲಾದನಲ್ಲಿ ಪೂಜ್ಯಬುದ್ಧಿಯನ್ನು ತಾಳಿ ಆತನ ಸ್ಮರಣದಿಂದ ಆತ್ಮಶುದ್ಧಿಯನ್ನು ಪಡೆಯುತ್ತಿರುವರು! ಇಂಥ ಘನವಾದ ಯೋಗ್ಯತೆಯವರೇ ಬಲಿಷ್ಠರೊಡನೆ ಅಹಿಂಸಾತ್ಮಕ ಅಸಹಯೋಗವನ್ನು ಬಳಿಸಿ,ಜಗತ್ತನ್ನು ಸಂಕಟಮುಕ್ತ ಮಾಡುವರಲ್ಲದೆ, ಜಗತ್ತನ್ನು ಸನ್ಮಾರ್ಗಕ್ಕೆ ಹಚ್ಚುವರು. ಇಂಥ ಮಹಾತ್ಮರೇ, ರಾಷ್ಟ್ರದ ಮುಂದಾಳುವಾಗಿರಲು ತಕ್ಕವರು.

ಕಾಸಿಮಖಾನ—ಮಹಾತ್ಮನ್, ಇದು ಯುಗಾಂತರದ ಮಾತಾಯಿತು. ಅದರಲ್ಲಿಯೂ ಈ ಸಂಗತಿಯು ಸತ್ಯಯುಗದಲ್ಲಿ ಒದಗಿದ್ದೆಂದು ಅಪ್ಪಣೆ ಕೊಡಿಸೋಣವಾಯಿತು. ಆದರೆ ಈ ಕಲಿಯುಗದಲ್ಲಿ ಇಂಥ ಶುದ್ಧಾಂತಃಕರಣದ ಆತ್ಮಬಲವುಳ್ಳ ಅಲೌಕಿಕ ಭಗವದ್ಭಕ್ತರು ವಿರಲ; ತನಗೆ ಬರುವ ಸಂಕಟಗಳನ್ನೆಲ್ಲ ದೇವರು ನಿವಾರಣಮಾಡುವನೆಂಬ ನಂಬಿಗೆಯಿದ್ದರೆ, ಈ ಕಲಿಯುಗದಲ್ಲಿ ಯಾರಾದರೂ ಬಲಿಷ್ಠರೊಡನೆ ಅಸಹಯೋಗವನ್ನು ಬಳಿಸಬಹುದು; ಆದರೆ ಆ ನಂಬಿಗೆಯು ಹ್ಯಾಗೆ ದೊರೆಯಬೇಕು?

ಮಾಧವಾಚಾರ್ಯ—ಕಾಸಿಮಖಾನ, ಈ ಕಲಿಯುಗದಲ್ಲಿಯಾದರೂ ಇಂಥ ಭಗವದ್ಭಕ್ತರು ಇರಬಹುದು, ಇಲ್ಲೆಂದು ಹೇಳಲಿಕ್ಕಾಗುವದಿಲ್ಲ; ಆದರೆ ಭಗವದ್ಭಕ್ತರೆಲ್ಲ ಅಸಹಕಾರ ಮಾಡಬೇಕೆಂಬ ನಿಯಮವಿಲ್ಲ, ನಿಜವಾಗಿಯೆಂದರೆ ಅಂಥ ಮಹಾತ್ಮರು ಸಹಕಾರಿಗಳೂ ಅಲ್ಲ-ಅಸಹಕಾರಿಗಳೂ ಅಲ್ಲ, ಜಗದ್ಧಿತಕಾರಿಗಳು; ಅರ್ಥಾತ್ ಪ್ರೇಮ ಕಾರಿಗಳು! ಅವರು ಜಗತ್ತಿನ ಮೇಲೆ ಪ್ರೇಮಮಾಡುತ್ತ ಸದಾನಂದದಲ್ಲಿರತಕ್ಕವರು; ಆದರೆ ಜಗತ್ತಿನಲ್ಲಿ ಅಧರ್ಮವು ಹೆಚ್ಚಾಗಿ ಜನಪೀಡೆಯು ಹೆಚ್ಚಿದರೆ, ಅವರು ಜಗತ್ತನ್ನು ಪ್ರೀತಿಸುತ್ತಲೇ ಜಗತ್ತಿನ ಕಲ್ಯಾಣಕ್ಕಾಗಿ ಸಹಕಾರವನ್ನಾಗಲಿ, ಅಸಹಕಾರವನ್ನಾಗಲಿ ಬಳಿಸಿ ಜಗತ್ತಿನಲ್ಲಿ ಧರ್ಮಸ್ಥಾಪನೆಯನ್ನು ಮಾಡುವರು. ಇವರು ಯುಗಧರ್ಮದಂತೆ ಆಚರಿಸುವವರಾದದ್ದರಿಂದ, ಪ್ರಹ್ಲಾದನು ಕೃತಯುಗದಲ್ಲಿ ದೇವರೊಡನೆ ಪ್ರಸಿದ್ಧರೀತಿಯಿಂದ ವ್ಯವಹರಿಸಿದಂತೆ ಈಗ ಅವರು ವ್ಯವಹರಿಸುತ್ತಿರಲಿಕ್ಕಿಲ್ಲ, ಕಾಸಿಮಖಾನ, ದೇವರು ಪ್ರಹ್ಲಾದನಿಗೆ—''ನಾನು ನಿನ್ನ ಸಂಕಟಗಳನ್ನು ನಿವಾರಣ ಮಾಡುವೆ''ನೆಂದು ವಚನ ಕೊಟ್ಟಿದ್ದಿಲ್ಲ; ಅದರಂತೆ ಪ್ರಹ್ಲಾದನಾದರೂ ತಾನು ದೇವರಿಂದ ಸಂಕಟಮುಕ್ತನಾಗುವೆನೆಂಬ ನಂಬಿಗೆಯಿಂದ ತಂದೆಯೊಡನೆ ಅಸಹಯೋಗವನ್ನು ಬಳಿಸಲಿಲ್ಲ, ತಾನು ಬದುಕಲಿ-ಸಾಯಲಿ, ತನ್ನ ತಂದೆಯ ಅಹಂಕಾರದ ಪರಸ್ವಾತಂತ್ರ್ಯಾಪಹಾರಕ ಆಚರಣೆಯು ಧರ್ಮದೃಷ್ಟಿಯಿಂದ ತನಗೆ ಸರಿಬೀಳದ್ದರಿಂದ, ಆತನೊಡನೆ ಅಸಹಯೋಗವನ್ನು ಬಳಿಸುವದು ಈಶ್ವರನಿಷ್ಠನಾದ ತನ್ನ ಕರ್ತವ್ಯವೆಂದು ತಿಳಿದು,ಆತನು ಅಸಹಯೋಗವನ್ನು ಬಳಿಸಿದನು. ವಿಷಯನಿಷ್ಠ ಅಹಂಕಾರಿಗಳಂತೆ ಆತನು, ಜಗತ್ತಿನಲ್ಲಿತಾನು ಪ್ರಸಿದ್ಧನಾಗಬೇಕೆಂಬ ಆಸೆಯಿಂದಾಗಲಿ ತನಗೆ ಸ್ವರಾಜ್ಯವು ದೊರೆಯಬೇಕೆಂಬ ಆಸೆಯಿಂದಾಗಲಿ ತಂದೆಯೊಡನೆ ಅಸಹಯೋಗ ಬಳಿಸಲಿಲ್ಲ, ಆತನು ತಂದೆಯೊಡನೆ ಸಹಯೋಗ ಬಳಿಸಿದ್ದರೆ, ಅಂದರೆ ಆತನಿಗೆ ಅನುಕೂಲಿಸಿ ನಡೆದಿದ್ದರೆ ತಂದೆಯ ತ್ರೈಲೋಕ್ಯದ ಅಧಿಪತ್ಯವು ಅವನಿಗೆ ಅನಾಯಾಸವಾಗಿ ದೊರೆತು, ಆತನ ಕೀರ್ತಿಯು ತ್ರೈಲೋಕ್ಯದಲ್ಲಿ ಹಬ್ಬುತ್ತಿತ್ತು; ಆದರೆ ನಿರಿಚ್ಛನಾದ ಪ್ರಹ್ಲಾದನಿಗೆ ಭಗವಂತನ ಚರಣಗಳ ಹೊರತು ಉಳಿದವೆಲ್ಲ ತುಚ್ಛವಾಗಿ ತೋರಿ ಅವುಗಳ ವಿಷಯವಾಗಿ ಅವನು ಪೂರ್ಣ ವೈರಾಗ್ಯ ತಾಳಿದ್ದನು. ತನಗೆ ಶರಣು ಬಂದ ಇಂಥ ನಿಸ್ಪ್ರಹಿಗಳಿಗಲ್ಲದೆ, ಯಾವದೊಂದರ ಆಸೆಯಿಂದ ಅಸಹಯೋಗವನ್ನು ಬಳಿಸುವವರಿಗೆ ದೇವರು ಕೈವಾರಿಯಾಗಲಾರನು. ಕಾಸಿಮಖಾನ, ಸ್ವರಾಜ್ಯಾದಿ ಇಷ್ಟಾರ್ಥಗಳನ್ನು ಕೊಡುವ ದೇವರನ್ನೇ ಕೈವಾರಿಯಾಗಿ ಮಾಡಿಕೊಂಡ ಪ್ರಹ್ಲಾದನಿಗೆ ಭಗವದನುಗ್ರಹಪೂರ್ವಕವಾಗಿ ರಾಜ್ಯಾಧಿಕಾರವು ಪ್ರಾಪ್ತವಾಗಿದ್ದರೆ ಆಶ್ಚರ್ಯವೇನು? ಹೀಗೆ ಭಗವದನುಗ್ರಹಕ್ಕೆ ಪಾತ್ರನಾದ ರಾಜನೇ ರಾಜನು; ಆತನೇ ವಿಷ್ಣ್ವಂಶನು, ಆತನ ಶಾಸನವೇ ಜಗತ್ಕಲ್ಯಾಣಕಾರಕವಾದದ್ದು.

ಕಾಸಿಮಖಾನ—ಆಚಾರ್ಯವರ, ಹಾಗಾದರೆ ಪ್ರಹ್ಲಾದನಂಥ ನಿರಿಚ್ಛ ಈಶ್ವರ ಭಕ್ತರೇ ಅಸಹಯೋಗಿಗಳಾಗಬೇಕು; ಉಳಿದವರು ಆಗಬಾರದೆಂದ ಹಾಗಾಯಿತಲ್ಲ?

ಮಾಧವಾಚಾರ್ಯ—ಕಾಸಿಮಖಾನ, ಪ್ರಹ್ಲಾದನ ಯೋಗ್ಯತೆಯು ಅಲೌಕಿಕವಾದದ್ದರಿಂದ ಅಂಥ ಯೋಗ್ಯತೆಯನ್ನು ತ್ರಿವಿಧವಾಗಿರತಕ್ಕ ಇಡಿಯ ರಾಷ್ಟ್ರವೇ ಪಡೆಯಬೇಕೆಂಬ ಮಾತು ಯಾವಾಗಲೂ ಸಾಧ್ಯವಾಗತಕ್ಕದ್ದಲ್ಲ; ಆದರೆ ಪ್ರಹ್ಲಾದನನ್ನು ರಕ್ಷಿಸಿದಂತೆ

ದೇವರು ತಮ್ಮನ್ನು ರಕ್ಷಿಸಬೇಕೆಂದು ಇಚ್ಛಿಸುವವರು ಅಂದರೆ, ತಾವು ಕರೆದ ಮಾತ್ರದಿಂದ ದೇವರನ್ನು ಬರಮಾಡಿಕೊಳ್ಳುವ ಯೋಗ್ಯತೆಯನ್ನು ಪಡೆಯಲಿಚ್ಛಿಸುವವರು ಪ್ರಹ್ಲಾದನ ಯೋಗ್ಯತೆಯನ್ನೇ ಪಡೆಯಬೇಕಾಗುವದು. ಸಾಮಾನ್ಯ ಜನರು,ಅಂದರೆ ಕೇವಲ ವಿಷಯನಿಷ್ಠ ಜನರು ಸ್ವರಾಜ್ಯದಂಥ ಲೌಕಿಕ ಸುಖಕ್ಕಾಗಿ ಅಸಹಯೋಗವನ್ನು ಬಳಿಸಬೇಕಾದರೆ, ಅತ್ಯಂತ ಸ್ವಾರ್ಥತ್ಯಾಗಿಯಾದ ಈಶ್ವರನಿಷ್ಠನಾದ ಒಬ್ಬ ಲೌಕಿಕ ಮಹಾತ್ಮನ ಅನುಯಾಯಿಗಳಾಗಿ, ಅವನ ಆಜ್ಞೆಯು ವೇದಾಜ್ಞೆಯೆಂದು ತಿಳಿದು ಅದನ್ನು ಅಕ್ಷರಶಃ ಪಾಲಿಸುತ್ತ ಹೋಗಬೇಕು; ಅಂದರೆ ಇಂಥ ಏಕನಿಷ್ಠೆಯ ಆಜ್ಞಾಪಾಲನದ ಪ್ರಭಾವದಿಂದ ವಿಷಯನಿಷ್ಠರ ವಿಷಯ ತೃಷ್ಣೆಯು ಶಿಥಿಲವಾಗುತ್ತ ಅವರ ವೃತ್ತಿಯು ನಿಸ್ಪೃಹವಾಗುತ್ತಹೋಗುವದು! ಹೀಗೆ ಒಬ್ಬ ನಿಸ್ಪೃಹಿಯಾದ ಲೋಕಹಿತದಕ್ಷ–ಈಶ್ವರ–ನಿಷ್ಠ–ಮಹಾತ್ಮನ ಯೋಗದಿಂದ ನಿಸ್ಪೃಹವೃತ್ತಿಯು, ''ಕಸ್ತೂರಿಯ ವಾಸನೆಯು ಸುತ್ತುಮುತ್ತುಪಸರಿಸುವಂತೆ'' ರಾಷ್ಟ್ರದಲ್ಲಿ ನಾಲ್ಕೂಕಡೆಗೆ ಪಸರಿಸಲು, ರಾಷ್ಟ್ರೈಕ್ಯವು ಹೆಚ್ಚಿ ರಾಷ್ಟ್ರದ ಸಾತ್ವಿಕಬಲವು ಹೆಚ್ಚುವದು! ಹೀಗೆ ರಾಷ್ಟ್ರದಲ್ಲಿ ನಿಸ್ಪೃಹವೃತ್ತಿಯೂ, ತದ್ವಾರಾ ರಾಷ್ಟ್ರೈಕ್ಯವು ಹೆಚ್ಚುತ್ತಹೋಗಿ ದಿನದಿನಕ್ಕೆ ಅಸಹಯೋಗವು ಬಲಿಷ್ಠವಾದರೆ, ಅಧರ್ಮದ ಕಸುವು ಕಡಿಮೆಯಾಗಿ ಧರ್ಮಿಷ್ಠರಾದ ಅಸಹಯೋಗಿಗಳದೇ ರಾಜ್ಯವಾಗುವದು. ಹೀಗೆ ಧಾರ್ಮಿಕ ರಾಜ್ಯದ ಪ್ರತಿಷ್ಠಾಪನೆಯಾದ ಬಳಿಕ ಅಸಹಯೋಗದ ಪ್ರಯೋಜನವೇ ಇಲ್ಲದಂತಾಗಿ ಸರ್ವತ್ರ ಸಹಯೋಗವು ಬಳಿಕೆಯಲ್ಲಿ ಬಂದು ರಾಷ್ಟ್ರದಲ್ಲೆಲ್ಲ ಸ್ವಾತಂತ್ರ್ಯಯುಕ್ತ ಶಾಂತಿಯು ಉಂಟಾಗುವದು. ಈ ಸ್ಥಿತಿಯು ಒದಗುವವರೆಗೆ ಅಸಹಯೋಗಗಳು ತಮ್ಮ ರಾಷ್ಟ್ರ ಗುರುವಿನ ಅಪ್ಪಣೆಯನ್ನು ದೇಹಪಾತದವರೆಗೂ ಸ್ವಾರ್ಥತ್ಯಾಗಮಾಡಿ ಪಾಲಿಸಿ,ತಾವು ಅಧರ್ಮದ ನೆರಳಿಗೆ ನಿಲ್ಲದೆ,ದೇವರಲ್ಲಿ ವಿಶ್ವಾಸವಿಟ್ಟು, ಬಲಿಷ್ಠರೊಡನೆ ಅಲ್ಲ ಅವರಲ್ಲಿಯ ಅಧರ್ಮಕ್ಕಾಗಿ ಅಸಹಕಾರ ಬಳಿಸಬೇಕು; ಅಂದರೆ ದೇವರ ಸಹಾಯವು ಪ್ರಹ್ಲಾದನಂತೆ ಪ್ರತ್ಯಕ್ಷವಾಗಿ ದೊರೆಯದಿದ್ದರೂ, ರಾಷ್ಟ್ರದಲ್ಲಿ ಅಸಹಯೋಗದ ಕಸುವು ಇದ್ದ ಮಾನದಿಂದ ಪರರಾಷ್ಟ್ರಗಳ ಸಹಾನುಭೂತಿಯೇ ಮೊದಲಾದ ದ್ವಾರಗಳಿಂದ ಅಪ್ರತ್ಯಕ್ಷವಾಗಿಯಾದರೂ ಆ ರಾಷ್ಟ್ರಕ್ಕೆ ದೇವರ ಸಹಾಯವು ದೊರೆಯುವ ಸಂಭವವಿರುವದು. ಪ್ರಹ್ಲಾದನಂತೆ ಒಬ್ಬನೇ ಒಬ್ಬ ಪಾರಮಾರ್ಥಿಕ ಅಲೌಕಿಕ ಪುರುಷನು ಅಹಿಂಸಾತ್ಮಕ ಅಸಹಯೋಗವೆಂಬ ಅಮೂರ್ತ ಶಸ್ತ್ರದಿಂದ ಅಧರ್ಮದ ಬೊಡ್ಡೆಯನ್ನೇ ಛೇದಿಸಿ ತ್ರೈಲೋಕ್ಯವನ್ನು ನಿಷ್ಕಂಟಕ ಮಾಡಿದಂತೆ, ಸ್ವಾರ್ಥತ್ಯಾಗಿಗಳಾದ ಹಲವು ಜನ ಲೌಕಿಕ ಅಸಹಯೋಗಿಗಳು ಸಂಘಶಕ್ತಿಯಿಂದಲೂ, ಪರರಾಷ್ಟ್ರಗಳ ಸಹಾನುಭೂತಿಯಿಂದಲೂ ಅಧರ್ಮದ ಟೊಂಗೆ–ಹರಿ–ಬೇರು ಮೊದಲಾದ ಸಿಕ್ಕ ಅವಯವಗಳನ್ನು ಸಿಕ್ಕಲ್ಲಿ ತುಂಡರಿಸುತ್ತ ಅಧರ್ಮದ ಕಸುವು ಕಡಿಮೆ ಮಾಡಿ ತಮ್ಮ ರಾಷ್ಟ್ರವನ್ನು ನಿಷ್ಕಂಟಕ ಮಾಡಿಕೊಳ್ಳಲು ನಿಃಸಂಶಯವಾಗಿ ಸಮರ್ಥರಾಗಬಹುದು. ಪ್ರತಿ ಒಬ್ಬ ಸಹಯೋಗಿಯು ''ತನ್ನ ಜೋಡಿಗೊಂದು ಗಡರಗಪ್ಪೆ'' ಎಂಬ ಹಾಗೆ ಹುರುಳಿಲ್ಲದ ಅಸಹಯೋಗಿಗಳ ಸಂಖ್ಯೆಯು ಹೆಚ್ಚಾದಂತೆ, ತಾನು ಅಸಹಯೋಗದ ದೀಕ್ಷೆಯನ್ನು ಹೊಂದಿದ ಬಳಿಕ ರಾಷ್ಟ್ರ ಗುರುವಿನ ಶಿಷ್ಯನಾಗಿ ತನ್ನ ದುರ್ಗುಣಗಳನ್ನೂ, ದುರಾಚಾರಗಳನ್ನೂ ಕಳಚಿ ಚೆಲ್ಲಿ, ಹಿಂಸೆಯ ಉಸಾಬರಿಗೆ ಹೋಗದೆ,

ಪ್ರೇಮಭಾವವನ್ನು ಕಳೆದುಕೊಳ್ಳದೆ ತನ್ನ ಕರ್ತವ್ಯವೆಂದು ಶಾಂತ ರೀತಿಯಿಂದ ವ್ಯಕ್ತಿಯೊಡನೆಯಲ್ಲ ಅವನಲ್ಲಿಯ ಅಧರ್ಮದೊಡನೆ ಅಸಹಯೋಗವನ್ನು ಬಳಿಸತಕ್ಕದ್ದು. ಆಗಲೆ ಹೇಳಿದಂತೆ ಇಂಥ ಪವಿತ್ರಾಂತಃಕರಣದ ಸ್ವಾರ್ಥತ್ಯಾಗಿಗಳೇ ರಾಷ್ಟ್ರದ ತುಂಬ ಆಗುವದು ಶಕ್ಯವಲ್ಲದಿದ್ದರೂ, ಅಸಹಯೋಗದ ತತ್ವಗಳು ರಾಷ್ಟ್ರದ ಮೈಯುಂಡು ರಾಷ್ಟ್ರವು ಸಹಯೋಗವನ್ನೇ ತೇಗಹತ್ತಿದರೆ ಸಾಕು! ಈ ಕಠಿಣ ಯೋಗವನ್ನು ಕೈಕೊಳ್ಳುವ ಯೋಗ್ಯತೆಯುಳ್ಳವರು ಕೈಕೊಂಡು ಅದನ್ನು ಯಥಾಶಾಸ್ತ್ರ ಸಾಂಗೋಪಾಂಗವಾಗಿ ಆಚರಿಸಬೇಕು; ಅಂಥ ಯೋಗ್ಯತೆಯಿಲ್ಲದವರೂ, ಪುಕ್ಕರೂ ಆದವರು ಅಸಹಯೋಗವು ಹಿತಕಾರಿಯಾದದ್ದೆಂದು ನಿಶ್ಚಯಿಸಿ, ಸಾಂಗೋಪಾಂಗದಿಂದಲ್ಲ ದಿದ್ದರೂ ಅಂಗದಿಂದಾಗಲಿ, ಉಪಾಂಗದಿಂದಾಗಲಿ ಯಥಾಶಕ್ತಿ ಅದನ್ನು ಪಾಲಿಸಬೇಕು. ಹೀಗೆ ರಾಷ್ಟ್ರವು ಒಮ್ಮುಖವಾಗದೆ ''ಕೈಲಾಗದ್ದರಿಂದ ಕುಯುಕ್ತಿಯೆಂ''ಬಂತೆ, ಅದರೊಳಗಿನ ಒಬ್ಬೊಬ್ಬ ಮುಖಂಡರು ಒಂದೊಂದು ವಿಚಾರವನ್ನು ಪ್ರಕಟಮಾಡಿ ತಮ್ಮದೊಂದು ಪಂಗಡ ಮಾಡಿಕೊಂಡು ರಾಷ್ಟ್ರವು ಬಹುಮುಖವಾದರೆ, ಉದ್ದೇಶವು ಬೇಗನೆ ಸಾಧಿಸದು. ಈ ಪ್ರಸಂಗದಲ್ಲಿ ರಾಷ್ಟ್ರದೊಳಗಿನ ಮುಖಂಡರು, ಬಹುಮತವುಳ್ಳ ಹಾಗು ರಾಷ್ಟ್ರಶುದ್ಧೀಕರಣ ಸಾಧನವಾದ ಸ್ವಾತಂತ್ರ್ಯಪ್ರಾಪ್ತಿಯ ಮಾರ್ಗವಾವುದೆಂಬದನ್ನು ವಿವೇಕದಿಂದ ಕಂಡುಹಿಡಿದು, ಆ ಹಾದಿಯನ್ನೇ ತಾವೂ ಹಿಡಿಯ ಬೇಕು. ಅವರಿಗೆ ತಮ್ಮ ವಿಚಾರಗಳು ತಮಗೆ ಸಯುಕ್ತಿಕವಾಗಿ ತೋರಿದರೂ, ಯಾರ ವಿಚಾರಗಳೇ ಆಗಲಿ, ಗುಣದೋಷ ಮಿಶ್ರವಾದವುಗಳೇ ಎಂದು ತಿಳಿದು, ದೊಡ್ಡ ಮನಸ್ಸಿನಿಂದ ತಮ್ಮ ವಿವಿಧ ವಿಚಾರಗಳನ್ನು ಬಿಟ್ಟುಕೊಟ್ಟು, ರಾಷ್ಟ್ರೈಕ್ಯಕ್ಕೆ ಪ್ರಾಮುಖ್ಯವಾಗಿ ಲಕ್ಷ್ಯಗೊಡತಕ್ಕದ್ದು. ವಿಚಾರಗಳ ಬಹುತ್ವದಿಂದ ರಾಷ್ಟ್ರದ ಕಸುವು ಹೆಚ್ಚದೆ, ಆಚಾರದ ಏಕತ್ವದಿಂದ ರಾಷ್ಟ್ರದ ಕಸುವು ಹೆಚ್ಚುವದೆಂದು ತಿಳಿಯಬೇಕು. ತಾವು ಹಿಡಿದ ಮಾರ್ಗವನ್ನು ಕುರಿತು ತಮ್ಮವರಿಗಿಂತ ತಮ್ಮಿಂದ ಹೊರಗಾದ ತಟಸ್ಥ ಪರ–ರಾಷ್ಟ್ರದ ವಿಚಾರವಂತರು ಏನೆನ್ನುವರೆಂಬದನ್ನು ನೋಡಬೇಕು. ಕಾಸಿಮಖಾನ, ಒಟ್ಟಿಗೆ ಯಾರು ಏನೇ ಅನ್ನಲಿ, ಯಾರು ಏನೇ ವಿಚಾರ ಮಾಡಲಿ, ಶೂದ್ರವೃತ್ತಿ ಶ್ವವೃತ್ತಿಯ ರಾಷ್ಟ್ರಕ್ಕೆ ಅಹಿಂಸಾತ್ಮಕ ಅಸಹಕಾರವೇ ಕಾರ್ಯಕಾರಿ ಸಾಧನವೆಂದು ನಿಃಸಂಶಯವಾಗಿ ತಿಳಿಯತಕ್ಕದ್ದು; ಮತ್ತು ಅಸಹಯೋಗಿ ಯಾಗಿರುವಾಗ ಬರುವ ಸಂಕಟಗಳನ್ನು ಅದೊಂದು ತಪಶ್ಚರ್ಯವೆಂದು ತಿಳಿದು ಅಸಹಯೋಗಿಯು ಶಾಂತರೀತಿಯಿಂದ ಭೋಗಿಸಬೇಕು; ಅವನು ಸಂಕಟಗಳನ್ನು ಭೋಗಿಸುವಾಗ ದೇಹಪಾತವಾದರೆ, ಇಷ್ಟಾರ್ಥ ಪ್ರಾಪ್ತಿಗಾಗಿ ದೇಹಪಾತ ಮಾಡುವ ಸುಯೋಗವು ತನಗೆ ಒದಗಿದ್ದಕ್ಕಾಗಿ ತನ್ನನ್ನು ಧನ್ಯನೆಂದು ತಿಳಿಯಬೇಕು. ಹೀಗೆ ಬಹು ಜನರು ಇಷ್ಟಾರ್ಥ ಪ್ರಾಪ್ತಿಗಾಗಿ ಈಶ್ವರಸ್ಮರಣಪೂರ್ವಕವಾಗಿ ತಮ್ಮನ್ನು ರಾಷ್ಟ್ರಹಿತಕ್ಕಾಗಿ ಬಲಿಕೊಟ್ಟಾಗ ಮಾತ್ರ ದೇವರಿಗೆ ಅರಿಕೆಯಾಗಿ ಇಷ್ಟಾರ್ಥಪ್ರಾಪ್ತಿಯಾಗುವದು. ಕಾಸಿಮಖಾನ, ಒಟ್ಟಿಗೆ ಅಸಹಯೋಗಿ ಗಳಲ್ಲಿ ಆತ್ಮಶುದ್ಧಿ, ಆಸ್ತಿಕ್ಯಬುದ್ಧಿ, ದೇಹಪಾತದವರಿಗೆ ಸ್ವಾರ್ಥತ್ಯಾಗ ಮಾಡುವ ನಿಶ್ಚಯ ಇವು ಉತ್ತರೋತ್ತರ ಅಭಿವೃದ್ಧಿಗಾಗಿ, ಅಂಥವರಸಂಖ್ಯೆಯು ರಾಷ್ಟ್ರದಲ್ಲಿ ದಿನ ದಿನಕ್ಕೆ ಹೆಚ್ಚಾಗುತ್ತ ಹೋದ ಮಾನದಿಂದ ರಾಷ್ಟ್ರಕ್ಕೆ ಸ್ವಾತಂತ್ರ್ಯಪ್ರಾಪ್ತಿಯ ಕಾಲವು ಸಮೀಪಿಸುವದೆಂದು ತಿಳಿಯಬೇಕು.

ಕಾಸಿಮುಖಾನ—ಭಗವನ್, ಈ ಯುಗದಲ್ಲಿ ಪ್ರಹ್ಲಾದನಂಥ ಅಲೌಕಿಕ ಅಸಹಯೋಗಿಗಳು ವಿರಲವಾದದ್ದರಿಂದ, ದೇವರು ಪ್ರಹ್ಲಾದನಿಗೆ ಪ್ರತ್ಯಕ್ಷ ಸಹಾಯಮಾಡಿದಂತೆ ಉಳಿದ ಅಸಹಯೋಗಿಗಳಿಗೆ ಸಹಾಯಮಾಡುವ ಸಂಭವವಿಲ್ಲ; ಅಂದಬಳಿಕ ದುರ್ಬಲರು ಅಧರ್ಮಕ್ಕಾಗಿ ಬಲಿಷ್ಠರೊಡನೆ ಅಸಹಯೋಗವನ್ನು ಬಳಿಸಿ ಸುಮ್ಮನೆ ಪರಿಪರಿಯ ಕಷ್ಟಗಳನ್ನು ಭೋಗಿಸುತ್ತ ಪ್ರಾಣಕೊಡುತ್ತಹೋದರೆ ಆ ಅಧರ್ಮಿಷ್ಠ–ಬಲಿಷ್ಠರು ಹಣ್ಣಿಗೆಬಂದು ಅವರಿಂದ ಲೌಕಿಕ ಸ್ವಾತಂತ್ರ್ಯರೂಪ ಸ್ವರಾಜ್ಯವು ಹ್ಯಾಗೆ ಪ್ರಾಪ್ತವಾದೀತೆಂಬ ಶಂಕೆಯು ನನ್ನನ್ನು ಬಾಧಿಸದೆ ಬಿಡಲೊಲ್ಲದು; ಆದ್ದರಿಂದ ನನ್ನನ್ನು ಇನ್ನಿಷ್ಟು ಸಮಾಧಾನಪಡಿಸಿರಿ.

ಮಾಧವಾಚಾರ್ಯ— ಕಾಸಿಮುಖಾನ, ರಾಷ್ಟ್ರಕ್ಕೆ ಸ್ವಾತಂತ್ರ್ಯವು ಒಬ್ಬರು ಕೊಟ್ಟರೆ ದೊರೆಯ ತಕ್ಕದ್ದಲ್ಲ; ತನ್ನ ಸತ್ವದಿಂದ ರಾಷ್ಟ್ರವು ಅದನ್ನು ಸಂಪಾದಿಸಬೇಕಾಗುವದು. ದುಷ್ಟರು ಎಷ್ಟು ಬಲಿಷ್ಠರಿದ್ದರೂ ಜಗತ್ತಿನ ಸೂತ್ರಚಾಲಕ ಮಹಾಸಮರ್ಥನಾದ ದೇವರೊಬ್ಬನು ಇರುವನೆಂದು ಆಗಲೆ ನಿನಗೆ ಹೇಳಿದ್ದೇನೆ. ವಿಶೇಷವಾಗಿ ದುರ್ಬಲ ರಾಷ್ಟ್ರವು ಈಶ್ವರನಿಷ್ಠವಾಗಿ ಒಕ್ಕಟ್ಟಿನಿಂದ ಈಗ ಹೇಳಿದಂತೆ ಅಸಹಯೋಗವನ್ನು ಮನಃಪೂರ್ವಕ ಬಳಿಸಿ ಪರಿಪರಿಯ ಕಷ್ಟಗಳನ್ನು ಸಹಿಸುತ್ತ ಮಹಾತಪಸ್ಸು ಮಾಡಿದರೆ, ಈಶ್ವರನು ಪ್ರತ್ಯಕ್ಷ ಬಾರದಿದ್ದರೂ ನಾಲ್ಕು ಮಾರ್ಗಗಳಿಂದ ಅಂಥ ಅಸಹಯೋಗಗಳಿಗೆ ನಿಶ್ಚಯವಾಗಿ ಸಹಾಯಮಾಡುವನೆಂಬದನ್ನು ನಂಬು. ಆ ಮಾರ್ಗಗಳು ಯಾವವೆಂದರೆ–1ನೆಯ ಮಾರ್ಗವು–ಸ್ವಾತಂತ್ರ್ಯಹಾರಕ ದುಷ್ಟರಿಗೆ ಪಶ್ಚಾತ್ತಾಪದಿಂದ ಸದ್ಬುದ್ಧಿಯುಂಟಾಗುವದು; 2ನೆಯ ಮಾರ್ಗವು– ಅಸಹಯೋಗಿಗಳೇ ಈಶ್ವರಕೃಪೆಯಿಂದ ಬಲಿಷ್ಠರಾಗುವದು; 3ನೆಯ ಮಾರ್ಗವು ಸ್ವಾತಂತ್ರ್ಯಾಪಹಾರಕ ದುಷ್ಟರೆ ಈಶ್ವರೀಕ್ಷೋಭದಿಂದ ದುರ್ಬಲರಾಗುವದು; 4ನೆಯ ಮಾರ್ಗವು–ಅಸಹಯೋಗಿಗಳಿಗೆ ಪರರಾಷ್ಟ್ರಗಳ ಸಹಾಯ ದೊರೆತು ಸ್ವಾತಂತ್ರ್ಯಾಪಹಾರಕ ದುಷ್ಟರ ನಾಶವಾಗುವದು. ಕಾಸಿಮುಖಾನ, ಈಶ್ವರನಲ್ಲಿ ನಿಷ್ಠೆ ಯನ್ನಿಟ್ಟು ಸ್ವಾರ್ಥತ್ಯಾಗಿಗಳಾಗಿ ಆತ್ಮಶುದ್ಧಿಯನ್ನು ಪಡೆದರೆ, ಈಶ್ವರಕೃಪೆಯಿಂದ ಏನಾದೀತು ಏನಾಗಲಿಕ್ಕಿಲ್ಲ? ಹಾಗೆ ತಪಸ್ಸು ಮಾಡದೆ ಅಧರ್ಮಾಚರಣೆಯವರು ಅಸಹಯೋಗಿಗಳ ಸೋಗುಹಾಕಿ ಸ್ವಾರ್ಥಸಾಧಿಸಹೋದರೆ, ಸ್ವಾರ್ಥಸಾಧಕರಾದ ಸ್ವಾತಂತ್ರ್ಯಾಪಹಾರಕ ಬಲಿಷ್ಠರಿಂದಲೇ ಅವರ ನಾಶವಾಗುವದು! ಇಬ್ಬರ ಅಧರ್ಮಾಚರಣೆಯನ್ನೂ ನೋಡಿ ದೇವರು ಹೇಸಿ, ಯಾರ ಪಕ್ಷವನ್ನೂ ಕಟ್ಟದೆ, ಪರಸ್ಪರ ಒಬ್ಬರಿಂದೊಬ್ಬರು ತಾಪಪಡುವದನ್ನು ನೋಡುತ್ತಿರುವನು ! ಯಾಕೆಂದರೆ ಧರ್ಮವಿದ್ದಲ್ಲಿಮಾತ್ರ ದೇವರ ಕೃಪಾದೃಷ್ಟಿಯಿರುವದು. ಅಲ್ಲಿಂದ ಇಲ್ಲಿಯವರೆಗೆ ಎಲ್ಲರೂ ಅಧರ್ಮಿಷ್ಠರೇ ಆದಬಳಿಕ, ಅಂಥ ಅಧರ್ಮಿಷ್ಠರ ಸಹಯೋಗವು ದೇವರಿಗೆ ಗಣ್ಯವಾಗುವದಿಲ್ಲ; ಅಸಹಯೋಗವೂ ಗಣ್ಯವಾಗುವದಿಲ್ಲ, ದೇವರನ್ನು ಮರೆತುಬಿಟ್ಟು ದೈನ್ಯದಿಂದ ಸ್ವಾತಂತ್ರ್ಯವನ್ನು ಕಳಕೊಂಡಿದ್ದ ಆ ದುರ್ಬಲರೂ, ದೇವರನ್ನು ಲಕ್ಷಿಸದೆ ಅಹಂಕಾರದಿಂದ ಪರರ ಸ್ವಾತಂತ್ರ್ಯಾಪಹಾರಮಾಡಿದ ಆ ಸಬಲರೂ ಇಬ್ಬರೂ ಅಧರ್ಮಿಷ್ಠರೇ. ಆದ್ದರಿಂದ ಇಬ್ಬರೂ ದೇವರಿಗೆ ಅಷ್ಟೇ ಆಗಿರಲು, ಪರಿಪಕ್ವಕಾಲವು ಬರುವವರೆಗೆ ಇಬ್ಬರೂ ಹೊಡೆದಾಡುತ್ತಲಿರಬೇಕಾಗುವದು !

ಕಾಸಿಮಖಾನ—ಗುರುವರ, ಅಸಹಯೋಗವನ್ನು ಆಚರಿಸುವ ಮಾರ್ಗವು ಚೆನ್ನಾಗಿ ಗೊತ್ತಾಯಿತು; ಅದರ ರಹಸ್ಯವೂ ಮನಸ್ಸಿನಲ್ಲಿ ಬಂದಿತು; ಆದರೆ ಮಗನು ತಂದೆಯಲ್ಲಿ, ಹೆಂಡತಿಯು ಗಂಡನಲ್ಲಿ, ಶಿಷ್ಯನು ಗುರುವಿನಲ್ಲಿ ಹೀಗೆ ಪೂಜಕರು ಪೂಜ್ಯರಲ್ಲಿ ಅಧರ್ಮಾಚರಣೆಯನ್ನು ಕಂಡರೆ ಅವರ ಅಧರ್ಮಾಚರಣೆಗಾಗಿ ಅವರೊಡನೆಯೂ ಅಸಹಕಾರವನ್ನು ಬಳಿಸ ಬಹುದೋ?

ಮಾಧವಾಚಾರ್ಯ– ಕಾಸಿಮಖಾನ, ನೀನು ಕೇಳುವದು ವ್ಯಷ್ಟಿಯ ಅಂದರೆ ವ್ಯಕ್ತಿಯ ಧರ್ಮವಾಯಿತು. ವ್ಯಷ್ಟಿಯ ಹಿತದೃಷ್ಟಿಯಿಂದ ಅಂದರೆ ಮಗ, ಹೆಂಡತಿ, ಶಿಷ್ಯ ಮೊದಲಾದ ಪೂಜಕ ವ್ಯಕ್ತಿಗಳ ಹಿತದೃಷ್ಟಿಯಿಂದ ಅವರವರು ತಮ್ಮ ಪೂಜ್ಯ ವ್ಯಕ್ತಿಗಳೊಡನೆ ಯಾವಾಗಲೂ ಸಹಯೋಗವನ್ನೇ ಬಳಿಸಬೇಕಲ್ಲದೆ, ಅವರೊಡನೆ ಅಸಹಯೋಗವನ್ನು ಸರ್ವಥಾ ಬಳಿಸಬಾರದು. ಹಿಂದಕ್ಕೆ ಸಹಯೋಗವನ್ನು ಕುರಿತು ಹೇಳುವಾಗ ಸಂಬಂಧಾತ್ಮಕ ಸಹಯೋಗದಲ್ಲಿ ''ತಮ್ಮ ಪೂಜ್ಯ ಸಂಬಂಧಿಕರು ತಮ್ಮ ಧರ್ಮವನ್ನು ಪಾಲಿಸಲಿ ಪಾಲಿಸದಿರಲಿ, ಪೂಜಕರು ತಮ್ಮ ಧರ್ಮವನ್ನು ಪಾಲಿಸಿದರೇ ಕರ್ತವ್ಯ ಪಾಲಿಸಿದಂತಾಗಿ ಅದರಿಂದ ಈಶ್ವರ ಪ್ರೀತಿಯಾಗುತ್ತದೆ''ಂದು ಹೇಳಿದ್ದು ನಿನ್ನ ಸ್ಮರಣದಲ್ಲಿರಬಹುದು; ಆದ್ದರಿಂದ ಪೂಜ್ಯರೊಡನೆ ಪೂಜಕರು ಎಂದೂ ಅಸಹಕಾರವನ್ನು ಬಳಿಸಬಾರದು; ಆದರೆ ರಾಷ್ಟ್ರದಂಥ ಮಹಾ ಸಮಷ್ಟಿ–ಹಿತವನ್ನು ಸಾಧಿಸುವ ಅನಿರ್ವಾಹ ಪ್ರಸಂಗವಿದ್ದಲ್ಲಿ, ಅದೊಂದು ಸ್ವಾರ್ಥತ್ಯಾಗವೆಂದು ತಿಳಿದು ನರಕಕ್ಕೆ ಹೋಗುವ ನಿಶ್ಚಯದಿಂದ ಇಂಥ ಪೂಜ್ಯ ವ್ಯಕ್ತಿಗಳೊಡನೆಯೂ ಅಸಹಯೋಗ ಪೂಜಕರೂ ಬಳಿಸಬಹುದು; ಯಾಕಂದರೆ ರಾಷ್ಟ್ರದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವದು ಪ್ರತಿ ಒಬ್ಬ ರಾಷ್ಟ್ರೀಯ ವ್ಯಕ್ತಿಯ ಪವಿತ್ರ ಕರ್ತವ್ಯವಿರುತ್ತದೆ. ಒಟ್ಟಿಗೆ ಜಗತ್ತಿನಲ್ಲಿ ಸಹಯೋಗವೇ ಸರ್ವಕಲ್ಯಾಣದ ಸಾಧನವಾಗಿದ್ದರೂ, ಬೇನೆ ಬಂದಾಗ ಔಷಧ ತಕ್ಕೊಳ್ಳುವಂತೆ, ರಾಷ್ಟ್ರಕ್ಕೆ ಸ್ವಾತಂತ್ರ್ಯಲೋಪರೂಪ ಮಹಾಸಂಕಟ ಒದಗಿದಾಗ, ಆ ಸಂಕಟ ನಿವಾರಣದವುಟ್ಟಿಗೆ ಔಷಧವೆಂದು ತಿಳಿದು ರಾಷ್ಟ್ರೀಯರು ಬೇಕಾದಂತಹ ಸ್ವಾರ್ಥತ್ಯಾಗ ಮಾಡಿಯೂ ಅಸಹಯೋಗವನ್ನು ಬಳಸತಕ್ಕದ್ದು; ಉಳಿದ ಎಲ್ಲ ಪ್ರಸಂಗದಲ್ಲಿ ಎಂಥಾ ಹಾನಿಯಾದರೂ ಧರ್ಮಿಷ್ಠರು ತಮ್ಮ ಪೂಜ್ಯ ವ್ಯಕ್ತಿಗಳೊಡನೆಯಿಷ್ಟೇ ಅಲ್ಲ, ಸಾಧಿಸಿದಮಟ್ಟಿಗೆ ಎಲ್ಲರೊಡನೆಯೂ ಸಹಕಾರವನ್ನೇ ಬಳಿಸತಕ್ಕದ್ದು! ಅಂಥ ಭಗವದ್ಭಕ್ತ ಪ್ರಹ್ಲಾದನಿಗೂ ಪಿತ್ರಾಜ್ಞಾಭಂಗಕ್ಕಾಗಿ, ಅಂದರೆ ತಂದೆಯೊಡನೆ ಅಸಹಯೋಗವನ್ನು ಬಳಿಸಿದ್ದಕ್ಕಾಗಿ ನರಕವನ್ನು ಭೋಗಿಸಬೇಕಾಗಿತ್ತು. ಭಗವಂತನು ಪ್ರಹ್ಲಾದನನ್ನು ಕುರಿತು—''ಭಕ್ತಶ್ರೇಷ್ಠಾ, ನಾನು ಪ್ರಸನ್ನನಾಗಿರುವೆನು, ಏನು ಬೇಡುವೆ ಬೇಡು'' ಎಂದು ಕೇಳಲು, ಆ ಮಹಾತ್ಮನು—''ದೇವಾ, ತಂದೆಯ ಆಜ್ಞೆಯನ್ನು ಪಾಲಿಸದೆ ಇದ್ದ ನನಗೆ ನರಕವನ್ನು ಕೊಡು'' ಎಂದು ಕೇಳಿದನು. ಅದಕ್ಕೆ ಭಗವಂತನು– ''ಸತ್ವಶಾಲಿಯೇ, ನೀನು ಕೇಳಿಕೊಂಡಂತೆ ಪಿತೃದ್ರೋಹಿಯಾದ ನಿನಗೆ ನರಕವಾಗತಕ್ಕದ್ದೇ ಸರಿ; ಆದರೆ ನಿನಗೆ ನನ್ನ ದರ್ಶನವಾಗಿರುವದರಿಂದ ನರಕವಾಗಲಾರದು'' ಎಂದು ಹೇಳಿದನು. ಈ ರಹಸ್ಯವನ್ನರಿತು ಮಹಾಸಮಷ್ಟಿ ಹಿತ ಸಂಬಂಧವಿದ್ದಾಗ ಅಸಹಯೋಗವನ್ನು ಪೂಜ್ಯರೊಡನೆ ಬಳಿಸುವವರು, ಈಶ್ವರಪ್ರೀತಿಯಾಗುವಂತೆ ಧರ್ಮದಿಂದ

ನಡೆದು, ನರಕ ಭಯವನ್ನು ತಪ್ಪಿಸಿಕೊಳ್ಳತಕ್ಕದ್ದು. ಇಲ್ಲದಿದ್ದರೆ ತುಪ್ಪವೂ ಇಲ್ಲ, ಎಣ್ಣೆಯೂ ಇಲ್ಲ ಎಂಬಂತೆ ಇತ್ತ ತನ್ನ ಧರ್ಮಪಾಲನ ಮಾಡಿದ ಪುಣ್ಯವೂ ಇಲ್ಲ, ಅತ್ತ ಈಶ್ವರಪ್ರೀತಿಯೂ ಇಲ್ಲ ಎಂಬಂತಾಗಿ ಅಂಥವರು ಇಹದಲ್ಲಿ ತಾಪ-ದುಷ್ಕೀರ್ತಿಗಳನ್ನೂ, ಪರದಲ್ಲಿ ನರಕವನ್ನೂ ಭೋಗಿಸಬೇಕಾದೀತು! ಈ ಮಾತನ್ನು ಕಲಿಯುಗದೊಳಗೆ ಸ್ವಚ್ಛಂದವೃತ್ತಿಯ ಜನರು ನೆನಪಿನಲ್ಲಿಟ್ಟು, ಯಾವ ದಂಡೆಗಾದರೂ ಹತ್ತಬೇಕಲ್ಲದೆ, ನಡುವೇ ಮುಣುಗಬಾರದು !

## ಅಹಿಂಸಾತತ್ವವೂ ರಾಜಕೀಯ ಅಹಿಂಸೆಯೂ

ಈ ಮೇರೆಗೆ ಸಂಭಾಷಣವು ನಡೆದಿರಲು, ಮಾದಿಗರ ದುರಗಪ್ಪನು ಎದ್ದುನಿಂತು— ''ಯಪ್ಪಾ, ನೀನು ಎಷ್ಟು ಹೇಳಿದರೂ ನಮ್ಮಂಥ ಬುದ್ಧಿಗೇಡಿಗಳು ಮತ್ತೂ ಕೇಳುವದೇ ಸರಿ ! ನೀನು ದುರುಳರ ಹಿಂಸೆಯನ್ನೂ ಮಾಡಬಾರದೆನ್ನುತ್ತೀ; ಆದರೆ ಏನೂ ತಪ್ಪು ಮಾಡದ ಪ್ರಾಣಿಗಳನ್ನು ನಾವು ಹೊಟ್ಟೆಗಾಗಿ ದಿನಾಲು ಕೊಲ್ಲುತ್ತೇವೆ. ಇಂಥ ಕೊಲೆಗಡಕರು ನಾವು ದುರುಳರನ್ನು ಇಕ್ಕರಿಸದೆ ಅವರಿಗೆ ಬಗ್ಗಿ ನಡೆದರೆ ಹೇಡಿಗಳಾಗುವೆವಲ್ಲವೆ? ಆದರೆ ಹೊಡೆಯುವ ಸಂಗತಿಯಿದ್ದರೂ ಹೇಡಿತನವನ್ನು ನಾವು ಯಾಕೆ ತೋರಿಸಬೇಕು? ಹಾಹಾ ! ನೆನಪಿಗೆ ಬಂದಿತು. ಈಗ ನಮಗೆ ಹೀಗೆ ಮಾಡಿರೆಂದು ನೀನು ಹೇಳಿರುವದಿಲ್ಲ; ಆದರೆ ದೇಶವು ಪರರಾಜರ ಸೆರೆಸೂರೆಯ ಸುಲಿಗೆಯಿಂದ ತೀರಾ ಕೈಸೋತು ಕಂಗಾಲಾಗಿ ತುಣುಕು ರೊಟ್ಟಿಗಾಗಿ ಎರಡನೆಯವರಿಗೆ ಬಾಲಾ ಗುಂಡಾಡಿಸುವ ಗತಿಗೆ ಮುಟ್ಟಿದ್ದಾಗ, ಹೀಗೆ ಮಾಡೆಂದು ಆ ರಾಷ್ಟ್ರಕ್ಕೆ ಹೇಳಿರುವೆ! ಹೌದು, ಕೈಸಾಗದಹಾಗಾದಬಳಿಕ ಧರ್ಮಕ್ಕಾಗಿ ಕೈಮುಗಿದು ಕೊಲ್ಲಿಸಿಕೊಳ್ಳುವದೇ ಸರಿ! ಆದರೆ ನನ್ನ ಗುರುವೇ, ನಾವು ಕುರಿ-ಕೋಳಿಗಳನ್ನು ತಿನ್ನುವದು ಪಾಪವಲ್ಲವೆ? ನಮ್ಮಹಾಗೆ ಅವು ಜೀವಿಗಳು; ಅವನ್ನು ಕೊಂದ ಮರಗು ನಮಗೆ ಹತ್ತಲಿಕ್ಕಿಲ್ಲವೆ?'' ಎಂದು ಕೇಳಲು, ಮಾಧವಾಚಾರ್ಯರು ಮುಗುಳುನಗೆಯಿಂದ-

ಮಾಧವಾಚಾರ್ಯ—ದುರಗಪ್ಪಾ, ಸೂಕ್ಷ್ಮದೃಷ್ಟಿಯಿಂದ ನೋಡಿದರೆ ನೀನು ನಿನ್ನ ಹಿಂಸಾ ವೃತ್ತಿಗಾಗಿ ಪಶ್ಚಾತ್ತಾಪಪಡುವದು ಯೋಗ್ಯವು; ಹಿಂಸೆಯ ವಿಷಯವಾಗಿ ಹೀಗೆ ಪಶ್ಚಾತ್ತಾಪಪಡುತ್ತ ಮನುಷ್ಯರು ದಿನದಿನಕ್ಕೆ ಹಿಂಸಾಪರಾಙ್ಮುಖರಾದರೆ ಈಗಿನದಕ್ಕಿಂತಲೂ ಜಗತ್ತಿನ ಸುಖವು ಹೆಚ್ಚಬಹುದೆಂದು ತೋರುತ್ತದೆ; ಆದರೆ ಈಗಿನ ಜಗತ್ತಿನ ಅನುಭವವನ್ನು ನೋಡಿದರೆ, ಮನುಷ್ಯರಲ್ಲಿ ಮಾಂಸ ಬಿಟ್ಟವರಿಗಿಂತ ಮಾಂಸ ತಿನ್ನುವವರ ಸಂಖ್ಯೆಯೇ ಹೆಚ್ಚು ಇರುವದು. ಅಹಿಂಸಾತತ್ವವು ಒಳ್ಳೆಯದೆಂದು ಬಾಯಿಯಿಂದ ಒಡಂಬಡುವವರೂ, ಮಂದಿ ಮಾಡುವ ಧಾರ್ಮಿಕ ಅಲ್ಪಹಿಂಸೆಗೆ ನಗುವವರೂ ಕೈಮುಟ್ಟಿ ಪ್ರಸಿದ್ಧರೀತಿಯಿಂದ ಹೊಟ್ಟೆಗಾಗಿ ನೆಲೆಯಿಲ್ಲದೆ ಹಿಂಸೆಮಾಡುತ್ತಲೇ ಇರುವರು; ಅಂದ ಬಳಿಕ ಮನುಷ್ಯಮಾತ್ರರೆಲ್ಲ ಹಿಂಸಾಪರಾಙ್ಮುಖರಾಗುವದು ಶಕ್ಯವಾಗಿ ತೋರುವದಿಲ್ಲ. ಮೂಲತಃ ಸಚ್ಚಿದಾನಂದ ಸ್ವರೂಪನಾದ ಆತ್ಮನು ವಿಷಯವಾಸನೆಯಿಂದ ಜೀವಭಾವವನ್ನು ಹೊಂದಿ ದೇಹಧಾರಣ

ಮಾಡಿ ಸುಖ–ದುಃಖಗಳೆಂಬ ಎರಡು ಗಾಣಗಳ ಕಣೆಗಳ ನಡುವೆ ಸಿಕ್ಕು ಒದ್ದಾಡುತ್ತಿರುವದು ಒಂದು ಪ್ರಕಾರದ ಹಿಂಸೆಯೇ ಆಗಿರುವದರಿಂದಲೂ, ಹೀಗೆ ದೇಹಧಾರಣ ಮಾಡಿದ ಜೀವರ ''ಜೀವೋಜೀವಸ್ಯ ಜೀವನಂ'' ಎಂಬ ಸಿದ್ಧಾಂತದಂತೆ ಪರಸ್ಪರರ ಜೀವಹಿಂಸೆಯಿಂದಲೇ ತಮ್ಮ ತಮ್ಮ ಜೀವನ ಸಾಗಿಸಿಕೊಳ್ಳುತ್ತಿರುವದರಿಂದಲೂ ಈ ಜಗತ್ತು ಹಿಂಸಾಮಯವಾಗಿರುವದರಿಂದ ತತ್ವತಃ ಹಿಂಸೆಯನ್ನು ಆಚರಿಸುವದು ಶಕ್ಯವೇ ಇಲ್ಲವು. ನಮ್ಮ ವೇದದಲ್ಲಿ ಪ್ರಾಣಿಗಳ ಭಕ್ಷ್ಯಪದಾರ್ಥಗಳನ್ನು ಓಷಧಿಗಳು, ಲತೆಗಳು, ಪಶುಗಳು, ಮೃಗಗಳು, ಪಕ್ಷಿಗಳು ಇವೇ ಆಗಿರುವವೆಂದು ಹೇಳಿರುತ್ತದೆ; ಆದರೆ ಇವೆಲ್ಲ ಸಜೀವ ವಸ್ತುಗಳೇ ಆಗಿದ್ದು ಇವುಗಳಲ್ಲಿ ಒಂದನ್ನೂ ಉಪಯೋಗಿಸದಿದ್ದರೆ ಪ್ರಾಣಿಗಳ ಜೀವನವೇ ಆಗದಾದ್ದರಿಂದ ಅಹಿಂಸಾತತ್ವವನ್ನು ಅನುಸರಿಸುವದು ತೀರ ಅಶಕ್ಯವಾಗಿರುವದು. ದುರಗಪ್ಪಾ, ಇಂದು ಯೋಗಾದಿ ಸಾಧನಗಳಿಂದ ಬರಿಯ ಜಲಪಾನಮಾಡಿ, ಅಥವಾ ವಾಯುಭಕ್ಷಣ ಮಾಡಿ ಜೀವಿಸುವವರುಂಟು; ಆದರೆ ನೀರಿನಲ್ಲಿಯೂ, ವಾಯುವಿನಲ್ಲಿಯೂ ಅನಂತ ಸೂಕ್ಷ್ಮಪ್ರಾಣಿಗಳಿರುವದರಿಂದ, ಹಾಗೆ ಮಾಡುವದೂ ಹಿಂಸೆಯಲ್ಲಿಯೇ ಬರುವದು. ಇದಲ್ಲದೆ ನಾವು ಓಡಾಡುವಾಗ, ಅಡಿಗೆ ಮಾಡುವಾಗ, ಹೊಲಗೈಯುವಾಗ, ಬಿಸಿಲಿಗೆ ಕಾಳು–ಕಡಿ ಒಣಗಹಾಕುವಾಗಿ ಹೀಗೆಯೇ ನಾವು ಮಾಡುವ ಬಗೆಬಗೆಯ ವ್ಯವಹಾರಗಳಲ್ಲಿ ಆಗುವ ಪ್ರಾಣಿಹಿಂಸೆಯನ್ನು ಸೂಕ್ಷ್ಮವಿಚಾರದಿಂದ ಮನಸ್ಸಿನಲ್ಲಿ ತಂದರೆ, ಕ್ಷಣಶಃ ನಮ್ಮಿಂದ ಪ್ರಾಣಿಹಿಂಸೆಯು ಎಷ್ಟು ಭಯಂಕರವಾಗಿ ಆಗುತ್ತಿರುವದೆಂಬದು ನಿನ್ನ ಮನಸ್ಸಿನಲ್ಲಿ ಬರಬಹುದು; ಆದರೆ ಈ ಸ್ವಾಭಾವಿಕ ಹಿಂಸೆಯು ಅಪರಿಹಾರ್ಯವಾದದ್ದರಿಂದ ಅದನ್ನು ನಿಲ್ಲಿಸಲಿಕ್ಕೆ ಬಾರದಿದ್ದರೂ, ನಾಲಿಗೆಯ ಸವಿಗಾಗಿ ಬುದ್ಧಿಪೂರ್ವಕ ಮಾಡುವ ಹಿಂಸೆಯನ್ನು ಮನುಷ್ಯನು ನಿಲ್ಲಿಸಬಹುದಾಗಿದೆ; ಆದರೆ ಮನುಷ್ಯನ ಪ್ರತ್ಯಕ್ಷ ವ್ಯವಹಾರವನ್ನು ನೋಡಿದರೆ, ಅದೂ ಶಕ್ಯವಾಗಿರುವದಿಲ್ಲ. ದುರಗಪ್ಪಾ, ತತ್ವತಃ ವಿಚಾರಮಾಡಿದರೆ ಹಿಂಸೆಯ ಮಾತು ವಿಲಕ್ಷಣವಾಗಿರುವದು. ನಾವೂ ಕಾಲಕ್ಕನುಸರಿಸಿ ಸೂಕ್ಷ್ಮ ಜಂತುರೂಪವಾದ ರೋಗಾದಿಗಳಿಂದ ಒಟ್ಟಿಗೆ ಅನ್ಯರಿಂದ ಕೊಲ್ಲಿಸಿಕೊಳ್ಳುವವರೆ ಆಗಿರಲು ಅನ್ಯರನ್ನು ಕೊಲ್ಲಲಿಕ್ಕೆ ಅಂಥ ನಾವು ಎಷ್ಟರ ಮಟ್ಟಿಗೆ ಸ್ವತಂತ್ರರಾಗಿರಬಹುದು? ನಾವೂ, ಅನ್ಯ ಪ್ರಾಣಿಗಳೂ ಕಾಲರೂಪ ಪರಮಾತ್ಮನಿಂದ ಮೊದಲೇ ಕೊಲ್ಲಲ್ಪಡುತ್ತಿದ್ದು ಆಮೇಲೆ ನಿಮಿತ್ತಮಾತ್ರ ಒಬ್ಬರನ್ನೊಬ್ಬರು ಕೊಲ್ಲುತ್ತಿರುವೆವು ! ಒಟ್ಟಿಗೆ ಎಲ್ಲವೂ ಕಾಲಾಧೀನವಾಗಿರುವದು; ಆದ್ದರಿಂದ ನಮಗೆ ಅಷ್ಟು ತಿಳುವಳಿಕೆ ಬರುವವರೆಗೆ ನಾವು ಒಣ ಉಸಾಬರಿಗೆ ಹೋಗದೆ, ನಮ್ಮ ಸ್ಥಿತಿಗತಿಗನುಸರಿಸಿ ಜ್ಞಾನಿಗಳು ತೋರಿಸಿಕೊಟ್ಟಿರುವ ನಮ್ಮ ನಮ್ಮ ಧರ್ಮ ಮಾರ್ಗಗಳಂತೆ ಹೋಗುವದು ನಿರ್ಭಯವು ! ಯಾಕಂದರೆ, ನಮ್ಮ ಕಲ್ಯಾಣಕ್ಕಾಗಿಯೇ ಆಯಾ ಕಾಲಕ್ಕನುಸರಿಸಿ ಬೇರೆಬೇರೆ ಧರ್ಮ ಮಾರ್ಗಗಳನ್ನು ಜ್ಞಾನಿಗಳು ತೋರಿಸುತ್ತಿರುವರು. ಅಂದಬಳಿಕ ದುರಗಪ್ಪಾ, ನಿನ್ನ ಧರ್ಮವೇ ಆಗಿರುವ ಹಿಂಸೆಯ ವಿಷಯವಾಗಿ ನೀನು ಪಶ್ಚಾತ್ತಾಪಪಡುವದೇಕೆ? ಇನ್ನು ಹಿಂಸೆಯು ನಿನ್ನ ಧರ್ಮವಾಗಿದ್ದೂ ನೀನು ಹಿಂಸೆಯನ್ನು ಬಿಟ್ಟರೆ ದೋಷವಿಲ್ಲ; ಇದ್ದರೆ ಅದರಿಂದ ವಿಶೇಷ ಲಾಭವೇ ನಿಸ್ಸಂಶಯವಾಗಿ ಇರುತ್ತದೆಂಬದನ್ನು ನಿನ್ನ ಧರ್ಮದಲ್ಲಿಯೇ ನೀನು

ಕಂಡುಕೊಳ್ಳಬಹುದು. ಒಟ್ಟಿನಲ್ಲಿ ತಿಳಿದುಕೊಳ್ಳತಕ್ಕದ್ದೇನೆಂದರೆ, ಯಾರಿಗೆ ಹಿಂಸೆಯು ಉಕ್ತವೋ ಅವರು ಧರ್ಮಕ್ಕಾಗಿ ಹಿಂಸೆ ಮಾಡಿದರೆ ದೋಷವಿಲ್ಲವು; ಯಾರಿಗೆ ಹಿಂಸೆಯು ಉಕ್ತವಲ್ಲವೋ ಅವರು ಹಿಂಸೆ ಮಾಡಿದರೆ ದೋಷವು; ''ಅಹಿಂಸಾಪರಮೋಧರ್ಮಃ'' ಎಂಬ ಸಿದ್ಧಾಂತವು ಶ್ರೇಷ್ಠ ಧರ್ಮವೆಂದು ಬಹುತರ ಎಲ್ಲ ಧರ್ಮದವರಿಗೂ ಮಾನ್ಯವಾಗಿದ್ದರೂ, ಕೆಲವರು ಈ ತತ್ವಕ್ಕೇ ಪ್ರಾಮುಖ್ಯ ಕೊಟ್ಟು, ಅವರು ಬುದ್ಧಿಪೂರ್ವಕ ಹಿಂಸೆ ಮಾಡುವದನ್ನು ಬಿಡುವದಲ್ಲದೆ, ಬಗೆಬಗೆಯ ಉಪಾಯಗಳಿಂದ ಸ್ವಾಭಾವಿಕ ಅಂದರೆ ಅಪರಿಹಾರ್ಯ ಹಿಂಸೆಯನ್ನೂ ಕಡಿಮೆ ಮಾಡಲಿಕ್ಕೆ ಯತ್ನಿಸುವರು. ಜೈನರಲ್ಲಿ ಧರ್ಮನಿಷ್ಠರಾದವರು ರಾತ್ರಿ ಅಡಿಗೆ ಮಾಡದಿರುವದೂ, ರಾತ್ರಿ ಓಡಾಡದಿರುವದೂ, ಹಗಲು ಓಡಾಡುವಾಗಲೂ ನವಿಲು ಗರಿಗಳಿಂದ ಮೆಲ್ಲನೆ ದಾರಿಯುಡಿಗಿ ನಡೆಯುವದೂ, ಬಾಯಿಗೆ ಅರಿವೆ ಕಟ್ಟಿಕೊಳ್ಳುವದೂ, ಸೋಸಿ ನೀರು ಕುಡಿಯುವದೂ ಇತ್ಯಾದಿ ಉಪಾಯ ಮಾಡುವದು ಇದಕ್ಕೆ ಸಾಕ್ಷಿಗಳಾಗಿರುವವು.

ದುರಗಪ್ಪ—ನನ್ನೊಡೆಯಾ, ಏನಾದರೂ ಹೇಳಬೇಕು ನೀನೆ! ನಿನ್ನನ್ನು ಬಿಟ್ಟರೆ ಇಲ್ಲಬಿಡು! ನಮ್ಮ ಮಡ್ಡ ಮಂದಿಗೂ ತಟ್ಟನೆ ಹೊಳೆಯುವಂತೆ ಆಟರಲ್ಲಿಯೇ ಎಂತಹ ಪಾಡಾಗಿ ಹೇಳಿದೆಯಲ್ಲ!! ಆದರೆ ಕೊಲ್ಲು ಎಂದು ಹೇಳುವ ಧರ್ಮವೇ ಕೊಲ್ಲಬೇಡೆಂದು ಹೇಳುವದು ಆಶ್ಚರ್ಯವಲ್ಲವೆ?

ಮಾಧವಾಚಾರ್ಯ—ಇದರಲ್ಲಿ ಆಶ್ಚರ್ಯವೇನು? ಮಾಂಸ ತಿನ್ನಬೇಡಿರೆಂದು ತಲೆ ಒಡಕೊಂಡರೂ ಸ್ವಾಭಾವಿಕವಾಗಿಯೇ ಮಾಂಸ ತಿನ್ನಲಿಕ್ಕೆ ಮೆಚ್ಚುವವರಿಗೆ ಮಾಂಸ ತಿನ್ನೆಂದು ಧರ್ಮವು ಮತ್ತೆ ಹೇಳುವದರಲ್ಲಿ ಮಹತ್ವವೇನು? ಆದರೆ ಮನುಷ್ಯನ ಮಾಂಸ ತಿನ್ನುವ ಸ್ವಾಭಾವಿಕ ಪ್ರವೃತ್ತಿಯನ್ನು ಕಡಿಮೆ ಮಾಡುವದಕ್ಕಾಗಿಯೇ ಧರ್ಮವು ಮಾಂಸ ತಿನ್ನುವ ಸಂಬಂಧದಿಂದ ನಿಯಮಗಳನ್ನು ಹಾಕಿ ಅಷ್ಟರಮಟ್ಟಿಗೆ ಮಾಂಸ ತಿನ್ನಲಿಕ್ಕೆ ಪ್ರತಿಬಂಧ ಮಾಡಿರುತ್ತದೆ. ಮನಸ್ಸಿಗೆ ಬಂದಂತೆ ಮಾಂಸ ತಿನ್ನುವದಕ್ಕಿಂತ, ಧರ್ಮದ ಕಟ್ಟಳೆಗಳನುಸರಿಸಿ ಮಾಂಸ ತಿನ್ನುವದರಲ್ಲಿ ಮಾಂಸ ಭಕ್ಷಣದ ಪ್ರತಿಬಂಧಕತೆಯು ಹೆಚ್ಚು ಇರುವದಲ್ಲವೆ? ಈಗ ನಮ್ಮ ಬ್ರಾಹ್ಮಣರ ಯಜ್ಞದ ಉದಾ ಹರಣೆಯನ್ನೇ ತಕ್ಕೊಳ್ಳೋಣ! ದುರಗಪ್ಪಾ, ಹಾರುವರು ಯಜ್ಞದಲ್ಲಿ ಕುರಿ ಕೊಲ್ಲುವರೆಂದೂ, ಮಾಂಸ ತಿನ್ನುವರೆಂದೂ ತಿಳಿದು ಜನರು ಅವರನ್ನು ತಿರಸ್ಕರಿಸುವದನ್ನು ನೀನು ಕೇಳಿರಬಹುದಷ್ಟೆ? ಆದರೆ ನಮ್ಮ ಧರ್ಮಗ್ರಂಥವಾದ ವೇದವು ಯಜ್ಞದಲ್ಲಿ ಪಶು ಹಿಂಸೆ ಮಾಡಲು ಆಜ್ಞಾಪಿಸು ವದರಿಂದ ನಾವು ಆಗ ಪಶುಹಿಂಸೆ ಮಾಡುವದು ನಿಜವು; ಆದರ ಒಂದು ಪಶುಹಿಂಸೆಗಾಗಿ ಸಾವಿರಾರು ರೂಪಾಯಿ ವೆಚ್ಚ ಮಾಡಬೇಕಾಗುವದನ್ನೂ, ಆ ಪಶುವಿನ ಮಾಂಸವು ದೇವತೆಗಳಿಗೆ ಮುಟ್ಟಿ ಅವರು ತೃಪ್ತರಾಗಬೇಕೆಂದು ನಾವು ಪಡುವ ಆಯಾಸವನ್ನೂ, ಇಷ್ಟು ವೆಚ್ಚಮಾಡಿ, ಇಷ್ಟು ಆಯಾಸಪಟ್ಟರೂ ಯಜಮಾನನ ಬಾಯಲ್ಲಿ ಬಿತ್ತೋ ಬೀಳಲಿಲ್ಲವೋ ಅನ್ನುವಹಾಗೆ ಶಾಸ್ತ್ರಕ್ಕಾಗಿ ಬೀಳುವರವಷ್ಟು ಯಜ್ಞಶೇಷ ಮಾಂಸವನ್ನು ಕುರಿತು ವಿಚಾರಮಾಡಿದರೆ, ವೇದವು ಮನುಷ್ಯನ ಸ್ವಾಭಾವಿಕವಾದ ಹಿಂಸಾಪ್ರವೃತ್ತಿಯನ್ನು ಪ್ರತಿಬಂಧಿಸುತ್ತದಲ್ಲದೆ, ಅದನ್ನು ಪ್ರೋತ್ಸಾಹಿಸುತ್ತದೆಂದು ಹೇಳಲಾಗುವದಿಲ್ಲ, ಮೇಲಾಗಿ

ಕರ್ಮಠರು ಮಾಡುವ ಈ ಹಿಂಸಾ ಯಜ್ಞವು ಗೌಣವೆಂದು ಹೇಳಿ, ಜ್ಞಾನಿಗಳು ಮಾಡುವ ಹಿಂಸೆಯಿಲ್ಲದ ಯೌಗಿಕ ಯಜ್ಞವನ್ನು ಶ್ರೇಷ್ಠವೆಂದು ವೇದವೇ ಹೊಗಳುತ್ತಿದೆ. ಒಟ್ಟಿಗೆ ಯಜ್ಞದಲ್ಲಿ ಪಶು ಹಿಂಸೆಯು ಬ್ರಾಹ್ಮಣನಿಗೆ ಉಕ್ತವಾದ್ದರಿಂದ ಅಧಿಕಾರ ಸಂಪನ್ನನಾದ ಯಜಮಾನನು ಅದನ್ನು ಮಾಡುವದರಿಂದ ಅವನಿಗೆ ದೋಷಬರದೆ, ಆತನಿಗೆ ಸ್ವರ್ಗಾದಿ ಪುರುಷಾರ್ಥಗಳು ಪ್ರಾಪ್ತವಾಗುತ್ತಿದ್ದರೂ, ಪರಮ ಪುರುಷಾರ್ಥವಾದ ಮೋಕ್ಷವನ್ನು ಕೊಡುವ ಜ್ಞಾನ ಯಜ್ಞವೇ ಶ್ರೇಷ್ಠವೆಂದು ವೇದ ಮತದಂತೆ ಬ್ರಾಹ್ಮಣರೇ ತಿಳಿಯುವರು ! ಈ ಕಲಿಯುಗದಲ್ಲಿಯಂತು, ಯಜಮಾನನ ಹಾಗು ಋತ್ವಿಜರ ದುಡ್ಡಿನ ಆಶೆಬುರುಕತನ, ಕೀರ್ತಿಯ ಇಚ್ಛೆ, ಅವರ ಸದ್ಭಾವ ಹೀನತೆ, ಸದೋಷ ಪದ್ಧತಿಯಿಂದ ಕೂಡಿಸಿದ ಅವರ ಯಜ್ಞದ ಸಾಮಗ್ರಿಗಳು, ಸಮಾಜದ ಸ್ವಾಭಾವಿಕ ಒಲವು ಇವನ್ನೆಲ್ಲ ಮನಸ್ಸಿಗೆ ತಂದರೆ, ಆತ್ಮಶುದ್ಧಿಯು ಅಪರೂಪವಾಗಿ ಹೋದ ಈಗಿನ ಕಲಿಕಾಲದಲ್ಲಿ ಯಾಜ್ಞಿಕ ಹಿಂಸೆಗೂ ಕೂಡ ಹಿಂಜರಿದು, ಹಿಂಸೆಯಿಲ್ಲದ ಅನ್ಯೋಪಾಯಗಳಿಂದ ಬ್ರಾಹ್ಮಣರು ಕೃತಾರ್ಥತೆ ಪಡೆಯುವದು ಯೋಗ್ಯವೆಂದು ಹೇಳಬೇಕಾಗುತ್ತದೆ. ಹಿಂಸೆ ಮಾಡೆಂದು ಹೇಳುವ ವೇದವೇ ಹಿಂಸೆ ಮಾಡಬೇಡೆಂತಲೂ ಹೇಳುತ್ತದೆ. ಅದರಂತೆ ಈ ಕಾಸಿಮಖಾನನ ಗುರುಗಳಾದ ಮಹಮ್ಮದಪೈಗಂಬರರು ಹಿಂಸೆಗೆ ಸಮ್ಮತಿಪಟ್ಟಿದ್ದರೂ, ಅವರೇ ಹಿಂಸೆ ಮಾಡಬೇಡೆಂತಲೂ ಹೇಳುತ್ತಾರೆ. ದುರಗಪ್ಪಾ, ನಾನು ಹಿಂದಕ್ಕೆ ಮುಸಲ್ಮಾನ ಸತ್ಪುರುಷರ ಕೊಡವು ನಕ್ಕ ಕಥೆಯನ್ನು ಹೇಳಿದ್ದು ನಿನ್ನ ಸ್ಮರಣದಲ್ಲಿರಬಹುದು! ಹೀಗೆ ಎಲ್ಲ ಧರ್ಮದವರೂ ಹಿಂಸೆಯು ಹೇಸಿ ಕೆಲಸವೆಂದು ಹೇಳಿರಲೇಬೇಕು. ಒಮ್ಮೆಲೆ ಬೇಡೆಂದರೆ ಹುಟ್ಟು ಗುಣವನ್ನು ಯಾರು ಬಿಡುವರು? ಆದ್ದರಿಂದ ಪ್ರತಿಯೊಂದು ಧರ್ಮವು ಹಿಂಸೆಯನ್ನು ಬಿಡಿಸುವದಕ್ಕಾಗಿ ಹಿಂಸೆಯನ್ನು ಪ್ರತಿಬಂಧಿಸುತ್ತ ಮೆಲ್ಲಮೆಲ್ಲನೆ ಹಿಂಸೆ ಮಾಡಿಸುತ್ತ ಕಡೆಗೆ ಹಿಂಸೆ ಬಿಡುವದು ಉತ್ತಮವೆಂದು ಹೇಳಿ ಅದನ್ನು ಬಿಡಿಸಲು ಯತ್ನಿಸುವದು. ಒಟ್ಟಿಗೆ ಪ್ರತಿ ಒಂದು ಧರ್ಮದ ಅಂತಿಮ ಸಾಧ್ಯವು ಜಗತ್ತನ್ನು ಹಿಂಸಾಮುಕ್ತ ಮಾಡುವದಿರುತ್ತದಲ್ಲದೆ, ಜಗತ್ತನ್ನು ಹಿಂಸೆಗೆ ಒಳಪಡಿಸುವದಿರುವದಿಲ್ಲೆಂದು ಗಟ್ಟಿಮುಟ್ಟಿಯಾಗಿ ತಿಳಿದು, ಪ್ರಾಣಿಗಳ ಪರಿಹಾರ್ಯ ಹಿಂಸೆಯನ್ನು ಎಲ್ಲರೂ ಬಿಟ್ಟುಬಿಡಬೇಕು! ಅದರಿಂದ ದೇವರೂ ಮೆಚ್ಚುವನು; ನಮ್ಮ ಮನಸ್ಸೂ ಶಾಂತವಾಗುವದು.

ದುರಗಪ್ಪ—ಗುರುದೇವಾ, ಮನುಷ್ಯಜಾತಿಯು ಈಗ ಪ್ರಯತ್ನಪೂರ್ವಕವಾದ ಹಿಂಸೆಯಿಂದಲೇ ಜೀವಿಸುತ್ತಿರುವದೆಂದು ಹೇಳಬಹುದು; ಅಂದಬಳಿಕ ಅದನ್ನು ಬಿಟ್ಟುಬಿಟ್ಟರೆ ಆ ಜಾತಿಯು ಬದುಕುವ ಬಗೆ ಹೇಗೆ? ಪ್ರಾಣಿಗಳನ್ನು ಕೈಮುಟ್ಟಿ ಕೊಂದರೆ ಪ್ರಯತ್ನಪೂರ್ವಕ ಹಿಂಸೆಯಾಗುವಂತೆ, ಸಸ್ಯ ಲತೆಗಳನ್ನು ಕಿತ್ತಿಹೆಚ್ಚಿ ತಿಂದರೆ, ಮತ್ತು ಕಾಳು–ಕಡಿಗಳನ್ನು ಬೇಯಿಸಿ ಹುರಿದು ತಿಂದರೆ ಅದೂ ಪ್ರಯತ್ನಪೂರ್ವಕ ಹಿಂಸೆಯೇ ಆಗುವದಲ್ಲವೆ? ಕೋಳಿಯ ತತ್ತಿಯಲ್ಲಿ ಜಾಗ್ರತ ಜೀವತತ್ವವು ಇರುವಂತೆ, ಕಾಳಿನಲ್ಲಿಯೂ ಜಾಗ್ರತ ಜೀವತತ್ವವು ಇರುವದರಿಂದ ಕೋಳಿಯ ತತ್ತಿಗೂ ಕಾಳಿಗೂ, ''ಪ್ರಾಣಿಗಳು ಗಿಡಗಂಟೆಗಳು'' ಎಂಬ ತೋರಿಕೆಯ ಭೇದವಲ್ಲದೆ ಸಚೇತನಗಳೆಂದು ಹೇಳುವಾಗ ಅವುಗಳಲ್ಲಿ ಭೇದವೇನಿರುವದು? ಅಂದಬಳಿಕ ಕಾಳು–ಕಡ್ಡಿ, ಗಡ್ಡೆ–ಗೆಣಸು, ಸೊಪ್ಪು–ಸದೆ ಇವನ್ನು ತಿನ್ನುವದೂ ಹಿಂಸೆಯೇ ಆಯಿತು! ಕಾಳು ತಿನ್ನುವದೆಂದರೆ ಕೋಳಿಯ

ತತ್ತಿಯನ್ನು ತಿಂದಹಾಗೆ; ಮತ್ತು ಸೊಪ್ಪು–ಸದೆಗಳನ್ನು ಹರಿದು ಕಿತ್ತಿ ತಿನ್ನುವ ದೆಂದರೆ, ಪ್ರಾಣಿಗಳನ್ನೇ ಹರಿದು–ಸೆಳೆದು ತಿಂದಹಾಗೆ ಆಗುವದಿಲ್ಲವೆ? ಅಂದಬಳಿಕ ಗುರುದೇವಾ, ಇದಕ್ಕೇನು ಸಮಾಧಾನ ಹೇಳುತ್ತೀ?

ಮಾಧವಾಚಾರ್ಯ—ದುರಗಪ್ಪಾ, ನಿನ್ನ ಸೂಕ್ಷ್ಮ ವಿಚಾರಕ್ಕಾಗಿ ನನಗೆ ಬಹು ಸಂತೋಷ ವಾಗುತ್ತದೆ. ನಿನ್ನ ಪ್ರಶ್ನಕ್ಕೆ ಪುರಾತನರ ಮತದಂತೆ ತಿಳಿದ ಮಟ್ಟಿಗೆ ಸಮಾಧಾನ ಹೇಳುವೆನು ಕೇಳು– ಹಿಂಸೆಯಲ್ಲಿ ಅಪರಿಹಾರ್ಯ–ಹಿಂಸೆಯೆಂತಲೂ, ಪರಿಹಾರ್ಯ ಹಿಂಸೆಯೆಂತಲೂ ಎರಡು ವಿಧಗಳಿರುವವೆಂದು ಆಗಲೆ ನಿನಗೆ ನಾನು ಹೇಳಿದೆನಷ್ಟೆ? ಅದರಂತೆ ಆಹಾರದಲ್ಲಿ ಸಸ್ಯಜಾಹಾರ ವೆಂತಲೂ, ಪ್ರಾಣಿಜಾಹಾರವೆಂತಲೂ ಎರಡು ವಿಧಗಳಿರುವವೆಂದು ಈಗ ವಿಂಗಡಿಸಿ ಹೇಳುವೆನು, ನೆನಪಿನಲ್ಲಿಡು. ತನ್ನ ನೆರಳಿಗೆ ತಾನು ಅಂಜುವಂತೆ ಹಿಂಸೆಗಾಗಿ ಅಂಜಿ, ತಮ್ಮ ತಮ್ಮ ಧರ್ಮಕ್ಕನುಸರಿಸಿ ದೇಹರಕ್ಷಣದ ಹಾಗು ದೇಹವ್ಯಾಪಾರ ಸಾಗುವದರ ಮಟ್ಟಿಗೆ ಮಾಡಲೇ ಬೇಕಾಗಿರುವ ಸೂಕ್ಷ್ಮ ಜಂತುಗಳ ಹಾಗು ಸಸ್ಯಗಳ ಅದರಂತೆ ಧರ್ಮೋಕ್ತ ಪ್ರಾಣಿಗಳ ಹಿಂಸೆಯು ಅಪರಿಹಾರ್ಯ ಹಿಂಸೆಯು; ಇನ್ನು ಮಾಡದಿದ್ದರೂ ನಡೆಯುವಹಾಗಿದ್ದು ನಾಲಿಗೆಯ ಸವಿಗೋಸ್ಕರ ಬುದ್ಧಿಪೂರ್ವಕವಾಗಿ ಮಾಡುವ ಕುರಿ–ಕೋಳಿ–ಆಕಳುಗಳಂಥ ಸ್ಥೂಲ ಪ್ರಾಣಿಗಳ ಸ್ವಚ್ಛಂದದ ಹಿಂಸೆಯು ಪರಿಹಾರ್ಯ ಹಿಂಸೆಯು. ಉಸುರಾಡಿಸುವದರಿಂದಲೂ, ಸೋಸಿ ನೀರು ಕುಡಿಯುವದರಿಂದಲೂ, ಓಡಾಡುವದೇ ಮೊದಲಾದ ದೈಹಿಕ ವ್ಯಾಪಾರ ಗಳನ್ನು ಮಾಡುವದರಿಂದಲೂ, ತಾವಾಗಿ ಉದುರಿಬಿದ್ದ ಅಥವಾ ಪ್ರಯತ್ನಪೂರ್ವಕವಾಗಿ ಸಂಪಾದಿಸಿದ ಸಸ್ಯಜಾಹಾರಗಳನ್ನು ಅಥವಾ ಆಕಳ ಹಾಲಿನಂಥ ಅಹಿಂಸೆಯ ಪ್ರಾಣಿ ಜಾಹಾರವನ್ನು ದೇಹರಕ್ಷಣ ಕ್ಕಾಗಿ ಸ್ವೀಕರಿಸುವದರಿಂದಲೂ, ಮಾಂಸಾಹಾರವನ್ನು ಬಿಡಲಾರದೆ ಹಿಂಸೆಗಾಗಿ ಹೇಸುತ್ತ ಕೇವಲ ಧರ್ಮವೆಂದು ಭಾವಿಸಿ ಸದಾಚಾರಸಂಪನ್ನನಾದ ಧರ್ಮಿಷ್ಠನು, ತನ್ನ ಧರ್ಮಕ್ಕೆ ಉಕ್ತವಾದ ಪ್ರಾಣಿ ಗಳನ್ನು ಮಾತ್ರ ಪಶ್ಚಾತ್ತಾಪಪೂರ್ವಕ ಧರ್ಮಕ್ಕಾಗಿಯೇ ಕೊಲ್ಲುವದರಿಂದಲೂ ಆಗುವ ಹಿಂಸೆಯು ಅಪರಿಹಾರ್ಯ ಹಿಂಸೆಯು; ಯಾಕಂದರೆ ಇಂಥ ಹಿಂಸೆ ಮಾಡದಿದ್ದರೆ ಶಾಂತರೀತಿಯಿಂದ ದೇಹ ರಕ್ಷಣ ಮಾಡುವದು ಆಗದು. ''ಶರೀರ ರಕ್ಷಿತೋ ಧರ್ಮಃ'' ಎಂಬಂತೆ, ಧರ್ಮವು ಶರೀರ ರಕ್ಷಿತವಾಗಿರಲು, ಧರ್ಮದಿಂದ ಪ್ರಾಪ್ತವಾಗುವ ಮೋಕ್ಷವನ್ನು ಸಾಧಿಸುವದಕ್ಕಾಗಿ ಶರೀರ ರಕ್ಷಣ ಮಾಡಲೇಬೇಕು. ಹೀಗೆ ದೇಹವನ್ನು ಧರ್ಮಸಾಧನಕ್ಕಾಗಿಯೇ ರಕ್ಷಿಸಬೇಕಾಗುವಂತೆ, ಹಿಂಸಾದಿ ದೈಹಿಕ ವ್ಯಾಪಾರಗಳನ್ನಾದರೂ ಧರ್ಮಸಾಧನವಾಗುವಂತೆ ಧರ್ಮಕ್ಕನುಸರಿಸಿಯೇ ಮಾಡಬೇಕು. ಒಟ್ಟಿಗೆ, ಮನುಷ್ಯನು ಧರ್ಮಕ್ಕಾಗಿ ದೇಹವನ್ನು ರಕ್ಷಿಸಿ, ದೇಹವಿರುವತನಕ ಧರ್ಮಬಾಹಿರ ವ್ಯಾಪಾರಗಳನ್ನು ಮಾಡಲಾಗದು. ಹೀಗೆ ಧಾರ್ಮಿಕ ವ್ಯವಹಾರಗಳನ್ನು ಅಬಾಧಿತವಾಗಿ ಮಾಡಲು ಆಸ್ಪದವಿರುವದು ಮೋಕ್ಷಸಾಧನವಾದದ್ದರಿಂದ, ಅದು ಮಾತ್ರ ದೈಹಿಕ ಸ್ವಾತಂತ್ರ್ಯವೆನಿಸುವದಲ್ಲದೆ, ಕೇವಲ ನರಕ ಸಾಧನವಾದ ಚಕ್ಕಂದದ ಸ್ವಚ್ಛಂದವೃತ್ತಿಗೆ ಆಸ್ಪದವಿರುವದು ಸ್ವಾತಂತ್ರ್ಯವೆನಿಸುವದಿಲ್ಲ ವೆಂದು ಈ ಮೊದಲೇ ಹೇಳಿದ್ದು ನಿನ್ನ ಲಕ್ಷಣದಲ್ಲಿರಬಹುದು. ದುರಗಪ್ಪಾ, ಹಿಂದಕ್ಕೆ

ತ್ರೇತ–ದ್ವಾಪರ ಯುಗಗಳ ಸಂಧಿಕಾಲದಲ್ಲಿ 12 ವರ್ಷ ಬರಬಿದ್ದು, ಮಹಾತ್ಮನಾದ ವಿಶ್ವಾಮಿತ್ರ ಮುನಿಗೆ ಏನೂ ಆಹಾರ ದೊರೆಯದ್ದರಿಂದ, ದೇಹಪಾತವಾಗುವ ಪ್ರಸಂಗ ಬರಲು, ಆತನು ಚಾಂಡಾಲನ ಮನೆಯಲ್ಲಿ ನಾಯಿಯ ತೊಡೆಯ ಮಾಂಸವನ್ನು ಕಳವು ಮಾಡಹೋಗಿ, ಚಾಂಡಾಲನಿಂದ ಅದನ್ನು ಸಂಪಾದಿಸಿ, ಅದರಿಂದಲೇ ದೇವಪಿತೃಗಳ ಆರಾಧನೆ ಮಾಡಿ ಅವರನ್ನು ತೃಪ್ತಿಪಡಿಸಲು, ಆ ಋಷಿವರ್ಯನು ಆ ಶೇಷ ಮಾಂಸದ ಆಸ್ವಾದ ನೋಡುವದರೊಳಗಾಗಿಯೇ ಇಂದ್ರನು ಮಳೆಗರೆದನೆಂದು ಭಾರತದಲ್ಲಿ ಹೇಳಿರುತ್ತದೆ; ಆದರೆ ಇದರ ರಹಸ್ಯವು—''ಧರ್ಮಸಾಧಕವಾದದ್ದರಿಂದ ಪ್ರಯತ್ನಪೂರ್ವಕ ದೇಹರಕ್ಷಣ ಮಾಡಲೇಬೇಕೆಂ''ಬುದೇ ಆಗಿರುತ್ತದೆ; ಆದ್ದರಿಂದ ದುರಗಪ್ಪಾ, ಧರ್ಮಕ್ಕೋಸ್ಕರ ದೇಹರಕ್ಷಣ ಮಾಡುವದಕ್ಕಾಗಿ ಸಸ್ಯಜಾಹಾರ ಮಾಡಿದರೆ ದೋಷವಿಲ್ಲ. ಮನುಷ್ಯ ಜಾತಿಗೇ ಸಾಲುವಷ್ಟು ಸಸ್ಯಜಾಹಾರಗಳನ್ನು ಒದಗಿಸಿಕೊಡಲು, ಸರ್ವಾಧಾರಳಾದ ಭೂದೇವಿಯು ನಿಃಸಂಶಯ ಸಮರ್ಥಳಿರುವಳು. ಇದಲ್ಲದೆ ಗೋಗಳಂಥ ಹಾಲು ಕರೆಯುವ ನಿರಪರಾಧಿಗಳಿಂದ ಸಾತ್ವಿಕ ಪ್ರಾಣಿಗಳ ವಧಮಾಡಿ ಅವುಗಳ ಸಂಖ್ಯೆಯನ್ನು ಕಡಿಮೆ ಮಾಡದೆ, ಅವನ್ನು ರಕ್ಷಿಸಿ ಅವುಗಳ ಹಾಲಿನಿಂದಲೇ ಜೀವಿಸಹತ್ತಿದರೆ, ಆ ಪ್ರಾಣಿಗಳು ತಮ್ಮ ಹಾಲಿನಿಂದಲೇ ಮನುಷ್ಯರ ಜಾತಿಗೆ ಜಾತಿಯನ್ನೇ ರಕ್ಷಿಸುವಷ್ಟು ಅಭಿವೃದ್ಧವಾಗಬಹುದು! ಆದ್ದರಿಂದ ದಯಾವಂತರ ಮೈಮೇಲೆ ಮುಳ್ಳು ಬರುವಂಥ ಅಸಹ್ಯವಾದ ಪ್ರಾಣಿಹಿಂಸೆಯನ್ನು ಮಾಡದೆ, ಸಸ್ಯಜಾಹಾರ; ಹಾಲಿನಂಥ ಅಹಿಂಸೆಯ ಪ್ರಾಣಿಜಾಹಾರಗಳಿಂದ ಮನುಷ್ಯನು ಜೀವಿಸುವ ಮನಸ್ಸು ಮಾಡಬೇಕು; ಅಂದರೆ ಆಯಾ ಧರ್ಮಸ್ಥಾಪಕರ ಅಂತಿಮ ಶ್ರೇಷ್ಠ ಧರ್ಮವಾದ ಅಹಿಂಸಾವ್ರತವನ್ನು ಪಾಲಿಸಿದಂತಾಗುವದಲ್ಲದೆ, ಜಗತ್ತಿನಲ್ಲಿ ಹಿಂಸೆಯ ಮಾನವು ಕಡಿಮೆಯಾಗಿ, ಆ ಮಾನದಿಂದ ನಿರ್ಭಯವು ಉಂಟಾಗಲು ಪ್ರಾಣಿಗಳ ಸುಖವು ಹೆಚ್ಚಾಗಬಹುದಾಗಿದೆ! ದುರುಗಪ್ಪಾ, ನಿರ್ದಯದಿಂದ ಪ್ರಾಣಿಗಳ ಹಿಂಸೆ ಮಾಡುವ, ಹಾಗು ಮಾಂಸ ತಿಂದು ಹಿಂಸೆಗೆ ಉತ್ತೇಜನ ಕೊಡುವ ಜನರಲ್ಲಿ ಭೂತದಯೆಯು ಇರುವದೆಂದೂ ಅವರಿಂದ ದಯಾಗುಣದ ಕಾರ್ಯಗಳು ಆಗುವವೆಂದೂ ನಿಃಸಂಶಯದಿಂದ ಹೇಗೆ ಹೇಳಬೇಕು? ಅವರಿಗೆ ಪ್ರಾಣಿಗಳನ್ನು ಕೊಚ್ಚುವದೆಂದರೆ, ರೂಢಿಯ ಮೂಲಕ ಸವತಿಯ ಕಾಯಿ ಹೆಚ್ಚಿದ ಹಾಗಾಗುತ್ತಿರಬಹುದು; ಇದು ಭೂತದಯದ ಕಾರ್ಯವೇ? ಆದ್ದರಿಂದ ಭೂತದಯಾಪರ ರಾಗಬೇಕೆನ್ನುವವರು ಪ್ರಾಣಿಹಿಂಸೆಯನ್ನು ಬಿಡಬೇಕು. ದೇಹಧಾರಣಕ್ಕೆ ಊಟಮಾಡುವದು ಅವಶ್ಯವಿದ್ದರೂ, ಧಾರ್ಮಿಕ ಉಪೋಷಣ ಮಾಡುವದರಿಂದ ವಿಶೇಷ ಪುಣ್ಯ ಬರುವಂತೆ, ಯಾವದೊಂದು ಧರ್ಮಕ್ಕೆ ಪ್ರಾಣಿಹಿಂಸೆಯು ಉಕ್ತವಾಗಿದ್ದರೂ, ಅದೇ ಧರ್ಮದಲ್ಲಿ ಪ್ರಾಣಿಗಳನ್ನು ಹಿಂಸಿಸಬೇಡೆಂತಲೂ ಹೇಳಿರುವಂತೆ ಹಿಂಸೆಯನ್ನು ಪರಿತ್ಯಜಿಸಿದರೆ ವಿಶೇಷ ಪುಣ್ಯವು ಬರಲೇಬೇಕು. ಈಗಿನ ಕಲಿಯುಗದಲ್ಲಿ ಜನರ ಧರ್ಮ ಬುದ್ಧಿಯು ನಷ್ಟವಾಗಿರುವದರಿಂದ, ಧರ್ಮಕ್ಕಾಗಿ ಯಾವ ಕಾರ್ಯಗಳೂ ನಡೆಯದೆ ಸುಖಕ್ಕಾಗಿಯೇ ನಡೆಯುವವು; ಆದ್ದರಿಂದ ಜನರು ಈಗ ಸುಖಕ್ಕಾಗಿ ಏನು ಮಾಡಲಿಕ್ಕೂ ಹೇಸಲಿಕ್ಕಿಲ್ಲ. ಕೆಲಸ ಬೊಗಸೆ ಮಾಡದ ಹಾಗಾಗಲು ಭಾರವಾಗಿದ್ದ ಮುದುಕ ತಾಯಿ–ತಂದೆಗಳ ಮಾಂಸವು ಕಾಲಮಹಿಮೆಯಿಂದ

ಬಹು ರುಚಿಯಾಗಿ, ಆ ಮಾತು ಜನರಿಗೆ ಗೊತ್ತಾದರೆ ಚುಟುಕನಾಲಿಗೆಯ ಈ ಕೆಟ್ಟ ಕಲಿಯುಗದಲ್ಲಿ ವೃದ್ಧ ತಾಯಿ–ತಂದೆಗಳನ್ನು ಹರಿದು ತಿನ್ನಲಿಕ್ಕೂ ಹಿಂದೆಮುಂದೆ ನೋಡಲಿಕ್ಕಿಲ್ಲ; ಆದ್ದರಿಂದ ಮೂಲತಃ ಈಗಿನ ಕಾಲದಲ್ಲಿ ಮಾಂಸವನ್ನು ಪರಿತ್ಯಜಿಸಿ ಜೀವಿಸುವದೇ ಯುಕ್ತವು; ಇದೇ ಕಾರಣದಿಂದ ನಮ್ಮ ಧರ್ಮವು ಬ್ರಾಹ್ಮಣ–ಕ್ಷತ್ರಿಯ–ವೈಶ್ಯರಿಗೆ ಕಲಿಯುಗದಲ್ಲಿ ಮಾಂಸಭಕ್ಷಣವು ನಿಷೇಧವೆಂದು ನಿರ್ಬಂಧಿಸಿರುತ್ತದೆ; ಇಲ್ಲದಿದ್ದರೆ ಈ ತ್ರೈವರ್ಣಿಕರಿಗೂ ಯುಗಾಂತರದಲ್ಲಿ ಮಾಂಸಾಶನವು ಉಕ್ತವಾಗಿತ್ತು. ಈ ರಹಸ್ಯವನ್ನು ವಿಚಾರಿಸಿ ಎಲ್ಲರೂ ಈ ಕಾಲದಲ್ಲಿ ಮಾಂಸಾಶನವನ್ನು ಬಿಡತಕ್ಕದ್ದು.

ದುರಗಪ್ಪ—ನನ್ನ ಗುರುವೇ, ಹಿಂಸೆ ಮಾಡಬಾರದೆಂದು ಧರ್ಮವು ಹೇಳುವದು ಯಾಕೆ? ಹಿಂಸೆ ಮಾಡುವದರಿಂದ ಪ್ರಾಣಿಗಳಿಗೆ ವ್ಯಥೆಯಾಗುತ್ತದೆಂದೇ ಅಲ್ಲವೆ? ಅಂದಬಳಿಕ ಗಿಡಗಳೇನು ಪ್ರಾಣಿಗಳೇನು? ಅವು ಸಚೇತನಗಳಾದ್ದರಿಂದ ಅವುಗಳ ಹಿಂಸೆಯಿಂದ ಎಲ್ಲವುಗಳಿಗೂ ಸರಿಯಾಗಿಯೆ ಪೀಡೆಯಾಗುತ್ತಿರಬಹುದು! ಯಪ್ಪಾ, ಮೊಳಿಕೆ ಹಾದ ಕಾಳನ್ನು ಅಥವಾ ಮೊಳಿಕೆ ಹಾಯದ ಕಾಳನ್ನು ಗುಗ್ಗರಿಗಾಗಿ ನಾವು ಒಗ್ಗರಣೆ ಹಾಕುವೆವಲ್ಲ; ಅದರಂತೆ ಮೊಳೆತು ಮಲಮಲ ಅನ್ನುವ ಎಳೆಯ ಮೆಂತೆಯ ಸೊಪ್ಪನ್ನು ಪಚಡಿಗಾಗಿ ಚರಚರ ಹೆಚ್ಚುವೆವಲ್ಲ; ಹಾಗೆಯೇ ಬೆಳೆದುನಿಂತ ಬೆಳೆಯನ್ನು ಕನಿಕರವಿಲ್ಲದೆ ಕರಕರ ಕೊಯ್ದು ಗೂಡು ಹಾಕುವೆವಲ್ಲ; ಅದೇ ರೀತಿಯಿಂದ ಮನುಷ್ಯರು ನಾವು ನಮ್ಮ ಸಂಸಾರದ ಆಚಿಗಾಗಿ ಹೇಚುಪೇಚಿಲ್ಲದೆ ಗಿಡ–ಗಂಟೆ– ಮರಗಳನ್ನು ಕಟಕತನದಿಂದ ಕಡಿಯುವೆವಲ್ಲ; ಆಗ ಅವುಗಳಿಗೆ ನೋವಾಗುತ್ತಿರಲಿಕ್ಕಿಲ್ಲವೆ? ಯಪ್ಪಾ, ಸುಖದಿಂದ ಯಾರು ಸಾಯುತ್ತಿರಬಹುದು? ತಮಗಾದ ನೋವನ್ನು ಕುರಿ–ಆಕಳುಗಳಂತೆ ಒದರಿ ಒದ್ದಾಡಿ ಮಂದಿಗೆ ತೋರಿಸಲಿಕ್ಕೆ ಬಾರದ್ದೇ ಸಸ್ಯಗಳ ತಪ್ಪೇನು? ಆದ್ದರಿಂದ ಗುರುದೇವಾ, ಸಸ್ಯಗಳಿಗಿಂತ ಪ್ರಾಣಿಗಳಿಗೆ ಹಿಂಸೆಯಿಂದ ನೋವು ಕಡಿಮೆಯಾಗುವದೆಂದು ಗೊತ್ತಾಗಿದ್ದರೆ, ದೊಡ್ಡವರು ಅಥವಾ ಧರ್ಮವು ಹೇಳುವದೆಂಬ ಮೂಢಭಾವದಿಂದ ಮಾತ್ರ ನಾವು ಪ್ರಾಣಿ ಹಿಂಸೆಯನ್ನು ಬಿಟ್ಟು, ಸಸ್ಯ ಹಿಂಸೆಯನ್ನು ಮಾಡಬೇಕಾಗುವದು !

ಮಾಧವಾಚಾರ್ಯ—ಶಾಬಾಸ, ದುರಗಪ್ಪಾ, ಕಾಸಿಮಖಾನರು ನಿನ್ನನ್ನು ಹೊಗಳುವದು ಚಂದಕ್ಕಾಗಿಯಲ್ಲ, ನೀನು ಅಂಥ ಗೌರವಶಾಲಿಯೇ ಇರುತ್ತೀ ! ನಿನ್ನ ಭೂತದಯೆಯನ್ನು ನೋಡಿ, ಕಟಕರ ಕಲ್ಲೆದೆಯೂ ಕರಗಬಹುದು. ನಿನ್ನ ವಿಚಾರವು ಬಹು ಯೋಗ್ಯವಾದದ್ದು. ಧರ್ಮಾಜ್ಞಾಪಾಲನದಲ್ಲಿ ಮೂಢಭಾವವಂತೂ ಬೇಕೇಬೇಕು; ಅಲ್ಲಿ ಆಜ್ಞೆಗಳೆಂತಲೇ ನಿಸ್ಪೃಹದಿಂದ ಅವನ್ನು ಪಾಲಿಸಬೇಕಾಗಿರುವದರಿಂದ ಅವುಗಳಿಗಾಗಿ ಕಾರ್ಯಕಾರಣ ವಿಚಾರವು ಬೇಡ; ಆದರೂ ನನ್ನ ಮಾತಿನ ಕಡೆಗೆ ಲಕ್ಷವಿರಲಿ. ಸಸ್ಯಗಳಿಗೆ ಹಿಂಸೆಯಾಗುವದು ನಿಜವು. ವಾನಪ್ರಸ್ಥರೂ–ಯತಿಗಳೂ ಸಸ್ಯಗಳ ಈ ಹಿಂಸೆಗೆ ಅಂಜಿಯೇ ತಾವಾಗಿ ಉದುರಿಬಿದ್ದ ಎಲೆ–ಹಣ್ಣುಗಳನ್ನು ಶರೀರಧಾರಣದ ಮಟ್ಟಿಗೆ ಸೇವಿಸುತ್ತಿರಬೇಕಾಗುವದು; ಆದರೆ ಗೃಹಸ್ಥಾಶ್ರಮಿಗಳಿಗೆ ಇಷ್ಟು ಸೂಕ್ಷ್ಮ ಧರ್ಮವು ನಡೆಯದ್ದರಿಂದ ಅದನ್ನು ಅವರು ಅನುಸರಿಸದಿದ್ದರೆ ಧರ್ಮತಃ ದೋಷವಿಲ್ಲ. ತಪಸ್ವಿದ್ದರೂ, ತ್ರಿಕಾಲಜ್ಞರೂ, ಜಗತ್ತಿನ ಆಗು ಹೋಗುಗಳ ಮಟ್ಟನ್ನು ಬಲ್ಲವರೂ ಆದ ಜ್ಞಾನಿಗಳೇ

ಆಯಾ ವರ್ಣದವರಿಗೆ ಹಾಗು ಆಶ್ರಮದವರಿಗೆ ತಕ್ಕ ಧರ್ಮಗಳನ್ನು ಜಗತ್ತಿನ ಕಲ್ಯಾಣಕ್ಕಾಗಿಯೇ ಹೇಳಿರುವರು. ಅದರಿಂದ ಪ್ರಾಣಿಗಳಿಗಿಂತ ಸಸ್ಯಗಳಿಗೆ ಹಿಂಸೆಯಿಂದ ನೋವು ಕಡಿಮೆಯಾಗುತ್ತಿರುವದರಿಂದಲೇ ಅವರು ಪ್ರಾಣಿಜಾಹಾರಕ್ಕಿಂತ ಸಸ್ಯಜಾಹಾರವನ್ನು ಮಾಡಬೇಕೆಂದು ಹೇಳಿರುವರು. ಇನ್ನು ಆ ಮಹಾಜ್ಞಾನಿಗಳ ಹೇಳಿಕೆಯನ್ನು ಸಮರ್ಥಿಸುವದಕ್ಕಾಗಿ ನಾನು ಮಾಡುವ ನಿರೂಪಣವನ್ನು ಕೇಳು; ಆದರೆ ಈಗಾಡುವ ನನ್ನ ಮಾತುಗಳು ನಿನ್ನ ಪುಣ್ಯದಿಂದಲೇ ಹೊರಟವೆಂದು ತಿಳಿದು, ಅವುಗಳ ಸ್ಫೂರ್ತಿಯಿಂದ ನನಗೂ ಜ್ಞಾನಪೂರ್ವಕವಾದ ಆನಂದವಾದದ್ದಕ್ಕಾಗಿ ನಿನಗೆ ಕೃತಜ್ಞನಾಗಿರುವೆನು! ದುರಗಪ್ಪಾ, ''ಸರ್ವಂ ವಿಷ್ಣುಮಯಂ ಜಗತ್'' ಎಂಬ ನಮ್ಮ ಭಕ್ತಶ್ರೇಷ್ಠ ಪ್ರಹ್ಲಾದನ ಉಕ್ತಿಯಂತೆ, ಹಾಗು ''ಈ ಜಗತ್ತು ಆತ್ಮಮಯ (ಬ್ರಹ್ಮಮಯ)''ವೆಂಬರ್ಥದ ಶ್ರುತಿವಚನದಂತೆ, ಈ ಜಗತ್ತು ಆತ್ಮಮಯವಾಗಿರುವದು. ಹೀಗೆ ಜಗತ್ತನ್ನೇ ವ್ಯಾಪಿಸಿರುವ ಅದೃಶ್ಯನಾದ ಆತ್ಮನು ನಮ್ಮ ಕಣ್ಣಿಗೆ ಜಾಗ್ರತಸ್ಥಿತಿಯಲ್ಲಿ ಹಾಗು ಅಜಾಗ್ರತ ಸ್ಥಿತಿಯಲ್ಲಿ ಹೀಗೆ ಎರಡು ಸ್ಥಿತಿಗಳಲ್ಲಿ ಬೀಳುವನು. ವೃಕ್ಷಾದಿ ಸಚೇತನ ಪದಾರ್ಥಗಳ ರೂಪದಿಂದ ತೋರುವ ಆತ್ಮನ ಸ್ಥಿತಿಯು ಜಾಗ್ರತವು ಪಾಷಾಣಾದಿ ಅಚೇತನ ಪದಾರ್ಥಗಳ ರೂಪದಿಂದ ತೋರುವ ಆತ್ಮನ ಸ್ಥಿತಿಯು ಅಜಾಗ್ರತವು. ಕಾಲಕ್ಕನುಸರಿಸಿ, ಅಚೇತನ ಪದಾರ್ಥಗಳಿಂದ ಸಚೇತನ ಪದಾರ್ಥಗಳು ಹುಟ್ಟುವದನ್ನೂ, ಸಚೇತನ ಪದಾರ್ಥಗಳು ಅಚೇತನ ಪದಾರ್ಥಗಳಾಗುವದನ್ನೂ ನೋಡಿದರೆ, ಈ ಜಗದ್ವ್ಯಾಪಿ ಆತ್ಮವು ಜಾಗ್ರತ ಸ್ಥಿತಿಯಿಂದ ಅಜಾಗ್ರತ ಸ್ಥಿತಿಯನ್ನೂ, ಅಜಾಗ್ರತ ಸ್ಥಿತಿಯಿಂದ ಜಾಗ್ರತ ಸ್ಥಿತಿಯನ್ನೂ ಹೊಂದುವದೆಂದು ವ್ಯವಹಾರದೃಷ್ಟಿಯಿಂದಂತು ಹೇಳ ಬೇಕಾಗುತ್ತದೆ! ಆತ್ಮನ ಈ ತೋರಿಕೆಯ ವ್ಯಾಪಾರವನ್ನು ಸೂಕ್ಷ್ಮ ಹಾಗು ವ್ಯಾಪಕ ದೃಷ್ಟಿಯಿಂದ ವಿಚಾರಿಸಿದರೆ, ನಾವು ಒಮ್ಮೆ ಉಸುರು ಎಳಕೊಳ್ಳುವಷ್ಟು ಕಾಲದಲ್ಲಿ ವಿಶ್ವದೊಳಗೆ ಕೋಟ್ಯಂತರವೆನ್ನುವದಕ್ಕಿಂತ ಅಸಂಖ್ಯಾತ ಪ್ರಾಣಿಗಳು ಹುಟ್ಟುತ್ತಿರಬಹುದು; ಅದರಂತೆ ನಾವು ಒಮ್ಮೆ ಉಸುರು ಬಿಡುವಷ್ಟು ಕಾಲದೊಳಗೆ ಅಸಂಖ್ಯಾತ ಪ್ರಾಣಿಗಳು ಸಾಯುತ್ತಿರಬಹುದು! ಅಂದಬಳಿಕ ಜಗತ್ತಿನ ಪ್ರಾಣಿಗಳ ಸಂಖ್ಯೆಯ ದೃಷ್ಟಿಯಿಂದ ತೀರ ಅಲ್ಪವಾಗಿರುವ ನಮ್ಮ ಮನುಷ್ಯಜಾತಿಯ ಹುಟ್ಟು ಸಾವುಗಳೂ, ಆ ಜಾತಿಯು ಮಾಡುವ ಹಿಂಸೆಯೂ ನಮ್ಮ ಮಾನವೀ ಕ್ಷುದ್ರದೃಷ್ಟಿಯಿಂದ ಗಣ್ಯವಲ್ಲದೆ, ವಿಶ್ವದ ಈ ಅಗಾಧವಾದ ಹುಟ್ಟು ಸಾವುಗಳ ಅಂದರೆ, ರೂಪಾಂತರದ ದೃಷ್ಟಿಯಿಂದ ಅದು ಯಾವ ಗಿಡದ ತೊಪ್ಪಲು? ತತ್ವತಃ ಎಲ್ಲವುಗಳ ಹುಟ್ಟುಸಾವುಗಳಲ್ಲಿ ಭೇದವಿಲ್ಲ; ಹೀಗಿರಲು, ನಾವು ವ್ಯವಹಾರದಲ್ಲಿ ಕಲ್ಲು ಒಡೆಯುವಾಗ ಹಾಗು ಒಣ ಕಟ್ಟಿಗೆ ಕಡಿಯುವಾಗ ಅವಕ್ಕೆ ವ್ಯಥೆಯಾಗುವದಿಲ್ಲವೆ''ಂತಲೂ, ಹಸಿ ಗಿಡವನ್ನು ಕಡಿಯುವಾಗ ಅದಕ್ಕೆ ವ್ಯಥೆಯಾಗುತ್ತಿರ ಬಹುದೆ''ಂತಲೂ, ನುಸಿ–ತಗಣಿ ಮೊದಲಾದ ಕ್ಷುದ್ರ ದುಷ್ಟ ಕೀಟಕಗಳನ್ನು ಕೊಲ್ಲುವಾಗ ''ಎಲ್ಲಿಯ ವ್ಯಥೆ''ಯೆಂತಲೂ, ದನ–ಕರುಗಳನ್ನು ಕೊಲ್ಲುವಾಗ ''ಪಾಪ, ಕೊಲ್ಲಬಾರದೆ''ಂತಲೂ, ಮನುಷ್ಯನನ್ನು ಕೊಲ್ಲುವಾಗ ''ಯಾವ ನರಕಕ್ಕೆ ಹೋಗುವೆವೋ'' ಎಂತಲೂ ಅನ್ನುತ್ತಿರುವೆವಷ್ಟೆ''? ಜಗತ್ತೆಲ್ಲ ಆತ್ಮಸ್ವರೂಪವಿದ್ದು, ಅದರ ನಾಶವನ್ನು ಅಂದರೆ ಸ್ಥಿತ್ಯಂತರವನ್ನು ಮಾಡುವಾಗ ಅದರ ಬೇರೆ ಬೇರೆ ಸ್ಥಿತಿಗಳಿಗನುಸರಿಸಿ

ಹೀಗೆ ಬೇರೇಬೇರೆ ಉದ್ಗಾರಗಳು ನಮ್ಮಿಂದಯಾಕೆ ಹೊರಡಬೇಕು? ಅದರ ಕಾರಣವು ಅವುಗಳಲ್ಲಿ ಹಿಂಸೆಯ ಸಂವೇದನಾಶಕ್ತಿಯು ಸ್ಥೂಲ-ಸೂಕ್ಷ್ಮಮಾನದಿಂದಿರುವದೂ, ಅವುಗಳಲ್ಲಿ ಜಗತ್ತಿಗೆ ಉಪಕೃತಿ- ಅಪಕೃತಿಗಳು ಸ್ಥೂಲ-ಸೂಕ್ಷ್ಮಮಾನದಿಂದಾಗುವದೂ ಕಾರಣವಾಗಿರುವವು. ಜಗತ್ತಿನ ಬೇರೆ ಬೇರೆ ಪ್ರಾಣಿಗಳ ಸ್ಥಿತಿ-ಗತಿ-ವ್ಯಾಪಾರಾದಿಗಳಲ್ಲಿ ಭಿನ್ನತ್ವವಿರಲು, ಅವುಗಳ ಸಂವೇದನಾ ಶಕ್ತಿಯಲ್ಲಿಯೂ ಭೇದವು ಯಾಕಿರಬಾರದು? ಈ ತಾರತಮ್ಯವನ್ನು ಕುರಿತು ಮನುವು ತನ್ನ ಸ್ಮೃತಿಯಲ್ಲಿ—''ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ ಪ್ರಾಣಿನಾಂ ಬುದ್ಧಿ ಜೀವಿನಃ। ಬುದ್ಧಿಮತ್ಸು ನರಾಃ ಶ್ರೇಷ್ಠಾನರಾಣಾಂ ಬ್ರಾಹ್ಮಣಾಃ ಸ್ಮೃತಾಃ॥ ಬ್ರಾಹ್ಮಣೇಷುಚ ವಿದ್ವಾಂಸೋ ವಿದ್ವತ್ಸುಕೃತ ಬುದ್ಧಯಃ। ಕೃತ ಬುದ್ಧಿಷು ಕರ್ತಾರಃ ಕರ್ತೃಷು ಬ್ರಹ್ಮವೇದಿನಃ॥'' ಎಂದು ಹೇಳಿರುವನು. ಅಂದರೆ ಭೂತಗಳಲ್ಲಿ ಪ್ರಾಣಿಗಳು, ಪ್ರಾಣಿಗಳಲ್ಲಿ ಬುದ್ಧಿಜೀವಿಗಳು, ಬುದ್ಧಿ ಜೀವಿಗಳಲ್ಲಿ ಮನುಷ್ಯರು, ಮನುಷ್ಯರಲ್ಲಿ ಬ್ರಾಹ್ಮಣರು, ಬ್ರಾಹ್ಮಣರಲ್ಲಿ ವಿದ್ವಾಂಸರು, ವಿದ್ವಾಂಸರಲ್ಲಿ ಸುಸಂಸ್ಕೃತ ಬುದ್ಧಿಯುಳ್ಳವರು, ಸುಸಂಸ್ಕೃತಬುದ್ಧಿಯುಳ್ಳವರಲ್ಲಿ ಕರ್ತವ್ಯ ಶಾಲಿಗಳು, ಕರ್ತವ್ಯಶಾಲಿಗಳಲ್ಲಿ ಬ್ರಹ್ಮನಿಷ್ಠರು ಶ್ರೇಷ್ಠರೆಂದು ಹೇಳಿರುವನು. ''ಕತ್ತೆಗೆ ಲತ್ತೆಯಪೆಟ್ಟು, ಮನುಷ್ಯನಿಗೆ ಮಾತಿನಪೆಟ್ಟು'' ಎಂಬ ಲೋಕೋಕ್ತಿಯಲ್ಲಿಯೂ ಸೂಕ್ಷ್ಮರೀತಿಯಿಂದ ಹಿಂಸೆಯ ಸಂವೇದನದ ತಾರತಮ್ಯವೇ ಇರುತ್ತದೆ; ಆದ್ದರಿಂದ ಉದ್ಭಿಜ್ಜ ಹಿಂಸೆಗಿಂತ ಕ್ರಿಮಿ-ಕೀಟಕಾದಿ ಕ್ಷುದ್ರ ಜೀವಿಗಳ ಹಿಂಸೆಯೂ, ಕ್ರಿಮಿ-ಕೀಟಕಗಳಿಗಿಂತ ಬುದ್ಧಿಜೀವಿಗಳ ಹಿಂಸೆಯೂ, ಆ ಬುದ್ಧಿಜೀವಿಗಳ ಹಿಂಸೆಗಿಂತ ಧರ್ಮಾಧರ್ಮ-ರಜ್ಜುಬದ್ಧವಾದ ಮನುಷ್ಯ ಹಿಂಸೆಯೂ, ಆ ರಜ್ಜಾಬದ್ಧಮನುಷ್ಯಹಿಂಸೆಗಿಂತ, ಆತ್ಮಜ್ಞಾನದಿಂದ ಆ ಧರ್ಮಾಧರ್ಮ ರಜ್ಜುವಿನಿಂದ ಮುಕ್ತರಾದ ಜ್ಞಾನಿಗಳ ಹಿಂಸೆಯೂ ಉತ್ತರೋತ್ತರ ಪಾಪಕಾರಕಗಳಾಗಿರುವವು. ದುರಗಪ್ಪಾ, ಪ್ರಾಣಿಗಳ ಹಿಂಸೆಯ ಮಾನದ ತಾರತಮ್ಯವನ್ನು ಕುರಿತು ವಿಚಾರಿಸಿದರೆ, ಹಿಂಸೆಯು ಕಾಯಿಕ-ವಾಚಿಕ-ಮಾನಸಿಕ ಎಂದು ಮೂರು ಪ್ರಕಾರದ್ದಾಗಿದ್ದು, ಉದ್ಭಿಜ್ಜದ ಹಾಗು ಉದ್ಭಿಜ್ಜದ ಸ್ಥಿತಿಯ ಕ್ಷುದ್ರಕೀಟಕಗಳ ಹಿಂಸೆಯು ಕೇವಲ ಕಾಯಿಕವೆಂಬ ಒಂದೇ ವಿಧವಾಗಿರುವದು; ಪಶ್ವಾದಿ ಮನುಷ್ಯೇತರ ಬುದ್ಧಿಜೀವಿಗಳ ಹಿಂಸೆಯು ಕಾಯಿಕ-ವಾಚಿಕ ಎಂದು ಎರಡು ವಿಧವಾಗಿರುವದು; ಮನುಷ್ಯ ಹಿಂಸೆಯು ಕಾಯಿಕ- ವಾಚಿಕ-ಮಾನಸಿಕ ಎಂದು ಮೂರು ವಿಧವಾಗಿರುವದು. ಈ ತಾರತಮ್ಯದಿಂದಲೂ ಪ್ರಾಣಿ ಹಿಂಸೆಯನ್ನು ಬಿಟ್ಟು ಸಸ್ಯ ಹಿಂಸೆಯನ್ನು ಯಾಕೆ ಮಾಡಬೇಕೆಂಬುದು ನಿನಗೆ ಗೊತ್ತಾಗಬಹುದು!

ದುರಗಪ್ಪ—ಗುರುದೇವಾ, ನಿನ್ನ ಹೇಳಿಕೆಯು ಎಷ್ಟು ಹೊಂದಿಕೆಯಾದದ್ದು! ಅಹಹ !! ನಿನ್ನ ಮಾತಿನ ಮೇಲಿಂದ ಸಸ್ಯ-ಕ್ಷುದ್ರ ಕೀಟಕಗಳಿಗಿಂತ ಬುದ್ಧಿ-ಜೀವಿಪ್ರಾಣಿಗಳಿಗೆ, ಬುದ್ಧಿಜೀವಿಗಳಾದ ಬೇರೆ ಪ್ರಾಣಿಗಳಿಗಿಂತ ಮನುಷ್ಯನಿಗೆ ಹಿಂಸೆಯಿಂದ ಹೆಚ್ಚು ಹೆಚ್ಚು ವ್ಯಥೆಯಾಗುತ್ತದೆಂತಲೂ, ಆ ಮೂರು ವರ್ಗದ ಪ್ರಾಣಿಗಳ ಹಿಂಸೆಯು ಉತ್ತರೋತ್ತರ ಹೆಚ್ಚು ಹೆಚ್ಚು ಪಾಪಕರವೆಂತಲೂ ನಮ್ಮಂಥ ಮಡ್ಡರಿಗೂ ತಿಳಿಯಿತಲ್ಲ; ಆದರೆ ಮಹಾತ್ಮಾ ಕಾಯಿಕ-ವಾಚಿಕ-ಮಾನಸಿಕ ಹಿಂಸೆಗಳೆಂದರೇನೆಂಬದನ್ನು ದಯಮಾಡಿ ಸ್ವಲ್ಪ ವಿವರಿಸಿ ಹೇಳು.

ಮಾಧವಾಚಾರ್ಯ—ಶರೀರ ದ್ವಾರದಿಂದ ಪ್ರಾಣಿಗಳಿಗೆ ನೋವನ್ನುಂಟುಮಾಡುವದು ಶಾರೀರಿಕ ಅಥವಾ ಕಾಯಿಕ ಹಿಂಸೆಯು. ಇದು ಉದ್ಭಿಜ್ಜಗಳಿಗೂ ಬುದ್ಧಿಯ ಉದ್ಗಮವೇ ವ್ಯಕ್ತವಾಗಿ ಆಗದಿರುವ ಕ್ಷುದ್ರಜಂತುಗಳಿಗೂ ಆಗುವದು. ಬುದ್ಧಿಯ ಅಭಾವದ ಅಥವಾ ಅಂಕುರಿತ ಭಾವದ ಮೂಲಕ ಇವುಗಳಿಗೆ ವಾಚಿಕ-ಮಾನಸಿಕ ಹಿಂಸೆಗಳು ಆಗುವದಿಲ್ಲ. ಇನ್ನು ವಾಣಿಯ ದ್ವಾರದಿಂದ ಪ್ರಾಣಿಗಳಿಗೆ ಆಗುವ ಹಿಂಸೆಯು ವಾಚಿಕ ಹಿಂಸೆಯು. ಮನಸ್ಸಿಗೆ ಹತ್ತುವಂತೆ ಅಥವಾ ಭಯವು ಉಂಟಾಗುವಂತೆ ಬಿರುಸು ಮಾತುಗಳನ್ನು ಆಡುವದರಿಂದ ಅಥವಾ ಜಬರಿಸುವದರಿಂದ ಈ ಹಿಂಸೆಯು ಆಗುತ್ತದೆ. ಇದು ಪಶ್ವಾದಿ ಬುದ್ಧಿಜೀವಿ ಪ್ರಾಣಿಗಳಿಗೆ ಆಗುವದು. ಈ ಪಶ್ವಾದಿ ಬುದ್ಧಿಜೀವಿಗಳ ಬುದ್ಧಿಯು ವಿವೇಕಶಕ್ತಿಯುಕ್ತವಾದದ್ದಲ್ಲ. ಅಂತು, ಬುದ್ಧಿಜೀವಿ ಪ್ರಾಣಿಗಳಿಗೆ ಕಾಯಿಕ-ವಾಚಿಕ ಹಿಂಸೆಗಳೆರಡೂ ಆಗುವದರಿಂದ ಅವುಗಳ ಹಿತಕ್ಕಾಗಿ ಹಿಂಸಿಸುವದಾದರೆ ಆದಷ್ಟುಮಟ್ಟಿಗೆ ಬಾಯಿಬಿದರಿಕೆಯಿಂದಲೇ ಅವನ್ನು ಹಿಂಸಿಸಬೇಕು; ಕೈಮೀರಿ ಮಾಡಿದರೆ ಅವಕ್ಕೆ ಶಾರೀರಿಕ ಹಿಂಸೆಯನ್ನು ಎಚ್ಚರದಿಂದ ಮಾಡಬಹುದು. ಇನ್ನು ವಿವೇಕ-ಯುಕ್ತ ಮನಸ್ಸಿನ ದ್ವಾರದಿಂದ ಪ್ರಾಣಿಗಳಿಗೆ ಆಗುವ ಹಿಂಸೆಯು ಮಾನಸಿಕ ಹಿಂಸೆಯು. ಈ ಹಿಂಸೆಯು ವಿವೇಕಶಕ್ತಿಯಿರುವ ಮನುಷ್ಯಪ್ರಾಣಿಗೆ ಮಾತ್ರ ಸ್ಪಷ್ಟವಾಗಿ ಆಗುವದು. ಮನುಷ್ಯನ ಮನಸ್ಸಿನ ಒಲವಿನಂತೆ ನಡೆಯದಿದ್ದರೆ, ಮನೋದ್ವಾರದಿಂದ ಜೀವನಿಗೆ ಈ ಹಿಂಸೆಯಾಗುತ್ತದೆ. ಒಟ್ಟಿಗೆ ಮನುಷ್ಯನಿಗೆ ಕಾಯಿಕ-ವಾಚಿಕ-ಮಾನಸಿಕ ಎಂಬ ಮೂರು ಬಗೆಯ ಹಿಂಸೆಗಳಾಗುತ್ತವೆ. ಇವುಗಳಲ್ಲಿ ಮನೋದ್ವಾರದಿಂದ ಮನುಷ್ಯನಿಗೆ ಹಿಂಸೆಮಾಡುವದು ಉತ್ತಮ ಪಕ್ಷವು; ವಾಣಿಯ ದ್ವಾರದಿಂದ ಹಿಂಸೆಯನ್ನು ಮಾಡುವದು ಮಧ್ಯಮ ಪಕ್ಷವು; ಶರೀರದ್ವಾರದಿಂದ ಹಿಂಸೆಯನ್ನು ಮಾಡುವದು ಅಧಮ ಪಕ್ಷವು; ಯಾಕಂದರೆ ಮಾನಸಿಕ ಹಿಂಸೆಯಲ್ಲಿ ''ನಿನ್ನ ಮನಸ್ಸಿನ ಒಲವಿಗೆ ನಾನು ವಿರುದ್ಧ ವಿರುವೆನೆಂಬದನ್ನು ತೋರಿಸುವದಕ್ಕಾಗಿ ಬಾಯಿಂದ ಚಕಾರ ಶಬ್ದವಾಡದೆ ಆಜ್ಞಾಭಂಗದಂಥ ಪ್ರತ್ಯಕ್ಷ ಕೃತಿಯನ್ನು ಮಾಡುವ ಒಂದೇ ಹಿಂಸೆಯಿರುತ್ತದೆ; ಆದರೆ ವಾಚಿಕ ಹಿಂಸೆಯಲ್ಲಿ ಈ ಮಾನಸಿಕ ಹಿಂಸೆಯಿರುವದಲ್ಲದೆ, ಮನಸ್ಸಿನ ಒಲವಿಗಾಗಿ ಮರ್ಮಭೇದಕ ವಾಣಿಯಿಂದ ಜೀವನನ್ನು ನಿಷೇಧಿಸುವ ಎರಡನೆಯದೊಂದು ಹಿಂಸೆಯಾಗುತ್ತದೆ; ಅದರಂತೆ ಶಾರೀರಿಕ ಹಿಂಸೆಯಲ್ಲಿ ಈ ವಾಚಿಕ ಹಿಂಸೆಯೊಳಗಿನ ಎರಡು ಪ್ರಕಾರದ ಹಿಂಸೆಗಳಿರುವವಲ್ಲದೆ, ಜೀವನ ಸರ್ವಸಾಧನವಾದ ದೇಹದ ಸ್ಥಿತಿಯಲ್ಲಿ ವ್ಯತ್ಯಾಸವನ್ನುಂಟುಮಾಡುವ ಮೂರನೆಯ ದೊಂದು ಹಿಂಸೆಯಿರುತ್ತದೆ. ದುರಗಪ್ಪಾ, ಜ್ಞಾನಿಗಳಾದವರು ತಮ್ಮಷ್ಟಕ್ಕೆ ತಾವು ಇದ್ದು ಅನ್ಯರ ವಿಷಯವಾಗಿ ಅನುಕೂಲತೆ-ಪ್ರತಿಕೂಲತೆಗಳೆರಡನ್ನು ತೋರಿಸುವದಕ್ಕಾಗಿ ಅವರನ್ನು ಅಭಿನಂದಿಸುವ ಅಥವಾ ಹಿಂಸಿಸುವ ಉಸಾಬರಿಗೆ ಹೋಗದೆ, ಅವರ ವಿಷಯವಾಗಿ ಕೇವಲ ಔದಾಸೀನ್ಯದಿಂದಿರುವರು; ಯಾಕಂದರೆ ಜಗತ್ತಿನೊಳಗಿನ ಪ್ರಾಣಿಗಳು ತಮ್ಮ ಸಲುವಾಗಿಯೇ ತಾವು ಹುಟ್ಟುವವಲ್ಲದೆ ಅನ್ಯರ ಸಲುವಾಗಿ ಹುಟ್ಟುವದಿಲ್ಲೆಂಬದು ಅವರಿಗೆ ಗೊತ್ತಿರುತ್ತದೆ. ಈಶ್ವರನೊಡನೆ ಸಂಬಂಧಮಾಡಿ ತನ್ನ ಯೋಗ ಕ್ಷೇಮವನ್ನು ತಾನು ನೋಡಿಕೊಂಡು ತನ್ನ ಕಲ್ಯಾಣವನ್ನು ತಾನು ಮಾಡಿಕೊಳ್ಳುತ್ತದೆ, ಜೀವನು ದೇವರನ್ನು ಮರೆತು ಎರಡನೆಯವರ

ಉಸಾಬರಿಗೆ ಹೋಗುವದರಿಂದ ಅವನು ವಿವಿಧ ಯೋನಿಗಳಲ್ಲಿ ಹುಟ್ಟಿಬರಬೇಕಾಗುವದೆಂಬುದು ಆ ಜ್ಞಾನಿಗಳಿಗೆ ಒಡೆದುಕಾಣುತ್ತದೆ. ಮತ್ತು ''ಆತ್ಮೈವಚಾತ್ಮನೋ ಬಂಧುರಾತ್ಮೈವರಿಪುರಾತ್ಮನಃ'' ಎಂಬ ಸಿದ್ಧಾಂತವು ಜ್ಞಾನಿಗಳಿಗೆ ಅನುಭವತಃ ಪರಿಚಯದ್ದಾಗಿರುವದು; ಆದ್ದರಿಂದ ಅವರು– ತಮ್ಮ ಪಾಪಾಧಿಕ್ಯದಿಂದ ಮನುಷ್ಯ ಯೋನಿಗಿಂತ ಹೀನಗಳೆನಿಸುವ ಭೋಗ್ಯಗಳಾದ ಬಗೆಬಗೆಯ ತಿರ್ಯಗ್ಯೋನಿಗಳಲ್ಲಿ ಹುಟ್ಟಿ ಆ ಭೋಗ್ಯ ಶರೀರಗಳಿಂದ ಈಶ್ವರನು ತಮಗೆ ದಯಪಾಲಿಸುವ ತಮ್ಮ ತಮ್ಮ ಹುಟ್ಟುಗುಣದಂತೆ ನಡೆಯುತ್ತಿರುವ ಪತಿತ ಜೀವರ ಸ್ವಾತಂತ್ರ್ಯಕ್ಕೂ ಭಂಗ ತರುವದಿಲ್ಲ; ಅದರಂತೆ ಪುಣ್ಯಾಧಿಕ್ಯದಿಂದ ಜೀವರು ಭೋಗ್ಯಗಳೆನಿಸುವ ದೇವಯೋನಿಯಲ್ಲಿ ಹುಟ್ಟಿ ಪುಣ್ಯ ತೀರುವವರೆಗೆ ಅಮೃತಪಾನಾದಿ ಅಲಭ್ಯ ಸುಖಗಳನ್ನು ಹೊಂದುವ ಉದ್ಧೃತ ಜೀವರ ಸ್ವಾತಂತ್ರ್ಯಕ್ಕೂ ಭಂಗ ತರುವದಿಲ್ಲ; ಅದರಂತೆ ಪುಣ್ಯಾಧಿಕ್ಯದಿಂದ ಜೀವರು ಭೋಗ್ಯಗಳೆನಿಸುವ ದೇವಯೋನಿಯಲ್ಲಿ ಹುಟ್ಟಿ ಪುಣ್ಯ ತೀರುವವರೆಗೆ ಅಮೃತಪಾನಾದಿ ಅಲಭ್ಯ ಸುಖಗಳನ್ನು ಹೊಂದುವ ಉದ್ಧೃತ ಜೀವರ ಸ್ವಾತಂತ್ರ್ಯಕ್ಕೂ ಭಂಗ ತರುವದಿಲ್ಲ; ಹಾಗೆಯೇ ಪುಣ್ಯ–ಪಾಪಗಳೆರಡೂ ಸರಿಯಾಗಿರಲು, ಕರ್ತವ್ಯ ಯೋನಿಯ ಮನುಷ್ಯರಾಗಿ ಹುಟ್ಟಿ, ಅಹಂಕಾರದಿಂದ ಅನ್ಯರ ಉಸಾಬರಿಗೆ ಹೋಗಿ ತಮಗೆ ಅನುಕೂಲವಾಗಿರುವ ಪ್ರಸಂಗದಲ್ಲಿ ನಗುತ್ತ, ಪ್ರತಿಕೂಲವಾಗಿರುವ ಪ್ರಸಂಗದಲ್ಲಿ ಅಳುತ್ತ ಬಗೆಬಗೆಯ ಪುಣ್ಯ–ಪಾಪಕಾರಕ ಕೃತಿಗಳನ್ನು ಮಾಡುತ್ತ, ಪಾಪಾಧಿಕ್ಯದಿಂದ ಅದರ ಭೋಗಕ್ಕಾಗಿ ತಿರ್ಯಗ್ಯೋನಿಯನ್ನು ಹೊಂದುವ, ಹಾಗು ಪುಣ್ಯಾಧಿಕ್ಯದಿಂದ ಅದರ ಭೋಗಕ್ಕಾಗಿ ದೇವಯೋನಿಯನ್ನು ಹೊಂದುವ, ಅದರಂತೆ ಆತ್ಮಜ್ಞಾನ ಪಡೆದು ಪುಣ್ಯ–ಪಾಪ–ವಿಮುಕ್ತತೆಯಿಂದ ಮೋಕ್ಷ ಪಡೆಯುವ ಕರ್ತೃತ್ವ ಜೀವರ ಸ್ವಾತಂತ್ರ್ಯಕ್ಕೂ ಭಂಗ ತರುವದಿಲ್ಲ; ಹೀಗಿರಲು, ಈ ಲೋಕದಲ್ಲಿ ಜೀವರ ಸ್ವಾತಂತ್ರ್ಯ ಭಂಗಮಾಡುವವರು ದೇವರ ಹಂಗು ಇಲ್ಲದ ಶಬ್ದಗಳಿಂದಲ್ಲದಿದ್ದರೂ ಕೃತಿಯಿಂದ ದೇಹಾತ್ಮವಾದಿಗಳೆನಿಸಿದ ಅಹಂಕಾರಿ ದುಷ್ಟರೇ ಸರಿ ! ಈ ದುಷ್ಟರು ಸ್ವತಃ ಹಲವು ಬಗೆಯ ಹಿಂಸಾಕೃತಿಗಳಿಂದ ಪತಿತರಾಗಿದ್ದು, ಜ್ಞಾನಿಗಳ ಸೋಗಿನಿಂದಲೂ, ಪರೋಪಕಾರದ ನೆವದಿಂದಲೂ, ಧರ್ಮದ ಹೆಸರಿನಿಂದಲೂ ಮಂದಿಯನ್ನು ಅಹಿಂಸಕರನ್ನು ಮಾಡಿ ಉದ್ಧರಿಸಹೋಗಿ ಅವರನ್ನು ವಿಧವಿಧದ ಹಿಂಸೆಗೆ ಗುರಿಮಾಡುವರು; ಆದ್ದರಿಂದ ದುರಗಪ್ಪಾ, ಇಂಥವರ ಅಹಿಂಸೆಯ ಬಣ್ಣದ ಮಾತುಗಳಿಗೆ ಮರುಳಾಗದೆ ಜ್ಞಾನಿಗಳು ಹೇಳುವ ಅಹಿಂಸಾಚರಣೆಯನ್ನು ಶಕ್ಯವಿದ್ದಮಟ್ಟಿಗೆ ಅನುಸರಿಸುತ್ತ ಹೋಗಬೇಕು. ಜ್ಞಾನಿಗಳ ಆ ಆಚರಣೆಯನ್ನು ಸ್ವಲ್ಪದರಲ್ಲಿ ಹೇಳುವೆನು ಕೇಳು.

ದುರಗಪ್ಪಾ, ಜ್ಞಾನಿಗಳ ದೃಷ್ಟಿಯಿಂದ ಹಿಂಸೆಯು ಕಾಲ್ಪನಿಕವಾದದ್ದೆಂಬದನ್ನಿಷ್ಟು ನಿನಗೆ ತಿಳಿಸುವೆನು. ಆತ್ಮ–ಮನಸ್ಸು–ದೇಹ ಈ ಮೂರು ಘಟಕಗಳಿಂದ ಪ್ರಾಣಿಗಳಾಗಿರುವವು. ಪ್ರಾಣಿ– ವಿಶೇಷಗಳಲ್ಲಿ ಈ ಮೂರು ಘಟಕಗಳು ಸ್ಥೂಲ–ಸೂಕ್ಷ್ಮ ಮಾನಗಳಲ್ಲಿರುವಂತೆ ತೋರುತ್ತಿದ್ದರೂ ಇವೇ ಮೂರು ಘಟಕಗಳಿಂದ ಪ್ರಾಣಿಗಳಾಗಿರುವದು ನಿಜವು. ಈ ಘಟಕಗಳು ಒಂದೊಂದೇ ಬೇರೆಯಾದರೆ ಅವಕ್ಕೆ ಹಿಂಸೆಯ ಸಂಬಂಧವಾಗುವದಿಲ್ಲ; ಅಂದರೆ ಕೇವಲ

ಮುಕ್ತಸ್ಥಿತಿಯ ಆತ್ಮನು ಆನಂದರೂಪನಿರುವದರಿಂದ ಆತನಿಗೆ ಹಿಂಸೆಯಿಲ್ಲ; ವಾಸನಾರೂಪವಾದ ಮನಸ್ಸು ಕಾಲ್ಪನಿಕವಾದದ್ದರಿಂದ ಅದಕ್ಕಂತೂ ಹಿಂಸೆಯು ಇಲ್ಲವೇ ಇಲ್ಲ; ದೇಹವಂತು ಹೇಳಿಕೇಳಿ ಜಡವು. ಅಂದಬಳಿಕ ಅದೇ ಹಿಂಸೆಯು ಅನುಭವವು ಹ್ಯಾಗಾಗಬೇಕು? ಹೀಗೆ ಏಕಾಕಿಯಾದ ಪ್ರಾಣಿಘಟಕಗಳಿಗೆ ಹಿಂಸೆಯಿಲ್ಲದಿರಲು, ಲೀಲಾ ನಾಟಕಿಯಾದ ಪರಮಾತ್ಮನು ಈ ಮೂರರ ಸಂಬಂಧವನ್ನುಂಟುಮಾಡಿ ತಾನು ಅವುಗಳಿಂದ ಬೇರೆಯಾದಂತೆ ನಟಿಸಿ ಜಗದ್ರೂಪದಿಂದ ತಾನೇ ಬದ್ಧನೂ–ಮುಕ್ತನೂ ಆಗಿ ಕ್ರೀಡಿಸತೊಡಗಲು, ಹಿಂಸೆ–ಅಹಿಂಸೆಯೆಂಬ ದ್ವಂದ್ವಕ್ಕೆ ಜಗತ್ತು ಒಳಗಾಯಿತು! ಈ ಜಗದ್ರೂಪ ಲೀಲಾನಾಟಕದಲ್ಲಿಯ ಲೀಲಾನಾಟಕಿಯಾದ ಪರಮಾತ್ಮನ ಗುರುತು ಮಾಡಿಕೊಂಡರೆ ಮಾತ್ರ, ಗಾರುಡಿಗನ ಗುರುತಿನಿಂದ ಅವನ ವಿದ್ಯೆಯ ಗುರುತಾಗಿ ಮೋಹವು ಬಯಲಾಗುವಂತೆ, ಹಿಂಸಾಬಾಧೆಯು ಪ್ರಾಣಿಗಳಿಗೆ ಇಲ್ಲದಂತಾಗಿ, ಹಿಂಸೆ–ಅಹಿಂಸೆಯೆಂಬ ದ್ವಂದ್ವವೇ ಅಳಿದುಹೋಗುವದು! ದುರಗಪ್ಪಾ, ಇನ್ನು ನೀನು ಸಚ್ಚಿದಾನಂದಸ್ವರೂಪನಾದ ಪರಮಾತ್ಮನಿಗೆ ಕ್ರೀಡಾನಂದದ ಇಚ್ಛೆಯೇಕೆಂದು ಕೇಳಬಹುದು; ಆದರೆ ಸರ್ವತಂತ್ರಸ್ವತಂತ್ರನೂ, ಕರ್ತುಮಕರ್ತುಮನ್ಯಥಾ ಕರ್ತುಂ ಸಮರ್ಥನೂ ಆದ ಪರಮಾತ್ಮನು, ಕ್ರೀಡಸಲೂಬಹುದು; ಬಿಡಲೂಬಹುದು. ಕೇವಲ ಕ್ರೀಡಿಸುವದಷ್ಟೇ ಕೈಯಲ್ಲಿದ್ದವನೂ ಸ್ವತಂತ್ರನಲ್ಲ; ಕ್ರೀಡಿಸದೆ ಇರುವದಷ್ಟೇ ಕೈಯಲ್ಲಿರುವವನೂ ಸ್ವತಂತ್ರನಲ್ಲ! ಕ್ರೀಡಿಸುವದೂ–ಬಿಡುವದೂ ಎರಡೂ ಕೈಯಲ್ಲಿರುವವನೇ ಸ್ವತಂತ್ರನು! ದುರಗಪ್ಪಾ, ಪೂರ್ಣ ವಸ್ತುವಿನಲ್ಲಿ ಪೂರ್ಣ ವಸ್ತುವನ್ನು ಕೂಡಿಸಿದರೂ, ಕಳೆದರೂ ಆ ಕೂಡುವಿಕೆ–ಕಳೆಯುವಿಕೆಗಳ ಪರಿಣಾಮಗಳೆರಡೂ ಪೂರ್ಣವಸ್ತುಗಳೇ ಆಗುವಂತೆ, ಆನಂದರೂಪನಾದ ಪರಮಾತ್ಮನ ಕ್ರೀಡಾಸ್ಥಿತಿಯೂ, ಕ್ರೀಡಾವಿಹೀನ ಸ್ಥಿತಿಯೂ ಎರಡೂ ಆನಂದರೂಪವೇ ಇರುವವು ಇರಲಿ; ಹೇಳುವ ಭರದಲ್ಲಿ ಹೆಚ್ಚು ಎರಡು ಮಾತುಗಳನ್ನು ಹೇಳಿಬಿಟ್ಟೆನು. ಹಿಂಸೆಯ ಈ ಸ್ವರೂಪವನ್ನರಿತ ಜ್ಞಾನಿಗಳು ''ಲೋಕದೊಳಗವರವರತೆರದೆ ನಡೆವವ ಜಾಣ'' ಎಂಬಂತೆ, ಅವರವರಿಗೆ ತಕ್ಕಂತೆ ನಡೆಯುವರಲ್ಲದೆ ನಡೆಯುವವರ ನಡಿಗೆಯನ್ನು ನಿಲ್ಲಿಸುವ ಗೊಡವೆಗೆ ಹೋಗುವದಿಲ್ಲ; ಆದರೂ ಅವರು ತಮ್ಮ ಇಚ್ಛೆಬಂದರೆ ಜಗತ್ತಿನ ಭ್ರಾಂತಿಮಯ ದುಃಖಕ್ಕಾಗಿ ಮರುಗಿ ಕನಿಕರಪಟ್ಟು ಆ ದುಃಖವನ್ನು ನಿವಾರಣಮಾಡಲು ಹಾದಿಯನ್ನು ತೋರಿಸುವದಕ್ಕಾಗಿ ತಾವು ಜಗದ್ವ್ಯವಹಾರದಲ್ಲಿ ಸೇರಿ ತಾವು ನಡೆದು ತೋರಿಸುವರು. ಹಿಂಸೆಯು ಉಕ್ತವಾಗಿರುವ ಧರ್ಮದೊಳಗಿನ ಸತ್ಪುರುಷರು, ತಮ್ಮ ಧರ್ಮೋಕ್ತ ಹಿಂಸೆಯನ್ನು ನಿಷೇಧಿಸದೆ, ಶ್ರೇಷ್ಠ ಧರ್ಮವೆಂದು ತಿಳಿದು ತಾವು ಅಹಿಂಸಾ ವ್ರತವನ್ನು ಆಚರಿಸುವರು. ಇನ್ನು ಹಿಂಸೆಯು ಸಲ್ಲದ್ದರಿಂದ ''ಅಹಿಂಸಾಪರಮೋಧರ್ಮಃ'' ಎಂದು ಹೇಳುವ ಅಹಿಂಸಾಧರ್ಮದೊಳಗಿನ ಸತ್ಪುರುಷರು, ಬುದ್ಧಿಪೂರ್ವವಾದ ಅಂದರೆ ಪರಿಹಾರ್ಯ ಹಿಂಸೆಯನ್ನಂತು ಮಾಡದೆ, ಸ್ವಾಭಾವಿಕವಾದ ಅಂದರೆ ಅಪರಿಹಾರ್ಯ ಹಿಂಸೆಯನ್ನೂ ಹಿಂದೆ ಹೇಳಿದಂತೆ ಆದಷ್ಟು ಕಡಿಮೆ ಮಾಡಲು ಯತ್ನಿಸುವರು. ಒಟ್ಟಿಗೆ ಯಾವ ಧರ್ಮದೊಳಗಿನ ಜ್ಞಾನಿಗಳ ಉದ್ದೇಶವಾದರೂ ಜಗತ್ತನ್ನು ಹಿಂಸೆಯಿಂದ ಉದ್ಧರಿಸುವದೇ ಇರುವದರಿಂದ, ಅವರು ಹಿಂಸೆಯನ್ನೂ ಸಮರ್ಥಿಸುವದಿಲ್ಲ; ಅಂದರೆ ಅವರು ಕಾಯಿಕವಾಚಿಕ–ಮಾನಸಿಕಗಳೆಂಬ ಮೂರುಬಗೆಯ

ಹಿಂಸೆಗಳಿಗೂ ಮನಸ್ಸು ಮಾಡುವದಿಲ್ಲ. ತಾವು ಅನ್ಯರ ಅಯೋಗ್ಯವಾದ ಆಚರಣೆಗೆ ಅಸಮ್ಮತಿಯನ್ನು ತೋರಿಸಿದರೆ, ಅವರ ಮನಸ್ಸು ನೊಂದು ಸುಮ್ಮನೆ ತಮ್ಮಿಂದ ಮಾನಸಿಕ ಹಿಂಸೆಯು ಘಟಿಸುವದೆಂದು ತಿಳಿದು, ಅವರ ಉದಾಸೀನಭಾವದಿಂದ ಅವರವರಿಗೆ ಅವರವರ ಹಾಗೇ ಇದ್ದುಬಿಡುವರು. ಹೀಗೆ ಮಾನಸಿಕ ಹಿಂಸೆಗೇ ಹೇಸುವ ಅವರು ಅನ್ಯರ ದೋಷಗಳಿಗಾಗಿ ಕಠೋರ ಭಾಷಣ ಮಾಡಿ, ವಾಚಿಕ ಹಿಂಸೆಯನ್ನು ಯಾಕೆ ಮಾಡುವರು? ಇನ್ನು ಜ್ಞಾನಿಗಳು ಶಾರೀರಿಕ ಹಿಂಸೆಯನ್ನಂತು ಮಹತ್ಪಾಪವೆಂದು ತಿಳಿಯುವರು; ಯಾಕಂದರೆ ಜೀವನು ಪುಣ್ಯರೂಪ ದೊಡ್ಡ ಬೆಲೆಕೊಟ್ಟು ಸರ್ವಸಾಧನವೆನಿಸುವ ಅತಿ ದುರ್ಲಭವಾದ ಮನುಷ್ಯ ಶರೀರವನ್ನು ಪರಮೇಶ್ವರನಿಂದ ಕೊಂಡುಕೊಂಡು ಬಂದಿರುವನು. ಆಗಲೆ ಹೇಳಿದಂತೆ ಆ ಜೀವನು ಈ ಶರೀರದಿಂದಲೇ ಪಾಪಾಧಿಕ್ಯದ ಕೃತಿಗಳನ್ನು ಮಾಡಿ ಪಶ್ವಾದಿತಿರ್ಯಗ್ ಯೋನಿಗಳನ್ನೂ, ಪುಣ್ಯಾಧಿಕ್ಯದ ಕೃತಿಗಳನ್ನು ಮಾಡಿ ದೇವಯೋನಿಗಳನ್ನೂ, ಸದ್ಗುರು ಕೃಪೆಯಿಂದ ಆತ್ಮಜ್ಞಾನ ಮಾಡಿಕೊಂಡು ಮೋಕ್ಷವನ್ನೂ ಪಡೆಯಬೇಕಾಗುವದು! ಇದೇ ಕಾರಣದಿಂದ ಈ ಮನುಷ್ಯಯೋನಿಗೆ ಮಾತ್ರ ಕರ್ತವ್ಯಯೋನಿಯೆಂತಲೂ, ಉಳಿದ ತಿರ್ಯಕ್–ದೇವಯೋನಿಗಳಿಗೆ ಭೋಗ್ಯಯೋನಿಗಳೆಂತಲೂ ಅನ್ನುವರು. ಇಂಥ ಅಲಭ್ಯ ಮನುಷ್ಯಶರೀರವು ಶಾರೀರಕ ಹಿಂಸೆ ಮಾಡುವಾಗ ಊನವಾದರೆ, ಅಥವಾ ಶರೀರವೇ ಪತನಹೊಂದಿದರೆ, ಜೀವವನ್ನು ಸಾಧನ ಹೀನವಾಗಿ ಮಾಡಿದ ಘೋರ ಪಾಪ ಬಾರದೇನುಮಾಡೀತು? ಇನ್ನು ಮಾನಸಿಕ ಹಿಂಸೆಯನ್ನು ಎಷ್ಟು ಮಾಡಿದರೂ ಮನಸ್ಸು ನಾಶಹೊಂದುವದಿಲ್ಲ; ಯಾಕಂದರೆ, ಸದ್ಗುರು ಕೃಪೆಯಿಂದ ಆತ್ಮಸ್ವರೂಪವನ್ನರಿತು ವಾಸನಾಕ್ಷಯ ಮಾಡಿಕೊಳ್ಳುವದರಿಂದ, ವಾಸನಾರೂಪವಾದ ಮನಸ್ಸು ನಾಶಹೊಂದುವದಲ್ಲದೆ, ಅದನ್ನು ಹಿಂಸೆಯಿಂದ ಅನ್ಯರು ನಾಶಗೊಳಿಸಲಾರರು! ಅನ್ಯರು ಮಾಡುವ ಹಿಂಸಾದಿ ಉಪಾಯಗಳಿಂದ ಅದು ಸುಮಾರ್ಗಗಾಮಿಯಾಗಲಿ, ಅಮಾರ್ಗಗಾಮಿ ಯಾಗಲಿ ಆದೀತಲ್ಲದೆ ನಾಶಹೊಂದುವದಿಲ್ಲ; ಆದ್ದರಿಂದಲೇ ಜ್ಞಾನಿಗಳು ಅನ್ಯರ ಕಲ್ಯಾಣ ಮಾಡಬೇಕೆಂದು ಇಚ್ಛಿಸಿದರೆ, ಪ್ರತ್ಯಕ್ಷ ತಮ್ಮ ಕೃತಿಯಿಂದಲೂ, ಸದ್ಬೋಧದಿಂದಲೂ ಮನಸ್ಸನ್ನು ಸನ್ಮಾರ್ಗಗಾಮಿಯಾಗಿ ಮಾಡುವರು. ಒಟ್ಟಿಗೆ ಸಜ್ಜನರು ಅನ್ಯರ ಕಲ್ಯಾಣಕ್ಕಾಗಿ ಅವರನ್ನು ಹಿಂಸಿಸುವದು ಅವಶ್ಯವಾದರೆ, ಅವರಿಗೆ ಮಾನಸಿಕ ಹಿಂಸೆಯನ್ನುಂಟುಮಾಡುವರಲ್ಲದೆ, ವಾಚಿಕ–ಶಾರೀರಕ ಹಿಂಸೆಗಳನ್ನು ಕೊಡುವದಿಲ್ಲ; ಆದ್ದರಿಂದ ಸಾತ್ವಿಕರಾದವರು ಸಜ್ಜನರ ಈ ಹಾದಿಯನ್ನೇ ಹಿಡಿದು, ವಾಚಿಕ–ಶಾರೀರಿಕ ಹಿಂಸೆಗಳನ್ನು ಬಿಟ್ಟುಬಿಡತಕ್ಕದ್ದು; ಅದರಲ್ಲಿ ಶಾರೀರಕ ಹಿಂಸೆಯನ್ನಂತು ಸರ್ವಥಾ ತ್ಯಜಿಸತಕ್ಕದ್ದು. ದುರ್ಬಲ ರಾಷ್ಟ್ರವು ಅಸಹಯೋಗಿಯಾಗಿರುವಾಗ ದುಷ್ಟರಿಗೆ ಮಾನಸಿಕ ಹಿಂಸೆಯನ್ನು ಮಾತ್ರ ಉಂಟುಮಾಡತಕ್ಕದ್ದು; ಹಾಗೆ ಮಾಡದೆ ಅದು ವಾಚಿಕ ಹಿಂಸೆಯನ್ನು ಮಾಡಿದರೆ "ಬೈದ ಬಾಯಿಗೆ ಹೊಯ್ದು ಪೆಟ್ಟೆ"ನ್ನುವಂತೆ, ದುಷ್ಟರಿಂದ ಕೆಲಸವಿಲ್ಲದೆ ಪೆಟ್ಟು ತಿನ್ನಬೇಕಾಗುವದು; ಮತ್ತು ಶಾರೀರಕ ಹಿಂಸೆಯನ್ನು ಮಾಡಿದರೆ, ದುಷ್ಟರು ತಮ್ಮವರ ಒಬ್ಬರ ನಾಶಕ್ಕಾಗಿ ಹಲವು ಅಸಹಯೋಗಿಗಳ ಬಲಿ ತಕ್ಕೊಂಡು ಅನರ್ಥ ಮಾಡುವರು!

ದುರಗಪ್ಪ—ಯಪ್ಪಾ, ಎಷ್ಟು ತಾಯಿಬೇರು ಹಿಡಿದು ಹೇಳಿದೆಯಲ್ಲ! ಹಿಂಸೆಯ ವಿಷಯವಾಗಿ ಇಷ್ಟು ತಳ ಬುಡ ಹಿಡಿದು ಹೇಳಿದವರನ್ನು ನಾನು ಇಲ್ಲಿಯವರೆಗೆ ನೋಡಲಿಲ್ಲ; ಆದರೆ ಗುರುದೇವಾ, ಅಸಹಯೋಗಿಗಳು ಕಾಯಿಕವಾಗಲಿ, ವಾಚಿಕವಾಗಲಿ, ಮಾನಸಿಕವಾಗಲಿ ಯಾವ ಹಿಂಸೆ ಮಾಡಿದರೂ ಅಸಹಯೋಗವೆಂಬದು ಹಿಂಸಾತ್ಮಕವೇ ಆಯಿತು; ಆದರೆ ನೀನು ಶೂದ್ರಶ್ವ ವೃತ್ತಿಯ ರಾಷ್ಟ್ರವು ರಾಜಕೀಯ ದುಷ್ಟರೊಡನೆ ಅಹಿಂಸಾತ್ಮಕ ಅಸಹ ಯೋಗವನ್ನು ಬಳಿಸಬೇಕೆಂದು ಹೇಳಿದ್ದು ಇಲ್ಲಿ ಹ್ಯಾಗೆ ಕೂಡುವದು? ನೀನು ಹೇಳಿದಂತೆ ದುಷ್ಟರ ಮೈಮುಟ್ಟದೆ, ಅವರಿಂದ ಬಾಯಿಂದ ಕೆಟ್ಟ ಮಾತು ಆಡದೆ ಅವರ ಅಪ್ಪಣೆಯನ್ನಷ್ಟು ಮುರಿದರೆ, ಅದು ಮಾನಸಿಕ ಹಿಂಸಾತ್ಮಕ ಅಸಹಯೋಗವಾದೀತಲ್ಲದೆ, ಅಹಿಂಸಾತ್ಮಕ ಅಸಹಯೋಗ ವಾಗಲಾರದೆಂದು ನನ್ನ ಮನಸ್ಸಿಗೆ ಹೊಳೆಯುತ್ತದೆ; ಆದರೆ ನನ್ನೊಡೆಯಾ, ಮಡ್ಡನ ತಲೆಯೊಳಗಿನ ಈ ಮಡ್ಡನ್ನಷ್ಟು ಬಿಡಿಸಿ ಪುಣ್ಯ ಕಟ್ಟಿಕೊ!

ಮಾಧವಾಚಾರ್ಯ—ಶಾಬಾಸ ದುರುಗಪ್ಪಾ, ಬೋಧ ಮಾಡಿದರೆ ನಿನ್ನಂಥ ಅಧಿಕಾರಸಂಪನ್ನಿಗೇ ಬೋಧ ಮಾಡತಕ್ಕದ್ದು. ಅಧಿಕಾರಿಗಳಲ್ಲವದರಿಗೆ ಮಾಡಿದ ಬೋಧವು ಬೋರ್ಗಲ್ಲ ಮೇಲೆ ಮಳೆಗರೆದ ಹಾಗೆಯೇ ಸರಿ. ನಿನ್ನ ಸೂಕ್ಷ್ಮಬುದ್ಧಿಯನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ನೀನು ಹೇಳಿದಂತೆ ಅಸಹಯೋಗವೆಂದ ಬಳಿಕ ಅದು ಹಿಂಸಾತ್ಮಕವೇ ಆಗಿರುವದು; ಹಿಂಸೆಯಿಲ್ಲದ ಅಸಹಯೋಗವು ಇರಲಾರದೆಂಬುದು ಸತ್ಯವು; ಹಿಂಸೆಯೆಂದರೆ ಪ್ರಾಣಿಗಳಿಗೆ ನೋವನ್ನುಂಟುಮಾಡುವದೆಂದು ಸಾಧಾರಣವಾಗಿ ಹೇಳಬಹುದು. ಪ್ರಾಣಿಗಳ ಮನಸ್ಸಿನ ಒಲವಿಗನುಕೂಲಿಸಿ ನಡೆಯುವದರಿಂದ,ಅಂದರೆ ಸಹಯೋಗವನ್ನು ಬಳಿಸುವದ ರಿಂದಲೇ ಪ್ರಾಣಿಗಳಿಗೆ ಸುಖವಾಗುತ್ತದಲ್ಲದೆ, ಪ್ರಾಣಿಗಳ ಮನಸ್ಸಿನ ಒಲವಿಗೆ ಪ್ರತಿಕೂಲಿಸಿ ನಡೆಯುವದರಿಂದ, ಅಂದರೆ ಅಸಹಯೋಗವನ್ನು ಬಳಿಸುವದರಿಂದ ಸುಖವಾಗುವದಿಲ್ಲ, ಆದ್ದರಿಂದ ಅಸಹಯೋಗಿಯು ಸೂಕ್ಷ್ಮವಾದ ಮನೋದ್ವಾರದಿಂದಾಗಲಿ, ಸ್ಥೂಲವಾದ ವಾಣಿಯ ದ್ವಾರದಿಂದಾಗಲಿ, ಸ್ಥೂಲತರವಾದ ಶರೀರದ್ವಾರದಿಂದಾಗಲಿ ಹಿಂಸೆ ಮಾಡಬೇಕಾಗುವದು. ಸ್ಥೂಲತರ ಶಾರೀರಕ ಹಿಂಸೆಯೆಂದರೆ ಹೊಡೆಯುವದು, ಸ್ಥೂಲವಾಚಿಕ ಹಿಂಸೆಯೆಂದರೆ ಬೈಯುವದು; ಸೂಕ್ಷ್ಮಮಾನಸಿಕ ಹಿಂಸೆಯೆಂದರೆ—''ಆಜ್ಞಾಭಂಗೋ ನರೇಂದ್ರಾಣಾಂ ವಿಪ್ರಾಣಾಂ ಮಾನಖಂಡನಂ ಪೃಥಕ್ ಶಯ್ಯಾಚ ನಾರೀಣಾಂ ಅಶಸ್ತ್ರವಧ ಮುಚ್ಯತೇ॥''ಎಂಬ ಈ ಶ್ಲೋಕದಲ್ಲಿ ಹೇಳಿದಂತೆ ಮನಸ್ಸನ್ನು ನೋಯಿಸುವದಾಗಿರುವದು. ಅರಸನ ಆಜ್ಞಾಭಂಗ ಮಾಡುವದರಿಂದಲೂ, ಬ್ರಾಹ್ಮಣನ ಮಾನಖಂಡನ ಮಾಡುವದ ರಿಂದಲೂ, ಸ್ತ್ರೀಯನ್ನಗಲಿ ಶಯನ ಮಾಡುವದರಿಂದಲೂ ಅವರವರ ಅಶಸ್ತ್ರವಧವಾಗು ವದೆಂದು ಈ ಶ್ಲೋಕವು ಹೇಳುತ್ತದೆ; ಅದರಂತೆ ರಾಷ್ಟ್ರದ ಸ್ವಾತಂತ್ರ್ಯಹಾರಕವಾದ ದುಷ್ಟ ರಾಜ್ಯಾಧಿಕಾರಿಗಳ ಆಜ್ಞಾಭಂಗ ಮಾಡಿದರೆ, ಅಂದರೆ ಅವರೊಡನೆ ಅಸಹಯೋಗ ಬಳಿಸಿದರೆ, ನೀನು ಹೇಳಿದಂತೆ ಅದು ಮಾನಸಿಕ ಹಿಂಸೆಯ ಅಸಹಯೋಗವಾಗುವದು.

ದುರಗಪ್ಪ—ಹಾಗಾದರೆ ಅದಕ್ಕೆ ಅಹಿಂಸಾತ್ಮಕ ಅಸಹಯೋಗವೆಂದು ಅನ್ನುವದೇಕೆ?

ಮಾಧವಾಚಾರ್ಯ—ದುರಗಪ್ಪಾ, ಜೀವನಿಗೆ ಹಿಂಸೆಯನ್ನುಂಟು ಮಾಡುವ ಸಾಧನಗಳು–ಮನಸ್ಸು, ವಾಣಿ, ಶರೀರ ಈ ಮೂರೆಂಬದು ನಿನಗೆ ಗೊತ್ತಾಗಿರುವದಷ್ಟೇ? ಅದರಂತೆ ಮನಸ್ಸಿನ ದ್ವಾರದಿಂದ ಜೀವನಿಗೆ ಎಷ್ಟು ಹಿಂಸೆ ಮಾಡಿದರೂ ಮನಸ್ಸಿನ ನಾಶವಾಗುವದಿಲ್ಲವೆಂಬ ಮಾತಾದರೂ ನಿನಗೆ ಗೊತ್ತಾಗಿದೆ; ಇನ್ನು ವಾಣಿಯು, ಶರೀರ ದ್ವಾರದಿಂದ ಜೀವನು ಮಾಡುವದೊಂದು ವ್ಯಾಪಾರವಾದ್ದರಿಂದ ಆ ವಾಣಿಗೆ ಸ್ವತಂತ್ರ ಅಸ್ತಿತ್ವವೇ ಇಲ್ಲದಿರಲು, ಅದರ ನಾಶವಾಗುದೆಂದು ಹೇಗೆ ಹೇಳಬೇಕು? ಇನ್ನು ಶರೀರದ್ವಾರದಿಂದ ಆತ್ಮನನ್ನು ನೋಯಿಸುವಾಗ ಮಾತ್ರ ಶರೀರವು ಊನವಾದರೂ ಆಗಬಹುದು, ಅದರ ನಾಶವಾದರೂ ಆಗಬಹುದು; ಆದ್ದರಿಂದಲೇ ಪ್ರಾಣಿಮಾತ್ರಗಳಿಗೆಲ್ಲ ಸಂಬಂಧಿಸಿರುವ ಈ ಶಾರೀರಿಕ ಹಿಂಸೆಯನ್ನೇ ವ್ಯಾವಹಾರಿಕ ದೃಷ್ಟಿಯಿಂದ ಹಿಂಸೆಯೆಂದು ಕರೆಯುವರು. ಮಾನಸಿಕ ಹಿಂಸೆಯು ಸಾರ್ವತ್ರಿಕ ಹಿಂಸೆಯೆನಿಸುವದಿಲ್ಲ, ಅದು ಕೇವಲ ಮನುಷ್ಯಮಾತ್ರರಿಗೇ ವಿಶೇಷವಾಗಿ ಸಂಬಂಧಿಸಿರುವದು. ಅದರಲ್ಲಿ ರಾಜಕೀಯ ವ್ಯವಹಾರದಲ್ಲಂತೂ ಮಾನಸಿಕ ಹಿಂಸೆಯು ಹಿಂಸೆಯೆನಿಸುವದೇ ಇಲ್ಲ; ಯಾಕಂದರೆ ಆ ರಾಜಕೀಯ ವ್ಯವಹಾರದಲ್ಲಿ ದುಷ್ಟ ಶಾಸನಕ್ಕೆಂದು ಶಾರೀರಿಕ ಹಿಂಸೆಯೇ ಪ್ರಾಮುಖ್ಯವಾಗಿ ಉಪಯೋಗಿಸಲ್ಪಡುವದು; ಹ್ಯಾಗೆಂದರೆ ಯುದ್ಧ, ಮರಣಶಿಕ್ಷೆ, ಛಟಿಕೆ ಹೊಡೆಯುವದು, ಕಾರಾಗೃಹವಾಸ ಮುಂತಾದವುಗಳು ಶಾರೀರಿಕ ಹಿಂಸೆಗಳೇ ಆಗಿರುವವು. ಹೀಗೆ ರಾಜಕೀಯ ವ್ಯವಹಾರದಲ್ಲಿ ಇಲ್ಲಿಂದ ಇಲ್ಲಿಯವರೆಗೆ ಸ್ಥೂಲತರವಾದ ಶಾರೀರಿಕರ ಹಿಂಸಾತ್ಮಕ ಅಸಹ ಯೋಗವು,ಅಂದರೆ ಪ್ರತಿಯೋಗವು ಧಾರಾಳವಾಗಿ ಉಪಯೋಗಿಸಲ್ಪಡುತ್ತಿರುವದರಿಂದ, ಅಲ್ಲಿ ಸೂಕ್ಷ್ಮವಾದ ಮಾನಸಿಕ ಹಿಂಸಾತ್ಮಕ ಅಸಹಯೋಗವು ಹಿಂಸಾತ್ಮಕವೆನಿಸುವದೇ ಇಲ್ಲ, ಹೊಟ್ಟೆ ಹರಿಯುವ ಹಾಗೆ ಉಣ್ಣುವ ಪರಿಪಾಠವುಳ್ಳವನು ಒಂದೆರಡು ಉತ್ತತ್ತಿಗಳನ್ನು ಅಥವಾ ಅಲ್ಪಸ್ವಲ್ಪ ಹಾಲು–ಹಣ್ಣನ್ನು ತಿಂದು ಇದ್ದರೆ ನಿರಾಹಾರವೆನಿಸುವಂತೆ, ಕಠಿಣ ಹೃದಯರಾಗಿ ಎಗ್ಗಿಲ್ಲದೆ ಪ್ರಸಂಗವಶಾತ್ ಅನ್ಯಾಯದಿಂದ ತಮ್ಮ ಪ್ರಜೆಗಳನ್ನು, ಅದರಲ್ಲಿ ನಿಃಶಸ್ತ್ರ ಪ್ರಜೆಗಳನ್ನು ಕೂಡಾ ನಮ್ಮ ತಗಲಖಮುಹಮ್ಮದನು ಬೇಟೆಯಾಡಿದಂತೆ ಕೊಲ್ಲುವ ಘೋರ ನರಕ ಸಾಧನವಾದ ದುಷ್ಟ ರಾಜಕೀಯ ವ್ಯವಹಾರದಲ್ಲಿ ಮಾನಸಿಕ ಹಿಂಸೆ ಮಾಡಿದರೂ ಅದು ಅಹಿಂಸೆಯೇ ಸರಿ; ಆದ್ದರಿಂದ ನಾವು ಮಾನಸಿಕ ಹಿಂಸಾತ್ಮಕ ಅಸಹಯೋಗವನ್ನು ರಾಜಕೀಯ ಅಹಿಂಸಾತ್ಮಕ ಅಸಹಯೋಗವೆಂದು ಕರೆದಿರುವೆವು.

ದುರಗಪ್ಪ—ಸರಿ ಸರಿ! ಯಪ್ಪಾ, ಒಪ್ಪತಕ್ಕ ಮಾತು; ಸಮಾಧಾನವಾಯಿತು. ಒಟ್ಟಿನಿಂದ ರಾಜಕೀಯ ದುಷ್ಟರ ಶಾಸನಕ್ಕೆ ನೀನು ಮಾಡಹೇಳಿರುವ ಉಪಾಯಗಳಲ್ಲಿ ಅಂದರೆ, 1. ಪ್ರತಿಕಾರ, 2. ಪ್ರತಿಯೋಗಿ ಸಹಕಾರ, 3. ಅಹಿಂಸಾತ್ಮಕ ಅಸಹಕಾರ ಎಂಬ ಈ ಮೂರು ಉಪಾಯಗಳಲ್ಲಿ ಯಾವದು ಶ್ರೇಷ್ಠವೆಂದು ತಿಳಿಯಬೇಕು?

ಮಾಧವಾಚಾರ್ಯ—ಈ ಮೂರು ಸಾಧನಗಳು ರಾಷ್ಟ್ರದ ಅಧಿಕಾರವಿದ್ದಂತೆ ಉಪಯೋಗಿಸತಕ್ಕವಾದ್ದರಿಂದ, ಆಯಾ ಅಧಿಕಾರದ ರಾಷ್ಟ್ರಕ್ಕೆ ಉಪಯುಕ್ತವಾಗಿರುವ ಆಯಾ

ಸಾಧನಗಳೇ ಆ ಕಾಲಕ್ಕೆ ಶ್ರೇಷ್ಠವೆಂದು ತಿಳಿಯಬೇಕು! ಪ್ರತಿಕಾರದಿಂದ ಅಂದರೆ ಶಾರೀರಕ ಹಿಂಸಾತ್ಮಕ ಅಸಹಕಾರದಿಂದ ಅಧರ್ಮಿಷ್ಠ ದುಷ್ಟರನಾಶವೂ, ಶಿಷ್ಟರ ಪಾಲನವೂ, ಧರ್ಮಸ್ಥಾಪನೆಯೂ ತತ್‌ಕ್ಷಣವಾಗುವದರಿಂದ, ರಾಷ್ಟ್ರವು ಬ್ರಾಹ್ಮ-ಕ್ಷಾತ್ರ-ವೈಶ್ಯ ವೃತ್ತಿಯಲ್ಲಿರುವಾಗ, ಅಂದರೆ ಕ್ರಮವಾಗಿ ಆತ್ಮಬಲ-ಶಾರೀರಬಲ-ದ್ರವ್ಯಬಲಗಳುಳ್ಳ ದ್ದಾಗಿರುವಾಗ ಶಾರೀರಿಕ ಹಿಂಸಾತ್ಮಕ ಅಸಹಕಾರವನ್ನು ಅಂದರೆ ಪ್ರತಿಕಾರವನ್ನೇ ದುಷ್ಟರ ಶಾಸನಕ್ಕಾಗಿ ಉಪಯೋಗಿಸತಕ್ಕದು. ಸಮರ್ಥರಿಗೂ ಸಮರ್ಥನಾದ ಭಗವಂತನು ಗೀತೆಯಲ್ಲಿ -''ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ। ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ''ಎಂದು ಹೇಳುವಾಗ ''ದುಷ್ಕೃತಾಂ ವಿನಾಶಾಯ'' ಎಂದು ಹೇಳಿರುವದರ ಮೇಲಿಂದ, ಸಮರ್ಥರು ದುಷ್ಟರನ್ನು ಪ್ರತಿಕಾರದಿಂದಲೇ, ಅಂದರೆ ಶಾರೀರಿಕ ಹಿಂಸಾತ್ಮಕ ಅಸಹಕಾರದಿಂದಲೇ ದಂಡಿಸಿ ಸ್ವಾತಂತ್ರ್ಯ ಕಾಯಬೇಕೆಂದು ನಾವೂ ಹೇಳಬೇಕಾಗುವದು; ಆದರೆ ರಾಷ್ಟ್ರವು ಶೂದ್ರ ಶ್ಚವೃತ್ತಿಯದಿರುವಾಗ ಅದರಲ್ಲಿ ಆತ್ಮಬಲ-ಶಾರೀರಬಲ-ದ್ರವ್ಯಬಲಗಳಾವುವೂ ಇಲ್ಲದಿರಲು ಆ ಅತ್ಯಂತ ದುರ್ಬಲ ರಾಷ್ಟ್ರವು ಕೈಸಾಗದ್ದಕ್ಕಾಗಿ, ಹಾಗು ಆತ್ಮಶುದ್ಧ್ಯರ್ಥವಾಗಿ ಬಹು ಸಾವಕಾಶ ಕಾರ್ಯವಾಗುವ ತ್ರಾಸದಾಯಕ ವಾದ ಮಾನಸಿಕ ಹಿಂಸಾತ್ಮಕ ಅಸಹಯೋಗವನ್ನು, ಅಂದರೆ ರಾಷ್ಟ್ರೀಯ ಅಹಿಂಸಾತ್ಮಕ ಅಸಹಯೋಗವನ್ನು ದುಷ್ಟರೊಡನೆ ಗತ್ಯಂತರವಿಲ್ಲದೆ ಬಳಿಸಬೇಕಾಗುವದು!

ಈ ಮೇರೆಗೆ ಆಚಾರ್ಯರು ಮಾಡಿದ ಉಪದೇಶದಿಂದ ಸರ್ವರ ಸರ್ವ ಸಂಶಯಗಳ ಉಚ್ಛೇದವಾಗಿ, ಎಲ್ಲರೂ ಸಮಾಧಾನಪಡುತ್ತಿರಲು, ಶತ್ರುಗಳ ಪ್ರಚಂಡ ಸೈನ್ಯವು ಕಂಪಲಿಯ ಕಡೆಗೆ ಸಾಗಿಬರುತ್ತಿರುವದೆಂದು ಚಾರರು ಸುದ್ದಿಯನ್ನು ತಂದರು!!

## ರಾಷ್ಟ್ರದ ವಿವೇಕೋದಯ

ನೆರೆದ ಸಭೆಯಲ್ಲಿ ಚಾರನು ಹೀಗೆ ಹೇಳಿದ್ದನ್ನು ಕೇಳಿ ಸಭೆಯು ಬೆರಗಾಗಿ ಮಾಧವಾ ಚಾರ್ಯರ ಮುಖವನ್ನು ನೋಡಹತ್ತಿತ್ತು. ಆಗ ಮಾಧವಾಚಾರ್ಯರು ಮುಗುಳನಗೆ ನಕ್ಕು ಗಾಂಭೀರ್ಯದಿಂದ ಸಭಿಕರಾದ ತೆಲಗರನ್ನೂ ಕನ್ನಡಿಗರನ್ನೂ ಕುರಿತು- ''ದೇಶಬಾಂಧವರೇ,ಈಗ ಒಂದೇಸವನೆ ನಾಲ್ಕೆಂಟುದಿನ ಉಪನ್ಯಾಸ ನಡೆದದ್ದನ್ನು ನೀವು ಆಸಕ್ತಿಯಿಂದ ಕೇಳಿರುವಿರಿ; ನಾವೂ ಉತ್ಸಾಹದಿಂದ ತತ್ವವಿವೇಚನವನ್ನು ಮಾಡಿರುವೆವು; ಆದರೆ ಇನ್ನು ಮೇಲೆ ಉಪನ್ಯಾಸ ಮಾಡಿದ ನಾವೂ ಆ ಉಪನ್ಯಾಸ ಕೇಳಿದ ನೀವೂ ಆ ಉಪನ್ಯಾಸದಂತೆ ನಡೆಯುವದು ಮಾತ್ರ ಉಳಿದಿದೆ. ನಾನು ನಿನ್ನಿನ ದಿವಸ ''ಬರಿಯ ಉಪನ್ಯಾಸ ಮಾಡುವವರ ನಾಲಿಗೆಯೂ, ಅದನ್ನು ಸುಮ್ಮನೆ ಈ ಕಿವಿಯಿಂದಕೇಳಿ ಆ ಕಿವಿಯಿಂದ ಬಿಡುವವರ ಕಿವಿಗಳೂ ಮಾತ್ರ ಉದ್ದವಾಗುವವೆ''ಂದು ಹೇಳಿದ್ದು ನಿಮ್ಮ ನೆನಪಿನಲ್ಲಿರಬಹುದು.

ಅದರಂತೆ—'ಕೈಮುಟ್ಟಿ ಕೆಲಸ ಮಾಡದೆ ಬರಿಯ ಉಪನ್ಯಾಸದ ವ್ಯವಹಾರದಲ್ಲಿ ತೊಡಗುವದರಿಂದ ಲಾಭವಾಗದೆ''ಂತಲೂ, ''ಅದರ ದುಷ್ಪರಿಣಾಮ ಭೋಗಿಸ ಬೇಕಾಗುವದೆ''ಂತಲೂ ಹೇಳಿದ್ದನ್ನಾದರೂ ನೀವು ಮರೆತಿರಲಿಕ್ಕಿಲ್ಲ. ಆ ನನ್ನ ಭವಿಷ್ಯವು ಈಗ ಸತ್ಯವಾಗುವದೆಂಬದನ್ನು ಲಕ್ಷದಲ್ಲಿಡಿರಿ. ಮುಸಲ್ಮಾನರಂಥ ಬಲಿಷ್ಠರಿಂದ ದೇಶದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವದು ಸುಲಭವಲ್ಲ; ಕಂಪಲಿಯ ಕೋಟೆಯು ನಮ್ಮ ಕೈಸೇರಿ ನಮಗೆ ತಾತ್ಕಾಲಿಕ ಜಯವು ಒದಗಿರುವದು ತೀರ ಕ್ಷುಲ್ಲಕವೆಂದು ತಿಳಿಯಿರಿ. ನೀವು ಸ್ವರಾಜ್ಯ ಸ್ಥಾಪನೆಗಾಗಿ ಸರ್ವಸ್ವವನ್ನು ಅರ್ಪಿಸುವ ಕಾಲವು ಬಂದೊದಗಿರುತ್ತದೆ. ಈಗ ನಾಲ್ಕು ದಿವಸಗಳಲ್ಲಿ ನಾನು ನಿಮಗೆ ಹೇಳತಕ್ಕದ್ದನ್ನೆಲ್ಲ ಹೇಳಿರುವೆನು. ಇನ್ನು ಮೇಲೆ ನೀವು ಅದರಂತೆ ನಡೆದು ಕರ್ನಾಟಕದ ಸ್ವಾತಂತ್ರ್ಯವನ್ನಾದರೂ ಕಾಯ್ದುಕೊಳ್ಳಿರಿ; ಇಲ್ಲದ್ದಿದ್ದರೆ ನಿಮ್ಮ ಹಿತವನ್ನಷ್ಟು ನೀವು ನೋಡಿ ಕೊಳ್ಳುವದರಲ್ಲಿ ಮಗ್ನರಾಗಿ, ಕಣ್ಣುಮುಚ್ಚಿಕೊಂಡು ಹಾಲು ಕುಡಿಯುವ ಕಳ್ಳ ಬೆಕ್ಕಿನಂತೆ ಲತ್ತೆತಿಂದು ಸ್ಥಾನಭ್ರಷ್ಟರಾಗಿ (ದೇಶಭ್ರಷ್ಟರಾಗಿ) ಓಡಿಯಾದರೂ ಹೋಗಿರಿ ಪ್ರಿಯ ಕನ್ನಡಿಗರೇ, ನಿಮ್ಮ ಹಿತವನ್ನಷ್ಟು ನೀವು ನೋಡಿಕೊಂಡು, ನಿಮ್ಮ ಹಿತವನ್ನು ಮಾಡುವ ಅನ್ಯರನ್ನು ಉತ್ಪನ್ನ ಮಾಡಿಕೊಳ್ಳದೆ ರಾಷ್ಟ್ರಕ್ಕೆ ಹೊರತಾಗಿ ಇರುವದಕ್ಕಿಂತ, ಸ್ವರಾಷ್ಟ್ರಹಿತಕ್ಕಾಗಿ ಯತ್ನಿಸಿ ಇಡಿಯ ರಾಷ್ಟ್ರವೇ ನಿಮ್ಮ ಹಿತ ಮಾಡುವಂತೆ ಮಾಡಿಕೊಂಡು ರಾಷ್ಟ್ರದ ಘಟಕವಾಗಿರುವದು ನಿರ್ಭಯವಲ್ಲವೆ?

ದೇಶಬಾಂಧವರೇ, ನಾನು ಬ್ರಾಹ್ಮಣನು; ಬ್ರಾಹ್ಮಣರ ಸಾಮರ್ಥ್ಯವು ಬಾಯಲ್ಲಿ ಎಂಬದು ಪ್ರಸಿದ್ಧವು; ನಿಜವಾದ ಬ್ರಾಹ್ಮಣನು ತನ್ನ ಶಾಪಾನುಗ್ರಹ ಗರ್ಭಿತವಾದ ತನ್ನ ವಾಕ್ಪೌರುಷವನ್ನು ತೋರಿಸಬಹುದು; ನಾಮಧಾರಿ ಬ್ರಾಹ್ಮಣನು ಇಂಥ ಗೌರವದ ಪೌರುಷ ತೋರಿಸಲಸಮರ್ಥನಾದರೂ, ಬಂಜೆಯಾದ ಬರಿಯ ವಾಕ್ಪೌರುಷ ತೋರಿಸದೆ ಬಿಡನು! ಅಂತು ಬ್ರಾಹ್ಮಣರ ಸಾಮರ್ಥ್ಯವು ಬಾಯಲ್ಲಿ ಮಾತ್ರ! ಅದರಂತೆ ಅನಾದಿಕಾಲದಿಂದ ಬ್ರಾಹ್ಮಣರು ಮಾಡುತ್ತ ಬಂದಿರುವ ಉಪದೇಶರೂಪ ರಾಷ್ಟ್ರಸೇವೆಯನ್ನು ನಾನು ಯಥಾಶಕ್ತಿ ಮಾಡಿದೆನು. ಇನ್ನು ಮೇಲೆ ಭುಜಬಲ–ದ್ರವ್ಯಬಲ–ಉತ್ಸಾಹ ಬಲಗಳುಳ್ಳ ಪೌರುಷಸಂಪನ್ನರು ನೀವು ನನ್ನ ಉಪದೇಶದಂತೆ ಪ್ರತ್ಯಕ್ಷ ಕೃತಿ ಮಾಡುವ ನಿಮ್ಮ ಕರ್ತವ್ಯವನ್ನು ಮಾಡಿ ದೇಶದ ಸ್ವಾತಂತ್ರ್ಯವನ್ನು ಕಾಯ್ದುಕೊಂಡರೆ ಮಾತ್ರ ನನ್ನ ಮಾತಿಗೆ ಗೌರವ ಬರುವದು. ಪ್ರಿಯ ಕನ್ನಡಿಗರೇ, ಬಾಯಿಂದ ಹೇಳುವದು ಬಲು ಸುಲಭ ಅದನ್ನು ಕೆಲವು ತಾಸುಗಳಲ್ಲಿ ಹೇಳಿ ಮುಗಿಸಿಬಿಡ ಬಹುದು ಆದರೆ ಹೇಳಿದ ಕೆಲಸವನ್ನು ಮಾಡಲಿಕ್ಕೆ ಹಲವು ವರ್ಷಗಳಾದರೂ ಸಾಲಲಿಕ್ಕಿಲ್ಲ, ಹಿಂದಕ್ಕೆ ಕಪಿಲ ಮುನಿಗಳು ಅಂಶುಮಾನನಿಗೆ– ''ಗಂಗೆಯನ್ನು ಸ್ವರ್ಗದಿಂದ ತಂದರೆ ನಿನ್ನ ಪಿತೃಗಳ ಉದ್ಧಾರವಾಗುವದೆಂದು'' ಒಂದು ಮಾತಿನಲ್ಲಿ ಹೇಳಿಬಿಟ್ಟರು; ಆದರೆ ಗಂಗೆಯನ್ನು ತರಲು ಅಂಶುಮಾನ– ದಿಲೀಪರೆಂಬಿಬ್ಬರು ರಾಜರು ಘೋರತರ ತಪಶ್ಚರ್ಯ ಮಾಡಿದರೂ ಸಾಧ್ಯವಾಗದಿರಲು, ಭಗೀರಥನು ಮಹಾ ಪ್ರಯತ್ನದಿಂದ ಗಂಗೆಯನ್ನು ಭೂಲೋಕಕ್ಕೆ ತಂದು ಆಕೆಗೆ ಭಾಗೀರಥಿಯೆಂಬ ಹೆಸರನ್ನುಂಟುಮಾಡಿ ತನ್ನ ಪಿತೃಗಳ ಉದ್ಧಾರದ

ನೆವದಿಂದ ಈಗಲೂ ಜಗತ್ತನ್ನು ಉದ್ಧರಿಸುತ್ತಿರುವನು! ಈ ಮಾತನ್ನು ನಾನು ಹಿಂದೆಯೂ ಹೇಳಿರಬಹುದು; ಬ್ರಾಹ್ಮಣೇತರರ ಮಹತ್ವವನ್ನು ತೋರಿಸುವ ಈ ಪ್ರಸಂಗವನ್ನು ಈಗಲೂ ಹೇಳುವೆನು. ಇಂಥ ಪೌರಾಣಿಕ, ಐತಿಹಾಸಿಕ, ವ್ಯಾವಹಾರಿಕ ಉದಾಹರಣಗಳನ್ನು ಬೇಕಾದಷ್ಟು ಕೊಡಬಹುದು; ಆದ್ದರಿಂದ ಬ್ರಾಹ್ಮಣರ ಅಥವಾ ಬ್ರಹ್ಮವೃತ್ತಿಯವರ ಬರಿಯ ಬಾಯಿಮಾತಿನಿಂದ ಕೆಲಸವಾಗುವದಿಲ್ಲ; ಅವರ ತಾಯಿಯಂತೆ ಬ್ರಾಹ್ಮಣೇತರರ ಕೈಯಾಡಿ ಅವರು ಪರಿಶ್ರಮದಿಂದ ತಮ್ಮ ಮೈಬೆವರನ್ನು ಅಥವಾ ಪ್ರಸಂಗಬಂದರೆ ತಮ್ಮ ಮೈ ರಕ್ತವನ್ನು ಭೂಮಿಗೆ ಸುರಿಸಿದರೆ ಮಾತ್ರ ಬ್ರಾಹ್ಮಣರ ಮಾತಿನಂತೆ ಮಹಾಕಾರ್ಯಗಳು ಆಗುತ್ತವೆ. ಈವರೆಗೆ ಈ ಭರತಭೂಮಿಯಲ್ಲಿ ಮಹಾ ಮಹಾ ಕಾರ್ಯಗಳನ್ನು ಪೌರುಷಸಂಪನ್ನರಾದ ಬ್ರಾಹ್ಮಣೇತರರು ನೀವೇ ಮಾಡಿರುವಿರಿ; ರಾಷ್ಟ್ರ ರಕ್ಷಣದ ಕಠಿಣತರ ಕಾರ್ಯವು ನಿಮ್ಮ ಬಾಹುಬಲದಿಂದಲೇ ಸಾಧಿಸುತ್ತ ಬಂದಿರುತ್ತದೆ; ಅದರಂತೆ ರಾಷ್ಟ್ರಪೋಷಣದ ಯಾವತ್ತುಸಾಧನ–ಸಾಮುಗ್ರಿಗಳ ಉತ್ಪಾದನದ ಹಾಗು ರಾಷ್ಟ್ರಕ್ಕೆಲ್ಲ ಅವನ್ನು ಪೂರಯಿಸುವ ವ್ಯವಸಾಯವು ಪ್ರಾಮುಖ್ಯವಾಗಿ ನಿಮ್ಮನ್ನೇ ಕೂಡಿರುತ್ತದೆ! ಒಟ್ಟಿಗೆ, ರಾಷ್ಟ್ರರಕ್ಷಣದ ಹಾಗು ಪೋಷಣದ ಜವಾಬದಾರರು ಬ್ರಾಹ್ಮಣೇತರರು ನೀವು! ಈ ಮಾತಿಗೆ ವಿರುದ್ಧವಾದ ಉದಾಹರಣೆಗಳು ಇದ್ದರೆ ಅವು ಕೇವಲ ಅಪವಾದವೆಂದು ತಿಳಿಯಿರಿ; ಆದ್ದರಿಂದ ಬ್ರಾಹ್ಮಣರ ಮಾತಿಗೆ ಜೀವಕಳೆ ಬರುವದು, ಬ್ರಾಹ್ಮಣೇತರರ ಸ್ವಾರ್ಥತ್ಯಾಗದ ಪೌರುಷದಿಂದ! ಹಾಗೆ ದೇಶಾಭಿಮಾನಿಗಳಾದ ನೀವು ಸ್ವಾರ್ಥತ್ಯಾಗದಿಂದ ಮಹಾ ಪೌರುಷವನ್ನು ಪ್ರಕಟಮಾಡಿ ನನ್ನ ಮಾತಿಗೆ ಜೀವಕಳೆ ತಾರದಿದ್ದರೆ, ನನ್ನ ಮಾತು ಹಾಳುಹರಟೆಯಾಗಬಹುದಾಗಿದೆ. ಆದ್ದರಿಂದ ಕನ್ನಡ ವೀರರು ನೀವು ದೇಶೋದ್ಧಾರಕ್ಕಾಗಿ ಯಾವತ್ತೂ ಮೋಹಪಾಶಗಳನ್ನು ಹರಿದು ಚಲ್ಲಿರಿ; ಸ್ವಾರ್ಥಮೂಲವಾದ ಕ್ಷುದ್ರ ಮನಸ್ತಾಪಗಳನ್ನು ಮರೆತುಬಿಡಿರಿ; ಬಲಿಷ್ಠ ಶತ್ರುವು ನಿಮ್ಮ ಸರ್ವಸ್ವವನ್ನು ಹರಣಮಾಡುವದಕ್ಕೆ ಬಂದಿರುವದರಿಂದ, ನಿಮ್ಮ ಆ ಸರ್ವಸ್ವವನ್ನು ಶತ್ರುವಿನ ನಿವಾರಣಕ್ಕಾಗಿ ನೀವಾಗಿ ವಿನಿಯೋಗಿಸಿ, ಪುನಃ ಪೌರುಷದಿಂದ ಧರ್ಮಕ್ಕನುಸರಿಸಿ ಸರ್ವಸುಖ ಸಾಧನಗಳನ್ನು ಸಂಪಾದಿಸಿ ಧರ್ಮದಂತೆ ಅವನ್ನ ಉಪಭೋಗಿಸುವ ಸ್ವಾತಂತ್ರ್ಯವನ್ನು ಪಡೆಯಿರಿ. ಹೀಗೆ ನಿಮ್ಮ ಸುಖಸಾಧನಗಳಿಗೆ ಆಗಾಗ್ಗೆ ನವೀನತ್ವವು ಬಾರದಿದ್ದರೆ, ಅವು ಕೊಳೆತು ದೇಶದ ಸ್ವಾತಂತ್ರ್ಯ ನಾಶಕ್ಕೆ ಕಾರಣವಾಗುವುವು! ಯಾಕಂದರೆ ಆ ವೈಷಯಿಕ ಸುಖಸಾಧನಗಳು ಸುಖತೃಷ್ಣಾ ಮೂಲಕವಾದ ಅಧಾರ್ಮಿಕ ಸ್ವಾರ್ಥರೂಪ ವಿಷದಿಂದ ಆಗಾಗ್ಗೆ ದೂಷಿತವಾಗುತ್ತಿರುತ್ತವೆ! ಪ್ರಿಯ ದೇಶಬಾಂಧವರೇ, ಬಾಯಿಪೌರುಷದ ಬ್ರಾಹ್ಮಣರು ನಾವು ಕೈಯಿಂದ ಕೆಲಸ ಮಾಡಲಾರದವರಾದದ್ದರಿಂದ ನಮ್ಮ ಸಂರಕ್ಷಣದ ಭಾರವು ನಿಮ್ಮನ್ನೇ ಕೂಡಿರುವದು; ಆದ್ದರಿಂದಲೇ ನಿಮಗೆ ಗೋಬ್ರಾಹ್ಮಣ ಪ್ರತಿಪಾಲಕರೆಂಬ ಗೌರವದ ಬಿರುದು ಬಂದಿರುತ್ತದೆ; ಆ ಬಿರುದು ಸತ್ಯವಾಗುವದಕ್ಕಾಗಿ ನೀವು ಈಗ ಸ್ವಾರ್ಥತ್ಯಾಗದಿಂದ ಮಹಾ ಸಾಹಸ ಮಾಡಿ ನಿಮ್ಮಿಂದ ಪೋಷ್ಯರಾದ ಬ್ರಾಹ್ಮಣರನ್ನೂ, ಆಕಳುಗಳನ್ನೂ, ಅನಾಥರನ್ನೂ ಸಂರಕ್ಷಿಸಿ, ಕೀರ್ತಿಯನ್ನೂ ಪುಣ್ಯವನ್ನೂ ಸಂಪಾದಿಸಿರಿ. ನನ್ನ ಈ ಮಾತಿನ ಸತ್ಯತೆಗೆ ಈ ಆರ್ಯದ್ವಯರೇ ಸಾಕ್ಷಿಯಾಗಿರುವರು!''

ಈ ಮೇರೆಗೆ ನುಡಿದು ಮಾಧವಾಚಾರ್ಯರು ಗಾಂಭೀರ್ಯದಿಂದ ಅಕಾಶದ ಕಡೆಗೆ ಮುಖವೆತ್ತಿ–''ಭೋ ಉಮಾಪತೇ ವಿರೂಪಾಕ್ಷಾ, ಕನ್ನಡಿಗರಲ್ಲಿ ಜಾಗ್ರತಿಯನ್ನುಂಟುಮಾಡು'' ಎಂದು ನುಡಿಯುತ್ತಿರಲು, ವಿರೂಪಾಕ್ಷಾರ್ಯರು ಸಭಿಕರನ್ನು ಕುರಿತು ''ಸಭಿಕರೇ, ಬ್ರಾಹ್ಮಣರಾದ ಮಾಧವಾಚಾರ್ಯರು ಬ್ರಾಹ್ಮಣೇತರರ ಗೌರವವನ್ನು ಯಥಾರ್ಥವಾಗಿ ವರ್ಣಿಸಿದ್ದರಲ್ಲಿ ಆಶ್ಚರ್ಯವಿಲ್ಲ; ಯಾಕಂದರೆ ಜ್ಞಾನಿಗಳು ಅಸತ್ಯವನ್ನು ಸರ್ವಥಾ ನುಡಿಯರು; ಆದರೆ ಹೀಗೆ ಸತ್ಯ ಮಾತಾಡುವ ಬ್ರಾಹ್ಮಣರು ಜಗತ್ತಿಗೆ ಸತ್ಯ ಮಾರ್ಗವನ್ನು ತೋರಿಸುತ್ತಿರುವದು ಸಾಮಾನ್ಯ ಕೆಲಸವೆಂದು ತಿಳಿಯಬೇಡಿರಿ. ಮಾರ್ಗದರ್ಶಕರು ಸತ್ಯಮಾರ್ಗವನ್ನು ಕಾಣುವ ಯೋಗ್ಯತೆಯನ್ನು ಪಡೆಯುವದಕ್ಕಾಗಿ ಬಹುಕಾಲ ಘೋರ ತಪಶ್ಚರ್ಯ ಮಾಡಬೇಕಾಗುತ್ತದಲ್ಲದೆ, ಆ ಸಂಪಾದಿತವಾದ ಜ್ಞಾನವು ದೂಷಿತವಾಗದಂತೆ ಸರ್ವಸಂಗ ಪರಿತ್ಯಾಗ ಮಾಡಿ ಬ್ರಾಹ್ಮಣರು ಸದಾತಪಸ್ವಿಗಳೇ ಆಗಿರಬೇಕಾಗುತ್ತದೆ; ಆದ್ದರಿಂದ ನಿಜವಾದ ಬ್ರಾಹ್ಮಣರು ಶಮಪ್ರಧಾನರಾಗಿ ಜಗತ್ತಿನ ಕಲ್ಯಾಣಕ್ಕಾಗಿ ಸದಾ ತಪಸ್ತಪ್ತರಾಗಿರುವರು. ಪ್ರಿಯ ಕನ್ನಡಿಗರೇ, ಕಪಿಲ ಮಹಾಮುನಿಗಳ ಉದಾಹರಣೆಯನ್ನೇ ನೋಡಿರಿ. ಸಾಂಖ್ಯ ಮತಪ್ರವರ್ತಕರಾದ ಆ ಮಹಾತ್ಮರು ಸದಾ ತಪಸ್ತಪ್ತರಾಗಿದ್ದರು. ಕ್ಷತ್ರಿಯೋತ್ತಮ ಅಸಮಂಜಸನ ಮಗನಾದ ಅಂಶುಮಾನನೆಂಬ ಬ್ರಾಹ್ಮಣೇತರನು ಪಿತೃಗಳ ಉದ್ಧಾರದ ಸತ್ಯಮಾರ್ಗವನ್ನು ಅರಿತುಕೊಳ್ಳುವದಕ್ಕಾಗಿ ಭಯಭಕ್ತಿಯಿಂದ ಕಪಿಲರಿಗೆ ಪ್ರದಕ್ಷಿಣೆ ನಮಸ್ಕಾರ ಮಾಡಿ ಕೈಜೋಡಿಸಿ ನಿಂತುಕೊಂಡದ್ದರಲ್ಲಿಯ ಬ್ರಾಹ್ಮಣರ ಗೌರವವನ್ನು ಮರೆಯಬೇಡಿರಿ! ಭಗೀರಥನು ಮಹಾ ತಪಸ್ಸಿನಿಂದ ಭಾಗೀರಥಿಯನ್ನು ಭೂಮಿಗೆ ತಂದದ್ದು ಮಹಾ ಕಾರ್ಯವೇನೋ ಸರಿ ಆದರೆ ಹಾಗೆ ಮಾಡಲು ಅಂಶುಮಾನನನ್ನು ಬೋಧಿಸಿದ ಮಹಾ ಜ್ಞಾನಿಗಳಾದ ಕಪಿಲರ ಯೋಗ್ಯತೆಯು ಸಾಮಾನ್ಯವೇ? ಸತ್ಯಮಾರ್ಗವನ್ನು ತೋರಿಸುವ ಯೋಗ್ಯತೆ ಪಡೆದ ಕಪಿಲರೂ ಮಹಾ ತಪಸ್ವಿಗಳೇ; ಅದರಂತೆ ಕಾರ್ಯ ಸಾಧಿಸಿದ ಭಗೀರಥನೂ ಮಹಾತಪಸ್ವಿಯೇ; ಅಂದಬಳಿಕ ಇವರಲ್ಲಿ ಯಾರು ಹೆಚ್ಚು ಯಾರು ಕಡಿಮೆ ಯೆಂದು ನಾವು ಹೇಳೋಣ? ಕಪಿಲರು ಮೊದಲೇ ತಪಸ್ಸುಮಾಡಿ ಸದಾ ತಪಸ್ವಿಗಳಾಗಿರುವವರು. ಭಗೀರಥನು ಗಂಗಾ ಪ್ರಾಪ್ತಿರೂಪ ಮಹಾಕಾರ್ಯವನ್ನು ಸಾಧಿಸುವ ಮಟ್ಟಿಗೆ ಮಹಾ ತಪಸ್ಸು ಮಾಡಿ, ಕಾರ್ಯವು ಸಾಧಿಸಿದ ಬಳಿಕ ಬ್ರಾಹ್ಮಣರು ತೋರಿಸಿದ ಮಾರ್ಗದಂತೆ ರಾಜೈಶ್ವರ್ಯ ಭೋಗಿಸುವಾಗ ಸದಾ ತಪಸ್ವಿಯಂತೆ ಆಚರಿಸುವವನು; ಅಂದಬಳಿಕ ಇದರಲ್ಲಿ ಏನಾದರೂ ಸ್ವಲ್ಪ ಹೆಚ್ಚುಕಡಿಮೆ ತೋರಿದರೆ ಯಾರು ಶ್ರೇಷ್ಠರು ಯಾರು ಕನಿಷ್ಠರು ಎಂಬದನ್ನು ನೀವೇ ನಿರ್ಣಯಿಸಿಕೊಳ್ಳಿರಿ; ನಾವಂತು ರಾಷ್ಟ್ರೋದ್ಧಾರದ ಕಾರ್ಯದ ಮಟ್ಟಿಗೆ ಇಬ್ಬರೂ ಸಮಾನ ಯೋಗ್ಯತೆಯವರೆಂದು ನಿಃಸಂಶಯವಾಗಿ ಹೇಳುವೆವು. ಯಾಕಂದರೆ ತಪಸ್ಸಿದ್ಧರಾದ ಬ್ರಾಹ್ಮಣರು ಸತ್ಯ ಮಾರ್ಗವನ್ನು ತೋರಿಸುವದರಿಂದ ದೊಡ್ಡವರು; ಅವರು ತೋರಿಸಿದ ಮಾರ್ಗದಂತೆ ಹೋಗುವಾಗ ಮೈಬೆವರು ಸುರಿಯಲಿ, ಮೈ ರಕ್ತದಿಂದ ಭೂಮಿಯು ತೋಯಲಿ, ದೇಹಪಾತದಿಂದ ಸ್ವರ್ಗದ್ವಾರವು ತೆರೆಯಲಿ ದೀರ್ಘಕಾಲದ ತಪಸ್ಸು ಮಾಡಿ ಕಾರ್ಯ ಸಾಧಿಸುವದರಿಂದ ಬ್ರಾಹ್ಮಣೇತರರು ದೊಡ್ಡವರು. ಒಬ್ಬರ ತಪಸ್ಸು ಸತ್ಯಮಾರ್ಗಶೋಧಕ್ಕಾಗಿ,

ಒಬ್ಬರ ತಪಸ್ಸು ಕಾರ್ಯ ಸಾಧನಕ್ಕಾಗಿ; ಅಥವಾ ಒಬ್ಬರ ತಪಸ್ಸು ಮೊದಲೇ ಆಗಿರುವದು,ಒಬ್ಬರ ತಪಸ್ಸು ಹಿಂದುಗಡೆ ಆಗಬೇಕಾಗುವದು ಅಂದಬಳಿಕ ಇಬ್ಬರಲ್ಲಿ ಹೆಚ್ಚುಕಡಿಮೆಯೇನು? ಪೌರುಷಿಗಳಾದ ದೇಶಬಾಂಧವರೇ, ಬ್ರಾಹ್ಮಣ ಋಷಿಗಳು ತಮ್ಮ ಯೋಗಕ್ಷೇಮದ ಭಾರವನ್ನು ಕೂಡ ನಿಮ್ಮ ಮೇಲೆ ಹಾಕಿ, ಕೇವಲ ಜಗತ್ತಿನ ಸುಖವೃದ್ಧಿಯ ಮಾರ್ಗವನ್ನು ಗೊತ್ತುಹಚ್ಚುವದಕ್ಕಾಗಿ ವೈರಾಗ್ಯದಿಂದ ಘೋರತಪಶ್ಚರ್ಯ ಮಾಡಿದರು; ಸದಾ ಮಾಡುತ್ತಲಿರುವರು; ಆದರೆ ಅವರ ತಪೋಮೂಲವಾದ ಶೋಧದ ಫಲವನ್ನು ದೊಡ್ಡ ಪ್ರಮಾಣದಿಂದ ಉಣ್ಣುವವರಾರು? ಬ್ರಾಹ್ಮಣೇತರರು ನೀವೇ ಅಲ್ಲವೆ? ಹೀಗೆ ತಮ್ಮ ದೀರ್ಘಕಾಲದ ವಿಚಾರರೂಪ ತಪಶ್ಚರ್ಯದಿಂದಾದ ವಿವಿಧ ಆಧ್ಯಾತ್ಮಿಕ ಹಾಗು ಅಧಿಭೌತಿಕ ಶೋಧಗಳ ಫಲಗಳನ್ನು ಜಗತ್ತಿಗೆ ಒಪ್ಪಿಸಿಕೊಟ್ಟು, ತಾವು ಅಡವಿಯ ಗಡ್ಡೆ–ಗೆಣಸು ತಿಂದು ಜೀವಿಸುವವರು ಮಹಾತ್ಮರಾದ ಬ್ರಾಹ್ಮಣ ಋಷಿಗಳಲ್ಲದೆ, ಜಗತ್ತಿನಲ್ಲಿ ಮತ್ತಾರಿರುವರು ಹೇಳಿರಿ! ಪ್ರಿಯ ದೇಶಬಾಂಧವರೇ, ಅನಾದಿಕಾಲದಿಂದ ರಾಜೈಶ್ವರ್ಯಗಳನ್ನು ಭೋಗಿಸುತ್ತ ಬಂದವರು ಬಹುತರ ಬ್ರಾಹ್ಮಣೇತರರು; ಅದರಂತೆ ಬ್ರಾಹ್ಮಣರು ಗೊತ್ತುಹಚ್ಚಿದ ಶಾಸ್ತ್ರತತ್ವಗಳಿಗನುಸರಿಸಿ ನಡೆಯುವ ಕೃಷಿ, ಕೈಗಾರಿಕೆ, ವ್ಯಾಪಾರೋದ್ಯೋಗ ಇವುಗಳ ಕೀಲಿಯ ಕೈಯು ದೊಡ್ಡ ಪ್ರಮಾಣದಿಂದ ಬ್ರಾಹ್ಮಣೇತರರ ಕಡೆಗೇ ಇರುವದು ಆದ್ದರಿಂದಲೇ ಬ್ರಾಹ್ಮಣರು ಒಟ್ಟಿನಲ್ಲಿ ದರಿದ್ರರೂ, ಭಿಕ್ಷುಕರು ಎಂದು ತಿಳಿಯುವದು ವಾಡಿಕೆಯಾಗಿದೆ. ಈಗ ಮಾಧವಾಚಾರ್ಯರ ಹಾಗು ನಿಮ್ಮ ಇರವಿನಲ್ಲಿರುವ ಅಂತರವನ್ನು ಕುರಿತು ನೀವು ವಿಚಾರಮಾಡಿದರೆ, ನನ್ನ ಮಾತಿನ ಸತ್ಯತೆಯು ತೋರುವದು. ಮಾಧವಾಚಾರ್ಯರು ಮಹಾ ತಪಸ್ವಿಗಳು, ಲೋಕಹಿತದಕ್ಷರು, ಷಟ್‌ಶಾಸ್ತ್ರ ಪಂಡಿತರು, ರಾಜಕಾರಣ ಧುರೀಣರು, ಇಡಿಯ ಕರ್ನಾಟಕದ ಚಿತ್ತವೃತ್ತಿಯನ್ನು ಆಕರ್ಷಿಸುವಷ್ಟು ಸಮರ್ಥರು; ಇಂಥ ಅದ್ವಿತೀಯ ಪುರುಷರ ಇರವನ್ನು ನೀವು ನೋಡಿದಿರಾ? ಈ ಮಹಾತ್ಮರ ಉಟ್ಟದ್ದೊಂದು ದೋತರ, ಹೊತ್ತದ್ದೊಂದು ದೋತರ, ತಲೆಗೆ ಸುತ್ತಿದ್ದೊಂದು ಪಂಜೆ, ಇವುಗಳಿಂದ ಹೊರತಾದ ಅವರ ಸೊತ್ತೆಂದರೆ, ಮೈತುಂಬ ಹಚ್ಚಿಕೊಂಡ ಭಸ್ಮ ಕೊರಳಲ್ಲಿ ಧರಿಸಿದ ರುದ್ರಾಕ್ಷಮಾಲೆ! ಪ್ರಿಯ ಕನ್ನಡಿಗರೇ, ರಾಜಕಾರಣ ಧುರೀಣರ ಈ ವೈರಾಗ್ಯದ ವಿಲಕ್ಷಣ ಇರವು,ನಮ್ಮ ಈ ಭರತ ಭೂಮಿಯಲ್ಲಲ್ಲದೆ, ಅನ್ಯತ್ರ ಕಣ್ಣಿಗೆ ಬೀಳಲಿಕ್ಕಿಲ್ಲ! ಶ್ರೀ ಬಸವೇಶ್ವರರಂತೆ ಇವರು ಒಕ್ಕೈಯೋಗರಕ್ಕೆ ಪಾತ್ರರು! ಇಂಥ ವೈರಾಗ್ಯಸಂಪನ್ನರಾದ್ದರಿಂದಲೇ ಆಚಾರ್ಯವರ್ಯರು ನಿಮ್ಮೆಲ್ಲರಿಗೆ ಲೋಕಹಿತಕ್ಕಾಗಿ ಸರ್ವಸಂಗ ಪರಿತ್ಯಾಗ ಮಾಡಲು ನಿಶ್ಯಂಕೆಯಿಂದ ಬೋಧಿಸುವರು! ಧನ್ಯರು, ಬ್ರಹ್ಮವೃತ್ತಿಯ ನಿಜವಾದ ಬ್ರಾಹ್ಮಣರು ಧನ್ಯರು, ಅವರ ಸತ್ಯಮಾರ್ಗದರ್ಶನವೂ ಧನ್ಯವು,ಆ ಮಾರ್ಗದಂತೆ ನಡೆಯುವ ಮಹಾ ಪೌರುಷಸಂಪನ್ನರಾದ ಬ್ರಾಹ್ಮಣೇತರ ಬಂಧುಗಳು ನೀವೂ ಧನ್ಯರೇ! ಆದ್ದರಿಂದ ದೇಶಬಾಂಧವರೇ, ಬ್ರಾಹ್ಮಣರು ಮಾಡುವ ಕೆಲಸ ಬ್ರಾಹ್ಮಣರಿಗೆ, ಬ್ರಾಹ್ಮಣೇತರರು ಮಾಡು ಕೆಲಸ ಬ್ರಾಹ್ಮಣೇತರರಿಗೆ. ಅವರವರ ಕರ್ತವ್ಯವು ಅವರವರಿಗೆ ಶ್ರೇಷ್ಠವು! ಬ್ರಾಹ್ಮಣರಿಲ್ಲದೆ ಬ್ರಾಹ್ಮಣೇತರರ ಆಟ ನಡೆಯದು, ಬ್ರಾಹ್ಮಣೇತರರಿಲ್ಲದೆ ಬ್ರಾಹ್ಮಣರ ಆಟ ನಡೆಯದು. ಬ್ರಾಹ್ಮಣರೆಂದರೆ ಬುದ್ಧಿಸಾಮರ್ಥ್ಯವುಳ್ಳವರೆಂತಲೂ, ಬ್ರಾಹ್ಮಣೇತರರೆಂದರೆ

ಶರೀರ ಸಾಮರ್ಥ್ಯವುಳ್ಳವರೆಂತಲೂ ತಿಳಿದರೆ, ಬುದ್ಧಿ ಸಾಮರ್ಥ್ಯ-ಶರೀರ ಸಾಮರ್ಥ್ಯಗಳು ಜೋಡಾಗದಿದ್ದರೆ ಯಾವ ಕಾರ್ಯವಾದೀತೆಂಬದನ್ನು ನೀವೇ ತಿಳಿದುನೋಡಿರಿ. ಬ್ರಾಹ್ಮಣರಿಗೂ, ಬ್ರಾಹ್ಮಣೇತರರಿಗೂ, ಅಂದರೆ ಬುದ್ಧಿವಂತರಿಗೂ ಬಲವಂತರಿಗೂ ಹ್ಯಾಗೆ ಬಿಡುವದು? ಅವರಿಬ್ಬರ ಸಂಬಂಧವು ಲಿಂಗಕ್ಕೂ ವಸ್ತ್ರಕ್ಕೂ ಗಂಟು ಇದ್ದ ಹಾಗೆ ! ಇವರಿಬ್ಬರ ಸಂಬಂಧ ಕಡಿಯುವ ವಿಚಾರವು ದುರ್ದೈವದಿಂದ ತನ್ನಿಂದ ತಾನೇ ರಾಷ್ಟ್ರದಲ್ಲಿಹುಟ್ಟಲಿ, ಅಥವಾ ರಾಷ್ಟ್ರದ ಹಿತಶತ್ರುಗಳು ಆ ವಿಚಾರವನ್ನು ತಮ್ಮ ಕುಟಿಲ ತಂತ್ರದಿಂದ ರಾಷ್ಟ್ರದಲ್ಲಿ ಉತ್ಪನ್ನ ಮಾಡಲಿ, ಅದು ನಿಶ್ಚಯವಾಗಿ ರಾಷ್ಟ್ರವಿಘಾತಕವು, ಅರ್ಥಾತ್ ಆತ್ಮಘಾತಕವು ಎಂದು ತಿಳಿಯಿರಿ. ಪ್ರಿಯ ಕನ್ನಡಿಗರೇ, ರಾಷ್ಟ್ರದ ಪರೀಕ್ಷಾಕಾಲವು ಒದಗಿರುವ ಈಗಿನ ಪ್ರಸಂಗದಲ್ಲಿ ನೀವು ಈ ಸರ್ವನಾಶಕಾರಕವಾದ ಹಾದಿಯನ್ನ ಹಿಡಿಯದೆ, ಮಹಾತ್ಮರಾದ ಆಚಾರ್ಯರು ಈಗ ನಾಲ್ಕು ದಿನ ಉಪನ್ಯಾಸ ಮಾಡಿ ನಿಮಗೆ ತೋರಿಸಿರುವ ಮಾರ್ಗದಿಂದ ಹೋಗಿರಿ. ನಿಮಗೆ ಮಾರ್ಗದಲ್ಲಿ ಎಷ್ಟು ವಿಘ್ನಗಳೊದಗಿದರೂ ಹಿಡಿದ ಮಾರ್ಗದಿಂದ ಹೆಜ್ಜೆಯನ್ನು ಕಿತ್ತಬೇಡಿರಿ. ದಾರಿಯನ್ನು ನಡೆಯುವಾಗ ದೇಹವು ಬಿದ್ದರೆ ಹಿಡಿದ ಹಾದಿಯಲ್ಲಿಯೇ ಬೀಳಲಿ. ಮಹಾ ರಾಜಕಾರಣ ಧುರೀಣರಾದ ಆಚಾರ್ಯರು ಶತ್ರುಗಳ ತಂತ್ರಗಳನ್ನೆಲ್ಲ ತಮ್ಮ ಅಗಾಧ ಬುದ್ಧಿಸಾಮರ್ಥ್ಯದಿಂದ ಮುಂಗಡ ವಾಗಿಯೇ ತಿಳಿದಿರುವರು. ಹಾಗೆ ಮುಂಗಡವಾಗಿ ತಿಳಿದು ಆಜ್ಞೆ ಮಾಡುವದು ಅವರ ಕೆಲಸ; ಅವರ ಆಜ್ಞೆಯಂತೆ ಜೀವದ ಹಂಗುದೊರೆದು ನಡೆಯುವದು ನಿಮ್ಮ ಕೆಲಸ! ಕನ್ನಡ ವೀರರೇ, ನಿಮ್ಮಂಥ ಪ್ರತಾಪಿಗಳಿಂದಲೇ ಮಾಧವಾಚಾರ್ಯರಂಥ ಬ್ರಾಹ್ಮಣರು ಪ್ರತಿಪಾಲಿತರಾದ್ದರಿಂದ, ನಿಮ್ಮಂಥ ಪ್ರತಿಪಾಲಕರ ಸುರಕ್ಷಿತತೆಯೇ ಅವರ ಸುರಕ್ಷಿತತೆಯು, ನಿಮ್ಮ ನಾಶದೊಡನೆಯೇ ಅವರ ನಾಶವು! ಅಂದ ಬಳಿಕ ಬ್ರಾಹ್ಮಣ-ಬ್ರಾಹ್ಮಣೇತರರ ಹಿತೈಕ್ಯವಿರುವದಲ್ಲವೆ? ಆದ್ದರಿಂದ ಜ್ಞಾನಸಂಪನ್ನರಾದ ತಪಸ್ವಿ ಬ್ರಾಹ್ಮಣರಲ್ಲಿ ಅಥವಾ ಬ್ರಹ್ಮವೃತ್ತಿಯವರಲ್ಲಿ, ಹಾಗು ಪೌರುಷ ಸಂಪನ್ನರಾದ ಧರ್ಮಿಷ್ಠ ಬ್ರಾಹ್ಮಣೇತರರಲ್ಲಿ ಭೇದವೆಣಿಸುವದು ಮಹಾಪಾಪವು! ಕನ್ನಡ ವೀರರೇ, ಆಚಾರ್ಯರು ಪಸರಿಸಿರುವ ರಾಜಕಾರಣದ ಬಲೆಯ ನೆಲೆಯು ಅನ್ಯರಿಗೆ ಹತ್ತುವದು ಕಠಿಣವು. ಆದ್ದರಿಂದ ಮಹಾಸಮರ್ಥರಾದ ಬ್ರಾಹ್ಮಣೇತರರು ನೀವು ಏಳಿರಿ, ಆಚಾರ್ಯರು ಹೇಳಿದಂತೆ ಸರ್ವಸ್ವದ ತ್ಯಾಗಮಾಡಿ, ಸರ್ವಮೋಹಪಾಶಗಳನ್ನು ಹರಿದು ಚೆಲ್ಲಿ, ಸ್ವಾರ್ಥ ಮೂಲಕವಾದ ಕ್ಷುದ್ರ ಮನಸ್ತಾಪಗಳನ್ನು ಮರೆತು ದೇಶೋದ್ಧಾರಕ್ಕಾಗಿ ಟೊಂಕಕಟ್ಟಿರಿ'' ಎಂದು ನುಡಿಯುತ್ತಿರಲು, ಮಾಧವಾಚಾರ್ಯರು—'' ಬ್ರಹ್ಮಹೃದಯವನ್ನು ವರ್ಣಿಸುವ ಬ್ರಹ್ಮ ಹೃದಯಕ್ಕೆ ನನ್ನ ಅನಂತ ಪ್ರಣಾಮಗಳು'' ಎಂದು ನುಡಿಯುತ್ತಿರುವಾಗ, ಮಹಾ ಸಾತ್ವಿಕರಾದ ಮಿತಭಾಷಿ ಸಂಗನಬಸವಾರ್ಯರು ದೈವೀ ಪ್ರೇರಣೆಯಿಂದ ಮತ್ತೆ ಸಭಿಕರನ್ನು ಕುರಿತು-

ವಿವೇಕಿಗಳಾದ ಕನ್ನಡಿಗರೇ, ಆಚಾರ್ಯವರ್ಯರೂ, ಆರ್ಯವರ್ಯರೂ ಬೋಧಿಸಿದ್ದರ ಗೌರವವನ್ನು ಮನಸ್ಸಿನಲ್ಲಿ ತಂದು ನೀವು ಮತ್ತೂ ವಿವೇಕಿಗಳಾಗಿರಿ. ವಿವೇಕಿಯಾಗುವದಕ್ಕಿಂತ ಹೆಚ್ಚಿನ ಪಾಂಡಿತ್ಯವಿಲ್ಲೆಂದು ಪಂಚತಂತ್ರಗಾರನು ಹೇಳಿದ ಮಾತು ಬಲು ಗೌರವದ್ದಾಗಿದೆ. ವಿವೇಕಶೂನ್ಯರಾದ ದುರಭಿಮಾನಿಗಳು ಬ್ರಾಹ್ಮಣರಲ್ಲಿಯೂ ಉಂಟು, ಬ್ರಾಹ್ಮಣೇತರರಲ್ಲಿಯೂ

ಉಂಟು. ಅದರಂತೆ ತಮ್ಮ ತಮ್ಮ ಧರ್ಮತ್ಯಾಗ ಮಾಡಿದವರಂತೆ ಹೀನವೃತ್ತಿಯಿಂದ ಮನಸ್ಸಿಗೆ ಬಂದಂತೆ ಆಚರಿಸಿ, ತಮ್ಮ ತಮ್ಮ ಪವಿತ್ರ ಸಮಾಜಗಳಿಗೆ ಕಲಂಕವನ್ನುಂಟುಮಾಡುವ ಕುಲಕಲಂಕರು ಬ್ರಾಹ್ಮಣರಲ್ಲಿಯೂ ಇರಬಹುದು; ಬ್ರಾಹ್ಮಣೇತರರಲ್ಲಿಯೂ ಇರಬಹುದು. ಆದರೆ ಅಂಥ ಧರ್ಮಹೀನರನ್ನು ಕಟ್ಟಿಕೊಂಡು ಬ್ರಾಹ್ಮಣರು ಬ್ರಾಹ್ಮಣೇತರರನ್ನು ಬ್ರಾಹ್ಮಣೇತರರು ಬ್ರಾಹ್ಮಣರನ್ನು ತಿರಸ್ಕರಿಸುತ್ತ ಪರಸ್ಪರರ ವಿಷಯವಾಗಿ ಇಲ್ಲದ ದುರ್ಭಾವನೆಗಳನ್ನು ಮಾಡಿಕೊಂಡು ಒಬ್ಬರಿಂದೊಬ್ಬರು ಸಿಡಿದುಹೋಗಿ ಒಬ್ಬರ ಅಹಿತವನ್ನೊಬ್ಬರು ಬಗೆಯುತ್ತ ಒಟ್ಟಿನಲ್ಲಿ ರಾಷ್ಟ್ರದ ಅಹಿತವನ್ನು ಮಾಡುವ ನಾಶದ ಪಂಥವನ್ನು ನೀವು ಸರ್ವಥಾ ಹಿಡಿಯಬೇಡಿರಿ. ಧಾನ್ಯಗಳಲ್ಲಿ ಜೊಳ್ಳು–ಪೊಳ್ಳು ಧಾನ್ಯಗಳು ಚೆಲ್ಲಿಬಿಡತಕ್ಕವಾಗಿರುವಂತೆ, ಇಂಥ ಅಯೋಗ್ಯ ಜನರು ಆಯಾ ಸಮಾಜಗಳಿಂದ ಹೊರಪಡಿಸತಕ್ಕವರೆಂದು ತಿಳಿಯಿರಿ! ಆಯಾ ಸಮಾಜದಲ್ಲಿಯ ಜೊಳ್ಳು–ಪೊಳ್ಳು ಮಂದಿಯನ್ನು ನೋಡಿ ಸಮಾಜವನ್ನೇ ತಿರಸ್ಕರಿಸಿಬಿಟ್ಟರೆ, ಧಾನ್ಯರಾಶಿಯಲ್ಲಿ ಚೆಲ್ಲಿಕೊಟ್ಟ ಹಾಗಲ್ಲವೆ? ಹೀಗೆ ಧಾನ್ಯರಾಶಿಯನ್ನೆಲ್ಲ ತಿರಸ್ಕರಿಸಿ ಚೆಲ್ಲುವವರು ಹೊಟ್ಟೆಗಿಲ್ಲದೆ ಸತ್ತುಹೋಗುವಂತೆ, ಆಯಾ ಸಮಾಜದೊಳಗಿನ ಈ ಜೊಳ್ಳು–ಪೊಳ್ಳು ಮಂದಿಯನ್ನು ನೋಡಿ, ಸಮಾಜವನ್ನೇ ತಿರಸ್ಕರಿಸುವವರು ತಮ್ಮ ರಾಷ್ಟ್ರೀಯ ಸ್ವಾತಂತ್ರ್ಯವನ್ನು ಕಳೆದುಕೊಂಡು ಜೀವನ್ಮೃತರಾಗುವದು ನಿಶ್ಚಯವೆಂದು ನೀವು ಸೆರಗಿಗೆ ಗಂಟು ಹೊಡೆದುಕೊಳ್ಳಿರಿ! ಕನ್ನಡ ವೀರರೇ, ಬ್ರಾಹ್ಮಣರೊಳಗಿನ ವಸಿಷ್ಠ, ವಾಮದೇವ, ವ್ಯಾಸ, ಯಾಜ್ಞವಲ್ಕ್ಯ ಪ್ರಭೃತಿಗಳಾದ ಅಪರೂಪದ ಋಷಿವರ್ಯರನ್ನು ನೋಡುವಿರೋ, ಅಥವಾ ಆ ಸಮಾಜದೊಳಗಿನ ಹಿಂಡಿಗೆ ಹಿಂಡು ಒಟ್ಟಿರುವ ಅಜಾಮಿಳನಂಥ ಪತಿತರನ್ನು ನೋಡಿವಿರೋ? ಅದರಂತೆ ಬ್ರಾಹ್ಮಣೇತರರೊಳಗಿನ ಸ್ವಾಯಂಭುವಮನು, ಭರತ, ರಾಮ, ಕೃಷ್ಣ, ವಿದುರರಂಥ ಅವತಾರಿಕರಿಂದ ಬ್ರಾಹ್ಮಣೇತರ ಸಮಾಜಕ್ಕೆ ಗೌರವ ಬಂದಿರುವದೆಂದು ತಿಳಿದಿರುವಿರೋ, ಅಥವಾ ಆ ಬ್ರಾಹ್ಮಣೇತರ ಸಮಾಜದಲ್ಲಿ ಹಿಂಡಿಗೆ ಹಿಂಡು ಒಟ್ಟಿರುವ ವೇನರಾಜನಂಥ ನೀಚರಿಂದ ಆ ಸಮಾಜಕ್ಕೆ ಗೌರವ ಬಂದಿರುವದೆಂದು ತಿಳಿದಿರುವಿರೋ? ಪ್ರಿಯ ಕನ್ನಡಿಗರೇ, ನೀವು ಪಾರತಂತ್ರ್ಯದಿಂದ ಉದ್ಧೃತರಾಗಬೇಕೆಂದು ಇಚ್ಛಿಸುತ್ತಿದ್ದರೆ, ಪ್ರತಿ ಒಂದು ಸಮಾಜದೊಳಗಿನ ಮಹಾತ್ಮರನ್ನು ನೋಡಿ ಆಯಾ ಸಮಾಜಗಳನ್ನು ಗೌರವಿಸುತ್ತ ನಿಮ್ಮ ನಿಮ್ಮ ಸಮಾಜದೊಳಗಿನ ಮಹಾತ್ಮರ ಅನುಕರಣ ಮಾಡುತ್ತ ಎಲ್ಲ ಸಮಾಜದವರೂ ಒಕ್ಕಟ್ಟಾಗಿ ನಿಮ್ಮ ರಾಷ್ಟ್ರವನ್ನು ಭೂಷಿಸುವವರಾಗಿರಿ! ಅಥವಾ ನೀವು ಪಾರತಂತ್ರ್ಯರೂಪವಾದ ಮಹಾ ನರಕದಲ್ಲಿಯೇ ಚಿರಕಾಲ ಕೊಳೆಯುತ್ತ ಬಿದ್ದುಕೊಳ್ಳಬೇಕೆಂದು ಇಚ್ಛಿಸುತ್ತಿದ್ದರೆ, ಆಯಾ ಸಮಾಜದೊಳಗಿನ ಅಧಮಾಧಮರನ್ನು ನೋಡಿ ಆಯಾ ಸಮಾಜಗಳನ್ನು ಮನಸೋಕ್ತವಾಗಿ ಜರೆಯುತ್ತ, ನಿಮ್ಮ ಸಮಾಜದೊಳಗಿನ ಅಧಮಾಧಮರ ಅನುಕರಣ ಮಾಡುತ್ತ ಎಲ್ಲ ಸಮಾಜದವರೂ ಪರಸ್ಪರ ದ್ವೇಷ ಬಳಿಸಿ ಬಡಿದಾಡುತ್ತ ನಿಮ್ಮ ರಾಷ್ಟ್ರವನ್ನು ದೂಷಿಸುವವರಾದರೂ ಆಗಿರಿ. ಛಿ ಛಿ! ಹಿರಿಯರು ಗಳಿಸಿಟ್ಟದ್ದನ್ನು ತಿಂದುತಿಂದು ಗೂಳಿಯಂತೆ ಸೊಕ್ಕಿ ಡುರಿಕೆ ಹೊಡೆಯುತ್ತ ನಿಮ್ಮನಿಮ್ಮೊಳಗೆ ಕಾದಾಡಿ ಪರಸ್ಪರರ ಸೋಲು ಗೆಲವುಗಳಿಂದ ವಿಷಾದ–

ಉತ್ಸಾಹಗಳನ್ನು ಪಡುವ ಪಶುವೃತ್ತಿಯನ್ನು ಇಲ್ಲಿಗೆ ನೀವು ಸಾಕುಮಾಡತಕ್ಕದ್ದು! ಕನ್ನಡ ವೀರರೇ, ಇಂಥ ಪಶುವೃತ್ತಿಯವರನ್ನು ''ಕನ್ನಡ ವೀರರೇ'' ಎಂದು ಕರೆಯಲಿಕ್ಕೆ ನನಗೆ ನಾಚಿಕೆಬರುತ್ತದೆ! ಕನ್ನಡಿಗರಲ್ಲಿ ಕೆಲವರಂತು ಈ ಪಶುವೃತ್ತಿಗಿಂತಲೂ ಹೀನವಾದ ವೃತ್ತಿಯ ವರಿರುವರೆಂದು ನಾನು ಬಹು ಕಷ್ಟದಿಂದ ಹೇಳವೆನು; ಯಾಕಂದರೆ ಎರಡು ಸೊಕ್ಕಿದ ಗೂಳಿಗಳು ಕಾದಾಡುವಾಗ, ಬೇರೊಂದು ಗೂಳಿಯು ಅವುಗಳ ನಡುವೆ ಹೋಗಿ ಆ ಕಾದಾಟವನ್ನು ನಿಲ್ಲಿಸುತ್ತದ್ದಲ್ಲದೆ, ತನ್ನ ಕ್ಷುದ್ರ ಸ್ವಾರ್ಥಕ್ಕಾಗಿ ಒಂದು ಗೂಳಿಯ ಪಕ್ಷಗಟ್ಟಿ ಫಿತೂರಿಯಂಥ ಸಗಣಿ ತಿನ್ನುವ ಕೆಲಸವನ್ನು ಅದು ಸರ್ವಥಾ ಮಾಡುವದಿಲ್ಲ; ಆದರೆ ಕನ್ನಡಿಗರೊಳಗಿನ ಎಷ್ಟು ಜನ ಕುಲಕಂಟಕರು ತಮ್ಮ ಲಾಭಕ್ಕೋಸ್ಕರ ''ಇವರು ಸ್ವಜನರು, ಇವರು ಸ್ವದೇಶಬಾಂಧವರು'' ಎಂಬದನ್ನು ನೋಡದೆ ಶತ್ರುಪಕ್ಷಕ್ಕೆ ಕದ್ದುಮುಚ್ಚಿಯಾಗಲಿ, ಡಾಣಡಂಗುರವಾಗಿಯಾಗಲಿ ಸಹಾಯ ಮಾಡುವ ದ್ರೋಹಮಾಡಿ ತಮ್ಮ ಹೋಳಿಗೆಯನ್ನು ತುಪ್ಪದಲ್ಲಿ ಕೆಡವಿಕೊಂಡಿರುವರಲ್ಲ! ಈ ಸಗಣಿಗಳ್ಳರಿಗೆ, ತಾವು ತಮ್ಮ ಒಬ್ಬರ ಹಿತವನ್ನು ನೀಚತನದಿಂದ ಸಾಧಿಸಿ ನರಕಕ್ಕೆ ಬಾಧ್ಯರಾಗುವದಲ್ಲದೆ, ದೇಶಕ್ಕೆ ದೇಶವನ್ನು ಮುಣುಗಿಸಿದ ಅಘೋರ ಪಾಪದ ಶಿಕ್ಷೆಗೆ ಪಾತ್ರರಾಗುವೆವೆಂಬ ಎಚ್ಚರವಿರುವದಿಲ್ಲ. ಶತ್ರುಗಳು ಇಂಥ ಅಧಮಾಧಮರಿಗೆ ತೋರಿಸುವ ಆಸೆಯೂ ಕೊಲೆಗಡಕರಾದ ಮೀನು ಬಲೆಗಾರರು ಮೀನುಗಳಿಗೆ ತೋರಿಸುವ ಮಳೆಹುಳದ ಆಸೆಯಂತೆ ಇರುತ್ತದೆ. ಮಳೆಹುಳವನ್ನು ತಿನ್ನಹೋದ ಮೀನವು ಗಂಟಲಿಗೆ ಗಾಣ ಸಿಕ್ಕು ಒದ್ದಾಡುತ್ತಿರುವಂತೆ,ಈ ಥಂಥ ಫಿತೂರಿಯ ನೀಚರು, ಮುಂದೆ ತಮಗೆ ಸಗಣಿಯನ್ನು ಕೊಟ್ಟಿದ್ದ ತಮ್ಮ ಹಿತಶತ್ರುಗಳಿಂದ ಹಾಗು ಸ್ವದೇಶ ದ್ರೋಹರೂಪ ಪಾಪದಿಂದ ವಿವಿಧ ಸಂಕಟಗಳಿಗೆ ಗುರಿಯಾಗಬೇಕಾಗುವದೆಂಬ ವಿಚಾರವನ್ನು ಸ್ವಾರ್ಥದ ಗುಂಗಿನಲ್ಲಿ ಮರೆತವರಾಗಿರುವರು. ಹೀಗಿದ್ದರೂ ಇಂಥ ದುಷ್ಟರಿಂದ ರಾಷ್ಟ್ರಗಳಿಗೆ ಅನರ್ಥಪರಂಪರೆಗಳು ಒದಗುತ್ತಲೇ ಬಂದಿರುವವು. ತೆಲಗು ದೇಶದ ಪ್ರತಾಪರುದ್ರದೇವನಂಥ ಪ್ರತಾಪಿಯರಾಜ್ಯವು ಮಣ್ಣುಗೂಡಿದ್ದು ಈ ದುಷ್ಟ ದೇಶದ್ರೋಹಿಗಳಿಂದೇ ಅಲ್ಲವೆ? ಆದ್ದರಿಂದ ವಿವೇಕಿಗಳಾದ ಕನ್ನಡಿಗರೇ, ಪೂರಾ ವಿವೇಕದಿಂದ ನಡೆದುಕೊಳ್ಳಿರಿ. ಒಬ್ಬಾನೊಬ್ಬ ಪರದೇಶಿಯನ ಒತ್ತಾಸೆಯಿಂದ ಸ್ವಜನದ್ರೋಹ ಬಳಿಸಿ ಸುಖಸಾಮ್ರಾಜ್ಯವನ್ನು ಗಳಿಸೇನೆಂಬ ಅನ್ಯಾಯದ ಹಾಳುಕಲ್ಪನೆಯನ್ನು ಬಿಟ್ಟುಬಿಡಿರಿ. ಅಂಥ ಮಹಾ ಪಾಪಿಗಳ ಗತಿಯು ಏನಾಗಿರುವದೆಂಬುದನ್ನು ಹೇಳಲಿಕ್ಕೆ ಇತಿಹಾಸ-ಪುರಾಣಗಳು ನಾಚುತ್ತಿದ್ದರೂ, ಅದನ್ನು ನೀವು ನಾಚದೆ ಕೇಳಿರಿ! ದೇಶಬಾಂಧವರೇ, ಈಶ್ವರೇಚ್ಛೆಯಿಂದ ಈಗ ನಮಗೆ ರಾಷ್ಟ್ರೋದ್ಧಾರದ ಕಾರ್ಯವು ಆಗುವದು; ಇಂಥ ಸುಯೋಗದಲ್ಲಿ ''ಕೆರೆಯ ನೀರು ಕೆರೆಗೆ ಹಾಕಿ ವರವು ಪಡೆಯುವಂತೆ'' ದೈವೀಪ್ರೇರಣೆ ಯಿಂದಲೇ ರಾಷ್ಟ್ರದ ಮುಖಂಡರಾಗಿರುವ ಆಚಾರ್ಯರ ಅಪ್ಪಣೆಯಂತೆ ನಡೆದು ಕೀರ್ತಿ ಪಡೆಯಿರಿ! ಇಲ್ಲದ್ದಿದ್ದರೆ ಈಶ್ವರ ಸಂಕಲ್ಪದಂತೆ ರಾಷ್ಟ್ರಕ್ಕೆ ಸ್ವಾತಂತ್ರ್ಯ ದೊರೆಯಲು, ರಾಷ್ಟ್ರದ್ರೋಹಿಗಳು ಆ ಸ್ವಾತಂತ್ರ್ಯೋಪಭೋಗದಲ್ಲಿ ಕಳ್ಳರಾಗಬೇಕಾಗುವದು; ಯಾಕಂದರೆ, ಆ ಸ್ವಾತಂತ್ರ್ಯ ಪ್ರಾಪ್ತಿಯ ಶ್ರಮದಲ್ಲಿ ಅವರು ಪಾಲುಗಾರರಾಗಿದ್ದರಿಂದ, ಆ ಸ್ವಾತಂತ್ರ್ಯವು ದೇಶ ಭಕ್ತರ ಕೇವಲ ಕಷ್ಟಾರ್ಜಿತ ಸೊತ್ತಾಗಿರುವದು! ಅಂದಬಳಿಕ ಪರರ ಸೊತ್ತನ್ನು ನಾಚಿಕೆಯಿಲ್ಲದೆ

ಉಪಭೋಗಿಸುವವರು ಕಳ್ಳರಲ್ಲದೆ ಮತ್ತೇನು? ದೇಶಬಾಂಧವರೇ, ಲೋಕದ ನೀಚತನವನ್ನು ನೋಡಿ ಕಳವಳಗೊಂಡು ''ಇವರು ಹ್ಯಾಗೆ ಹಾದಿಗೆ ಹತ್ತಿಯಾರೆ''ಂಬ ತಳಮಳದಿಂದ ಧಾರ್ಮಿಕಾವೇಶ ಪರವಶನಾಗಿ ಮಾತಾಡುವ ಈ ಬಡ ಜಂಗಮನ ಮೇಲೆ ಸಿಟ್ಟಾಗಬೇಡಿರಿ. ಜನಿವಾರ–ಲಿಂಗಾದಿ ಹಲವು ಲಾಂಛನಗಳಿಂದ ಒಪ್ಪುವ ವೈದಿಕ ಧರ್ಮಕ್ಕಾಗಿ ಬಡಿದಾಡುವ ಮಾಧವಾಚಾರ್ಯರಂಥ ಸತ್ವಸ್ಥ ಆಚಾರ್ಯವರ್ಯ ರಾಗಲಿ, ಅವರ ಆ ಕಾರ್ಯಕ್ಕೆ ಆಸಕ್ತಿಯಿಂದ ಸಹಾಯ ಮಾಡುವ ವಿರೂಪಾಕ್ಷಾರ್ಯರಂಥ ಆರ್ಯವರ್ಯರಾಗಲಿ, ಅಂಥ ಮಹಾತ್ಮರ ಸಹವಾಸದಿಂದ ಧನ್ಯನಾಗಿರುವ ನನ್ನಂಥ ಮಠಸ್ಥ ಜಂಗಮನಾಗಲಿ, ನಿಮ್ಮಿಂದ ನಿಮ್ಮ ನಿಮ್ಮ ಧರ್ಮಪಾಲನವನ್ನಲ್ಲದೆ ಬೇರೆ ಏನನ್ನು ಇಚ್ಛಿಸಬೇಕು? ಆಚಾರ್ಯರ ಈ ರಾಷ್ಟ್ರ ಮುಖಂಡತ್ವದ ತರಲಿ, ವಿರೂಪಾಕ್ಷಾರ್ಯರ ಈ ಕಂಪಲಿಗೆ ಬರುವ ಆಯಾಸ ಸಂಗನಬಸವಾರ್ಯನ ಈ ಮಾತಾಡುವ ಹಾಳು ಉಸಾಬರಿ ಇವೆಲ್ಲ ನಿಮ್ಮ ಹಿತಕ್ಕಾಗಿಯಲ್ಲದೆ, ಸ್ವಂತಕ್ಕಲ್ಲವೆಂಬದನ್ನು ಚೆನ್ನಾಗಿ ನೆನಪಿನಲ್ಲಿಡಿರಿ; ಯಾಕಂದರೆ ಆಚಾರ್ಯವರ್ಯರಂಥ ಧರ್ಮಾಧೀನರ ಯೋಗ ಕ್ಷೇಮವನ್ನು ವಹಿಸಲು ಸರ್ವೇಶ್ವರನು ಸಮರ್ಥನಿರುವನು; ಆದ್ದರಿಂದ ವಿವೇಕಿಗಳಾದ ಕನ್ನಡಿಗರೇ, ನಾವೆಲ್ಲರೂ ಭಾರತೀಯಾಂತರ್ಗತ ಕನ್ನಡಿಗರೆಂಬ ಒಂದೇ ಒಂದಾದ ವ್ಯಾಪಕ ದೃಢಭಾವನೆ ಯಲ್ಲಿ ಉಳಿದ ಸಂಕುಚಿತ ಭಾವನೆಗಳನ್ನೆಲ್ಲ ಅಡಗಿಸಿಬಿಟ್ಟು, ದೇಶೋದ್ಧಾರಕ್ಕೆ ಸಿದ್ಧರಾಗಿರಿ. ಈ ಬಡ ಜಂಗಮನು ಸಭೆಯಲ್ಲಿ ಎಂದೂ ಮಾತಾಡಿದ್ದಲ್ಲ; ಇದು ಓದಿದ್ದಲ್ಲ–ಬರೆದಿದ್ದಲ್ಲ; ತಿರುಗಿ ಕೇಳಿದರೆ ಇದು ಜಗತ್ತಿನ ದಾಸವು. ಹೀಗಿದ್ದು, ಇಷ್ಟುದ್ದ ಮಾತಾಡಿದ್ದಕ್ಕೆಲ್ಲ ಶಿವನೇ ಹೊಣೆಯೆಂದು ತಿಳಿಯಿರಿ. ಆ ಸದಾಶಿವನೇ ನಿಮ್ಮೆಲ್ಲರಿಗೆ ಸದ್ಬುದ್ಧಿಯನ್ನೂ, ವಿವೇಕವನ್ನೂ ಕೊಡಲಿ!

ಈ ಮೇರೆಗೆ ಸಂಗನಬಸವಾರ್ಯರು ಅಕಸ್ಮಾತ್ತಾಗಿ ಧರ್ಮಾವೇಶದಿಂದ ಮಾತಾಡಿದ್ದನ್ನು ನೋಡಿ ಸಭಿಕರಿಗೆ, ವಿಶೇಷವಾಗಿ ಕಂಪಲಿಯವರಿಗೆ ಬಹಳ ಆಶ್ಚರ್ಯವಾಯಿತು. ನಿಜವಾಗಿ ಯೆಂದರೆ ಆ ಸತ್ಪುರುಷರು ಜಗತ್ತೇ ಲಿಂಗ ಸ್ವರೂಪವೆಂದು ತಿಳಿದು ತಾವು ಯಾವಾಗಲು ಜಗತ್ತಿನೊಡನೆ ದಾಸಭಾವದಿಂದ ನಡೆದುಕೊಳ್ಳತಕ್ಕವರು; ಅವರು ಸಭೆಯಲ್ಲಿ ಎಂದೂ ಮಾತಾಡಿದವರಲ್ಲ, ಇಂಥವರು ಹೀಗೆ ಅಚ್ಚುಕಟ್ಟಿನಲ್ಲಿ ಅಸ್ಖಲಿತವಾಗಿ ಮರ್ಮವನ್ನು ಭೇದಿಸಿ ನಾಚಿಕೆಯನ್ನುಂಟುಮಾಡುವಂತೆ ಮಾತಾಡಿದ್ದರಿಂದ, ಜನರು ಬಡಿದು ಎಬ್ಬಿಸಿದಂತೆ ಎಚ್ಚತ್ತರು. ನಮ್ಮ ಶುದ್ಧಾಂತಃಕರಣದ ಮಾದಿಗರ ದುರಗಪ್ಪನಂತು ಆನಂದಪರವಶನಾಗಿದ್ದನು. ಆ ಧರ್ಮಿಷ್ಠನು ಅದೇ ಆನಂದದ ಆವೇಶದಲ್ಲಿ ಎದ್ದುನಿಂತು—''ನನ್ನೊಡೆಯಾ, ಬೇಕು ಹೀಗೆ ನಮಗೆ ನಿನ್ನಂಥ ಕಿವಿ ಹಿಂಡಿ ಬುದ್ಧಿ ಹೇಳುವವರೇ ಬೇಕು. ನಮ್ಮ ಮೂಳಗಳಿಗೆ ಒಬ್ಬ ಮಾಡಿದ್ದು ಒಬ್ಬನಿಗೆ ಸೈರಣೆಯಿಲ್ಲ, ಎಲ್ಲರೂ ತಮ್ಮ ಕುದುರೆ ಮುಂದೆ ಹಾಕಬೇಕೆನ್ನುತ್ತಾರಲ್ಲದೆ, ನಿಮ್ಮ ಮೂವರ ಹಾಗೆ ಬಡಬಗ್ಗರ ಕುದುರೆ ಹೇಗೆ ಮುಂದೆ ಬಿದ್ದೀತೆಂಬ ಚಿಂತೆಯಲ್ಲಿ ಕೂಳು–ನೀರಿನ ಪರಿವೆಯನ್ನು ಬಿಟ್ಟವರು ಯಾರಿರುವರೋ ದೇವರೇ ಬಲ್ಲ! ನನ್ನೊಡೆಯಾ, ಈ ಭೂಮಿತಾಯಿಯ ಸಾಕ್ಷಿಯಾಗಿ ಹೇಳುತ್ತೇನೆ ನಿಮ್ಮ ಪಾದವಿದ್ದಲ್ಲಿ ನಮ್ಮ ಮಾದಿಗರ ತಲೆ'' ಎಂದು ನುಡಿದು ಕುಳಿತುಕೊಳ್ಳಲು, ''ಶಾಬಾಸ ದುರಗಪ್ಪಾ'' ಎಂದು ಪರವಶತೆಯಿಂದ ಸಭೆಗೆ ಸಭೆಯೇ ಉಚ್ಚರಿಸಿದ ಧ್ವನಿಯು

ಮಂಟಪವನ್ನು ತುಂಬಿ ಹೊರಬಿದ್ದಿತು. ಆಗ ಕ್ಷಾತ್ರವೃತ್ತಿಯ ವೀರರ ಮೈಯ್ಯುಬ್ಬಿ ಅವರ ಮುಷ್ಟಿಗಳು ಖಡ್ಗದ ಹಿಡಿಕೆಗಳನ್ನು ಗಟ್ಟಿಯಾಗಿ ಒತ್ತಿದವು. ಸಭಿಕರಲ್ಲಿ–''ಆಚಾರ್ಯವರ್ಯರ, ಹಾಗು ಆರ್ಯವರ್ಯರ ಅಪ್ಪಣೆಯಂತೆ ನಡೆದು ಅವರನ್ನು ಯಾವಾಗ ಸಂತೋಷ ಪಡಿಸೇವೆಂ''ಬ ಆತುರತೆಯು ಉತ್ಪನ್ನವಾಯಿತು. ಆಗ ಮಾಧವಾಚಾರ್ಯರು ಸಭಿಕರನ್ನು ಕುರಿತು—''ಪುಣ್ಯಶಾಲಿಗಳಾದ ಕನ್ನಡಿಗರೇ, ಮಿತಭಾಷಿಗಳಾದ ಸತ್ಪುರುಷ ಶಿಖಾಮಣಿ–ಸಂಗನ ಬಸವಾರ್ಯರು, ಇಂದು ದೈವೀಪ್ರೇರಣೆಯಿಂದ ಇಷ್ಟು ಗಂಭೀರವಾಗಿ ಉಪದೇಶಿಸಿದ ಬಳಿಕ, ಇನ್ನು ಲೌಕಿಕವಾದ ಬೋಧಪ್ರಸಂಗಗಳು ಸಾಕು; ಇಂದಿಗೆ ಉಪದೇಶದ ಪ್ರಸಂಗಗಳು ಮುಗಿದವೆಂದು ತಿಳಿಯಿರಿ. ಇನ್ನು ದೃಢಶ್ರದ್ಧೆಯಿಂದ ಉಪದೇಶದಂತೆ ನಡೆಯುವದೊಂದೇ ಕೆಲಸವು ಉಳಿದಿರುವದು. ಬ್ರಾಹ್ಮಣನಾದ ನನ್ನ ಕೆಲಸವು ಇಂದಿಗೆ ಮುಗಿದ ಹಾಗಾದದ್ದರಿಂದ, ಇನ್ನು ನನಗೆ ಕಂಪಲಿಯನ್ನು ಬಿಟ್ಟು ಎರಡನೆಯ ಕಡೆಗೆ ಹೋಗುವ ಪ್ರಸಂಗ ಬರಬಹುದೆನ್ನುವ ಹಾಗೆ ತೋರುತ್ತದೆ. ಪ್ರಿಯ ದೇಶಬಾಂಧವರೇ, ಚಿತ್ತ ಚಾಂಚಲ್ಯವಿಲ್ಲದೆ ಆರ್ಯದ್ವಯರು, ಹಾಗು ನಾನು ಹೇಳಿದಂತೆ ನಡೆದು ಮುಸಲ್ಮಾನರಿಂದ ಕರ್ನಾಟಕದ ಸ್ವಾತಂತ್ರ್ಯವನ್ನು ಕಾಯ್ದು ಕೊಳ್ಳಿರಿ'' ಎಂದು ಹೇಳಲು, ವಿರೂಪಾಕ್ಷಾರ್ಯರು—''ಆಚಾರ್ಯವರ, ಶ್ರದ್ಧಾವಂತರಿಗೆ ಇದಕ್ಕೂ ಹೆಚ್ಚಿಗೆ ಹೇಳುವ ಕಾರಣವೇ ಇಲ್ಲ, ಶ್ರದ್ಧಾಹೀನರಾದ ಕುತರ್ಕದವರಿಗೆ ಮಾತ್ರ ಮೇಲೆ ಮೇಲೆ ಉಪದೇಶ ಮಾಡಬೇಕಾಗುತ್ತದೆ; ಆದರೆ ಹಲವರ ಉಪದೇಶದಿಂದ ಕಲುಷಿತಚಿತ್ತರಾದ ಆ ಶ್ರದ್ಧಾಹೀನರಿಗೆ ಅದರಿಂದ ಹಿತವಾಗದೆ,ಆ ಉಪದೇಶಗಳೇ ಅವರ ಚಿತ್ತಚಾಂಚಲ್ಯಕ್ಕೆ ಕಾರಣವಾಗಿ ಅದರಿಂದ ಭಿನ್ನ ಭಿನ್ನ ಮತಗಳು ಉಂಟಾಗಿ ಒಕ್ಕಟ್ಟಿನ ಕಸುವು ಕಡಿಮೆಯಾಗಲು, ಕಾರ್ಯಘಾತವಾಗುತ್ತದೆ; ಒಬ್ಬರಿಗೆ ಒಂದು ಮಾರ್ಗವು ಸರಿಯಾಗಿ ತೋರಿದರೆ ಮತ್ತೊಬ್ಬರಿಗೆ ಮತ್ತೊಂದು ಮಾರ್ಗವು ಸರಿಯಾಗಿ ತೋರುತ್ತದೆ. ಅವರವರು ತಮ್ಮ ತಮ್ಮ ಮಾರ್ಗಗಳನ್ನೇ ಸಮರ್ಥಿಸುವದು ಸ್ವಾಭಾವಿಕವು. ಪ್ರತಿ ಒಂದು ಮಾರ್ಗವು ಗುಣದೋಷಯುಕ್ತವಾಗಿಯೇ ಇರುವದರಿಂದ, ಶ್ರದ್ಧಾಹೀನರ ಚಿತ್ತಗಳು ಚಂಚಲವಾಗಿ ರಾಷ್ಟ್ರೋದ್ಧಾರದ ಮಾರ್ಗಗಳು ಬಹಳವಾಗುವವಲ್ಲದೆ, ಆ ಮಾರ್ಗ ಹಿಡಿದು ಹೋಗುವವರ ಸಂಖ್ಯೆಯು ಹಂಚಿಹೋಗುವದ ರಿಂದ ಒಂದೂ ಮಾರ್ಗವು ರಾಷ್ಟ್ರವನ್ನು ಉದ್ಧರಿಸಲಿಕ್ಕೆ ಸಮರ್ಥವಾಗುವದಿಲ್ಲ. ನೀವು ಒಮ್ಮೆ— ''ವಿಚಾರಗಳ ಬಹುತ್ವವಲ್ಲ, ಆಚಾರದ ಏಕತ್ವವು ರಾಷ್ಟ್ರದ ಬಲವೃದ್ಧಿಗೆ ಕಾರಣವೆಂ''ದು ಹೇಳಿದ್ದನ್ನು ಸಭಿಕರು ಮರೆಯಲಾಗದು. ವಿಚಾರವಂತರು, ಸ್ವಸುಖನಿರಭಿಲಾಷಿಯಾದ ತಪಸ್ವಿನ ದೈವೀಭಾವದ ಒಬ್ಬ ಮಹಾತ್ಮನ ಬಹುಜನ ಸಮ್ಮತ ವಿಚಾರಗಳಂತೆ ಶ್ರದ್ಧೆಯಿಂದ ನಡೆದು, ರಾಷ್ಟ್ರವನ್ನು ಕಾರ್ಯನಿರ್ವಾಹದಲ್ಲಿ ಏಕಮುಖವಾಗಿ ಮಾಡಿದರೆ, ಆ ವಿಚಾರಗಳಲ್ಲಿಯ ಸಣ್ಣಪುಟ್ಟ ದೋಷಗಳೂ ಗುಣವಾಗಿ ಪರಿಣಮಿಸಿ, ರಾಷ್ಟ್ರದ ಸಂಘಶಕ್ತಿಯು ಶತ್ರುಗಳಿಗೆ ದುಃಸಾಹವಾಗಲು, ಅವರು ಹಣ್ಣಾಗ್ಗುವರು. ಆದ್ದರಿಂದ ಆಚಾರ್ಯರು ತೋರಿಸಿದ ಮಾರ್ಗದಿಂದ ಕನ್ನಡಿಗರು ಕರ್ನಾಟಕದಲ್ಲಿ ಒಕ್ಕಟ್ಟು ಬೆಳಿಸಿ, ಅದರ ಬಲದಿಂದ ಶತ್ರುಗಳನ್ನು ಹಣ್ಣಗೆ ತರತಕ್ಕದ್ದು. ಹೀಗಾದರೆ ಮಾತ್ರ ರಾಷ್ಟ್ರದ ವಿವೇಕೋದಯವಾಯಿತೆಂದು ಹೇಳಬಹುದು.''

# ದೇಶದ್ರೋಹವು ರಾಜದ್ರೋಹವು

ಈ ಮೇರೆಗೆ ಸಂಭಾಷಣಗಳಾದ ಒಂದೆರಡು ದಿನಗಳಲ್ಲಿಯೇ ಶತ್ರು ಸೈನ್ಯವು ಕಂಪಲಿಯ ಕೋಟೆಯನ್ನು ಬಲವಾಗಿ ಮುತ್ತಿತ್ತು; ಆದರೆ ಮಾಧವಾಚಾರ್ಯರು ಹೆಚ್ಚಿನ ಯಾವ ಉಪಾಯವನ್ನೂ ಮಾಡದೆ, ಶಾಂತರಾಗಿಯೇ ಇದ್ದದ್ದನ್ನು ನೋಡಿ ಕೋಟೆಯೊಳಗಿನವರಿಗೆಲ್ಲ ಆಶ್ಚರ್ಯವಾಯಿತು. ಹೀಗೆ ನಾಲ್ಕು ದಿನಗಳು ಕಳೆದುಹೋದವು. ಕೋಟೆಯನ್ನು ಮುತ್ತಿದ್ದ ಶತ್ರುಗಳೂ ಸ್ವಸ್ಥ ಮುತ್ತಿಗೆ ಹಾಕಿಕೊಂಡು ಕುಳಿತುಬಿಟ್ಟಿದ್ದರು. ಈ ಅವಧಿಯಲ್ಲಿ ಮಾಧವಾಚಾರ್ಯರು ತಮ್ಮ ಪರ್ಣಕುಟೀರದಲ್ಲಿ ವಿರೂಪಾಕ್ಷಾರ್ಯ, ಹುಕ್ಕ, ಬುಕ್ಕ, ಕೃಷ್ಣನಾಯಕ, ಮಲ್ಲಸರ್ಜ, ಬಖತ್ಯಾರ ಖಿಲಜಿ, ಕಾಸಿಮಖಾನ ಮೊದಲಾದವರೊಡನೆ ದಿನಾಲು ಆಪ್ತಾಲೋಚನೆಗಳನ್ನು ಮಾಡುತ್ತಿದ್ದರು. ಆ ಆಲೋಚನೆಯಲ್ಲಿ ಒಂದೆರಡು ಸಾರೆ ಮಾದಿಗರ ದುರಗಪ್ಪನೂ ಸೇರಿದ ಹಾಗೆ ತೋರುತ್ತಿತ್ತು. ಆದರೆ ಇಷ್ಟರ ಹೊರತು ಅತ್ತ ಶತ್ರುಗಳ ಗದ್ದಲವೂ ಇಲ್ಲ, ಇತ್ತ ಮಾಧವಾಚಾರ್ಯರ ಗದ್ದಲವೂ ಇಲ್ಲ! ಈ ಸ್ಥಿತಿಯನ್ನು ನೋಡಿ ಕೋಟೆಯೊಳಗಿನವರಿಗೆ ದಿಗಿಲು ಬಿದ್ದಿತು. ಕೋಟೆಯೊಳಗಿನ ಸೈನಿಕರು ಯುದ್ಧಾತುರವಾಗಿ ಆಚಾರ್ಯರ ಅಪ್ಪಣೆಯ ಹಾದಿಯನ್ನು ನೋಡುತಲಿದ್ದರು. ಹೀಗಿರುವಾಗ ಒಂದು ದಿನ ಮೂರು ತಾಸು ಹೊತ್ತು ಏರಿದೆ; ಮಾಧವಾಚಾರ್ಯರು ತಮ್ಮ ಅನುಷ್ಠಾನವನ್ನು ತೀರಿಸಿಕೊಂಡು ಪರ್ಣಕುಟೀರದ ಹೊರಗೆ ಅದೇ ಬಂದು ಕುಳಿತುಕೊಂಡಿದ್ದಾರೆ; ಅವರ ಮುಂದುಗಡೆಯಲ್ಲಿ ಹುಕ್ಕ–ಬುಕ್ಕ–ಕಾಸಿಮಖಾನ ಮೊದಲಾದ ನಿಯಮಿತ ಪರಿವಾರವು ಕುಳಿತಿದೆ. ಆಗ ಒಬ್ಬ ತರುಣ ಕನ್ನಡ ಸರದಾರನೂ, ಒಬ್ಬ ಶಾಲು ಸುತ್ತಿದ ಶಾಸ್ತ್ರೀಯೂ ದೊಡ್ಡದೊಡ್ಡ ಕುದುರೆಗಳನ್ನು ಹತ್ತಿಕೊಂಡು, ಮಾಧವಾಚಾರ್ಯರ ಒಪ್ಪಿಗೆಯಿಂದ ಕಂಪಲಿಯ ಕೋಟೆಯನ್ನು ಪ್ರವೇಶಿಸಿ ಮಾಧವಾಚಾರ್ಯರ ಪರ್ಣಕುಟೀರದ ಕಡೆಗೆ ಸಾಗಿಬರತೊಡಗಿದರು. ಅವರ ಅಂಗರಕ್ಷಕರಾದ ನಾಲ್ವರು ಮುಸಲ್ಮಾನ ರಾವುತರು ಮಾತ್ರ ಅವರನ್ನು ಹಿಂಬಾಲಿಸಿದ್ದರು. ಆ ಕನ್ನಡ ಸರದಾರನು ಬಹು ಜನರ ಪರಿಚಯದವನಾಗಿದ್ದನು. ಶಾಸ್ತ್ರಿಗಳ ಗುರುತಿದ್ದವರಾದರೂ ಆ ಕೋಟಿಯಲ್ಲಿ ಬಹು ಜನರಿದ್ದರು. ಇವರು ಈ ಚಂದದಿಂದ ಬರುವದನ್ನು ನೋಡಿ ಕೋಟೆಯೊಳಗಿನವರಿಗೆ ಆಶ್ಚರ್ಯವಾಯಿತು. ಇವರು ಶತ್ರುಗಳ ಕಡೆಯಿಂದ ಬಂದಿರುವರೋ, ಅಥವಾ ಬೇರೆ ಯಾವ ಕಡೆಯಿಂದಾದರೂ ಮಾಧವಾಚಾರ್ಯರ ದರ್ಶನಕ್ಕಾಗಿ ಬಂದಿರುವರೋ ಎಂಬದು ಯಾರಿಗೂ ಗೊತ್ತಾಗದಾಯಿತು. ಬೇರೆ ಯಾವ ,ಕಡೆಯಿಂದಾದರೂ ಬಂದಿರಬಹುದೆನ್ನಬೇಕೆಂದರೆ, ಮುಸಲ್ಮಾನ ಶತ್ರುಗಳು ಹಿಂದುಗಳಾದ ಇವರನ್ನು ಹೀಗೆ ಕೋಟೆಯೊಳಗೆ ಬರಲು ಯಾಕೆ ಬಿಟ್ಟರೆಂಬ ತರ್ಕವು ಜನರಿಗೆ ಆಗಲೊಲ್ಲದು; ಇದಲ್ಲದೆ ಅವರ ಅಂಗರಕ್ಷಕರು ಮುಸಲ್ಮಾನರಿರುವದೂ ಅವರಿಗೆ ಕೌತುಕದ್ದಾಗಿ ತೋರಿತು. ಇನ್ನು ಇವರು ಶತ್ರುಗಳ ಕಡೆಯಿಂದಲೇ ಬಂದವರೆನ್ನಬೇಕೆಂದರೆ, ಕರ್ನಾಟಕದ ಅಭಿಮಾನಿಗಳಾದ ಇವರು ಶತ್ರುಪಕ್ಷಕ್ಕೆ ಕೂಡುವ ಬಗೆ ಹೇಗೆ ವಿಚಾರವೂ ಅವರಿಗೆ ಬಗೆಹರಿಯದಾಯಿತು. ಹೀಗೆ ಜನರು ಆಶ್ಚರ್ಯಮಗ್ನರಾಗಿ ವಿಚಾರ ಮಾಡುತ್ತಿರಲು, ಅಂಗರಕ್ಷಕರೊಡನೆ ಅವರಿಬ್ಬರು ನೆಟ್ಟಗೆ ಮಾಧವಾಚಾರ್ಯರ ಬಳಿಗೆ ಹೋದರು.

ಮಾಧವಾಚಾರ್ಯರು ಯೋಗ್ಯಮರ್ಯಾದೆಯಿಂದ ಈ ಬಂದವರನ್ನು ಬರಮಾಡಿ ಕೊಂಡರು. ಆ ಬಂದ ಸರದಾರನು ಮಾಧವಾಚಾರ್ಯರನ್ನು ವಿಯನದಿಂದ ನಮಸ್ಕರಿಸಿದನು. ಆಚಾರ್ಯರ, ಹಾಗು ಬಂದ ಶಾಸ್ತ್ರಿಗಳ ಪರಸ್ಪರ ಸಮಾನಸ್ಕಂಧತ್ವದ ನಮಸ್ಕಾರ ಚಮತ್ಕಾರಗಳಾದವು. ಬಳಿಕ ಮೊದಲೇ ಸಿದ್ಧಪಡಿಸಿದ್ದ ಆಸನಗಳ ಮೇಲೆ ಅವರು ತಮ್ಮ ತಮ್ಮ ಯೋಗ್ಯತೆಯಂತೆ ಕುಳಿತುಕೊಂಡರು. ಪರಸ್ಪರ ಸಂದರ್ಶನ–ಸತ್ಕಾರಾದಿಗಳೆಲ್ಲ ನೋಡುವವರಿಗೆ ಮಿತ್ರಭಾವದವಾಗಿ ತೋರಿದರೂ, ಪರಸ್ಪರರ ದರ್ಶನದ ಉದ್ದೇಶವು, ಮಿತ್ರಭಾವದವಾಗಿ ಇದ್ದಂತೆ ತೋರಲಿಲ್ಲ. ಗಂಭೀರಮುದ್ರೆಯ ಮಾಧವಾಚಾರ್ಯರ ಅಂತರಂಗವು ನೋಡುವವರಿಗೆ ತಿಳಿಯುವಹಾಗಿಲ್ಲದಿದ್ದರೂ, ಬಂದಿದ್ದ ತರುಣ ಸರದಾರನು ಮಾಧವಾಚಾರ್ಯರ ವರ್ಚಸ್ಸಿನಿಂದ ಹತನಾಗಿ ತನ್ನ ದೌರ್ಬಲ್ಯವನ್ನೂ, ಯಾವ ಕಾರಣದಿಂದಲೋ ಉಂಟಾದ ತನ್ನ ನಾಚಿಕೆಯನ್ನೂ ಮುಚ್ಚಿಕೊಳ್ಳುತ್ತಿರುವಂತೆ ಅವನ ಮುಖಚರ್ಯೆಯಿಂದ ಹಾಗು ಅವನು ಹುದುಗಿಕೊಂಡು ಕುಳಿತಿರುವದರ ಮೇಲಿಂದ ನೋಡುವವರಿಗೆ ಸಹಜವಾಗಿ ಗೊತ್ತಾಗುತ್ತಿತ್ತು. ಸ್ವಲ್ಪ ಹೊತ್ತು ಎಲ್ಲರೂ ಸ್ತಬ್ಧವಾಗಿ ಕುಳಿತಿದ್ದರು. ಕಾಲಹರಣವಾದದ್ದರಿಂದ ಆ ತರುಣ ಸರದಾರನು ತನ್ನ ದೌರ್ಬಲ್ಯವನ್ನು ಮುಚ್ಚಿಕೊಂಡು ಗಾಂಭೀರ್ಯಭಾವವನ್ನು ತಾಳತೊಡಗಿದ್ದನು. ಆತನು ಒಂದು ಮೊಹರು ಮಾಡಿದ ಲಕೋಟಿಯನ್ನು ಮಾಧವಾಚಾರ್ಯರ ಮುಂದಿಟ್ಟನು. ಆಗ ಆತನು ಎಷ್ಟು ದಿಟ್ಟತನವನ್ನು ಮುಂದೆಮಾಡಿದರೂ ಲಕೋಟಿಯನ್ನು ಆಚಾರ್ಯರ ಮುಂದೆ ಇಡುವಾಗ ಅವನ ಕೈ ನಡುಗದೆ ಇರಲಿಲ್ಲ; ಇದರಿಂದ ಆ ತರುಣಸರದಾರನು ಬಹಳವಾಗಿ ನಾಚಿಕೊಂಡು ತಲೆತಗ್ಗಿಸಿ ತನ್ನ ಸ್ಥಳದಲ್ಲಿ ಕುಳಿತುಕೊಂಡನು. ಆಗ ಬಂದ ಶಾಸ್ತ್ರಿಗಳು ಮಾಧವಾಚಾರ್ಯರಿಗೆ– ''ಈ ಲಕ್ಕೋಟಿಯು ಮಹಮ್ಮದತಗಲಖ ಬಾದಶಹರ ದಕ್ಷಿಣ ಸುಭೇದಾರರಾದ ಮಲಿಕ ನಾಯಬರಿಂದ ತಮಗೆ ಕಳಿಸಲ್ಪಟ್ಟಿದ್ದಾಗಿರುವದು. ಈಗ ಬಾದಶಹರ ಸೈನ್ಯವು ಕೋಟೆಯನ್ನು ಮುತ್ತಿ ನಾಲ್ಕುದಿವಸಗಳಾಗಿದ್ದರೂ, ಈ ಲಕೋಟಿಗೆ ನಿಮ್ಮಿಂದ ಉತ್ತರ ಬರುವವರೆಗೆ ಸುಮ್ಮನೆ ಮುತ್ತಿಗೆ ಹಾಕಿಕೊಂಡು ಕುಳಿತುಕೊಳ್ಳುವದಕ್ಕಿಂತ ಹೆಚ್ಚಿನ ಕೆಲಸವನ್ನೇನು ನಾವು ಮಾಡುವ ಹಾಗಿಲ್ಲ. ಹಾಗೆ ನಾಯಬರ ಕಟ್ಟಪ್ಪಣೆಯಾಗಿದೆ. ಈಗಲೆ ಇದರ ಉತ್ತರವನ್ನು ಕೊಡಬಹುದು; ಅಥವಾ ನಾಳೆ ಇಷ್ಟು ಹೊತ್ತಿನೊಳಗಾಗಿ ಉತ್ತರ ಕಳಿಸಬಹುದು. ಅಷ್ಟರಲ್ಲಿ ನಿಮ್ಮ ಉತ್ತರವು ದೊರೆಯದಿದ್ದರೆ ನಾಯಬರ ಅಪ್ಪಣೆಯಂತೆ ನಾವು ಯುದ್ಧವನ್ನಾರಂಭಿಸಿ ಕೋಟೆಯನ್ನು ಕೈವಶಮಾಡಿಕೊಂಡು, ನಾಯಬರ ಮನೋದಯವನ್ನು ಪೂರ್ಣಮಾಡಬೇಕಾಗುವದು. ಶಮಪ್ರಧಾನರಾದ ನೀವು ಒಂದು ರಕ್ತದ ಹನಿಯೂ ಬೀಳದಂತೆ ಕಂಪಲಿಯಕೋಟೆಯನ್ನು ವಶಮಾಡಿಕೊಂಡದ್ದನ್ನು ಕೇಳಿ, ನಾಯಬರು ಈಗಾದರೂ ನೀವು ನಡೆಸಿಕೊಟ್ಟರೆ ಒಂದು ರಕ್ತದ ಹನಿ ಕೆಡವದೆ ತಮ್ಮ ಕಾರ್ಯ ಮಾಡಿಕೊಂಡು ಬರಬೇಕೆಂದು ಅಪ್ಪಣೆ ಮಾಡಿದ್ದಾರೆ! ಯಾಕೆ ತಿರುವೆಂಕಟ ಸರದಾರರೇ, ಹೀಗೆಯೇ ಅಲ್ಲವೆ ನಾಯಬರು ಆಜ್ಞಾಪಿಸಿದ್ದು'' ಎಂದು ಕೇಳಲು, ತಿರುವೆಂಕಟನು—''ಅಹುದಹುದು. ಆಚಾರ್ಯರು ನಾಯಬರ ಇಚ್ಛೆಯಂತೆ ನಡೆಸಿಕೊಡದಿದ್ದರೆ ಯುದ್ಧಮಾಡತಕ್ಕದ್ದು; ನಡೆಸಿಕೊಟ್ಟರೆ ಯಾರ ಕೂದಲವನ್ನೂ ಕೂಡ ಕೊಂಕಿಸದೆ, ಸೈನ್ಯವು ಬಂದ ಹಾಗೆ ತಿರುಗಿಹೋಗತಕ್ಕದ್ದು'' ಎಂದು

ನುಡಿದು ಹುಕ್ಕನನ್ನು ಕೆಂಪೇರಿದ ಕಣ್ಣುಗಳಿಂದ ನೋಡತೊಡಗಿದನು. ಅವನನ್ನು ನೋಡಿ ಹುಕ್ಕನ ಬಾಹುಗಳು ಕ್ಷಾತ್ರತೇಜದಿಂದ ಸ್ಫುರಿಸತೊಡಗಿದವು!

ಆಚಾರ್ಯರು ಪತ್ರವನ್ನು ಒಂದುಸಾರೆ ಸಂಪೂರ್ಣವಾಗಿ ಓದಿದರು; ಮತ್ತೂ ಒಮ್ಮೆ ಲಕ್ಷಪೂರ್ವಕ ಓದಿದರು. ಪತ್ರವನ್ನು ಯವನೀಭಾಷೆಯಲ್ಲಿ ಸ್ವತಃ ಮಲಿಕನಾಯಬನೇ ಬರೆದಿದ್ದು, ಅದರ ಸಂಸ್ಕೃತ ಭಾಷಾಂತರವನ್ನು ಶಾಸ್ತ್ರಿಗಳು ಅದಕ್ಕೆ ಜೋಡಿಸಿದ್ದರು; ಆದರೆ ಯವನೀ ಭಾಷೆಯಲ್ಲಿಯೇ ಪರಿಣತರಾಗಿದ್ದ ಆಚಾರ್ಯರಿಗೆ ಶಾಸ್ತ್ರಿಗಳ ಸಂಸ್ಕೃತ ಭಾಷಾಂತರವನ್ನು ಓದುವ ಪ್ರಯೋಜನವಿದ್ದಿಲ್ಲ; ಆದರೂ ಶಾಸ್ತ್ರಿಗಳ ಶ್ರಮವು ಫಲವಾಗುವದಕ್ಕಾಗಿ ಅದನ್ನೂ ಓದಿದರು. ಪತ್ರ ಓದುವದಾದ ಮೇಲೆ ಮಾಧಾಚಾರ್ಯರು ತಿರುವೇಂಕಟನನ್ನುದ್ದೇಶಿಸಿ—''ನಾಳೆ ಇಷ್ಟು ಹೊತ್ತಿನೊಳಗಾಗಿ ನಿಮಗೆ ಇದರ ಉತ್ತರ ಬರುವದು'' ಎಂದು ನುಡಿಯಲು, ಕೂಡಲೆ ತಿರುವೇಂಕಟನು ಚಟ್ಟನೆ ಎದ್ದು ಆಚಾರ್ಯರನ್ನು ನಮಸ್ಕರಿಸಿ ಕುದುರೆಯನ್ನು ಹತ್ತಿದನು. ಅಷ್ಟರಲ್ಲಿ ಶಾಸ್ತ್ರಿಗಳೂ ಆಚಾರ್ಯರ ಅನುಮತಿಯಿಂದ ಕುದುರೆಯನ್ನು ಹತ್ತಿದರು. ಕೂಡಲೆ ಬಂದ ಅವರಿಬ್ಬರು ಕನ್ನಡಿಗರು ಅಂಗರಕ್ಷಕರೊಡನೆ ಬಂದ ಹಾದಿಯಿಂದ ಕುದುರೆ ಓಡಿಸುತ್ತ ಹೋಗಿಬಿಟ್ಟರು.

ರಾಜಕಾರಣದ ಗೂಢ ತಂತ್ರಗಳು ರಾಜಕಾರ್ಯ ಧುರಂಧರರಿಗಲ್ಲದೆ ಅನ್ಯರಿಗೆ ಹ್ಯಾಗೆ ತಿಳಿಯಬೇಕು? ಕ್ಷಣಮಾತ್ರ ಮಿಂಚು ಹೊಳೆದು ಅಡಗಿದಂತೆ ಒದಗಿದ ಈ ಸಂಗತಿಯನ್ನು ನೋಡಿ ಹುಕ್ಕನೇ ಮೊದಲಾದ ಆಚಾರ್ಯರ ಪಟ್ಟಶಿಷ್ಯರೂ ಬೆರಗಾಗಿ ಕುಳಿತಿರಲು, ಕೋಟೆಯೊಳಗಿನ ಉಳಿದ ಜನರ ಪಾಡೇನು? ಕೋಟೆಯೊಳಗಿನ ಜನರೆಲ್ಲ ಅಲ್ಲಲ್ಲಿ ನೆರೆದು ಈ ಪ್ರಸಂಗವನ್ನು ಕುರಿತು ತಮ್ಮ ತರ್ಕಕ್ಕೆ ಹೊಳೆದಂತೆ ತರ್ಕಿಸಹತ್ತಿದರು. ಎಲ್ಲಿ ನೋಡಿದರೂ ಇದೇ ಸುದ್ದಿ; ಎಲ್ಲಿ ನೋಡಿದರೂ ಇದೇ ಮಾತು! ಅಕಸ್ಮಾತ್ತಾಗಿ ಶತ್ರು ಸೈನ್ಯವು ಮುತ್ತಿದ್ದರಿಂದ ಆಶ್ಚರ್ಯಮಗ್ನರಾಗಿದ್ದ ಜನರಿಗೆ, ನಾಲ್ಕು ದಿನ ಬರಿಯ ಮುತ್ತಿಗೆ ಹಾಕಿಕೊಂಡು ಕುಳಿತ ಸೈನ್ಯದೊಳಗಿನಿಂದ ಇಬ್ಬರು, ಅದರಲ್ಲಿಯೂ ಕರ್ನಾಟಕ ಭೂಮಾತೆಯ ಮಕ್ಕಳೆನಿಸುವವರು ಶತ್ರುಪಕ್ಷದಿಂದ ಆಚಾರ್ಯರ ಬಳಿಗೆ ಬಂದು ಅರ್ಧತಾಸಿನೊಳಗೆ ಹೊರಟುಹೋದದ್ದರಿಂದಂತು ಜನರ ಆಶ್ಚರ್ಯಕ್ಕೆ ಮತ್ತಿಷ್ಟು ಕಳೆಯೇರಿತು. ಹೀಗೆ ಜನರು ಅತ್ತ ಏನೇನೋ ಆಲೋಚಿಸುತ್ತಿರಲು, ಇತ್ತ ಮಾಧವಾಚಾರ್ಯರು ಹುಕ್ಕನಿಗೆ—''ಇಂದು ಮಧ್ಯಾಹ್ನದ ಒಂಬತ್ತು ತಾಸಿಗೆ ದರ್ಬಾರವು ನೆರೆಯಲಿ'' ಎಂದು ಆಜ್ಞಾಪಿಸಿ, ಎಲ್ಲರಿಗೂ ಹೋಗಲಪ್ಪಣೆ ಕೊಟ್ಟು ತಾವು ಪರ್ಣಕುಟೀರವನ್ನು ಹೊಕ್ಕರು.

ಈ ಎಲ್ಲ ಸಂಗತಿಯನ್ನು ಪರ್ಣಕುಟೀರದ ಒಳಗೆ ಇದ್ದ ಆಚಾರ್ಯಪತ್ನಿಯಾದ ವೈತಿಹೋತ್ರಿದೇವಿಯು ನೋಡುತ್ತಲಿದ್ದಳು. ಆಚಾರ್ಯರು ಒಳಗೆ ಬಂದಕೂಡಲೆ, ಆಕೆಯು ಕೌತುಕ ಮುದ್ರೆಯಿಂದ ತನ್ನ ಪತಿಯ ಮುಖವನ್ನು ನೋಡುತ್ತಲಿದ್ದಳು. ಆಗ ಆಚಾರ್ಯರು ಪತ್ರದ ಸಂಗತಿಯನ್ನೆಲ್ಲ ತಮ್ಮ ಅರ್ಧಾಂಗಿಗೆ ಹೇಳಿ, ಆ ಪತ್ರಕ್ಕೆ ಉತ್ತರ ಕಳಿಸುವದನ್ನು ಕುರಿತು, ಆ ಅಮಾತ್ಯ ಪುತ್ರಿಯೊಡನೆ ಗೂಢ ರೀತಿಯಿಂದ ಚರ್ಚಿಸಿ, ಹೀಗೆಯೆ ಉತ್ತರ ಕಳಿಸಿತಕ್ಕದೆಂದು

ಪತ್ನಿಯ ಸಮ್ಮತಿಯಿಂದ ನಿಷ್ಕರ್ಷಮಾಡಿಕೊಂಡರು. ವೈತಿಹೋತ್ರಿಯು ಮಾಧವಾಚಾರ್ಯರಿಗೆ ತಕ್ಕ ಪತ್ನಿಯೆಂಬದನ್ನು ವಾಚಕರು ಈ ಮೊದಲೇ ಅರಿತಿರುವರು. ಆ ಸಾಧ್ವಿಯು ಪತಿಯ ದೇಶೋದ್ಧಾರದ ಕಾರ್ಯಕ್ಕೆ ಕಾಲ್ತೊಡರು ಮಾಡುವಾಕೆಯಲ್ಲ; ಪತಿಯ ಒಲವು ನೋಡಿ ಆತನ ಹೆಜ್ಜೆಯ ಮೇಲೆ ಹೆಜ್ಜೆಯಿನ್ನಿಟ್ಟು ನಡೆಯತಕ್ಕವಳು. ತೊಡಕಿನ ರಾಜಕಾರಣದ ವಿಚಾರಗಳಲ್ಲಿ ಆಚಾರ್ಯರಿಗೆ ವೈತಿಹೋತ್ರಿದೇವಿಯು ಒಳ್ಳೇ ಸಹಾಯಕಳಾಗಿದ್ದಳು. ಅಂಥ ಆ ಅಕೃತ್ರಿಮ ಪ್ರೇಮದ ಪತಿ-ಪತ್ನಿಯರು ಏಕಾಂತದಲ್ಲಿ ಮಾಡಿದ ಗೂಢವಾದ ವಿಚಾರವು ಯಾರಿಗೆ ಗೊತ್ತಾಗಬೇಕು? ಆಚಾರ್ಯರು ಭೋಜನೋತ್ತರ ವಿಶ್ರಾಂತಿಯನ್ನು ಹೊಂದಿ ಒಂಬತ್ತು ತಾಸಿನ ಸುಮಾರಕ್ಕೆ ಪರ್ಣಕುಟೀರದ ಹೊರಗೆ ಬಂದರು. ಹುಕ್ಕನೇ ಮೊದಲಾದ ಶಿಷ್ಯರು ಆಚಾರ್ಯರ ಮಾರ್ಗಪ್ರತೀಕ್ಷೆ ಮಾಡುತ್ತ ಹೊರಗೆ ಕುಳಿತಿದ್ದರು. ಆಚಾರ್ಯರು ಅವರನ್ನು ಕುರಿತು 'ಇನ್ನು ದರ್ಬಾರಕ್ಕೆ ಹೋಗೋಣವೇ?' ಎಂದುಕೇಳಲು, ಹುಕ್ಕನೇ ಮೊದಲಾದವರು ಕೈಜೋಡಿಸಿ ಒಪ್ಪಿಗೆಯನ್ನಿತ್ತರು. ಕಂಪಲಿಯ ಅರಮನೆಯ ದರ್ಬಾರದ ಮಂದಿರದಲ್ಲಿಯೇ ರಾಜಕಾರಣ ಪುರುಷರೂ, ದೊಡ್ಡ ದೊಡ್ಡ ಅಧಿಕಾರಿಗಳೂ, ಮುಖ್ಯ ಮುಖ್ಯ ಸರದಾರರೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಿದ್ದರು. ಅಷ್ಟರಲ್ಲಿ ಆರ್ಯದ್ವಯರೂ ದರ್ಬಾರದಲ್ಲಿ ಬಂದು ತಮ್ಮ ಸ್ಥಳದಲ್ಲಿ ಕುಳಿತು ಕೊಂಡಿದ್ದರು. ಆಚಾರ್ಯರು ತಮ್ಮ ಶಿಷ್ಯಪರಿವಾರದೊಡನೆ ದರ್ಬಾರವನ್ನು ಪ್ರವೇಶಿಸಲು, ಎಲ್ಲರೂ ಎದ್ದು ನಿಂತು ಸನ್ಮಾನಿಸಿದರು. ಅಂದಿನ ದರ್ಬಾರ ಮಂದಿರದ ಹೊರಗೆ ನಾಗರೀಕರು ನೆಲೆಯಿಲ್ಲದೆ ನೆರೆದಿದ್ದರು. ಅಂದಿನ ದರ್ಬಾರವೇ ಅಂತಹ ಮಹತ್ವದ್ದು. ಶತ್ರುಗಳಿಂದ ಆಚಾರ್ಯರಿಗೆ ಏನು ಪತ್ರ ಬಂದಿರುವದೆಂಬದನ್ನೂ, ಅದಕ್ಕಾಗಿ ಆಚಾರ್ಯರು ಏನು ಉತ್ತರ ಕೊಡುವರೆಂಬದನ್ನೂ ತಿಳಿಯಲು ಜನರು ಅತ್ಯಂತ ಉತ್ಸುಕರಾಗಿದ್ದರು. ಆಚಾರ್ಯರು ತಮ್ಮ ಸ್ಥಳದಲ್ಲಿ ಕುಳಿತ ಬಳಿಕ ವಿರೂಪಾಕ್ಷಾರ್ಯರನ್ನು ಕುರಿತು-

ಮಾಧವಾಚಾರ್ಯ-ಆರ್ಯವರ, ಕಂಪಲಿಯನ್ನು ಮುತ್ತಿದ ಶತ್ರುಗಳಿಂದ ಈ ಮಹತ್ವದ ಪತ್ರವು ಬಂದಿದ್ದು, ನಾಳೆ ಮೂರು ತಾಸಿನೊಳಗಾಗಿ ಇದಕ್ಕೆ ಉತ್ತರ ಕಳಿಸಬೇಕಾಗಿದೆ. ಅಷ್ಟರಲ್ಲಿ ನಮ್ಮಿಂದ ಏನೂ ಉತ್ತರ ಹೋಗದಿದ್ದರೆ, ಅಥವಾ ಅವರ ಇಚ್ಛೆಯಂತೆ ಉತ್ತರ ಹೋಗದಿದ್ದರೆ ತಾವು ಕೋಟೆಯನ್ನು ಕೈವಶಮಾಡಿಕೊಳ್ಳುವೆವೆಂದು ತಿರುವೇಂಕಟನು ಹೇಳಿದನು.

ವಿರೂಪಾಕ್ಷಾರ್ಯ-ತಿರುವೇಂಕಟನೆಂದರೆ ಯಾರು? ಆನೆಗುಂದಿಯ ಅರಸನ ಮೈಗಾವಲಿನ ಮುಖ್ಯ ಸರದಾರನೋ ಏನು? ಛೆ! ಆ ವೀರಾಗ್ರಣಿಯಾಗಿರಲಿಕ್ಕಿಲ್ಲ. ಯಾಕಂದರೆ, ಆನೆಗುಂದಿಯ ಸಂಸ್ಥಾನದ ಆಧಾರಸ್ತಂಭದಂತೆ ಇದ್ದ ಆ ಕುಲೀನನು ಶತ್ರುಗಳಿಗೆ ಕೂಡುವದು ಅಶಕ್ಯವಾಗಿರುವದು.

ಮಾಧವಾಚಾರ್ಯ-ಆರ್ಯವರ, ಅದೇ ತಿರುವೇಂಕಟನೇ ಶತ್ರುಪಕ್ಷವನ್ನು ಕೂಡಿರುವನು. ಆ ರಾಜದ್ರೋಹಿಯ ದುರಾಲೋಚನೆಗಳೆಲ್ಲ ನನಗೆ ಗೊತ್ತಾಗಿರುವವು. ಆರ್ಯರು ಹೇಳಿದಂತೆ ತಿರುವೇಂಕಟನು ಶೂರನು, ಕುಲೀನನು, ಆನೆಗುಂದಿಯ ಸಂಸ್ಥಾನದ ಆಧಾರಸ್ತಂಭನು ಎಂಬುದೇನೋ ನಿಜ; ಆದರೆ ಪದ್ಮಿನಿಯ ಲೋಭದಿಂದ ಅವರು

ಮುಸಲ್ಮಾನರನ್ನು ಕೂಡಿ ಕರ್ನಾಟಕದ ಸ್ವಾತಂತ್ರ್ಯಹರಣದ ಅವರ ಕಾರ್ಯಕ್ಕೆ ಸಹಾಯಮಾಡಿ, ಅವರಿಂದ ಆನೆಗುಂದಿಯ ಒಡೆತನವನ್ನೂ, ಪದ್ಮಿನಿಯನ್ನೂ ಪಡೆಯಬೇಕೆಂದು ಎಣಿಕೆ ಹಾಕಿದ್ದಾನೆ. ವೃದ್ಧದೇವರಾಜನು ತಿರುವೇಂಕಟನ ಭಯದಿಂದ ಅವನಿಗೆ ಪದ್ಮಿನಿಯನ್ನು ಕೊಟ್ಟರೂ ಕೊಡಬೇಕೆಂದು ಭಾವಿಸಿದ್ದನು; ಆದರೆ ಹುಕ್ಕ ದೊರೆಯ ವರ್ಚಸ್ಸಿನಿಂದ ಅವನ ಮನೋ ದಯವು ಮಣ್ಣುಗೂಡಿದ ಹಾಗಾಗಿರುವದರಿಂದ, ಹುಕ್ಕದೊರೆಯ ಮೇಲೆ ಆ ತಿರುವೇಂಕಟನ ಸಿಟ್ಟು ಬಹಳ; ತನ್ನ ಉತ್ಕರ್ಷಕ್ಕೆ ಈತನೇ ಅಡ್ಡಾಗಿರುವನೆಂದು ತಿಳಿದು ಆ ದುಷ್ಟನು ಹುಕ್ಕದೊರೆಯ ನಾಶಕ್ಕಾಗಿ ಯಾವಾಗಲೂ ಯತ್ನಿಸುತ್ತಿರುವನು. ಸದ್ಯಕ್ಕೆ ಈತನೇ ಅಬದುಲ್ ರಹಿಮಾನನೆಂಬ ಸರದಾರನ ಅಧಿಪತ್ಯದ ಕೆಳಗೆ ದೊಡ್ಡ ಸೈನ್ಯವನ್ನು ಹೊರಡಿಸಿಕೊಂಡು ಬಂದು ಕಂಪಲಿಯ ಕೋಟೆಯನ್ನು ಮುತ್ತಿದ್ದಾನೆ. ನಮ್ಮ ರಾಷ್ಟ್ರೋದ್ಧಾರದ ಕಾರ್ಯವನ್ನು ಮಣ್ಣುಗೂಡಿ ಸುವದಕ್ಕಾಗಿ ಈ ಸ್ವಾರ್ಥಪರಾಯಣನು ಏನು ಮಾಡಲಿಕ್ಕೂ ಹೇಸುವಹಾಗಿಲ್ಲ. ಹೀಗೆ ಪ್ರಸಿದ್ಧ ರೀತಿಯಿಂದಾಗಲಿ, ಕಳ್ಳತನದಿಂದಾಗಲಿ ದೇಶದ್ರೋಹ ಮಾಡುವ ನೀಚರು ಕರ್ನಾಟಕದಲ್ಲಿ ಇನ್ನೂ ಹಲವರಿರುವರು. ಸ್ವಾರ್ಥಮೂಲವಾದ ಈ ದ್ರೋಹ ಬುದ್ಧಿಯು ದೇಶದಲ್ಲಿ ಹೆಚ್ಚುತ್ತ ಬಂದಂತೆ, ದೇಶವು ಅವನತಿಯನ್ನು ಹೊಂದತೊಡಗುವದು. ರಾಷ್ಟ್ರೋದ್ಧಾರಕ ರಾಜನಿಷ್ಠರಿಗೆ ಇಂಥ ದ್ರೋಹಿಗಳಿಂದ ತೊಂದರೆಯಾಗುತ್ತಿದ್ದರೂ, ಇವರೇ ರಾಷ್ಟ್ರಭಕ್ತರ, ಅಥವಾ ರಾಜಭಕ್ತರ ಶುದ್ಧವೃತ್ತಿಯನ್ನೂ, ಚಟುವಟಿಕೆಯನ್ನೂ ಕಾಯ್ದುಕೊಳ್ಳಲಿಕ್ಕೆ ಸಹಾಯಕಾರಿ ಗಳಾಗುವ ರೆಂಬುದನ್ನು ಮರೆಯಲಾಗದು. ಶರೀರದೊಳಗಿನ ಮಾಲಿನ್ಯವನ್ನು ಹೊರಗೆಡವಲಿಕ್ಕೆ ಗುದದ್ವಾರಾದಿ ದ್ವಾರಗಳಿಲ್ಲದಿದ್ದರೆ ಶರೀರದಲ್ಲಿ ಮಲ ಸಂಚಯವಾಗಿ ಶರೀರವು ರೋಗಭಾದೆ ಯಿಂದ ನಾಶವಾಗಬಹುದಾಗಿರುವಂತೆ, ಇಂಥ ದೇಶದ್ರೋಹಿಗಳಾದ ದುಷ್ಟರು ಇಲ್ಲದಿದ್ದರೆ ನಿಜವಾದ ರಾಷ್ಟ್ರಭಕ್ತರಲ್ಲಿ, ಅಥವಾ ರಾಜಭಕ್ತರಲ್ಲಿ ಅವರೂ ಮನುಷ್ಯರೇ ಆದದ್ದರಿಂದ ನೀಚಸ್ವಾರ್ಥ ಮೂಲವಾದ ದುರ್ಗುಣಗಳೂ– ದುರಾಚಾರಗಳೂ ಸೇರಿ ಅವರ ಪವಿತ್ರ ರಾಷ್ಟ್ರಭಕ್ತಿಯು ಅಳಿದುಹೋಗುವ ಸಂಭವವಿರುವದು; ಆದ್ದರಿಂದ ರಾಷ್ಟ್ರದ ಶುದ್ಧೀಕರಣದ ದ್ವಾರಗಳಂತೆ ಇವರು ಇರಬೇಕು! ಇವರ ಹೀನಸ್ಥಿತಿಗಾಗಿ ಹೇಸಿ ದುರ್ಗುಣಗಳಿಂದ ದೂರವಾಗಿರಲಿಕ್ಕೆ ರಾಷ್ಟ್ರಭಕ್ತರಿಗೆ ಸಹಾಯವಾಗುತ್ತದೆ. ಇಂಥ ದುಷ್ಟರನ್ನು ಇಲ್ಲದಂತೆ ಮಾಡಿ, ಅಥವಾ ಇವರ ಅನುಕೂಲವನ್ನು ಪಡೆದು, ರಾಷ್ಟ್ರೋದ್ಧಾರ ಮಾಡೋಣವೆನ್ನುವವರ ಕೈಯಿಂದ ರಾಷ್ಟ್ರೋದ್ಧಾರದ ಕಾರ್ಯವು ಆಗದು; ಯಾಕಂದರೆ ಈ ದುಷ್ಟರು ಉಪದೇಶಾದಿಗಳಿಗೆ ಮಣಿಯದವರಾದ್ದರಿಂದ, ಇವರು ತಾವಾಗಿ ಬಗ್ಗಿ ಬರುವಂತೆ ರಾಷ್ಟ್ರಭಕ್ತರು ಬಲಿಷ್ಠರಾಗಬೇಕು, ಅಂದರೆ ಬೆಲ್ಲವಿದ್ದಲ್ಲಿ ನೊಣಗಳು ಮುತ್ತುವಂತೆ, ರಾಷ್ಟ್ರಭಕ್ತರ ಸಂಪಾದನಕ್ಕಾಗಿ ತಾವಾಗಿ ಅವರನ್ನು ಇವರು ಮುತ್ತುವರು; ಎಲ್ಲಿದ್ದರೂ ಇವರು ಮಾಡಬಾರದ್ದು ಮಾಡಿ ದುಡಿಯದೆ ಉಣ್ಣಬೇಕೆನ್ನುವವರು; ಆದ್ದರಿಂದ ರಾಷ್ಟ್ರಭಕ್ತರು ಇವರ ನೆವದಿಂದ ಮೈತುಂಬ ಎಚ್ಚರುಳ್ಳವರಾಗಿ ರಾಷ್ಟ್ರಕಾರ್ಯದಲ್ಲಿ ತೊಡಗಿರತಕ್ಕದ್ದು. ಈ ದುಷ್ಟದ್ರೋಹಿಗಳನ್ನಾದರೂ ದೇವರು ಸದುದ್ದೇಶದಿಂದಲೇ ಉತ್ಪನ್ನ ಮಾಡಿರುವನೆಂದು ಸುಜನರಾದ ರಾಷ್ಟ್ರಭಕ್ತರು ತಿಳಿದುಕೊಳ್ಳತಕ್ಕದ್ದು.

ವಿರೂಪಾಕ್ಷಾರ್ಯ—ಆಚಾರ್ಯವರ್ಯರ ಈ ಸತ್ಯ ವಿಚಾರವನ್ನು ರಾಷ್ಟ್ರಭಕ್ತರು ಲಕ್ಷದಲ್ಲಿಡತಕ್ಕದ್ದು; ಪ್ರಿಯ ಕನ್ನಡಿಗರೇ, ತಿರುವೇಂಕಟನಂಥ ವೀರಾಗ್ರಣಿಯೂ, ಕುಲೀನನೂ, ದೊಡ್ಡ ಅಧಿಕಾರಿಯೂ, ಕನ್ನಡಮಾತೆಯ ಸತ್ಪುತ್ರನೆನಿಸಿಕೊಳ್ಳುವವನೂ ಹೀಗೆ ನೀಚಸ್ವಾರ್ಥದ ಬಲೆಗೆ ಬಿದ್ದುದೇಶದ್ರೋಹದ ಕೆಲಸ ಮಾಡಿದ ಬಳಿಕ ಮಾತಾಡುವದೇನು? ಆದರೆ ಆರ್ಯವರ, ನೀವು ಆಗಲೆ—''ಹೀಗೆ ಪ್ರಸಿದ್ಧ ರೀತಿಯಿಂದಾಗಲಿ, ಕಳ್ಳತನದಿಂದಾಗಲಿ ದೇಶದ್ರೋಹವನ್ನು ಮಾಡುವ ನೀಚರು ಕರ್ನಾಟಕದಲ್ಲಿ ಹಲವು ಜನರಿರುವರೆಂ''ದು ಹೇಳಿದಿರಲ್ಲ; ಆದರೆ ಈ ದೇಶದ್ರೋಹಿಗಳು ಎಷ್ಟು ವರ್ಗದವರೆಂಬದನ್ನು ತತ್ವಜ್ಞರಾದ ತಮ್ಮ ಮುಖದಿಂದ ಕೇಳುವ ಇಚ್ಛೆಯು ನನಗಾಗಿದೆ.

ಮಾಧವಾಚಾರ್ಯ—ಆರ್ಯವರ, ಕರ್ನಾಟಕರೆನಿಸಿಕೊಳ್ಳುವವರೆ ಎಲ್ಲರೂ ಕೇಳಿ ಕೊಳ್ಳಲೆಂಬ ಉದ್ದೇಶದಿಂದ ತಾವು ಮಾಡಿರುವ ಪ್ರಶ್ನೆಯು ಲೋಕಹಿತಕಾರವೇ ಇರುವದು. ಮಹಾತ್ಮಾನ್, ದೇಶದ್ರೋಹವು ಈ ಲೋಕದಲ್ಲಿಯೇ ತಿರಸ್ಕರಣೀಯವಾಗಿರಲು, ಪರಲೋಕದಲ್ಲಿ ಅದು ನರಕ ಸಾಧಕವೆಂದು ಯಾಕೆ ಹೇಳಬೇಕು? ನಮ್ಮ ಹಡೆದ ತಾಯಿ-ತಂದೆಗಳೂ ತಾಯಿಯಾಗಿರುವ ಭೂಮಾತೆಯ ದ್ರೋಹವು ಪರಾತ್ಪರ ಮಾತೃವಿನ ದ್ರೋಹವಲ್ಲದೆ ಮತ್ತೇನು? ಭೂಮಾತೆಯ ದ್ರೋಹವೆಂದರೆ, ಆಕೆಯ ಸ್ವಾತಂತ್ರ್ಯನಾಶಕ್ಕಾಗಿ, ಹಾಗು ಆಕೆಯ ಕಳೆದುಹೋದ ಸ್ವಾತಂತ್ರ್ಯವು ತಿರುಗಿ ಪ್ರಾಪ್ತವಾಗದಂತೆ ಪ್ರಯತ್ನ ಮಾಡುವದು! ಹೀಗೆ ಪ್ರಯತ್ನಮಾಡುವ ದ್ರೋಹಿಗಳಲ್ಲಿ 1. ನಿರ್ಲಜ್ಜರು, 2. ಮರುಳರು, 3. ದುರುಳರು, 4. ಕೊಳಕರು ಎಂಬ ನಾಲ್ಕು ವರ್ಗದ ದ್ರೋಹಿಗಳಿರುವರು. ತಿರುವೇಂಕಟನಂಥ ದೇಶ ದ್ರೋಹಿಗಳೇ ನಿರ್ಲಜ್ಜರು; ಯಾಕಂದರೆ ಇವರು ನೀಚಸ್ವಾರ್ಥಕ್ಕಾಗಿ ತಾವು ಮಾತೃದ್ರೋಹ ಮಾಡುವೆವೆಂದು ಹೇಳಿ, ಪ್ರಸಿದ್ಧರೀತಿಯಿಂದ ದೇಶದ್ರೋಹದ ಅಥವಾ ರಾಜದ್ರೋಹದ ಕಾರ್ಯವನ್ನು ಮಾಡುವರು. ತಿರುವೇಂಕಟನು ನಿರ್ಲಜ್ಜನಾದುದರಿಂದಲೇ ಯವನ ಸೈನ್ಯದ ಮುಖ್ಯಾಧಿಕಾರಿಯಾದ ಅಬದುಲ ರಹಿಮಾನನ ಅಪ್ಪಣೆಯಂತೆ ತಾನು ಯಾರೆಂಬ ಅರವಿಲ್ಲದೆ ಕರ್ನಾಟಕದ ದ್ರೋಹಚಿಂತನಕ್ಕಾಗಿ ತಾನು ಸ್ವತಃ ಒಬ್ಬ ಶಾಸ್ತ್ರಿಯೊಡನೆ ನನ್ನ ಬಳಿಗೆ ಪತ್ರ ಕೊಡಲಿಕ್ಕೆ ಬಂದಿದ್ದನು. ಕನ್ನಡಿಗರೇ, ಸಗಣಿಯ ಆಸೆಯಿಂದ ಪರಕೀಯ ಶತ್ರುಗಳ ಅಪ್ಪಣೆಯಂತೆ ಸ್ವಕೀಯರ ಮುಂದೆ ತನ್ನ ಮಾತೃಭೂಮಿಯ ಅಹಿತ ಕಾರ್ಯಗಳನ್ನು ಮಾಡುವವರಿಗಿಂತ ಹೆಚ್ಚಿನ ನಿರ್ಲಜ್ಜರು ಈ ಜಗತ್ತಿನಲ್ಲಿ ಬೇರೆ ಯಾರಿರುವರು? ಇನ್ನು ನಮ್ಮ ದೇಶದ ಸ್ವಾತಂತ್ರ್ಯ ಹಾರಕ ಶತ್ರುಗಳ ಬಲ-ವೈಭವಗಳಿಗೆ ಮರುಳಾಗಿ—''ಇಂಥ ಬಲಿಷ್ಠರಿದ್ದದ್ದರಿಂದಲೇ ನಾವು ಸುರಕ್ಷಿತವಾಗಿರುವೆವು; ಇಲ್ಲದಿದ್ದರೆ ಪರದೇಶದ ಶತ್ರುಗಳಿಂದಂತೂ ಇರಲಿ, ನಮ್ಮನಮ್ಮೊಳಗೆ ಬಡಿದಾಡಿ ಸತ್ತು ಹೋಗುತ್ತಿದ್ದೆವು; ಅಂದ ಬಳಿಕ ಅವರಿಂದ ರಕ್ಷಿತರಾಗಿ ಅವರ ಅನ್ನವನ್ನು ಉಣ್ಣುತ್ತಿದ್ದ ನಾವು, ಅವರಮೇಲೆ ತಿರುಗಿ ಬೀಳುವದು ಪಾಪವೇ ಸರಿ'' ಎಂಬಿವೇ ಮೊದಲಾದ ಮರುಳತನದ ಹುರುಳಿಲ್ಲದ ಸ್ವಾಮಿಭಕ್ತಿಯ ವಿಚಾರಗಳಿಂದ ದೇಶದ ಸ್ವಾತಂತ್ರ್ಯಹರಣಕ್ಕೆ ಅನುಕೂಲಿಸಿ ನಡೆಯುವವರು ಮರುಳ ದ್ರೋಹಿಗಳು. ಈ ಮರುಳರಿಗೆ, ತಮ್ಮ ಸ್ವಾತಂತ್ರ್ಯಹರಣ

ಮಾಡಿರುವ ಶತ್ರುಗಳು,ಪ್ರಜೆಗಳಾದ ತಮ್ಮ ಬಲದ, ಅಥವಾ ತಮ್ಮ ಮರುಳತನದ, ಅದರಂತೆಯೇ ತಮ್ಮ ದೇಶದ ದುಡ್ಡಿನ ಸಹಾಯದಿಂದ, ಕುರುಬನು ''ಕುರಿಯ ಹಿಂಡನ್ನು ಕಾಯುವಂ''ತೆ ಅತ್ತಿತ್ತ ಮಿಸಕಾಡಗೊಡದೆ ತಮ್ಮನ್ನು ಕಾಯುವರೆಂಬುದೂ, ತಮ್ಮ ಹಣದೊಳಗಿನ ಅತ್ಯಲ್ಪ ಭಾಗವನ್ನು ಮಾತ್ರ ತಮ್ಮ ಯೋಗಕ್ಷೇಮಕ್ಕಾಗಿ ಉಪಯೋಗಿಸಿದಂತೆ ಮಾಡಿ, ಉಳಿದದ್ದನ್ನು ತಮ್ಮ ಚಕ್ಕಂದಕ್ಕೆ ಹಾಳುಮಾಡುವರೆಂಬುದೂ ಈ ಮರುಳರಿಗೆ ಗೊತ್ತಾಗುವದಿಲ್ಲ! ಇನ್ನು ಇತ್ತ ತಮ್ಮ ಮಾತೃಭೂಮಿಯ ವಿಷಯವಾಗಿಯೂ ಪ್ರೇಮವಿಲ್ಲ; ಅತ್ತ ತಮ್ಮ ಸ್ವಾತಂತ್ರ್ಯಾಹಾರಕರ ವಿಷಯ ವಾಗಿಯೂ ಪ್ರೇಮವಿಲ್ಲ. ಕೇವಲ ಸೋದರಂಭರಣದಲ್ಲಿ ದೃಷ್ಟಿಯನ್ನಿಟ್ಟು, ದೇಶಭಕ್ತರೆದುರಿನಲ್ಲಿ ಸ್ವಾತಂತ್ರ್ಯಾಪಹಾರಕರನ್ನೂ, ಸಾತಂತ್ರ್ಯಾಪಹಾರಕರ ಎದುರಿನಲ್ಲಿ ದೇಶಭಕ್ತರನ್ನೂ ನಿಂದಿಸುತ್ತ ಹೊತ್ತುಬಂದ ಹಾಗೆ ಕೊಡೆ ಹಿಡಿದು ಎರಡೂ ಕಡೆಗೆ ದ್ರೋಹಿಗಳಾಗಿ ನಡೆಯುವ ಮೋಸಗಾರರು ದುರುಳ ದೇಶದ್ರೋಹಿಗಳು. ಇನ್ನು ಮೇಲೆ ಮೇಲೆ ಅತ್ಯಂತ ದೇಶಭಕ್ತಿಯನ್ನು ತೋರಿಸುತ್ತ ಒಳಗಿಂದೊಳಗೆ ಸ್ವಾರ್ಥಕ್ಕಾಗಿ ದೇಶದ್ರೋಹ ಮಾಡುವ ಕಳ್ಳರು ಕೊಳಕ ದೇಶದ್ರೋಹಿಗಳು, ಆರ್ಯವರ, ಈ ನಾಲ್ಕು ಬಗೆಯ ದೇಶದ್ರೋಹಿಗಳು ವಿಶೇಷವಾಗಿ ಪರತಂತ್ರ ರಾಷ್ಟ್ರದಲ್ಲಿ ಇದ್ದೇ ಇರುವರು. ಇಂಥ ದ್ರೋಹಬುದ್ಧಿಯ ಲೇಶವೂ ಇಲ್ಲದ ಶುದ್ಧವೃತ್ತಿಯ, ಅಂದರೆ ದೇಶದ ಸ್ವಾತಂತ್ರ್ಯಪ್ರಾಪ್ತಿಗಾಗಿ ಸರ್ವಸ್ವದ ತ್ಯಾಗಮಾಡಲು ಸಿದ್ಧರಾದ ಜನರು ಅತಿ ವಿರಳ; ಯಾಕಂದರೆ ಸ್ವಾರ್ಥವು ಬಹುತರ ಯಾರನ್ನೂ ಬಿಟ್ಟದ್ದಲ್ಲ. ಸ್ವಾರ್ಥವಿದ್ದಲ್ಲಿ ಅದಕ್ಕೆ ಭಂಗ ಬಂದೀತೆಂಬ ಭಯವು; ಆ ಭಯವಿದ್ದಲ್ಲಿ ಆ ಸ್ವಾರ್ಥವನ್ನು ಸಾಧಿಸುವದಕ್ಕಾಗಿ ಗುಪ್ತವಾದದ್ದಾಗಲಿ, ವ್ಯಕ್ತವಾದದ್ದಾಗಲಿ ದ್ರೋಹಬುದ್ಧಿಯು; ಅಂದ ಬಳಿಕ ಮಹಾತ್ಮರಾದ ನಿಃಸ್ವಾರ್ಥ ಬುದ್ಧಿಯ ನಿರ್ಮಲಾಂತಃಕರಣವುಳ್ಳ ದೇಶಭಕ್ತರು ಉದಯವಾಗುವದೇ ವಿರಳ; ಅಂಥವರು ಉದಯ ವಾದರೆ ಅಚ್ಚ ಕಸ್ತೂರಿಯ ಕಣದ ಸುವಾಸನೆಯಿಂದ ಮನೆಯೆಲ್ಲ ಕಸ್ತೂರಿಯ ಸುವಾಸನೆಯುಳ್ಳ ದ್ದಾಗುವಂತೆ, ಇಂಥ ಅಚ್ಚ ದೇಶಭಕ್ತರ ಸಹವಾಸದಿಂದ ರಾಷ್ಟ್ರದೊಳಗಿನ ಬಹು ಜನರು ದೇಶಭಕ್ತಿಯುಳ್ಳವರಾಗುವರು; ಇಂಥಅಚ್ಚ ದೇಶಭಕ್ತರು ಉದಯವಾಗುವದು ಅಪರೂಪ ವಾಗಿದ್ದರೂ, ರಾಷ್ಟ್ರದ ಅಧಃಪತನದ ಕಾಲದಲ್ಲಿ; ಈಶ್ವರೀ ಸಂಕೇತದಿಂದ ಇಂಥವರು ಹೆಚ್ಚು ಪ್ರಮಾಣದಿಂದ ಉತ್ಪನ್ನರಾಗುವರು. ಇಂಥ ಪವಿತ್ರ ಜನರ ಸಹವಾಸದಿಂದ ದೇಶದ ಜನರ ಮನಃಪ್ರವೃತ್ತಿಯು ತಟ್ಟನೆ ಬದಲಾಗಿ ರಾಷ್ಟ್ರೋದ್ಧಾರದ ಕಾರ್ಯವು ಆಗಿಹೋಗುತ್ತದೆ! ಆರ್ಯವರ್ಯರೇ, ಮುಂದೆ ಕಲಿಯುಗದ ಕಡೆಯಲ್ಲಿ ಕಲ್ಕಿಯ ಅವತಾರವಾಗತಕ್ಕದ್ದಿದ್ದು, ಆ ಮಹಾತ್ಮನಾದ ಕಲ್ಕಿಯ ಮೈಮೇಲಿನ ಗಾಳಿ ತಗಲಿಯೇ ಜನರ ಚಿತ್ತವೃತ್ತಿಗಳು ಸನ್ಮಾರ್ಗ ಪ್ರವೃತ್ತವಾಗುವವೆಂದು ಭಾಗವತದಲ್ಲಿ ಹೇಳಿದೆ; ಆದ್ದರಿಂದ ಸತ್ಪುರುಷರಾದ ರಾಷ್ಟ್ರಭಕ್ತರ ಸಹವಾಸದ ಯೋಗ್ಯತೆಯು ಸಾಮಾನ್ಯವಾದದ್ದಲ್ಲ. ಕುರುಡಿಯಕುಠಾರ ಹುಳವು ಅನ್ಯಜಾತಿಯ ಹುಳವನ್ನು ತಂದಿಟ್ಟುಕೊಂಡು ಕುಕ್ಕಿಕುಕ್ಕಿ ತನ್ನಂತೆ ಮಾಡಿಕೊಳ್ಳುವಂತೆ, ಸತ್ಪುರುಷರಾದ ರಾಷ್ಟ್ರಭಕ್ತರು ನುಡಿಯಂತೆ ನಡೆದು ಜನರನ್ನು ತಮ್ಮಂತೆ ಮಾಡಿಕೊಳ್ಳುವರು ಇಂಥ ಅದ್ಭುತ ಸಾಮರ್ಥ್ಯವು ಆ ರಾಷ್ಟ್ರಭಕ್ತರಲ್ಲಿರುತ್ತಿದ್ದರೂ, ಮಹಾ ಪಾಪಿಗಳಿಗೆ ಅವರ ಸಹವಾಸದ ಪ್ರಯೋಜನವಾಗದೆ ಆ ಪತಿತರು ದೇಶದ್ರೋಹಿಗಳಾಗಿಯೇ ಉಳಿಯುವರು. ದೇಶಬಾಂಧವರೇ,

ಉಣ್ಣಿಯು ಗೋಮಾತೆಯ ಕೆಚ್ಚಲದ ಬಳಿಯಲ್ಲಿದ್ದರೂ ಅದು ಸೇವೆಯಿಂದ ಗೋಮಾತೆಯನ್ನು ಸಂತೋಷಪಡಿಸಿ, ಆಕೆಯ ಮೊಲೆಯೊಳಗಿನ ಅಮೃತ ಪಾನಮಾಡಿ, ಅಮರವಾಗದೆ ಗೋಮಾತೆಯನ್ನು ಹಿಂಸಿಸಿ, ಆಕೆಯ ಮೊಲೆಯ ರಕ್ತ ಹೀರಿ ಉಬ್ಬಿ ಉರುಳಿ ಬಿದ್ದು ನಾಶ ಹೊಂದುವದು; ಅದರಂತೆ ದೈವಹೀನರಾದ ದೇಶದ್ರೋಹಿಗಳು ತಮ್ಮ ಮಾತೃಭೂಮಿಯನ್ನು ಸೇವಿಸಿ, ಸ್ವಾತಂತ್ರ್ಯರೂಪವಾದ ಆಕೆಯ ಮೊಲೆಯ ಹಾಲನ್ನು ಯಥೇಚ್ಛ ಕುಡಿದು ಕೃತಾರ್ಥ ರಾಗದೆ, ಸ್ವಾತಂತ್ರ್ಯ ವಿಘಾತಕ ಕೃತಿರೂಪ ಹಿಂಸೆಯಿಂದ ಸಂಪಾದಿಸಿದ ಪಾರತಂತ್ರ್ಯರೂಪವಾದ ತಾಯಿಯ ಮೊಲೆಯೊಳಗಿನ ರಕ್ತವನ್ನು ಯಥೇಚ್ಛ ಕುಡಿದು ಉಬ್ಬಿ ಉರುಳಿ ಬಿದ್ದು ಕಡೆಗೆ ನಾಶಹೊಂದಬೇಕಾಗುತ್ತದೆ. ದೇಶಬಾಂಧವರೇ, ಉಣ್ಣಿಯಂತೆ ಗೋಮಾತೆಯನ್ನು ಪೋಷಿಸಿ ಆಕೆಯ ಸೇವೆ ಮಾಡದೆ ಬರಿಯ ರಕ್ತವನ್ನು ಹೀರಿದರೆ, ಗೋಮಾತೆಯು ಮೃತಿಹೊಂದಿ ಉಣ್ಣಿಗಳೂ ದೆಸೆಗೇಡಿಗಳಾಗಿ ಕಡೆಗೆ ಮರಣಹೊಂದುವಂತೆ, ಭೂಮಾತೆಯೊಡನೆ ದ್ರೋಹ ಬಳಿಸುವ ದೇಶದ್ರೋಹಿಗಳ ಕೃತಿಯಿಂದ ಭೂಮಾತೆಯ ಗತಿಯೂ, ಆ ದ್ರೋಹಿಗಳ ಗತಿಯೂ ಆಗಬಹುದು; ಆದರೆ ದೇಶಭಕ್ತರೆಂಬ ಪುಣ್ಯವಂತರು ತಮ್ಮ ದೇಹತ್ಯಾಗ ಮಾಡಿಯಾದರೂ ಭೂಮಾತೆಯ ರಕ್ಷಣಮಾಡಿ ಆಕೆಯನ್ನು ಸೇವಿಸುತ್ತಿರುವದರಿಂದ, ಅವರ ಪುಣ್ಯದಿಂದಲೇ ಭೂಮಾತೆಯ ಜೀವನವಾಗಿ, ಉಣ್ಣಿಯಂತೆ ಇದ್ದ ದೇಶದ್ರೋಹಿಗಳೂ ಬದುಕಿ ಉಳಿಯುತ್ತಿರುವರು! ಒಟ್ಟಿಗೆ ದೇಶೋದ್ಧಾರಕರ ಯೋಗ್ಯತೆಯು ಬಹು ಘನವಾದದ್ದು. ಅವರಿಗೆ ಭೂಮಾತೆಯ ಆಶೀರ್ವಾದದಿಂದ ಇಹದಲ್ಲಿ ಸ್ವಾತಂತ್ರ್ಯ ಸುಖವು ದೊರೆಯುವದಲ್ಲದೆ, ಪರದಲ್ಲಿ ಸದ್ಗತಿಯು ಪ್ರಾಪ್ತವಾಗುವದು! ದೇಶದ್ರೋಹಿಗಳಿಗೆ ಮಾತ್ರ ಇಹದಲ್ಲಿ ಲೋಕ ತಿರಸ್ಕರಣವೂ, ಪರದಲ್ಲಿ ನರಕವೂ ತಪ್ಪದು! ಆದ್ದರಿಂದ ಪ್ರಿಯ ಕನ್ನಡಿಗರೇ, ಮೂರು ದಿನ ಬಾಳುವ ಈ ದೇಹದ್ದೇ ನಂಬಿಗೆಯಿಲ್ಲದಿರುವಾಗ, ಆ ದೇಹದಿಂದ ಸಂಪಾದಿತವಾದ ಕ್ಷುದ್ರ ವಿಷಯಗಳ ಪಾಡೇನು? ಆದ್ದರಿಂದ ಶಾಶ್ವತವಾದ ಪರಲೋಕದಲ್ಲಿಯೂ, ಅಂಥ ಪರಲೋಕ ಸಾಧನವಾದ ಧರ್ಮದಲ್ಲಿಯೂ, ಅಂಥ ಧರ್ಮದ ಪ್ರಭುವಾದ ಪರಮೇಶ್ವರನಲ್ಲಿಯೂ ದೃಷ್ಟಿಯನ್ನಿಟ್ಟು, ಆ ಪರಮೇಶ್ವರನ ಕೃಪೆಯಿಂದ ಶಾಶ್ವತ ಪರಲೋಕವನ್ನು ಸಂಪಾದಿಸುವದಕ್ಕಾಗಿ ಭೂಮಾತೆಯ ಸೇವೆಯಿಂದ ಆ ಮಾತೃರೂಪ ದೈವತದ ಆಶೀರ್ವಾದ ಪಡೆಯಿರಿ. ಎಂದಾದರೊಂದು ದಿನ ಬಿದ್ದು ಹೋಗತಕ್ಕ ಈ ದೇಹವು ದೇಶಸೇವೆಯಲ್ಲಿ ಬಿದ್ದುಹೋಗುವ ಸುಯೋಗ ಒದಗಿದಾಗ ನಿಮ್ಮನ್ನು ಧನ್ಯರೆಂದು ತಿಳಿಯಿರಿ! ದೇಶಕಾರ್ಯವು ಸಾಧಿಸಿ ನೀವು ಉಳಿದರೆ ಸ್ವಾತಂತ್ರ್ಯರೂಪ ಅಮೃತವನ್ನು ಈಲೋಕದಲ್ಲಿಯೇ ಪಾನಮಾಡಿ ಅಮರರಾಗಿರಿ; ಉಳಿಯದಿದ್ದರೆ ನಿಮ್ಮ ಶ್ರಮದ ಫಲವನ್ನು ಅನ್ಯರಿಗೆ ಬಡಿಸಿ ಇಟ್ಟು, ನೀವು ಅದರ ಪುಣ್ಯದಿಂದ ಸ್ವರ್ಗದಲ್ಲಿ ನಲಿಯಿರಿ! ದೇಶಬಾಂಧವರೇ, ಮುಸಲ್ಮಾನ ಸುಭೇದಾರನಾದ ಮಲಿಕನಾಯಬನು ಈ ಪತ್ರದಲ್ಲಿ ಏನು ಬರೆದಿರುವನೆಂಬುದನ್ನು ಇನ್ನು ಹೇಳಲಿಯಾ? ಅದನ್ನು ಕೇಳಿ ನಾಯಬನಿಗೆ ನಿಮ್ಮ ಕೈ ತೋರಿಸಿ, ನಿಮ್ಮ ಕರ್ನಾಟಕ ಭೂಮಾತೆಯ ಸ್ವಾತಂತ್ರ್ಯ ಕಾಯ್ದುಕೊಳ್ಳುವಷ್ಟು ನಿಮ್ಮ ಪವಿತ್ರ ಹೃದಯವು ದೇಶಭಕ್ತಿಪೂರಿತವಾಗಿದೆಯೇ? ಹಾಗೆ ಪೂರಿತವಾಗಿದ್ದ ಪಕ್ಷದಲ್ಲಿ ಶ್ರೀವಿರೂಪಾಕ್ಷನ ಸ್ಮರಣಮಾಡಿ, ಈ ದೇಹವು ದೇಶಕಾರ್ಯಕ್ಕಾಗಿ ಅರ್ಪಿಸಿದ್ದೆಂದು ಹೇಳಿಕೊಂಡು ಆ

ಮೃತ್ಯುಂಜಯನ ನಾಮಘೋಷ ಮಾಡಿರಿ, ಎಂದಕೂಡಲೆ ಆ ಪ್ರಚಂಡ ಸಭೆಯು ''ಹರಹರ ಮಹಾದೇವ'' ಎಂದು ನಾಮಘೋಷ ಮಾಡಲು, ಇಷ್ಟಾರ್ಥಪ್ರದವಾದ ಆ ಶಿವನಾಮ ಘೋಷವು ಸಭಾಸ್ಥಾನವನ್ನು ಭೇದಿಸಿ ಹೊರಬಿದ್ದು ದಿಕ್ತಟವನ್ನು ತುಂಬಿತು!

ಹೀಗೆ ಶಿವನಾಮ ಘೋಷವಾದ ನಂತರ ಸಭೆಯು ಸ್ತಬ್ಧವಾಯಿತು. ಈ ಅವಸರದಲ್ಲಿ ಮಾಧವಾಚಾರ್ಯರು ಮಲಿಕನಾಯಬನ ಪತ್ರವನ್ನು ವಿರೂಪಾಕ್ಷಾರ್ಯರ ಕೈಯಲ್ಲಿ ಕೊಟ್ಟರು. ಆರ್ಯರ ಪತ್ರವನ್ನು ಪೆಟ್ಟಿನ ಮೇಲೆ ಪೆಟ್ಟು ಎರಡು ಸಾರೆ ಓದಿ ಸಂಗನಬಸವಾರ್ಯರ ಕೈಯಲ್ಲಿ ಕೊಡಲು, ಅವರು ಅದನ್ನು ಮಾಧವಾಚಾರ್ಯರ ಕೈಯಲ್ಲಿ ಕೊಡುವಾಗ— ''ಆಚಾರ್ಯವರ, ನಮ್ಮಂಥ ಮಠಸ್ಥರಿಗೆ ಈ ರಾಜಕಾರಣದ ತೊಡಕು ಹ್ಯಾಗೆ ತಿಳಿಯಬೇಕು? ಆದರೆ ಮಲಿಕನಾಯಬನ ಬೇಡಿಕೆಯು ತೀರ ಅಶಕ್ಯವಾದದ್ದೆಂದು ನಮಗೆ ತೋರುತ್ತದೆ. ಬ್ರಾಹ್ಮಣೋತ್ತಮರೇ ಹುಕ್ಕ, ಕೃಷ್ಣನಾಯಕ, ಬುಕ್ಕ, ಮಲ್ಲಸರ್ಜ ಇವರಂಥ ಕ್ಷತ್ರಿಯ ವೀರರು ಆ ನಾಯಬನ ಬೇಡಿಕೆಗೆ ಸೊಪ್ಪು ಹಾಕಬಹುದೆ? ಕನ್ನಡಿಗರು ಅಂಥ ಹತವೀರ್ಯ ರಾಗಿರುವರೆಯೇ? ಅವರು ತಮ್ಮ ಮೂಲಾಧಾರವನ್ನು ಕಳಕೊಂಡು ನಿರಾಶ್ರಿತರಾಗಿ ಉಳಿಯ ಬಹುದೇ? ಮಲಿಕನಾಯಬನು ನ್ಯಾಯಪಕ್ಷಪಾತಿಯೂ, ರಾಜಕಾರ್ಯ ಕುಶಲನೂ, ಶೂರನೂ ಎಂಬದು ಪ್ರಸಿದ್ಧವಿರುವದು. ಇಂಥವನು ಇಂಥ ಅಶಕ್ಯ ಬೇಡಿಕೆಯನ್ನು ಹ್ಯಾಗೆ ಬೇಡಿರ ಬಹುದು'' ಎಂದು ನುಡಿದು ವಿರೂಪಾಕ್ಷಾರ್ಯರ ಮೋರೆಯನ್ನು ನೋಡಲು, ಅವರು ಸಂಗನ ಬಸವಾರ್ಯರಿಗೆ—''ಈ ಪತ್ರದ ಮರ್ಮವನ್ನು ಆಚಾರ್ಯರೇ ಬಲ್ಲರು. ಅದಕ್ಕೆ ಏನು ಉತ್ತರ ಬರೆಯಬೇಕೆಂಬುದನ್ನು ನಿರ್ಣಯಿಸುವ ಯೋಗ್ಯತೆಯು ಅವರದೇ; ಆದರೆ ಆರ್ಯರು ಅಪ್ಪಣೆ ಕೊಡಿಸಿದಂತೆ ಮಲಿಕನಾಯಬನ ಬೇಡಿಕೆಯು ನಮಗೂ ಅಶಕ್ಯವಾಗಿತೋರುತ್ತದೆ'' ಎಂದು ನುಡಿಯಲು, ಹುಕ್ಕನೇ ಮೊದಲಾದ ಕ್ಷತ್ರಿಯ ವೀರರೂ, ಉಳಿದ ಯುದ್ಧೋತ್ಸುಕರಾದ ಸಭಾಸದರೂ ಪತ್ರದ ಸಂಗತಿಯನ್ನು ತಿಳಿಯಲು ಆತುರಪಡತೊಡಗಿದರು. ಅದರಲ್ಲಿ ಆರ್ಯದ್ವಯರ ಸಂಧಿಗ್ಧ ಮಾತುಗಳಿಂದಂತು ಸಭಿಕರ ಆತುರತೆಯು ಹೆಚ್ಚಾಯಿತು. ಆದರೆ ಆಚಾರ್ಯರಿಗೆ ಸಂಬೋಧಿಸುವ ಯೋಗ್ಯತೆಯು ಯಾರಿಗಾಗಬೇಕು? ಪತ್ರದ ಸಂಗತಿಯನ್ನು ತಿಳಿಸಬೇಕೆಂದು ಆಚಾರ್ಯರಿಗೆ ಹೇಳುವ ಔದ್ಧತ್ಯವನ್ನು ಯಾರು ಮಾಡಬೇಕು? ಈ ಅಧಿಕಾರವು ಆರ್ಯದ್ವಯರಿಗೆ ಮಾತ್ರ ಇತ್ತು. ಅಧಿಕಾರಾತಿಕ್ರಮ ಮಾಡುವಷ್ಟು ಅವಿವೇಕಿಗಳು ಆ ಸಭಿಕರಿದ್ದಿಲ್ಲ. ಅವರು ಕೇವಲ ಉತ್ಸುಕತೆಯಿಂದ ಆಚಾರ್ಯರ ಕಡೆಗೆ ನೋಡುತ್ತಿರಲು, ಮಾಧವಾಚಾರ್ಯರು ಗಾಂಭೀರ್ಯದಿಂದ ಸಭಿಕರನ್ನು ಕುರಿತು—''ಕನ್ನಡ ವೀರರೇ, ಮಲಿಕನಾಯಬನ ಸಂಪೂರ್ಣ ಪತ್ರವನ್ನು ಇದ್ದಕ್ಕಿದ್ದ ಹಾಗೆ ಓದಿದರೆ ಸಭಿಕರಿಗೆಲ್ಲರಿಗೂ ಅದು ತಿಳಿಯಲಿಕ್ಕಿಲ್ಲ; ಯಾಕಂದರೆ ಪತ್ರವನ್ನು ಸ್ವತಃ ಮಲಿಕನಾಯಬನು ಯಾವನೀ ಭಾಷೆಯಲ್ಲಿ ಬರೆದಿದ್ದು, ಅದರ ಭಾಷಾಂತರವನ್ನು ಪಂಡಿತ ಶ್ರೀಕಂಠಶಾಸ್ತ್ರಿಗಳವರು ಸಂಸ್ಕೃತದಲ್ಲಿ ಮಾಡಿರುವರು; ಆದ್ದರಿಂದ ಬಹುತರ ಇಲ್ಲಿರುವ ಕನ್ನಡ–ತೆಲಗು ಭಾಷೆಗಳನ್ನಾಡುವವರಿಗೆ ಅದು ತಿಳಿಯಲಿಕ್ಕಿಲ್ಲ; ಆದ್ದರಿಂದ ಆ ಪತ್ರದ ಭಾಷಾಂತರವನ್ನು ಕನ್ನಡದಿಂದ ಮಾಡಿ ಹೇಳುವೆನು ಕೇಳಿರಿ. ಸುಜನನಾದ ಮಲಿಕನಾಯಬನು ನನ್ನನ್ನು ಕುರಿತು ಅನ್ನುವನೇನಂದರೆ–

''ವೇದಶಾಸ್ತ್ರ ಸಂಪನ್ನರಾದ ರಾಜಕಾರಣಪಟು ಮಾಧವಾಚಾರ್ಯರಿಗೆ ನಿಮ್ಮ ಮಿತ್ರ ಮಲಿಕನಾಯಬನು ಸಲಾಮು ಮಾಡಿ ವಿನಂತಿ ಮಾಡಿಕೊಳ್ಳುವದೇನಂದರೆ–ನಮ್ಮ ಒಡೆಯರಾದ ಬಾದಶಹ ತಗಲಖಮುಹಮ್ಮದರವರು ಆನೆಗುಂದಿಯ ಶೂರ ಜಂಬುಕೇಶ್ವರ ರಾಜರನ್ನು ಯುದ್ಧದಲ್ಲಿ ಜಯಿಸಿದ ಬಳಿಕ ಆ ರಾಜ್ಯವನ್ನು ಸ್ವಾಧೀನಪಡಿಸಿಕೊಂಡು, ಅದರ ಮೇಲೆ ಮಂತ್ರಿ ದೇವರಾಜರನ್ನು ತಮ್ಮ ಮಾಂಡಲಿಕ ರಾಜರನ್ನಾಗಿ ನಿಯಮಿಸಿದರು. ಅಂದಿನಿಂದ ಆನೆಗುಂದಿಯು ತಗಲಖ ಬಾದಶಹರ ಅಧಿಕಾರಕ್ಕೊಳಪಟ್ಟ ರಾಜ್ಯವಾಗಿದೆ. ದೇವರಾಜರು ನಮ್ಮ ಅಂಕಿತರಾಗಿದ್ದು, ಅವರ ರಾಜ್ಯದಲ್ಲಿ ನೀವು ಹುಕ್ಕನೆಂಬ ಒಬ್ಬ ಪುಂಡ ಕುರುಬನನ್ನು ಕಟ್ಟಿಕೊಂಡು ಬಾದಶಹರ ವಿರುದ್ಧವಾಗಿ ಕಾರಸ್ಥಾನಗಳನ್ನು ನಡಿಸಿ ಹ್ಯಾಗೆಹ್ಯಾಗೋ ಕಂಪಲಿಯ ಕೋಟೆಯನ್ನು ಸ್ವಾಧೀನಪಡಿಸಿಕೊಂಡಿರುವಿರಿ. ನಮ್ಮ ಸರದಾರನಾದ ಕಾಸಿಮಖಾನನು ನಿಮ್ಮ ತಂತ್ರಕ್ಕೆ ಒಳಗಾಗಿರುವ ಆಶ್ಚರ್ಯದ ಸಂಗತಿಯನ್ನೂ, ಬೇರೆ ರಾಜದ್ರೋಹಿಗಳ ಕೃತಿಗಳನ್ನೂ ಹಿಂದಿನಿಂದ ನಾವು ವಿಚಾರಿಸುವೆವು. ಆದರೆ ನಮ್ಮ ಮಾಂಡಲಿಕ ರಾಜ್ಯದೊಳಗಿನ ಪ್ರಜೆಗಳ ಮನಸ್ಸನ್ನು ನೀವು ದುರ್ಬೋಧದಿಂದ ಕೆಡಿಸುತ್ತಿರುವದು ಕ್ಷಮ್ಯವಲ್ಲ. ನಿಮ್ಮನ್ನು ತತ್‌ಕ್ಷಣ ದಂಡಿಸಲು ನಾವು ಸಮರ್ಥರಿದ್ದರೂ, ಶಮಪ್ರಧಾನರೆಂದು ಪ್ರಸಿದ್ಧವಾಗಿರುವ ಬ್ರಾಹ್ಮಣರಲ್ಲಿ ನೀವು ಜನ್ಮತಾಳಿದವರಾದದ್ದರಿಂದಲೂ, ಕಂಪಲಿಯ ಕೋಟೆಯನ್ನು ಯುದ್ಧ ಮಾಡದೆ ಚಾತುರ್ಯದಿಂದ ನೀವು ತಕ್ಕೊಂಡಿರುವದರಿಂದಲೂ ಪ್ರಜೆಗಳ ಹಿಂಸೆಗೆ ಹೇಸುವ ನಾವು ಈಗ ನಿಮಗೆ ಸ್ಪಷ್ಟವಾಗಿ ಹೇಳುವೆವೇನಂದರೆ–ಎಲ್ಲ ಚಳವಳಿಗೆ ಮೂಲ ಕಾರಣರಾದ ನೀವು ಕೂಡಲೆ, ನಮ್ಮ ಸೈನ್ಯಾಧಿಪತಿಯಾಗಿ ಬಂದು ನಿಮ್ಮ ಕಂಪಲಿಯ ಕೋಟೆಯನ್ನು ಮುತ್ತಿರುವ ಅಬದುಲ ರಹಿಮಾನಖಾನರ ವಶವಾಗಿ ನಮ್ಮ ಕಾಂಚನಗಡಕ್ಕೆ ಸೆರೆಯಾಳಾಗಿ ಬರಬೇಕು; ಇಲ್ಲದಿದ್ದರೆ ನಮ್ಮ ಬಾದಶಹರ ಪರಾಕ್ರಮಿಯಾದ ಸೈನ್ಯವು ತನಗೆ ಸರಿದೋರುವ ಮಾರ್ಗದಿಂದ ನಿಮ್ಮ ಪಾರುಪತ್ಯ ಮಾಡಿ ನಿಮ್ಮನ್ನು ಸೆರೆಹಿಡಿದು ತರುವದು; ಆದರೆ ವ್ಯರ್ಥ ಹಿಂಸಾವ್ಯಾಪಾರಕ್ಕೆ ಆಸ್ಪದಕೊಡುವದು ಯೋಗ್ಯ ವಲ್ಲವಾದ್ದರಿಂದ ಇನ್ನೊಮ್ಮೆ ನಿಮಗೆ ಹೇಳುವೆವು, ನೀವು ಕೂಡಲೆ ನಮ್ಮ ಅಬದುಲ ರಹಿಮಾನಖಾನರಿಗೆ ಶರಣುಬರಬೇಕು. ಇದಕ್ಕೂ ಹೆಚ್ಚಿಗೆ ಬರೆಯಲವಶ್ಯವಿಲ್ಲ; ನಮ್ಮ ಪತ್ರದಂತೆ ನಡೆಯದಿದ್ದರೆ ನಾವು ಕಲಿಸತಕ್ಕದ್ದನ್ನು ಯುದ್ಧ ಮುಖಾಂತರವಾಗಿ ನಿಮಗೆ ಕಲಿಸುವೆವು.

ಇತಿ ಸಲಾಂ''

## ಪರತಂತ್ರರಿಗೆ ಸೆರೆಮನೆಯೇ ಸ್ವರಾಜ್ಯವು

ಪತ್ರವು ಸಂಕ್ಷೇಪವಾಗಿದ್ದರೂ ಅದರ ಮರ್ಮಭೇದಕತೆಯಿಂದ, ಹಾಗು ವಿಶೇಷವಾಗಿ, ಕರ್ನಾಟಕದ ಮುಖ್ಯ ಪ್ರಾಣವಾಗಿರುವ ಮಾಧವಾಚಾರ್ಯರು ತಾವಾಗಿ ಸೆರೆಯಾಳಾಗಿ ಬರಬೇಕೆಂದು ಬರೆದಿದ್ದರಿಂದ ಸಭೆಗೆ ಸಭೆಯೇ ಸಂತಾಪಗೊಂಡಿತು. ತನ್ನದೊಂದು ಪತ್ರದಿಂದ

ಸೆರೆಯಾಳಾಗಿ ಬರುವಷ್ಟು ಆಚಾರ್ಯರೂ,ಆಚಾರ್ಯರ ಅನುಯಾಯಿಗಳಾದ ಕನ್ನಡಿಗರೂ ತೇಜೋಹೀನರಾಗಿರುವರೆಂಬ ಆರೋಪ ಮಾಡಿದ್ದಕ್ಕಾಗಿ ಹುಕ್ಕ–ಕೃಷ್ಣನಾಯಕ –ಬುಕ್ಕ ಮೊದಲಾದ ಕ್ಷತ್ರಿಯ ವೀರರ ವೀರವೃತ್ತಿಯು ಅನಿವಾರವಾಯಿತು. ಆಚಾರ್ಯರೆದುರಿಗೆ ಗಟ್ಟಿಯಾಗಿ ಮಾತಾಡಲಾರದ ಆ ಗುರುಭಕ್ತರು ಆವೇಶದಿಂದ ಒಮ್ಮೆಲೆ ಎದ್ದು ಕೈಜೋಡಿಸಿ—''ಭಗವನ್ ಯುದ್ಧಕ್ಕೆ ಅಪ್ಪಣೆಯಾಗಬೇಕು ನಾಲ್ಕು ದಿನಗಳಿಂದ ಹಾದಿಯನ್ನು ನೋಡುತ್ತಿದ್ದ ನಮ್ಮ ವೀರ ಸೈನಿಕರ ಖಡ್ಗಗಳು ಇನ್ನು ಒರೆಗಳಲ್ಲಿ ನಿಲ್ಲಲಾರವು'' ಎಂದು ನುಡಿದು, ಆ ವೀರರು ತಮ್ಮತಮ್ಮ ಖಡ್ಗಗಳನ್ನು ಒರೆಗಳಿಂದ ಹಿರಿದಕೂಡಲೆ,ಆ ವೀರರ ಸಭೆಗೆ ಸಭೆಯೇ ವೀರಾವೇಶಗೊಂಡು ಕತ್ತಿಗಳನ್ನು ಹಿರಿಯಿತು! ಯುದ್ಧಪ್ರಸಂಗವು ಒದಗುವದು ನಿಶ್ಚಯವೆಂದು ಸಾಣೆ ಹಿಡಿದು ಸಜ್ಜು ಮಾಡಿಟ್ಟಿದ್ದ ಆ ವೀರರ ನಿಶಿತ ಖಡ್ಗಗಳು ಲಕಲಕನೆ ಹೊಳೆದು, ವೀರರ ಅಂತಸ್ತೇಜಸ್ಸನ್ನು ಅಭಿವೃದ್ಧಿಗೊಳಿಸತೊಡಗಿದವು. ಹೀಗೆ ನಿಶ್ಯಬ್ದವಾದ ಆ ಸಭಾಸ್ಥಾನದಲ್ಲಿ ಖಡ್ಗ ಹಿರಿದ ವೀರರ ವೀರಾವೇಶದಿಂದ ಅವರ ಮೈ ಉಬ್ಬಿ ಅಂಗಿಯ ಕಸಿಗಳು ಹರಿಯುತ್ತಿರಲು, ಅತ್ಯಂತ ಸಾತ್ವಿಕರಾದ ಸಂಗನಬಸವಾರ್ಯರ ಮುಖದಿಂದ ಗಟ್ಟಿಯಾಗಿ ಉಚ್ಚರಿಸಲ್ಪಟ್ಟ —''ಹಾಗಲ್ಲದೇನು?'' ಎಂಬ ತ್ವೇಷದ ಉದ್ಗಾರವು ಸಹಜವಾಗಿ ಸಭಿಕರ ಕರ್ಣರಂಧ್ರವನ್ನು ಪ್ರವೇಶಿಸಿತು. ಆಗ ವಿರೂಪಾಕ್ಷಾರ್ಯರು—''ಯಾರಿಗಾದರೂ ತ್ವೇಷ ಉಂಟಾಗುವದೇ ಸರಿ'' ಎಂದು ನುಡಿಯುತ್ತ ಮಾಧವಾಚಾರ್ಯರ ಕಡೆಗೆ ನೋಡಲು, ಆಚಾರ್ಯರು ವಿನಯದಿಂದ—''ಆರ್ಯವರ, ತಮ್ಮಂಥ ಸತ್ವಸ್ಥರ ಚಿತ್ತವೂ ಕ್ಷೋಭಿಸುವಷ್ಟು ಅಪಮಾನವು ನಾಯಬನ ಪತ್ರದಲ್ಲಿರುವದು ನಿಜವು. ಆದರೆ ಮಹಾತ್ಮನ್, ಕಾರ್ಯಾರ್ಥಿಗಳಾದ ನಾವು ಕಾಲಕ್ಕನುಸರಿಸಿ ನಡೆಯಬೇಕಾಗಿರುವದು'' ಎಂದು ನುಡಿದು ಸಭೆಯನ್ನುದ್ದೇಶಿಸಿ ಗಾಂಭೀರ್ಯದಿಂದ—''ವೀರರೇ, ಮೊದಲು ಖಡ್ಗಗಳನ್ನು ಒರೆಗಾಣಿಸಿರಿ; ಇದು ಖಡ್ಗ ಹಿರಿಯುವ ಸಮಯವಲ್ಲ'' ಎಂದು ಆಜ್ಞಾಪಿಸಿದ ಕೂಡಲೆ, ಹುಕ್ಕನೇ ಮೊದಲಾದ ವೀರರು ತಲೆಬಾಗಿ ತಮ್ಮ ರಾಷ್ಟ್ರ ಗುರುವಿನ ಅಪ್ಪಣೆಯನ್ನು ಮನ್ನಿಸುವದಕ್ಕಾಗಿ ಕೂಡಲೆ ಖಡ್ಗಗಳನ್ನು ಒರೆಗಾಣಿಸಿದರು. ಆಗ ಮಾಧವಾಚಾರ್ಯರು ನಗೆಮೊಗದಿಂದ ಸಭಿಕರನ್ನು ಕುರಿತು— ''ವೀರರೇ, ನಿಮ್ಮ ಈ ವೀರಾವೇಶವು ಅಯೋಗ್ಯವೆಂದು ನಾನು ಹೇಳುವದಿಲ್ಲ; ಆದರೆ ಮಲಿಕನಾಯಬನ ತಪ್ಪು ತಿಳುವಳಿಕೆಯನ್ನು ದೂರಮಾಡದಿದ್ದರೆ ಕನ್ನಡಿಗರಿಗೆ ಒಂದು ಬಗೆಯ ಅಗೌರವವು ಬರುತ್ತಿರುವದು; ಯಾಕಂದರೆ ನಾಯಬನು ತನ್ನ ಮನಸ್ಸಿನಲ್ಲಿ—''ಕರ್ನಾಟಕದ ಜಾಗ್ರತಿಯು ಯವನರಾದ ತಮ್ಮ ಕ್ರೌರ್ಯಾಚರಣೆಯ ಮೂಲಕ ತಾನಾಗಿ ಉಂಟಾಗಿರುವದೆಂತಲೂ, ವಿವೇಕಿಗಳಾದ ಕನ್ನಡಿಗರು ದೇಶದ ಸ್ವಾತಂತ್ರ್ಯ ರಕ್ಷಣಕ್ಕಾಗಿ ಸ್ವಯಂಸ್ಫೂರ್ತಿಯಿಂದ ಸ್ವಾರ್ಥತ್ಯಾಗ ಮಾಡುತ್ತಿರುವರೆಂತಲೂ ತಿಳಿಯದೆ, ಮಾಧವಾ ಚಾರ್ಯನೆಂಬ ಒಬ್ಬ ಸಾಮಾನ್ಯ ಬ್ರಾಹ್ಮಣನು ನಾನು ಎಲ್ಲ ಜಾಗ್ರತಿಯ ಮೂಲವೆಂದೂ, ನನ್ನೊಬ್ಬನನ್ನು ದೇಶ ಬಿಟ್ಟು ಹೊರಡಿಸಿಬಿಟ್ಟರೆ ಕನ್ನಡಿಗರು ನಿರ್ಜೀವರಾಗುವರೆಂದೂ ತಿಳಿದಿರುವನು; ಒಟ್ಟಿಗೆ ಕನ್ನಡ ವೀರರು ನೀವೆಲ್ಲರು ಕೇವಲ ಎರವಿನ ಆವೇಶದವರಾದ್ದರಿಂದ ನಿಮ್ಮಲ್ಲಿ ಉತ್ಪನ್ನವಾಗಿರುವ ಜಾಗ್ರತಿಯು ನಿಜವಾದ ಜಾಗ್ರತಿಯಲ್ಲವೆಂದು ನಾಯಬನು

ತಿಳಿದಿರುವನು. ರಾಷ್ಟ್ರದ ಕಾರ್ಯದ ಭಾರವನ್ನು ಸ್ವಯಂಸ್ಫೂರ್ತಿಯ ಸಾಮರ್ಥ್ಯದಿಂದ ವಹಿಸಿ ಅದನ್ನು ನಿರ್ವಹಿಸುವ ಯೋಗ್ಯತೆಯು ನಿಮ್ಮಲ್ಲಿಲ್ಲವೆಂಬುದು ನಾಯಬನ ಗ್ರಹಿಕೆಯು! ಅಂತೇ ಆತನು ಹೀಗೆ ಪ್ರತ್ಯಕ್ಷ ಪತ್ರ ಬರೆದು ಕರ್ನಾಟಕವು ಸತ್ವಹೀನವೆಂದು ಸ್ಪಷ್ಟವಾಗಿ ತೋರಿಸಿರುತ್ತಾನೆ. ನಾಯಬನ ಈ ಭಾವನೆಯು ಸತ್ಯವಿದ್ದ ಪಕ್ಷದಲ್ಲಿ, ನಿಮ್ಮಂಥ ಸತ್ವಹೀನರ ಮಾರ್ಗದರ್ಶಕ ನಾಗಲು ನನ್ನ ಮನಸ್ಸು ಹಿಂಜರಿಯುತ್ತದೆ! ಆದರೆ ಶೂರರಾದ ಕನ್ನಡಿಗರೇ, ನೀವು ಹಾಗೆ ಪರಪ್ರತ್ಯಯನೇಯ ಬುದ್ಧಿಯವರೂ, ವಿವೇಕವಿಲ್ಲದೆ ಕುರಿಗಳಂತೆ ಒಬ್ಬರನ್ನು ಅನುಸರಿಸಿ ಹೋಗುವವರೂ ಎಂದು ನಾನು ಸರ್ವಥಾ ತಿಳಿದಿರುವುದಿಲ್ಲ; ನಿಜವಾಗಿ ನೀವು ಅಂಥವರು ಇರುವದೂ ಇಲ್ಲ; ಆದರೆ ನನ್ನ ಈ ಭಾವನೆಯಸತ್ಯತೆಯ ಅನುಭವವನ್ನು ನೀವು ಈಗ ನನ್ನ ಮುಂದೆ ಕತ್ತಿ ಹಿರಿದು ನನಗೆ ಮಾಡಿಕೊಡುವದಕ್ಕಿಂತ ನನ್ನ ಪಶ್ಚಾತ್ ನಾಯಬನಿಗೆ ಮಾಡಿಕೊಡುವ ದರಲ್ಲಿಯೇ ಕರ್ನಾಟಕದ ನಿಜವಾದ ಪೌರುಷವೂ, ಹಿತವೂ ಇರುತ್ತದೆ! ಬರಿಯ ಒಬ್ಬಾನೊಬ್ಬ ಅಲೌಕಿಕ ಮಹಾತೇಜಸ್ವಿಯ ಪ್ರಭಾವದಿಂದ ಯಾವದೊಂದು ರಾಷ್ಟ್ರದ ಉತ್ಕರ್ಷವು ಮಿಂಚಿನಂತೆ ಕ್ಷಣಮಾತ್ರ ಹೊಳೆದುಹೋದ ಮಾತ್ರದಿಂದ, ಆ ರಾಷ್ಟ್ರದ ನಿಜವಾದ ಶಾಶ್ವತ ಉತ್ಕರ್ಷವಾಗಲಾರದು; ಹಾಗಾಗಬೇಕಾದರೆ ರಾಷ್ಟ್ರದೊಳಗಿನ ವ್ಯಕ್ತಿಗಳಲ್ಲಿ ಬಹು ಜನರು ಧರ್ಮಪ್ರೇರಿತ ತೇಜಸ್ವಿಗಳಾಗಿರಬೇಕಾಗುವದು. ವಿವೇಕಿಗಳಾದ ಕನ್ನಡಿಗರೇ, ನನ್ನ ಅನುಯಾಯಿಗಳಾದ ನಿಮ್ಮನ್ನು ನಾನು ಕುರಿಗಳೆಂದು ತಿಳಿದಿರುವದಿಲ್ಲ, ರಾಷ್ಟ್ರದ ಸ್ವಾತಂತ್ರ್ಯರಕ್ಷಣಕ್ಕಾಗಿ ಏಕೋಭಾವದಿಂದ ಆಲೋಚಿಸುತ್ತಿರುವ ನನಗೆ ದೈವೀಪ್ರೇರಣೆಯಿಂದ ಹೊಳೆದ ಮಾರ್ಗವನ್ನು ನಾನು ನಿಮಗೆ ತೋರಿಸಲು, ನಾನು ತೋರಿಸುವ ಆ ಮಾರ್ಗಕ್ಕಿಂತ ಮಾರ್ಗದರ್ಶಕನಾದ ನನಗೆ ಹೆಚ್ಚು ಮಹತ್ವಕೊಟ್ಟು ನೀವಾದರೂ ದೈವೀ ಪ್ರೇರಣೆಯಿಂದಲೇ ಸದ್ಭಾವದಿಂದ ನನ್ನ ಆಜ್ಞಾಪಾಲನ ಮಾಡುತ್ತಿರುವಿರಿ; ಇದರಿಂದ ಕರ್ನಾಟಕದ ಒಕ್ಕಟ್ಟು ವಿಲಕ್ಷಣವಾಗಿ ಬೆಳೆಯಹತ್ತಿ ಅದರಿಂದ ಮಲಿಕನಾಯಬನಂಥ ವಿವೇಕಿಯಾದ ಸುಭೇದಾರನನ್ನೂ ಅವಿವೇಕಿಯಾಗಿ ಮಾಡುವಷ್ಟು ಕರ್ನಾಟಕವು ಬಲಿಷ್ಠವಾಗುತ್ತಿರುವದು! ವೀರರೇ, ನಿಮ್ಮ ಕೃತಿಗಳಿಂದ ಶತ್ರುಗಳು ಕ್ಷೋಭಿಸಿ ವಿಕಾರವಶನಾಗಿ ಅನನ್ವಿತ ಕೃತ್ಯ ಮಾಡಹತ್ತಿದ ಮಾನದಿಂದ ನಿಮ್ಮ ಬಲವು ಹೆಚ್ಚುವದೆಂದು ತಿಳಿಯಿರಿ! ದುಷ್ಟ ಸರ್ಪವು ಕೋಲಿನ ಪೆಟ್ಟು ಬಿದ್ದಾಗಲೇ ಭುಸುಗುಟ್ಟುವದಲ್ಲವೆ? ಆದ್ದರಿಂದ ಮಲಿಕನಾಯಬನು ಇಷ್ಟು ಅಟ್ಟಹಾಸದಿಂದ ಪ್ರಚಂಡ ಸೈನ್ಯವನ್ನು ಕಳಿಸಿ, ಮೂಗುಕೊಯ್ದು ಅಪಮಾನ ಮಾಡುವಂತೆ, ನನ್ನನ್ನು ಸೆರೆಹಿಡಿದು ಕರ್ನಾಟಕವನ್ನು ಅವಮಾನಗೊಳಿಸಲು ಯತ್ನಿಸುವನು; ಆದರೆ ಕನ್ನಡ ವೀರರೇ, ಕರ್ನಾಟಕದ ಮೂಗು ಕೊಯ್ಯಹೋಗಿ ನಾಯಬನು ತನ್ನ ಮೂಗನ್ನು ತಾನೇ ಕೊಯ್ದುಕೊಂಡು ಪಶ್ಚಾತ್ತಾಪಪಡುವಂತೆ ನನ್ನ ಪಶ್ಚಾತ್ ನೀವು ಮಾಡಿದರೆ ಮಾತ್ರ ನೀವು ನನ್ನ ನಿಜವಾದ ಅನುಯಾಯಿಗಳೂ, ಈ ಆರ್ಯದ್ವಯರ ಅನುಗ್ರಹಕ್ಕೆ ಪಾತ್ರರಾದವರೂ ಎಂದು ನಾನು ತಿಳಿಯುವೆನು. ಯಾರಿಗೆ ಗೊತ್ತು, ನನ್ನ ಅನುಯಾಯಿಗಳೆನಿಸುವ ನೀವು ನಾಯಬನ ಭಾವನೆಯಂತೆ ಹುರುಳಿಲ್ಲದವರಿದ್ದರೆ, ಬಂಗಾರವೆಂದು ನಂಬಿ ಹೊಂಬ ಹಿತ್ತಾಳೆಯನ್ನು, ಅಥವಾ

ರತ್ನವೆಂದು ತಿಳಿದು ಕಾಜನ್ನು, ಅಥವಾ ಸಿಂಹವೆಂದು ತಿಳಿದು ಸಿಂಹದ ತೊಗಲು ಹೊದ್ದ ನರಿಯನ್ನು ನಾನು ಸಂಗ್ರಹಿಸಿದಂತಾದೀತು! ಈಗ ಒಂದೇ ಸವನೆ ನಾನು ಉಪದೇಶಿಸಿರುವಂತೆ ನನ್ನ ಪಶ್ಚಾತ್ ನಡೆಯುವವರು ನೀವು ಎಷ್ಟು ಜನರಿರುವಿರೆಂಬದನ್ನು ನಾನು ಪರೀಕ್ಷಿಸಿಯೇ ತೀರುವೆನು. ಪ್ರಿಯ ದೇಶಬಾಂಧವರೇ, ಸ್ವಂತದ ರೆಕ್ಕೆಯ ಸಾಮರ್ಥ್ಯದಿಂದ ಆಕಾಶದಲ್ಲಿ ಉಡ್ಡಾಣ ಮಾಡಲಾರದ ಕ್ಷುದ್ರರ ವದೆಯನ್ನು ಗರುಡಪಕ್ಷಿಯೆಂದು ತಿಳಿದು ಊದಿ ಊದಿ ಅದನ್ನು ಆಕಾಶದಲ್ಲಿ ಹಾರಿಸಿದರೆ ಅದು ಎಷ್ಟು ಹೊತ್ತು ಹಾರೀತು? ಹಾಗೆ ಹಾರಿಸುವವರಾದರೂ ಅದನ್ನು ಎಷ್ಟು ಹೊತ್ತು ಹಾರಿಸಿಯಾರು? ಆದ್ದರಿಂದ ಮಲಿಕನಾಯಬನಂಥ ಯೋಗ್ಯ ಒರೆಗಾರನು ಅನಾಯಾಸವಾಗಿ ನಮ್ಮ ಅನುಯಾಯಿಗಳೆನಿಸುವ ನಿಮ್ಮ ಒರೆಹಚ್ಚಬೇಕೆನ್ನುತ್ತಿರುವನು; ಆದ್ದರಿಂದ ಈವರೆಗೆ ಪಟ್ಟ ನನ್ನ ಶ್ರಮವು ಗಾಳಿಯನ್ನು ಗುದ್ದಿ ನೋವು ಮಾಡಿಕೊಂಡಂತೆ ವ್ಯರ್ಥವಾದದ್ದೋ, ಅಥವಾ ನಿಜವಾಗಿಯೇ ಸತ್ಪರಿಣಾಮಕಾರಿಯಾದದ್ದೋ ಎಂಬದನ್ನು ನಾನು ಪರೀಕ್ಷಿಸಿಯೇಬಿಡುವೆನು. ಅದಕ್ಕಾಗಿ ನಾನು ಮಲಿಕನಾಯಬನ ಇಚ್ಛೆಯಂತೆ ಅವನ ಪತ್ರದ ಉತ್ತರವಾಗಿ ನಾಳೆ ಬೆಳಗಿನ ಅನುಷ್ಠಾನವನ್ನು ತೀರಿಸಿಕೊಂಡು ಶತ್ರುಗಳ ಸೈನ್ಯವನ್ನು ಸೆರೆಯಾಳಾಗಿ ಸೇರಿಬಿಡುತ್ತೇನೆ; ಇದರಲ್ಲಿ ಸರ್ವಥಾ ಅಂತರವಾಗಲಿಕ್ಕಿಲ್ಲ! ಯಾಕೆ, ಕನ್ನಡ ವೀರರೇ, ನನ್ನ ವಿಯೋಗಕ್ಕಾಗಿ ನಿಮ್ಮ ಹೃದಯವು ಕಂಪಿಸುತ್ತಿರುವದೋ? ನಾನು ಹೋದರೆ ಹ್ಯಾಗೆ ಮಾಡಬೇಕೆಂದು ನೀವು ಶಂಕಿಸುತ್ತಿರುವಿರೋ? ಹಾಗೆ ನೀವು ಕಂಪಿಸುತ್ತಿದ್ದರೆ–ಶಂಕಿಸುತ್ತಿದ್ದರೆ, ಸತ್ವಹಾರಕವಾದ ನಿಮ್ಮ ಆ ಭಯ–ಶಂಕೆಗಳನ್ನು ದೂರಮಾಡುವದಕ್ಕಾಗಿ ನಾನು ನಾಳೆಗೆ ಸಂತೋಷದಿಂದ ಶತ್ರುಗಳ ಕೈಸೇರುವದು ನಿಶ್ಚಯವು!''

ಈ ಮೇರೆಗೆ ನುಡಿದು ಮಾಧವಾಚಾರ್ಯರು ಕ್ಷಣ ಸುಮ್ಮನಿದ್ದು ಮತ್ತೆ ಸಭಿಕರನ್ನು ಕುರಿತು– ''ಪ್ರಿಯ ಕನ್ನಡಿಗರೇ, ಸ್ವತಃ ನನ್ನ ಸಲುವಾಗಿ ನೀವು ಸರ್ವಥಾ ಚಿಂತಿಸಬೇಡಿರಿ; ನನ್ನಂಥ ಒಬ್ಬ ಕರ್ಮಠ ಬ್ರಾಹ್ಮಣನನ್ನು ವಿವೇಕಿಯಾದ ಮಲಿಕನಾಯಬನು ತನ್ನ ಪದರಿನಲ್ಲಿ ಇಟ್ಟುಕೊಂಡಿದ್ದ ಒಬ್ಬಾನೊಬ್ಬ ಪಂಡಿತನಂತೆ ನಡಿಸಿಕೊಂಡು, ಎರಡನೆಯ ಕಡೆಗೆ ನಾನು ಹೋಗದಂತೆ ನನ್ನನ್ನು ಬಿಗಿಯಾದ ಕಾವಲಿನಲ್ಲಿ ಇರಿಸಿಯಾನಲ್ಲದೆ, ನನ್ನನ್ನು ಯಾವ ಬಗೆಯಿಂದಲೂ ಹಿಂಸಿಸಲಿಕ್ಕಿಲ್ಲ. ಹೀಗೆ ಮಾಡದೆ ಒಂದಿಲ್ಲ ಒಂದು ಬಗೆಯಲ್ಲಿ ನನ್ನನ್ನು ಹಿಂಸಿಸಿದರೆ, ಅಥವಾ ನನ್ನನ್ನು ತೋಪು ತುಬಾಕಿಗಳ ಬಾಯಿಗೆ ಕೊಟ್ಟರೆ ಆಗುವ ಹಾನಿಯೇನು? ಈಶ್ವರೀಸಂಕೇತದಂತೆ ಈಗ ಕರ್ನಾಟಕದ ಉದ್ಧಾರದ ಕಾಲವೇ ಒದಗಿರುವದರಿಂದ ನಾನು ಹೋದರೆ ನನ್ನ ತಲೆಮೆಟ್ಟಿ ಹಾರುವಂಥವರು ರಾಷ್ಟ್ರಕಾರ್ಯಕ್ಕಾಗಿ ಬೈಲಿಗೆ ಬರುವರೆಂದು ನಾನು ನಂಬಿದ್ದೇನೆ. ಇಂಥ ತೇಜಸ್ವಿಗಳಾದ ರಾಷ್ಟ್ರಭಕ್ತರನ್ನು ಹಡೆಯಲಾರದಷ್ಟು ಅಧಮಸ್ಥಿತಿಗೆ ಕರ್ನಾಟಕ ಭೂಮಾತೆಯು ಇನ್ನೂ ಹೋಗಿರುವದಿಲ್ಲವೆಂದು ನಾನು ತಿಳಿದಿರುವೆನು! ದೇಶಭಕ್ತರೇ, ಬೇರೆ ಯಾವ ಮುಂದಾಳುಗಳೂ ನಿಮಗೆ ದೊರೆಯದಿದ್ದರೆ, ನಮೆಲ್ಲರನ್ನು ಅನುಗ್ರಹಿಸಿ ಇಲ್ಲಿಯವರೆಗೆ ದಯಮಾಡಿಸಿರುವ ಈ ಆರ್ಯದ್ವಯರು ನಿಮ್ಮನ್ನು ಮತ್ತೂ ಅನುಗ್ರಹಿಸಲು ಸಿದ್ಧರಿರುವರಲ್ಲ! ನಾನು ಹೋಗುವದ ರಿಂದ ಕರ್ನಾಟಕವು ನಿಜವಾಗಿಯೇ ಪರದೇಶಿಯಾಗುತ್ತಿದ್ದರೆ, ಈ ಮಹಾತ್ಮರಿಬ್ಬರು ತಮ್ಮ

ಲಿಂಗಾರಾಧನರೂಪವಾದ ಸಾತ್ವಿಕ ತಪಶ್ಚರ್ಯವನ್ನು ಬಿಟ್ಟು, ರಾಜಸವಾದ ನಿಮ್ಮ ರಾಜಕೀಯ ವ್ಯವಹಾರದಲ್ಲಿ ಸೇರಿ ನಿಶ್ಚಯವಾಗಿ ನಿಮಗೆ ಮಾರ್ಗ ತೋರಿಸುವರು! ಪ್ರಿಯ ಕನ್ನಡಿಗರೇ, ಕರ್ನಾಟಕವು ನಮಗೆಷ್ಟು ಪ್ರಿಯವೋ, ಅಷ್ಟೇ ಈ ಆರ್ಯರಿಗೂ ಪ್ರಿಯವಾಗಿರುವದು. ನಿಜವಾಗಿ ನೋಡಿದರೆ ಬಾಯಿ ಪೌರುಷದ ಬ್ರಾಹ್ಮಣರಿಗಿಂತ ಬಾಹುಬಲದ ಈ ಬ್ರಾಹ್ಮಣೇತರರ ಸುಖದ ಸಲುವಾಗಿಯೇ ಈ ಕರ್ನಾಟಕವು ಇರುತ್ತದೆಂತಲೂ,ಸಂಖ್ಯಾ ಬಾಹುಲ್ಯವನ್ನು ನೋಡಿದರೆ ಬ್ರಾಹ್ಮಣೇತರರರದೇ ಈ ಕರ್ನಾಟಕವು ಇರುತ್ತದೆಂತಲೂ ಹೇಳಬೇಕಾಗುವದು! ನಾನು ಸ್ಮಾರ್ತ ವೈದಿಕನು,ಆರ್ಯರು ವೀರಶೈವ ವೈದಿಕರು, ನೀವೆಲ್ಲರೂ ಒಂದಿಲ್ಲೊಂದು ಬಗೆಯ ವೈದಿಕರೇ ಆಗಿರುವಿರಿ. ನಿಮ್ಮಲ್ಲಿ ಯಾರು ವೈದಿಕಧರ್ಮಕ್ಕಾಗಿ ಮುಂದುವರಿದು ಕರ್ನಾಟಕವನ್ನು ಉದ್ಧರಿಸಿ, ಕೇವಲ ವೈದಿಕರ ಸ್ವಾತಂತ್ರ್ಯವನ್ನಷ್ಟೇ ಅಲ್ಲ ಕನ್ನಡಿಗರೆನಿಸುವ ಅನ್ಯ ಧರ್ಮದವರ ಸ್ವಾತಂತ್ರ್ಯವನ್ನೂ ರಕ್ಷಿಸುವಿರೋ ಅವರಿಗೆ ಕರ್ನಾಟಕವು ಅಗ್ರಮಾನವನ್ನು ಕೊಡುವದು; ಅವರಿಗೇ ಅದು ಕೃತಜ್ಞವಾಗುವದು; ಅವರೇ ಕನ್ನಡಿಗರ ಸ್ವಾತಂತ್ರ್ಯವನ್ನು ಕಾಯ್ದು ಎಲ್ಲರನ್ನೂ ತಮ್ಮವರನ್ನಾಗಿ ಮಾಡಿಕೊಂಡರೆಂದು ಅದು ಸನ್ಮಾನಿಸುವದು! ಆದ್ದರಿಂದ ಕನ್ನಡಿಗರೇ, ಈ ನೆರೆದ ದರ್ಬಾರದಲ್ಲಿ ಬುದ್ಧಿವಂತರೆನಿಸುವ ಬ್ರಾಹ್ಮಣರಿರುವಿರಿ; ಬಲವಂತರೆನಿಸುವ ಬ್ರಾಹ್ಮಣೇತರರೂ ಇರುವಿರಿ! ಅಲ್ಲದೆ ಎಲ್ಲರೂ ಈಗ ನಾಲ್ಕು ದಿನ ನಡೆದಿರುವ ಉಪನ್ಯಾಸದ ವ್ಯವಹಾರದಲ್ಲಿ ವ್ಯವಹರಿಸಿರುವಿರಿ; ಆದ್ದರಿಂದ ನೀವು ಯಾರು ರಾಷ್ಟ್ರೋದ್ಧಾರದ ಕಾರ್ಯದಲ್ಲಿ ಮುಂದುವರಿಯುವಿರಿ, ಯಾರು ರಾಷ್ಟ್ರೋದ್ಧಾರದ ಕಾರ್ಯಕ್ಕಾಗಿ ಸರ್ವಸ್ವದ ತ್ಯಾಗ ಮಾಡಿ ಲೋಕಮಾನ್ಯರಾಗುವಿರಿ, ಯಾರು ರಾಷ್ಟ್ರೋದ್ಧಾರದ ಕಾರ್ಯಕ್ಕಾಗಿ ಅನ್ಯರನ್ನು ಪ್ರೋತ್ಸಾಹಿಸಿ ಲೋಕಸಂಗ್ರಹಮಾಡಿ ಕರ್ನಾಟಕದಲ್ಲಿ ಒಕ್ಕಟ್ಟು ಬಳಿಸುವಿರಿ ಎಂಬುದನ್ನು ನೋಡುವಂತೆ, ಯಾರು ಅಂತರಂಗದಲ್ಲಿ ನೀಚಸ್ವಾರ್ಥದ ಬಲೆಗೆ ಬಿದ್ದು ಇಲ್ಲದ ಯಾವದೊಂದು ಕುಂಟನೆವ ಹೇಳಿ ಕಣ್ಣುಮುಚ್ಚಿಕೊಂಡು ಹಾಲು ಕುಡಿಯುವ ಕಳ್ಳ ಬೆಕ್ಕಿನಂತೆ ಸಂಪನ್ನಗಿರಿಯ ಸೋಗಿನಿಂದ ರಾಷ್ಟ್ರೋದ್ಧಾರದ ಕಾರ್ಯದಿಂದ ಅಂಗವನ್ನು ತಕ್ಕೊಳ್ಳುವಿರಿ; ಯಾರು ಹುರುಳಿಲ್ಲದ ಮೋಸದ ರಾಜಭಕ್ತಿಯ ನೆವದಿಂದ ಹಣ-ಕಾಸುಗಳನ್ನು ಮನೆಯಲ್ಲಿ ತುಂಬಿಕೊಂಡು ತಥ್ಯವಿಲ್ಲದ ಅಧಿಕಾರ-ಪ್ರತಿಷ್ಠೆಗಳಿಂದ ನಾಚಿಕೆಯಿಲ್ಲದೆ ಮೆರೆಯುವಿರಿ, ಯಾರು ಬೋದ್ಧ್ಯರ ಹಿತ ಸಾಧಿಸುವವರಂತೆ ನಟಿಸಿ ಪರ್ಯಾಯದಿಂದ ರಾಷ್ಟ್ರದ್ರೋಹಕ್ಕಾಗಿ ಅನ್ಯರನ್ನು ಪ್ರೋತ್ಸಾಹಿಸಿ ಕನ್ನಡಿಗರಲ್ಲಿ ಪರಸ್ಪರ ಒಡಕು ಹೆಚ್ಚಿಸುವಿರಿ, ಎಂಬುದನ್ನು ನನ್ನೊಡನೆ ಕರ್ನಾಟಕವೂ, ಬೇರೆ ನೆರೆಯ ಸ್ವತಂತ್ರ ರಾಷ್ಟ್ರಗಳೂ ನೋಡುವವು; ಆದ್ದರಿಂದ ಪ್ರಿಯ ದೇಶಬಾಂಧವರೇ, ನಿಮ್ಮೆಲ್ಲರ ಯೋಗ್ಯತೆಯನ್ನು ಪರೀಕ್ಷಿಸುವದಕ್ಕಾಗಿ ನಾನು ಈ ಆರ್ಯದ್ವಯರಿಗೆ ಬಿನ್ನಯಿಸಿಕೊಂಡು ಮಲ್ಲಿಕ ನಾಯಬನ ಸೆರೆಮನೆಯನ್ನು ಸ್ವರಾಜ್ಯವೆಂದು ಸಂತೋಷದಿಂದ ಪ್ರವೇಶಿಸುವೆನು; ಯಾಕಂದರೆ ಪರತಂತ್ರರಿಗೆ ಸೆರೆಮನೆಯೇ ಸ್ವರಾಜ್ಯವು ! ಮರುಳರಾದ ಎಷ್ಟೋ ಪರತಂತ್ರರಿಗೆ ಕುಟಿಲ ರಾಜತಂತ್ರದ ಒನಪು-ಒಯ್ಯಾರಗಳಿಂದ ಪಾರತಂತ್ರ್ಯದಲ್ಲಿಯೂ ಸ್ವಾತಂತ್ರ್ಯದ ಭಾಸವಾಗುತ್ತಿರುತ್ತದೆ; ಆದರೆ ಸೆರೆಮನೆಯಲ್ಲಿ ಹೀಗೆ ಭಾಸವಾಗಲಿಕ್ಕೆ ಮಾರ್ಗವಿಲ್ಲದ್ದರಿಂದ ಪಾರತಂತ್ರ್ಯದ ಪರಿಜ್ಞಾನಕ್ಕೆ ಅಲ್ಲಿ ಆಸ್ಪದ ದೊರೆತು,

ಪರತಂತ್ರರಾದ ನಮಗೆ ಸೆರೆಮನೆಯವಾಸವೂ ಅಷ್ಟೇ, ಸ್ವಕೀಯ ಮನೆಯ ವಾಸವೂ ಅಷ್ಟೇ; ಆದ್ದರಿಂದ ನಮ್ಮ ಪರತಂತ್ರದ ಸ್ವರಾಜ್ಯವು ಸೆರೆಮನೆಯೇ ಸರಿಯೆಂಬ ಜ್ಞಾನವಾಗುತ್ತದೆ !''

ಆಚಾರ್ಯರ ಈ ನಿರ್ಧಾರದ ಉದಾತ್ತ ವಿಚಾರದ ಭಾಷಣವನ್ನು ಕೇಳಿ ಸಭೆಯು ಸ್ತಬ್ಧವಾಯಿತು. ವೇಗದಿಂದ ಓಡುವ ಕುದುರೆಯು ಗಕ್ಕನೆ ನಿಂತರೆ ಮೇಲೆ ಕುಳಿತವನ ಸ್ಥಿತಿಯಾಗುವಂತೆ ಜನರ ಮನಸ್ಸಿನ ಸ್ಥಿತಿಯಾಯಿತು. ''ಇಂದು ಕಂಪಲಿಯನ್ನು ಯುಕ್ತಿಯಿಂದ ವಶಮಾಡಿಕೊಂಡೆವು; ನಾಳೆ ಕಾಂಚನಗಡವನ್ನು ಶಕ್ತಿಯಿಂದ ವಶಮಾಡಿಕೊಂಡು ಮುಸಲ್ಮಾನರನ್ನು ಕರ್ನಾಟಕದಿಂದ ಹೊರಗೆ ಓಡಿಸುವೆವು'' ಎಂಬ ಉತ್ಸಾಹಜನಕ ವಿಚಾರಗಳಿಂದ ಉಬ್ಬುತ್ತಿರುವಾಗ, ಹೀಗೆ ಆಚಾರ್ಯರು ತಾವಾಗಿ ಶತ್ರುಗಳ ಕೈ ಸೇರುವೆವೆಂದು ಹೇಳಿದ್ದರಿಂದ ಜನರನ್ನು ಒಮ್ಮೆಲೆ ನೆಲಕ್ಕೆ ಕುಕ್ಕರಬಡಿದಂತಾಯಿತು ! ''ಇದ್ದೇನೆಂದರೆ ಆನೆಯಷ್ಟು ಬಲ'' ಎಂಬ ಲೋಕೋಕ್ತಿಯಂತೆ ಆಚಾರ್ಯರು ಎಲ್ಲಿಯೇ ಇರಲಿ, ಅವರು ಇರುವರೆಂಬ ಧೈರ್ಯದಿಂದ ಕನ್ನಡಿಗರು ತಮ್ಮಲ್ಲಿ ಒಕ್ಕಟ್ಟು ಬೆಳಿಸಿಕೊಂಡು ದೇಶಕಾರ್ಯದಲ್ಲಿ ಉತ್ಸಾಹದಿಂದ ತೊಡಗುತ್ತಿದ್ದರು; ಆದರೆ ಆಚಾರ್ಯರಂಥ ಘನವಾದ ಯೋಗ್ಯತೆಯ ಮಾರ್ಗದರ್ಶಕರೇ ಹೋಗುವದರಿಂದ ಕನ್ನಡಿಗರಿಗೆ ಕಣ್ಣುಕಟ್ಟಿ ಅಡವಿಯಲ್ಲಿ ಬಿಟ್ಟ ಹಾಗೆ ಆಗುತ್ತಿದ್ದರೆ ಆಶ್ಚರ್ಯವಲ್ಲ. ಹೀಗೆ ಉತ್ಸಾಹಹೀನರಾಗಿ ಕುಳಿತಿದ್ದ ಕನ್ನಡಿಗರಲ್ಲಿ ಆಚಾರ್ಯರನ್ನು ಕುರಿತು ಎದ್ದು ನಿಂತು ಮಾತಾಡಲಿಕ್ಕೆ ಯಾರಿಗೆ ಧೈರ್ಯವಾಗಬೇಕು? ಎಲ್ಲ ಜನರು ಒಮ್ಮೆ ಆರ್ಯದ್ವಯರನ್ನು, ಒಮ್ಮೆ ಹುಕ್ಕ, ಕಾಶಿಮಖಾನ, ಕೃಷ್ಣನಾಯಕ ಮೊದಲಾದ ವೀರರನ್ನು ನೋಡುತ್ತ ಕುಳಿತುಕೊಂಡರು. ಅಂಥ ಯೋಗ್ಯತೆಯಿಲ್ಲದ ಸಾಮಾನ್ಯ ಜನರಿಗೆ ಆಚಾರ್ಯರ ತೇಜಸ್ಸಿನ ಮುಂದೆ ಸಭೆಯಲ್ಲಿ ಮಾತಾಡುವ ಧೈರ್ಯವು ಆಗುತ್ತಿದ್ದಿಲ್ಲ. ಮೇಲಾಗಿ ಹಾಗೆ ಶಿಷ್ಟಾಚಾರ ಬಿಟ್ಟು, ಸಿಕ್ಕವರು ಸಿಕ್ಕ ಹಾಗೆ ಮಾತಾಡುವ ಪರಿಪಾಠವೂ, ಹಾಗೆ ಮಾತಾಡಲಿಕ್ಕೆ ಅವಸರವೂ ಆಗಿನ ಸೌಜನ್ಯದ ನಯ– ಭಯ–ಭಕ್ತಿಯುಕ್ತಕಾಲದಲ್ಲಿ ಇರುತ್ತಿದ್ದಿಲ್ಲ. ಯೋಗ್ಯತೆ ಇಲ್ಲದೆ ಮಹಾಜನರ ಮುಂದೆ ಕಂಡ ಕಂಡವರು ಕಂಡ ಕಂಡ ಹಾಗೆ ಮಾತಾಡುವದು ಆಗ ಅಕ್ಷಮ್ಯವಾಗಿದ್ದಿಲ್ಲ. ಆಗಿನ ಕಾಲದಲ್ಲಿ ಸಭೆಯಲ್ಲಿ ನಿಯಮ್ಯರು ನಿಯಾಮಕರು ಎಂಬ ತಾರತಮ್ಯವು ಕಾಯಲ್ಪಡುತ್ತಿದ್ದದ್ದರಿಂದ, ನಿಯಾಮಕ ವರ್ಗದವರು ತಮಗೆ ಸರಿದೋರಿದ ವಿಚಾರಗಳನ್ನು ತಮ್ಮ ತಮ್ಮ ಯೋಗ್ಯತೆಗೆ ಒಪ್ಪುವಂತೆ ಹೇಳಬಹುದಾಗಿತ್ತಲ್ಲದೆ, ಮರ್ಯಾದೆಯ ಉಲ್ಲಂಘನ ಮಾಡಲವಕಾಶವಿರುತ್ತಿದ್ದಿಲ್ಲ. ನಿಯಮ್ಯರು ನಿಯಾಮಕರ ಸೂಚನೆಯಾದ ಹೊರತು ಮಾತನಾಡುವದು ಅಪರಾಧವೆನಿಸುತ್ತಿತ್ತು. ಆರ್ಯದ್ವಯರು, ಹುಕ್ಕ, ಬುಕ್ಕ, ಕೃಷ್ಣನಾಯಕ, ಕಾಶಿಮಖಾನ ಮೊದಲಾದ ನಿಯಾಮಕ ವರ್ಗದವರು ಕೂಡ ಆಚಾರ್ಯರ ಗಂಭೀರ ಭಾಷಣದಿಂದ ಮುಂದೆ ಮಾತಾಡಲಾರದಾಗಿದ್ದರು; ಆದರೂ ಹೇಳುವ ನಾಲ್ಕು ಮಾತುಗಳನ್ನು ಈಗ ಹೇಳದೆ ಇರಬಾರದೆಂದು ಅವರು ಆತುರಪಡುತ್ತಿದ್ದು, ''ನಾನು ಬೇಡ, ಆತನು ಹೇಳಲೆಂ''ದು ತಮ್ಮ ತಮ್ಮ ಮನಸ್ಸಿನಲ್ಲಿ ಅಂದುಕೊಳ್ಳುತ್ತಿರಲು, ಇದನ್ನರಿತು ವಿರೂಪಾಕ್ಷಾರ್ಯರು ವೀರವರ್ಗದ ಕಡೆಗೆ ನೋಡಿ—''ಯಾಕೆ? ಹುಕ್ಕ ದೊರೆಗಳು, ಕೃಷ್ಣನಾಯಕರು, ಕಾಶಿಮಖಾನರು ಸುಮ್ಮನೆ ಕುಳಿತಿರಲ್ಲ! ಅಥವಾ ಆಚಾರ್ಯರ ಭಾಷಣವು ನಿರ್ವಿವಾದವಾಗಿರಲು, ಅನ್ಯರು ಮಾತಾಡುವ

ದಾದರೂ ಏನು? ದೇಶಬಾಂಧವರೇ, ಆ ಮಹಾತ್ಮರ ಭಾಷಣವು ಇಡಿಯ ಕರ್ನಾಟಕಕ್ಕೇ ಭೂಷಣ ತರುವಂತಹದಾಗಿದೆಯೆಂಬುದು ಸುಳ್ಳಲ್ಲ. ನಿಜವಾದ ರಾಷ್ಟ್ರೋದ್ಧಾರವು ಒಬ್ಬ ಆಚಾರ್ಯವರ್ಯರಿಂದಾಗತಕ್ಕದ್ದಲ್ಲ. ಅದರಂತೆ, ಆಚಾರ್ಯರು ಬರಿಯ ಬಾಯಿಂದ ಹೇಳುತ್ತ, ನಾವು ಬರಿಯ ಕಿವಿಯಿಂದ ಕೇಳುತ್ತ ಎಷ್ಟು ದಿವಸ ಕುಳಿತರೂ ರಾಷ್ಟ್ರೋದ್ಧಾರವಾಗುವದಿಲ್ಲ; ರಾಷ್ಟ್ರೋದ್ಧಾರವೆಂದರೆ ರಾಷ್ಟ್ರದೊಳಗಿನ ಜನರ ಉದ್ಧಾರವಾಗಿರುವದರಿಂದ, ಕರ್ನಾಟಕಸ್ಥರೆಲ್ಲರು ಆತ್ಮತೇಜದಿಂದ ಪ್ರಕಾಶಿತರಾಗಲಿಕ್ಕೆ ಬೇಕು! ಆಚಾರ್ಯರ ಎದುರಿನಲ್ಲಿ ನಾವೆಲ್ಲರೂ ನಮ್ಮ ನಮ್ಮ ಕೆಲಸಗಳನ್ನು ಉತ್ಸಾಹದಿಂದ ಮಾಡುವದರಿಂದ ವ್ಯಕ್ತವಾಗುವ ಆಚಾರ್ಯರ ಮೇಲಿನ ನಮ್ಮ ಭಕ್ತಿಗಿಂತ, ಆಚಾರ್ಯರ ಹಿಂದೆ ನಾವೆಲ್ಲರೂ ನಮ್ಮ ನಮ್ಮ ಕರ್ತವ್ಯಗಳನ್ನು ಅವರು ತೋರಿಸಿ ಕೊಟ್ಟ ಮಾರ್ಗದಿಂದ ಮಾಡುವದರಿಂದ ವ್ಯಕ್ತವಾಗುವ ಆಚಾರ್ಯರ ಮೇಲಿನ ನಮ್ಮ ಭಕ್ತಿಯು ಶ್ರೇಷ್ಠತರದ್ದಾಗಿರುವದೆಂದು ನಿಸ್ಸಂಶಯವಾಗಿ ಹೇಳಬೇಕಾಗುವದು; ಯಾಕಂದರೆ ಆಚಾರ್ಯರಿರುವಾಗ ನಾವು ನಮ್ಮ ನಮ್ಮ ಕರ್ತವ್ಯಗಳನ್ನು ಆಚಾರ್ಯರ ಅನುಯಾಯಿಗಳಾಗಿ ಮಾಡಿದರೆ, ಆಚಾರ್ಯರಿಲ್ಲದಾಗ ಆ ನಮ್ಮ ಕರ್ತವ್ಯಗಳನ್ನು ನಾವು ಆಚಾರ್ಯರಾಗಿಯೇ ಮಾಡಬೇಕಾಗವದು. ಅಂದ ಬಳಿಕ ಆಚಾರ್ಯರ ಅನುಯಾಯಿಗಳೆಂದು ಹೇಳುವದಕ್ಕಿಂತ ಆಚಾರ್ಯರ ಕೃಪಾ ವಿಶೇಷದಿಂದ ಆಚಾರ್ಯರಾಗಿಯೇ ತೋರಿಸುವದರಲ್ಲಿ ವ್ಯಕ್ತಿದೃಷ್ಟಿಯಿಂದಲೂ, ಕಾರ್ಯ ದೃಷ್ಟಿಯಿಂದಲೂ, ಉದಾತ್ತ ವಿಚಾರದ ಆಚಾರ್ಯರ ದೃಷ್ಟಿಯಿಂದಲೂ ಹೆಚ್ಚು ಗೌರವ ವಿರುವದಲ್ಲವೆ? ರಾಷ್ಟ್ರದ ಮುಖಂಡನಿಗೂ, ಅವನ ಅನುಯಾಯಿಗಳಿಗೂ ಬಿಂಬ–ಪ್ರತಿಬಿಂಬ ಭಾವವಿರುವದರಿಂದ, ಬಿಂಬದ ಸರ್ವ ಲಕ್ಷಣಗಳು ಪ್ರತಿಬಿಂಬದಲ್ಲಿ ತೋರುತ್ತಿರಬೇಕಾಗುವದು. ಆಚಾರ್ಯರ ದೇಹಕ್ಕಿಂತ ಅವರ ವೃತ್ತಿಗೂ, ಬೋಧಕ್ಕೂ ಮಹತ್ವವಿರುವದು; ಯಾಕಂದರೆ ನಾವು ರಾಷ್ಟ್ರ ಕಾರ್ಯವನ್ನು ಮಾಡುವಾಗ ಆಚಾರ್ಯರ ಉಜ್ವಲ ವೃತ್ತಿಯನ್ನೂ, ಗೌರವದ ಬೋಧವನ್ನು ಸ್ಮರಿಸಬೇಕಾಗುವದಲ್ಲದೆ, ಅವರ ವೈರಾಗ್ಯ ಸಂಪನ್ನವಾದ ದೇಹವನ್ನು ಸ್ಮರಿಸಬೇಕಾಗುವದಿಲ್ಲ; ಅಂದರೆ ಅವರ ದೇಹವು ಕರ್ತವ್ಯ ನಿಷ್ಠರಿಗೆ ಮನಶ್ಶುದ್ಧಿಗೋಸ್ಕರ ಧ್ಯಾನಯೋಗ್ಯವಾಗಬಹುದಲ್ಲದೆ, ಅದು ಮಾರ್ಗದರ್ಶಕ ವಾಗಲಾರದು! ಕನ್ನಡಿಗರೇ, ತಿರುಗಿ ಕೇಳಿದರೆ ನಾಶವಂತ ದೇಹದೃಷ್ಟಿ ಯಿಂದ ನಮಗೂ ಆಚಾರ್ಯರಿಗೂ ಹೇಳಿಕೊಳ್ಳುವಂಥ ಅಂತರವಿಲ್ಲ ಅಂತರವಿದ್ದರೆ, ಅವರ ನಿಸ್ವಾರ್ಥಬುದ್ಧಿಯ ತಪಶ್ಚರ್ಯದಿಂದ ಪ್ರಾಪ್ತವಾಗಿದ್ದ ಅವರ ಅಗಾಧ ಜ್ಞಾನದ ದೃಷ್ಟಿಯಿಂದ ನಮಗೂ ಅವರಿಗೂ ಅಜಗಜ ನ್ಯಾಯದಂತೆ ಅಂತರವಿರುತ್ತದೆ; ಆದ್ದರಿಂದ ಅಗಾಧ ತಪಸ್ವಿಗಳೂ, ದಿವ್ಯಜ್ಞಾನ ಸಂಪನ್ನರೂ, ಲೋಕಹಿತೈಕನಿಷ್ಠರೂ ಆದ ಆಚಾರ್ಯರ ಸದ್ವೃತ್ತಿ–ಸದ್ಬೋಧ ಗಳನ್ನಷ್ಟು ನಮ್ಮ ಎದುರಿನಲ್ಲಿಟ್ಟುಕೊಂಡು ಅದರಂತೆ ನಡೆಯಬೇಕಾದರೆ ಆಚಾರ್ಯರು ನಮ್ಮ ಬೆನ್ನ ಮೇಲೆ ಇರುವದಕ್ಕಿಂತ ಅವರು ಕಾರಾಗೃಹದಲ್ಲಿರುವದು ಹೆಚ್ಚು ಕಾರ್ಯಕಾರಿಯಾಗುವದು! ಸೂರ್ಯಪ್ರಕಾಶದಲ್ಲಿ ನಕ್ಷತ್ರಗಳ ಪ್ರಕಾಶವು ಅಡಗಿ ಹೋಗುವದರಿಂದ ಆ ನಕ್ಷತ್ರಗಳು ಬೇರೆಯಾಗಿ ತೋರದೆ ಸೂರ್ಯ ಪ್ರಕಾಶದಲ್ಲಿಯೇ ಅಡಗಿ ಹೋಗಿ, ಪ್ರಕಾಶ ಹೀನವಾದ ಕಲ್ಲು–ಮಣ್ಣು ಮೊದಲಾದ ಸ್ವಯಂಪ್ರಕಾಶಹೀನ ಪದಾರ್ಥಗಳು ಮಾತ್ರ ನೋಡುವವರ

ಕಣ್ಣಿಗೆ ಸ್ಪಷ್ಟವಾಗಿ ತೋರುತ್ತವೆ. ಅದೇ ಬಗೆಯಾಗಿ ಆಚಾರ್ಯರಂತೆ ಸ್ವಪ್ರಕಾಶಕರಾದ ನಕ್ಷತ್ರರೂಪ ರಾಷ್ಟ್ರಭಕ್ತರು ಆಚಾರ್ಯರಿರುವಾಗ ಆಚಾರ್ಯರ ತೇಜಸ್ಸಿನಲ್ಲಿ ಅಂತರ್ಭೂತರಾಗುವದರಿಂದ, ಅಂದರೆ ಆಚಾರ್ಯರ ಆಜ್ಞಾಪಾಲನ ಧುರೀಣತೆಯಲ್ಲಿ ಆಚಾರ್ಯರೇ ಆಗಿ ಹೋಗುವದರಿಂದ, ಉಳಿದ ಪರಪ್ರಕಾಶಕರಾದ ಡಾಂಭಿಕ ಜನರೇ ಬಹು ಆರ್ಭಟದಿಂದ ಮೆರೆಯತೊಡಗುವರು! ಆದರೆ ಅದೇ ಆಚಾರ್ಯರೂಪ ದಿನಮಣಿಯು ಮರೆಯಾಗಲು, ಆಚಾರ್ಯರಂತೆ ಸ್ವಪ್ರಕಾಶದವರಾದ ನಕ್ಷತ್ರಪ್ರಾಯದ ನಿಜವಾದ ರಾಷ್ಟ್ರಭಕ್ತರು ಮಾತ್ರ ಆಚಾರ್ಯರಂತೆ ಲಕಲಕನೆ ಹೊಳೆಯಹತ್ತಿ, ಪರಪ್ರಕಾಶಕರಾದ್ದರಿಂದ ಕೇವಲ ಆಚಾರ್ಯರ ಪ್ರಕಾಶದಿಂದ ಹೊಳೆಯುತ್ತಿದ್ದ ಕಲ್ಲು- ಮಣ್ಣುಗಳಂತೆ ಜಡರಾದವರು ಗಾಢಾಂಧಕಾರದಲ್ಲಿ ಮುಣುಗಿ ದಿಕ್ಕುತೋರದೆ ಸಿಕ್ಕ ಸಿಕ್ಕ ಹಾದಿಯಿಂದ ಅಲೆದಾಡತೊಡಗುವರು ! ಆದ್ದರಿಂದ ಕನ್ನಡ ವೀರರೇ, ಆಚಾರ್ಯರು ನಿಮ್ಮನ್ನು ಒರೆಗೆ ಹಚ್ಚಿ ಪರೀಕ್ಷಿಸುವದಕ್ಕಾಗಿ ಶತ್ರುಗಳ ಕೈಸೇರುತ್ತಿರುವದು, ಅವರ ಘನವಾದ ತಪಸ್ಸಿದ್ಧಿಗೂ, ನಿಸ್ವಾರ್ಥ ಬುದ್ಧಿಗೂ ದೇಶಹಿತ ತತ್ಪರತೆಗೂ, ಅಗಾಧ ಜ್ಞಾನಕ್ಕೂ, ವಿಲಕ್ಷಣ ಧೈರ್ಯಕ್ಕೂ ಪರಮಭೂಷಣವಾಗಿರುತ್ತದೆ; ಆದ್ದರಿಂದ ನಾವು ಆಚಾರ್ಯರನ್ನು ಕರ್ನಾಟಕದ ಉದ್ಧಾರಕ್ಕಾಗಿ ಸೆರೆಮನೆಗೆ ಹೋಗಗೊಟ್ಟು, ನಾವೂ ಆಚಾರ್ಯರೇ ಆಗಿ ಕರ್ನಾಟಕವನ್ನು ಉದ್ಧರಿಸಿದಾಗ ಆಚಾರ್ಯರ ಸೆರೆಮನೆಯು ತಾನೇ ದೂರವಾಗಲು, ನಾವೂ ಅವರೊಡನೆ ಸೆರೆಮನೆಯಿಂದ ಮುಕ್ತರಾಗುವೆವು; ನಮ್ಮ ಮಾರ್ಗದರ್ಶಕರಾದ ಆಚಾರ್ಯರು ಸೆರೆಮನೆಯಲ್ಲಿರುವತನಕ ನಾವಿರುವ ಸ್ಥಳಗಳೆಲ್ಲ, ಅಂದರೆ ಇಡಿಯ ಕರ್ನಾಟಕವೇ ಸೆರೆಮನೆಯಾಗಿರುವದೆಂದು ತಿಳಿಯಿರಿ. ಅಂದಬಳಿಕ ಆಚಾರ್ಯರ ಕಾರಾಗೃಹವಾಸಕ್ಕಾಗಿ ನಾವು ಆಲೋಚಿಸುವದೇಕೆ? ಅವರ ಸೆರೆಮನೆಯ ಸೋಬತಿಯಿಂದ ನಮಗೇನಾದರೂ ಸಂತಾಪವಾಗಿದ್ದರೆ, ಅದನ್ನು ಕಾರ್ಯತಃ ನಾವು ತೋರಿಸೋಣ. ಕನ್ನಡ ವೀರರೇ, ನಮ್ಮ ದೇಶಬಾಂಧವರೂ, ಧರ್ಮಬಾಂಧವರೂ, ಆಪದ್ಬಾಂಧವರೂ ಅತಏವ ನಮ್ಮಿಂದ ಅಭಿನ್ನರಾಗಿರುವ ಆಚಾರ್ಯರು ಕಾರಾಗೃಹವಾಸದಿಂದ ಮುಕ್ತರಾಗುವತನಕ ದೇಶೋದ್ಧಾರದ ಕಾರ್ಯದಲ್ಲಿ ಅವರ ಸಹಚರನೆನಿಸುವ ಈ ವಿರೂಪಾಕ್ಷಾರ್ಯನು ಇನ್ನು ಮೇಲೆ ರಾಷ್ಟ್ರೋದ್ಧಾರಕ್ಕಾಗಿ ಪ್ರಸಂಗವಶಾತ್ ಮಾಡಬೇಕಾಗುವ ಕಾರ್ಯಗಳೇ ನನ್ನ ಲಿಂಗ ಪೂಜೆಯೆಂದು ತಿಳಿಯುವನು; ಯಾಕಂದರೆ, ಪೃಥಿವೀ, ಆಪ್, ತೇಜ, ವಾಯು, ಆಕಾಶ, ಸೂರ್ಯ, ಚಂದ್ರ, ಆತ್ಮಾ ಎಂಬವು ಶಿವನ ಅಷ್ಟಮೂರ್ತಿಗಳಿದ್ದು, ಅವುಗಳಲ್ಲಿ ಪೃಥ್ವೀರೂಪ ಕರ್ನಾಟಕ ಭೂಮಾತೆಯು ಶಿವಲಿಂಗ ಸ್ಥಾನದಲ್ಲಿ ಬರುವಳಲ್ಲದೆ, ಕರ್ನಾಟಕದ ಪಂಚ ಭೂತಾತ್ಮಕ ದೇಹಗಳೂ, ಅವರ ಆತ್ಮಗಳೂ ಶಿವರೂಪಗಳೇ ಆಗಿರುವದರಿಂದ, ಅರ್ಥಾತ್ ಜಗತ್ತೇ ಲಿಂಗರೂಪವಾಗಿರುವದರಿಂದ ಇನ್ನು ನಾನು ಲೋಕಾರಾಧನೆಯೇ ಶ್ರೇಷ್ಠ ಲಿಂಗಪೂಜೆಯೆಂದು ತಿಳಿಯುವೆನು ! ಆಚಾರ್ಯವರ್ಯರೇ, ನಿಮ್ಮ ಕಾರಾಗೃಹವಾಸವು ಪರಮ ಧನ್ಯವಾದದ್ದು; ಯಾಕಂದರೆ ಅದರಿಂದಲೇ ಅಲಭ್ಯವಾದ ಲೋಕಾರಾಧನಾರೂಪವಾದ ಲಿಂಗಪೂಜೆಯು ನನಗೆ ಅನಾಯಾಸವಾಗಿ ಪ್ರಾಪ್ತವಾಯಿತು ! ಸದ್ಧರ್ಮಿಗಳಾದ ಕನ್ನಡಿಗರೇ, ನಮ್ಮ ಭಗವಾನ್

ಸದಾಶಿವನ ಲಿಂಗರೂಪವು ಅಗಾಧವಾದದ್ದು ಆ ಲಿಂಗದ ಸ್ವರೂಪವು ಬ್ರಹ್ಮಾದಿ ದೇವತೆಗಳಿಗೂ ತಿಳಿದಿರುವದಿಲ್ಲ; ಆದರೆ ಅವರವರ ಇಷ್ಟವೇ ಅವರವರ ಲಿಂಗರೂಪವಾಗಿ ಪರಿಣಮಿಸುವದೊಂದು ನಮ್ಮ ಶಿವನ ಧರ್ಮವಿರುವದು. ಅಂತೇ ನಮ್ಮ ಶ್ರೀ ನಿಜಗುಣ ಶಿವಯೋಗಿಗಳ ತಮ್ಮ ವಿವೇಕ ಚಿಂತಾಮಣಿಯೆಂಬ ಗ್ರಂಥದಲ್ಲಿ ಅವರವರಿಗೆ ಇಷ್ಟವಾದವುಗಳೇ ಲಿಂಗವೆಂದು ಹೇಳುವಾಗ– ''ಪತಿಮಯ ಲಿಂಗವನ್ನು ಅರುಂಧತಿ–ಅನಸೂಯಾ–ಸಾವಿತ್ರಿ ಮೊದಲಾದ ಪತಿವ್ರತೆಯರು, ಅಗ್ನಿ ಲಿಂಗವನ್ನು ದ್ವಿಜನು, ಖಡ್ಗಲಿಂಗವನ್ನು ಅರಸನು, ಧನಲಿಂಗವನ್ನು ವರ್ತಕನು, ಧ್ಯಾನಲಿಂಗವನ್ನು ಶೂದ್ರನು ಪೂಜಿಸುವರೆ''ಂದು ಹಲವು ವಿಧದ ಲಿಂಗಗಳನ್ನು ಹೇಳಿರುವರು; ಆದ್ದರಿಂದ ನಾವೆಲ್ಲರೂ ರಾಷ್ಟ್ರಕಾರ್ಯದಲ್ಲಿ ಕೇವಲ ಶಿವಭಕ್ತರಾಗಿ ರಾಷ್ಟ್ರೋದ್ಧಾರ ರೂಪ ಇಷ್ಟಲಿಂಗವನ್ನು ಪೂಜಿಸಿ ಭಗವಾನ್ ಸದಾಶಿವನ ಕೃಪಾ ಪ್ರಸಾದದಿಂದ ಕರ್ನಾಟಕ ಭೂಮಾತೆಯನ್ನು ಪಾರತಂತ್ರ್ಯ ಪಂಕದಿಂದ ಉದ್ಧರಿಸಿ, ತದ್ವಾರಾ ಆಚಾರ್ಯವರ್ಯರು ಬಂಧಮುಕ್ತರಾದದ್ದನ್ನು ನೋಡಿ ನಾವೂ ಬಂಧಮುಕ್ತರಾಗೋಣ! ಹಾಗೆ ಮಾಡದಿದ್ದರೆ ಇಷ್ಟು ದಿವಸ ಶ್ರವಣ ಮಾಡಿದ ಆಚಾರ್ಯರ ದಿವ್ಯ ವಾಣಿಯನ್ನು ವ್ಯರ್ಥಗೊಳಿಸಿ ಅವರ ಮಾನಖಂಡನ ಮಾಡಿ ನಾವು ಬ್ರಹ್ಮಹತ್ಯೆಯ ಪಾಪಕ್ಕೆ ಗುರಿಯಾಗಬೇಕಾದೀತಲ್ಲ! ಯಾಕಂದರೆ ಈ ಮೊದಲೆ ಹೇಳಿದಂತೆ ವಿಪ್ರರ ಮಾನಖಂಡನ ಮಾಡಿದರೆ ಅವರ ಅಶಸ್ತ್ರ ವಧ ಮಾಡಿದಂತಾಗುತ್ತದೆಂಬ ಮಾತು ನಿಮ್ಮ ಸ್ಮರಣದಲ್ಲಿರಬಹುದು; ಆದ್ದರಿಂದ ನಾನು ಈಗ ಮಾಡುವ ಪ್ರತಿಜ್ಞೆಯನ್ನು ಸ್ಪಷ್ಟವಾಗಿ ಕೇಳಿರಿ. ''ಇಂದಿನಿಂದ ಲೋಕಾ ರಾಧನೆಯೇ ನಮ್ಮ ಲಿಂಗಪೂಜೆಯು'' ಎಂದು ನುಡಿಯುತ್ತಿರಲು, ಸಂಗನ ಬಸವಾರ್ಯರು ಆನಂದಭಾಷ್ಪಗಳನ್ನುದುರಿಸುತ್ತಗದ್ಗದ ಕಂಠದಿಂದ ''ಇಂದು ವಿರೂಪಾಕ್ಷಾರ್ಯರು ನಮ್ಮ ವೀರಶೈವ ವೀರ್ಯವನ್ನೂ, ಉದಾತ್ತತೆಯನ್ನೂ ಜಗತ್ತಿನಲ್ಲಿ ಚನ್ನಾಗಿ ಪ್ರಕಾಶಗೊಳಿಸಿದರು! ವೀರಶೈವರು ಶಿವನ ಹೊರತು ವಿಷ್ಣ್ವಾದಿ ದೇವತೆಗಳನ್ನು ಕಃಪದಾರ್ಥವಾಗಿ ಎಣಿಸುವರಾದ್ದರಿಂದ, ಇನ್ನು ಮೇಲೆ ವೀರಶೈವರಾದವರು ವಿರೂಪಾಕ್ಷಾರ್ಯರ ವಿಚಾರದಂತೆ ರಾಷ್ಟ್ರರೂಪ ಇಷ್ಟಲಿಂಗವನ್ನು ಪೂಜಿಸುವಾಗ ಲೋಕಾರಾಧನೆಯ ಹೊರತು ಅನ್ಯೋಪಾಸನೆಗಳು ಕಃಪದಾರ್ಥವೆಂದು ತಿಳಿಯುವದು ಯುಕ್ತವು'' ಎಂದು ನುಡಿದು ಆನಂದಪರವಶತೆಯಿಂದ ವಿರೂಪಾಕ್ಷಾರ್ಯರ ಹಸ್ತವನ್ನು ಹಿಡಿಯಲು, ಉಭಯ ಆರ್ಯರೂ ಪರಸ್ಪರರನ್ನು ಅಭಿನಂದಿಸಿದರು. ಆಗಿನ ಪ್ರಸಂಗದಲ್ಲಿ ಮಾಧವಾಚಾರ್ಯರ ಮುಖದಿಂದ— ''ಪರಮ ಧನ್ಯಳು, ಕರ್ನಾಟಟಕ ಭೂಮಾತೆಯು ಇಂಥ ಉದಾತ್ತ ವಿಚಾರದ ವೀರಪುತ್ರರ ಯೋಗದಿಂದ ಪರಮ ಧನ್ಯಳು'' ಎಂಬ ಶಬ್ದಗಳು ಗದ್ಗದ ಕಂಠದಿಂದ ಪಕ್ಕನೆ ಹೊರಬಿದ್ದವು! ಇಂಥ ದಿವ್ಯ ಪ್ರಸಂಗದಲ್ಲಿ ಕನ್ನಡಿಗರ ಆ ಪವಿತ್ರ ಸಭೆಯೊಳಗಿನ ವೀರರು, ''ನಾವು ಇನ್ನು ಲೋಕಾರಾಧನಾರೂಪ ಲಿಂಗಪೂಜೆಯನ್ನಲ್ಲದೆ ಅನ್ಯ ಪೂಜೆಯನ್ನು ಮಾಡಲಿಕ್ಕಿಲ್ಲ''ವೆಂದು ನಿಶ್ಚಯಿಸುವಾಗ ಮತ್ತೊಮ್ಮೆ ತಮ್ಮ ತಮ್ಮ ಖಡ್ಗಗಳನ್ನು ಒರೆಗಳಿಂದ ಹಿರಿದು ಮತ್ತೆ ಅವನ್ನು ಒರೆಗಾಣಿಸಿ ಕುಳಿತುಕೊಂಡರು!

# ವೀರರ ಪ್ರತಿಜ್ಞೆ

ಹೀಗೆ ಶೂರ ಕನ್ನಡಿಗರು ನಿಶ್ಚಯಿಸುತ್ತಿರುವಾಗ, ತಮ್ಮ ತೇಜಸ್ವಿನಿಯಾದ ಬೈರಾಗಿಣಿಯು ಎದ್ದು ಕೈಜೋಡಿಸಿ ತಲೆಬಾಗಿ ನಿಂತುಕೊಂಡಳು. ಆ ಸಚ್ಛೀಲಳೂ ಏನೋ ಮನಸ್ಸಿನಲ್ಲಿ ನಿಶ್ಚಯಿಸಿಯೇ ಎದ್ದು ನಿಂತುಕೊಂಡಂತೆ ತೋರುತ್ತಿತ್ತು, ಆಗ ಆಕೆಯ ಗೌರವರ್ಣದ ಸುಂದರ ಮುಖವು ಕೆಂಪೇರಿದ್ದು, ಯಾವ ಉದ್ರೇಕದಿಂದಲೋ ಆಕೆಯ ನೇತ್ರಗಳು ಅಶ್ರುಪೂರ್ಣ ವಾಗಿದ್ದವು. ಆ ಗುರುಭಕ್ತಳು ಮುಖವೆತ್ತಿ ತನ್ನ ಗುರುಗಳಾದ ಮಾಧವಾಚಾರ್ಯರನ್ನು ನೋಡಲು. ಆಕೆಯ ಕಣ್ಣುಗಳೊಳಗಿಂದ ಬಳಬಳ ನೀರುಗಳು ಸುರಿಯಹತ್ತಿದವು ! ನಮ್ಮ ಬೈರಾಗಿಣಿಯು ಸರ್ವಸಾಮಾನ್ಯ ಸ್ತ್ರೀಯಲ್ಲವೆಂಬುದನ್ನು ವಾಚಕರು ಬಲ್ಲರು; ಅಂಥ ಗಂಭೀರವೃತ್ತಿಯ ದಿಟ್ಟಳು ಹೀಗೆ ಕಣ್ಣೀರು ಸುರಿಸುವದು ಆಶ್ಚರ್ಯಕರವಾಗಿ, ಸಭಿಕರ ದೃಷ್ಟಿಗಳೆಲ್ಲ ಆಕೆಯ ಕಡೆಗೆ ಹೊರಳಿದವು. ಆಗ ಆ ಸತ್ವಶಾಲಿನಿಯ ಹೃದಯದಲ್ಲಿಯೂ ಸದ್ಗುರು ಮೂರ್ತಿಯು, ಆಕೆಯ ಕಣ್ಣೆದುರಿಗೂ ಸದ್ಗುರು ಮೂರ್ತಿಯು ಆಗಿ, ತನ್ನ ಗುರುವಿನಿಂದ ತನಗಾದ ಉಪಕೃತಿಯ ಒಂದೊಂದೇ ಪ್ರಸಂಗ ಗಳು ಆಕೆಗೆ ನೆನಪಾಗಲು, ಒಂದೇಸವನೆ ಆಕೆಯ ಕಣ್ಣೀರುಗಳು ಹೋಗಹತ್ತಿದವು ! ''ಅತ್ಯಂತ ಹೀನ ಸ್ಥಿತಿಯ ತನ್ನನ್ನು ಸದ್ಗುರುನಾಥನು ತನ್ನ ಕೃಪಾ ವಿಶೇಷದಿಂದ ಯಾವ ಸ್ಥಿತಿಗೆ ಮುಟ್ಟಿಸಿದನಲ್ಲ! ಇಂಥ ಕರುಣಾಘನರಾದ ಮಹಾತ್ಮರು ಕಾರಾಗೃಹ ವಾಸಿಯಾಗಲು. ನಾನು ತಿಂದುಂಡು ಸುಖ ದಿಂದಿರಬೇಕಾಯಿತೇ?'' ಎಂದು ಆ ಭಕ್ತಿಮೂಢಳು ಏನೇನೋ ಆಲೋಚಿಸುತ್ತಿರಲು, ಸಭಾಸದರು ಆಕೆಯ ಕಡೆಗೊಮ್ಮೆ, ಆಗ್ರಪೀಠಗಳಲ್ಲಿ ಕುಳಿತಿರುವ ಪೂಜ್ಯ ವ್ಯಕ್ತಿಗಳ ಕಡೆಗೊಮ್ಮೆ ನೋಡತೊಡ ಗಿದರು ! ತನ್ನ ಶಿಷ್ಯಳ ಈ ಕರುಣಾಸ್ಪದ ಸ್ಥಿತಿಯನ್ನು ನೋಡಿ ಮಾಧವಾಚಾರ್ಯರ ಹೃದಯವೂ ಕರಗಿತು; ಯಾಕಂದರೆ ಗುರುಭಕ್ತಳಾದ ತನ್ನ ಶಿಷ್ಯಳ ಮನೋದಯವನ್ನು ಅರಿಯಲು ಶಿಷ್ಯವಾತ್ಸಲ್ಯ ಮಯರಾದ ಮಾಧವಾಚಾರ್ಯರಿಗೆ ವಿಲಂಬವಾಗಲಿಲ್ಲ; ಆ ಪುಣ್ಯತಮಳಾದ ಶಿಷ್ಯಳೂ, ಧನ್ಯತಮನಾದ ಸದ್ಗುರುನಾಥನೂ ದೇಹಮಾತ್ರದಿಂದ ಭಿನ್ನರಾಗಿ ತೋರುತ್ತಿದ್ದರೂ ಪವಿತ್ರಾತ್ಮಗಳ ಮೂಲಕ ಏಕರೂಪವಾಗಿಯೇ ಇದ್ದರು ! ಶಿಷ್ಯೋತ್ತಮಳಾದ ಬೈರಾಗಿಣಿಯು ತನ್ನ ಗುರುವನ್ನು ಭಕ್ತಿಯ ಬಲದಿಂದ ತನ್ನ ಹೃದಯದಲ್ಲಿಟ್ಟುಕೊಂಡಂತೆ, ಗುರುಗಳಾದ ಮಾಧವಾಚಾರ್ಯರು ತನ್ನ ಶಿಷ್ಯಳನ್ನು ವಾತ್ಸಲ್ಯಬಾಧಿತರಾಗಿ ತಮ್ಮ ಹೃದಯದಲ್ಲಿಟ್ಟುಕೊಂಡಿದ್ದರು; ಆದ್ದರಿಂದ ಮಾಧವಾ ಚಾರ್ಯರೇ ಬೈರಾಗಿಣಿಯು, ಬೈರಾಗಿಣಿಯೆ ಮಾಧವಾಚಾರ್ಯರು ಆಗಿ ಅವರಿಬ್ಬರಲ್ಲಿ ತತ್ವತಃ ಭೇದವಿದ್ದಿಲ್ಲ, ಧನ್ಯರಾದ ಈ ಗುರುಶಿಷ್ಯರ ಈ ಇರವನ್ನು ಮಹಾಜ್ಞಾನಿಗಳಾದ ವಿರೂಪಾಕ್ಷಾರ್ಯರೂ, ಸಂಗನ ಬಸವಾರ್ಯರೂ ನೋಡಿ ಪರಮಾನಂದಪಟ್ಟರು. ಆಗ ವಿರೂಪಾಕ್ಷಾರ್ಯರು ಬೈರಾಗಿಣಿಯನ್ನು ಕುರಿತು— ''ಎಲೌ ಭದ್ರೇ, ನನ್ನ ಹಡೆದವ್ವನು ನೀನು ಯಾವ ಉದ್ರೇಕದಿಂದ ಎದ್ದು ನಿಂತೆ? ರಾಷ್ಟ್ರಭಕ್ತಳೇ, ನಿನ್ನ ಯೋಗ್ಯತೆಯು ಸಾಮಾನ್ಯ ವಾದದ್ದಲ್ಲವಮ್ಮಾ ! ಘನವಂತನಾದ ತಗಲಖ ಮಹಮ್ಮದ ಬಾದಶಹನನ್ನೂ ದಂಗುಬಡಿಸಿದ ಸತ್ವಶಾಲಿನಿಯು ನೀನು ! ಇಂಥ ನೀನು ಈ ನಿನ್ನ ಬಂಧುಗಳಿಗೆ ಏನು ಹೇಳಬೇಕೆಂದು ಎದ್ದು

ನಿಂತಿರುವೆ? ತಂಗೀ, ನಿನ್ನ ಈ ಧನ್ಯನಾದ ಸದ್ಗುರುನಾಥನು ನಿನ್ನ ನುಡಿಗಳನ್ನು ಕೇಳುತ್ತಿರುವನು ಹೇಳವ್ಮಾ! ನಿನ್ನಂಥ ಗುರುಭಕ್ತಳ ನುಡಿಯೇ ಲೋಕದ ಹಿತಕಾರಕ ನಡೆಯಾಗಿರುವದು'' ಅನ್ನಲು, ಬೈರಾಗಿಣಿಯು– ''ಸದ್ಗುರು ಆರ್ಯವರಾ, ನೀನರಿಯದ್ದು ಯಾವದಿರುವದು? ನನ್ನ ಗುರುವರನು ಕೈಲಾಗದವನಂತೆ ನಮ್ಮ ಸಲುವಾಗಿ ಕಾರಾಗೃಹಕ್ಕೆ ತೆರಳುವದನ್ನು ನೋಡಿ ಆತನ ಕರುಣಾಶಾಲಿತ್ವಕ್ಕಾಗಿ ನನ್ನ ಹೃದಯವು ಕಂಪಿಸುತ್ತದೆ; ನನ್ನ ಸಮರ್ಥ ಸದ್ಗುರುವು ತನ್ನ ತಪಸ್ಸಾಮರ್ಥ್ಯದಿಂದ ಬೇಕಾದದ್ದು ಮಾಡಬಲ್ಲನು. ಆ ನಿಗ್ರಹಾನುಗ್ರಹ ಸಮರ್ಥನಿಗೆ ಯಾವದು ತಾನೆ ಅಸಾಧ್ಯವು ! ಆದರೆ ತನ್ನ ಸಾಮರ್ಥ್ಯವನ್ನಷ್ಟು ತೋರಿಸಿ ತಾನು ಬಹು ಸಮರ್ಥನೆಂದು ಲೋಕದಿಂದ ಹೊಗಳಿಸಿಕೊಳ್ಳುವದು ಆತನಿಗೆ ಬೇಡವೇ ಬೇಡಾಗಿದ್ದು, ನಮ್ಮಂಥ ಅಸಮರ್ಥರನ್ನು ಸಮರ್ಥರನ್ನಾಗಿ, ಅಥವಾ ಪತಿತ ಕರ್ನಾಟಕವನ್ನು ಉದ್ಧೃತವನ್ನಾಗಿ ಮಾಡಿ, ತಾನು ಅಸಮರ್ಥನಂತೆಯೇ ನಟಿಸಬೇಕಾಗಿದೆ. ಹುಡುಗರ ಕೈಹಿಡಿದು ನಡೆಸುವಾಗ ದೊಡ್ಡವರೂ ಹುಡುಗರೇ ಆಗಬೇಕಾಗುವಂತೆ, ಅಸಮರ್ಥರಾದ ನಮ್ಮನ್ನು ಸಮರ್ಥರನ್ನಾಗಿ ಮಾಡುವದಕ್ಕಾಗಿ ಅಸಮರ್ಥರಿಗಿಂತಲೂ ಅಸಮರ್ಥನಾಗಿ ನಮ್ಮ ಮಹಾ ಸಮರ್ಥ ಸದ್ಗುರುವು ಸೆರೆಮನೆಗೆ ತೆರಳುತ್ತಿರುವನು ! ಇದೇ ನಮ್ಮ ಗುರುವೇ ಭಗವತೀ ಭುವನೇಶ್ವರಿಯನ್ನು ತನ್ನ ತಪೋಬಲದಿಂದ ಪ್ರಸನ್ನೀಕರಿಸಿಕೊಂಡನು; ಇದೇ ನಮ್ಮ ಸದ್ಗುರುವೇ ಸಾಕ್ಷಾತ್ ಪಂಪಾಪತಿಯನ್ನು ಎಚ್ಚರ ಗೊಳಿಸಿರುವನು; ಇದೇ ನಮ್ಮ ಸದ್ಗುರುವೇ ಕಾಶಿಮುಖಾನರಂಥ ಯವನ ವೀರರೊಬ್ಬರ ಮನಃ ಪ್ರವೃತ್ತಿಯನ್ನಲ್ಲ, ಇಡಿಯ ಕರ್ನಾಟಕದ ಮನಃಪ್ರವೃತ್ತಿಗಳನ್ನೂ ಅಲ್ಲಾಡಿಸಿ, ಆ ಚಂಚಲ ಮನೋರೂಪಿ ವೇಗಶಾಲಿ ವಿವಿಧಾಶ್ವಗಳಿಗೆ ಸ್ವಾತಂತ್ರ್ಯ–ಪ್ರಾಪ್ತಿಯ ಸರಳ ಮಾರ್ಗವನ್ನು ತೋರಿಸಿ, ಆ ಖೊಟ್ಟಿ ಕುದುರೆಗಳ ಕಣ್ಣಿಗೆ ಅನ್ಯ ವಿಷಯಗಳು ತೋರದಂತೆ ತನ್ನ ಅಮೋಘ ಬೋಧರೂಪ ಘನತರ ಪಟಲದಿಂದ ಮರೆಮಾಡಿರುವನು ! ಆರ್ಯವರ, ಬಹಳ ದೂರವೇಕೆ? ನನ್ನ ಸ್ಥಿತಿಯನ್ನೇ ನೋಡಿದರೆ ನನ್ನ ಸದ್ಗುರುನಾಥನ ಮಹಾಮಹಿಮೆಯು ವ್ಯಕ್ತವಾಗಬಹುದು. ನಾನೊಬ್ಬ ಹೀನ ಜಾತಿಯ ಹೆಣ್ಣುಮಗಳು; ವಿದ್ಯೆ–ಬುದ್ಧಿಗಳಿಲ್ಲದವಳು; ಒಬ್ಬಾನೊಬ್ಬ ಯವನನ ಬಲಾತ್ಕಾರದಿಂದ ಉಳಿದುಕೊಳ್ಳುವದಕ್ಕಾಗಿ ಮುಂದುಗಾಣದೆ ಮಡುವಿನಲ್ಲಿ ಧುಮುಕಿದವಳು; ಇಂಥ ನನ್ನ ಕಲ್ಯಾಣವನ್ನು ನನ್ನ ಸದ್ಗುರುನಾಥನು ಎಷ್ಟು ಮುಖದಿಂದ ಮಾಡಿರುವನಲ್ಲ ! ಆರ್ಯವರಾ, ಅಬಲೆಯಾದ ನಾನೆತ್ತ, ಮಹಾಬಲ ಸಂಪನ್ನನಾದ ತಗಲಖ ಮಹಮ್ಮದನೆತ್ತ? ಒಲೆಯ ಮುಂದೆ ರೊಟ್ಟಿ ಸುಡುವ ನನ್ನ ಹಿಟ್ಟು ಮುಣುಗಿದ ಕೈಯೆತ್ತ ಈ ಕರ್ನಾಟಕದ ಉದ್ಧಾರದ ಕಾರ್ಯವೆತ್ತ? ಮಂದಿಯ ಮುಂದೆ ತಲೆಯೆತ್ತಿ ನಡೆಯಲಾರದ ನನ್ನ ಸ್ವಾಭಾವಿಕವಾದ ಗ್ರಾಮ್ಯ ಲಜ್ಜೆಯೆತ್ತ? ಆ ಲಜ್ಜೆಯೇ ಪವಿತ್ರ ಸತ್ವವಾಗಿ ಪರಿಣಮಿಸಲು, ತಮ್ಮಂಥ ಮಹಾತ್ಮರು, ಹಾಗು ಇಂಥ ವೀರಾಧಿವೀರರ ಶ್ಲಾಘನೆಗೆ ನಾನು ಪಾತ್ರಳಾಗುವದೆತ್ತ? ಮಹಾತ್ಮರೇ, ಮನಸ್ಸು ಮಾಡಿದರೆ ನನ್ನ ಸದ್ಗುರುವು ತನ್ನ ಯೌಗಿಕ ಸಾಮರ್ಥ್ಯದಿಂದ ಮಲಿಕನಾಯಬನನ್ನು ತಾನಿದ್ದಲ್ಲಿಗೆ ಎಳೆದು ತರಿಸಬಹುದು; ಅದರಂತೆ ತಗಲಖ ಮಹಮ್ಮದನ ಕಿವಿಹಿಂಡಿ ಅವನಿಗೆ ಬುದ್ಧಿಗಲಿಸಬಹುದು;

ಇಂಥ ಮಹಾ ಮಹಿಮನು, ನಾವು ಬೆಲೆಯುಳ್ಳವರಾಗಬೇಕೆಂದು ಸೆರೆಮನೆಗೆ ಹೋಗುತ್ತಿರಲು, ನನಗೆ ಹ್ಯಾಗೆ ಸಮಾಧಾನವಾಗಬೇಕು? ನನ್ನ ಸದ್ಗುರುನಾಥನಿಗೆ ಹೀಗೆ ಮಾಡೆಂದು ಹೇಳುವ ಯೋಗ್ಯತೆಯು ನನ್ನದಲ್ಲ; ಆದ್ದರಿಂದ ನಾನೇ ಏನು ಮಾಡುತ್ತೇನೆಂಬುದನ್ನು ಹೇಳುವೆನು ಕೇಳುವ ಕೃಪೆ ಮಾಡಬೇಕು. ಯಾವ ಬಂಧನಕ್ಕೂ ಒಳಗಾಗದ ನನ್ನ ಸದ್ಗುರುವನ್ನು ಬಂಧಮುಕ್ತಮಾಡಲು ನಾನೆಷ್ಟರವಳು? ಆದರೆ ಅಳಲಿಯು ಶ್ರೀ ರಾಮನ ಸೇತುವೆಯನ್ನು ಕಟ್ಟುವದಕ್ಕಾಗಿ ತನ್ನ ಬಾಲವನ್ನು ಹುಡಿಯಲ್ಲಿ ಎದ್ದೆದ್ದಿ ಜಾಡಿಸುತ್ತಲಿದ್ದಂತೆ, ಪಾಮರಳಾದ ನಾನು ಶ್ರೀ ಗುರುವು ಕೊಟ್ಟ ಸತ್ವದಿಂದ ಆತನು ಸೆರೆ ಮನೆಯಿಂದ ತಾನಾಗಿ ಹೊರಟು ಬರುವಂತೆ ಮಾಡಬಾರದ ಸಾಹಸವನ್ನು ಮಾಡುವೆನು; ಮತ್ತು ನನ್ನ ಸದ್ಗುರುವು ಬರುವತನಕ ಅನ್ನಗ್ರಹಣ ಮಾಡಲಿಕ್ಕಿಲ್ಲ; ನನ್ನ ಈ ಉಪವಾಸಕ್ಕೂ, ಹಾಗೆ ಉಪವಾಸವಿದ್ದಾಗ ನಾನು ಮಾಡುವ ದೇಹದಂಡನೆಗೂ ಮರುಗಿ ನನ್ನ ಸದ್ಗುರುನಾಥನು ಬರದೆ ಇದ್ದರೆ, ಇನ್ನು ಎಂಟು ದಿನ ಹಾದಿಯ ನೋಡಿ, ಇಗೋ ಇದೇ ಈ ಅಸ್ತ್ರದಿಂದ ಇರಿದುಕೊಂಡು ಪ್ರಾಣತ್ಯಾಗ ಮಾಡುವೆನು!''

ಈ ಮೇರೆಗೆ ನುಡಿದು ಶಿಷ್ಯೋತ್ತಮಳು ಶಿಷ್ಯವತ್ಸಲನಾದ ಮಾಧವ ಗುರುವಿನ ಕರುಣಾ ಶಾಲಿತ್ವವನ್ನೂ, ಆತನಿಂದ ತನಗಾದ ಉಪಕೃತಿಯನ್ನೂ ನೆನಿಸುವಾಗ ಮತ್ತಿಷ್ಟು ಆಕೆಯ ದುಃಖವು ಒತ್ತರಿಸಲು, ಅದನ್ನು ಬಿಗಿಹಿಡಿಯಲಾರದೆ ಬಿಕ್ಕಿ ಬಿಕ್ಕಿ ಅಳುತ್ತ ಆಕೆಯು ಮರೆಗೆ ಹೋಗಿ ಕುಳಿತು ಕೊಂಡಳು ! ಪಾಪ ! ಸ್ತ್ರೀ ಸ್ವಭಾವದ ಕೋಮಲತವು ಏನು ಮಾಡಿದರೆ ಹೋದೀತು ? ಎಂಥ ಕಷ್ಟ–ನಷ್ಟಗಳಿಗೂ ಸೊಪ್ಪು ಹಾಕದ ಆ ಸಾಧ್ವಿಯು ತನ್ನ ಗುರುವು ಬಂಧನರಹಿತನೆಂಬುದು ಗೊತ್ತಿದ್ದರೂ ''ನನ್ನ ಗುರುವು ಸೆರೆಮನೆಗೆ ಹೋಗುವನಲ್ಲ'' ಎಂಬದೊಂದು ಕಲ್ಪನೆಯಿಂದ, ಇಷ್ಟು ಹಣ್ಣಾದ ಬಳಿಕ, ಭಕ್ತಿಯು ಅಂಧವಾದದ್ದೆಂಬುದರಲ್ಲಿ ಸಂಶಯವೇನು? ಆ ಸತ್ವಸಂಪನ್ನಳ ಈ ಪ್ರತಿಜ್ಞೆ ಕೇಳಿ ದರ್ಬಾರದೊಳಗಿನ ಪುರುಷರ ಹೃದಯಗಳು ಕಂಪಿಸಿ, ಅವರ ಪೌರುಷವು ಅತ್ಯಂತ ಜಾಜ್ವಲ್ಯವಾಯಿತು ! ಹೀಗೆ ಬೈರಾಗಿಣಿಯು ಕುಳಿತ ಕೂಡಲೆ ದೇವರಾಜ ಪುತ್ರಿಯಾದ ಪದ್ಮಿನಿಯು ಎದ್ದು ನಿಂತು ತಲೆಬಾಗಿಸಿ ಗುರುವೃಂದಕ್ಕೆ ವಂದಿಸಿ ನುಡಿದಳೇನಂದರೆ– ''ಪೂಜ್ಯಪಾದರು ಚಿತ್ತಯಿಸಬೇಕು. ಶ್ರೀ ಮಾಧವ ಸದ್ಗುರುವಿನ ಕೃಪೆಯಿಂದಲೂ, ಈ ಗುರುಭಕ್ತಳಾದ ನಮ್ಮ ಸನ್ಮಾನನೀಯ ಬೈರಾಗಿಣಿಯ ಸಾತ್ವಿಕ ಸಾಹಸ ದಿಂದಲೂ ಈ ದೇವರಾಜ ಪುತ್ರಿಯು ಆರ್ಯಕನ್ನಿಕೆಯಾಗಿ ನಿಮ್ಮ ಮುಂದೆ ನಿಂತಿರುವಳು; ಇಲ್ಲದಿದ್ದರೆ ಆ ದೇವರಾಜ ಪುತ್ರಿಯಾದ ನಾನು ಇಷ್ಟು ಹೊತ್ತಿಗೆ ಈ ಪವಿತ್ರ ಕ್ಷತ್ರಿಯ ದೇಹವನ್ನು ಯವನ ದೂಷಿತವಾಗಮಾಡಲಾರದೆ ಅದನ್ನು ಯಾವಾಗೋ ಈ ಗುಪ್ತ ಶಸ್ತ್ರಕ್ಕೆ ಬಲಿಯಾಗಿ ಅರ್ಪಿಸುತ್ತಿದ್ದೆನು; ಆದ್ದರಿಂದ ಪ್ರಕೃತಕ್ಕೆ ನನ್ನ ತಂದೆಯು ಶ್ರೀ ಮಾಧವ ಸದ್ಗುರುವು; ತಾಯಿಯು ಸಾಧ್ವೀಮಣಿಯಾದ ನನ್ನ ಸಖಿ ಈ ಗುರುಪುತ್ರಿ ಬೈರಾಗಿಣಿಯು ! ಬೈರಾಗಿಣಿಯು ಹೇಳಿದಂತೆ ರಾಷ್ಟ್ರ ಗುರುಗಳಾದ ಮಾಧವಾಚಾರ್ಯರು ತಾವು ಯಾವ ಬಂಧನಕ್ಕೂ ಒಳಗಾಗದವರಿದ್ದರೂ ಈಗ ಕರ್ನಾಟಕಸ್ಥರ ಕಲ್ಯಾಣಕ್ಕಾಗಿ ತಾವಾಗಿ ಬಂಧನಕ್ಕೊಳಗಾಗುತ್ತಿರಲು, ಅವರ ಸ್ಥಳವನ್ನು ಆರ್ಯರು ಅಲಂಕರಿಸುತ್ತಿರುವದರಿಂದ ಕನ್ನಡಿಗರೊಡನೆ ಈ ದೇವರಾಜಪುತ್ರಿಯೂ ಈ

ಚರಣಕ್ಕೆ ಅಂಕಿತಳಾಗಿರುವಳು. ಸದ್ಗುರುನಾಥಾ, ಆರ್ಯವರಾ, ವಿವೇಕದಿಂದ ವಿಚಾರ ಮಾಡಿದರೆ, ನೀನಾರು, ಈ ನಮ್ಮ ಸದ್ಗುರುನಾಥ ಆಚಾರ್ಯವರನಾರು? ನಿಮ್ಮಿಬ್ಬರಲ್ಲಿ ನನಗೆ ಭೇದವು ಕಾಣಲೊಲ್ಲದು. ದೇಹದೃಷ್ಟಿಯಿಂದ ಜಾತಿ ದೃಷ್ಟಿಯಿಂದ, ಧರ್ಮಮಾರ್ಗ ದೃಷ್ಟಿಯಿಂದ ನಿಮ್ಮಿಬ್ಬರಲ್ಲಿ ಔಪಚಾರಿಕ ಭೇದವು ತೋರುತ್ತಿದ್ದರೂ, ತಪಸ್ಸಿದ್ಧ ಸತ್ವವುಳ್ಳ ಗುರುತ್ವದ ದೃಷ್ಟಿಯಿಂದ ನಿಮ್ಮಿಬ್ಬರಲ್ಲಿ ಭೇದವಿಲ್ಲವು ! ಆರ್ಯವರ್ಯರೇ, ಇಂದಿನಿಂದ ನೀವೇ ನಮಗೆ ಮಾರ್ಗದರ್ಶಕರು; ನೀವೇ ರಾಷ್ಟ್ರ ಗುರುಗಳು; ಇನ್ನು ಮೇಲೆ ಅನಾಥರಾದ ನಮ್ಮೆಲ್ಲರ ಯೋಗಕ್ಷೇಮವನ್ನು ವಿಚಾರಿಸುವವರು ನೀವೆಯೇ ! ಶ್ರೀ ವಿರೂಪಾಕ್ಷಾರ್ಯ, ಸದ್ಗುರು ಮಾಧವನೇ ನಿನ್ನ ರೂಪದಿಂದ ಕರ್ನಾಟಕದ ರಾಜಸೂತ್ರಗಳನ್ನು ಧರಿಸುವದರಿಂದ ನಿನ್ನ ಆಜ್ಞೆಯು ನಮಗೆ ಶಿರಸಾ ಮಾನ್ಯವಾಗಿರುವದು. ಗುರುದೇವಾ, ಅಬಲೆಯರಾದ ನಾವು ಯಾವಾಗಲೂ ಅಸ್ವತಂತ್ರರೇ ಅಲ್ಲವೆ? ನನ್ನಂಥ ಅಬಲೆಯಿಂದ ಯಾವ ರಾಷ್ಟ್ರಕಾರ್ಯ ವಾದೀತು? ನಾನು ನಮ್ಮ ಬೈರಾಗಿಣಿಯಂತೆ ತಪಸ್ವಿನಿಯೂ, ಸತ್ವಶಾಲಿನಿಯೂ ಆಗಿರದೆ, ವಿಲಾಸದ ರಾಜಗೃಹದಲ್ಲಿ ಬೆಳೆದಿದ್ದ ಪಾಮರಳಾಗಿರುವೆನು ! ಆದರೂ ನಿನ್ನ ಚರಣ ಸಾಕ್ಷಿಯಿಂದ ಹಾಗು ಕರ್ನಾಟಕ ಭೂಮಾತೆಯ ಸಾಕ್ಷಿಯಿಂದ ಹೇಳುವೆನು ಕೇಳು; ಬೈರಾಗಿಣಿಯಿದ್ದಲ್ಲಿ ಪದ್ಮಿನಿಯು; ಬೈರಾಗಿಣಿಯು ಮಾಡಿದ್ದನ್ನು ಪದ್ಮಿನಿಯು ಮಾಡುವವಳು; ಒಟ್ಟಿಗೆ ನನ್ನ ಸಂಕಟಹಾರಕಳಾದ ನನ್ನ ಮಾತೃಸ್ಥಾನಾಪನ್ನ ಬೈರಾಗಿಣಿಯ ನೆರಳಾಗಿ ನಾನು ನಡೆದುಕೊಳ್ಳತಕ್ಕವಳು!''

ಈ ಮೇರೆಗೆ ಬೈರಾಗಿಣಿ–ಪದ್ಮಿನಿಯರು·ಅಂತಃಸ್ಫೂರ್ತಿಯಿಂದ ಪ್ರತಿಜ್ಞೆಮಾಡುತ್ತಿರಲು, ದಡದಡಿಸಿ ಆನಂದಭಾಷ್ಪಗಳುದುರುತ್ತಿರುವ ಕೋಮಲ ಹೃದಯದ ವಿರೂಪಾಕ್ಷಾರ್ಯರು ಸಭೆಯನ್ನುದ್ದೇಶಿಸಿ– ''ಕನ್ನಡ ವೀರರೇ, ಇನ್ನು ಕರ್ನಾಟಕದ ಉದ್ಧಾರವಾದ ವಿಷಯವಾಗಿ ನಾವು ಶಂಕಿಸುವದೇಕೆ? ಬೈರಾಗಿಣಿಯಂಥ ಗುರುಸೇವಾ ದುರಂಧರಳಾದ ತೇಜಸ್ವಿನಿಯೂ, ಪದ್ಮಿನಿ ದೇವಿಯಂಥ ಸತ್ವಶಾಲಿನಿಯಾದ ರಾಜಪುತ್ರಿಯೂ ಹೀಗೆ ಪ್ರತಿಜ್ಞೆಮಾಡಿ ನುಡಿದ ನುಡಿಯು ಸಟೆಯಾಗಲಾರದು ! ಇಂಥ ಪವಿತ್ರ ಹೃದಯದ ಸ್ತ್ರೀ ರತ್ನಗಳಿಗೆ ಆತ್ಮಹತ್ಯ ಮಾಡಿಕೊಳ್ಳುವ ಪ್ರಸಂಗವು ಒದಗುವ ಸಂಭವವೇ ಇಲ್ಲದ್ದರಿಂದ, ಆಚಾರ್ಯರು ಇನ್ನು ಎಂಟು ದಿವಸಗಳಲ್ಲಿ ನಾಯಬನ ಮೂಗು ಕೊಯ್ದು ಅವನ ಕೈಯಲ್ಲಿ ಕನ್ನಡಿ ಕೊಟ್ಟ ಹಾಗೆ ಮಾಡಿ ತಮ್ಮ ಬುದ್ಧಿ ವೈಭವವನ್ನು ನಿಶ್ಚಯವಾಗಿ ಪ್ರಕಟ ಮಾಡುವರು ! ಬ್ರಹ್ಮನಿಷ್ಠ ಮಾಧವ ಮಹಾಮುನಿಯನ್ನು ಪ್ರತಿಬಂಧದಲ್ಲಿರಿಸುವ ಯೋಗ್ಯತೆಯು ಯಾರದಿರುವದು? ಇದೊಂದು ಮಹಾತ್ಮರ ಲೋಕಹಿತ ಕಾರಕ ಕೌತುಕದ ಕ್ರೀಡೆಯಾಗಿರುವದು ! ಆದರೂ ಆ ಮಹಾತ್ಮರ ವಿಷಯದ ಸೆರೆಮನೆಯ ವೃಥಾರೋಪವೂ ನಿಜವಾದ ಕರ್ನಾಟಕ ಭೂಮಾತೆಯ ವೀರಪುತ್ರರಿಗೆ ದುಸ್ಸಹವಾದದ್ದರಿಂದ, ಆ ಆರೋಪವನ್ನು ದೂರ ಮಾಡುವ ನೆವದಿಂದ ಕನ್ನಡಿಗರೆನಿಸಿಕೊಳ್ಳುವ ನಾವೂ, ನೀವೂ, ಬೇರೆಯವರೂ ನಮ್ಮ ಶಕ್ತಿ–ಸರ್ವಸ್ವವನ್ನು ಒಟ್ಟುಗೂಡಿಸಿ ಉಂಟಾಗುವ ಮಹಾಶಕ್ತಿಯಿಂದ ಮಲಿಕ ನಾಯಬನಿಗೆ ಮಂಕುಬೂದಿ ಬಡಿದಂತೆ ಮಾಡಿಬಿಡೋಣ. ಆಗುವದೆಲ್ಲ

ಈಶ್ವರೇಚ್ಛೆಯಿಂದಲೇ ಆಗುತ್ತಿರಲು ಈಶ್ವರೇಚ್ಛೆಯಿಂದಲೇ ರಾಷ್ಟ್ರದ ಮುಖಂಡರಾಗಿರುವ ಮಾಧವಾಚಾರ್ಯರು ತೋರಿಸಿದ ಮಾರ್ಗವು ಈಶ್ವರನು ತೋರಿಸಿದ ಮಾರ್ಗವೇ ಎಂದು ತಿಳಿದು ನಾವೆಲ್ಲರೂ ಅದೇ ಮಾರ್ಗವನ್ನು ಹಿಡಿದು ಹೋಗೋಣ'' ಎಂದು ನುಡಿಯುತ್ತಿರಲು, ಸಂಗನಬಸವಾರ್ಯರು–ತಲೆದೂಗುತ್ತ– ''ಬಂಗಾರದಂಥ ಮಾತು; ಶಿವನು ಮೆಚ್ಚುವ ಮಾತು! ಆಚಾರ್ಯರಿಗೆ ಅವರ ಇಚ್ಛೆಯ ವಿರುದ್ಧ ನಡಯ ಹೇಳುವದು ಯಾರ ಯೋಗ್ಯತೆಯೂ ಅಲ್ಲ, ಹಿತಕರವೂ ಅಲ್ಲ! ಜ್ಞಾನಿಗಳ ವಿಚಾರಗಳ ಯುಕ್ತಾಯುಕ್ತತೆಯ ಊಹಾಪೋಹ ಮಾಡುತ್ತ ಕುಳಿತುಕೊಳ್ಳುವದು ಸಾಮಾನ್ಯರಿಗೆ ಸಲ್ಲದು. ಆದರೆ ಲೋಕಕಲ್ಯಾಣೇಚ್ಛುಗಳಾದ ಆ ಮಹಾತ್ಮರಲ್ಲಿ ನಿಷ್ಠೆಯಿಟ್ಟು ಅವರು ತೋರಿಸಿದ ಮಾರ್ಗದಂತೆ ಹೋಗುವದು ಎಲ್ಲರ ಕೆಲಸವು; ಹೀಗೆ ಯಾವದೊಂದು ಕಾರಣದಿಂದ ಎಲ್ಲರೂ ಒಂದು ಹಾದಿಯ ಹಿಡಿದು ಹೋಗುವದೇ ರಾಷ್ಟ್ರೈಕ್ಯದ ಗುಟ್ಟು; ಅದೇ ಸ್ವಾತಂತ್ರ್ಯ ಪ್ರಾಪ್ತಿಯ ಗುರುಮಂತ್ರವು; ಆದ್ದರಿಂದ ಈಗ ನಾವು ಆಚಾರ್ಯರಿಗೆ– ''ತಮ್ಮ ಇಚ್ಛೆಯೇ ನಮ್ಮ ಇಚ್ಛೆಯು. ತಾವು ಇಲ್ಲಿಯೇ ಇರಲಿ, ಸೆರೆಮನೆಯಲ್ಲಿಯೇ ಇರಲಿ ದೇಹಪಾತವಾದರೂ ತಾವು ತೋರಿಸಿ ಕೊಟ್ಟಿರುವ ಮಾರ್ಗವನ್ನು ಹಿಡಿದು ಹೋಗುವದಷ್ಟು ನಮ್ಮ ಕೆಲಸವು. ತಪಸ್ವಿದ್ದರೂ, ಲೋಕಹಿತ ತತ್ಪರರೂ ಆದ ನಿಮ್ಮ ಹೃದಯದಲ್ಲಿ ಪರಮಾತ್ಮನು ಜಾಗ್ರತನಾಗಿರುವದರಿಂದ, ನೀವು ತೋರಿಸಿದ ಮಾರ್ಗವೆಂದರೆ ಸಾಕ್ಷಾತ್ ಪರಮಾತ್ಮನು ತೋರಿಸಿದ ಮಾರ್ಗವೇ ಸರಿ; ಆದ್ದರಿಂದ ಆ ಮಾರ್ಗದಿಂದ ನಡೆಯುವ ನಮಗೆ ನಿಶ್ಚಯವಾಗಿ ಯಶಸ್ಸು ದೊರೆಯುವದು'' ಎಂದು ಜ್ಞಾಪಿಸಿಕೊಂಡು ಬಿಡೋಣ.''

ಈ ಮೇರೆಗೆ ಸಂಗನಬಸವಾರ್ಯರು ನುಡಿದದ್ದನ್ನು ಕೇಳಿ ಮಾಧವಾಚಾರ್ಯರು– ''ಆರ್ಯವರ, ತಾವು ಅಪ್ಪಣೆ ಕೊಡಿಸಿದಂತೆ ಕರ್ನಾಟಕದ ಮಾರ್ಗದರ್ಶಕನೆಂಬ ಆರೋಪವು ನನಗೆ ಬಂದಿರುವದೇನೋ ನಿಜ; ಆದರೆ ಆ ಮಾರ್ಗದರ್ಶನ ಮಹಾ ಕಾರ್ಯವನ್ನು ಮಾಡುವ ಯೋಗ್ಯತೆಯು ನನ್ನಲ್ಲಿ ಇರಲಿ, ಇಲ್ಲದಿರಲಿ, ದೇಶೋದ್ಧಾರಕ್ಕಾಗಿ ಎಲ್ಲರೂ ತಮ್ಮ ತಮ್ಮ ಯೋಗ್ಯತೆ ಮೀರಿ ಹೆಣಗಲು ಬದ್ಧರಿರುವದರಿಂದ, ರಾಷ್ಟ್ರದ ಆಜ್ಞೆ ಪಾಲಿಸುವದು ಎಲ್ಲರ ಕರ್ತವ್ಯ ವಾಗಿರುವದು; ಆದ್ದರಿಂದ ರಾಷ್ಟ್ರ ಕಾರ್ಯದಲ್ಲಿ ನಾವು ನಮ್ಮ ನಮ್ಮ ಯೋಗ್ಯತೆಯನ್ನು ಕುರಿತು ಆಲೋಚಿಸುವದಕ್ಕಿಂತ, ರಾಷ್ಟ್ರ ಕಾರ್ಯಮಾಡಲು ನಾವು ಬದ್ಧರೆಂಬುದನ್ನು ಮುಖ್ಯವಾಗಿ ವಿಚಾರಿಸಿ, ಎಲ್ಲರೂ ತಮ್ಮ ಯೋಗ್ಯತೆ ಮೀರಿ ರಾಷ್ಟ್ರ ಕಾರ್ಯವನ್ನು ಮಾಡಲೇಬೇಕು. ರಾಷ್ಟ್ರದ ದೃಷ್ಟಿಯಿಂದ ತೀರ ಅಲ್ಪನಾಗಿರುವ ನನ್ನ ಮಾತುಗಳ ಗೌರವವನ್ನು ತಮ್ಮಂಥವರು ಈ ಪರಿ ಮಾಡುವದು, ರಾಷ್ಟ್ರದೊಳಗಿನ ಅನೇಕತ್ವವನ್ನು ಮುರಿದು ಐಕ್ಯವನ್ನುಂಟುಮಾಡುವ ದಕ್ಕಾಗಿಯೇ ಸರಿ. ಆರ್ಯವರ, ನಾನೊಬ್ಬನೇ ರಾಷ್ಟ್ರವನ್ನು ಉದ್ಧರಿಸಲು ಅಶಕ್ತನಾಗಿದ್ದರೂ ರಾಷ್ಟ್ರೋದ್ಧಾರಕ್ಕಾಗಿ ಆತ್ಮಾರ್ಪಣ ಮಾಡಲು ಶಕ್ತನಾಗಿರುವೆನು. ಇದೇ ದೃಷ್ಟಿಯಿಂದಲೇ ನಾನು ಸಂತೋಷದಿಂದ ಈಗ ಶತ್ರುಗಳ ಸೆರೆಯಾಳಾಗುವೆನು. ಈ ಆತ್ಮಾರ್ಪಣವೇ ರಾಷ್ಟ್ರೋದ್ಧಾರದ ಮರ್ಮವಾಗಿರುವದೆಂಬುದನ್ನು ಕನ್ನಡಿಗರು ಲಕ್ಷದಲ್ಲಿಡತಕ್ಕದ್ದು. ಆರ್ಯವರ, ತಮ್ಮಂಥ ಮಹಾತ್ಮರು ರಾಷ್ಟ್ರದ ಸೂತ್ರಗಳನ್ನು ಅಲ್ಲಾಡಿಸಲು ಸಿದ್ಧರಾಗಿ ಬಂದಿರಲು, ಹಾಗು ತಮ್ಮ

ಅಪ್ಪಣೆಯಂತೆ ನಡೆಯಲು ಪದ್ಮಿನೀದೇವಿ, ಬೈರಾಗಿಣಿ ಯರಂಥ ಅಬಲೆಯರೂ, ಮಹಾ ಬಲಿಷ್ಠರಾದ ಈ ದೇಶಬಾಂಧವರೂ ಕಂಕಣಬದ್ಧರಾಗಿರಲು, ನಾನು ಸೆರೆಮನೆಯನ್ನು ಸೇರುವ ನೆವದಿಂದ ಕರ್ನಾಟಕದ ಸತ್ವಶಾಲಿತ್ವವು ಪ್ರಕಟವಾಗುವ ಸುಯೋಗವನ್ನು ಯಾಕೆ ವ್ಯರ್ಥವಾಗಿ ಹೋಗಲಾಡಿಸಲಿ? ನಾಳೆ ಬೆಳಗಿನ ಅನುಷ್ಠಾನವನ್ನು ತೀರಿಸಿಕೊಂಡು ಶತ್ರುಗಳ ಪತ್ರಕ್ಕೆ ಉತ್ತರವಾಗಿ ಅವರ ಪಾಳಯವನ್ನು ಪ್ರವೇಶಿಸುವೆನು. ನನ್ನೊಬ್ಬನ ಕಾರಾಗೃಹವಾಸದಿಂದ ಕರ್ನಾಟಕದಲ್ಲಿ ನವಜೀವನವು ಉತ್ಪನ್ನವಾಗುತ್ತಿದ್ದರೆ ನಾನು ಧನ್ಯನೇ ಸರಿ!

ಮಾಧವಾಚಾರ್ಯರು ಹೀಗೆ ನುಡಿದು ಸುಮ್ಮನಾಗುತ್ತಿರಲು, ಕೃಷ್ಣನಾಯಕನು ಎದ್ದು ನಿಂತು ಕೈಜೋಡಿಸಿ– ''ಪೂಜ್ಯ ಗುರುದೇವ ತಮ್ಮ ಮುಂದೆ ಬಾಯಿ ತೆರೆದು ಮಾತಾಡಲು ನಮ್ಮಂಥ ಪಾಮರರ ಯೋಗ್ಯತೆಯಲ್ಲ; ಧರ್ಮವೂ ಅಲ್ಲ. ತಮ್ಮಂಥ ಮಹಾತ್ಮರು ಮಾಡುವ ಆಜ್ಞೆಗಳನ್ನು ಅಕ್ಷರಶಃ ಪಾಲಿಸುವಷ್ಟೇ ನಮ್ಮ ಕೆಲಸವು. ಆದರೂ ನನ್ನ ಪರಮ ಮಿತ್ರರಾದ ಹುಕ್ಕ–ಬುಕ್ಕ–ಕಾಶಿಮಖಾನ–ಮಲ್ಲಸರ್ಜರಂಥ ಏಕನಿಷ್ಠ ಭಕ್ತರು, ಮಹಾ ಸಮರ್ಥರಾದ ತಮ್ಮ ಆಜ್ಞೆಯೇ ಪ್ರಮಾಣವೆಂದು ತಿಳಿದು ಅದನ್ನು ನಿರಾತಂಕವಾಗಿ ನಡಿಸುವ ನಿಶ್ಚಯದಿಂದ ಸುಮ್ಮನೆ ಕುಳಿತಿರಲು, ಸುಮ್ಮನಿರಲಾರದ ಪಾಮರನು ನಾನು ಎರಡು ಮಾತುಗಳನ್ನು ಆಡಿಯೇ ಆಡುವೆನು ! ಆಚಾರ್ಯ ವರ, ನಿಮ್ಮ ಅನುಯಾಯಿಗಳೆನಿಸುವ ನಮಗೆ ಈಗ ಬಹು ಕಠಿಣ ಪ್ರಸಂಗವು ಒದಗಿರುವದೆಂಬುದ ರಲ್ಲಿ ಸಂಶಯವಿಲ್ಲ; ಯಾಕಂದರೆ, ತಮ್ಮ ಕಾರಾಗೃಹ ವಾಸವನ್ನು ಕುರಿತು ನಾವು ಏನೂ ಮಾತಾಡದೆ ಒಪ್ಪಿಕೊಂಡರೆ, ತಮ್ಮನ್ನು ಅನಾದರಿಸಿದ ಆರೋಪಕ್ಕೆ ನಾವು ಒಳಗಾಗಬೇಕಾಗುವದಲ್ಲದೆ, ಶತ್ರುಗಳನ್ನು ಹೊಡೆದೋಡಿಸುವ ಸಾಮರ್ಥ್ಯವು ನಮ್ಮಲ್ಲಿಲ್ಲವೆಂಬ ಆರೋಪಕ್ಕೂ ನಾವು ಗುರಿಯಾಗ ಬೇಕಾಗುತ್ತದೆ. ಇನ್ನು ತಾವು ಶತ್ರುಗಳ ಕೈಸೇರಲಾಗದೆಂದು ತಮ್ಮನ್ನು ಪ್ರತಿಬಂಧಿಸಿದರೆ, ತಮ್ಮ ಆಜ್ಞೆಯನ್ನುಲಂಘಿಸಿದ ಔದ್ಧತ್ಯದ ಆರೋಪವು ನಮ್ಮ ಪಾಲಿಗೆ ಬರುವದಲ್ಲದೆ, ತಮ್ಮ ಅಗಾಧ ಸಾಮರ್ಥ್ಯದ ವಿಷಯವಾಗಿ ನಾವು ಅವಿಶ್ವಾಸಪಟ್ಟಂತೆ ಆಗುವದು. ಭಗವನ್, ಇಂಥ ಪ್ರಸಂಗದಲ್ಲಿ ನಾವು ಮಾತಾಡುವದಾದರೂ ಹ್ಯಾಗೆ? ಮಾತಾಡದಿರುವದಾದರೂ ಹ್ಯಾಗೆ? ಹ್ಯಾಗೆ ಮಾಡಿದರೂ ಅಪರಾಧವೇ ಆಗುತ್ತಿರುವದರಿಂದ, ಹೊಟ್ಟೆಯಲ್ಲಿ ಹಿಡಿಸಲಾರದೆ ಹೊರಬೀಳುತ್ತಲಿರುವ ಎರಡು ಮಾತುಗಳನ್ನು ಆಡಿಬಿಟ್ಟರೆ ನನಗೆ ಸಮಾಧಾನವಾದರೂ ಆಗುತ್ತದೆ. ಗುರುವರ, ತಮ್ಮಂಥವರ ಮಾತುಗಳು ಈಗ ರಾಷ್ಟ್ರದ ದೃಷ್ಟಿಯಾಗಿ ಪರಿಣಮಿಸುತ್ತಿರುವದರಿಂದ, ತಮ್ಮಂಥವರನ್ನು ಸೆರೆಯಲ್ಲಿರಗೊಟ್ಟು ರಾಷ್ಟ್ರವನ್ನು ಕುರುಡಾಗಿ ಮಾಡುವದು ರಾಷ್ಟ್ರಹಿತೈಷಿಗಳ ಧರ್ಮವಲ್ಲ; ಆದರೂ ಮಹಾ ಸಮರ್ಥರಾದ ತಮ್ಮ ಆಜ್ಞೆಯನ್ನು ಮೀರಲಾರದ ನಾವು, ಈಗಿನ ತಮ್ಮ ಆಜ್ಞೆಯನ್ನು ಪಾಲಿಸಲು ನಿಶ್ಚಯಿಸಿ ಅಜ್ಞಾನಜನಿತ ಮೋಹದಿಂದ ಈಗ ತಮ್ಮನ್ನು ನಿರ್ಬಂಧಿಸುವದೇನೆಂದರೆ– ನಮ್ಮ ಸತ್ವಶೀಲ ಭಗಿನಿಯರಾದ ಬೈರಾಗಿಣಿ–ಪದ್ಮಿನೀದೇವಿಯರೇ ಮಾಡಿದ ಪ್ರತಿಜ್ಞೆಯಂತೆ ಎಂಟು ದಿವಸಗಳಲ್ಲಿಯೇ ನಮ್ಮ ಸತ್ವವನ್ನು ಪ್ರಕಟಮಾಡಿ. ಕನ್ನಡಿಗರಲ್ಲಿ ನಿಜವಾದ ಜಾಗ್ರತಿಯುಂಟಾಗುತ್ತದೆಂಬುದನ್ನು ಮಲಿಕ ನಾಯಬನ ಅನುಭವಕ್ಕೆ

ತಂದುಕೊಟ್ಟು ತದ್ವಾರಾ ತಮ್ಮನ್ನು ಸಮಾಧಾನ ಪಡಿಸಿಯೇತೀರುವೆವು ! ತಮ್ಮ ಕೃಪೆಯೇ ರಾಷ್ಟ್ರಕಾರ್ಯವನ್ನು ಮಾಡುತ್ತಿರುವಾಗ ನಾವು ನಮ್ಮಲ್ಲಿದ್ದಷ್ಟು ಸಾಮರ್ಥ್ಯದಿಂದ ಹೆಣಗಿ ಕೀರ್ತಿಭಾಜನರಾಗದೆ ಯಾಕೆ ಇದ್ದೇವು? ಆದರೆ ಗುರುವರ, ಇನ್ನುಮೇಲೆ ಮಾತ್ರ ತಾವು ಹೀಗೆ ನಮ್ಮನ್ನು ಹಿಂದಕ್ಕೆ ಸರಿಸಿ ಸ್ವತಃ ಸಂಕಟಕ್ಕೆ ಗುರಿಯಾಗುವ ಪ್ರಸಂಗವನ್ನು ತರಬಾರದೆಂದು ಪ್ರಾರ್ಥಿಸುತ್ತೇನೆ. ತಮ್ಮಂಥ ಮಾರ್ಗದರ್ಶಕರಿಲ್ಲದೆ ನಮ್ಮಂಥ ಲಕ್ಷಾವಧಿ ಜನರೂ ಕೂಡಿ ರಾಷ್ಟ್ರಕಾರ್ಯವನ್ನು ಮಾಡಲಾರೆವು. ರಾಷ್ಟ್ರದ ಮಹತ್ಪುಣ್ಯ ಫಲವಾಗಿಯಾಗಲಿ, ಈಶ್ವರೀ ಪ್ರಸಾದದಿಂದಾಗಲಿ ತಮ್ಮಂಥ ವಿಭೂತಿಗಳು ರಾಷ್ಟ್ರಕ್ಕೆ ಅಪರೂಪವಾಗಿ ಲಭಿಸುತ್ತಿರುವವು; ಅಂದಬಳಿಕ ರಾಷ್ಟ್ರವು ತಮ್ಮಂಥವರ ಸೇವೆಯಿಂದ ಧನ್ಯವಾಗುವದನ್ನು ಬಿಟ್ಟು, ಉದಾಸೀನ ಮಾಡಬಹುದೆಯೇ? ಭಗವನ್, ಕ್ಷುದ್ರಶತ್ರುಗಳ ಭಾವನೆಯನ್ನು ಕಟ್ಟಿಕೊಂಡು ನಾವು ಮಾಡುವದೇನು? ಅವರು ಸ್ವಯಂಸ್ಫೂರ್ತಿಯಿಂದ ಕರ್ನಾಟಕವು ಜಾಗ್ರತವಾಗಿರುವದೆಂದರೂ ಅಷ್ಟೆಯೇ, ತಮ್ಮಂಥ ಮಹಾವಿಭೂತಿಯ ಪ್ರೇರಣೆಯಿಂದ ಜಾಗ್ರತವಾಗಿರುವದೆಂದರೂ ಅಷ್ಟೆಯೆ. ನಮ್ಮ ಜಾಗ್ರತೆಯನ್ನು ನೋಡಿ ಅಸೂಯೆಪಟ್ಟು ಅದನ್ನು ಕುಗ್ಗುಬಡಿಯುವದಕ್ಕಾಗಿ ಮಾಡಬಾರದ ಯತ್ನಮಾಡುವ ಆ ನೀಚ ಶತ್ರುಗಳ ಮಗ್ಗಲು ಮುರಿಯಬೇಕಲ್ಲದೆ, ಅವರಿಗೆ ರಾಷ್ಟ್ರದ ಸತ್ಯಸ್ವರೂಪವನ್ನು ತಿಳಿಸಿ ಅವರ ಮನಸ್ಸನ್ನು ಒಡಂಬಡಿಸುವದರಿಂದಾಗಲಿ, ಅವರನ್ನು ಅಂಗಲಾಚಿ ಬೇಡಿಕೊಳ್ಳುವದರಿಂದಾಗಲಿ ಪ್ರಯೋಜನವೇನಾಗುವದು? ಅವರಿಗೆ ತಮ್ಮ ಜಾಗ್ರತಿಯೇ ಬೇಡಾಗಿರುವದರಿಂದ, ಎಷ್ಟು ಒಡಂಬಡಿಸಿದರೂ ಅವರು ಏನಾದರೂ ಹೆಸರಿಟ್ಟು ನಮ್ಮನ್ನು ಬಗ್ಗುಬಡಿಯುವದೇ ಸರಿ; ಮತ್ತು ಅಂಗಲಾಚಿ ಬೇಡಿಕೊಂಡರೆ, ಪೂರ್ಣ ಸ್ವಾತಂತ್ರ್ಯ ಬೇಡುವ ನಮಗೆ ಅದನ್ನು ಕೊಡಲು ಅವರು ಅಸಮರ್ಥರಾದದ್ದರಿಂದ ಆ ಬೇಡಿಕೊಳ್ಳುವದೂ ನಿಷ್ಪ್ರಯೋಜನವಾಗುವದು ! ಗುರುವರ, ತಮ್ಮ ಮುಂದೆ ಮಾತಾಡುವದು ಪ್ರಯೋಜನವಿಲ್ಲದ ಅಧಿಕಪ್ರಸಂಗವಾಗಿದ್ದರೂ, ನನ್ನ ಸಮಾಧಾನಕ್ಕಾಗಿ ಆಡುವದನ್ನು ಆಡಿಬಿಡುವೆನು. ಶತ್ರುಗಳಿಂದ ಬೇಡಿಕೊಂಡು ನಾವು ಪೂರ್ಣ ಸ್ವಾತಂತ್ರ್ಯವನ್ನು ಸಂಪಾದಿಸುವದು ತೀರ ಅಶಕ್ಯವಾಗಿರುವದು; ಯಾಕಂದರೆ ಬೇಡುವವರಿಗೆ ಕೊಡುವವರು ತಮ್ಮಲ್ಲಿದ್ದದ್ದರ ಕಾಲು ಪಾಲು ಕೊಟ್ಟಾರಲ್ಲದೆ, ಇದ್ದದ್ದನ್ನೆಲ್ಲ ಕೊಡಲಾರೆಂಬದು ಪ್ರಸಿದ್ಧವು. ಅಂದಬಳಿಕ ಯಾವ ರೀತಿಯಿಂದಾದರೂ ಶತ್ರುಗಳ ಕೈಯಿಂದ ನಾವು ಕಸಿದುಕೊಂಡರೆ ಮಾತ್ರ ನಮಗೆ ಪೂರ್ಣ ಸ್ವಾತಂತ್ರ್ಯ ಸಿಕ್ಕೀತಲ್ಲದೆ, ಬೇಡಿಕೊಂಡರೆ ಸಿಗಲಾರದು; ಆದ್ದರಿಂದ ನಮ್ಮ ಪ್ರಾಣವಾಗಿರುವ ತಮ್ಮನ್ನು ಹೀಗೆ ಹರಣ ಮಾಡಿಕೊಂಡು ಹೋಗಲು ಯತ್ನಿಸುವ ಶತ್ರುಗಳ ಸೇಡು ತೀರಿಸಿಕೊಳ್ಳುವದು ನಮ್ಮ ಅಗತ್ಯದ ಕೆಲಸವಾಗಿರುವದು. ತಾನು ಬಲಾಢ್ಯನೆಂಬ ಹೆಮ್ಮೆಯಿಂದ ಹೀಗೆ ಲೀಲಾಮಾತ್ರದಿಂದ ಕರ್ನಾಟಕದ ಪ್ರಾಣಹರಣ ಮಾಡಿ, ಕರ್ನಾಟಕವು ಹತವೀರ್ಯವಾದದ್ದೆಂದು ಜಗತ್ತಿನಲ್ಲಿ ಡಂಗುರ ಹೊಡೆದ ಅಪರಾಧಕ್ಕಾಗಿ ಆ ಮಲಿಕನಾಯಬನನ್ನು ಇನ್ನು ಎಂಟುದಿವಸಗಳಲ್ಲಿ ಸೆರೆಹಿಡಿಯದಿದ್ದರೆ ಈ ಕೃಷ್ಣನಾಯಕನ ಅಸ್ತಿತ್ವವೇ ಜಗತ್ತಿನಲ್ಲಿರಲಾರದು ! ಆದರೆ ಮಹಾತ್ಮನ್, ಇನ್ನು ಹೀಗೆ ರಾಷ್ಟ್ರವನ್ನು ಅಕಸ್ಮಾತ್ ಚಿಂತಾಸಾಗರದಲ್ಲಿ ಕೆಡವಲಿಕ್ಕಿಲ್ಲವೆಂಬ ಬಗ್ಗೆ ನಮಗೆ ಅಭಯವಚನವೀಯಬೇಕು; ಹಾಗೆ

ವಚನ ಕೊಡುವವರೆಗೆ ಈ ಸೇವಕನು ಮೇಲಕ್ಕೇಳಲಾರನು, ಎಂದು ನುಡಿದು ವೀರಾಗ್ರಣಿ ಕೃಷ್ಣನಾಯಕನು ಮಾಧವಾಚಾರ್ಯರೆದುರಿನಲ್ಲಿ ಭೂಮಿಯ ಮೇಲೆ ದಂಟಿನಹಾಗೆ ಬಿದ್ದುಬಿಟ್ಟನು ! ಆಗ ಹುಕ್ಕನೇ ಮೊದಲಾದ ವೀರರು ಉತ್ಸಾಹಗೊಳ್ಳುತ್ತಿರಲು, ಅವರಲ್ಲಿ ಹುಕ್ಕನು– ''ಬಹು ಯೋಗ್ಯ ಪ್ರಾರ್ಥನೆಯು, ಬಹು ಯೋಗ್ಯ ಪ್ರಾರ್ಥನೆಯು ! ನಮ್ಮಂಥ ಪಾಮರ ಶಿಷ್ಯರ ಸ್ವರೂಪವನ್ನರಿತು ಮಹಾತ್ಮರು ನಮಗೆ ಸಾಮರ್ಥ್ಯಕೊಟ್ಟು, ನಮ್ಮಿಂದಲೇ ರಾಷ್ಟ್ರಕಾರ್ಯಮಾಡಿಸಿ, ''ಕಡ್ಡಿಯ ಕೈಯಿಂದ ಗುಡ್ಡದಂಥ ಕಾರ್ಯ ಮಾಡಿಸುವ ಅಘಟನಾ ಘಟನ ಸಮರ್ಥರೆ''ನಿಸಿಕೊಂಡರೆ ನಮ್ಮನ್ನು ಕೃತಾರ್ಥರನ್ನು ಮಾಡಿದ ಹಾಗಾಗುವದಲ್ಲದೆ, ಮಹಾ ಸಮರ್ಥರಾದವರು ತಮ್ಮ ಸಾಮರ್ಥ್ಯದಿಂದ ಕಾರ್ಯ ಮಾಡಿ ಮತ್ತೂ ಮಹಾ ಸಮರ್ಥರೆನಿಸಿಕೊಳ್ಳುವದರಲ್ಲಿ ಕರುಣಾ ಶಾಲಿತ್ವದ ಅಂಶವು ಕಡಿಮೆಯಿರುವದೆಂದು ನನಗೆ ತೋರುತ್ತದೆ ! ಗುರುವರ, ವೀರ ಕೃಷ್ಣನಾಯಕನ ಪ್ರಾರ್ಥನೆಯಂತೆ ನಮಗೆ ವಚನ ಕೊಡಲೇಬೇಕು. ಕರ್ನಾಟಕದ ಸತ್ವ ಹೊಯ್ದು ಮೂರ್ತಿ ಮಾಡಿದಂತೆ ಇದ್ದ ಬೈರಾಗಿಣಿಯೂ, ಪದ್ಮಿನಿದೇವಿಯೂ ತಮ್ಮ ಘೋರ ಪ್ರತಿಜ್ಞೆಯಿಂದ ನಮ್ಮನ್ನು ಋಣಿಯಾಗಮಾಡಿರುವಾಗಲೇ ಕರ್ನಾಟಕದ ಗೌರವವು ರಕ್ಷಿಸಲ್ಪಟ್ಟಿರುವದು. ಭಗವನ್, ಆ ತೇಜಸ್ವಿಯರ ಪ್ರತಿಜ್ಞೆಯೇ ನಮ್ಮನ್ನು ಕುರಿತು ರಾಷ್ಟ್ರವು ಮಾಡಿದ ಆಜ್ಞೆಯೆಂದು ತಿಳಿದು ಅದನ್ನು ಪಾಲಿಸುವಲ್ಲಿ ನಮ್ಮ ದೇಹವನ್ನಾದರೂ ಅರ್ಪಿಸುವೆವು; ಆದರೆ ನಮ್ಮ ಮೇಲಲ್ಲದಿದ್ದರೂ ನಮ್ಮ ಆ ಸತ್ವಶಾಲಿನಿಗಳಾದ ಭಗಿನಿಯರ ಮೇಲಿನ ವಾತ್ಸಲ್ಯದಿಂದ, ಅವರ ಮನಸ್ಸು ಇನ್ನು ಮೇಲೆ ಇಷ್ಟು ವ್ಯಾಕುಲಗೊಳ್ಳದಂತೆ ನಡೆಯುವವೆಂದು ತಾವು ನಮಗೆ ವಚನ ಕೊಡಲೇಬೇಕು'' ಎಂದು ನುಡಿದು, ಆತನೂ ಕೃಷ್ಣನಾಯಕನಂತೆ ಗುರುವರನ ಮುಂದೆ ಅಡ್ಡಬಿದ್ದನು ! ಆಗ ಶಿಷ್ಯವತ್ಸಲರಾದ ಮಾಧವಾಚಾರ್ಯರು ಪರಮವಾತ್ಸಲ್ಯದಿಂದ ಅವರನ್ನು ಕುರಿತು– ''ಕನ್ನಡ ವೀರರೇ, ನಿಮ್ಮಂಥ ಸತ್ವಸ್ಥರ ಸಲುವಾಗಿಯೇ ರಾಜಕಾರಣದಲ್ಲಿ ಸೇರಿರುವ ಈ ಮಾಧವನು ನಿಮ್ಮ ಇಚ್ಛೆಯಂತೆ ವಚನ ಕೊಡುವನು ಏಳಿರಿ. ನಮ್ಮ ಬೈರಾಗಿಣಿ–ಪದ್ಮಿನೀದೇವಿಯರಂಥ ಸತ್ವಸ್ಥ ಅಬಲೆಯರ ಸತ್ವರಕ್ಷಣಕ್ಕಾಗಿ ದೇಹಪಾತ ಮಾಡಿಕೊಳ್ಳಲಿಕ್ಕೂ ಹಿಂದೆ ಮುಂದೆ ನೋಡದ ನಿಮ್ಮಂಥ ರಾಷ್ಟ್ರಭಕ್ತರ ಸಾತ್ವಿಕ ಕಾರ್ಯಗಳನ್ನು ನೋಡಿ ಆನಂದಪಡುವದನ್ನು ಬಿಟ್ಟು, ನನ್ನನ್ನು ಸಂಕಟದಲ್ಲಿ ಯಾಕೆ ಕೆಡವಿಕೊಳ್ಳಲಿ? ಈಗ ನಾನು ಶತ್ರುಗಳ ಕೈಸೇರುವದರಲ್ಲಿಯೂ ಗೂಢ ರಾಜತಂತ್ರ ವಿರುವದೆಂಬದರ ಅನುಭವವು ಮುಂದೆ ನಿಮಗೆ ಆಗುವದು. ನಿಮ್ಮಂಥ ತೇಜಸ್ವಿಗಳ ಪ್ರೀತಿಗೆ ಪಾತ್ರನಾದ ನನ್ನನ್ನು ಅದಾವ ಮಹಾ ಶತ್ರುವು ಅಳುಕಿಸಲು ಸಮರ್ಥನಾಗುವನು? ಕನ್ನಡ ವೀರರೇ, ನಿಮಗೆ ವಚನ ಕೊಡುವೆನು, ಇನ್ನು ಮೇಲೆ ನಿಮ್ಮನ್ನು ಬಿಟ್ಟು ರಾಷ್ಟ್ರಕಾರ್ಯಕ್ಕಾಗಿ ನಾನು ಯಾವ ಸಂಕಟದಲ್ಲಿಯೂ ಬೀಳುವದಿಲ್ಲ; ಮೇಲಕ್ಕೇಳಿರಿ'' ಎಂದು ನುಡಿಯಲು ಎಲ್ಲರೂ ಆನಂದಭರಿತರಾಗಿ ಜಯಘೋಷ ಮಾಡಿ ಬೈರಾಗಿಣಿಯ ಪ್ರತಿಜ್ಞೆಯನ್ನು ಪೂರ್ಣ ಮಾಡುವದಕ್ಕಾಗಿ ತಮ್ಮತಮ್ಮ ಮನಸ್ಸಿನಲ್ಲಿ ಪ್ರತಿಜ್ಞೆಮಾಡಿದರು!

## ದೇಶದ್ರೋಹಿಗಳ ಹೇಸಿತನವು

ಪ್ರಿಯ ವಾಚಕರೇ, ಈ ಮೇರೆಗೆ ದೇಶಭಕ್ತರು ರಾಷ್ಟ್ರೋದ್ಧಾರಕ್ಕಾಗಿ ಸರ್ವಸ್ವವನ್ನು ತ್ಯಾಗ ಮಾಡಲು ನಿಶ್ಚಯಿಸುತ್ತಿರಲು, ಅತ್ತ ಮುಸಲ್ಮಾನರ ಪಾಳಯದಲ್ಲಿದ್ದ ತಿರುವೇಂಕಟನಂಥ ದೇಶ ದ್ರೋಹಿಗಳು ನೀಚಸ್ವಾರ್ಥದ ಬಲೆಗೆ ಬಿದ್ದು, ಅಬ್ದುಲ ರಹಿಮಾನನೊಡನೆ ಏನು ಆಲೋಚನೆ ಮಾಡುತ್ತಿದ್ದರೆಂಬುದನ್ನು ನೋಡೋಣ. ಮಾಧವಾಚಾರ್ಯರಿಗೆ ಮಲಿಕನಾಯಬನ ಪತ್ರವನ್ನು ಕೊಟ್ಟು ತಿರುಗಿ ಪಾಳಯಕ್ಕೆ ಬಂದಬಳಿಕ ತಿರುವೇಂಕಟನು ಶ್ರೀಕಂಠ ಶಾಸ್ತ್ರಿಯನ್ನು ಕುರಿತು–

ತಿರುವೇಂಕಟ— ಶಾಸ್ತ್ರಿಗಳೇ, ನೀವು ಏನು ತರ್ಕಿಸುವಿರಿ? ಮಾಧವಾಚಾರ್ಯರು ತಾವಾಗಿ ನಮ್ಮ ಕೈಸೇರುವ ಸಂಭವವಿರುವದೋ ಹೇಗೆ? ಆ ತೇಜಸ್ವಿಯಾದ ಬ್ರಾಹ್ಮಣನ ಹೃದ್ಗತವನ್ನು ತಿಳಿದುಕೊಳ್ಳುವದಂತು ಇರಲಿ, ಆತನ ಕೈಯಲ್ಲಿ ಪತ್ರ ಕೊಡುವಾಗ ನನ್ನ ಕೈಗಳು ನಡುಗಹತ್ತಿದವು ! ನೀವು ಆ ಕಾಲದಲ್ಲಿ ಮುಂದುವರಿದು ಮಾತಾಡದಿದ್ದರೆ, ನನ್ನ ಸ್ವರೂಪ ನಿರ್ಣಯವು ಇನ್ನೂ ಆಗುತ್ತಿತ್ತು. ಸಮರದಲ್ಲಿ ಎಂಥ ಶತ್ರುವಿನೊಡನೆಯಾದರೂ ಯುದ್ಧ ಮಾಡಿ ಕ್ಷಾತ್ರತೇಜಸ್ಸನ್ನು ಪ್ರಕಟಿಸಬಹುದು; ಆದರೆ ಮಾಧವಾಚಾರ್ಯರಂಥ ತೇಜಸ್ವಿ ಬ್ರಾಹ್ಮಣನೊಡನೆ ವ್ಯವಹರಿಸುವದು ಬಲು ಕಷ್ಟವು !

ಶ್ರೀಕಂಠಶಾಸ್ತ್ರಿ— ಅದರಲ್ಲಿ ಸಂಶಯವೇನು? ಮಾಧವಾಚಾರ್ಯರ ಯೋಗ್ಯತೆಯೇ ಅಂತಹದು ! ಅವರು ಸ್ವಾರ್ಥರಹಿತರು, ನಾವು ನೀಚಸ್ವಾರ್ಥದ ಬಲೆಗೆ ಬಿದ್ದವರು; ಅವರು ಕರ್ನಾಟಕದ ಉದ್ಧಾರಕ್ಕಾಗಿ ಯತ್ನಿಸುವವರು, ನಾವು ದೇಶದ್ರೋಹ ಮಾಡಿಯಾದರೂ ನಮ್ಮ ಹಿತವನ್ನು ಸಾಧಿಸಲು ಹೆಣಗುವವರು; ಅಂದಬಳಿಕ ಅವರ ಅಂಜಿಕೆಯು ನಮಗೆ ಬಾರದೇನು ಮಾಡೀತು? ಆದರೆ ತಿರುವೇಂಕಟ, ಈಗ ಈ ವಿಚಾರವೇಕೆ? ಇದು ನಮ್ಮ ನಮ್ಮೊಳಗೆ ವಿಚಾರಮಾಡುವ ಮಟ್ಟಿಗೆಯಲ್ಲದೆ ನಮ್ಮ ಆಚರಣೆಯ ಮೇಲೆ ಈ ವಿಚಾರದ ಪರಿಣಾಮವಾಗ ಗೊಡುವದು ಹಿತಕರವಲ್ಲ. ಏನೇ ಆಗಲಿ, ಆ ಉದ್ಧಟ ಮಾಧವನ ಪಾರುಪತ್ಯ ಮಾಡಿ ನಮ್ಮ ಹಿತವನ್ನು ಸಾಧಿಸಿಕೊಳ್ಳಲೇಬೇಕು. ಮಾಧವನು ನನ್ನನ್ನು ಒಮ್ಮೆ ವಿದ್ವತ್ಸಭೆಯಲ್ಲಿ ಅಪಮಾನ ಮಾಡಿರುವದರಿಂದ ಅದರ ಸೇಡನ್ನು ನಾನು ತೀರಿಸಿಕೊಳ್ಳಲೇಬೇಕಾಗಿರುವದು. ಆನೆಗುಂದಿಯ ವಿಷಯದ ನಿಮ್ಮ ಆಸೆಯು ಅಳಿದುಹೋಗಿಲ್ಲವಷ್ಟೆ? ಮಾಧವನು ವಿದ್ವಾಂಸನಿರುವನು, ತಪಸ್ವಿಯಿರುವನು, ರಾಜಕಾರಣ ಪಟುವೂ ಇರುವನು; ಆದರೆ ಅವನು ನಮ್ಮವನೆಲ್ಲಿರುವನು? ಆದ್ದರಿಂದ ಮಾಡಬಾರದ್ದು ಮಾಡಿ, ಮಾಧವನ ಹಾಗು ಅವನ ಅನುಯಾಯಿಗಳ ಸೊಕ್ಕನ್ನು ಮುರಿಯಲೇಬೇಕು. ಈ ಪ್ರಸಂಗದಲ್ಲಿ ದಯಾ–ದಾಕ್ಷಿಣ್ಯಗಳನ್ನಾಗಲಿ, ನೀತಿ–ನ್ಯಾಯಗಳನ್ನಾಗಲಿ ನೋಡುವ ಕಾರಣವಿಲ್ಲ.

ತಿರುವೇಂಕಟ— ಶಾಸ್ತ್ರಿಗಳೇ, ತಿರುಗಿ ಕೇಳಿದರೆ ನನಗೆ ಯಾತರ ಅಭಿಮಾನವೂ ಇಲ್ಲ; ನಾನು ಕೇವಲ ಸ್ವಹಿತದಕ್ಷನು ! ಸ್ವಹಿತವನ್ನು ಸಾಧಿಸುವಾಗ ನಾನು ನ್ಯಾಯಾನ್ಯಾಯಗಳನ್ನಾಗಲಿ, ದಯ–ದಾಕ್ಷಿಣ್ಯಗಳನ್ನಾಗಿ ಮಾನಾಪಮಾನಗಳನ್ನಾಗಲಿ, ಧರ್ಮ– ನೀತಿಗಳನ್ನಾಗಲಿ

ನೋಡುವವನಲ್ಲ. ಸುಮ್ಮನೆ ನಿಮ್ಮ ಮನಸ್ಸನ್ನು ಪರೀಕ್ಷಿಸುವದಕ್ಕಾಗಿ ಹೀಗೆ ಮಾತಾಡಿದೆನು. ಮಾಧವಾಚಾರ್ಯರ ವಿಷಯವಾಗಿ ನಿಮ್ಮ ಅಂತರಂಗದಲ್ಲಿ ಪ್ರೇಮವಿರುವದೆಂಬ ಸಂಶಯವು ನನಗೆ ಬಂದಿತ್ತು; ಆದರೆ ಮಾಧವಾಚಾರ್ಯರ ಗುಣ–ಯೋಗ್ಯತೆಯನ್ನರಿತೂ ನೀವು ಅವರನ್ನು ದ್ವೇಷಿಸುವದನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಇನ್ನು ನನ್ನ ಅಂತರಂಗವನ್ನು ನಿಮಗೆ ತಿಳಿಸಲು ಭೀತಿಯಿಲ್ಲ.

ಶಾಸ್ತ್ರಿ—ತಿರುವೇಂಕಟ, ನೀವು ನಿಮ್ಮ ಅಂತರಂಗವನ್ನು ನನಗೆ ತಿಳಿಸಿರಿ ಅಥವಾ ತಿಳಿಸದೆ ಇರ್ರಿ. ನೀವು ನನ್ನ ವಿಷಯವಾಗಿ ಯಾವ ಭೀತಿಯನ್ನೂ ಹಿಡಿಯಬೇಡಿರಿ. ಒಂದು ಪಕ್ಷದಲ್ಲಿ ಮಾಧವಾಚಾರ್ಯರ ವರ್ಚಸ್ಸಿಗೆ ನೀವು ಒಳಗಾಗಬಹುದು; ಆದರೆ ಈ ಶ್ರೀಕಂಠಶಾಸ್ತ್ರಿಯು ಆ ನನ್ನ ಶತ್ರುವಿನ ವರ್ಚಸ್ಸನ್ನು ಮಣ್ಣುಗೂಡಿಸದೆ ಬಿಡುವ ಹಾಗಿಲ್ಲ! ನನ್ನಂಥ ವಿದ್ವಾಂಸನಿರುತ್ತ ಆ ಮಾಧವನಿಗೆ ರಾಜಕಾರಣದಲ್ಲಿ ಅಗ್ರಮಾನವೇ? ನಾನೂ ಬ್ರಾಹ್ಮಣನೇ ಇರುತ್ತೇನೆ; ನನ್ನ ರಾಜಕಾರಣದ ಪಡಿಕಟ್ಟನ್ನು ಅವನು ಬೇಗನೆ ನೋಡುವನು. ಕರ್ನಾಟಕವು ಯವನಮಯ ವಾದರೂ ಚಿಂತೆಯಿಲ್ಲ; ನಾನು ಆ ಮಾಧವಾಚಾರ್ಯನ ಸೇಡು ತೀರಿಸಿಕೊಳ್ಳದೆ ಬಿಡುವಹಾಗಿಲ್ಲ.

ತಿರುವೇಂಕಟ—ಶಾಬಾಸ! ಶಾಸ್ತ್ರಿಗಳೇ, ನಿಮ್ಮ ಮಾತನ್ನು ಕೇಳಿ ನನಗೆ ಬಹಳ ಸಂತೋಷ ವಾಗುತ್ತದೆ; ನಿಮ್ಮನ್ನು ನಾನು ಗುರುಸ್ಥಾನದಲ್ಲಿ ಎಣಿಸತಕ್ಕದ್ದು; ಹೀಗಿರಲು, ನಿಮ್ಮ ವಿಷಯವಾಗಿ ನಾನು ಶಂಕಿಸಿದ್ದಕ್ಕಾಗಿ ನನ್ನನ್ನು ಕ್ಷಮಿಸಿರಿ. ಇಂದಿನಿಂದ ನಾನು ಯಾವ ಸಂಗತಿಯನ್ನೂ ನಿಮ್ಮಿಂದ ಬಚ್ಚಿ ಇಡುವದಿಲ್ಲ. ನನ್ನ ಪಕ್ಷದ ಜನರು ಗುಪ್ತರೀತಿಯಿಂದ ಕಂಪಲಿಯ ಕೋಟೆಯಲ್ಲಿರುವರು; ಅವರಲ್ಲಿ ಕೆಲವರು ಹೆಂಗಸರೂ ಇರುವರು. ಅವರ ಸಹಾಯದಿಂದ ಎರಡು ದೊಡ್ಡ ಕಾರ್ಯ ಗಳನ್ನು ಸಾಧಿಸಬೇಕೆಂದು ನಾನು ಮಾಡಿದ್ದೇನೆ.

ಶಾಸ್ತ್ರಿ—ಅದಾವ ಕಾರ್ಯಗಳು?

ತಿರುವೇಂಕಟ—ರಾಜಪುತ್ರಿಯಾದ ಪದ್ಮಿನಿಯನ್ನು ಗುಪ್ತರೀತಿಯಿಂದ ಹರಣಮಾಡುವದು ಒಂದನೆಯದು! ಪದ್ಮಿನಿಯಂಥ ಕನ್ಯಾರತ್ನವು ದೊರೆಯುವದು ದೊಡ್ಡ ಲಾಭವಲ್ಲವೆ? ಆ ರಾಜಪುತ್ರಿಯನ್ನು ಲಗ್ನವಾಗಲು ಮೊದಲಿನಿಂದ ನಾನು ಹೊಂಚುಹಾಕಿರುವೆನು. ಇದರ ಹೊರತು ನಾನು ಮಾಡಬೇಕೆಂದು ಯೋಚಿಸಿರುವ ಎರಡನೆಯ ಮಹತ್ವದ ಕೆಲಸವೆಂದರೆ, ಅಲ್ಪ ಸೈನ್ಯದೊಡನೆ ಮಾಧವಾಚಾರ್ಯರನ್ನು ಕಾಂಚನಗಡಕ್ಕೆ ದಾಟಹಾಕಿ ಉಳಿದ ಸೈನ್ಯದೊಡನೆ ಕಂಪಲಿಯ ಕೋಟೆಯನ್ನು ಮುತ್ತಿ ಅದನ್ನು ಸ್ವಾಧೀನಪಡಿಸಿಕೊಂಡು ಹುಕ್ಕ ಮೊದಲಾದ ಪ್ರಮುಖರನ್ನು ಸೆರೆಹಿಡಿದು ನಾಯಬನಿಗೆ ಒಪ್ಪಿಸುವದು ! ಯಾಕೆ? ಇವೆರಡೂ ಕೆಲಸಗಳು ಮಹತ್ವದಲ್ಲವೆ?

ಶಾಸ್ತ್ರೀ—ಹೌದು, ಮಹತ್ವದವೆಂಬದೇನೋ ನಿಜ; ಈ ಎರಡೂ ಕಾರ್ಯಗಳನ್ನು ನೀವು ಸಾಧಿಸಿದರೆ ಮಲಿಕನಾಯಬನ ಇಚ್ಛೆಯಂತೆ ಎಲ್ಲ ಕಾರ್ಯವನ್ನು ಮಾಡಿದಹಾಗಾಗಿ, ನಿಮಗೆ ಆನೆ ಗುಂದಿಯ ಸಂಸ್ಥಾನದ ಆಧಿಪತ್ಯವೂ ನಿಶ್ಚಯವಾಗಿ ದೊರೆಯುವದು; ಆದರೆ ಮುಖ್ಯ ಸೇನಾಪತಿಗಳಾದ ಅಬ್ದುಲ ರಹಿಮಾನರು ಇದಕ್ಕೆ ಒಪ್ಪಬಹುದೋ? ಅವರು ಮಲಿಕನಾಯಬನ

ಅಪ್ಪಣೆಯನ್ನು ಅತಿಕ್ರಮಿಸಲಿಕ್ಕಿಲ್ಲ; ಮಾಧವಾಚಾರ್ಯರನ್ನು ಹಿಡಿದುಕೊಂಡು ಬರಬೇಕೆಂದು ನಾಯಬನ ಅಪ್ಪಣೆಯಾಗಿರುವದು; ಮಾಧವಾಚಾರ್ಯರು ಸಾಮೋಪಾಯದಿಂದ ವಶವಾದರೆ ಯುದ್ಧ ಮಾಡಬಾರದೆಂದು ನಾಯಬನು ಆಜ್ಞಾಪಿಸಿರುವನಲ್ಲವೆ?

ತಿರುವೇಂಕಟ–ಶಾಸ್ತ್ರಿಗಳೇ, ನೀವು ಎಷ್ಟಾದರೂ ವೈದಿಕರು; ರಾಜಕಾರಣದ ಸೂಕ್ಷ್ಮ ಹಿಡತಗಳು ನಿಮಗೆ ತಿಳಿಯವು. ಮಾಧವಾಚಾರ್ಯರೊಡನೆ ಹುಕ್ಕ–ಬುಕ್ಕ ಮೊದಲಾದವರನ್ನು ಸೆರೆ ಹಿಡಿದೊಯ್ದರೆ ಅಬ್ದುಲ ರಹಿಮಾನನಿಗೆ ಬೇಡಾದೀತೇ? ಮತ್ತು ಮಲಿಕನಾಯಬನಿಗೆ ಬೇಡಾದೀತೇ? ಈ ಕಾರ್ಯವು ನನ್ನ ಸಹಾಯದಿಂದಲ್ಲದೆ ಅನ್ಯರಿಂದ ಸಾಧಿಸುವ ಹಾಗಿಲ್ಲ. ಕಂಪಲಿಯ ಕೋಟೆಯೊಳಗಿನ ಗುಪ್ತದ್ವಾರಗಳು ನನಗೆ ಗೊತ್ತಿರುವವು; ನಮ್ಮ ಜನರ ಹುಳುಕು ನನಗೆ ಗೊತ್ತಿದ್ದ ಹಾಗೆ ಹೊರಗಿನವರಾದ ಮುಸಲ್ಮಾನರಿಗೆ ಗೊತ್ತಿರಲಾರವು; ಆದ್ದರಿಂದ ನಮ್ಮನ್ನು ದೇಶದ್ರೋಹಿಗಳೆಂದು ಜರಿದಾಡುವ ಹುಕ್ಕ ಮೊದಲಾದವರ ಶಾಸನವನ್ನು ಸಾಧಿಸಿದ ಉಪಾಯದಿಂದ ನಾವು ಮೊದಲು ಮಾಡತಕ್ಕದ್ದು! ಈ ಮಾತು, ಕರ್ನಾಟಕವನ್ನು ಸ್ವಾಧೀನ ಪಡಿಸಿಕೊಳ್ಳಬೇಕೆಂದು ಯತ್ನಿಸುತ್ತಿರುವ ಮುಸಲ್ಮಾನ ಅಧಿಕಾರಸ್ಥರಿಗೆ ಹ್ಯಾಗೆ ಬೇಡಾದೀತು?

ಈ ಮೇರೆಗೆ ಸಂಭಾಷಣವು ನಡೆದಿರುವಾಗ ದರ್ಬಾರಕ್ಕೆ ಹೋಗುವ ಹೊತ್ತಾಯಿತು. ಈದಿನ ನಾಲ್ಕುತಾಸಿನೊಳಗಾಗಿ ಮಾಧವಾಚಾರ್ಯರಿಂದ ಏನಾದರೂ ಉತ್ತರ ಬರಬೇಕಾದದ್ದರಿಂದ ಎಲ್ಲ ಮುಸಲ್ಮಾನರು ಉತ್ಸುಕತೆಯಿಂದ ದರ್ಬಾರಕ್ಕೆ ಸಾಗಿದ್ದರು. ತಾವು ಮಹಾ ಬಲಿಷ್ಠರೆಂದು ನಂಬಿದ್ದ ಮುಸಲ್ಮಾನರಿಗೆ ಯುದ್ಧಪ್ರಸಂಗವು ಅವಶ್ಯವಾಗಿ ಒದಗಬೇಕಾಗಿತ್ತು; ಯಾಕಂದರೆ ಅವರು ಹೊನ್ನು–ಹೆಣ್ಣುಗಳ ಸುಲಿಗೆಯ ಸವಿಗಂಡವರಿದ್ದರು. ಯುದ್ಧಪ್ರಸಂಗವು ಒದಗದೆ ಕಾರ್ಯವಾಗ ಬೇಕೆಂದು ಮಲಿಕನಾಯಬನು ನಿರ್ಬಂಧಿಸಿದ್ದು ಬಹುಜನ ಸೈನಿಕರ ಮನಸ್ಸಿಗೆ ಬಂದಿದ್ದಿಲ್ಲ. ಹೀಗಿರುವಾಗ ತಿರುವೇಂಕಟನೂ ಶ್ರೀಕಂಠಶಾಸ್ತ್ರಿಯೂ ದರ್ಬಾರಕ್ಕೆ ಹೋದರು; ಆಗ ಎರಡು ತಾಸು ಹೊತ್ತು ಏರಿರಬಹುದು. ಮಾಧವಾಚಾರ್ಯರಿಂದ ಉತ್ತರ ಬರಲಿಕ್ಕೆ ಇನ್ನೂ ಎರಡು ತಾಸಿನ ಅಕಾಶವಿತ್ತು; ಆದ್ದರಿಂದ ಅಬದುಲ ರಹಿಮಾನನು ತಿರುವೇಂಕಟನನ್ನೂ, ಶ್ರೀಕಂಠಶಾಸ್ತ್ರಿಯನ್ನೂ ಏಕಾಂತದಲ್ಲಿ ಕರಿಸಿಕೊಂಡು ಅವರೊಡನೆ ಆಲೋಚಿಸತೊಡಗಿದನು. ಆತನು ತಿರುವೇಂಕಟನನ್ನು ಕುರಿತು–

ಅಬ್ದುಲರಹಿಮಾನ— ಸರದಾರಸಾಹೇಬ, ಹಾಗಾದರೆ ಮಾಧವಾಚಾರ್ಯರು ತಾವಾಗಿ ನಮ್ಮ ವಶವಾಗುವರೆಂದು ಹೇಳುವಿರಾ? ಆ ತೇಜಸ್ವಿಯಾದ ಬ್ರಾಹ್ಮಣನು ಶತ್ರುಗಳ ದವಡೆಯಲ್ಲಿ ಸಿಕ್ಕಿಕೊಳ್ಳುವ ಇಂಥ ಸಾಹಸ ಮಾಡಿ ತನ್ನ ಸ್ವರಾಜ್ಯಸ್ಥಾಪನೆಯ ಕಾರ್ಯಕ್ಕೆ ತಾನಾಗಿ ವಿಘ್ನವನ್ನುಂಟು ಮಾಡಿಕೊಳ್ಳಬಹುದೆ?

ತಿರುವೇಂಕಟ— ಖಾನಸಾಹೇಬ, ಆಚಾರ್ಯರು ಹಾಗೆ ತಾವಾಗಿ ನಮ್ಮ ಕೈಸೇರದಿದ್ದರೆ ಗತಿಯೇ ಇಲ್ಲ. ನಮ್ಮ ಪ್ರಚಂಡ ಸೈನ್ಯದ ಬಲಕ್ಕೆ ಅವರ ಅಲ್ಪ ಸೈನ್ಯದ ಬಲವು ಸರ್ವಥಾ ಈಡಾಗುವ ಹಾಗಿಲ್ಲ; ಆದ್ದರಿಂದ ಇಂದಿನ ಸಾವು ನಾಳೆಗೆ ಬರಲೆಂದು ಆ ಧೂರ್ತ ಬ್ರಾಹ್ಮಣನು ತಾನಾಗಿ ನಮ್ಮ ಸೆರೆಯಾಳಾಗಿ ಸದ್ಯಕ್ಕೆ ಯುದ್ಧಪ್ರಸಂಗವನ್ನು ತಪ್ಪಿಸಿಕೊಳ್ಳುವನು; ಆದರೆ ಮಾಧವಾಚಾರ್ಯನು

ನಮ್ಮ ಕೈಸೇರಿದರೂ ತಾವು ಮಾತ್ರ ಯುದ್ಧಮಾಡಿ ಕಂಪಲಿಯ ಕೋಟೆಯನ್ನು ಸ್ವಾಧೀನಪಡಿಸಿಕೊಂಡು ಹುಕ್ಕ-ಬುಕ್ಕ ಮೊದಲಾದ ಪುಂಡರನ್ನು ಸೆರೆಹಿಡಿದು ಈ ರಾಜದ್ರೋಹದ ಸಸಿಯನ್ನು ಬೇರುಸಹಿತವಾಗಿ ಕಿತ್ತಿ ಒಗೆಯಲಿಕ್ಕೆ ಹಿಂದೆಮುಂದೆ ನೋಡಬಾರದು. ನಾಯಬರು ಒಂದು ಕಾರ್ಯ ಮಾಡಹೇಳಿದ್ದರೆ ನಾವು ಎರಡು ಕಾರ್ಯ ಮಾಡಿಕೊಂಡು ಹೋಗಿ ಅವರ ಪ್ರೀತಿಗೆ ಪಾತ್ರರಾಗೋಣ!

ಅಬ್ದುಲರಹಿಮಾನ— ನಾಯಬರಿಂದ ಒಂದು ಸಂಸ್ಥಾನದ ಅಧಿಪತ್ಯ ಪಡೆಯಲು ಆತುರಪಡುತ್ತಿದ್ದ ನಿಮಗೆ ಕಂಪಲಿ ಕೋಟೆಯನ್ನು ವಶಮಾಡಿಕೊಳ್ಳುವದು ಸುಲಭವಾಗಿ ತೋರುತ್ತಿರಬಹುದು; ಆದರೆ ರಾಜಕಾರ್ಯ ಕುಶಲರಾದ ಮಾಧವಾಚಾರ್ಯರ ದೇಶಭಕ್ತಿಪ್ರೇರಿತ ಅನುಯಾಯಿಗಳನ್ನು ಹಣ್ಣಿಗೆ ತರುವದು ಅಷ್ಟು ಸುಲಭವಾದದ್ದೆಂದು ನನಗೇನು ತೋರುವದಿಲ್ಲ. ಮಲಿಕನಾಯಬರಂಥ ಚತುರ ಮುತ್ಸದ್ದಿಗಳು ಈಗಿನ ಮುಸಲ್ಮಾನರಲ್ಲಿ ವಿರಳ. ಅಂಥವರು ಸದ್ಯಕ್ಕೆ ಯುದ್ಧಮಾಡುವದನ್ನು ದುರ್ಲಕ್ಷಿಸಿ ಮಾಧವಾಚಾರ್ಯರನ್ನು ಸೆರೆಹಿಡಿಯುವದಷ್ಟೇ ಮಹತ್ವದ್ದೆಂದು ಎಣಿಸಿದ್ದರಲ್ಲಿ ಏನಾದರೂ ಅರ್ಥವಿರಬಹುದು; ಮೇಲಾಗಿ ಮಲಿಕನಾಯಬರು ಕೈಮುಟ್ಟಿ ಬರಕೊಟ್ಟಿರುವ ಪತ್ರದ ವಿರುದ್ಧವಾಗಿ ನಾವು ನಡೆದರೆ, ಮೋಸಗಾರರೆಂಬ ಆರೋಪವು ಮಲಿಕ ನಾಯಬರಿಗೆ ಬರುವದು. ಆದರೆ, ಆ ನೀತಿಸಂಪನ್ನ ನಾಯಬರಿಗೆ ಇಂಥ ಮರೆಮೋಸಗಳು ಸಹನವಾಗದೆ, ನಾವು ಶಿಕ್ಷೆಗೆ ಗುರಿಯಾಗಬೇಕಾದೀತು; ಆದ್ದರಿಂದ ಮಾಧವಾಚಾರ್ಯರು ತಾವಾಗಿ ನಮ್ಮ ಬಳಿಗೆ ಬಂದರೆ ನಾಯಬರ ಅಪ್ಪಣೆಯಂತೆ ನಾವು ಅವರನ್ನು ಸೆರೆಹಿಡಿದುಕೊಂಡು ಕಾಂಚನಗಡಕ್ಕೆ ಹೋಗಿ ಬಿಡತಕ್ಕದ್ದು. ಆಮೇಲೆ ಪುನಃ ನಾಯಬನ ಅಪ್ಪಣೆ ಪಡೆದು ರಾಜದ್ರೋಹಿಗಳಾದ ಪುಂಡರ ಬಂಡು ಮುರಿಯಲಿಕ್ಕೆ ತೊಂದರೆಯಿಲ್ಲ; ಆದರೆ ಈಗ ನಾವು ಹೆಚ್ಚಿನ ಅನ್ಯ ಯಾವ ಕೆಲಸ ಮಾಡಿಯೂ ನಾಯಬರಿಗೆ ಅಪರಾಧಿಗಳಾಗುವದು ಯೋಗವಲ್ಲ; ಇರಲಿ, ಸದ್ಯಕ್ಕೆ ಆ ಮಾತು ಬೇಡ, ಆಚಾರ್ಯರು ತಾವಾಗಿ ನಮ್ಮಲ್ಲಿಗೆ ಬರುವರೆಂದು ನೀವು ಹ್ಯಾಗೆ ನಿಶ್ಚಯಿಸಿರುವಿರಿ?

ತಿರುವೇಂಕಟ— ಈ ಮಾತಿನ ನಿಶ್ಚಯವನ್ನು ನಾನು ನಿನ್ನೆ ಮಾಧವಾಚಾರ್ಯರನ್ನು ಕಂಡಾಗಲೇ ಮಾಡಿರುವೆನು. ಕಂಪಲಿಯ ಕೋಟೆಯು ವಶವಾದ ಬಳಿಕ ಆ ಕೋಟೆಯ ಸುರಕ್ಷಿತತೆಯ ಕಡೆಗೆ ಲಕ್ಷಗೊಡದೆ ಬಾಯಿ ಬಡಕ ಬ್ರಾಹ್ಮಣರಾದ ಆಚಾರ್ಯರು ಒಂದೇಸವನೆ ಜನರನ್ನು ಬೋಧಿಸುವಲ್ಲಿ ಕಾಲಹರಣ ಮಾಡಿರುವರು. ಇವನ್ನು ಕಂಪಲಿಯಲ್ಲಿರುವ ನನ್ನ ಪಕ್ಷದ ಜನರು ತಿಳಿಸಿದ್ದರಿಂದ ಅಕಸ್ಮಾತ್ತಾಗಿ ಪ್ರಚಂಡ ಸೈನ್ಯದೊಡನೆ ಹೀಗೆ ಮುತ್ತಿಗೆ ಹಾಕುವ ಆಲೋಚನೆಯನ್ನು ನಾನೇ ನಾಯಬರಿಗೆ ಸೂಚಿಸಿದೆನು. ಮತ್ತು ಹಾಗೆ ಸೂಚಿಸುವಾಗ ನಾನು ಕಂಪಲಿಯ ಕೋಟೆಯನ್ನು ಈಗಲೇ ಉಧ್ವಸ್ತ ಮಾಡಿ ಮಾಧವಾಚಾರ್ಯರೇ ಮೊದಲಾದವರನ್ನು ಸೆರೆ ಹಿಡಕೊಂಡು ಬರಬೇಕೆಂತಲೂ ನಾಯಬರಿಗೆ ಹೇಳಿದೆನು; ಆದರೆ ನನ್ನ ಮಾತು ನಾಯಬರ ಮನಸ್ಸಿಗೆ ಬಂದರೂ ಸದ್ಯಕ್ಕೆ ಮಾಧವಾಚಾರ್ಯರನ್ನಷ್ಟು ಸೆರೆಹಿಡಿತರುವದು ಮುಖ್ಯ ಕೆಲಸವೆಂದು ಅವರು ನಿಶ್ಚಯಿಸಿ, ಆಚಾರ್ಯರು ಅನಾಯಾಸವಾಗಿ ಕೈಸೇರಿದರೆ ಯುದ್ಧ ಮಾಡಲಾಗದೆಂದು ಅವರು ನಮ್ಮನ್ನು ಆಜ್ಞಾಪಿಸಿದರು; ಆದರೂ ಶತ್ರುಗಳ ಕಡೆಯ ಎಲ್ಲ ಹುಳಕುಗಳನ್ನು ಬಲ್ಲ ನಾನು

ನಂಬಿಗೆಯಿಂದ ಹೇಳುತ್ತೇನೆ, ಇದೇ ಕ್ಷಣದಲ್ಲಿ ನಾವು ಕೋಟೆಗೆ ಲಗ್ಗೆಹತ್ತಿದರೆ, ಅದು ನಿಶ್ಚಯವಾಗಿ ನಮ್ಮ ಕೈಸೇರುವದು; ಯಾಕಂದರೆ ಯುದ್ಧ ಆರಂಭವಾದ ಕೂಡಲೆ ಕೋಟೆಯೊಳಗಿದ್ದ ನನ್ನ ಪಕ್ಷದ ಜನರಿಂದ ಬಹು ದೊಡ್ಡ ಸಹಾಯವಾಗುವಹಾಗಿರುವದು; ಆದ್ದರಿಂದ ಖಾವಿಂದರವರು ಈ ಸಂಧಿಯನ್ನು ವ್ಯರ್ಥ ಹೋಗಗೊಡಬಾರದು. ನಾವು ಈ ಮಹಾಕಾರ್ಯ ಮಾಡಿಕೊಂಡು ಹೋದಬಳಿಕ ನಾಯಬರು ಸರ್ವಥಾ ಕ್ಷೋಭಿಸಲಿಕ್ಕಿಲ್ಲವೆಂದು ನನಗೆ ತೋರುತ್ತದೆ; ಯಾಕಂದರೆ ಕಾರ್ಯಸಾಧನವು ಮುಖ್ಯೋದ್ದೇಶವಾಗಿರಲು, ಅದನ್ನು ನ್ಯಾಯದಿಂದಾಗಲಿ, ಅನ್ಯಾಯದಿಂದಾಗಲಿ ಸಾಧಿಸಿದರಾಯಿತು.

ಅಬ್ದುಲರಹಿಮಾನ— ತಗಲಖ ಮಹಮ್ಮದ ಬಾದಶಹರು ಹಿಂದಕ್ಕೆ ಜಂಬುಕೇಶ್ವರ ರಾಜನನ್ನು ಗೆದ್ದು ಕರ್ನಾಟಕವನ್ನು ಆಳುವದಕ್ಕಾಗಿ ತಮ್ಮ ಮುಸಲ್ಮಾನ ಅಧಿಕಾರಿಗಳನ್ನು ನಿಯಮಿಸಿದರು; ಆದರೆ ರಾಜಕಾರಭಾರದಲ್ಲಿ ಪ್ರಜೆಗಳಿಂದ ಹೆಜ್ಜೆ ಹೆಜ್ಜೆಗೆ ತೊಂದರೆಗಳು ಬಂದದ್ದರಿಂದಲೇ ದೇವರಾಜರನ್ನು ಕರ್ನಾಟಕದ ಸಿಂಹಾಸನದ ಮೇಲೆ ಕುಳ್ಳಿರಿಸಿ, ಕರ್ನಾಟಕವನ್ನು ತಮ್ಮ ಮಾಂಡಲಿಕ ರಾಜ್ಯವನ್ನಾಗಿ ಮಾಡಿಕೊಳ್ಳಬೇಕಾಯಿತು; ಈಗಂತು ಮಾಧವಾಚಾರ್ಯರ ಮಹಾ ಪ್ರಯತ್ನದಿಂದ ಕರ್ನಾಟಕವು ಎಚ್ಚತ್ತಿರುವದರಿಂದ, ಒಮ್ಮೆಲೆ ನಾವು ಪ್ರಜಾಕ್ಷೋಭಕ ಕಾರ್ಯವನ್ನು ಮಾಡಿದರೆ, ನಮಗೆ ಹ್ಯಾಗೆ ಹಿತವಾದೀತು? ಈ ಸಂಗತಿಯನ್ನು ವಿಚಾರಿಸಿಯೇ ಮಹಾ ಮುತ್ಸದ್ದಿಗಳಾದ ಮಲಿಕನಾಯಬರು ನಮ್ಮನ್ನು ಹೀಗೆ ಆಜ್ಞಾಪಿಸಿರುವರು. ಸರದಾರ ಸಾಹೇಬ, ನಾವು ಹಿಂದೂಜನರ ಶತ್ರುಗಳಾಗಿದ್ದರೂ, ಹಿಂದುಗಳಾದ ನೀವು ಕೇವಲ ಸ್ವಾರ್ಥಕ್ಕಾಗಿ ನಿಮ್ಮ ಮೋರೆಗಷ್ಟೇ ಅಲ್ಲ, ನಮ್ಮ ಮೋರೆಗೂ ಮಸಿ ಹತ್ತುವಂಥ ದೇಶದ್ರೋಹದ ಹೇಸಿ ಕೆಲಸ ಮಾಡುವದನ್ನು ನೋಡಿ ನನಗೆ ಬಹಳ ದುಃಖವಾಗುತ್ತದೆ. ಸ್ವಾರ್ಥಮೂಲಕವಾಗಿ ಹೀಗೆ ಸ್ವದೇಶ ದ್ರೋಹ ಮಾಡುವ ನೀವು, ಅದೇ ನೀಚ ಸ್ವಾರ್ಥದ ಆಸೆಯಿಂದ ಪರಕೀಯರಾದ ನಮ್ಮೊಡನೆ ಪ್ರಸಂಗವಶಾತ್ ದ್ವೇಷ ಬಳಿಸಿ ದ್ರೋಹ ಮಾಡಲಿಕ್ಕೆ ಹ್ಯಾಗೆ ಹೇಸೀರಿ ! ಆದ್ದರಿಂದ ನಮ್ಮ ಮುಖ್ಯಸ್ಥರಾದ ನಾಯಬರ ಆಜ್ಞೆಯನ್ನು ಉಲ್ಲಂಘಿಸಲು ನನ್ನನ್ನು ಪ್ರೇರಿಸಬೇಡಿರಿ. ಸರದಾರಸಾಹೇಬ, ನಿಮ್ಮ ಮನಸ್ಸಿಗೆ ಹತ್ತಬೇಕೆಂದು ನಾನು ಈ ಮಾತುಗಳನ್ನಾಡುವದಿಲ್ಲ; ನನಗೆ ನ್ಯಾಯವಾಗಿ ತೋರಿದ್ದನ್ನು ನಿಮಗೆ ಸ್ಪಷ್ಟವಾಗಿ ತಿಳಿಸುವದಕ್ಕಾಗಿ ನಾನು ಇಷ್ಟು ನಿಷ್ಠುರನಾಗಿ ಮಾತಾಡಿದ್ದೇನೆ. ನೀವು ನಮ್ಮ ಹಿತಕ್ಕಾಗಿ ಮೇಲುಬಿದ್ದು ಸಹಾಯ ಮಾಡಲು ಆತುರಪಟ್ಟದ್ದನ್ನು ನಾನು ನಾಯಬರಿಗೆ ತಿಳಿಸಿ, ನಿಮ್ಮ ಹಾಗು ಶಾಸ್ತ್ರಿಗಳ ಯೋಗ್ಯ ಸಂಭಾವನೆಯಾಗುವಂತೆ ಮಾಡಿದ್ದು ಬೇಗನೆ ನಿಮ್ಮ ಅನುಭವಕ್ಕೆ ಬರುವದು. ಇನ್ನು ಮಾಧವಾಚಾರ್ಯರು ನಮ್ಮ ಸ್ವಾಧೀನವಾಗದಿದ್ದರೆ, ಯುದ್ಧಪ್ರಸಂಗ ಒದಗಿದಾಗ ನಿಮ್ಮ ಸಹಾಯವನ್ನು ಅತ್ಯಾದರದಿಂದ ನಾವು ಸ್ವೀಕರಿಸಿ, ನಿಮ್ಮ ಸೂಚನೆಯಂತೆ ಕಂಪಲಿಯ ಕೋಟೆಯನ್ನು ಸ್ವಾಧೀನ ಪಡಿಸಿಕೊಂಡು ಮುಖ್ಯರನ್ನು ಸೆರೆಹಿಡಿದುಕೊಂಡು ಹೋಗಲಿಕ್ಕೆ ಬಾಧೆಯಿಲ್ಲ.

ಈ ಮೇರೆಗೆ ಸ್ಪಷ್ಟವಾಗಿ ತಿರಸ್ಕರಿಸಿ ನುಡಿದರೂ ನೀಚ ಸ್ವಾರ್ಥಾಭಿಲಾಷೆಯಿಂದ ನಿರ್ಲಜ್ಜನಾದ ತಿರುವೇಂಕಟನು ತನ್ನ ಮನಸ್ಸಿಗೆ ಏನೂ ಹತ್ತಲಿಲ್ಲವೆಂಬದನ್ನು ತೋರಿಸುವದಕ್ಕಾಗಿ

ಮುಗುಳುನಗೆ ನಗುತ್ತ ಅಬದುಲ್ ರಹಿಮಾನನನ್ನು ಕುರಿತು— ''ಖಾವಿಂದ, ತಾವು ಸಿಟ್ಟುಮಾಡಿದರೆ ನಮಗೆ ಸಿಟ್ಟಿಲ್ಲ, ನೀವು ಸಿಟ್ಟುಮಾಡಲಿಕ್ಕೆ ಬಾಧ್ಯಸ್ಥರೇ ಇರುವಿರಿ. ಒಟ್ಟಿಗೆ ಮಲಿಕನಾಯಬರು ನಮಗೆ ಸುಪ್ರಸನ್ನರಾಗಿ ಮಾತು ಆಗಿರುವಂತೆ ಆನೆಗುಂದಿಯ ಸಂಸ್ಥಾನದ ಆಧಿಪತ್ಯವು ನಮಗೆ ದೊರೆತರೆ ಆಯಿತು ! ನಿಮ್ಮ ಅಪ್ಪಣೆಗೆ ನಾನು ಹೊರಗಾಗುವವನಲ್ಲ. ನಿನ್ನೆ ನಾನು ಇತ್ತ ಬಂದ ಬಳಿಕ ಅತ್ತ ಮಾಧವಾಚಾರ್ಯರು ತಮ್ಮ ದರ್ಬಾರದಲ್ಲಿ ನಡೆಸಿರುವ ಪ್ರಸಕ್ತಿಯನ್ನು ನಾನು ನನ್ನ ಜನರಿಂದ ಅರಿತಿರುವೆನು; ಮಾಧವಾಚಾರ್ಯರು ನಿಶ್ಚಯವಾಗಿ ನಮ್ಮ ಕೈಸೇರುವರೆಂದು ನೀವು ತಿಳಿದುಕೊಳ್ಳಿರಿ'' ಎಂದು ನುಡಿಯುತ್ತಿರಲು, ಒಬ್ಬ ಸೇವಕನು ಬಂದು–ಮಾಧವಾಚಾರ್ಯರು ಸಪತ್ನೀಕರಾಗಿ ನಮ್ಮ ಪಾಳಯಕ್ಕೆ ಬಂದಿದ್ದು, ತಮ್ಮ ಬಳಿಗೆ ಬರಲಿಕ್ಕೆ ಅಪ್ಪಣೆಯನ್ನು ಕೇಳುತ್ತಿರುವರು. ಎಂದು ಹೇಳಲು, ಅಬದುಲ ರಹಿಮಾನನು ಆಶ್ಚರ್ಯ ಪಟ್ಟು ತಿರುವೇಂಕಟನನ್ನೂ, ಶ್ರೀಕಂಠ ಶಾಸ್ತ್ರಿಯನ್ನೂ ಕರಕೊಂಡು ದರ್ಬಾರಕ್ಕೆ ಬಂದನು. ನಮಗೆ ಉತ್ತರ ಕಳಿಸಿ ಕೊಡುವದರ ಬದಲು ಆಚಾರ್ಯರು ತಾವೇ ಬಂದದ್ದನ್ನು ಕೇಳಿ, ಅಬ್ದುಲ ರಹಿಮಾನನಿಗೆ ಪರಮಾಶ್ಚರ್ಯವಾದದ್ದಲ್ಲದೆ, ಇದರಲ್ಲಿ ಮಾಧವಾಚಾರ್ಯರ ಗೂಢ ರಾಜಕಾರಣ ವೇನಾದರೂ ಇರಲೇಬೇಕೆಂದು ಆತನು ತರ್ಕಿಸಿದನು; ಆದರೂ ಮಾಧವಾಚಾರ್ಯರನ್ನು ಬಹುಮಾನದಿಂದ ಕರೆತರುವದಕ್ಕಾಗಿ ಒಬ್ಬ ಪ್ರತಿಷ್ಠಿತ ಮುಸಲ್ಮಾನ ಸರದಾರನೊಡನೆ ತಿರುವೇಂಕಟನನ್ನೂ, ಶ್ರೀಕಂಠಶಾಸ್ತ್ರಿಗಳನ್ನೂ ಕಳಿಸಿದನು. ಅಬ್ದುಲ ರಹಿಮಾನನಿಂದ ಮೊದಲಾಗಿ ಎಲ್ಲ ಮುಸಲ್ಮಾನ ದಂಡಾಳುಗಳೂ ಮಾಧವಾಚಾರ್ಯರನ್ನು ನೋಡುವದಕ್ಕಾಗಿ ಆತುರ ಪಡುತ್ತಿದ್ದರು. ಮಹಾತ್ಮರಾದ ಮಾಧವಾಚಾರ್ಯರ ಕೀರ್ತಿಯು ಶತ್ರು– ಮಿತ್ರರಲ್ಲಿ ಸರಿಯಾಗಿಯೇ ಕೌತುಕವನ್ನುಂಟುಮಾಡುವಂತಹದಾಗಿತ್ತು; ಹೀಗೆ ಎಲ್ಲರೂ ದರ್ಶನೋತ್ಕಂಠಿತರಾಗಿರಲು, ಮಾಧವಾಚಾರ್ಯರು ಶ್ರೀಕಂಠಶಾಸ್ತ್ರಿಗಳೇ ಮೊದಲಾದವರನ್ನು ಹಿಂಬಾಲಿಸಿ ದರ್ಬಾರಕ್ಕೆ ಬಂದರು. ಅವರನ್ನು ಅವರ ಧರ್ಮಪತ್ನಿಯಾದ ಭಗವತೀ ವೈತಿ ಹೋತ್ರಿಯೂ, ಕಾಸಿಮಖಾನನೂ ಹಿಂಬಾಲಿಸಿದ್ದರು. ಹೀಗೆ ಮಹಾ ತಪಸ್ವಿಗಳಾದ ಬ್ರಾಹ್ಮಣ ದಂಪತಿಗಳು ನಿರ್ವಿಕಾರಾಂತಃ ಕರಣದಿಂದ ದರ್ಬಾರವನ್ನು ಪ್ರವೇಶಿಸಲು, ಅವರ ತೇಜೋವಿಶೇಷ ದಿಂದ ದರ್ಬಾರದ ಜನರಲ್ಲಿ ಅವರ ವಿಷಯವಾಗಿ ಪೂಜ್ಯಬುದ್ಧಿಯು ಉತ್ಪನ್ನವಾಯಿತು. ಅಬ್ದುಲ ರಹಿಮಾನನು ಎದ್ದುನಿಂತು ಬಹುಮಾನಪೂರ್ವಕವಾಗಿ ಆಚಾರ್ಯರನ್ನು ಬರಮಾಡಿಕೊಂಡನು. ಮಾಧವಾಚಾರ್ಯರು ತಮ್ಮ ಆಸನದ ಬಳಿಯಲ್ಲಿ ಬಂದು, ''ಖಾನಸಾಹೇಬರು ಕುಳಿತುಕೊಳ್ಳ ಬೇಕು'' ಎಂದು ನುಡಿಯುತ್ತ ತಮ್ಮ ಆಸನದಲ್ಲಿ ಕುಳಿತುಕೊಂಡರು. ಭಗವತೀ ವೈತಿಹೋತ್ರಿಯು ಪತಿಯ ಹಿಂದುಗಡೆಯಲ್ಲಿ ಕಾಸಿಮಖಾನನು ಆಚಾರ್ಯರ ಮುಂದುಗಡೆಯಲ್ಲಿ ಕುಳಿತುಕೊಂಡರು. ಕಾಸಿಮಖಾನನ ವಿನಯವನ್ನೂ, ಆತನ ಸೌಮ್ಯ ಮುಖಮುದ್ರೆಯನ್ನೂ, ಸಾತ್ವಿಕ ತೇಜಸ್ಸನ್ನೂ ನೋಡಿ ಮುಸಲ್ಮಾನರು ಬೆರಗಾದರು. ಶತ್ರುಗಳಾದ ಯವನರು ಈಪರಿ ಆಚಾರ್ಯರ ಮನ್ನಣೆ ಮಾಡುವದನ್ನು ನೋಡಿ ತಿರುವೇಂಕಟನು ಮನಸ್ಸಿನಲ್ಲಿ ನಾಚಿದನು; ಆದರೂ ಆ ದೇಶ ದ್ರೋಹಿಗೆ ಇದರಿಂದ ಒಂದುಬಗೆಯ ಅಪಮಾನವಾದಂತಾಗಿ ಆತನು ದರ್ಬಾರದಲ್ಲಿ ಮಾಧವಾ

ಚಾರ್ಯರಿಗಾದ ಮಾನ–ಮರ್ಯಾದೆಗಳ ವಿಷಯವಾಗಿ ಮಾತ್ಸರ್ಯವನ್ನು ತಾಳಿದನು. ''ವಿದ್ವಾನ್ ಸರ್ವತ್ರ ಪೂಜ್ಯತೇ'' ಎಂಬ ಉಕ್ತಿಯು ಯಥಾರ್ಥವಾದದ್ದು. ಮಾಧವಾಚಾರ್ಯರು ಬರಿಯ ವಿದ್ವಾಂಸರೇ ಇದ್ದಿಲ್ಲ. ಅವರ ಅಗಾಧವಾದ ವಿದ್ವತ್ತೆಯು ಅವರ ತಪಸ್ತೇಜದಿಂದ ಪ್ರಕಾಶಿತವಾಗಿತ್ತು. ಇಂಥ ಮಹಾತ್ಮರು ದೇಶೋದ್ಧಾರಕ್ಕಾಗಿ ಪಾಮರರಿಗಿಂತಲೂ ಪಾಮರರಾಗಿ ವ್ಯವಹರಿಸುತ್ತಿದ್ದರು; ಅಂದಬಳಿಕ ದೇಶದ್ರೋಹದಂಥ ಮಹತ್ಪಾಪದಿಂದ ಕಲುಷಿತರಾಗಿದ್ದ ತಿರುವೇಂಕಟನಂಥ ಅಧಮಾಧಮರಲ್ಲದೆ ಬೇರೆಯವರು ಮಾಧವಾಚಾರ್ಯರನ್ನು ಮನ್ನಿಸದೆ ಹ್ಯಾಗೆ ಇದ್ದಾರು? ವೈತಿಹೋತ್ರಿಯೂ, ಕಾಸಿಮಖಾನನೂ ಆಚಾರ್ಯರನ್ನು ಹಿಂಬಾಲಿಸಿ ಬಂದದ್ದರ ಗೂಢವು ಒಬ್ಬರಿಗೂ ತಿಳಿಯದಾಯಿತು. ಹೀಗೆ ದರ್ಬಾರಕ್ಕೆ ದರ್ಬಾರವೇ ಅದ್ಭುತ ರಸದಲ್ಲಿ ಮುಣುಗಿ ಮಾಧವಾಚಾರ್ಯರ ವೈರಾಗ್ಯಸಂಪನ್ನ ರೂಪವನ್ನು ಎವೆಯಿಕ್ಕದೆ ನೋಡುತ್ತಿರುವಾಗ ಅಬ್ದುಲರಹಿಮಾನನು ಆಚಾರ್ಯರನ್ನು ಕುರಿತು—

ಅಬ್ದುಲರಹಿಮಾನ— ಆಚಾರ್ಯವರ, ತಮ್ಮೊಬ್ಬರನ್ನೇ ಕರತರಲು ನಮ್ಮ ನಾಯಬಸಾಹೇಬರು ಅಪ್ಪಣೆಯಾಗಿರುವಾಗ, ಇವರಿಬ್ಬರು ತಮ್ಮ ಸಂಗಡ ಬಂದದ್ದೇಕೆ? ಹೆಣ್ಣುಮಕ್ಕಳ ಸಂಬಂಧವಂತು ನಮಗೆ ಇಲ್ಲವೇ ಇಲ್ಲ; ನಾಯಬಸಾಹೇಬರ ಅಪ್ಪಣೆಗೆ ಹೊರತಾಗಿ ಕೆಲಸ ಮಾಡಲು ನಮಗೆ ಅಧಿಕಾರವು ಹ್ಯಾಗೆ ಬಂದೀತು?

ಮಾಧವಾಚಾರ್ಯ— ಖಾನಸಾಹೇಬ, ನಾವಿದ್ದಲ್ಲಿ ನಮ್ಮ ಕುಟುಂಬವಿರುವದು ಧರ್ಮ ವಾಗಿರುತ್ತದೆ; ಆದ್ದರಿಂದ ನಮ್ಮ ಕುಟುಂಬವು ಹಿಂಬಾಲಿಸಿದ್ದು ಸ್ವಾಭಾವಿಕವು ! ಪತ್ನಿಯು ಪತಿಯ ಅರ್ಧಾಂಗವೆಂದು ನಮ್ಮ ಧರ್ಮ ಶಾಸ್ತ್ರವು ಹೇಳುತ್ತದೆ; ಅಂದಬಳಿಕ ಸಪತ್ನೀಕನಲ್ಲದ ಅಗ್ನಿ ಹೋತ್ರಿಯು ನಾನು ಪೂರ್ಣನು ಹ್ಯಾಗೆ? ಆದ್ದರಿಂದ ನನ್ನ ಹೆಂಡತಿಯೊಡನೆ ನನ್ನನ್ನು ಸೆರೆ ಹಿಡಿದೊಯ್ಯುವದರಲ್ಲಿ ಸರ್ವಥಾ ನಾಯಬರ ಆಜ್ಞಾಭಂಗವಾಗುವದಿಲ್ಲ. ಇನ್ನು ಕಾಶಿಮಖಾನ ರಂತು ನಿಮ್ಮವರೇ ಇರುವರು. ನಿಮ್ಮವರನ್ನು ನೀವು ಕರೆದೊಯ್ಯಲಿಕ್ಕೆ ನಾಯಬರ ಅಪ್ಪಣೆಯೇಕೆ? ಕೆಲವೊಂದು ಕಾರಣದಿಂದ ಖಾನಸಾಹೇಬರು ತಾವಾಗಿ ನಿಂತುಕೊಂಡದ್ದರಿಂದ ನಾವು ಕಂಪಲಿಯ ಕೋಟೆಯಲ್ಲಿ ಅವರನ್ನು ಇಟ್ಟುಕೊಂಡಿದ್ದೆವು. ಇಂದಿಲ್ಲ ನಾಳೆ ಅವರು ತಮ್ಮ ಸೈನ್ಯದೊಡನೆ ನಾಯಬರ ಬಳಿಗೆ ಬರತಕ್ಕವರೇ ಇದ್ದರು. ಅಷ್ಟರಲ್ಲಿ ನಾವೇ ಕಂಪಲಿಯ ಕೋಟೆಯನ್ನು ಬಿಟ್ಟು ಬಂದಬಳಿಕ ನಮ್ಮ ಸಲುವಾಗಿ ಕಂಪಲಿಯಲ್ಲಿರುತ್ತಿದ್ದ ಕಾಶಿಮಖಾನ ರವರು ಇನ್ನು ಕಂಪಲಿಯಲ್ಲಿ ಯಾಕೆ ಉಳಿಯುವರು? ಅವರು ತಮ್ಮ ಸೈನ್ಯದೊಡನೆ ಮಲಿಕನಾಯಬರ ಬಳಿಗೆ ಹೋಗಲಿಕ್ಕೆ ಬಂದಿದ್ದಾರೆ.

ಅಬ್ದುಲರಹಿಮಾನ— ಕಾಸಿಮಖಾನರವರನ್ನು ನಾವು ಸ್ವಜನದ್ರೋಹಿಗಳಲ್ಲಿ ಎಣಿಸಿರುವೆವಾದ್ದರಿಂದ, ಅವರು ಶಿಕ್ಷೆಗೆ ಪಾತ್ರರಿರುವರು; ಆದ್ದರಿಂದ ನಮ್ಮೊಡನೆ ಅವರು ಕಾಂಚನಗಡಕ್ಕೆ ಬರಲಾಗದು.

ಮಾಧವಾಚಾರ್ಯ— ಖಾನಸಾಹೇಬ, ಕಾಸಿಮಖಾನರು ಸ್ವಜನ ದ್ರೋಹಿಗಳಿದ್ದರೆ ಅವರನ್ನು ನೀವು ಅವಶ್ಯವಾಗಿ ಶಿಕ್ಷಿಸಬಹುದು. ದ್ರೋಹಿಗಳನ್ನು ಶಿಕ್ಷಿಸುವಾಗ ಅವರು ನಿಮ್ಮ ಕೈವಶ

ವಾಗಿರಬೇಕಾಗಿರುವದಷ್ಟೆ? ಈಗ ಕಾಸಿಮಖಾನರು ತಾವು ಸ್ವಜನದ್ರೋಹಿಗಳಲ್ಲವೆಂಬ ನಂಬಿಗೆಯಿಂದ ತಮ್ಮ ಸೈನ್ಯದೊಡನೆ ನಿಮ್ಮ ಬಳಿಗೆ ಬಂದಿರುವರು ನೀವು ಅವರನ್ನು ಸ್ವಜನದ್ರೋಹಿಗಳೆಂದು ತಿಳಿಯುತ್ತಿದ್ದರೆ, ಅವರನ್ನು ಶಿಕ್ಷಿಸಲಿಕ್ಕೆ ಅನಾಯಾಸ ಅನುಕೂಲಿಸಿದಂತಾಯಿತಲ್ಲ! ಈಗ ನೀವು ಸೈನ್ಯದೊಡನೆ ಕಾಸಿಮಖಾನರನ್ನು ಸೆರೆಹಿಡಿದು ಒಯ್ಯುತ್ತೇವೆಂದು ತಿಳಿದು, ನಮ್ಮೊಡನೆ ಅವರನ್ನೂ, ಅವರ ಸೈನ್ಯವನ್ನೂ ಸೆರೆಹಿಡಿದೊಯ್ದು ನಾಯಬಸಾಹೇಬರಿಗೆ ಒಪ್ಪಿಸಿದರಾಯಿತು. ಸ್ವಜನ ದ್ರೋಹಿಯನ್ನು ಯಾವಾಗಾದರೂ ದಂಡಿಸಲೇಬೇಕಾಗಿರುವದು.

ಈ ಮೇರೆಗೆ ಮಾಧವಾಚಾರ್ಯರು ನುಡಿದದ್ದನ್ನು ಕೇಳಿ ಅಬ್ದುಲರಹಿಮಾನನು ನಿರುತ್ತರನಾಗಿ ಕಾಸಿಮಖಾನನ ಮುಖವನ್ನು ದಿಟ್ಟಿಸಿ ನೋಡಹತ್ತಿದನು. ದರ್ಬಾರದ ಜನರೂ ಈ ವಿಲಕ್ಷಣ ಪ್ರಸಂಗವನ್ನು ನೋಡಿ ಬೆರಗಾಗಿ ಹೋಗಿದ್ದರು. ಮಾಧವಾಚಾರ್ಯರ ಒಂದೊಂದು ಕೃತಿಗಳು ವಿಲಕ್ಷಣವಾದವುಗಳೇ ಎಂದು ಆ ಶೂರರಾದ ಯವನರು ಅಂದುಕೊಂಡು ಅವರನ್ನು ಆದರದಿಂದ ನೋಡತೊಡಗಿದರು. ಹೀಗೆ ಸಭೆಯು ಆಶ್ಚರ್ಯಚಕಿತವಾಗಿರುವಾಗ ಕಾಸಿಮಖಾನನು ಎದ್ದುನಿಂತು ಅಬ್ದುಲರಹಿಮಾನನನ್ನು ಕುರಿತು ವಿನಯದಿಂದ—

ಕಾಸಿಮಖಾನ—ಖಾನಸಾಹೇಬ, ತಾವು ಹೇಳಿದಂತೆ ನಾನು ಸ್ವಜನ ದ್ರೋಹಿಯೇ ಆಗಿದ್ದರೆ ನಾನು ಈಗ ಪಶ್ಚಾತ್ತಾಪದಿಂದ ಮಲಿಕನಾಯಬ ಸಾಹೇಬರಿಂದ ಶಿಕ್ಷೆಹೊಂದುವದಕ್ಕಾಗಿ ಸೈನ್ಯದೊಡನೆ ನಿಮ್ಮ ಆಧೀನನಾಗಿರುವೆನೆಂದು ತಿಳಿಯಿರಿ! ಈಗ ನೀವು ನನ್ನನ್ನು ಮಲಿಕಸಾಹೇಬರಿಗೆ ಒಪ್ಪಿಸಬಹುದು; ಅಥವಾ ಇಲ್ಲಿಯೇ ತಮಗೆ ಸರಿದೋರಿದಂತೆ ನನ್ನನ್ನೂ, ನನ್ನ ಸೈನಿಕರನ್ನೂ ಶಿಕ್ಷಿಸಬಹುದು. ಖಾನಸಾಹೇಬ, ಸ್ವಜನದ್ರೋಹ–ಸ್ವದೇಶದ್ರೋಹ–ಸ್ವಧರ್ಮದ್ರೋಹಗಳಿಗಿಂತ ಹೆಚ್ಚಿನ ದ್ರೋಹಗಳು ಯಾವವಿರುವವು? ಈ ಎಲ್ಲ ದ್ರೋಹಗಳ ಆರೋಪಗಳೂ ನನ್ನ ಮೇಲೆ ಹೊರುವದರಿಂದ ನಾನು ನಿಸ್ಸಂಶಯ ದಂಡ್ಯನಾಗಿರುವೆನು.

ಹೀಗೆ ಕಾಸಿಮಖಾನನು ಗಂಭೀರ ಮುದ್ರೆಯಿಂದ ನುಡಿದು ತನ್ನ ಸ್ಥಳದಲ್ಲಿ ಕುಳಿತುಕೊಂಡನು. ಆಗ ಅಬ್ದುಲರಹಿಮಾನನಿಗೆ ಏನೂ ತೋಚದಾಯಿತು. ಇದು ಈ ಮಾಧವ ಬ್ರಾಹ್ಮಣನ ಕವಡಿಗಂಟಕತನವಾಗಿರಬಹುದೇ ಎಂದು ಆತನು ಆಲೋಚಿಸತೊಡಗಿದನು. ಆತನು ಮನಸ್ಸಿನಲ್ಲಿ—"ಹೀಗೆ ಮಾಧವಾಚಾರ್ಯರು ಕಾಸಿಮಖಾನನೊಡನೆ ನಮ್ಮ ಕೈಸೇರಿದ್ದರಲ್ಲಿ ಏನು ಗೂಢವಿರಬಹುದು? ನಮ್ಮ ಸೈನ್ಯದೊಡನೆ ಕಾಸಿಮಖಾನನನ್ನು ಸಸೈನ್ಯ ಸೇರಿಸಿಕೊಂಡು, ಒಳಗಿನಿಂದ ಆತನು, ಹೊರಗಿನಿಂದ ತಮ್ಮ ಹಿಂದೂ ಸೈನ್ಯದೊಡನೆ ಹುಕ್ಕ–ಬುಕ್ಕ ಮೊದಲಾದವರು ನಮ್ಮನ್ನು ಹಣಿಯಬೇಕೆಂದು ಯೋಚಿಸಿರಬಹುದೋ? ಹೀಗೆ ಏನಾದರೂ ಗೂಢತಂತ್ರವಿಲ್ಲದೆ ಚಾತುರ್ಯ–ಬಲಸಂಪನ್ನನಾದ ಈ ಬ್ರಾಹ್ಮಣನು ತಾನಾಗಿ ನಮ್ಮ ಸೆರೆಯಾಳಾಗುವ ಸಂಭವವಿಲ್ಲ. ಆದ್ದರಿಂದ ನಮ್ಮ ಕಾರ್ಯವು ಅನಾಯಾಸವಾಗಿ ಆಯಿತೆಂತಲೂ, ಕಾಸಿಮಖಾನನಂಥ ಸ್ವಜನದ್ರೋಹಿಯು ಅನಾಯಾಸವಾಗಿ ಕೈಸೇರಿದನೆಂತಲೂ ನಾವು ನಿಶ್ಚಿಂತರಾಗತಕ್ಕದ್ದಲ್ಲ. ಸದ್ಯಕ್ಕಂತು ಈ ಬ್ರಾಹ್ಮಣನನ್ನು ಬಿಗಿಯಾದ ಕಾವಲಿನಲ್ಲಿರಿಸಿ, ಕಾಸಿಮಖಾನನನ್ನೂ, ಅವನ ಸೈನ್ಯವನ್ನೂ ನಿಶ್ಶಸ್ತ್ರ ಮಾಡಿ, ನಮ್ಮ ಸೈನ್ಯಕ್ಕೆ ಜಾಗರೂಕವಾಗಿರುವಂತೆ ಎಚ್ಚರಗೊಳಿಸೋಣ;

ಈ ಗೂಢತಂತ್ರಾಗಾರನಾದ ಬ್ರಾಹ್ಮಣನ ತಂತ್ರದಿಂದಲೇ ತಿರುವೇಂಕಟನೂ ಶ್ರೀಕಂಠಶಾಸ್ತ್ರಿಯೂ ಸ್ವಾರ್ಥಕ್ಕಾಗಿ ನಮ್ಮ ಪಕ್ಷದವರಂತೆ ನಟಿಸುತ್ತಿರಲಿಕ್ಕಿಲ್ಲವೆಂದಾದರೂ ಯಾರು ಹೇಳಬೇಕು? ಒಟ್ಟಿಗೆ ಸಂಪೂರ್ಣವಾಗಿ ಎಚ್ಚತ್ತಿರುವ ಕನ್ನಡಿಗರೊಡನೆ ನಾವು ಜಾಗರೂಕತೆಯಿಂದ ನಡೆದು, ಅವರು ಪ್ರಬಲರಾಗುವದರೊಳಗೆ ಪುನಃ ತಲೆ ಎತ್ತದಂತೆ ಅವರನ್ನು ನಾವು ಪೂರಾ ಬಗ್ಗುಬಡಿಯತಕ್ಕದ್ದು. ಈಗ ನಾವು ಮುತ್ತಿಗೆ ಎಬ್ಬಿಸಿ ಹೋದರೆ ಕೋಟೆಯೊಳಗಿನವರಿಗೆ ಹೊಸ ಸೈನ್ಯ ಕೂಡಿಸುವದಕ್ಕಾಗಿ, ಅಥವಾ ಯುದ್ಧದ ಬೇರೆ ಸಿದ್ಧತೆ ಮಾಡಿಕೊಳ್ಳುವದಕ್ಕಾಗಿ ಆಸ್ಪದ ದೊರೆತು ಅವರು ಬಲಿಷ್ಠರಾಗುವರು. ಅವರು ಹೀಗೆ ಬಲಿಷ್ಠರಾಗಬೇಕೆಂತಲೇ ಮಾಧವಾಚಾರ್ಯರು ನಮ್ಮ ಕೈಸೇರಿರುವನು; ಹಾಗಲ್ಲದಿದ್ದರೆ ಕನ್ನಡಿಗರ ಸ್ವಾತಂತ್ರ್ಯಕ್ಕಾಗಿ ವಿಶ್ವಪ್ರಯತ್ನ ಮಾಡುವ ಈ ಬ್ರಾಹ್ಮಣನು ನಮ್ಮ ಕೈಸೇರುತ್ತಿದ್ದಿಲ್ಲ; ಮತ್ತು ಕರ್ನಾಟಕದ ಪಂಚಪ್ರಾಣದಂತೆ ಇದ್ದ ಈ ಬ್ರಾಹ್ಮಣನನ್ನು ಹುಕ್ಕನೇ ಮೊದಲಾದ ವೀರರು ನಮ್ಮ ಕೈಸೇರಗೊಡುತ್ತಿದ್ದಿಲ್ಲ. ಇವರ ಈ ದೌರ್ಬಲ್ಯದ ಲಾಭವನ್ನು ಪಡೆಯುವದಕ್ಕಾಗಿ, ಇವರಿಗೆ ಕೈಕಾಲು ಆಡಲಿಕ್ಕೆ ಆಸ್ಪದವಾಗದಂತೆ ಇದೇ ಕೈಯಿಂದ ನಾವು ಕಂಪಲಿಯ ಕೋಟೆಯನ್ನು ಸ್ವಾಧೀನಪಡಿಸಿಕೊಂಡುಬಿಡತಕ್ಕದ್ದು. ಈ ಸಂಬಂಧದಿಂದ ತಿರುವೇಂಕಟನು ಹೇಳಿದ ಆಲೋಚನೆಯು ಯೋಗ್ಯ ವಿರುವದು; ಆ ಸ್ವಾರ್ಥಪರಾಯಣನು ನಮ್ಮೊಡನೆ ದ್ರೋಹ ಬಳಸಿ ತನ್ನ ಸರ್ವಸ್ವದ ನಾಶಮಾಡಿಕೊಳ್ಳುವದು ಶಕ್ಯವಾಗಿರುವದಿಲ್ಲ; ಆದ್ದರಿಂದ ಆತನ ವಿಷಯವಾಗಿಯೂ, ಶ್ರೀಕಂಠಶಾಸ್ತ್ರಿಯ ವಿಷಯ ವಾಗಿಯೂ ನಾನು ಇಲ್ಲದ ಸಂಶಯ ತಕ್ಕೊಳ್ಳುವದು ಯೋಗ್ಯವಲ್ಲ. ಈ ಪ್ರಸಂಗದಲ್ಲಿ ಅವರ ಸಂಪೂರ್ಣ ಸಹಾಯ ಪಡೆಯತಕ್ಕದ್ದು, ಎಂದು ಯೋಚಿಸಿ, ಮಾಧವಾಚಾರ್ಯರನ್ನೂ ಅವರ ಪರಿವಾರವನ್ನೂ ಪ್ರತಿಬಂಧದಲ್ಲಿಡಿಸಿ, ಏಕಾಂತದಲ್ಲಿ ತಿರುವೇಂಕಟನನ್ನೂ, ಶ್ರೀಕಂಠಶಾಸ್ತ್ರಿಯನ್ನೂ ಕರೆಸಿ ಅವರಿಗೆ ತನ್ನ ಬದಲಿಸಿದ ವಿಚಾರವನ್ನು ತಿಳಿಸಿದನು. ತನ್ನ ಆಲೋಚನೆಗೆ ಖಾನನು ಒಪ್ಪಿ ಕೊಂಡದ್ದಕ್ಕಾಗಿ ತಿರುವೇಂಕಟನಿಗೆ ಬಹಳ ಸಂತೋಷವಾಯಿತು. ಖಾನನಿಗೆ ತಿಳಿಯದಂತೆ ಆ ದೇಶ ದ್ರೋಹಿಯು ತನ್ನ ಗುಪ್ತ ಕಾರ್ಯವನ್ನು ಸಾಧಿಸಿಕೊಳ್ಳಬೇಕಾಗಿತ್ತು. ಖಾನನು ತಾನು ಸ್ವತಃ ಮಾಧವಾಚಾರ್ಯರನ್ನು ಕಾಂಚನಗಡಕ್ಕೆ ಕರಕೊಂಡು ಹೋಗಿ, ಕಂಪಲಿಯ ಮುತ್ತಿಗೆಯನ್ನು ತನಗೆ ಒಪ್ಪಿಸಬೇಕೆಂದು ಆ ದುಷ್ಟನು ಎಣಿಕೆಹಾಕುತ್ತಿದ್ದನು. ಅವನ ಆ ಎಣಿಕೆಯು ಅನಾಯಾಸ ವಾಗಿಯೇ ಸಾಧಿಸಿತು. ಖಾನನು ತಿರುವೇಂಕಟನನ್ನು ಕುರಿತು— ''ತಿರುವೇಂಕಟ, ನೀವು ಹೇಳಿ ದಂತೆ ಮಾಧವಾಚಾರ್ಯರಂತು ನಿರಾಯಾಸದಿಂದ ನಮ್ಮ ಕೈಸೇರಿದರು. ಈಗ ನಾವು ಕಂಪಲಿಯ ಕೋಟೆಯ ಮುತ್ತಿಗೆಯನ್ನು ಎಬ್ಬಿಸಿಕೊಂಡು ಹೋದರೆ, ಈ ಕಾಫರರಾದ ಕನ್ನಡಿಗರಿಗೆ ಕೈಕಾಲು ಆಡಲಿಕ್ಕೆ ಆಸ್ಪದ ಕೊಟ್ಟ ಹಾಗಾಗುತ್ತದೆ; ಆದ್ದರಿಂದ ನಿಮ್ಮ ಆಲೋಚನೆಯಂತೆ ಕೆಲವು ಸೈನ್ಯದೊಡನೆ ಮಾಧವಾಚಾರ್ಯರನ್ನು ಕಾಂಚನಗಡಕ್ಕೆ ಕರೆದೊಯ್ದು, ಉಳಿದ ಸೈನ್ಯದಿಂದ ಕಂಪಲಿಯ ಕೋಟೆಯನ್ನು ಬಲವಾಗಿ ಮುತ್ತಿ ಒಳಗಿನವರನ್ನು ಹಣ್ಣಿಗೆ ತರುವದು ಯುಕ್ತವಾಗಿ ತೋರುತ್ತದೆ. ಮಾಧವಾಚಾರ್ಯರೊಬ್ಬರು ನಮ್ಮ ಕೈಸೇರಿರುವದರಿಂದ ಹಿಂದೂ ಜನರ ಜೀವವೇ ನಮ್ಮ ಕೈಸೇರಿದ ಹಾಗಾಗಿರುತ್ತದೆ. ನಾನು ಅಲ್ಪ ಸೈನ್ಯದೊಡನೆ ಮಾಧವಾಚಾರ್ಯರನ್ನು

ಕರಕೊಂಡು ಕಾಂಚನಗಡಕ್ಕೆ ಹೋಗುವೆನು; ಯಾಕಂದರೆ ನಾನು ಸ್ವತಃ ಮಲಿಕನಾಯಬರನ್ನು ಕಂಡು ಮುಂದಿನ ಕಾರ್ಯವನ್ನು ಆಲೋಚಿಸಬೇಕಾಗುತ್ತದೆ; ಇದಲ್ಲದೆ ಮಹಾ ತಂತ್ರಗಾರನಾದ ಮಾಧವಾಚಾರ್ಯನನ್ನು ಸೆರೆಹಿಡಿದು ಒಯ್ಯುವ ಕಠಿಣ ಕಾರ್ಯವನ್ನು ನಾನೇ ಮಾಡುವದು ನೆಟ್ಟಗೆ; ಆದ್ದರಿಂದ ನೀವು ಉಳಿದ ಸೈನ್ಯ ದೊಡನೆ ಕಂಪಲಿಯ ಕೋಟೆಯನ್ನು ಮುತ್ತಿ ನಿಮ್ಮ ತಂತ್ರದಿಂದ ಕೋಟೆಯೊಳಗಿನ ಜನರನ್ನು ನಮ್ಮ ಪಕ್ಷಕ್ಕೆ ಒಲಿಸಿಕೊಳ್ಳಿರಿ. ನಾನು ಹೋದಕೂಡಲೆ ದೊಡ್ಡ ಸೈನ್ಯದೊಡನೆ ಬೇಗನೆ ಬರುವೆನು. ಆಮೇಲೆ ಆ ಕಾಫರರನ್ನು ಬಗ್ಗುಬಡಿದು ಇಸ್ಲಾಮಿ ಅಧಿಕಾರವನ್ನು ಸ್ಥಾಪಿಸೋಣ. ಹೀಗಾಯಿತೆಂದರೆ ನಿಮಗೂ ಒಂದು ಸಂಸ್ಥಾನದ ಅಧಿಪತ್ಯವು ದೊರೆಯುವದು. ತಿರುವೇಂಕಟ, ಒಟ್ಟಿಗೆ ಮಾಧವಾಚಾರ್ಯರು ನಮ್ಮ ಕೈಸೇರಿದ್ದರಿಂದ ಕನ್ನಡಿಗರನ್ನು ಹಾಗು ತೆಲಗರನ್ನು ಕುಕ್ಕರುಬಡಿಯಲಿಕ್ಕೆ ಬಹಳ ಅನುಕೂಲವಾಗಿರುವದು. ಈ ಸುಸಂಧಿಯನ್ನು ವ್ಯರ್ಥವಾಗಿ ಕಳೆದುಕೊಳ್ಳತಕ್ಕದ್ದಲ್ಲ. ಈ ಕಾರ್ಯದಲ್ಲಿ ಶಾಸ್ತ್ರಿಗಳ ಸಹಾಯವಂತು ನಿಮಗೆ ಆಗೇ ಆಗುವದು. ಅವರ ಶ್ರಮವನ್ನೂ ನಮ್ಮ ನಾಯಬಸಾಹೇಬರು ವ್ಯರ್ಥವಾಗ ಗೊಡರು. ಒಟ್ಟಿಗೆ ಕೈಕೊಂಡಿರುವ ಕಾರ್ಯವನ್ನು ನಾವೆಲ್ಲರೂ ದಕ್ಷತೆಯಿಂದ ಸಿದ್ಧಿಗೊಯ್ಯೋಣ.''

## ಸಜ್ಜನರಿಗೆ ಶತ್ರುಗಳೂ ಸ್ವಕೀಯರೇ

ಖಾನನು ಮಾಧವಾಚಾರ್ಯರೊಡನೆ ಕಾಂಚನಗಡಕ್ಕೆ ಸಾಗಿಹೋದದ್ದರಿಂದ ತಿರುವೇಂಕಟನಿಗೆ ಬಹಳ ಸಂತೋಷವಾಯಿತು. ಇನ್ನು ತನ್ನ ಗುಪ್ತಕಾರ್ಯವನ್ನು ಸಾಧಿಸಿಕೊಳ್ಳಲಿಕ್ಕೆ ತನಗೆ ಯಾರ ಆತಂಕವೂ ಇಲ್ಲವೆಂದು ಭಾವಿಸಿ, ಆತನು ತನ್ನ ನಂಬಿಗೆಯ ಜನರೊಡನೆ ದುರಾಲೋಚನೆಗಳನ್ನು ನಡಿಸಿದನು. ಈಗಿನ ಕಾಲದಲ್ಲಿ ಮುಸಲ್ಮಾನರು ಪರದೇಶಗಳನ್ನು ಗೆಲ್ಲಲಿಕ್ಕೆ ಮೆಚ್ಚಿದ್ದರು; ತಮ್ಮ ಸತ್ಯಧರ್ಮ ಪ್ರಸಾರ ಮಾಡುವದೊಂದು ಅವರ ಈ ವಿಜಯಯಾತ್ರೆಯ ಕಾರಣವಾಗಿತ್ತು, ಪರದೇಶಗಳನ್ನು ಗೆದ್ದ ಬಳಿಕ ಅಲ್ಲಿಯ ಜನರನ್ನು ಅವರು ಬಲಾತ್ಕಾರ ದಿಂದಾದರೂ ಮುಸಲ್ಮಾನರನ್ನು ಮಾಡುತ್ತಿದ್ದರು. ಧರ್ಮಪ್ರಸಾರದ ನೆವದಿಂದ ಅವರಿಗೆ ರಾಜ್ಯಪ್ರಾಪ್ತಿಯಾಗಹತ್ತಿದ್ದರಿಂದ ಅವರ ಬೇರೆಬೇರೆ ಕುಲಗಳು ಈ ಭರತಭೂಮಿಯ ಮೇಲೆ ದಂಡೆತ್ತಿ ಬಂದು ರಾಜ್ಯವಾಳಿ ಅಳಿದವು. ವಿಜಯೇಚ್ಛುಗಳಾದ ಈ ಮುಸಲ್ಮಾನರು ತಮ್ಮ ದಂಡಾಳುಗಳಿಗೆ ಸುಲಿಗೆಗೆ ಆಸ್ಪದ ಕೊಡುತ್ತಿದ್ದದ್ದರಿಂದ ಹೊನ್ನು-ಹೆಣ್ಣುಗಳ ಆಸೆಯಿಂದ ಸೈನಿಕರು ಮನಃಪೂರ್ವಕವಾಗಿ ಶೌರ್ಯದಿಂದ ಕಾದುತ್ತಿದ್ದರು ಸೇನಾಪತಿಗೆ ಸುಲಿಗೆಯೊಳಗಿನ ಶ್ರೇಷ್ಠವಸ್ತುಗಳ ಪ್ರಾಪ್ತಿಯಾಗುತ್ತಿತ್ತು, ಈ ಕಾರಣದಿಂದ ತಿರುವೇಂಕಟನು ಖಾನನನ್ನು ಕಾಂಚನಗಡಕ್ಕೆ ಕಳುಹಿ, ತನ್ನ ಅಧಿಪತ್ಯವಿದ್ದಾಗ ಕಂಪಲಿಯನ್ನು ಸ್ವಾಧೀನಪಡಿಸಿಕೊಂಡರೆ ತನಗೆ ಪದ್ಮಿನಿಯಂಥ ಸ್ತ್ರೀರತ್ನಗಳ, ಹಾಗು ವಿಪುಲ ಐಶ್ವರ್ಯದ ಪ್ರಾಪ್ತಿಯಾಗುವದೆಂದು ಭಾವಿಸಿದ್ದನು. ಆ ಸಂಧಿಯು ಅನಾಯಾಸ

ವಾಗಿ ಸಾಧಿಸಿದ್ದರಿಂದ ಅವನಿಗೆ ಬಹಳ ಸಂತೋಷವಾಯಿತು. ತಾನು ಕಂಪಲಿಯನ್ನು ಸ್ವಾಧೀನಪಡಿಸಿಕೊಂಡು ಹುಕ್ಕ–ಬುಕ್ಕರನ್ನು ಸೆರೆಹಿಡಿದರೆ, ತನಗೆ ಆನೆಗುಂದಿಯಂತಹದೊಂದು ಸಂಸ್ಥಾನದ ಆಧಿಪತ್ಯವು ದೊರೆಯುವದಲ್ಲದೆ, ಅವಿವಾಹಿತಳಾದ ಪದ್ಮಿನಿಯ ಪ್ರಾಪ್ತಿಯಿಂದ ತನ್ನ ಅಧಿಪತ್ಯಕ್ಕೆ ವಿಲಕ್ಷಣ ಶೋಭೆಯೂ, ಅನುಪಮೇಯ ಸ್ವಾರಸ್ಯವೂ ಉಂಟಾಗುವವೆಂದು ಆತನು ತಿಳಿದಿದ್ದನು. ಹೀಗೆ ತಾನು ಮೊದಲು ಮುಸಲ್ಮಾನರ ಸಹಾಯದಿಂದ ಒಂದು ಸಂಸ್ಥಾನದ ಆಧಿಪತ್ಯವನ್ನು ಪಡೆದು, ಪ್ರಬಲನಾಗುತ್ತಾಗುತ್ತ ಕಡೆಗೆ ಮುಸಲ್ಮಾನರ ಆಧಿಪತ್ಯವನ್ನು ಬದಿಗೊತ್ತಿ ಸ್ವತಂತ್ರನಾಗಬೇಕೆಂದು ಆತನು ಕಲ್ಪಿಸಿದನು. ಈ ಸ್ವಾರ್ಥಪರಾಯಣನಾದ ನೀಚನಿಗೆ ಮಾಧವಾಚಾರ್ಯರಂಥ ಮಹಾತ್ಮರ ಉದಾತ್ತ ವಿಚಾರದ ಕಲ್ಪನೆಯು ಹ್ಯಾಗೆ ಬರಬೇಕು? ಮಾಧವಾಚಾರ್ಯರಂಥ ಮಹಾತ್ಮರು ನಿಸ್ಪೃಹಿಗಳಾಗಿ ವಿವಿಧ ಆತ್ಮಕ್ಲೇಶಗಳನ್ನು ಸಹಿಸಿ, ಲೋಕಹಿತದ ಸ್ವರಾಜ್ಯವನ್ನು ಸ್ಥಾಪಿಸಬೇಕೆನ್ನುವವರು; ಆದರೆ ತಿರುವೇಂಕಟನಂಥ ನೀಚಾತ್ಮರು ಸ್ವಾರ್ಥಪರಾಯಣರಾಗಿ ತಾವು ಸಂಪಾದಿಸಿದ ರಾಜ್ಯವೆಲ್ಲ ತಮ್ಮ ಸುಖಕ್ಕಾಗಿಯೇ ಇರುವದೆಂಬ ದುರಾಸೆಯಿಂದ ಪ್ರೇರಿತರಾಗಿ ಲೋಕಕಂಟಕ ರಾಜ್ಯವನ್ನು ಸ್ಥಾಪಿಸುವವರು. ಇಂಥ ದುಷ್ಟರು ತಮ್ಮ ಹಿತವನ್ನು ಸಾಧಿಸಿಕೊಳ್ಳುವಾಗ ಯಾರ ದ್ರೋಹವನ್ನು ಮಾಡಲಿಕ್ಕೂ ಹೇಸುವದಿಲ್ಲ. ಇವರು ಸ್ವಹಿತಸಾಧನಕ್ಕಾಗಿ ಸ್ವಾಮಿದ್ರೋಹ, ಸ್ವದೇಶದ್ರೋಹ ಮೊದಲಾದ ಯಾವ ದ್ರೋಹವನ್ನಾದರೂ ಮಾಡುವರು. ಈ ಸ್ವಹಿತತತ್ಪರರು ಇಂದು ಒಬ್ಬರು ಮಿತ್ರರಾಗಿದ್ದರೆ, ಸ್ವಹಿತ ಸಾಧಿಸುವ ಪ್ರಸಂಗವಿದ್ದಲ್ಲಿ ನಾಳೆ ಆ ಮಿತ್ರರ ಶತ್ರುಗಳಾಗಲಿಕ್ಕೆ ಹಿಂದೆಮುಂದೆ ನೋಡುವದಿಲ್ಲ; ಮತ್ತು ಶತ್ರುಗಳಿದ್ದವರು ಮಿತ್ರರಾಗಲಿಕ್ಕೆ ಹಿಂದೆಮುಂದೆ ನೋಡುವದಿಲ್ಲ. ಇಂಥವರ ಸಹಾಯವನ್ನು ಧೂರ್ತರಾದ ಕಾರ್ಯಸಾಧಕರು, ಮುಳ್ಳನ್ನು ತೆಗೆಯಲಿಕ್ಕೆ ಮುಳ್ಳನ್ನು ಉಪಯೋಗಿಸುವಂತೆ ಉಪಯೋಗಿಸಿಕೊಂಡು, ಕಾರ್ಯಸಾಧನೆಯಾದ ಬಳಿಕ ಇವರನ್ನು ತಿರಸ್ಕರಿಸಿ ಬಿಟ್ಟುಕೊಡುವರು. ಒಟ್ಟಿಗೆ ಇಂಥ ದ್ರೋಹಿಗಳು ಸರ್ವಥಾ ವಿಶ್ವಾಸಕ್ಕೆ ಪಾತ್ರರಲ್ಲದ್ದರಿಂದ ಸರ್ವತ್ರ ಇವರು ತಿರಸ್ಕರಣೀಯರಾಗಿರುವರು.

ಇಂಥ ತಿರಸ್ಕರಣೀಯ ನೀಚನಾದ ತಿರುವೇಂಕಟನು ಬೇಗನೆ ಕಂಪಲಿ ಕೋಟೆಯನ್ನು ಸ್ವಾಧೀನಪಡಿಸಿಕೊಂಡು, ತನ್ನ ದುಷ್ಟ ಹೇತುವನ್ನು ಸಾಧಿಸಬೇಕೆಂದು ಹವಣಿಸುತ್ತಿದ್ದನು. ಮಾಧವಾಚಾರ್ಯರಂಥ ರಾಜಕಾರಣಪಟುಗಳು ಮುಂಜಾಗ್ರತೆಯಿಂದ ಮಾಡಿಟ್ಟಿದ್ದ ಗುಪ್ತ ವ್ಯವಸ್ಥೆಯ ಗಂಧವು ಕೂಡ ಅವನಿಗೆ ಹತ್ತಿದ್ದಿಲ್ಲ. ಆನೆಗುಂದಿಯ ದೇವರಾಜನು ಮುಸಲ್ಮಾನರ ಭಯದಿಂದ ಅವರಿಗೆ ತೋರಿಕೆಗಾದರೂ ಅಂಕಿತನಾಗಿ ನಡೆಯುತ್ತಿದ್ದದ್ದರಿಂದ, ಅವನಿಂದ ತನಗೆ ಸಹಾಯವಾಗದಿದ್ದರೂ, ಅವನು ತನ್ನ ವಿರುದ್ಧವಾಗಿ ಯುದ್ಧವನ್ನಾದರೂ ಮಾಡಲಿಕ್ಕಿಲ್ಲವೆಂದು ತಿರುವೇಂಕಟನು ತಿಳಿದುಕೊಂಡಿದ್ದನು; ಅವನ ಈ ತಿಳಿವಳಿಕೆಯು ಕೇವಲ ನಿರರ್ಥಕವಾದದ್ದೂ ಇದ್ದಿಲ್ಲ; ಯಾಕಂದರೆ ವೃದ್ಧ ದೇವರಾಜನು ಪ್ರಸಿದ್ಧರೀತಿಯಿಂದ ಮುಸಲ್ಮಾನರ ವಿರುದ್ಧ ನಿಲ್ಲಲು ಸಮರ್ಥನಿದ್ದಿಲ್ಲ; ಮಾಧವಾಚಾರ್ಯರ ಸಾಮರ್ಥ್ಯದ ವಿಷಯವಾಗಿ ಆ ವೃದ್ಧರಾಜನು ಭಕ್ತಿ–ವಿಶ್ವಾಸವುಳ್ಳವನಾಗಿದ್ದರೂ ಅವರನ್ನು ಪ್ರಸಿದ್ಧ ರೀತಿಯಿಂದ ಕೂಡಿಕೊಳ್ಳುವಷ್ಟು ಅವನು

ಮನೋಧೈರ್ಯನಾಗಿದ್ದಿಲ್ಲ. ಅವರಿಗೆ ಸಹಾಯಮಾಡುವದಾದರೆ ಅವನು ಗುಪ್ತರೀತಿಯಿಂದ ಮಾಡಬಹುದಾಗಿತ್ತು. ಮಾಧವಾಚಾರ್ಯರಾದರೂ ಆ ವೃದ್ಧರಾಜನ ಸಹಾಯವನ್ನು ಅವನ ಒಲವಿಗೆ ವಿರುದ್ಧವಾಗಿ ಪಡೆಯಲು ಇಚ್ಛಿಸುತ್ತಿದ್ದಿಲ್ಲ. ಹೀಗೆ ತಿರುವೇಂಕಟನಿಗೆ ದೇವರಾಜನ ಭಯವು ತಪ್ಪಿದ್ದಲ್ಲದೆ ಕಂಪಲಿಯ ಕೋಟೆಯಲ್ಲಿ ಹೆಚ್ಚು ಸೈನ್ಯವಿರುವದಿಲ್ಲವೆಂಬದನ್ನು ತನ್ನ ಗೂಢಚಾರರ ಮುಖಾಂತರವಾಗಿ ಆತನು ತಿಳಿದುಕೊಂಡಿದ್ದನು. ಇದಲ್ಲದೆ ತಾನು ಪ್ರತ್ಯಕ್ಷ ಕಂಪಲಿಯ ಕೋಟೆಯೊಳಗಿನ ಮಾಧವಾಚಾರ್ಯರನ್ನು ಕಾಣಲಿಕ್ಕೆ ಹೋದಾಗ ಸ್ವತಃ ಮನಗಂಡಿದ್ದನು; ಆದ್ದರಿಂದ ಕಂಪಲಿಯ ಕೋಟೆಯನ್ನು ವಶಮಾಡಿಕೊಳ್ಳುವದು ಅವನಿಗೆ ಅಶಕ್ಯವಾಗಿ ತೋರುತ್ತಿದ್ದಿಲ್ಲ. ತನ್ನ ಎಲ್ಲ ದುರಾಲೋಚನೆಗಳನ್ನು ಚಾಣಾಕ್ಷರಾದ ಮಾಧವಾಚಾರ್ಯರು ತಮ್ಮ ಗೂಢಚಾರರ ಮುಖದಿಂದ ಯಾವಾಗೋ ತಿಳಿದುಕೊಂಡು ಅದಕ್ಕೆ ತಕ್ಕಂತೆ ಗುಪ್ತರೀತಿ ಯಿಂದ ವ್ಯವಸ್ಥೆ ಮಾಡಿದ್ದನ್ನು ಅವನು ಸರ್ವಥಾ ಅರಿತಿದ್ದಿಲ್ಲ. ಆಚಾರ್ಯರು ತಾವಾಗಿ ಸೆರೆಯಾಳಾದದ್ದರಲ್ಲಿಯೂ ಗೂಢ ರಾಜಕಾರಣವಿರುವದು ಸ್ಥೂಲದೃಷ್ಟಿಯ ತಿರುವೇಂಕಟನಿಗೆ ಗೊತ್ತಿದ್ದಿಲ್ಲ. ಇತ್ತ ಆಚಾರ್ಯರು ತಾವು ಮುಸಲ್ಮಾನರ ಪಾಳಯವನ್ನು ಸೆರೆಯಾಳಾಗಿ ಸೇರಲಿಕ್ಕೆ ಹೋಗುವಾಗ, ಮುಂದೆ ಏನೇನು ವ್ಯವಸ್ಥೆ ಮಾಡಬೇಕೆಂಬದನ್ನು ವಿರೂಪಾಕ್ಷಾರ್ಯರ ಸಮಕ್ಷ ಹುಕ್ಕ-ಬುಕ್ಕ-ಕೃಷ್ಣನಾಯಕ ಮೊದಲಾದ ವೀರರಿಗೆ ಹೇಳಿ, ತಮ್ಮ ಸ್ಥಳದಲ್ಲಿ ವಿರೂಪಾಕ್ಷಾರ್ಯರೇ ಸೂತ್ರಚಾಲನದ ಕಾರ್ಯವನ್ನು ಸಾಗಿಸಬೇಕೆಂಬ ತಮ್ಮ ಇಚ್ಛೆಯನ್ನು ಪ್ರಕಟಮಾಡಿದ್ದರು. ಅದಕ್ಕೆ ವಿರೂಪಾಕ್ಷಾರ್ಯರು ಅತ್ಯಾದರದಿಂದ— "ಆಚಾರ್ಯವರ, ಸ್ವದೇಶೋದ್ಧಾರಕ್ಕಾಗಿ ನೀವು ಪ್ರತ್ಯಕ್ಷ ಶತ್ರುಗಳ ದವಡೆಯಲ್ಲಿ ಸಂತೋಷದಿಂದ ಪ್ರವೇಶಿಸುತ್ತಿರಲು, ನಿಮ್ಮ ಸೂಚನೆಯನ್ನು ಆಜ್ಞೆಯೆಂದು ತಿಳಿದು ನಾನು ಅದನ್ನು ಸಂತೋಷದಿಂದ ಪಾಲಿಸದೆ ಹ್ಯಾಗೆ ಇರುವೆನು! ನಾನು ರಾಜಕಾರಣಗಳನ್ನು ಅರಿಯದವನಾಗಿದ್ದರೂ, ನಿಮ್ಮಂಥ ರಾಜಕಾರಣಪಟುಗಳು ನನ್ನನ್ನು ಸೂತ್ರಚಾಲಕನನ್ನಾಗಿ ನಿಯಮಿಸಿರುವದರಿಂದ, ನಿಮ್ಮ ನಿಯಮವು ನಿರರ್ಥಕವಾದದ್ದೆಂತಲೂ ನಾನು ತಿಳಿಯುವದಿಲ್ಲ. ಹುಕ್ಕ-ಬುಕ್ಕರಿರುವರು, ಕೃಷ್ಣನಾಯಕನಿರುವನು, ಮಲ್ಲಸರ್ಜನರಂಥ ಸ್ವಾಮಿನಿಷ್ಠರು ಇರುವರು; ಅಂದಬಳಿಕ ನಿಮ್ಮ ಯೋಜನೆಯನ್ನು ನಾನು ಏಕೆ ಅಲ್ಲಗಳೆಯಲಿ? ನಿಮ್ಮ ಸ್ವದೇಶೋದ್ಧಾರದ ಕಾರ್ಯಕ್ಕೆ ತ್ರಿಕರಣಪೂರ್ವಕವಾಗಿ ಸಹಾಯಮಾಡಲು ನಾನು ಇಚ್ಛಿಸುವೆನು. ಆಚಾರ್ಯವರ, ನೀವು ಗೃಹಸ್ಥಾಶ್ರಮಿಗಳು, ನಾನೂ ಗೃಹಸ್ಥಾಶ್ರಮಿಯೇ. ಗೃಹಸ್ಥಾಶ್ರಮಿಗಳು ಸ್ವದೇಶ ಕಾರ್ಯಕ್ಕಾಗಿ ಹ್ಯಾಗೆ ಸ್ವಾರ್ಥತ್ಯಾಗ ಮಾಡಬೇಕೆಂಬದನ್ನು ನೀವು ಆಚರಣೆಯಿಂದ ತಿಳಿಸಿರುತ್ತೀರಿ. ಅದರಂತೆಯೇ ದೇಶಭಕ್ತರೆನಿಸುವವರು ಆಚರಿಸತಕ್ಕದ್ದು. ಸರ್ವರಿಗೂ ಪ್ರೇರಕನು ಶಿವನೇ ಇರುವನು. ಸರ್ವರೀತಿಯಿಂದ ಶಿವನಿಗೆ ಶರಣುಹೋಗಿರುವ ನಮಗೆ ಶಿವನೇ ಪ್ರೇರಕನಾಗಿರಲು, ನಮ್ಮ ಯೋಗ್ಯತೆಯನ್ನು ನಾವು ವಿಚಾರಿಸುವದೇಕೆ? ಅವಶ್ಯವಾಗಿ ನೀವು ನಿಯಮಿಸಿದ ಕಾರ್ಯವನ್ನು ಮಾಡುವೆನು" ಎಂದು ಹೇಳಿ ಅತ್ಯಾಸಕ್ತಿ ಯಿಂದ ದೇಶಕಾರ್ಯದ ಮಾರ್ಗವನ್ನು ಮನಃಪೂರ್ವಕವಾಗಿ ತೋರಿಸುತ್ತಲಿದ್ದರು; ಆದರೆ ಇದನ್ನಾವದನ್ನೂ ಅರಿಯದೆ, ಮಾಧವಾಚಾರ್ಯರ ಅಭಾವದಲ್ಲಿ ಕಂಪಲಿ ಕೋಟೆಯಲ್ಲಿ

ಅನಾಯಕತ್ವವುಂಟಾಗಿರುವದೆಂತಲೂ, ತಾನು ಕೋಟೆಗೆ ಲಗ್ಗೆಹತ್ತುವದೊಂದೇ ತಡ, ಕೂಡಲೆ ಅದು ತನ್ನ ಕೈಸೇರುವದೆಂತಲೂ, ಸ್ವಾರ್ಥಮೂಢ ತಿರುವೇಂಕಟನು ನಂಬಿದ್ದನು!

ತಿರುವೇಂಕಟನು ರಣಶೂರನೇನೋ ಇದ್ದನು; ಆದರೆ ರಾಜಕಾರಣದ ಜ್ಞಾನವು ಅವನಿಗೆ ಸರ್ವಥಾ ಇದ್ದಿಲ್ಲ. ಇಂಥ ಸ್ಥಿತಿಯಲ್ಲಿ ಅವನಿಗೆ ರಾಜಕಾರಣದ ಆಲೋಚನೆಯನ್ನು ಹೇಳುವ ಶ್ರೀಕಂಠಶಾಸ್ತ್ರಿಗಳು ಮಾಧವಾಚಾರ್ಯರ ಶಿಷ್ಯರೊಳಗಿನವರೊಬ್ಬರಾಗಿದ್ದು, ಅವರ ಗುಪ್ತಚಾರರಾದದ್ದರಿಂದ, ಅವರ ಆಲೋಚನೆಯಿಂದ ತಿರುವೇಂಕಟನ ಆ ಜ್ಞಾನವು ಮತ್ತಿಷ್ಟು ಹೆಚ್ಚುತ್ತಲಿತ್ತು; ಹೀಗಾದ್ದರಿಂದಲೇ ಆ ಸ್ವಾರ್ಥೈಕದೃಷ್ಟಿಯ ಮೂಢನು ಮಲಿಕನಾಯಬನಿಗೆ ಏನೇನೋ ಹೇಳಿ ಹಿಂದುಮುಂದಿನ ವಿಚಾರವಿಲ್ಲದೆ ಕಂಪಲಿಯ ಕೋಟೆಯನ್ನು ಮುತ್ತಲಿಕ್ಕೂ, ಮಾಧವಾಚಾರ್ಯರನ್ನು ಸೆರೆಹಿಡಿಯಲಿಕ್ಕೂ ಆ ನಾಯಬನ ಒಪ್ಪಿಗೆಯನ್ನೂ, ಪತ್ರವನ್ನೂ ಸಂಪಾದಿಸಿದನು. ಆ ವಿವೇಕ ಶೂನ್ಯನು ತನ್ನನ್ನೊಬ್ಬನನ್ನೇ ಕಳಿಸಬೇಕೆಂದು ಕೇಳಿಕೊಂಡಿದ್ದನು; ಆದರೆ ಕಾರ್ಯಸಾಧಕನಾದ ಮಲಿಕನಾಯಬನು, ಯಾವಾಗಾದರೂ ದ್ರೋಹಿಗಳು ದ್ರೋಹಿಗಳೇ ಎಂದು ತಿಳಿದು, ತಿರುವೇಂಕಟನಲ್ಲಿ ಪೂರ್ಣವಿಶ್ವಾಸವಿಡದೆ ಅಬ್ದುಲರಹಿಮಾನನನ್ನು ಅವನು ಮೇಲಧಿಕಾರಿಯಾಗಿ ನಿಯಮಿಸಿ ಕಳಿಸಿದನು. ಮಲಿಕನಾಯಬನು ನೀತಿವಂತನೂ, ಶೂರನೂ, ರಾಜಕಾರಣ ಪಟುವೂ ಆಗಿದ್ದನು; ಮಾಧವಾಚಾರ್ಯರ ಘನತರವಾದ ಯೋಗ್ಯತೆಯನ್ನೂ, ಅವರು ತಮ್ಮ ಕರ್ತೃತ್ವಶಕ್ತಿಯಿಂದ ಮಾಡಿದ್ದ ಲೋಕಜಾಗೃತಿಯನ್ನೂ, ಒಳ್ಳೆಯ ಮುತ್ಸದ್ದಿತನದಿಂದ ರಾಜ್ಯಸ್ಥಾಪನೆಯ ವ್ಯವಸ್ಥೆಯನ್ನು ಗುಪ್ತರೀತಿಯಿಂದ ಮಾಡಲು ಅವರು ಸಮರ್ಥರಿರುವ ರೆಂಬದನ್ನು ಆ ನಾಯಬನು ಅರಿತಿದ್ದರೂ, ''ವಿನಾಶಕಾಲೇ ವಿಪರೀತ ಬುದ್ಧಿಃ'' ಯೆಂಬಂತೆ, ಅಂಥ ಯೋಗ್ಯತೆಯ ಮನುಷ್ಯನೂ ತಿರುವೇಂಕಟನ ಅಲೋಚನೆಗೆ ಸುಮ್ಮತಿಸಿದನು! ತಿರುವೇಂಕಟನಿಗೆ ಹಾಗೆ ಆಲೋಚನೆ ಹೇಳಬೇಕೆಂದು ಮಾಧವಾಚಾರ್ಯರೇ ತಮ್ಮ ಶಿಷ್ಯ ಶ್ರೀಕಂಠಶಾಸ್ತ್ರಿಗಳಿಗೆ ಸೂಚಿಸಿದ್ದರು; ಶಾಸ್ತ್ರಿಗಳ ಈ ಸೂಚನೆಯಂತೆ ತಿರುವೇಂಕಟನು ನಾಯಬನ ಒಪ್ಪಿಗೆ ಪಡೆದು ಕಂಪಲಿಗೆ ಮುತ್ತಿಗೆ ಹಾಕಿದಾಗ ಏನು ಮಾಡಬೇಕೆಂಬದನ್ನು ಕುರಿತು ಮಾಧವಾ ಚಾರ್ಯರು ಪೂರ್ವದಲ್ಲಿ ಯೋಚಿಸಿ ಅದರಂತೆ ವ್ಯವಸ್ಥೆ ಮಾಡಿದ್ದರು. ಅವರು ಮುಸಲ್ಮಾನರ ಅವಸಾನ ಘಾತವನ್ನು ಹೆಜ್ಜೆ ಹೆಜ್ಜೆಗೆ ಮಾಡಿ, ತಮ್ಮ ಗೂಢಶಕ್ತಿಯ ದರ್ಪದಿಂದ ಅವರಲ್ಲಿ ದಿಗ್ಭ್ರಮ ವನ್ನುಂಟುಮಾಡಬೇಕೆಂದು ಮಾಡಿದ್ದರು; ಈಶ್ವರೀಸಂಕೇತದಂತೆ ಅವರ ಮನೋದಯಗಳು ನೆರವೇರಲು ತಕ್ಕ ಅನುಕೂಲತೆಗಳು ಉಂಟಾಗುತ್ತ ಬಂದವು. ಇದಕ್ಕೆ ಆಚಾರ್ಯರ ನಿರ್ಮಲ ತಪಸ್ಸಿನ ಪ್ರಭಾವವೇ ಕಾರಣವೆಂದು ಹೇಳಬಹುದು. ತಮ್ಮ ಆಲೋಚನೆಯಂತೆ ತಿರುವೇಂಕಟನು ಕಂಪಲಿ ಕೋಟೆಯನ್ನು ಮುತ್ತಿದ್ದರಿಂದ ಅವರಿಗೆ ಅಂತರಂಗದಲ್ಲಿ ಬಹಳ ಸಮಾಧಾನವಾಗಿತ್ತು; ತಾವು ರಚಿಸಿರುವ ವ್ಯೂಹದಲ್ಲಿ ಶತ್ರುಗಳು ಸಿಗಿಬಿದ್ದು, ಸತ್ವಹೀನರಾಗುವ ಕಾಲವು ಸಮೀಪಿಸಿತೆಂದು ಅವರು ತಿಳಿದರು; ಆದರೆ ಅವರ ಈ ಆಲೋಚನೆಯ ಗಂಧವು ಕೂಡ ಯಾರಿಗೂ ಹತ್ತಿದ್ದಿಲ್ಲ; ಮಾಡತಕ್ಕ ಬಾಹ್ಯಾಲೋಚನೆಗಳನ್ನು ಮಾತ್ರ ಬಹುಜನರ ಆಲೋಚನೆಯಂತೆ ಅವರು ಮಾಡುತ್ತಿದ್ದ ರಲ್ಲದೆ, ಆ ಆಲೋಚನೆಯ ಗೂಢ ತತ್ವವನ್ನೂ, ಆ ಆಲೋಚನೆಯನ್ನು ಸಾಧಿಸುವದಕ್ಕಾಗಿ

ಪಸರಿಸುವ ಕಾರ್ಯಜಾಲದ ಹಗ್ಗವನ್ನೂ ತಮ್ಮ ಕೈಯಲ್ಲಿ ಗೂಢವಾಗಿಯೇ ಇಟ್ಟುಕೊಳ್ಳುತ್ತಿದ್ದರು; ಆದ್ದರಿಂದ ಆಚಾರ್ಯಭಕ್ತರೆಲ್ಲ ತಮ್ಮ ಆಲೋಚನೆಯಿಂದಲೇ ಆಚಾರ್ಯರು ಕಾರ್ಯ ಮಾಡುವರೆಂದು ಸಮಾಧಾನಪಡುವರಲ್ಲದೆ, ಅವರ ಅಗಾಧ ಗೂಢತಂತ್ರಕ್ಕೆ ಮೆಚ್ಚಿ, ಅವರ ಅಪ್ಪಣೆಯನ್ನು ಪಾಲಿಸುವದಷ್ಟು ತಮ್ಮ ಕೆಲಸವೆಂದು ಅವರು ನಿಶ್ಚಯಿಸಿಕೊಳ್ಳುತ್ತಿದ್ದರು. ಆಚಾರ್ಯರ ಅನುಯಾಯಿಗಳು ಆಚಾರ್ಯರ ಅಪ್ಪಣೆಯನ್ನು ಗುರ್ವಾಜ್ಞೆಯೆಂದು ಭಕ್ತಿ ಪೂರ್ವಕ ಪಾಲಿಸುತ್ತಿದ್ದರಲ್ಲದೆ, ರಾಜಾಜ್ಞೆಯೆಂದು ಭಯದಿಂದ ಪಾಲಿಸುತ್ತಿದ್ದಿಲ್ಲ; ಮತ್ತು ಆಚಾರ್ಯರ ಆಜ್ಞಾಪಾಲನದಿಂದ ಐಹಿಕವಾದ ಸ್ವರಾಜ್ಯಪ್ರಾಪ್ತಿಯಷ್ಟೇ ಅಲ್ಲ, ತಮಗೆ ಪಾರತ್ರಿಕ ಲಾಭವೂ ಆಗುವದೆಂದು ಅವರು ಭಾವಿಸುತ್ತಿದ್ದರು. ಇಂಥ ಉದಾತ್ತಭಾವನೆ ಯಿರುತ್ತಿದ್ದದ್ದರಿಂದಲೇ ಆಜ್ಞಾಪಾಲನದಲ್ಲಿ ದೇಹವನ್ನರ್ಪಿಸಲಿಕ್ಕೂ ಆಚಾರ್ಯರ ಅನುಯಾಯಿಗಳು ಹಿಂದೆಮುಂದೆ ನೋಡುತ್ತಿದ್ದಿಲ್ಲ!

ತಿರುವೇಂಕಟನು ಕೋಟೆಯನ್ನು ಎಂದು ಕೈವಶಮಾಡಿಕೊಳ್ಳಬೇಕೆಂದು ತನ್ನೊಳಗೆ ಆಲೋಚಿಸುತ್ತ ತನ್ನ ಏಕಾಂತಗೃಹದಲ್ಲಿ ಕುಳಿತುಕೊಂಡಿದ್ದನು. ಮಾಧವಾಚಾರ್ಯರು ಹೋಗಿ ಎರಡು ದಿವಸಗಳಾದರೂ ಕೋಟೆಯಲ್ಲಿ ಗದ್ದಲವಿಲ್ಲದ್ದನ್ನು ನೋಡಿ, ಕೋಟೆಯೊಳಗಿನವರು ತನಗೆ ಸಂಪೂರ್ಣವಾಗಿ ಅಂಜಿರುವರೆಂದು ಆತನು ತಿಳಿದನು. ಈ ಸಂಬಂಧವಾಗಿ ಆಲೋಚಿ ಸುವದಕ್ಕಾಗಿ ಅವನು ಶ್ರೀಕಂಠಶಾಸ್ತ್ರಿಗಳನ್ನು ಕರೆಕಳುಹಿಸಿದನು; ಮಾಧವಾಚಾರ್ಯರ ಆಲೋಚನೆಯಂತೆ ತಿರುವೇಂಕಟನ ದಿಗ್ಭ್ರಮೆಮಾಡುವದು ಶಾಸ್ತ್ರಿಗಳ ಮುಖ್ಯ ಕೆಲಸವಾಗಿತ್ತು. ಕೇವಲ ತಿರುವೇಂಕಟನ ಶಾಸನಮಾಡುವದಕ್ಕಾಗಿಯೇ ಮಾಧವಾಚಾರ್ಯರು ಶಾಸ್ತ್ರಿಗಳ ಯೋಜನೆಯನ್ನು ಅವನ ಬಳಿಯಲ್ಲಿ ಮಾಡಿದ್ದಿಲ್ಲ; ತಿರುವೇಂಕಟನಂಥ ಸ್ವಾರ್ಥಪ ರಾಯಣರಾದ ದೇಶದ್ರೋಹಿಗಳು ತೀರ ಕ್ಷುಲ್ಲಕರೆಂತಲೂ, ಅವರ ಸದ್ದು ಪೂರ್ಣವಾಗಿ ಅಡಗಿದ ಬಳಿಕ ಸ್ವದೇಶೋದ್ಧಾರದ ಕಾರ್ಯ ಮಾಡಬೇಕೆನ್ನುವದು ಕೇವಲ ಅಶಕ್ಯವೆಂತಲೂ ಅವರು ತಿಳಿದಿದ್ದರು; ಯಾಕಂದರೆ, ದೇಹದಲ್ಲಿ ಹೇಯಾವಯವ ಗಳಿರುವಂತೆ ದೇಶವಿದ್ದಲ್ಲಿ ದೇಶದ್ರೋಹಿಗಳು ಇರತಕ್ಕವರೇ; ಆದರೆ ಆ ದೇಶದ್ರೋಹಿಗಳ ಶಾಸನವನ್ನು ಮಾಡಿ ದೇಶೋದ್ಧಾರದ ಮಾರ್ಗವನ್ನು ನಿಷ್ಕಂಟಕವಾಗಿ ಮಾಡಿಕೊಳ್ಳುವದಕ್ಕಿಂತ, ದೇಶದ್ರೋಹಿಗಳ ಶಾಸನದೊಡನೆ ಆ ದೇಶದ್ರೋಹಿಗಳಿಗೆ ಆಶ್ರಯಕೊಟ್ಟಿರುವ ಶತ್ರುಗಳ ಹೃದಯವನ್ನು ನಡುಗಿಸುವದು ಅವಶ್ಯವೆಂದು ಅವರು ತಿಳಿಯುತ್ತಿದ್ದರು. ಈ ಉದಾತ್ತಭಾವನೆಯಿಂದಲೇ ಆಚಾರ್ಯರು ತಿರುವೇಂಕಟನಿಗೆ ಅಷ್ಟು ಮಹತ್ವಕೊಟ್ಟು, ಶ್ರೀಕಂಠಶಾಸ್ತ್ರಿಗಳಂಥ ರಾಜ ಕಾರ್ಯಜ್ಞರನ್ನು ಅವನ ಬಳಿಯಲ್ಲಿ ಇಟ್ಟಿದ್ದರು. ಶ್ರೀಕಂಠಶಾಸ್ತ್ರಿಗಳು ತಾವು ಮಾಧವಾಚಾರ್ಯರ ಪಾಂಡಿತ್ಯಕ್ಕಾಗಿ ಮಾತ್ಸರ್ಯಪಟ್ಟು, ಅವರೊಡನೆ ದ್ವೇಷಬಳಿಸಿ ಅವರ ಶಾಸನಮಾಡುವ ನೆವದಿಂದ ತಿರುವೇಂಕಟನ ಆಶ್ರಯ ಮಾಡಿದಂತೆ ನಟಿಸಿದ್ದರು. ತಿರುವೇಂಕಟನ ಮುಖಾಂತರ ಮುಸಲ್ಮಾನರು ಒಳಸಂಚುಗಳನ್ನೆಲ್ಲ ತಿಳಕೊಂಡು ಅವನ್ನೆಲ್ಲ ಮಾಧವಾಚಾರ್ಯರಿಗೆ ಗುಪ್ತರೀತಿಯಿಂದ ತಿಳಿಸುವದೂ, ತಿರುವೇಂಕಟನ ಮುಖಾಂತರ

ಮಾಧವಾಚಾರ್ಯರ ಗೂಢಶಕ್ತಿಯ ಅಂತವು ಮುಸಲ್ಮಾನರಿಗೆ ಹತ್ತದಂತೆ ಮಾಡುವದೂ ಶಾಸ್ತ್ರಿಗಳ ಕೆಲಸಗಳಾಗಿದ್ದವು. ಗುಪ್ತ ಕರ್ತೃತ್ವವು ರಾಜಕಾರಣದ ಗುರುಮಂತ್ರವೆಂಬ ಮಾತನ್ನು ಮಾಧವಾಚಾರ್ಯರು ತಮ್ಮ ಶಿಷ್ಯರಿಗೆ ಚೆನ್ನಾಗಿ ಬೋಧಿಸಿ, ಹಾಗೆ ನಡೆಯುವ ಸಾಮರ್ಥ್ಯವನ್ನು ಅವರಲ್ಲಿ ಉಂಟುಮಾಡಿದ್ದರು. ಶತ್ರುಗಳು ಬಲಿಷ್ಠರಾಗಿದ್ದಷ್ಟು ಆ ಮಂತ್ರವು ಹೆಚ್ಚು ಗೂಢ ವಾಗಿರತಕ್ಕದ್ದೆಂಬುದನ್ನು ಆಚಾರ್ಯರು ತಮ್ಮ ಅಗಾಧವಾದ ಬುದ್ಧಿ ಸಾಮರ್ಥ್ಯದಿಂದ ಚೆನ್ನಾಗಿ ಬಳಿಕೆಯಲ್ಲಿ ತಂದಿದ್ದರು. ರಾಜಕಾರಣದಲ್ಲಿಯ ಬಬ್ಬಾಟವು, ಎಬ್ಬಿಸಿ ಹುಲಿಹೊಡೆದಂತೆ ಇರುತ್ತದೆ. ಶೌರ್ಯವನ್ನು ತೋರಿಸುವ ಪ್ರಸಂಗದಲ್ಲಿ ಹುಲಿಯನ್ನು ಎಬ್ಬಿಸಿ ಹೊಡೆದರೂ, ಹುಲಿಯನ್ನು ಹೊಡೆಯು ವದೇ ಮುಖ್ಯೋದ್ದೇಶವಾಗಿರುವಾಗ ಗುಪ್ತ ತಂತ್ರದಿಂದ ಹುಲಿಯನ್ನು ಹೊಡೆಯುವದೇ ನಿರ್ದಿಷ್ಟ ಉಪಾಯವಾಗಿರುವದು. ಶೂರನೂ ಹೇಡಿಗಳೂ ಕೂಡಿಯೇ ತಮ್ಮ ತಮ್ಮ ಶಕ್ತಿಯಂತೆ ಹೆಣಗಿದಾಗ ರಾಜಕಾರಣವು ಸಾಧಿಸತಕ್ಕದ್ದಾದ್ದರಿಂದ, ರಾಷ್ಟ್ರೋದ್ಧಾರಕರು ಕೇವಲ ತಮ್ಮ ಬಾಹುಷಿಯನ್ನು ತೋರಿಸುವದಕ್ಕಾಗಿ ಗದ್ದಲಮಾಡಿ ಅಳ್ಳೆದೆಯ ಜನರನ್ನು ಮೂಲೆ ಗುಂಪು ಮಾಡುವದು ಯೋಗ್ಯವಲ್ಲವೆಂಬದನ್ನು ಆಚಾರ್ಯಶಿಷ್ಯರು ಚೆನ್ನಾಗಿ ಅರಿತಿದ್ದರು. ರಾಜಕಾರಣದಲ್ಲಿ ಬಾಯಿ ಹಿಂದಾಗಿ ಕೈ ಮುಂದಾಗಬೇಕಾಗುತ್ತದೆ. ಲೋಕಜಾಗ್ರತಿಯನ್ನು ಮಾಡುವಾಗ ಕೈಗೆ ಮಹತ್ವವಿರಬೇಕಲ್ಲದೆ ಬಾಯಿಗೆ ಮಹತ್ವವಿರಲಾಗದು; ಯಾಕಂದರೆ ಬಾಯಿಬಡಕರ ಆಡಂಬರವು ಹಾಲು ಉಕ್ಕಿದಂತೆ ಉಕ್ಕಿಬಂದದ್ದಾಗಿರುತ್ತದೆ. ಗಟ್ಟಿಯಾಗಿ ಊದಿದ ಮಾತ್ರದಿಂದ ಉಕ್ಕು ಇಳಿದು ಹಾಲು ಪಾತ್ರೆಯ ತಳಕ್ಕೆ ಹತ್ತುವಂತೆ, ಹೊಯ್ದು ಪೆಟ್ಟಿನಿಂದ ಬಾಯ್ಬಡಕರ ಬಾಯಿ ಬಂದಾಗಿ ರಾಜಕಾರಣವು ದೇಶದ ತಳಕ್ಕೆ ಹತ್ತಿದ ಹಾಗೆ ತೋರಿ ದೇಶದಲ್ಲಿ ನಿರುತ್ಸಾಹವು ಉಂಟಾಗುವದು. ನಿರುತ್ಸಾಹವು ಕಾರ್ಯವಿಘಾತಕ ಮಹಾ ರೋಗವಾದದ್ದರಿಂದ ರಾಜಕಾರಣಪಟುಗಳು ದೇಶದಲ್ಲಿ ನಿರುತ್ಸಾಹವುಂಟಾಗುವ ಕೆಲಸವನ್ನು ಸರ್ವಥಾ ಮಾಡಬಾರದು. ಒಟ್ಟಿಗೆ, ದೇಶ–ಕಾಲ– ಪರಿಸ್ಥಿತಿಗನುಸರಿಸಿ ರಾಜಕಾರಣವನ್ನು ಕರ್ತವ್ಯಬುದ್ಧಿಯಿಂದ ಕಾರ್ಯರೂಪವಾಗಿ ಜರುಗಿಸಬೇಕಲ್ಲದೆ, ಹುರುಳಿಲ್ಲದ ಕೀರ್ತಿಯ ಬುದ್ಧಿಯಿಂದ ವಾಗ್ರೂಪವಾಗಿ ಜರುಗಿಸಬಾರದು !

ಇವೇ ಮೊದಲಾದ ತತ್ವಗಳನ್ನು ಮಾಧವಾಚಾರ್ಯರು ತಮ್ಮ ಅನುಯಾಯಿಗಳಿಗೆ ಚೆನ್ನಾಗಿ ಕಲಿಸಿ, ಅದರಂತೆ ಅವರನ್ನು ವ್ಯವಹರಿಸಹಚ್ಚಿದ್ದರಿಂದ ಶಾಸ್ತ್ರಿಗಳು ತಮ್ಮ ಕಾರ್ಯವನ್ನು ಬಹು ಗುಪ್ತವಾಗಿ ನಡಿಸಿದ್ದರು. ಅವರ ಗುಪ್ತಕಾರ್ಯದ ಪ್ರಭಾವದಿಂದ ಮಲಿಕನಾಯಬನಂಥ ಘನವಂತನೇ ಮೋಸಹೋಗಿರುವಾಗ ತಿರುವೇಂಕಟನಂಥ ಸಾಮಾನ್ಯ ಮನುಷ್ಯನು ಮೋಸ ಹೋದದ್ದು ಆಶ್ಚರ್ಯವಲ್ಲ. ನಾಯಬನು ಮಾಧವಾಚಾರ್ಯರ ಘನತರವಾದ ಯೋಗ್ಯತೆಯನ್ನು ಅರಿತಿದ್ದನು; ಆದರೆ ಆ ಮಹಾತ್ಮರು ಕನ್ನಡಿಗರನ್ನು ಜಾಗ್ರತಗೊಳಿಸಿ ಅವರ ಶಕ್ತಿಯನ್ನು ಎಷ್ಟು ಬೆಳಿಸಿರುವರೆಂಬುದನ್ನು ಮಾತ್ರ ಅರಿತಿದ್ದಿಲ್ಲ; ಆದ್ದರಿಂದಲೇ ಪ್ರತ್ಯಕ್ಷ ಮಾಧವಾಚಾರ್ಯರು ಇರುತ್ತಿದ್ದ ಕಂಪಲಿಯ ಕೋಟೆಯನ್ನು ಮುತ್ತಿ ಮಾಧವಾಚಾರ್ಯರನ್ನು ಸೆರೆಹಿಡಿಯುವ ಸಾಹಸವನ್ನು ಅವನು ಮಾಡಿದನು ! ಇರಲಿ, ತಿರುವೇಂಕಟನು ಕರೆಸಿದಂತೆ

ಶಾಸ್ತ್ರಿಗಳು ಬಂದರು. ಕೂಡಲೆ ಉತಾವಳಿಯ ಸ್ವಭಾವದ ತಿರುವೇಂಕಟನು ಅವರನ್ನು ಕುರಿತು—''ಶಾಸ್ತ್ರಿಗಳೆ, ಮಾಧವಾಚಾರ್ಯರು ಹೋದಂದಿನಿಂದ ಕಂಪಲಿಯ ಕೋಟೆಯಲ್ಲಿ ಏನೂ ಗದ್ದಲವಿಲ್ಲವಲ್ಲ! ಒಳಗಿನವರು ನಮ್ಮ ಮುತ್ತಿಗೆಗಾಗಿ ಅಂಜಿಹೋಗಿರಬಹುದಾಗಿ ತೋರುತ್ತದೆ; ಆದರೆ ಅವರು ಹೀಗೆ ಅಂಜಿರುವಾಗಲೇ ನಾವು ಕೋಟೆಗೆ ಲಗ್ಗೆ ಹತ್ತುವದು ಯೋಗ್ಯವಲ್ಲವೆ? ನಿಮ್ಮ ಆಲೋಚನೆಯಂತೆಯೇ ಈ ಕಂಪಲಿಯ ಕೋಟೆಯನ್ನು ಈ ಮೊದಲೇ ನಾನು ಮುತ್ತಿರುವದರಿಂದ ಈಗಾದರೂ ನಿಮ್ಮ ಆಲೋಚನೆಯಿಂದಲೇ ಕೋಟೆಗೆ ಲಗ್ಗೆ ಹತ್ತಬೇಕೆನ್ನುತ್ತೇನೆ'' ಎಂದು ಕೇಳಿದನು. ಆಗ ಶಾಸ್ತ್ರಿಗಳು ಗಾಂಭೀರ್ಯದಿಂದ ವಿಚಾರ ಮಾಡುವವರಂತೆ ಸುಮ್ಮನೆ ಕುಳಿತರು. ಕೆಲಹೊತ್ತಿನ ಮೇಲೆ ಅವರು ತಿರುವೇಂಕಟನನ್ನು ಕುರಿತು—''ವೀರವರ, ನಿನ್ನಂಥ ಪ್ರತಾಪಿಗೆ ಕೋಟೆಯನ್ನು ವಶಮಾಡಿಕೊಳ್ಳುವದು ಅಶಕ್ಯವಲ್ಲ; ಸಹಜವಾಗಿ ನೀನು ವಶಮಾಡಿಕೊಳ್ಳಬಹುದು; ಆದರೆ ಇನ್ನು ಎರಡು ದಿನ ಕೈಕಾಯಬೇಕು. ಕಂಪಲಿಯ ಕೋಟೆಯವರು ಈಗ ಸ್ತಬ್ಧವಾಗಿದ್ದರೂ, ಅವರಾಗಿ ಒಡಂಬಡಿಕೆಗೆ ಬರುವತನಕ ನಾವು ಏರಿಹೋಗುವದು ಯೋಗ್ಯವಲ್ಲ. ನಿಮ್ಮ ಸೈನ್ಯದೊಡನೆ ಕಾದುವ ಸಾಮರ್ಥ್ಯವು ಹಿಂದೂ ಸೈನ್ಯಕ್ಕೆ ಸರ್ವಥಾ ಇಲ್ಲದಿದ್ದರೂ, ನೀವಾಗಿ ಕೋಟೆಗೆ ಲಗ್ಗೆ ಹತ್ತಿಹೋಗುವದು ಯೋಗ್ಯವಲ್ಲೆಂದು ನನಗೆ ತೋರುತ್ತದೆ. ನಿಮಗೆ ಅಷ್ಟು ಅವಸರವಾದರೂ ಯಾಕೆ? ಕಂಪಲಿಯ ಕೋಟೆಯು ಹ್ಯಾಗಿದ್ದರೂ ನಿಮ್ಮದೇ ಆದಂತಾಗಿರುತ್ತದೆ. ಅಬ್ದುಲರಹಿಮಾನರು ಹೋಗಿರುವದರಿಂದ ಕೋಟೆಯನ್ನು ವಶಮಾಡಿಕೊಂಡ ಸಂಪೂರ್ಣ ಯಶಸ್ಸು ನಿಮ್ಮ ಉಡಿಯಲ್ಲಿ ಬಿದ್ದು, ನೀವು ಯಥೇಚ್ಛವಾಗಿ ಕೋಟೆಯನ್ನು ಸುಲಿದು ಸೂರೆಗೊಳ್ಳಬಹುದು !''

ಈ ಮೇರೆಗೆ ಆಲೋಚನೆಯನ್ನು ಹೇಳಿ ಶಾಸ್ತ್ರಿಗಳು ತಿರುವೇಂಕಟನೊಡನೆ ಆ ಮಾತು ಈ ಮಾತು ಆಡಿ ಆತನ ಅನುಮತಿಯಿಂದ ಹೊರಟು ಹೋಗಲು, ಸ್ವಲ್ಪ ಹೊತ್ತಿನಮೇಲೆ ಒಬ್ಬ ಸೇವಕನು ತಿರುವೇಂಕಟನ ಬಳಿಗೆ ಬಂದು—''ಒಬ್ಬ ತೇಜಃಪುಂಜನಾದ ಜಂಗಮನು ನಾಲ್ಕು ಜನ ಅನುಯಾಯಿಗಳೊಡನೆ ಕೋಟೆಯೊಳಗಿಂದ ಬಂದಿದ್ದು, ತಮ್ಮನ್ನು ಕಾಣಲು ಅಪ್ಪಣೆ ಕೇಳಿಕೊಳ್ಳುತ್ತಿರುವನೆಂ''ದು ಹೇಳಿದನು. ಸೇವಕನ ಈ ಮಾತುಗಳನ್ನು ಕೇಳಿ ತಿರುವೇಂಕಟನಿಗೆ ಆಶ್ಚರ್ಯವಾಯಿತು. ಕೋಟೆಯಿಂದ ಜಂಗಮನು ಇಷ್ಟು ಧೈರ್ಯದಿಂದ ತನ್ನನ್ನು ಕಾಣಲಿಕ್ಕೆ ಯಾಕೆ ಬರುತ್ತಿರಬಹುದೆಂದು ಅವನು ಆಲೋಚಿಸತೊಡಗಿದನು. ತಾನು ಕೋಟೆಯನ್ನು ಬಲವಾಗಿ ಮುತ್ತಿರುವದರಿಂದ ರಾಜಕಾರಣದಲ್ಲಿ ಸೇರಿದ ಈ ಸಾತ್ವಿಕರಾದ ಶಿವೋಪಾಸಕರು ನನ್ನಿಂದ ಏನಾದರೂ ಅನುಕೂಲ ಮಾಡಿಕೊಳ್ಳುವದಕ್ಕಾಗಿ ಬರುತ್ತಿರಬಹುದೆಂತಲೂ ಆತನು ಭಾವಿಸಿದನು; ಆದರೆ ವಿಚಾರಾಂತದಲ್ಲಿ ಆ ಭಾವನೆಯು ಆತನಿಗೆ ಸಮರ್ಪಕವಾಗಿ ತೋರಲಿಲ್ಲ. ಕರ್ನಾಟಕಕ್ಕೆ ಕರ್ನಾಟಕವನ್ನೇ ಜಾಗ್ರತಗೊಳಿಸುವಂಥ ಮಾಧವಾಚಾರ್ಯರ ಯೋಗದಿಂದ ಗುರುಸ್ಥಳದ ಜಂಗಮರಂಥ ನಿರುಪದ್ರವಿಗಳಾದ ಜನರೂ ರಾಜಕಾರಣದಲ್ಲಿ ಸೇರಿರಬಹುದೆಂಬ ವಿಚಾರವು ಅವನಲ್ಲಿ ಉತ್ಪನ್ನವಾಯಿತು. ಏನಿದ್ದರೂ ಮಾಧವಾಚಾರ್ಯರಿಲ್ಲದ ಯಾವ ದೇಶಾಭಿಮಾನಿ ಕನ್ನಡಿಗನಾದರೂ ತನ್ನನ್ನು ಅಳುಕಿಸಲು ಸಮರ್ಥನಲ್ಲವೆಂದು ಆತನು ಭಾವಿಸಿ,

ಆ ಜಂಗಮ ಮೂರ್ತಿಯನ್ನು ಕಾಣಿಸಿಕೊಂಡು, ಸಾಧಿಸಿದರೆ ಅವರ ಮುಖಾಂತರವಾಗಿ ಭೇದೋಪಾಯದಿಂದ ಕನ್ನಡಿಗರಲ್ಲಿ ಒಡಕು ಹುಟ್ಟಿಸಬೇಕೆಂಬ ನೀಚ ವಿಚಾರವನ್ನು ಕನ್ನಡಿಗನೇ ಆದ ತಿರುವೇಂಕಟನು ಮಾಡಿದ್ದು ಅತ್ಯಂತ ತಿರಸ್ಕರಣೀಯವಾದದ್ದು. ಕೊಡಲಿಯ ಕಾವು ಕುಲಕ್ಕೆ ಮೂಲವಾದಂತೆ ತಿರುವೇಂಕಟನ ಈ ವಿಚಾರವು ಮಾಧವಾಚಾರ್ಯರ ಸ್ವರಾಜ್ಯಸ್ಥಾಪನೆಗೆ ಮೂಲವಾದದ್ದೇ ಸರಿ ! ತಿರುವೇಂಕಟನ ಮನಸ್ಸಿನಲ್ಲಿ ಈ ಭೇದೋಪಾಯದ ಯೋಚನೆಯು ಹೊಳೆದಕೂಡಲೆ ಆತನು ಆ ಜಂಗಮನನ್ನು ಕರತಾರೆಂದು ತನ್ನ ಸೇವಕನಿಗೆ ಆಜ್ಞಾಪಿಸಿದನು. ಕೂಡಲೆ ಸೇವಕನು ಅನುಯಾಯಿ ಗಳೊಡನೆ ಆ ಜಂಗಮನನ್ನು ತಿರುವೇಂಕಟನ ಬಳಿಗೆ ಕರತರಲು, ಆ ಮಹಾತ್ಮನಾದ ಜಂಗಮನ ತೇಜಃಪುಂಜಮೂರ್ತಿಯನ್ನು ನೋಡಿದಕೂಡಲೆ ತಿರುವೇಂಕಟನು ಪರವಶತೆಯಿಂದ ತಟ್ಟನೆ ಎದ್ದುನಿಂತನು. ಹೀಗೆ ತಾನು ಪ್ರತ್ಯುತ್ಥಾನ ಮಾಡಿದ್ದು ಯೋಗ್ಯವಾಗಲಿಲ್ಲೆಂದು ಹಿಂದಿನಿಂದ ತಿರು ವೇಂಕಟನ ಮನಸ್ಸಿಗೆ ತೋರಿದರೂ, ಆದದ್ದನ್ನು ಆತನು ಅಳಿಸುವಹಾಗಿದ್ದಿಲ್ಲ. ಪ್ರಿಯವಾಚಕರೇ, ಆ ಬಂದ ಜಂಗಮರು ಅನ್ಯರಾರೂ ಇರದೆ ಮಹಾತ್ಮರಾದ ವಿರೂಪಾಕ್ಷಾರ್ಯರೇ ಇದ್ದರೆಂದಿಷ್ಟು ಹೇಳಿದರೆ, ಅವರ ದೈವೀ ತೇಜಸ್ಸು ತಿರುವೇಂಕಟನಂತಹ ಲೌಕಿಕ ಮನುಷ್ಯನನ್ನು ಪ್ರತ್ಯುತ್ಥಾನ ಗೊಳಿಸಿದ್ದು ಆಶ್ಚರ್ಯವಲ್ಲವೆಂದು ನಿಮಗೆ ತೋರಬಹುದು. ದರ್ಶನಮಾತ್ರದಿಂದ ಮಾಧವಾ ಚಾರ್ಯರ ದಿವ್ಯಮೂರ್ತಿಯು ತಿರುವೇಂಕಟನ ಲೌಕಿಕ ಚಿತ್ತ ವೃತ್ತಿಯನ್ನು ಈ ವೊದಲೆ ಚಂಚಲ ಮಾಡಿದಂತೆ, ವಿರೂಪಾಕ್ಷಾರ್ಯರ ದಿವ್ಯ ಮೂರ್ತಿಯಾದರೂ ಆ ತಿರುವೇಂಕಟನ ಚಿತ್ತವೃತ್ತಿಯನ್ನು ಈಗ ಚಂಚಲವಾಗಮಾಡಿತು. ಮಹಾತ್ಮರ ತಪಸ್ತೇಜದ ಪ್ರಭಾವವೇ ಅಂತಹದು. ತಪೋಧನರು ಯಾವ ಧರ್ಮದವರಾದರೇನು, ಯಾವ ಪಂಥದವರಾದರೇನು? ಅವರ ದಿವ್ಯಪ್ರಭೆಯು ಪ್ರೇಕ್ಷಕರ ಚಿತ್ತಹರಣವನ್ನು ತಟ್ಟನೆ ಮಾಡುವದರಿಂದಲೇ, ಅವರು ಲೋಕ ಶಿಕ್ಷಣದ ಕಾರ್ಯವನ್ನು ಸಾಗಿಸಲು ಸಮರ್ಥರಾಗುವರು. ನೂರಾರು ಪ್ರವಚನಗಳಿಂದಾದಷ್ಟು ಚಿತ್ತದ ಪ್ರಸನ್ನತೆಯು ಮಹಾತ್ಮರ ದರ್ಶನದಿಂದಾಗುವದನ್ನು ಅನುಭವದಿಂದ ಮನಗಾಣಬಹುದು ! ತಿರುವೇಂಕಟನು ಪ್ರಸನ್ನಚಿತ್ತನಾಗಿ ವಿರೂಪಾಕ್ಷಾರ್ಯರಿಗೆ ಭಕ್ತಿಯಿಂದ ಉಚ್ಚಾಸನವನ್ನು ತೋರಿಸಿ ''ಇತ್ತ ದಯಮಾಡಿಸಬೇಕು, ಇತ್ತ ದಯ ಮಾಡಿಸಬೇಕು'' ಎಂದು ಆ ಮಹಾತ್ಮರನ್ನು ಗೌರವದಿಂದ ಬರಮಾಡಿಕೊಂಡನು. ಅವರ ಅನುಯಾಯಿಗಳಲ್ಲಿ ಮೂವರು ಅವರಿಂದ ಸ್ವಲ್ಪ ದೂರದಲ್ಲಿ ವಿನಯದಿಂದ ಕುಳಿತುಕೊಂಡರು; ಉಳಿದ ಒಬ್ಬನು ಬಹು ದೂರ ನೆಲದ ಮೇಲೆ ನಿಂತುಕೊಂಡನು.

ಪ್ರಿಯವಾಚಕರೇ, ವಿರೂಪಾಕ್ಷಾರ್ಯರ ಅನುಯಾಯಿಗಳು ಯಾರೆಂಬದನ್ನು ನಿಮಗೆ ಹೇಳಿಬಿಡುವೆನು. ಆರ್ಯವರ್ಯರ ಸಮೀಪದಲ್ಲಿ ಕುಳಿತಿದ್ದ ಮೂವರಲ್ಲಿ ಒಬ್ಬನು ಹುಕ್ಕ ದೊರೆಯು, ಇನ್ನೊಬ್ಬನು ವೀರನಾದ ಕೃಷ್ಣನಾಯಕನು, ಮೂರನೆಯವನು ಮಲ್ಲಯುದ್ಧ ನಿಪುಣನಾದ ಮಲ್ಲಸರ್ಜನು, ದೂರದಲ್ಲಿ ನೆಲದಮೇಲೆ ನಿಂತುಕೊಂಡವನು ಮಹಾಸಮರ್ಥನಾದ ಮಾದಿಗರ ದುರಗಪ್ಪನು; ಆದರೆ ದುರಗಪ್ಪನ ಹೊರತು ಉಳಿದ ಮೂವರು ವೀರರು ಸಾಮಾನ್ಯ

ಒಕ್ಕಲಿಗರ ವೇಷವನ್ನು ಹಾಕಿಕೊಂಡಿದ್ದರು. ತಿರುವೇಂಕಟನು ಒಮ್ಮೆ ಕೌತುಕದಿಂದ ಮಾದಿಗರ ದುರುಗಪ್ಪನ ಕಡೆಗೆ ನೋಡಿ ತನ್ನ ಆಸನದ ಮೇಲೆ ಕುಳಿತುಕೊಂಡನು. ಮೇಲೆ ಹೇಳಿದ ಮೂವರು ಕ್ಷಾತ್ರಧರ್ಮ ನಿಪುಣರು ತಮ್ಮ ವೇಷವನ್ನು ಆಚ್ಛಾದಿಸಿದ್ದರೂ ಅವರ ಕ್ಷಾತ್ರ ತೇಜಸ್ಸು ಬೂದಿ ಮುಚ್ಚಿದ ಕೆಂಡದಂತೆ ತಿರುವೇಂಕಟನ ಮೇಲೆ ಪರಿಣಾಮವನ್ನುಂಟುಮಾಡುತ್ತಿತ್ತು. ವಿರೂಪಾಕ್ಷಾರ್ಯರಂತು ಗುರುಸ್ಥಳದ ಜಂಗಮರಿಗೆ ಒಪ್ಪುವ ತೀರ ಸಾಧಾರಣತರದ ಉಡಿಗೆ-ತೊಡಿಗೆಗಳನ್ನು ಧರಿಸಿದ್ದರು. ಅವರ ಹೊರತು ಉಳಿದ ನಾಲ್ವರ ಪೋಷಾಕು ತೀರ ಸಾಧಾರಣತರದ್ದಾಗಿದ್ದರೂ, ಅವರು ಗುಪ್ತರೀತಿಯಿಂದ ಧರಿಸಿದ್ದ ಶಸ್ತ್ರಾಸ್ತ್ರಗಳು ಕ್ಷಣದಲ್ಲಿ ವೀರರ ಗುಂಪಿಗೆ ಗುಂಪನ್ನು ನೆಲಕ್ಕುರುಳಿಸಬಹುದಾಗಿತ್ತು; ಆದರೆ ಅದರ ಗಂಧವು ಕೂಡ ತಿರುವೇಂಕಟನಿಗೆ ಹತ್ತದೆ, ಇವರು ಮೂವರು ಆರ್ಯರ ಮಹಾಸಮರ್ಥರಾದ ಭಕ್ತರೆಂತಲೂ, ಇದ್ದರೆ ನಾಲ್ಕನೆಯವನು ಗುರುಸ್ಥಳಕ್ಕೆ ಶಿಷ್ಯನಾಗಿದ್ದ ಒಬ್ಬ ಬಲಿಷ್ಠ ಚಲವಾದಿಯು ಇರಬಹುದೆಂತಲೂ ತರ್ಕಿಸಿದನು; ಆದರೂ ಆ ವಿಲಕ್ಷಣ ನೋಟವು ಅವರನ್ನು ವಿಚಾರಮಗ್ನನನ್ನಾಗಿ ಮಾಡಿತು. ತಿರುವೇಂಕಟನು ಬಳಿಯಲ್ಲಿ ಅಂಗರಕ್ಷಕರಿಲ್ಲದವನಾಗಿದ್ದನು; ತಾನು ಏಕಾಕಿಯಾಗಿ ಈ ಶತ್ರುಪಕ್ಷದ ಮಹಾ ಬಲಿಷ್ಠರಾದ ನಾಲ್ವರ ಬಳಿಯಲ್ಲಿ ಕುಳಿತುಕೊಳ್ಳಬಹುದೇ ಎಂದು ಆತನು ಶಂಕಿಸತೊಡಗಿದನು. ಆದರೆ ವಿರೂಪಾಕ್ಷಾರ್ಯರ ಸಾತ್ವಿಕ ಶಾಂತಮೂರ್ತಿಯನ್ನು ನೋಡಿ, ಇಂಥವರ ಸನ್ನಿಧಿಯಲ್ಲಿ ಮರೆಮೋಸಗಳಾಗುವ ಸಂಭವವು ಎಷ್ಟುಮಾತ್ರವೂ ಇಲ್ಲೆಂದು ಸಮಾಧಾನ ಮಾಡಿಕೊಂಡನು; ಆದರೂ ಈ ಅನುಯಾಯಿಗಳನ್ನು ಹೊರಗೆ ಕಳಿಸಿ, ಮಾತಾಡತಕ್ಕದ್ದನ್ನು ಈ ಸಾತ್ವಿಕ ಜಂಗಮರೊಡನೆ ಮಾತಾಡತಕ್ಕದ್ದೆಂದು ಯೋಚಿಸಿ, ಆ ಜಂಗಮಮೂರ್ತಿಯನ್ನು ಕುರಿತು—

ತಿರುವೇಂಕಟ—ಇತ್ತ ಅಪರೂಪವಾಗಿ ದಯಾಮಾಡಿಸಿದಂತಾಯಿತಲ್ಲ!

ವಿರೂಪಾಕ್ಷಾರ್ಯ– ತಿರುವೇಂಕಟರಾಯಾ, ನಾವೂ ನೀವೂ ಸ್ವದೇಶ ಬಾಂಧವ್ಯದಿಂದ ಬದ್ಧರಾಗಿರಲು, ನೀವು ನಮ್ಮಲ್ಲಿ ಬರುವದರಲ್ಲಿ, ನಾವು ನಿಮ್ಮಲ್ಲಿ ಬರುವದರಲ್ಲಿ ಅಪರೂಪವೇನು? ಕರ್ನಾಟಕದ ಈಗಿನ ಸ್ವಾತಂತ್ರ್ಯ ವಿಘಾತಕ ಕಾಲದಲ್ಲಿ ಕನ್ನಡಿಗರಾದವರು ಮಾತೃಭೂಮಿಯ ಸ್ವಾತಂತ್ರ್ಯ ರಕ್ಷಣ ಕ್ಕಾಗಿ ಯಾರು ಯಾವಾಗ ಕೂಡಿ ಆಲೋಚಿಸಬೇಕಾದೀತೆಂಬದರ ನಿಯಮವನ್ನು ಹೇಳಬೇಕಾಗುವದಿಲ್ಲ. ವೇಂಕಟರಾಯಾ, ಶತ್ರು–ಮಿತ್ರ ಸಮಭಾವವುಳ್ಳ ಮಹಾತ್ಮರಾದ ಮಾಧವಾಚಾರ್ಯರಂತು ಕನ್ನಡಿಗರಾದ ನಮ್ಮ ನಿಮ್ಮ ಮಟ್ಟನ್ನು ಪರೀಕ್ಷಿಸುವದಕ್ಕಾಗಿ ಪ್ರತ್ಯಕ್ಷ ಶತ್ರುವಿನ ಮನೆಯನ್ನು ನಿರ್ಭಯದಿಂದ ಹೊಕ್ಕರು; ಅಂದಬಳಿಕ ನಮ್ಮ ದೇಶದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವದು ನಮ್ಮೊಳಗಿನ ಪ್ರತಿ ಒಬ್ಬರ ಕರ್ತವ್ಯವಾದದ್ದರಿಂದ, ನಮ್ಮವರಾದ ನಿಮ್ಮ ಸಂಗಡ ಆ ಸಂಬಂಧದ ಮಾತುಗಳನ್ನಾಡುವದು ಅವಶ್ಯ ತೋರಿದ್ದರಿಂದ, ಲಿಂಗಪೂಜೆಯಾದ ಕೂಡಲೆ ಹೊರಟು ಬಂದು ಬಿಟ್ಟೆವು ನಾವು ಹೊರಟದ್ದನ್ನು ನೋಡಿ ನಮ್ಮ ಈ ಭಕ್ತರೂ ನಮ್ಮನ್ನು ಹಿಂಬಾಲಿಸಿದರು.

ಈ ಮೇರೆಗೆ ನುಡಿದು ಮಹಾತ್ಮರಾದ ವಿರೂಪಾಕ್ಷಾರ್ಯರು ತಿರುವೇಂಕಟಕನ ಮುಖಚರ್ಯದಲ್ಲಿ ಏನು ಬದಲಾಣೆಯಾಗುತ್ತದೆಂಬದನ್ನು ಭೇದಕ ದೃಷ್ಟಿಯಿಂದ ನೋಡ

ಹತ್ತಿದ್ದರು. ಆರ್ಯವರ್ಯರ ಈ ಸರಳ ಮಾತುಗಳು ತೀಕ್ಷ್ಣ ಬಾಣದಂತೆ ದೇಶದ್ರೋಹಿಯಾದ ತಿರುವೇಂಕಟನ ಹೊಟ್ಟೆಯಲ್ಲಿ ನಟ್ಟು ಬೆನ್ನಲ್ಲಿ ಪಾರಾದವು; ಆದರೂ ನಿಷ್ಕಪಟ ಹೃದಯದ ಆ ನಿರ್ಮಲ ಆರ್ಯಮೂರ್ತಿಯ ಎದುರಿಗೆ ಸೊಟ್ಟಪಟ್ಟ ಮಾತಾಡಲಾರದೆ, ತಾನೂ ಸರಳ ಹೃದಯದವನಾಗಿ ಬದಿಯಲ್ಲಿ ಕುಳಿತಿರುವ ಆ ಮಹಾತ್ಮರನ್ನು ಕುರಿತು–

ತಿರುವೇಂಕಟ–ಆರ್ಯವರ, ನಿಮ್ಮ ಮಾತಿನಲ್ಲಿ ಅಯಥಾರ್ಥತ್ವವೇನೂ ಇಲ್ಲ; ಇದ್ದರೆ ನಮ್ಮಂಥ ಅಡ್ಡಹಾದಿಗೆ ಬೀಳುವ ಲೌಕಿಕರನ್ನು ಹಾದಿಗೆ ಹಚ್ಚುವ ಸಾಮರ್ಥ್ಯವೇ ಆ ಮಾತಿನಲ್ಲಿರುತ್ತದೆ; ಆದರೆ, ಈ ಸಂಬಂಧದಿಂದ ಚರ್ಚಿಸುವಾಗ ಏಕಾಂತವಿರುವದು ನೆಟ್ಟಗೆಂದು ನನಗೆ ತೋರುತ್ತದೆ!

ವಿರೂಪಾಕ್ಷಾರ್ಯ–ಕ್ಷತ್ರಿಯ ವೀರ, ನಮ್ಮ ಹೃದಯವೇ ಹೃದಯವಾಗಿ ಉಳ್ಳವರು ಮಾತ್ರ ನಮ್ಮ ನಿಜವಾದ ಭಕ್ತರು ಅನುಯಾಯಿಗಳೂ ಆಗಬಹುದಾದ್ದರಿಂದ, ನಮ್ಮಲ್ಲಿ ಹಾಗೂ ನಮ್ಮವರಲ್ಲಿ ಪರಕೀಯತ್ವ ಭಾವನೆಯಿಡುವ ಕಾರಣವೇ ಇಲ್ಲ; ಆದರೂ ನೀವು ಏಕಾಕಿಗಳಾಗಿ ನಮ್ಮೊಡನೆ ಚರ್ಚಿಸುತ್ತಿರುವಾಗ ನಾವು ದೇಹದೃಷ್ಟಿಯಿಂದ ಬಹುರೂಪಿಗಳಾಗಿ ನಿಮ್ಮೊಡನೆ ಮಾತಾಡುವದು ಯೋಗ್ಯವಲ್ಲ, ನಿಮ್ಮ ವಿಚಾರದಂತೆ ನಾವು ಕುಳಿತಿರುವ ಈ ಸ್ಥಳವನ್ನೇ ಏಕಾಂತವಾಗಿ ಮಾಡಿದರಾಯಿತು.

ಈ ಮೇರೆಗೆ ನುಡಿದು ವಿರೂಪಾಕ್ಷಾರ್ಯರು ತಮ್ಮ ಅನುಯಾಯಿಗಳ ಕಡೆಗೆ ಸಾಂಕೇತಿಕ ದೃಷ್ಟಿಯಿಂದ ನೋಡಲು, ಅವರು ನಾಲ್ವರೂ ತಟ್ಟನೆ ಹೊರಗೆ ಹೋಗಿಬಿಟ್ಟರು. ''ವಸುಧೈವಕುಟುಂಬಕಂ'' ಎಂಬ ತತ್ವದ ಮೂರ್ತಿಯೇ ಆಗಿರುವ ವಿರೂಪಾಕ್ಷಾರ್ಯರಂಥ, ಮಹಾತ್ಮರಿಗೆ ಪರಕೀಯತ್ವವು ಎಲ್ಲಿ ತೋರಬೇಕು? ಶತ್ರುಪಕ್ಷದ ತಿರುವೇಂಕಟನೂ,ಈಗ ಆರ್ಯವರ್ಯರಿಗೆ ಸ್ವಪಕ್ಷೀಯನೇ ಆದನು.

## ದೇಶವಿಘಾತಕ ಭೇದಭಾವ ನಿರಸನ

ಈ ಮೇರೆಗೆ ಆರ್ಯವರ್ಯರ ದೃಷ್ಟಿಪಾತ ಮಾತ್ರದಿಂದ ಅವರ ಅನುಯಾಯಿಗಳು ತಟ್ಟನೆ ಹೊರಹೊರಟು ಹೋದದ್ದರ ಪರಿಣಾಮವು ತಿರುವೇಂಕಟನ ಮೇಲೆ ವಿಲಕ್ಷಣವಾಗಿ ಆಯಿತು. ಆರ್ಯರ ಸರಳ ಹೃದಯವನ್ನು ನೋಡಿ ಆ ದೇಶದ್ರೋಹಿಯ ಕುಟಿಲ ಹೃದಯವೂ ಸರಳವಾಗಹತ್ತಿ ಆತನು ಆರ್ಯರ ವಿಷಯವಾಗಿ ಪೂಜ್ಯಬುದ್ಧಿಯನ್ನು ತಾಳಿದನು. ಸತ್ಸಮಾಗಮದ ಮಹಿಮೆಯೇ ಅಂತಹದು! ಸಜ್ಜನರು ಅನುಗ್ರಹಿಸಿ ದುರ್ಜನನನ್ನೂ ಸಜ್ಜನನನ್ನಾಗಿ ಮಾಡಿಕೊಳ್ಳಲು ಸಮರ್ಥರಾಗುವರೆಂಬ ಮಾತು ಸುಳ್ಳಲ್ಲ. ತಿರುವೇಂಕಟನ ನೀಚಸ್ವಾರ್ಥ ದೂಷಿತ ಹೃದಯವು ಸತ್ಸಮಾಗಮದ ಯೋಗದಿಂದ ಶುದ್ಧವಾಗಹತ್ತಿದ್ದಕ್ಕೆ ಈ ದೇಶದ್ರೋಹಿಯ ಹೃದಯಲ್ಲಿ ಪಶ್ಚಾತ್ತಾಪದ ಅಂಕುರವು ತೋರಿದ್ದೇ ಸಾಕ್ಷಿಯಾಗಿರುವದು. ಆತನು ವಿನಯದಿಂದ ವಿರೂಪಾಕ್ಷಾರ್ಯರನ್ನು ಕುರಿತು–

ತಿರುವೇಂಕಟ–ಮುಹಾತ್ಮನ್, ಕ್ಷಮಿಸಬೇಕು. ಈ ಲೌಕಿಕನು ತನ್ನ ಹೃದಯಸ್ಥ ವಿಚಾರ ಗಳನ್ನು ಅಪರಿಚಿತರ ಮುಂದೆ ಇಡಲು ಸಂಕೋಚಪಡುತ್ತಿರುವನು; ಆದ್ದರಿಂದ ದೊಡ್ಡವರ ಹೆಸರು ಮುಂತಾದವುಗಳನ್ನು ಕುರಿತು ಪ್ರತ್ಯಕ್ಷ ಅವರನ್ನೇ ಕೇಳುವದು ಶಿಷ್ಟಾಚಾರವಲ್ಲದಿದ್ದರೂ, ಈಗ ಕೇಳಿಕೊಳ್ಳಲಿಕ್ಕೆ ಅನ್ಯಮಾರ್ಗವಿಲ್ಲದ್ದರಿಂದ ನಾನು ನಿರುಪಾಯನಾಗಿ ಶಿಷ್ಯಸಮ್ಮತ ವಲ್ಲದ್ದನ್ನು ಮಾಡಬೇಕಾಗಿರುವದು.

ವಿರೂಪಾಕ್ಷಾರ್ಯ–ಕ್ಷತ್ರಿಯಶ್ರೇಷ್ಠಾ, ನಮ್ಮ ಹೆಸರು ಕೇಳಲಿಕ್ಕೆ ಇಷ್ಟು ಸಂಕೋಚವೇಕೆ? ಅಂಥ ಮಹತ್ವವಾದರೂ ನಮ್ಮಲ್ಲೇನಿರುತ್ತದೆ? ಈ ದೇಹವನ್ನು ವಿರೂಪಾಕ್ಷಾರ್ಯನೆಂದು ಕರೆಯುವರು. ಹಂಪೆಯ ಹಿರಿಯ ಮಠವೇ ಇದರ ವಾಸಸ್ಥಾನವು. ತಿರುವೇಂಕಟ, ಇನ್ನು ಕೇಳುವದನ್ನು ನೀವು ನಿಶ್ಶಂಕೆಯಿಂದ ಕೇಳಿರಿ. ಕೇವಲ ನಮ್ಮವರಾದ ನೀವು ಯಾವ ಕಾರಣ ದಿಂದಲೇ ಆಗಲಿ, ಅಡ್ಡಹಾದಿಗೆ ಬಿದ್ದು ಕೆಡಬಾರದೆಂಬ ಉದ್ದೇಶದಿಂದ ನಾವು ನಾಲ್ಕು ಹಿತದ ಮಾತುಗಳನ್ನು ಹೇಳಬಂದಿದ್ದೇವೆ. ಶಿವನ ಮನಸ್ಸಿಗೆ ಬಂದು ನೀವು ನಮ್ಮ ಮಾತು ಕೇಳಿದರಂತು ಸರಿಯೆ; ಕೇಳದಿದ್ದರೆ ಎಲ್ಲವನ್ನು ನಡೆಸಿಕೊಳ್ಳಲಿಕ್ಕೆ ಶಿವನೇ ಸಮರ್ಥನಿರುವನು. ಕ್ಷತ್ರಿಯ ವೀರನೇ, ಕರ್ನಾಟಕದ ಉದ್ಧಾರಕ್ಕಾಗಿ ಮಾಧವಾಚಾರ್ಯರನ್ನು ಶಿವನು ಮುಂದೆ ಮಾಡಿರುವನೆಂದು ನಾವು ದೃಢವಾಗಿ ನಂಬಿ, ನಾವೆಲ್ಲರು ಆ ಮಹಾತ್ಮನ ತಂತ್ರದಂತೆ ನಡೆಯುತ್ತಿರುವೆವು. ನಾವು ಮಾಡುವ ಕಾರ್ಯವೆಲ್ಲ ಆ ಆಚಾರ್ಯವರ್ಯರ ತಂತ್ರಾನುಸರಣ ವೆಂತಲೇ ನೀನು ತಿಳಿದುಕೋ. ಶಮಪ್ರಧಾನರಾದ ಆ ತಪೋಧನ ಬ್ರಾಹ್ಮಣೋತ್ತಮರು ಆದಷ್ಟು ಹಿಂಸೆಯಾಗದೆ ಕರ್ನಾಟಕದ ಸ್ವಾತಂತ್ರ್ಯವು ಕಾಯಲ್ಪಡಬೇಕೆಂದು ಯತ್ನಿಸುತ್ತಿರುವರು; ಆದ್ದರಿಂದ ನಿಜವಾಗಿ ಕೇಳಿದರೆ, ಸ್ವದೇಶದ್ರೋಹದಿಂದ ಕಂಪಲಿಯ ಕೋಟೆಯನ್ನು ಮುತ್ತಿದ ನಿನ್ನನ್ನು ದಂಡಿಸುವ ಯೋಗ್ಯತೆಯು ನಿಃಸಂಶಯ ಆಚಾರ್ಯರ ತಂತ್ರದಲ್ಲಿರುತ್ತಿದ್ದರೂ, ನಾಲ್ಕು ಹಿತದ ಮಾತುಗಳನ್ನು ಹೇಳಿ ನಿನ್ನ ಮನಸ್ಸನ್ನು ತಿರುಗಿಸ ಬೇಕೆಂದು ಆಚಾರ್ಯರ ಮನೋದಯವಿದ್ದದ್ದರಿಂದ ಅವರ ಯೋಜನೆಯಂತೆಯೇ ನಾವು ನಿನ್ನ ಬಳಿಗೆ ಬಂದಿದ್ದೇವೆ. ಲೋಕಹಿತದಕ್ಷರಾದ ನಿಸ್ಪೃಹಿ ಆಚಾರ್ಯರ ಅಮೋಘ ಗೂಢ ತಂತ್ರವು ನಿನ್ನಂಥ ಸ್ವಾರ್ಥ ಪರರಿಗೆ ತಿಳಿಯಲಾರದು; ಆದ್ದರಿಂದ ನೀನು ವಿವೇಕಿಯಾಗಿ ದೇಶದ್ರೋಹಕ್ಕೆ ಹೇಸಿ ಆಚಾರ್ಯರ ದೇಶೋದ್ಧಾರದ ಕಾರ್ಯಕ್ಕೆ ಸಹಾಯಕನಾಗು. ತಿರುವೇಂಕಟ, ತಿರುಗಿ ಕೇಳಿದರೆ ನೀನು ಕ್ಷತ್ರಿಯನಾದ್ದರಿಂದ ಬ್ರಾಹ್ಮಣರಾದ ಮಾಧವಾಚಾರ್ಯರ ಶಿಷ್ಯನು, ಗುರುಗಳು ಆರಂಭಿಸಿರುವ ಕರ್ನಾಟಕದ ಉದ್ಧಾರರೂಪವಾದ ಮಹಾಕಾರ್ಯಕ್ಕೆ ನೀನು ಸಹಾಯಕನಾಗಿ ಪ್ರಸಂಗವಶಾತ್ ಪ್ರಾಣವನ್ನಾದರೂ ಅರ್ಪಿಸ ತಕ್ಕದ್ದು; ಆದರೆ ನೀಚ ಸ್ವಾರ್ಥಬುದ್ಧಿಯಿಂದ ಅವರ ಲೋಕಹಿತದ ಕಾರ್ಯಕ್ಕೆ ವಿಘ್ನಮಾಡಿ ಗುರುದ್ರೋಹದೊಡನೆ ದೇಶದ್ರೋಹವನ್ನೂ ನೀನು ಕಟ್ಟಿಕೊಳ್ಳುವೆಯಲ್ಲ?

ವಿರೂಪಾಕ್ಷಾರ್ಯರೆಂಬ ಹೆಸರು ಕಿವಿಗೆ ಬಿದ್ದ ಕೂಡಲೆ ತಿರುವೇಂಕಟನು ಚಕಿತನಾದನು. ಮಾಧವಾಚಾರ್ಯರು ತಮ್ಮ ಪಶ್ಚಾತ್ ರಾಜಕಾರಣದ ಸೂತ್ರಚಾಲನದ ಕಾರ್ಯವನ್ನು ಒಪ್ಪಿಸಿರುವ ವಿರೂಪಾಕ್ಷಾರ್ಯರಂಥ ಘನವಂತರು ಕೇವಲ ಸಾಮಾನ್ಯರಂತೆ ತಾವಾಗಿ ತನ್ನ

ಬಳಿಗೆ ಬಂದದ್ದನ್ನು ನೆನಿಸಿ ಅವರ ವಿಲಕ್ಷಣ ಧೈರ್ಯಕ್ಕಾಗಿ ಅವನ ಹೃದಯವು ಕಂಪಿಸಿತು; ಆತನು ವಿನಯದಿಂದ ವಿರೂಪಾಕ್ಷಾರ್ಯರನ್ನು ಕುರಿತು–

ತಿರುವೇಂಕಟ–ಆರ್ಯವರ, ಅಲೌಕಿಕ ಪುರುಷರಾದ ತಮ್ಮಂಥವರ ಮಾತು ಹ್ಯಾಗೇ ಇರಲಿ, ತಾವು ಹೀಗೆ ಶತ್ರುಗಳ ಸ್ಥಳವನ್ನು ತಟ್ಟನೆ ಪ್ರವೇಶಿಸಿ ಪ್ರಾಣಭಯವನ್ನುಂಟು ಮಾಡಿಕೊಂಡದ್ದು ನನಗೆ ವಿಲಕ್ಷಣವಾಗಿ ತೋರುತ್ತದೆ ! ಯವನಪಕ್ಷಪಾತಿಯಾದ ಮತ್ತೊಬ್ಬನ ಬಳಿಯಲ್ಲಿ ಹೀಗೆ ತಾವು ಬಂದಿದ್ದರೆ ಅವನು ಕೂಡಲೆ ನಿಮ್ಮನ್ನು ನಾಯಬನ ಬಳಿಗೆ ಹಿಡಿದು ಕಳಿಸುತ್ತಿದ್ದನು.

ವಿರೂಪಾಕ್ಷಾರ್ಯ–ಅನ್ಯರ ಮಾತು ಹೇಗೇ ಇರಲಿ, ನಿನ್ನಲ್ಲೇನು ಮುಸಲ್ಮಾನ ಪಕ್ಷಪಾತಿತ್ವಕ್ಕೆ ಕೊರತೆಯಿರುತ್ತದೆ? ನಿನ್ನಲ್ಲಿ ಅದರ ಕೊರತೆಯಿರುತ್ತದೆಂದು ತಿಳಿದು ನಾವು ನಿನ್ನ ಬಳಿಗೆ ಬಂದಿರುವದೂ ಇಲ್ಲ. ಇನ್ನು ನಮ್ಮನ್ನು ನೀನು ಮಲಿಕನಾಯಬನ ಬಳಿಗೆ ಹಿಡಿದು ಕಳಿಸುವ ಬಿಡುವ ಮಾತು ಸ್ವತಂತ್ರವಾದದ್ದು; ಇಷ್ಟು ಧೈರ್ಯದಿಂದ ಬರುವವರು ಮುಂದಿನ ಪರಿಣಾಮವನ್ನು ಕಂಡುಕೊಳ್ಳದೆ ಬರುವದಿಲ್ಲವೆಂದಾದರೂ ನೀನು ತಿಳಿದುಕೊಂಡಿರತಕ್ಕದು. ಇದಲ್ಲದೆ ಈಗ ಮಹಾತ್ಮರಾದ ಮಾಧವಾಚಾರ್ಯರನ್ನು ಹಿಡಿದುಕೊಂಡು ಹೋದದ್ದರಿಂದ ಕರ್ನಾಟಕವು ಈಗ ಹತವೀರ್ಯವಾಗಿರುವಷ್ಟೇ, ಇನ್ನು ಮುಂದೆ ವಿರುಪಾಕ್ಷಾರ್ಯರನ್ನಾಗಲಿ, ಮತ್ತೆ ಯಾರನ್ನಾಗಲಿ ಹಿಡಿದುಕೊಂಡು ಹೋದರೂ ಆಗುವದು. ತಿರುವೇಂಕಟ, ರಾಷ್ಟ್ರವು ಜಾಗ್ರತವಾಗುವದೇ ಕಷ್ಟ, ಒಮ್ಮೆ ಅದು ಜಾಗ್ರತವಾದರೆ ಯಾವದೊಂದು ವ್ಯಕ್ತಿಯನ್ನು ಹತವೀರ್ಯವಾಗಿ ಮಾಡುವದರಿಂದ ರಾಷ್ಟ್ರವು ಹತವೀರ್ಯವಾಗಲಾರದು. ಒಮ್ಮೆ ಆದ ರಾಷ್ಟ್ರದ ಜಾಗ್ರತಿಯು ಪ್ರಸಂಗವಶಾತ್ ನಿಗಿ ನಿಗಿ ಕೆಂಡದಂತೆ ಪ್ರಖರ ರೀತಿಯಿಂದ ದೃಗ್ಗೋಚರವಾಗಬಹುದು; ಅಥವಾ ಕೊಬ್ಬಟ್ಟಿನೊಳಗಿನ ಬೆಂಕಿಯಂತೆ ಒಳಗಿಂದೊಳಗೆ ಹೊತ್ತುತ್ತಿರಬಹುದು; ಈ ಎರಡೂ ಬಗೆಯ ವ್ಯಾಪಾರಗಳೂ ಜಾಗ್ರತ ರಾಷ್ಟ್ರದಲ್ಲಿ ನಡೆಯುತ್ತ ನಡೆಯುತ್ತ ಪರಿಪಕ್ವಕಾಲವು ಒದಗಿದಕೂಡಲೆ ಆ ರಾಷ್ಟ್ರದ ವೀರ್ಯವಿಘಾತಕ ಕಾರಣಗಳೆಲ್ಲ ದಗ್ಧವಾಗಿ ರಾಷ್ಟ್ರವು ಸ್ವತಂತ್ರವಾಗುವದು; ಆದರೆ ತಿರುವೇಂಕಟಾ, ಹೀಗೆ ಜಾಗ್ರತ ರಾಷ್ಟ್ರವು ಸ್ವತಂತ್ರವಾಗುವವರೆಗೆ ಕ್ರಮಿಸುವ ಕಾಲದಲ್ಲಿ ರಾಷ್ಟ್ರ ಹಿತೈಷಿಯು ರಾಷ್ಟ್ರದ ಹಿತಕ್ಕಾಗಿ ಪ್ರಾಣವನ್ನು ಅರ್ಪಿಸಲಿಕ್ಕೆ ಹಿಂದೆಮುಂದೆ ನೋಡಬೇಕೋ ಹ್ಯಾಗೆ ಹೇಳು ನೋಡೋಣ?

ತಿರುವೇಂಕಟ–ಒಮ್ಮೊಮ್ಮೆ ಪ್ರಾಣವನ್ನರ್ಪಿಸಲಿಕ್ಕೆ ರಾಷ್ಟ್ರ ಹಿತೈಷಿಯು ಅವಶ್ಯವಾಗಿ ಹಿಂದೆ ಮುಂದೆ ನೋಡಬೇಕಾಗುವದು; ಯಾಕಂದರೆ, ನಿಜವಾದ ತೇಜಸ್ವಿ ರಾಷ್ಟ್ರಹಿತೈಷಿಗಳು ಅಪರೂಪವಾದದ್ದರಿಂದ, ಅಂಥವರ ತೇಜಸ್ಸಿನ ಉಪಯೋಗವು ರಾಷ್ಟ್ರಕ್ಕೆ ನಿಶ್ಚಯವಾಗಿ ಆಗುತ್ತಿರುತ್ತದೆ; ಅಂಥವರ ಯೋಗವು ರಾಷ್ಟ್ರಕ್ಕೆ ತಪ್ಪುವದರಿಂದ ರಾಷ್ಟ್ರದ ಪ್ರಗತಿಯಲ್ಲಿ ಕಾಲಾವಧಿಯಾಗುವದು.

ವಿರೂಪಾಕ್ಷಾರ್ಯ–ಕ್ಷತ್ರಿಯವೀರ, ನಿನ್ನ ಮಾತು ಒಪ್ಪತಕ್ಕದ್ದೇ ಸರಿ. ನೀನು "ಒಮ್ಮೊಮ್ಮೆ ಹಿಂದೆಮುಂದೆ ನೋಡಬಹುದೆಂ"ದು ಹೇಳುವದರಲ್ಲಿ ಅರ್ಥವಿರುವದು.

ಈಗ ನಿನ್ನ ಬಳಿಗೆ ನಾವು ಬಂದಿರುವದು ನೀನು ಹೇಳಿದ ಆ ''ಒಮ್ಮೊಮ್ಮೆ'' ಎಂಬ ಪ್ರಸಂಗವೇ ಆಗಿರುವದು. ತಿರುವೇಂಕಟಾ, ರಾಷ್ಟ್ರ ಪ್ರಗತಿಯ ರೀತಿಯು ವಿಲಕ್ಷಣವಾಗಿರುವದು. ಕಡಿದ ಗಿಡವು ಒಂದಕ್ಕೆ ಹತ್ತಾಗಿ ಟಿಸಿಲು ಒಡೆದು ಅಭಿವೃದ್ಧಿಯಾಗುವಂತೆ, ರಾಷ್ಟ್ರಭಕ್ತರ ಆತ್ಮಾರ್ಪಣದಿಂದ ರಾಷ್ಟ್ರಭಕ್ತರು ಒಂದಕ್ಕೆ ಹತ್ತರಂತೆ ಉತ್ಪನ್ನವಾಗಿ ರಾಷ್ಟ್ರದ ಪ್ರಗತಿಯು ಅಭಿವೃದ್ಧವಾಗುತ್ತಿರುವದು. ಒಂದು ಮನೆತನದ ಉತ್ಕರ್ಷಕ್ಕೇ ಒಮ್ಮೊಮ್ಮೆ ತಲಾಂತರಗಳು ಬೇಕಾಗುತ್ತಿರಲು, ರಾಷ್ಟ್ರದ ಉತ್ಕರ್ಷವು ಒಂದೇ ತಲೆಯಲ್ಲಿ ಹ್ಯಾಗೆ ಆದೀತು? ಹಾಗೆ ನಾಯಿಯ ಚತ್ತರಿಗೆಯಂತೆ ವ್ಯಕ್ತಿ ಮಹಾತ್ಮೆಯಿಂದ ಒಂದೇ ತಲೆಯಲ್ಲಾದ ರಾಷ್ಟ್ರದ ಉತ್ಕರ್ಷವು ನಾಯಿಯ ಚತ್ತರಿಗೆಯಂತೆ ಅಲ್ಪ ಕಾಲ ಬಾಳವದಾಗಿರುವದು; ಆದ್ದರಿಂದ ರಾಷ್ಟ್ರದ ಔನ್ನತ್ಯದಲ್ಲಿ ಅಂದರೆ ಅದರ ಸ್ವಾತಂತ್ರ್ಯ ಪ್ರಾಪ್ತಿಯಲ್ಲಿ ಹಲವು ರಾಷ್ಟ್ರಭಕ್ತರ ಬಲಿ ಬೀಳಬೇಕಾಗುವದರಲ್ಲಿ ಆಶ್ಚರ್ಯವೇನು?

ತಿರುವೇಂಕಟ–ಆರ್ಯುವರ, ಹೇಗೇ ಇರಲಿ, ಮಾಧವಾಚಾರ್ಯರು ಬ್ರಾಹ್ಮಣರಿರುವದರಿಂದ ಅವರ ಕಾರ್ಯಕ್ಕೆ ನಾನು ವಿಘ್ನ ಮಾಡುವದೇ ಸರಿ! ಬ್ರಾಹ್ಮಣರೆಂದರೆ ನನ್ನ ಮೈ ಉರಿಯುತ್ತದೆ.

ವಿರೂಪಾಕ್ಷಾರ್ಯ–ತಿರುವೇಂಕಟ, ಆರ್ಯಭೂಮಿಯ ಆ ಅನಾದಿ ವರ್ಣದ ವಿಷಯವಾಗಿ ನೀವು ಇಷ್ಟು ದ್ವೇಷಭಾವ ತಾಳುವ ಕಾರಣವೇನು? ಆ ವರ್ಣವು ಚತುರ್ವರ್ಣಗಳಲ್ಲಿ ಎಲ್ಲಕ್ಕೂ ಮೊದಲು ಉತ್ಪನ್ನವಾದದ್ದೆಂತಲೂ, ಎಲ್ಲ ವರ್ಣಗಳ ಮೂಲವು ಆ ಬ್ರಾಹ್ಮಣ ವರ್ಣವೆಂತಲೂ ಶ್ರುತಿ–ಸ್ಮೃತಿಪುರಾಣಗಳು ಹೇಳುತ್ತಿರುವವಲ್ಲವೆ? ತಿರುವೇಂಕಟ, ಲಿಂಗಧರಿಸುವವರೆಲ್ಲರು ಒಂದೇ ವರ್ಣದವರೆಂದು ಹೇಳುವ ನಾವು ಒಂದು ಪಕ್ಷದಲ್ಲಿ ಅಜ್ಞಾನದಿಂದ ಬ್ರಾಹ್ಮಣ ವರ್ಣವನ್ನು ದ್ವೇಷಿಸಿದರೆ ಕ್ಷಮ್ಯವಾಗಬಹುದು; ಆದರೆ ಚಾತುರ್ವರ್ಣೀಯರಾದ ನೀವು, ಅದರಲ್ಲಿಯೂ ಬ್ರಾಹ್ಮಣರನ್ನು ಗುರುಸ್ಥಾನದಲ್ಲಿ ಎಣಿಸಲು ಶ್ರುತಿಯ ಆಜ್ಞೆಯಂತೆ ಬದ್ಧರಾದ ನೀವು ಹೀಗೆ ಬ್ರಾಹ್ಮಣರನ್ನು ದ್ವೇಷಿಸುವದು ಅಕರ್ಮವಲ್ಲವೆ?

ತಿರುವೇಂಕಟ–ಶ್ರುತಿ–ಸ್ಮೃತಿ–ಪುರಾಣಗಳನ್ನು ಬ್ರಾಹ್ಮಣರೇ ತಮ್ಮ ಮನಸ್ಸಿಗೆ ಬಂದಂತೆ ಬರೆದುಕೊಂಡಿರುವದರಿಂದ, ಅವನ್ನು ನಂಬುವದು ನನ್ನಿಂದಾಗದು. ಅನುಭವದಿಂದ ನೋಡಲು, ಪ್ರತಿ ಒಂದರಲ್ಲಿ ತಾವೇ ಮುಂದುವರಿದು, ತಮ್ಮ ಶ್ರೇಷ್ಠತ್ವವನ್ನು ಕಾಯ್ದುಕೊಳ್ಳುವದಕ್ಕಾಗಿ ಇತರರನ್ನು ಹಿಂದಕ್ಕೆ ದೂಡುವ ನೀಚತನವು ಬ್ರಾಹ್ಮಣರಲ್ಲಿರುವದು. ಆದ್ದರಿಂದ ಬ್ರಾಹ್ಮಣರ ಈ ದುರ್ಗುಣದ ಸೇಡು ತೀರಿಸಿಕೊಳ್ಳುವದಕ್ಕಾಗಿ ಇಡಿಯ ಭರತಭೂಮಿ ಯಲ್ಲಿ ಬ್ರಾಹ್ಮಣ–ಬ್ರಾಹ್ಮಣೇತರವೆಂಬ ಎರಡು ಪಂಗಡಗಳನ್ನು ಮಾಡಿ, ಬ್ರಾಹ್ಮಣೇತರವೆಂಬ ದೊಡ್ಡ ಪಂಗಡದವರು ನಾವು, ಅಲ್ಪಸಂಖ್ಯಾಕರರಾದ ಬ್ರಾಹ್ಮಣರನ್ನು ಹಲವು ಉಪಾಯ ಗಳಿಂದ ಬಗ್ಗುಬಡಿಯಲೇಬೇಕು.

ವಿರೂಪಾಕ್ಷಾರ್ಯ–ತಿರುವೇಂಕಟ, ಹೀಗೆ ಬ್ರಾಹ್ಮಣರನ್ನು ಬಗ್ಗು ಬಡಿಯುವದಕ್ಕಾಗಿ ಅನಾದಿ ಕಾಲದಿಂದ ಬಹುಜನರು ಯತ್ನಿಸಿದರೂ, ಈವರೆಗೂ ಆ ಜಾತಿಯ ಮುಂದಿಯ

ಅಸೂಯಕ್ಕೆ ಗುರಿಯಾಗಿ ಅವರ ಕಣ್ಣಲ್ಲಿ ಒತ್ತುತ್ತಲೇ ಇರುವದು; ಆ ಮಾತು ಇರಲಿ, ಈಗ ನಿನ್ನ ಅಸಂಬದ್ಧ ವಿಚಾರಗಳನ್ನು ಕೇಳಿ ನಿನ್ನ ಅಜ್ಞಾನಕ್ಕಾಗಿ ನನಗೆ ವಿಷಾದವಾಗುತ್ತದೆ; ಶ್ರುತಿಗಳು ಅಪೌರುಷೇಯವೆಂದು ವೈದಿಕರೆನಿಸಿಕೊಳ್ಳುವವರೆಲ್ಲರು ನಂಬುತ್ತಿರಲು, ವೈದಿಕನೇ ಆದ ನೀನು ವೇದಗಳು ಬ್ರಾಹ್ಮಣರು ಮಾಡಿದವೆಂದು ಹೇಳುವೆಯಲ್ಲ! ಅದರಂತೆ, ಸ್ಮೃತಿಗಳಲ್ಲಿ ಅತ್ಯಂತ ಮಹತ್ವದ್ದೂ ಆದಿಸ್ಮೃತಿಯೆಂದು ಪ್ರಖ್ಯಾತವಾದದ್ದೂ, ಎಲ್ಲ ಸ್ಮೃತಿಗಳ ಮೂಲಾಧಾರವೂ ಆದ ಮನುಸ್ಮೃತಿಯು, ಸ್ವಾಯಂಭವ ಮನುವೆಂಬ ಕ್ಷತ್ರಿಯನು ರಚಿಸಿದ್ದೆಂಬ ಮಾತೂ ನಿನಗೆ ಗೊತ್ತಿರಬಾರದೆ? ಪುರಾಣೇತಿಹಾಸಾದಿಗಳನ್ನು ಬ್ರಾಹ್ಮಣರಾದ ವಾಲ್ಮೀಕಿ–ವೇದವ್ಯಾಸರು ರಚಿಸಿದ್ದರೂ, ಅವುಗಳಲ್ಲಿ ಬ್ರಾಹ್ಮಣರಿಗಿಂತ ರಾಮ, ಕೃಷ್ಣ, ಮನ್ವಾದಿರಾಜರು ಮೊದಲಾದ ಬ್ರಾಹ್ಮಣೇತರ ಮಹಾತ್ಮರ ಗೌರವವನ್ನೇ ಹೆಚ್ಚಾಗಿ ವರ್ಣಿಸಿರುವರೆಂಬದು ನಿನಗೆ ಗೊತ್ತಿಲ್ಲದ್ದು ಆಶ್ಚರ್ಯವು! ತಿರುವೇಂಕಟಾ, ಪ್ರಸಂಗವಶಾತ್ ಬ್ರಾಹ್ಮಣ ಋಷಿಗಳು ಬ್ರಾಹ್ಮಣೇತರರಿಗೆ ನಿಸ್ಸಂಶಯ ಪೂಜ್ಯರಾಗಿರುವಂತೆ, ಶ್ರೀರಾಮ–ಕೃಷ್ಣಾದಿ ಬ್ರಾಹ್ಮಣೇತರ ಅವತಾರಿಕರು ಬ್ರಾಹ್ಮಣರಿಗೆ ನಿಸ್ಸಂಶಯ ಪೂಜ್ಯರಾಗಿರುವರು. ಇದನ್ನು ಅರಿಯದೆ ನೀನು ಮೂರ್ಖನಂತೆ ಏನೇನೋ ಮಾತಾಡುವೆಯಲ್ಲ! ವಿವೇಕದಿಂದ ಪೂರ್ಣ ವಿಚಾರಮಾಡದ ನಿನ್ನಂಥವರಿಂದ ಸಮಾಜದಲ್ಲಿ ದ್ವೇಷಭಾವವು ಹೆಚ್ಚಿ ಅನರ್ಥ ಮಾತ್ರ ಉಂಟಾಗುವದು. ಪೂಜ್ಯ ಗುರುಗಳಿದ್ದ ಬ್ರಾಹ್ಮಣರೂ, ಬ್ರಾಹ್ಮಣೇತರರೂ ವಿವೇಕಿಗಳಾದವರಿಗೆ ಸರಿಯಾಗಿಯೇ ಹಿಂದಕ್ಕೂ ಪೂಜ್ಯರಾಗಿರುವರು, ಈಗಲೂ ಪೂಜ್ಯರಾಗುತ್ತಿರುವರು, ಮುಂದೆಯೂ ಪೂಜ್ಯರಾಗುವರು! ಕ್ಷತ್ರಿಯವೀರಾ, ಪ್ರಾಚೀನಕಾಲದ ಬ್ರಾಹ್ಮಣ ಋಷಿಗಳ ಯೋಗ್ಯತೆಯನ್ನು ನೀನು ಏನು ಕಂಡಿರುವೆ? ಪುರಾತನ ಕಾಲದಿಂದ ಇಲ್ಲಿಯವರೆಗೆ ಬ್ರಾಹ್ಮಣರೇ ಭರತಭೂಮಿಯ ಮಾರ್ಗದರ್ಶಕರೆಂದು ಸ್ವದೇಶ–ಪರದೇಶದವರು ತಿಳಿಯುತ್ತ ಬಂದಿದ್ದಾರೆ; ಅದರಂತೆ ಬ್ರಾಹ್ಮಣರು ಮಾರ್ಗದರ್ಶಕರಾಗುತ್ತಲೂ ಬಂದಿದ್ದಾರೆ. ಆದರೆ ಇನ್ನುಮೇಲೆ ಬ್ರಾಹ್ಮಣೇತರರು ಮಾರ್ಗದರ್ಶಕರಾದರೆ ಯಾರು ಬೇಡೆನ್ನುವರು? ನಿನ್ನ ಮತದಂತೆ, ಬ್ರಾಹ್ಮಣರಂಥ ಕುದುರಿಗೇಡಿ ಬುದ್ಧಿಯವರು ಬೇಡೆಂದರೆ ನೀವು ಯಾಕೆ ಕೇಳಬೇಕು? ನೀವು ನಿಮ್ಮ ಧರ್ಮಕ್ಕನುಸರಿಸಿ ತಪೋಬಲದಿಂದ ಅಂಥ ಯೋಗ್ಯತೆ ಪಡೆಯುವದನ್ನು ಬಿಟ್ಟು, ಕಾಶಿಯಿಂದ ರಾಮೇಶ್ವರದವರೆಗೆ ಬ್ರಾಹ್ಮಣೇತರರು ಒಕ್ಕಟ್ಟಾಗಿ ಬ್ರಾಹ್ಮಣರನ್ನು ಬಗ್ಗುಬಡಿಯಲಿಕ್ಕೆ ಈ ಜಗತ್ತನ್ನೇನು ರಂಡೆಮುಂಡೆಯಾಳುವದಿಲ್ಲ! ಜಗತ್ತಿನ ಸ್ವಾಮಿಯಾದ ಭಗವಾನ್ ಶಂಕರನು ಸರ್ವಸಾಕ್ಷಿಯಾಗಿದ್ದು ತನ್ನ ಅಮೋಘಶಕ್ತಿಯಿಂದ ದುಷ್ಟಶಾಸನ– ಶಿಷ್ಟಪಾಲನಗಳನ್ನು ಹಿಂದೆ ಮಾಡಿ ಈಗ ಮಾಡುತ್ತಿರುವಂತೆ ಮುಂದೆಯೂ ಮಾಡುವನು. ಆ ಭಗವಂತನ ಅಸ್ತಿತ್ವನ್ನು ಲೆಕ್ಕಿಸದ ದುರಹಂಕಾರಿ ದೇಹಾತ್ಮವಾದಿಗಳಿಗೆ ಮಾತ್ರ ಒಪ್ಪಬಹುದಾದ ಅನರ್ಥಕಾರಕ ವಿಚಾರವನ್ನು ನೀನು ವ್ಯಕ್ತಮಾಡುವೆಯಲ್ಲ! ಕನ್ನಡ ವೀರಾ, ಚಾತುರ್ವರ್ಣ ವ್ಯವಸ್ಥೆಯು ನಮ್ಮ ದೇಶದಲ್ಲಿ ಅನಾದಿಕಾಲದಿಂದ ನಡೆದುಕೊಂಡು ಬಂದದ್ದರಿಂದ, ಪುರಾತನದ ಬ್ರಾಹ್ಮಣರು ತಮ್ಮ ಕರ್ತವ್ಯದಂತೆ ತಪಸ್ವಿಗಳೂ, ಜ್ಞಾನಧನರೂ ಆಗಿ ನಿಃಸ್ವಾರ್ಥಬುದ್ಧಿಯಿಂದ

ಬಗೆಬಗೆಯ ಶೋಧಗಳನ್ನು ಮಾಡಿ, ಆ ಶೋಧಗಳ ಫಲಗಳನ್ನು ತಾವು ಉಣ್ಣದೆ ಜಗತ್ತಿಗೆ ಉಣ್ಣಗೊಟ್ಟು ತಾವು ಕಂದಮೂಲ ಭಕ್ಷಣ ಮಾಡುತ್ತ ವಲ್ಕಗಳನ್ನು ಧರಿಸಿ ಅರಣ್ಯದಲ್ಲಿ ವಾಸಿಸಿದರು. ಇಂಥ ಉದಾಹರಣೆಗಳು ಅನ್ಯ ದೇಶಗಳಲ್ಲಿ ದೊರೆಯಬಹುದೋ? ತಮ್ಮ ಶ್ರಮದ ಫಲಗಳನ್ನು ಅನ್ಯರಿಗೆ ಕೊಟ್ಟು, ತಾವು ಬಡವರಾಗಿಯೇ ಇದ್ದ ವರ್ಗವೆಂದರೆ, ಪ್ರಾಚೀನ ಬ್ರಾಹ್ಮಣ ಋಷಿವರ್ಗವೆಂದೇ ನಿಸ್ಪ್ರಹಿಗಳಾದ ವಿಚಾರವಂತರು ಒಪ್ಪಿಕೊಳ್ಳುವರು.

ತಿರುವೇಂಕಟ–ಆರ್ಯವರ, ಇದಕ್ಕೆ ಉದಾಹರಣಗಳೇನು?

ವಿರೂಪಾಕ್ಷಾರ್ಯ–ಕ್ಷತ್ರಿಯ ವೀರನೇ, ಇಂಥ ಉದಾಹರಣೆಗಳು ನಿನಗೆ ಎಷ್ಟು ಬೇಕು? ಎಲ್ಲ ಶಾಸ್ತ್ರಗಳ ಹಾಗು ಎಲ್ಲ ಕಲೆಗಳ, ಅದರಂತೆ ಎಲ್ಲ ಉದ್ಯೋಗಗಳ ಉತ್ಪಾದಕರು ಬ್ರಾಹ್ಮಣ ಋಷಿಗಳಿರುವರು! ಹೀಗಿದ್ದು ಬ್ರಾಹ್ಮಣರೇ ಎಲ್ಲರನ್ನು ಹಿಂದಕ್ಕೆ ಸರಿಸಿ ಭರತಭೂಮಿಯ ಅವನತಿಗೆ ಅವರೇ ಕಾರಣರಾದರೆಂದು ಕರ್ಣಕಠೋರವಾಗಿ ನೀನು ಹೇಳುವೆಯಲ್ಲ! ಮತ್ತು ಎಲ್ಲ ಜಾತಿಗಳ ಅಧಃಪತನಕ್ಕೆ ಬ್ರಾಹ್ಮಣರೇ ಕಾರಣರೆಂದು ವಾದಿಸುವೆಯಲ್ಲ! ಇದುಕೇವಲ ನಿನ್ನ ಅಜ್ಞಾನವು. "ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣ ಕರ್ಮ ವಿಭಾಗಶಃ" ಎಂಬ ಭಗವದ್ಗೀತೆಯ ಉಕ್ತಿಯಂತೆ ಈ ಭರತವರ್ಷದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳೂ, ಹಲವು ಜಾತಿಗಳೂ, ನಾನಾವಿಧ ಕರ್ಮಗಳೂ ಅವರವರ ಜಾತಿ ನಿಯಮಾನುಸಾರವಾಗಿ ಅನಾದಿ ಕಾಲದಿಂದ ನಡೆಯುತ್ತ ಬಂದಿವೆ. ಅವು ಈಗಲೂ ನಡೆಯುತ್ತಿರುವವು. ಈ ಪರಂಪರೆಯು ಇಷ್ಟು ದಿನ ಅವಿಚ್ಛಿನ್ನವಾಗಿ ಸಾಗಿ ಬರಲಿಕ್ಕೆ ಆಯಾ ವರ್ಣದವರು ಆಯಾ ಜಾತಿಯವರು ತಮ್ಮ ತಮ್ಮ ವರ್ಣ ಜಾತಿಗಳ ನಿರ್ಬಂಧಗಳಿಗೆ ಭಕ್ತಿಯಿಂದ ಒಳಗಾಗಿ ಪರರೊಡನೆ ಪ್ರೇಮಪೂರ್ವಕವಾದ ಸಹಾನುಭೂತಿ ಯಿಂದ ನಡೆದುಕೊಂಡು ಬಂದದ್ದೇ ಕಾರಣವಲ್ಲವೆ? ಒಟ್ಟಿನಲ್ಲಿ ನಾವೆಲ್ಲರೂ ಯಾವ ವರ್ಣದವರೇ ಇರಲಿ, ಯಾವ ಪಂಥದವರೇ ಇರಲಿ ಒಂದೇ ವೈದಿಕ ಧರ್ಮದವರೆನಿಸಿ ಅವರವರ ಆಚಾರ ಅವರವರಿಗೆ ಎಂಬ ಉದಾರತತ್ವದಿಂದ ಪರಸ್ಪರರು ಪ್ರೇಮದಿಂದ ನಡೆದುಕೊಳ್ಳುತ್ತ ಬಂದಿರುವೆವು; ಆದರೆ, ನಮ್ಮ ವೈದಿಕ ಧರ್ಮದ ಸರ್ವಸಾಮಾನ್ಯವಾದ ಗೂಢ ತತ್ವದ ಮರ್ಮವರಿಯದ ಪರದೇಶದ ಜನರು, ತಮ್ಮ ಹಿತಕ್ಕಾಗಿ ನಮ್ಮಲ್ಲಿ ಒಡಕು ಹುಟ್ಟಿಸಬೇಕೆಂದು ನಮ್ಮ ಬುದ್ಧಿಭೇದವನ್ನು ಮಾಡಿ, ಬ್ರಾಹ್ಮಣ ಬ್ರಾಹ್ಮಣೇತರ ಎಂಬ ಎರಡು ಪಂಗಡಗಳನ್ನು ಮಾಡಿ, ಅನಾದಿಯಿಂದ ಪ್ರಾಮುಖ್ಯವಾಗಿ ಬುದ್ಧಿಯಿಂದ ಸಮರ್ಥರಾದ ತತ್ವಜ್ಞ ಬ್ರಾಹ್ಮಣರಿಗೂ ಅನಾದಿಯಿಂದ ಪ್ರಾಮುಖ್ಯವಾಗಿ ಶರೀರದಿಂದ ಸಮರ್ಥರಾದ ಕರ್ತೃತ್ವಶಾಲಿ ಬ್ರಾಹ್ಮಣೇತರರಿಗೂ ಒಡಕು ಹುಟ್ಟಿಸಿ, ಆ ಬುದ್ಧಿವೈಭವ–ಶರೀರ ವೈಭವಗಳ ಕೀಲಿಯುಕ್ಕೆಯನ್ನು ತಮ್ಮ ಕೈಯಲ್ಲಿ ಇಟ್ಟುಕೊಂಡು ಸೂತ್ರದ ಗೊಂಬೆಗಳಂತೆ ಬ್ರಾಹ್ಮಣ–ಬ್ರಾಹ್ಮಣೇತರರಿಬ್ಬರನ್ನೂ ಕುಣಿಸುತ್ತ ಇಡಿಯ ಭರತಭೂಮಿಯನ್ನೇ ಪರಾಧೀನ ಮಾಡಲು ಯತ್ನಿಸುವರು. ಇದಕ್ಕೆ ನಿನ್ನಂಥ ವಿವೇಕಿ ಕ್ಷತ್ರಿಯನು ಕಿವಿಗೊಡಬಹುದೇ? ತಿರುವೇಂಕಟ, ನಿನ್ನ ಆಯುಷ್ಯವೆಲ್ಲ ಯವನ ಸೇವೆಯಲ್ಲಿಯೇ ಹೋಗಿರುವದರಿಂದ

ಆರ್ಯವಿದ್ಯೆಯ ಪರಿಚಯವೇ ನಿನಗೆ ಇಲ್ಲದಾಗಿದೆ. ಅಂದಬಳಿಕ ಇಂಥ ಅಜ್ಞಾನದ ಉದ್ಗಾರಗಳು ನಿನ್ನ ಮುಖದಿಂದ ಹೊರಟರೆ ಆಶ್ಚರ್ಯವೇನು? ಯಾವ ಕಾರಣದಿಂದಲೇ ಆಗಲಿ, ಒಂದು ಮನೆತನದಲ್ಲಿ ಒಡಕು ಹುಟ್ಟಿ ಆ ಮನೆತನದೊಳಗಿನ ಜನರು ಪರಸ್ಪರರನ್ನು ತಿರಸ್ಕರಿಸುತ್ತ ಪರಸ್ಪರರ ಅಹಿತ ಚಿಂತನ ಮಾಡತೊಡಗಿದರೆ ಆ ಮನೆತನವೇ ಹಾಳಾಗುವಂತೆ, ಒಂದು ದೇಶದೊಳಗಿನ ಜನರಲ್ಲಿ ಒಡಕು ಹುಟ್ಟಿ ಆ ದೇಶದೊಳಗಿನ ಜನರು ಪರಸ್ಪರರನ್ನು ತಿರಸ್ಕರಿಸುತ್ತ ಪರಸ್ಪರರ ಅಹಿತ ಚಿಂತನ ಮಾಡತೊಡಗಿದರೆ ಆ ದೇಶವೇ ಹಾಳಾಗುವದೆಂಬ ಮಾತೂ ನಿನಗೆ ಗೊತ್ತಾಗಬಾರದೇ? ಮನೆತನವಾಗಲಿ, ದೇಶವಾಗಲಿ ಹಾಳಾದ ಬಳಿಕ ಅಂದರೆ ಅವು ಸ್ವಾತಂತ್ರ್ಯ ವಿಹೀನವಾದ ಬಳಿಕ ಆ ಮನೆತನದೊಳಗಿನ ಅಥವಾ ದೇಶದೊಳಗಿನ ಯಾವ ವ್ಯಕ್ತಿಗೆ ಅದರ ಪರಾಧೀನತೆಯ ಮೂಲಕ ಗೌರವ ಬಂದೀತು! ದೇಶಕ್ಕೆ ದೇಶವೇ ಸ್ವತಂತ್ರವಾಗಬೇಕಾದರೆ, ದೇಶದೊಳಗಿನ ಯಾವ ಪಂಗಡವಂತು ಇರಲಿ, ವ್ಯಕ್ತಿಯೂ ಪರತಂತ್ರವಾಗಿ ಇರಲಾಗದು. ತಿರುವೇಂಕಟ, ನೀನು ಈಗ ಮುಸಲ್ಮಾನರ ಒತ್ತಾಸೆಯಿಂದ ಸ್ವತಂತ್ರನಾದೆಯೆಂದು ಮೂರ್ಖತನದಿಂದಲೇ ನಾನು ತಿಳಿದುಕೊಳ್ಳುತ್ತೇನೆ. ಆದರೆ ಒತ್ತಾಸೆಯಿಂದ ಯಾರಾದರೂ ಸ್ವತಂತ್ರರಾಗಬಹುದೇ? ಒಬ್ಬರ ಆಸರದಿಂದ ನಿಲ್ಲುವವನನ್ನು ತನ್ನ ಕಾಲಿನಿಂದ ನಿಂತವನೆಂದು ಯಾರಾದರೂ ಕರೆಯಬಹುದೇ? ಆದ್ದರಿಂದ ಮಾಧವಾಚಾರ್ಯರಂಥ ಮಹಾತ್ಮರು ಎರಡನೆಯವರ ಆಸರವಿಲ್ಲದೆ ಕರ್ನಾಟಕವು ತನ್ನ ಕಾಲಿನಿಂದ ತಾನು ನಿಲ್ಲುವಂತೆ ಮಾಡಬೇಕೆಂದು ನಿಸ್ಪೃಹವೃತ್ತಿಯಿಂದ ಯತ್ನಿಸುವಾಗ, ಮುಸಲ್ಮಾನರ ಆಸರದಿಂದ ಒಂದು ಸಂಸ್ಥಾನದ ಅಧಿಪತಿಯಾಗಬೇಕೆಂದು ಯತ್ನಿಸುವಾಗ, ಸ್ವಾರ್ಥೈಕ ದೃಷ್ಟಿಯ ನೀನು, ಮಾಧವಾಚಾರ್ಯರು ಬ್ರಾಹ್ಮಣರೆಂದು ಅವರನ್ನು ದ್ವೇಷಿಸಿ ಅವರ ಪವಿತ್ರಕಾರ್ಯಕ್ಕೆ ವಿಘ್ನಮಾಡಿ ದೇಶದ್ರೋಹವನ್ನು ಕಟ್ಟಿಕೊಳ್ಳುವದು ಮಹಾಮೂರ್ಖತನವಲ್ಲವೆ? ಮುಸಲ್ಮಾನರು ನಿನಗೆ ಒಂದು ಸಂಸ್ಥಾನವನ್ನು ಕೊಡುವದು; ನಿನ್ನ ಆ ಸಂಸ್ಥಾನದಿಂದ ಸಹಿತವಾದ ಇಡಿಯ ಕರ್ನಾಟಕವನ್ನೇ ನುಂಗಿ ನೀರು ಕುಡಿಯುವದಕ್ಕಾಗಿಯೇ ಅಲ್ಲವೆ? ಮುಸಲ್ಮಾನರ ಪ್ರಖರ ಜಠರಾಗ್ನಿಯಿಂದ ಇಡಿಯ ಕರ್ನಾಟಕವೇ ಪಚನವಾಗಿ ಹೋಗುತ್ತಿರುವಾಗ, ಕಃಪದಾರ್ಥವಾದ ಒಂದು ಕ್ಷುದ್ರ ಸಂಸ್ಥಾನದ ಒಡೆಯನು ನೀನು ಪಚನವಾಗದೆ ಹೇಗೆ ಉಳಿಯುವೆ? ಆದ್ದರಿಂದ ಬ್ರಾಹ್ಮಣ ದ್ವೇಷವೆಂಬ ನೆವದಿಂದ ನಿನ್ನ ನೀಚಸ್ವಾರ್ಥವನ್ನು ನೀನು ಮುಚ್ಚಿಕೊಂಡರೆ, ನಿನ್ನ ಆ ನೀಚ ಸ್ವಾರ್ಥದ ಆಸೆಯು ಎರಡನೆಯವರ ಕಣ್ಣಿಗೆ ಕಾಣದೆ ಹೋಗದು! ಹುಚ್ಚ ಗೃಹಸ್ಥಾ, ಕೆಲ ವ್ಯಕ್ತಿಗಳ ದೋಷದಿಂದ ಆ ವ್ಯಕ್ತಿಯು ಸಮಾಜವನ್ನು ದ್ವೇಷಿಸುವದು ಮಹತ್ಪಾಪವಾಗಿರುವಾಗ, ಅನಾದಿ ಕಾಲದಿಂದ ಭರತಭೂಮಿಯದಿಷ್ಟೇ ಅಲ್ಲ, ಇಡಿಯ ಜಗತ್ತಿನ ಕಲ್ಯಾಣ ಮಾಡುತ್ತ ಬಂದಿರುವ ಇಡಿಯ ಬ್ರಾಹ್ಮಣ ಸಮಾಜವನ್ನೇ ನಾಮಧಾರಿ ಬ್ರಾಹ್ಮಣರಾದ ಕೆಲ ನೀಚರ ಕಡೆಗೆ ಬೆರಳುಮಾಡಿ ನಿಂದಿಸಲಿಕ್ಕೆ ನಿನಗೆ ನಾಚಿಕೆಯು ಹ್ಯಾಗೆ ಬರುವದಿಲ್ಲ? ಬ್ರಾಹ್ಮಣರಲ್ಲಾಗಲಿ, ಬ್ರಾಹ್ಮಣೇತರರಲ್ಲಿ ಯಾಗಲಿ, ಸಜ್ಜನರೂ ಇರುವರು, ದುರ್ಜನರೂ ಇರುವರು; ಅಂದಬಳಿಕ ವ್ಯಕ್ತಿಶಃ ಸಜ್ಜನರಿಗೆ

ಸಜ್ಜನರೆಂತಲೂ, ದುರ್ಜನರಿಗೆ ದುರ್ಜನರೆಂತಲೂ ಅಂದು, ಸಜ್ಜನರ ಸದ್ವೃತ್ತಿಗಾಗಿ ಅವರ ಅಭಿನಂದನವನ್ನೂ, ದುರ್ಜನರ ದುರ್ವೃತ್ತಿಗಾಗಿ ಅವರ ತಿರಸ್ಕಾರವನ್ನೂ ಮಾಡ ಬಹುದಲ್ಲದೆ, ಇಡಿಯ ಸಮಾಜವನ್ನು ನಿಂದಿಸಿ ಅದರೊಡನೆ ದ್ವೇಷ ಬಳಿಸುವದು ಸರ್ವಥಾ ಹಿತಕರವಲ್ಲ. ಇರಲಿ, ಬ್ರಾಹ್ಮಣರಿಂದ ಬ್ರಾಹ್ಮಣೇತರರಿಗಾದ ಉಪಕೃತಿಯನ್ನು ಹೇಳುವೆನು ಕೇಳು.

ತಿರುವೇಂಕಟಾ, ಈ ಪ್ರಸಂಗದಲ್ಲಿ ಈಗಿನ ಬ್ರಾಹ್ಮಣರು ಒತ್ತಟ್ಟಿಗಿರಲಿ, ಹಿಂದಿನ ಋಷಿಸಂಜ್ಞಕ ಬ್ರಾಹ್ಮಣರನ್ನು ಕುರಿತು ವಿಚಾರಿಸುವಾ; ಯಾಕಂದರೆ ಕಾಲಮಹಿಮೆಯಿಂದ ಎಲ್ಲ ಸಮಾಜಗಳು ಸ್ವಾರ್ಥದ ಸೆಳವಿನಿಂದ ಕೆಡುತ್ತ ಬಂದಿರುವಂತೆ, ಬ್ರಾಹ್ಮಣರೂ ಕೆಡುತ್ತ ಬಂದಿರುವರು; ಒಂದು ಪಕ್ಷದಲ್ಲಿ ಮಾರ್ಗದರ್ಶಕರೆನಿಸುವ ಬ್ರಾಹ್ಮಣರ ಸಮಾಜವು ಮೊದಲು ಕೆಟ್ಟಿದ್ದರಿಂದ, ಆ ವಿಷಯವಾಗಿ ಆ ಸಮಾಜಕ್ಕೆ ಹೆಚ್ಚು ದೋಷವನ್ನಾದರೂ ಕೊಡಬಹುದು; ಅದಿರಲಿ, ಪ್ರಾಚೀನ ಋಷಿಗಳಿಂದ ಅನ್ಯಸಮಾಜಗಳಿಗಾದ ಉಪ ಕೃತಿಯನ್ನು ಹೇಳುವೆನು ಕೇಳು. ಈ ಋಷಿಗಳಾದ ಬ್ರಾಹ್ಮಣರು ಶಾಂತರೂ, ದಯಾಶೀಲರೂ, ಜಿತೇಂದ್ರಿಯರೂ, ಸರಳ ಸ್ವಭಾವದವರೂ ಆಗಿದ್ದರು. ಇವರ ವಟುಗಳು ಜನ್ಮವೆತ್ತಿದಂದಿನಿಂದ 5ನೆಯ ವರ್ಷ ಯಥಾವಿಧಿ ಅಕ್ಷರಗ್ರಹಣವಾದ ಮೇಲೆ ಎಂಟನೆಯ ವರ್ಷ ತಮ್ಮ ತಮ್ಮ ಸೂತ್ರೋಕ್ತ ಮಂತ್ರ ಗಳಿಂದ ಉಪನೀತರಾಗಿ ಒಂದಾಗಲಿ, ಎರಡಾಗಲಿ, ಮೂರಾಗಲಿ, ನಾಲ್ಕಾಗಲಿ ವೇದಗಳನ್ನು ಸಾಂಗೋಪಾಂಗವಾಗಿ ಕಲಿಯುವರು. ನ್ಯಾಯ ವೇದಾಂತಾದಿ ಶಾಸ್ತ್ರಗಳ ಪರಿಚಯವನ್ನು ಚೆನ್ನಾಗಿ ಮಾಡಿಕೊಳ್ಳುವರು. ಪ್ರತಿನಿತ್ಯ ಗುರುಕುಲದಲ್ಲಿಯೇ ವಾಸಿಸಿ ವಿದ್ಯಾಗುರುಗಳನ್ನು ಪಿತೃಸಮಾನರನ್ನಾಗಿ ತಿಳಿದು ಅವರ ಆಜ್ಞೆಯಂತೆ ವರ್ತಿಸುವರು. ಹೀಗೆ ನೈಷ್ಠಿಕ ಬ್ರಹ್ಮಚರ್ಯ ದಿಂದ ವಿದ್ಯಾಭ್ಯಾಸವನ್ನು ಪೂರಯಿಸಿ ಗುರ್ವಾಜ್ಞೆಯಂತೆ ಸಮಾವೃತರಾದ ಮೇಲೆ ಸಮಾನ ವರ್ಣದ ಯೋಗ್ಯ ವಧುವನ್ನು ಮದುವೆಯಾಗಿ ಗಾರ್ಹಸ್ಥ ಧರ್ಮದಂತೆ ಆಚರಿಸುವರು; ಆ ಆಶ್ರಮದಲ್ಲಿ ಅವರು ಅತಿಥಿಸೇವೆ, ಗೋಸೇವೆ, ಅಗ್ನಿಸೇವೆ, ಅನಾಥತೃಪ್ತಿ ಪಶು–ಪಕ್ಷಿ ಮೊದಲಾದವುಗಳ ತೃಪ್ತಿ ಇವುಗಳಿಂದ ಸುಕೃತ ಸಂಪಾದಿಸಿದವರಾಗಿ ಭೂತದಯೆಯಿಂದ ಜಗತ್ತಿನಲ್ಲಿ ನಿಷ್ಕಂಟಕವಾದ ಕೀರ್ತಿಯನ್ನು ಸಂಪಾದಿಸುವರು. ಪರಲೋಕವಿರುದ್ಧವಾದ ಐಹಿಕ ಸುಖವನ್ನು ಪರಿತ್ಯಜಿಸಿ, ಕೇವಲ ವೈರಾಗ್ಯದಿಂದ ಪರಮಾರ್ಥ ಪರಾಯಣರಾಗಿಯೇ ಜೀವಿಸುವರು. ಪ್ರಸಂಗದಲ್ಲಿ ರಾಜಕಾರಣದಲ್ಲಿಯೂ ಇವರು ಲೋಕೋತ್ತರ ಸಹಾಯ ಮಾಡಿದರು. ಪರೋಪಕಾರವು ಇವರ ಕುಲವ್ರತವಾಗಿರುವದು. ಪರರಿಂದ ಸನ್ಮಾನ ಹೊಂದುವದು ಇವರಿಗೆ ವಿಷಪ್ರಾಯವಾಗಿರುವದು. ಈ ಗಾರ್ಹಸ್ಥಾಶ್ರಮದ ಮುಂದಿನ ಆಶ್ರಮವು ವಾನಪ್ರಸ್ಥವು. ಈ ಆಶ್ರಮಕ್ಕಾಗಿ ಬ್ರಾಹ್ಮಣರು ಧರ್ಮಪತ್ನಿಯಿಂದಲೂ, ಅಗ್ನಿಹೋತ್ರದಿಂದಲೂ ಕೂಡಿ ಪುಣ್ಯಾರಣ್ಯವನ್ನು ಸೇರುವರು. ಅಲ್ಲಿಯಾದರೂ ಗೆಡ್ಡೆಗೆಣಸುಗಳ ಯುಕ್ತಾಹಾರದಿಂದ ಪರ್ಣಕುಟೀರದಲ್ಲಿ ವಾಸಿಸಿ, ದಿನಾಲು ಬ್ರಹ್ಮಚಿಂತನೆಯಿಂದಲೂ,

ವಿದ್ಯಾದಾನದಿಂದಲೂ, ವೇದಾರ್ಥ ವಿವೇಚನೆಯಿಂದಲೂ, ಗೋಸೇವೆಯಿಂದಲೂ ಶೇಷಾಯುಷ್ಯವನ್ನು ಕಳೆಯುವರು. ಹೀಗೆ ಬ್ರಾಹ್ಮಣರು ತಾವು ಜ್ಞಾನಸಾಮ್ರಾಜ್ಯದಲ್ಲಿ ಮಗ್ನರಾದರೂ ಲೋಕೋಪಕಾರಕ್ಕಾಗಿ ಆರೋಗ್ಯ, ನೀತಿ, ಭೂಗೋಲ, ಖಗೋಲ ಮೊದಲಾದ ವಿಷಯಗಳ ಸಂಬಂಧದ ಗ್ರಂಥಗಳನ್ನು ರಚಿಸಿ, ತಮ್ಮ ಶಿಷ್ಯರ ಮುಖಾಂತರ ಎಲ್ಲ ಕಡೆಗೂ ಅವುಗಳ ಪ್ರಸಾರ ಮಾಡಿದರು. ಪ್ರಚಂಡವಾದ ತಮ್ಮ ಯೋಗಸಾಮರ್ಥ್ಯದಿಂದ ಭೂತ– ಭವಿಷ್ಯ–ವರ್ತಮಾನ ಕಾಲದ ಎಲ್ಲ ವಿಷಯಗಳನ್ನು ಸಾಕ್ಷಾತ್ಕರಿಸಿಕೊಂಡು, ಆ ಆ ಕಾಲಗಳ ಸಂಕೇತಕ್ಕೆ ವಿರೋಧವಾಗದಂತೆ ವ್ಯವಹರಿಸಿ ಸುಖಿಗಳಾದರು. ಹೀಗೆ ನಿರುಪದ್ರವಿಗಳಾಗಿ ವರ್ತಿಸಿದ ಪ್ರಾಚೀನ ಬ್ರಾಹ್ಮಣರು ಮಾಡಿರುವ ಅಂಥ ಅಪರಾಧವೇನು?

ತಿರುವೇಂಕಟಾ, ಇಂಥ ನಿರುಪದ್ರವಿಗಳೂ, ಪರೋಪಕಾರಿಗಳೂ ಆದ ಋಷಿ ಕಾಲದ ಬ್ರಾಹ್ಮಣರು ತಮ್ಮ ಜಾತಿಯ ಉತ್ಕರ್ಷಕ್ಕಾಗಿ ಬ್ರಹ್ಮವಿದ್ಯಾ ಪ್ರತಿಪಾದಕವಾದ ಅನೇಕ ಪ್ರಬಂಧಗಳನ್ನು ರಚಿಸಿ, ಅವನ್ನು ತಮ್ಮ ತಮ್ಮ ವಿದ್ಯಾರ್ಥಿಗಳಿಗೆ ಬೋಧಿಸಿ, ಅವರನ್ನು ಬುದ್ಧಿಶಾಲಿಗಳನ್ನಾಗಿ ಮಾಡಿದರೆಂಬದೇನೋ ನಿಜ. ಅದರಂತೆ ಕ್ಷತ್ರಿಯ ಮೊದಲಾದ ವರ್ಣದವರ ಕಲ್ಯಾಣಕ್ಕಾಗಿಯಾದರೂ ಗ್ರಂಥಗಳನ್ನು ಮಾಡಿಟ್ಟಿರುವರು. ಇವರು ಕ್ಷತ್ರಿಯರ ಸಲುವಾಗಿ ದಂಡನೀತಿಯೆಂಬ ಒಂದು ದೊಡ್ಡ ಪ್ರಬಂಧವನ್ನು ಬರೆದಿಟ್ಟಿರುವರಷ್ಟೆ? ಈ ಪ್ರಬಂಧದ ನೂರರಲ್ಲಿಯ ಒಂದು ಭಾಗವನ್ನಾದರೂ ಪರದೇಶದವರ ನೀತಿ ಗ್ರಂಥಗಳು ಸರಿಗಟ್ಟಲಾರವು. ಹೀಗೆ ಉಭಯಲೋಕಸಮ್ಮತವಾಗಿ ನೀತಿಶಾಸ್ತ್ರವನ್ನು ರಚಿಸಿದ ಭಗವಾನ್ ವ್ಯಾಸ–ನಾರದ–ಘಟಕರ್ಪರ–ಕಾಮಂದಕ–ಶುಕ್ರ–ಚಾಣಕ್ಯ ಮುಂತಾದ ಮಹಾತ್ಮರು ಬ್ರಾಹ್ಮಣರೇ ಅಲ್ಲವೆ ? ಹೀಗೆಯೇ ಯುದ್ಧದ ಕೌಶಲ್ಯವನ್ನೂ, ತೋಪು–ತುಬಾಕಿಗಳ ರಚನಾತ್ಮಕ ಯುಕ್ತಿಯನ್ನೂ, ಶಸ್ತ್ರಾಸ್ತ್ರಗಳ ಪ್ರಯೋಗವನ್ನೂ, ಮದ್ದು–ಬಾಣಗಳ ವಿನಿಯೋಗವನ್ನೂ ಸಪ್ರಮಾಣವಾಗಿ ಕಲ್ಪಿಸಿ ಕ್ಷಾತ್ರತೇಜವನ್ನು ಬೆಳಗಿದ ಶುಕ್ರಾಚಾರ್ಯ ಮೊದಲಾದ ತೇಜಸ್ವಿಗಳು ಬ್ರಾಹ್ಮಣರೇ ಅಲ್ಲವೆ?

ತಿರುವೇಂಕಟಾ, ಇದರಂತೆ ವೈಶ್ಯರಿಗಾದರೂ ಅವರ ಧರ್ಮೋಚಿತವಾದ ಪ್ರಬಂಧಗಳನ್ನು ಬ್ರಾಹ್ಮಣರು ರಚಿಸಿಯೇ ಇಟ್ಟಿರುವರು. ಬೃಹದ್ರಥನೆಂಬ ರಾಜನಿಗೆ ದನಕರುಗಳ ಲಕ್ಷಣವನ್ನು ಹೇಳಿ, ಅವುಗಳ ವಿಷಯ ಶಾಸ್ತ್ರವನ್ನು ನಿರ್ಮಿಸಿದ ಭಗವಾನ್ ಪರಾಶರನೂ, ಅಶ್ವಲಕ್ಷಣ ಶಾಸ್ತ್ರೋತ್ಪಾದಕನಾದ ಶಾಲಹೋತ್ರನೂ, ಗಜಲಕ್ಷಣವನ್ನೂ, ಆಯುರ್ವೇದವನ್ನೂ ರಚಿಸಿದ ಪಾಲಕಾಪ್ಯ ಮುನಿಯೂ ಕೃಷಿಕರ್ಮೋಪಯೋಗಕ್ಕಾಗಿ ಭೂಪರೀಕ್ಷಾ ಶಾಸ್ತ್ರವನ್ನೂ, ಭೂಗರ್ಭ ಲಕ್ಷಣವನ್ನೂ ಬರೆದಿಟ್ಟಿರುವ ಸಾಂಹಿತಿಕರೂ ಇವರೆಲ್ಲ ಬ್ರಾಹ್ಮಣ ಜಾತಿಯವರೇ ಎಂಬದನ್ನು ನೆನಪಿನಲ್ಲಿಡು. ಇದರಂತೆ ವೃಕ್ಷಾಯುರ್ವೇದವನ್ನಾದರೂ ಬ್ರಾಹ್ಮಣರೇ ರಚಿಸಿರುವರು. ಇವರ ಈ ಶಾಸ್ತ್ರಗಳನ್ನೇ ಪರದೇಶದವರು ಅನುಸರಿಸಿರುವರು.

ತಿರುವೇಂಕಟಾ, ಇನ್ನು ಶೂದ್ರಜಾತಿಯವರ ಸಲುವಾಗಿ ಬ್ರಾಹ್ಮಣರು ಯಾವ ಯಾವ ಗ್ರಂಥಗಳನ್ನು ರಚಿಸಿದರೆಂಬದನ್ನು ಹೇಳುವೆನು ಕೇಳು. ಗಾನ–ನರ್ತನಾದಿಗಳಿಂದ

ಉಪಜೀವಿಸುವ ವೇಶ್ಯಾಂಗನೆಯರ ಸಲುವಾಗಿ ನೃತ್ಯ ಶಾಸ್ತ್ರವನ್ನೂ, ತೈಲವಿಕ್ರಯಿಗಳಾದ ಗಾಣಿಗ ಮೊದಲಾದ ಜಾತಿಯವರಿಗಾಗಿ ಕುಸುಬೆ ಮೊದಲಾದ ಧಾನ್ಯಗಳಿಂದ ಹಾಗು ಜಾಜಿಮಲ್ಲಿಗೆ–ಗುಲಾಬಿ ಮೊದಲಾದ ಹೂಗಳಿಂದ ಎಣ್ಣೆ ತೆಗೆಯುವ ಕ್ರಮವನ್ನೂ, ನೇಕಾರರ ಸಲುವಾಗಿ ನೇಗಿಯ ಕ್ರಮವನ್ನೂ, ಬಡಿಗತನದ ವಿವಿಧಾಯುಧಗಳನ್ನೂ, ಅವುಗಳ ಉಪ ಯೋಗವನ್ನೂ, ಚಿತ್ರ–ಗಾಯನಾದಿ ಉಳಿದ ಎಷ್ಟೋ ಶಾಸ್ತ್ರಗಳನ್ನೂ, ಅಲೇಖ್ಯ ಶಾಸ್ತ್ರವನ್ನೂ ಪರೋಪಕಾರಿಗಳಾದ ಬ್ರಾಹ್ಮಣೋತ್ತಮರೇ ತಮ್ಮ ಅಸಾಧಾರಣವಾದ ಬುದ್ಧಿ ಸಾಮರ್ಥ್ಯ ದಿಂದ ರಚಿಸಿದರು. ಬಹಳ ಹೇಳುವದೇನು? ಈ ಭರತಖಂಡದಲ್ಲಿ ಬ್ರಾಹ್ಮಣರು ಸರ್ವೋಪ ಯೋಗವಾಗುವಂತೆ ರಚಿಸದೆಯಿದ್ದ ಅಂಥ ಶಾಸ್ತ್ರವೇ ಉಳಿಯಲಿಲ್ಲ !!

ತಿರುವೇಕಂಟಾ, ಹೀಗೆ ಬ್ರಾಹ್ಮಣರು ಸರ್ವಶಾಸ್ತ್ರ ಕರ್ತಾರರಾಗಿದ್ದರೂ ಇವರು ''ಸ್ವಧರ್ಮೇನಿಧನಂ ಶ್ರೇಯಃ'' ಎಂಬ ಭಗವದುಕ್ತಿಯಂತೆ, ಪವಿತ್ರವಾದ ವೇದೋಕ್ತ ಕರ್ಮಗಳಲ್ಲಿಯೇ ಅಧಿಕೃತರಾಗಿದ್ದರಲ್ಲದೆ, ಹೀನ ವರ್ಣದವರ ವೃತ್ತಿಯು ಎಷ್ಟು ಉಜ್ವಲವಾಗಿದ್ದರೂ, ಎಷ್ಟು ಸಂಪದುತ್ಪಾದಕವಾಗಿದ್ದರೂ ಅದನ್ನು ಕಣ್ಣೆತ್ತಿ ನೋಡಲಿಲ್ಲ. ಒಟ್ಟಿನಲ್ಲಿ ಬ್ರಾಹ್ಮಣರು ತಾವು ವಿವಿಧ ಉದ್ಯೋಗಪ್ರವರ್ತಕರಾಗಿದ್ದರೂ ಅನ್ಯವರ್ಣದವರ ಉದ್ಯೋಗಗಳನ್ನು ತಾವು ಕೈಕೊಂಡು ಅವರ ಹೊಟ್ಟೆಯ ಮೇಲೆ ಕಾಲುಕೊಟ್ಟದ್ದು ಸ್ಪಷ್ಟವಾಗಿ ಕಂಡುಬರಲಾರದು. ''ಉದಾರಚರಿತಾನಾಂತು ವಸುದೈವ ಕುಟುಂಬಕಂ'' ಎಂಬಂತೆ ಸಚ್ಚರಿತ್ರರಾದ ಇವರಿಗೆ ಸಕಲ ಜಗತ್ತೇ ಆತ್ಮರೂಪಿಯಾಗಿ ಕಾಣುವದರಿಂದ, ಅವರು ಎಲ್ಲರನ್ನೂ ತಮ್ಮ ಕುಟುಂಬದವರನ್ನಾಗಿಯೇ ತಿಳಿದುಕೊಂಡಿದ್ದರು. ಇಂಥ ಭಗವದ್ಭಕ್ತರ ಚಿತ್ತದಲ್ಲಿ ದ್ವೇಷ–ಮಾತ್ಸರ್ಯಗಳಿಗೆ ಆಸ್ಪದವು ದೊರೆಯುವದಾದರೂ ಹೇಗೆ ? ಬ್ರಾಹ್ಮಣರು ಜನರ ಹಿತಕ್ಕಾಗಿ ವಾಸ್ತು ಶಾಸ್ತ್ರವನ್ನು ರಚಿಸಿ ತಾವು ಹುಲ್ಲುಗುಡಿಸಲಲ್ಲಿ ವಾಸಿಸಿದರು; ಸುಗಂಧ ದ್ರವ್ಯಗಳ ವಿಷಯದ ಬಗೆಬಗೆಯ ಯುಕ್ತಿಗಳನ್ನು ಹುಡುಕಿದ ಬ್ರಾಹ್ಮಣರ ಅಂಗರಾಗವು ಮಂತ್ರಪೂರಿತವಾದ ಬಿಳಿಯ ಬೂದಿಯಾಗಿತ್ತು. ಅಕ್ಕಸಾಲಿಗರ ಜೀವನವೃತ್ತಿಗಾಗಿ ಬಗೆಬಗೆಯ ಅಲಂಕಾರ ರಚನೆಯ ಕ್ರಮವನ್ನರುಹಿದ ಬ್ರಾಹ್ಮಣರ ಅಲಂಕಾರಗಳು ರುದ್ರಾಕ್ಷಮಾಲೆ ಗಳಾಗಿರುವವು. ಬಗೆಬಗೆಯ ಸುಂದರ ಸೂಕ್ಷ್ಮ ವಸ್ತ್ರಗಳನ್ನು ಸಿದ್ಧಪಡಿಸುವ ಯುಕ್ತಿಯನ್ನು ಕಂಡುಹಿಡಿದ ಬ್ರಾಹ್ಮಣರ ವಸ್ತ್ರಗಳು ಉರುಟಾದ ಬಟ್ಟೆಗಳಾಗಿದ್ದವು. ಎಲ್ಲ ಉದ್ಯೋಗಗಳ ತಾಯಿಯೆನಿಸುವ ಒಕ್ಕಲತನದ ಶೋಧಮಾಡಿದ ಬ್ರಾಹ್ಮಣರ ಆಹಾರಗಳು ಅಡವಿಯ ರಾಗಿ ಮೊದಲಾದ ತೃಣಧಾನ್ಯಗಳೂ, ಗಡ್ಡೆ–ಬೇರುಗಳೂ ಆಗಿದ್ದವು. ತಿರುವೇಂಕಟಾ, ಇದರ ಮೇಲಿಂದ ಬ್ರಾಹ್ಮಣ ಋಷಿಗಳು ಎಂಥ ನಿಸ್ಪೃಹರೆಂಬದನ್ನು ನೀನೇ ಮನಸ್ಸಿನಲ್ಲಿ ತಂದುಕೋ. ಬಹಳ ದೂರವೇಕೆ, ಅಲ್ಪ ಕಾರಣಕ್ಕಾಗಿ ನವನಂದರ ರಾಜ್ಯವನ್ನು ಮಣ್ಣುಗೂಡಿಸಿ, ಚಂದ್ರ ಗುಪ್ತನೆಂಬ ಅನಾಥ ಹುಡುಗನಿಗೆ ರಾಜ್ಯಪದವಿಯನ್ನೊದಗಿಸಿಕೊಟ್ಟ ಮಹಾತೇಜಸ್ವಿಯಾದ ಚಾಣಕ್ಯ ಬ್ರಾಹ್ಮಣನ ಗುಡಿಸಲಿನಲ್ಲಿ ಏನಿದ್ದವು ? ಅಗ್ನಿಹೋತ್ರಕ್ಕಾಗಿ ಸಮಿಧದ ಪಂಡೆ,

ಸಗಣೆಯ ಉಂಡೆ, ನಾರಬಟ್ಟೆ ಇವೇ ಮೊದಲಾದವು ಇದ್ದವು; ಆದರೆ ರಾಜ್ಯಭೋಗವನ್ನು ಭೋಗಿಸಲು ಮನಸ್ಸು ಮಾಡಿದ್ದರೆ ಆ ಮಹಾತ್ಮನಿಗೆ ಅಸಾಧ್ಯವಿತ್ತೇ ? ನಿಜವಾದ ಬ್ರಾಹ್ಮಣನ ಧರ್ಮವೇ ವಿಲಾಸ ಭೋಗಿಸುವದಲ್ಲ; ಹಾಗೆ ವಿಲಾಸಗಳನ್ನು ಭೋಗಿಸುವವನು ನಿಜವಾದ ಬ್ರಾಹ್ಮಣನೇ ಅಲ್ಲ; ಅಂಥ ವಿಲಾಸಭೋಗಿಗಳನ್ನು ನೋಡಿ ಅವರ ಆಚರಣೆಯ ಹುಳುಕು ಹೊರಡಿಸಿ ಇಡಿಯ ಬ್ರಾಹ್ಮಣ ಸಮಾಜವನ್ನೇ ದ್ವೇಷಿಸಿದರೆ ಎಂಥ ಎಂಥ ವಿಭೂತಿಗಳನ್ನು ದ್ವೇಷಿಸಿದ ಮಹಾಪಾಪಕ್ಕೆ ಗುರಿಯಾಗಬೇಕಾಗುತ್ತದೆಂಬದನ್ನು ಮನಸ್ಸಿನಲ್ಲಿ ತಂದುಕೊಂಡು ಎಚ್ಚರಾಗು ತಿರುವೇಂಕಟಾ. ದೂರವೇಕೆ, ಅಜ್ಞಾನದಿಂದ ನೀನು ದ್ವೇಷಿಸುತ್ತಿರುವ ಮಹಾತ್ಮರಾದ ಮಾಧವಾಚಾರ್ಯರ ನಿಸ್ಪೃಹವೃತ್ತಿಯನ್ನೇ ಕಣ್ಣು ತೆರೆದು ನೋಡಿದರೆ ನಿಮಗೆ ಚೆನ್ನಾಗಿ ಬುದ್ಧಿ ಬರುವಹಾಗಿದೆ !

ತಿರುವೇಂಕಟ–ಆರ್ಯವರ, ತಮ್ಮ ಸದ್ಬೋಧದಿಂದ ನನ್ನ ಅಜ್ಞಾನವು ದೂರ ವಾಗುತ್ತಿರುವದು; ಆದರೂ ನನಗಿರುವ ಸಂಶಯಗಳನ್ನು ಕೇಳಿಕೊಳ್ಳದೆ ಇರಲಾರೆನು. ಬ್ರಾಹ್ಮಣರು ಆಯಾ ವರ್ಣಗಳ ಹಿತಮಾಡಿದರೆಂಬದನ್ನು ನಿಮ್ಮ ಮಾತಿನಿಂದ ಒಪ್ಪಿಕೊಂಡರೂ, ಶೂದ್ರರಿಗೆ ವೇದಾಧಿಕಾರ ಇಲ್ಲೆಂತಲೂ, ಶೂದ್ರರು ಮೇಲಿನ ಮೂರು ವರ್ಣದವರ ಸೇವಾವೃತ್ತಿ ಯನ್ನು ಮಾಡಿಕೊಂಡಿರಬೇಕೆಂತಲೂ ವಿಧಿಸಿದ್ದರಿಂದ ಶೂದ್ರವರ್ಗವನ್ನು ಬ್ರಾಹ್ಮಣರು ಹಿಂದೆಗೆಡವಿದರೆಂದು ಹೇಳಿದ ಹಾಗಾಗುವದಿಲ್ಲವೆ?

ವಿರೂಪಾಕ್ಷಾರ್ಯ–ತಿರುವೇಂಕಟಾ, ಶ್ರುತಿಯೇ ಶೂದ್ರರಿಗೆ ಉಪನಯನಾಧಿಕಾರವೂ, ವೇದಾಧಿಕಾರವೂ ಇಲ್ಲೆಂದು ಹೇಳುವಾಗ ಕೇವಲ ಶ್ರುತಿಯ ಅನುಸರಣ ಮಾಡುವ ಬ್ರಾಹ್ಮಣರು ಏನು ಮಾಡಬೇಕು? ಈಶ್ವರವಾಣಿಯೆನಿಸುವ ಶ್ರುತಿಯ ವಿರುದ್ಧವಾಗಿ ಬ್ರಾಹ್ಮಣರು ಹ್ಯಾಗೆ ಹೇಳಬೇಕು? ಬ್ರಾಹ್ಮಣ–ಕ್ಷತ್ರಿಯ–ವೈಶ್ಯ ಎಂಬ ತ್ರೈವರ್ಣಿಕರ ಸೇವೆಯನ್ನು ಶೂದ್ರರು ಮಾಡಬೇಕೆಂದು ಹೇಳಿರುವದರಿಂದ ಶೂದ್ರರ ಹಿಂದುಳಿಯೋಣಕ್ಕೆ ಕೇವಲ ಬ್ರಾಹ್ಮಣರೇ ಕಾರಣವಾಗಿರದೆ ಕ್ಷತ್ರಿಯರೂ, ವೈಶ್ಯರೂ ಕಾರಣವಾಗಿರುವರೆಂದು ಹೇಳಬೇಕಾಗುವದು; ಅಂದಬಳಿಕ ಈ ತಪ್ಪಿಗಾಗಿ ಬ್ರಾಹ್ಮಣರೊಬ್ಬರನ್ನೇ ಗುರಿಮಾಡುವ ದೇಕೆ? ಇನ್ನು ಸೇವಾ ವೃತ್ತಿಯಲ್ಲಿ ಯಾದರೂ ಅಂಥ ಅಧಃಪತನವೇ ನಿರುತ್ತದೆಂಭದನ್ನು ವಿಚಾರಮಾಡೋಣ. ಸಾತ್ವಿಕರಾದ ಬ್ರಾಹ್ಮಣ ಸೇವಕರಾದ ಶೂದ್ರರೂ ಸಾತ್ವಿಕವೃತ್ತಿಯನ್ನು ಪಡೆದು ಆತ್ಮೋನ್ನತಿ ಯನ್ನು ಪಡೆಯುವರೆಂಬದಕ್ಕೆ ನಾರದರೇ ಉದಾಹರಣವಾಗಿರುವರು. ನಾರದರು ಜನ್ಮಾಂತರದಲ್ಲಿ ಶೂದ್ರರಿದ್ದು ಮಹಾತ್ಮರಾದ ಬ್ರಾಹ್ಮಣ ಋಷಿಗಳ ಸೇವೆಯಿಂದ ಅವರಿಗೆ ಬ್ರಾಹ್ಮಣ ಜನ್ಮವು ಪ್ರಾಪ್ತವಾಯಿತೆಂದು ಶ್ರೀಮದ್ಭಾಗವತದಲ್ಲಿ ಹೇಳಿರುವದು. ಬ್ರಾಹ್ಮಣರು ಬಲಾತ್ಕಾರದಿಂದ ಶೂದ್ರರಿಂದ ಸೇವೆಯನ್ನು ತಕ್ಕೊಳ್ಳುತ್ತಿದ್ದರಂತಲ್ಲ, ಅವರಿಗೆ ಸಂತೋಷದಿಂದ ತಕ್ಕ ಪ್ರತಿಫಲವನ್ನು ಕೊಟ್ಟು ಸೇವೆ ಮಾಡಿಸಿಕೊಳ್ಳುತ್ತಿದ್ದರು. ಅದರಂತೆ ಕ್ಷತ್ರಿಯರ ಸೇವೆಯನ್ನು ಮಾಡುವ ಶೂದ್ರರೂ ತಕ್ಕ ವೇತನವನ್ನು ಪಡೆದು ದಂಡಾಳುಗಳೂ, ಸೇನಾಧಿಕಾರಿಗಳೂ ಆಗುತ್ತಿದ್ದರು. ಅದರಂತೆ ವೈಶ್ಯರ ಸೇವೆಯನ್ನು ಮಾಡುತ್ತಿರುವ ಶೂದ್ರರೂ ತಕ್ಕ ವೇತನವನ್ನು ಪಡೆದು ಒಕ್ಕಲತನ, ವ್ಯಾಪಾರ,

ಬಡ್ಡಿಯ ವ್ಯವಹಾರ, ಗೋರಕ್ಷಣ ಮುಂತಾದ ವೈಶ್ಯರ ಕೆಲಸಗಳಲ್ಲಿ ಸಹಾಯಕರಾಗುತ್ತಿದ್ದರು. ಈ ತ್ರೈವರ್ಣಿಕರು ಶೂದ್ರರನ್ನು ಕೇವಲ ಕಸಮುಸರೆ ಗಾಗಿಯೇ ಹಚ್ಚುತ್ತಿದ್ದರಂತಲ್ಲ; ಬೇರೆ ಬೇರೆ ಗೌರವದ ಕೆಲಸಗಳನ್ನೂ ಅವರಿಗೆ ಮಾಡಗೊಡುತ್ತಿದ್ದರು. ತಿರುವೇಂಕಟಾ, ಈಗ ನೀನು ಮುಸಲ್ಮಾನರ ಸೇನಾಪತಿ ಯಾಗಿರುವದರಿಂದ ಕ್ಷತ್ರಿಯರ ಸೇವಕನಾದ ಹಾಗಾಯಿತು; ಇದರಿಂದ ನಿನ್ನ ಅಧಃಪತನ ವಾಯಿತೆಂದು ತಿಳಿಯುವೆಯೋ? ಹಾಗೆ ತಿಳಿದಿದ್ದರೆ, ಸ್ವದೇಶದ್ರೋಹ ಮಾಡಿ ಯವನರ ಸೇವೆಯಿಂದ ಒಂದು ಸಂಸ್ಥಾನದ ಅಧಿಪತಿಯಾಗಲು ಯತ್ನಿಸುವೆಯಾಕೆ? ಆ ಆಧಿಪತ್ಯವು ಸೇವೆಯಿಂದಲೇ ಸಂಪಾದಿತವಾದದ್ದಾಗುವದಿಲ್ಲವೆ? ಸೈನ್ಯದ ಸಣ್ಣ ದೊಡ್ಡ ಉದ್ಯೋಗಸ್ಥರೂ, ರಾಜಕಾರಣದ ಸಣ್ಣ ದೊಡ್ಡ ಉದ್ಯೋಗಸ್ಥರೂ ತಮ್ಮ ತಮ್ಮ ಯೋಗ್ಯತೆಗೆ ತಕ್ಕ ಪ್ರತಿಫಲವನ್ನು ಪಡೆದು ಸ್ವಸಂತೋಷದಿಂದ ಸೇವೆಮಾಡುವವರಾಗಿರುವರಲ್ಲವೆ? ಎಷ್ಟೋ ಶೂದ್ರ ಜಾತಿಯ ರಾಜರೂ ಆಗಿರುವದನ್ನು ಪುರಾಣಗಳು ಹೇಳುತ್ತಿರುವಾಗ, ಬ್ರಾಹ್ಮಣರು ಶೂದ್ರರಿಗೆ ಸೇವಾಧರ್ಮವನ್ನು ವಿಧಿಸಿ ಅಧಃಪತನವನ್ನೇನು ಮಾಡಿರುವರು? ಎಲ್ಲರೂ ಪಲ್ಲಕ್ಕಿಯಲ್ಲಿ ಕೂಡ್ರುವವರಾದರೆ ಪಲ್ಲಕ್ಕಿ ಹೊರವವರಾರೆಂಬಂತೆ, ಈ ಜಗತ್ತು ನಿಚೋಚ್ಚವಾದ ವಿವಿಧ ತರಗತಿಗಳಿಂದ ತುಂಬಿ ದ್ದಾಗಿರುವದು; ಅಂದಬಳಿಕ ಅವರವರ ಸ್ಥಿತಿ–ಗತಿಗನುಸರಿಸಿ ಜಗತ್ತಿನಲ್ಲಿ ಕೆಲವರು ಉಚ್ಚರೂ ಕೆಲವರು ನೀಚರೂ ಆಗುವದುಂಟು. ಆ ತಪ್ಪಿಗೆಲ್ಲ ಬ್ರಾಹ್ಮಣರೇ ತಪ್ಪುಗಾರರೋ? ವೇದಾಧಿಕಾರವಿಲ್ಲದ್ದರಿಂದ ಶೂದ್ರರ ಅಧಃಪತನವಾಯಿತೆಂಬ ನಿನ್ನ ಮಾತಾದರೂ ನನಗೆ ವಿಲಕ್ಷಣವಾಗಿ ತೋರುತ್ತದೆ. ವೇದಾಧ್ಯಯನವನ್ನು ಸರ್ವಸಂಗಪರಿತ್ಯಾಗ ಪೂರ್ವಕ ಗುರು ಸೇವೆಯಿಂದ ಮಾಡಬೇಕಾಗುವದಲ್ಲದೆ, ಚಕ್ಕಂದದ ಊಟ–ಉಡಿಗೆಗಳಿಂದ ಲೋಲಾಡುತ್ತ ಮಾಡಬೇಕಾಗುವದಿಲ್ಲ. ಹೀಗೆ ವೈರಾಗ್ಯದಿಂದ ಮಾಡುವ ವೇದಾಧ್ಯಯನವನ್ನು ವೈರಾಗ್ಯವು ದೃಢವಾಗುವದಕ್ಕಾಗಿಯೇ ಮಾಡಬೇಕಾಗುತ್ತದೆ; ಅಂದಬಳಿಕ ಐಶ್ವರ್ಯಕ್ಕಾಗಿ ಜೋತು ಕುಳಿತವರಿಗೆ ವೇದಾಧ್ಯಯನದಿಂದಾಗುವ ಪ್ರಯೋಜನವೇನು? ವೇದತ್ರಯಿಯು ಪ್ರತ್ಯಕ್ಷವಾಗಿ ಯಾವ ಉದ್ಯೋಗವನ್ನೂ ಕಲಿಸುವದಿಲ್ಲ; ಅದರಂತೆ ಸಂಪತ್ತನ್ನು ಹೆಚ್ಚಿಸುವ ಯಾವ ಉಪಾಯವನ್ನೂ ಸೂಚಿಸುವದಿಲ್ಲ; ಅಂದಬಳಿಕ ಸಾಂಪತ್ತಿಕ ದೃಷ್ಟಿಯಿಂದ ಪ್ರಗತಿಯನ್ನು ಇಚ್ಛಿಸುವ ನಿಮ್ಮಂಥವರು, ನಿವೃತ್ತಿಪ್ರಧಾನವೆನಿಸುವ ವೇದಾಧ್ಯಯನವನ್ನು ಮುಂದೆ ಮಾಡಿ, ಅದರ ಅಧಿಕಾರವಿಲ್ಲದ್ದರಿಂದ ಶೂದ್ರರು ಹಿಂದೆ ಬಿದ್ದರೆಂದು ಹೇಳುವದು ನಗೆಬರುವ ಮಾತಾಗಿರುತ್ತದೆ. ನಿಜವಾಗಿ ವೇದಾಧ್ಯಯನ ಮಾಡುವ ಬ್ರಾಹ್ಮಣನು ಬಡವನಾಗಿಯೇ ಇರಬೇಕು. ಐಶ್ವರ್ಯಸಂಪನ್ನ ಬ್ರಾಹ್ಮಣರ ಬ್ರಹ್ಮವೃತ್ತಿಯು, ಕ್ಷತ್ರಿಯ–ವೈಶ್ಯ–ಶೂದ್ರವೃತ್ತಿಗಳಿಂದ ಕಲುಷಿತವಾಗಿರುವ ಸಂಭವವು ವಿಶೇಷವಾಗಿರುತ್ತದೆ; ಅಂದಬಳಿಕ ಪ್ರವೃತ್ತಿಯ ದೃಷ್ಟಿಯಿಂದ ದರಿದ್ರನಾಗಿದ್ದ ಬ್ರಾಹ್ಮಣನು, ತನ್ನ ದಾರಿದ್ರ್ಯವನ್ನು, ಅಂದರೆ ನಿಸ್ಪೃಹವೃತ್ತಿಯನ್ನು ಸಂಪಾದಿಸುವದಕ್ಕಾಗಿ ಆಚಾರಪೂರ್ವಕ ವೇದಾಧ್ಯಯನ ಮಾಡಬೇಕಾಗಿರಲು ಇಂಥ ವೇದಾಧ್ಯಯನವನ್ನು ಬ್ರಾಹ್ಮಣರು ತಾವು ಮಾಡದೆ ಶೂದ್ರ ಜಾತಿಯ ಕೊರಳಲ್ಲಿ ಕಟ್ಟಿ ತಾವು ಬೇರೆ ಬೇರೆ ಉದ್ಯೋಗಗಳನ್ನು ಕೈಕೊಂಡು ಶ್ರೀಮಂತರಾಗಿದ್ದರೆ, ಒಂದು ವಿಧದಿಂದ

ಬ್ರಾಹ್ಮಣರು ಆಸ್ಥಾನದಲ್ಲಿ ವೇದಾಧ್ಯಯನ ಪ್ರಚಾರವನ್ನಿಟ್ಟು ಸಮಾಜದಲ್ಲಿ ಅನವಸ್ಥೆ ಯನ್ನುಂಟುಮಾಡಿದರೆಂದು ಹೇಳಬಹುದಾಗಿತ್ತು. ತಿರುವೇಂಕಟಾ, ಈ ಭರತಭೂಮಿಯ ಮೇಲೆ ಗ್ರೀಕ, ಶಕ, ಯವನಾದಿ ಪರದೇಶದ ಭಯಂಕರ ದಾಳಿಗಳು ಎಷ್ಟು ಬಂದವೆಂಬದನ್ನೂ, ಒಂದೊಂದು ಕಾಲದಲ್ಲಿ ಭಾರತೀಯರು ಜೀವದಿಂದಿರುವದೇ ಕಷ್ಟವಾಗುತ್ತಿತ್ತೆಂಬದನ್ನೂ, ಭಾರತದ ಗ್ರಂಥ ಭಾಂಡಾರವು ಎಷ್ಟು ನಾಶವಾಯಿತೆಂಬದನ್ನೂ ಮನಸ್ಸಿನಲ್ಲಿ ತಂದರೆ, ಬ್ರಾಹ್ಮಣರು ಅಂಥ ಕಷ್ಟಕಾಲದಲ್ಲಿಯೂ ತಮ್ಮ ವೇದಾದಿ ಗೌರವದ ಗ್ರಂಥಗಳನ್ನು ನಿಸ್ಪೃಹವೃತ್ತಿಯಿಂದ ಬಾಯಿಪಾಠ ಮಾಡಿ ಈವೊತ್ತಿಗೂ ಅವನ್ನು ಕಾಯ್ದುಕೊಂಡದ್ದಕ್ಕಾಗಿ ಪ್ರತಿ ಒಬ್ಬ ಭರತಖಂಡದ ನಿವಾಸಿಯು ಬ್ರಾಹ್ಮಣರ ಶ್ರುತ್ಯಭಿಮಾನಕ್ಕಾಗಿ ಅವರನ್ನು ಗೌರವಿಸಬೇಕಾಗುವದು. ಇದೇ ಕಾರ್ಯವನ್ನು ಕ್ಷತ್ರಿಯರೂ, ವೈಶ್ಯರೂ ವೇದಾಧಿಕಾರವುಳ್ಳವ ರಾದ್ದರಿಂದ ಮಾಡಬಹುದಾಗಿತ್ತು; ಆದರೆ ಈ ತ್ರಾಸದಾಯಕ ಕಾರ್ಯವು ಅವರಿಂದ ಎಷ್ಟರಮಟ್ಟಿಗೆ ನೀಗಿರುವದೆಂಬದನ್ನು ಈಗಿನ ಕ್ಷತ್ರಿಯ–ವೈಶ್ಯ ವರ್ಣದವರ ನಿಜವಾದ ಸ್ಥಿತಿಯನ್ನು ವಿಚಾರಿಸಿದರೆ ನಿನಗೇ ಗೊತ್ತಾಗುವದು. ವೇದಾಧಿಕಾರವಿದ್ದವರೇ ವೇದಾಧಿಕಾರ ವಿಲ್ಲದವರೆಂದು ಅನಿಸಿಕೊಳ್ಳುವವರೆಗೆ ವೇದಾಧ್ಯಯನವನ್ನು ಬಿಟ್ಟುಬಿಟ್ಟಿರುವಾಗ, ಶ್ರುತಿಯೇ ಕೊಡದ್ದರಿಂದ ಬ್ರಾಹ್ಮಣರು ಶೂದ್ರರಿಗೆ ವೇದಾಧಿಕಾರವಿಲ್ಲೆಂದು ಹೇಳಿದರೆ ಅದಕ್ಕಾಗಿ ಅವರಿಗೆ ಯಾಕೆ ದೋಷಕೊಡುವೆ? ನಿಜವಾಗಿ ವೇದವು ವಿರಾಗಿಗಳ ಸಲುವಾಗಿ; ಆದರೆ ಜಗತ್ತೇ ಒದ್ದಾಡುತ್ತಿರುವದು ರಾಗಕ್ಕಾಗಿ! ಅಂದಬಳಿಕ ವೇದಾಧಿಕಾರಕ್ಕೂ, ನಿನ್ನ ದೃಷ್ಟಿಯಿಂದ ವಿಚಾರಿಸುವ ಐಹಿಕ ಪ್ರಗತಿಗೂ ಸಂಬಂಧವೇ ಇಲ್ಲ. ವೇದಾಧ್ಯಯನದಿಂದಾಗುವ ಪ್ರಗತಿಯು ಪಾರತ್ರಿಕವಾದದ್ದು; ಪ್ರಗತಿಯೂ, ಧರ್ಮವಿಘಾತಕವಲ್ಲದ ಯೋಗ್ಯವಾದ ಐಹಿಕ ಪ್ರಗತಿಯೂ ಶೂದ್ರರಿಗೆ ಸುಲಭ ರೀತಿಯಿಂದ ಉಂಟಾಗುವದಕ್ಕಾಗಿ ಬ್ರಾಹ್ಮಣರು ಭಾರತಾದಿ ಐತಿಹಾಸಿಕ ಗ್ರಂಥಗಳನ್ನೂ ಪುರಾಣಗಳನ್ನೂ ರಚಿಸಿರುವರು. ಪುರಾಣ ಶ್ರವಣದಿಂದಲೇ ಚರಿತಾರ್ಥ ವಾಗುತ್ತಿರುವಾಗ ಕಷ್ಟಸಾಧ್ಯವಾದ ವೇದಾಧ್ಯಯನದಿಂದಾದರೂ ಆಗುವ ವಿಶೇಷ ಪ್ರಯೋಜನವೇನು? ಅಧಿಕಾರವಿದ್ದ ಬ್ರಾಹ್ಮಣರೇ ಐಹಿಕಸುಖಕ್ಕೆ ಮೆಚ್ಚಿ ವೇದಾಧ್ಯಯನವನ್ನು ಬಿಟ್ಟು, ಶೂದ್ರಪ್ರಾಯರಾಗುವಾಗ, ಶೂದ್ರರನ್ನು ವೇದಪಾಠಶಾಲೆಗೆ ಹಾಕಿಸಿದರೆ ಆಗುವ ಪ್ರಯೋಜನವೇನು? ತಿರುವೇಂಕಟಾ, ವೇದದ ಯಾವ ಸುಖ–ದುಃಖವನ್ನೂ ಕಾಣದ ನಿನ್ನ ಮಾತು ಕೇವಲ ಜಗಳ ಹಚ್ಚುವಮಟ್ಟಿಗೆ ಉಪಯೋಗಿಸಿ, ದೇಶದಲ್ಲಿ ಪರಸ್ಪರ ಒಡಕು ಮಾತ್ರ ಹೆಚ್ಚುವದಲ್ಲದೆ ಅದರಲ್ಲಿ ಏನೂ ಅರ್ಥವಿರುವದಿಲ್ಲ! ಶಿವ ಶಿವ ! ದೇಶಕ್ಕೆ ವಿನಾಶಕಾಲ ಒದಗಿದಾಗ ಎಂಥ ಎಂಥ ಅಸಂಬದ್ಧವಾದ ನಾಶಕಾರಕ ವಿಚಾರಗಳು ಉತ್ಪನ್ನವಾಗು ವವಲ್ಲ! ಈ ಮೇರೆಗೆ ವಿರೂಪಾಕ್ಷಾರ್ಯರು ನಿರೂಪಿಸಿದ್ದನ್ನು ಕೇಳಿ ತಿರುವೇಂಕಟನು—'' ಆರ್ಯವರಾ, ನಿಮ್ಮ ಉಪದೇಶದಿಂದ ನನ್ನ ಮೌಢ್ಯವು ದೂರವಾಯಿತು. ಆದರೆ ವ್ಯವಹಾರದ ಅನುಭವವನ್ನು ನೋಡಿದರೆ ಬೇರೆಬೇರೆ ವರ್ಣದವರೂ, ಬೇರೆಬೇರೆ ಪಂಥದವರೂ ಪರಸ್ಪರ ಜಗಳಾಡುವದೇ ಕಣ್ಣಿಗೆ ಬೀಳುತ್ತದಲ್ಲ? ಇದಕ್ಕೆ ಕಾರಣವೇನು?'' ಎಂದು ಕೇಳಲು,

ವಿರೂಪಾಕ್ಷಾರ್ಯರು—'' ಆಯಾ ವರ್ಣದವರು ತಮ್ಮ ತಮ್ಮ ವರ್ಣವೇ ತಮಗೆ ಶ್ರೇಷ್ಠವೆಂಬ ಭಾವನೆಯನ್ನು ಬಿಟ್ಟು ತಮ್ಮ ತಮ್ಮ ಗುರೂಪದಿಷ್ಟ ಪಂಥಗಳಂತೆ ಭಕ್ತಿಯಿಂದ ನಡೆಯದೆ, ಅನ್ಯರ ವರ್ಣಗಳ ಹಾಗು ಪಂಥಗಳ ಉಸಾಬರಿ ಮಾಡುತ್ತ ಕುಳಿತದ್ದೇ ಕಾರಣವು. ಒಂದು ಮನೆಯೊಳಗಿನವರು ತಮ್ಮ ತಮ್ಮ ಕೆಲಸ ಮಾಡದೆ ನಿರೂದ್ಯೋಗಿಗಳಾಗಿ ಕುಹಕತನದಿಂದ ಮಂದಿಯ ಕೆಲಸದ ಉಸಾಬರಿಯನ್ನು ಮಾಡಹತ್ತಿದರೆ ಮನೆಯಲ್ಲಿ ಕಲಹಗಳು ಉಂಟಾಗುವವು. ಕುಟುಂಬದ ಕಲಹಕ್ಕೆ ಕುಟುಂಬದವರಲ್ಲಿಯ ಕರ್ತವ್ಯನಿಷ್ಠೆಯ ಅಭಾವವು ಕಾರಣವಾಗಿರುವಂತೆ, ದೇಶದೊಳಗಿನ ಆಯಾ ವರ್ಣದವರು, ಆಯಾ ಪಂಥದವರು ತಮ್ಮತಮ್ಮ ವರ್ಣ–ಪಂಥಗಳಲ್ಲಿಗೌರವಭಾವ ತಾಳಿ, ತಮ್ಮತಮ್ಮಕರ್ತವ್ಯಗಳಲ್ಲಿತತ್ಪರರಾಗದಿರುವದೇ ದೇಶದ ಧಾರ್ಮಿಕ ಕಲಹಕ್ಕೆ ಕಾರಣ ವಾಗಿರುವದು. ಕೌಟುಂಬಿಕ ಕಲಹದಿಂದ ಕುಟುಂಬದ ಹಾನಿಯಾಗುವಂತೆ ರಾಷ್ಟ್ರೀಯ ಕಲಹದಿಂದ ರಾಷ್ಟ್ರದ ಹಾನಿಯಾಗುತ್ತದೆ. ಕುಟುಂಬದೊಳಗಿನ ಜನರು ಪರಸ್ಪರ–ಇವನು ಗಿಡ್ಡನು ಇವನು ಮೂಗು ಕೂತವನು, ಇವನು ಕರಿಯನು ಎಂದಾಗಲಿ, ಅಥವಾ ಇವನಿಗೆ ಸೀ ಸೇರುತ್ತದೆ ಇವನಿಗೆ ಹುಳಿ ಸೇರುತ್ತದೆ ಎಂದಾಗಲಿ ಹೀಯಾಳಿಸುತ್ತ ಕಲಹ ಬೆಳೆಸದೆ, ನಾವೆಲ್ಲರು ರಕ್ತಸಂಬಂಧಿಕರೆಂಬ ಒಂದೇ ಸಾಮಾನ್ಯ ಭಾವನೆಯಿಂದ ಬದ್ಧರಾಗಿ ಕುಟುಂಬದ ಒಕ್ಕಟ್ಟನ್ನು ಕಾಯ್ದುಕೊಂಡು ಕೌಟುಂಬಿಕ ಕಾರ್ಯಗಳನ್ನು ಸಾಗಿಸಿದರೆ ಮಾತ್ರ ಕೌಟುಂಬಿಕ ಪ್ರಗತಿಯಾಗುವದು; ಅದರಂತೆ ರಾಷ್ಟ್ರದೊಳಗಿನವರು ಪರಸ್ಪರ–ಇವನು ಬ್ರಾಹ್ಮಣನು, ಇವನು ಲಿಂಗವಂತನು, ಇವನು ಕ್ಷತ್ರಿಯನು, ಇವನು ಹೊಲೆಯನು, ಇವನು ಮುಸಲ್ಮಾನನು, ಇವನು ಕ್ರಿಶ್ಚನ್ನನು ಎಂದಾಗಲಿ, ಅಥವಾ ಇವನು ದ್ವೈತಿಯು, ಇವನು ಅದ್ವೈತಿಯು, ಇವನು ವಿಶಿಷ್ಟಾದ್ವೈತಿಯು, ಇವನು ನಾನಕ ಪಂಥಿಯು, ಇವನು ಮಹಮ್ಮದ ಪಂಥಿಯು ಎಂದಾಗಲಿ ಹೀಯಾಳಿಸುತ್ತ ಕಲಹ ಬಳಿಸದೆ ನಾವೆಲ್ಲರೂ ದೇಶಸಂಬಂಧಿಗಳೆಂಬ ಒಂದೇ ಸಾಮಾನ್ಯ ಭಾವನೆಯಿಂದ ಬದ್ಧರಾಗಿ ರಾಷ್ಟ್ರದ ಒಕ್ಕಟ್ಟು ಕಾಯ್ದುಕೊಂಡು ರಾಷ್ಟ್ರೀಯ ಕಾರ್ಯಗಳನ್ನು ಸಾಗಿಸಿದರೆ ಮಾತ್ರ ರಾಷ್ಟ್ರೀಯ ಪ್ರಗತಿಯು, ಅಂದರೆ ಸ್ವಾತಂತ್ರ್ಯ ರಕ್ಷಣವು ಆಗುವದು. ಯಾವದೊಂದು ಕಾರಣದಿಂದ ಕುಟುಂಬದಲ್ಲಿ ಕಲಹದ ಬೀಜ ಬಿತ್ತುವವರನ್ನು ಕುಟುಂಬಿಕರು ಸ್ವಾರ್ಥಪರನಾದ ನೀಚತಮನೆಂದು ತಿಳಿದು ತಿರಸ್ಕರಿಸಿ ಹೊರದೂಡುವಂತೆ, ಯಾವದೊಂದು ಕಾರಣದಿಂದ ರಾಷ್ಟ್ರದಲ್ಲಿ ಕಲಹದ ಬೀಜ ಬಿತ್ತುವವನನ್ನು ಆತನು ಎಂಥ ಸಂಭಾವಿತನೂ– ದೊಡ್ಡಮನುಷ್ಯನೂ–ವಿದ್ವಾಂಸನೂ ಇದ್ದರೂ ಅವನನ್ನು ಸ್ವಾರ್ಥಪರನಾದ ನೀಚತಮನೆಂದು ತಿಳಿದು ರಾಷ್ಟ್ರೀಯರು ತಿರಸ್ಕರಿಸಿ ಹೊರದೂಡತಕ್ಕದ್ದು. ಒಟ್ಟಿಗೆ ರಾಷ್ಟ್ರದೊಳಗಿನ ಬೇರೆ ಬೇರೆ ಪಂಗಡಗಳೊಳಗಿನ ಕಲಹಗಳು ರಾಷ್ಟ್ರೀಯ ಸ್ವಾತಂತ್ರ್ಯ ವಿಘಾತಕವೆಂದು ತಿಳಿದು ಅದಕ್ಕೆ ವಿವೇಕಿಗಳು ಸರ್ವಥಾ ಆಸ್ಪದ ಕೊಡಬಾರದು. ಕುಟುಂಬದೊಳಗಿನ ಒಬ್ಬ ವ್ಯಕ್ತಿಗೆ ಒಮ್ಮೆ ಮಹತ್ವ ಬರುವಂತೆ, ರಾಷ್ಟ್ರದೊಳಗಿನ ಒಂದು ಪಂಗಡಕ್ಕೆ ಒಮ್ಮೆ ಮಹತ್ವ ಬರುತ್ತದೆ. ಕೃತಯುಗದಲ್ಲಿ ಬ್ರಾಹ್ಮಣವೃತ್ತಿಗೂ, ತ್ರೇತಾಯುಗದಲ್ಲಿ ಕ್ಷತ್ರಿಯವೃತ್ತಿಗೂ, ದ್ವಾಪರದಲ್ಲಿ ವೈಶ್ಯವೃತ್ತಿಗೂ, ಕಲಿಯುಗದಲ್ಲಿ ಶೂದ್ರವೃತ್ತಿಗೂ ಮಹತ್ವ ಬರುವದೆಂದು ಸಾಧಾರಣವಾಗಿ

ಹೇಳಬಹುದು. ಕಲಿಯುಗದಲ್ಲಿ ಶೂದ್ರರು ಪ್ರಬಲರಾಗುವರೆಂದು ಭಾಗವತದ 12ನೇ ಸ್ಕಂದದಲ್ಲಿಯ ಕಲಿಯುಗದ ವರ್ಣನೆಯಲ್ಲಿ ಸ್ಪಷ್ಟವಾಗಿ ಹೇಳಿದೆ. ಒಟ್ಟಿಗೆ ಕಾಲಕ್ಕನುಸರಿಸಿ ರಾಷ್ಟ್ರದೊಳಗಿನ ಯಾವ ಪಂಗಡವು ಪ್ರಬಲವಾದರೂ ಅದಕ್ಕಾಗಿ ಉಳಿದ ಪಂಗಡದವರು ಅಸೂಯೆಪಟ್ಟು ಕಲಹ ಬಳಿಸದೆ, ಆ ಪಂಗಡವೂ ರಾಷ್ಟ್ರೀಯವೇ ಎಂಬ ವಿವೇಕದಿಂದ, ಅದೇ ಪ್ರಬಲ ಪಂಗಡದ ಮಾರ್ಗದಿಂದ ರಾಷ್ಟ್ರಹಿತವನ್ನು ಸಾಧಿಸಿಕೊಳ್ಳತಕ್ಕದ್ದು.''

## ರಾಜದ್ರೋಹದ ಸ್ವರೂಪವು !

ಮಹಾತ್ಮರಾದ ವಿರೂಪಾಕ್ಷಾರ್ಯರ ಈ ಗಂಭೀರವಾದ ಉಪದೇಶವನ್ನು ಕೇಳಿ ತಿರುವೇಂಕಟನ ಮನಸ್ಸು ಕೃತಕರ್ಮಕ್ಕಾಗಿ ಪಶ್ಚಾತ್ತಾಪಪಟ್ಟಿತು. ತಾನು ಸ್ವದೇಶದ್ರೋಹ ಮಾಡುವದು ಮಹತ್ಪಾಪವೆಂತಲೂ, ಅಜ್ಞಾನದ ದುರಭಿಮಾನದಿಂದ ಸ್ವದೇಶ ಬಾಂಧವರಲ್ಲಿ ಭೇದಭಾವವನ್ನುಂಟುಮಾಡುವದು ಅಕ್ಷಮ್ಯ ಅಪರಾಧವೆಂತಲೂ ತಿಳಿದು ಆತನು ವಿರೂಪಾಕ್ಷಾರ್ಯರನ್ನು ಕುರಿತು–''ಪೂಜ್ಯರೇ, ನನ್ನ ದ್ರೋಹಬುದ್ಧಿಯನ್ನು ನನ್ನ ಬಾಯಿಂದ ಹೇಳಿ ಬಿಡುವೆನು; ಮಹಾತ್ಮರಾದ ಮಾಧವಾಚಾರ್ಯರು ಈಗ ಕೆಲವು ದಿನಗಳಿಂದ ಕಂಪಲಿಯ ಕೋಟೆಯಲ್ಲಿ ಒಂದೇಸವನೆ ಉಪನ್ಯಾಸ ನಡಿಸಿದ್ದರಷ್ಟೆ ? ರಾಜಕಾರಣವರಿಯದ ಆ ವೈದಿಕ ಬ್ರಾಹ್ಮಣನು ತನ್ನ ಜಾತಿಸ್ವಭಾವದ ಬಾಯ್ಬಡಕತನ ನಡಿಸಿರುವಾಗಲೇ ಕೋಟೆಯನ್ನು ಮುತ್ತಿ ಅದನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ನಾನೇ ಮಲಿಕನಾಯಬನಿಗೆ ಹೇಳಿ ಅಬದುಲ ರಹಿಮಾನನ ಆಧಿಪತ್ಯದ ಕೆಳಗೆ ದಂಡನ್ನು ಬರಮಾಡಿಕೊಂಡು ಕೋಟೆಗೆ ಮುತ್ತಿಗೆ ಹಾಕಿರುವೆನು; ಆದರೆ ಬ್ರಾಹ್ಮಣರ ಬಾಯಪುರಾಣದಲ್ಲಿ ಮಂದಿಯ ಮನಸ್ಸನ್ನು ತಿರುಗಿಸಿ ಅದನ್ನು ಸನ್ಮಾರ್ಗಕ್ಕೆ ಹಚ್ಚುವ ಸಾಮರ್ಥ್ಯವು ಎಷ್ಟಿರುತ್ತದೆಂಬದನ್ನು ಇಂದು ನಿಮ್ಮ ಉಪನ್ಯಾಸದಿಂದ ಚೆನ್ನಾಗಿ ಅರಿತುಕೊಂಡೆನು. ಭಗವನ್, ಸ್ವಾರ್ಥದ ಕೊಳಚಿಯೊಳಗಿನ ಹುಳುವಾದ ನನ್ನ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ. ಇನ್ನು ಮೇಲೆ ನಾನು ಯಾವ ಬಗೆಯಿಂದಲೂ ದೇಶದ್ರೋಹಿಯಾಗದೆ, ಕರ್ನಾಟಕದ ಉದ್ಧಾರಕ್ಕಾಗಿ ದೇಹವನ್ನು ಸವೆಸುವೆನು; ಆದರೆ ಈವರೆಗೆ ಮುಸಲ್ಮಾನ ಬಾದಶಹನಾದ ತಘಲಖ ಮಹಮ್ಮದನ ಪಕ್ಷದವನೆನಿಸುವ ನಾನು ಈಗ ಮಾಧವಚಾರ್ಯರ ಪಕ್ಷದವನಾಗಿ ತಘಲಖ ಮಹಮ್ಮದನ ವಿರುದ್ಧವಾಗಿ ನಡೆದರೆ ರಾಜದ್ರೋಹವಾಗಲಿಕ್ಕಿಲ್ಲವೆ? ಮಹಾತ್ಮರೇ, ದೇಶದ್ರೋಹದ ಪಾತಕದಿಂದ ಮುಕ್ತನಾಗಹೋದ ನಾನು, ರಾಜದ್ರೋಹದ ಪಾತಕದಲ್ಲಿ ಬಿದ್ದೇನೆಂದು ಭಯಪಡುತ್ತೇನೆ. ''ನಾವಿಷ್ಣುಃ ಪೃಥಿವೀಪತಿಃ'' ಎಂದು ಸ್ಮೃತಿವಾಕ್ಯವಿರುವದಿಂದ, ವಿಷ್ಣುಸ್ವರೂಪನಾದ ರಾಜನ ದ್ರೋಹವನ್ನು ಬಯಸುವನು ದೈವದ್ರೋಹ ಮಾಡಿದಂತೆ ಆಗುವದಿಲ್ಲವೆ? ತಮ್ಮ ಸದ್ಬೋಧದಿಂದ ನನ್ನ ಮನಸ್ಸು ಪವಿತ್ರವಾಗಲು, ಪಾಪಪುಣ್ಯದ

ಭಯದಿಂದ ಈಗ ಅದು ನಡುಗಹತ್ತಿದೆ! ಗುರುದೇವಾ, ನಿಮ್ಮಂಥ ಮಹಾತ್ಮರ ಸಹವಾಸದ ಮಹತ್ವವನ್ನು ಎಷ್ಟೆಂತ ಹೇಳಲಿ? ಕೇವಲ ಸ್ವಾರ್ಥಪರವಾದ ನನ್ನ ಮನಸ್ಸು ತಟ್ಟನೆ ನಿಸ್ವಾರ್ಥವಾದದ್ದು ಎಷ್ಟು ಆಶ್ಚರ್ಯವು? ವೈದಿಕರಾದ ತಮ್ಮಂಥ ಮಹಾತ್ಮರ ಬೋಧದಿಂದ ವೈದಿಕನಾದ ನಾನು ಹಾದಿಗೆ ಹತ್ತಿದ್ದೇನು ಆಶ್ಚರ್ಯವಲ್ಲ, ಯಾಕಂದರೆ ಅವೈದಿಕನಾದ ಕಾಶಿಮಖಾನನೂ ಮಹಾತ್ಮರಾದ ಮಾಧವಾಚಾರ್ಯರ ಬೋಧದಿಂದ ಆತ್ಮಶುದ್ಧಿಯನ್ನು ಪಡೆದು ಅವರ ಪ್ರಿಯ ಶಿಷ್ಯನಾಗಿರುವನು! ಕರ್ನಾಟಕದ ಉತ್ಕರ್ಷಕಾಲವು ಒದಗಿರುವದ ರಿಂದಲೇ ತಮ್ಮಂಥ ಮಹಾತ್ಮರು ಉದಯವಾಗಿರುವಿರಿ. ಸ್ವಾರ್ಥಕ್ಕಾಗಿ ಮೊದಲು ಸ್ವಕೀಯ ರಾಜನ ದ್ರೋಹವನ್ನು ಬಗೆದು, ತದ್ವಾರಾ ಸ್ವದೇಶ ದ್ರೋಹಿಯಾದ ನಾನು, ಈಗ ಪುನಃ ಮಹಮ್ಮದ ತಘಲಖರ ದ್ರೋಹಬಗೆದು ಪುನಃ ರಾಜದ್ರೋಹಿಯೂ, ವಿಶ್ವಾಸಘಾತಕಿಯೂ ಆಗ ಬೇಕಾಯಿತಲ್ಲ, ಹ್ಯಾಗೆ ಮಾಡಲಿ? ಆರ್ಯವರಾ, ದುಷ್ಕರ್ಮದಿಂದ ಪತಿತನಾಗಿ ಏನೂ ತೋಚದೆ ಅನುತಾಪಪಡುತ್ತಿರುವ ನನಗೆ ಮಾರ್ಗ ತೋರಿಸು'' ಎಂದು ಕೇಳಿದನು.

ತಿರುವೇಂಕಟನ ಈ ಪ್ರಶ್ನೆಯನ್ನು ಕೇಳಿದಕೂಡಲೆ ವಿರೂಪಾಕ್ಷಾರ್ಯರು ಆತನನ್ನು ಕುರಿತು–''ಕ್ಷತ್ರಿಯ ವೀರಾ, ಒಮ್ಮೆ ಅಧಾರ್ಮಿಕ ಸ್ವಾರ್ಥದ ಮೂಲಕ ದ್ರೋಹಚಿಂತನದ ಚಟ ಹತ್ತಿದರೆ, ಮುಂದೆ ಅದೇ ಸ್ವಾರ್ಥಕ್ಕಾಗಿ ಆ ಮನುಷ್ಯನು ಪುನಃಪುನಃ ದ್ರೋಹಿ ಯಾಗುತ್ತಲೇ ಹೋಗುವನು; ಆದ್ದರಿಂದ ಮನುಷ್ಯನು ಧರ್ಮವಿರುದ್ಧವಾಗಿ ಆಚರಿಸದಂತೆ ಯಾವಾಗಲೂ ಎಚ್ಚರಪಡುತ್ತಿರಬೇಕು. ನೀನು ಈಗ ರಾಜದ್ರೋಹಿ ಯಾಗೆಂದು ನಾನು ಸರ್ವಥಾ ಬೋಧಿಸುವದಿಲ್ಲವು; ಯಾಕಂದರೆ ದ್ರೋಹಬುದ್ಧಿಯೇ ಅನರ್ಥಕಾರಕವಾಗಿರಲು, ವಿಷ್ಣು ಸ್ವರೂಪನಾದ ರಾಜನ ದ್ರೋಹವು ಘೋರ ನರಕಸಾಧನವೆಂಬದನ್ನು ಚೆನ್ನಾಗಿ ನೆನಪಿನಲ್ಲಿಡತಕ್ಕದ್ದು ! ಇನ್ನು ಕೆಲವು ರಾಜರು ಧರ್ಮ ರಕ್ಷಣಕ್ಕಾಗಿಯಲ್ಲ; ಸ್ವಸುಖಭೋಗಕ್ಕಾಗಿ ರಾಜ್ಯವಾಳುತ್ತಿರುವರು. ಅಂಥವರನ್ನು ಮಾತ್ರ ವಿಷ್ಣುಸ್ವರೂಪರೆಂದು ಹೇಳಲಾಗುವದಿಲ್ಲ; ಅಂಥವರು ಮದಾಂಧರಾಗಿ ಅಮಾರ್ಗಗಾಮಿಗಳಾದರೆ, ಪ್ರಾಚೀನಕಾಲದ ವೇನರಾಜನಂತೆ ಅವರು ಧರ್ಮಿಷ್ಠ ಪ್ರಜೆಗಳಿಂದ ದಂಡ್ಯರಾಗುವರು! ತಿರುವೇಂಕಟಾ, ರಾಜನು ಧರ್ಮಿಷ್ಠನೇ ಇರಲಿ, ಅಧರ್ಮಿಷ್ಠನೇ ಇರಲಿ ತತ್ವತಃ ಅವನು ಪ್ರಜೆಗಳಿಗೆ ಅಧೀನನಾದವನೇ ಸರಿ. ಧರ್ಮಿಷ್ಠ ರಾಜರು ಕೇವಲ ಪ್ರಜಾರಂಜನ ತತ್ಪರನಾಗಿರಬೇಕಾದ ಕಾರಣದಿಂದ ಅವನು ಪ್ರಜೆಗಳಿಗೆ ಅಧೀನನಾಗಿರುವನು; ಅಧರ್ಮಿಷ್ಠ ರಾಜನು ಅಹಂಕಾರದಿಂದ ಅಡ್ಡಹಾದಿಗೆ ಹೋದಾಗೆಲ್ಲ ತನ್ನ ರಾಜಧರ್ಮದಿಂದ ಚ್ಯುತನಾದದ್ದಕ್ಕಾಗಿ ಅವನು ಪ್ರಜೆಗಳಿಗೆ ಜವಾಬುದಾರನಾಗುವ ನೆವದಿಂದ ಅವರಿಗೆ ಅಧೀನನಾಗಿರುವನು. ಕ್ಷತ್ರಿಯವೀರಾ, ಪ್ರಜೆಗಳಿಗಾಗಿ ರಾಜನಿರುವನಲ್ಲದೆ, ರಾಜನಿಗಾಗಿ ಪ್ರಜೆಗಳಿರುವುದಿಲ್ಲ, ಆದ್ದರಿಂದ ಪ್ರಜೆಗಳಿಂದಲೇ ರಾಜನ ಉತ್ಪತ್ತಿಯಾಗಿರಲು, ರಾಜದ್ರೋಹಕ್ಕಿಂತ ಪ್ರಜಾದ್ರೋಹವು, ಅಂದರೆ ದೇಶದ್ರೋಹವು ಹೆಚ್ಚು ಪಾಪಕರ ವಾದದ್ದೆಂದು ತತ್ವತಃ ಹೇಳುವೆನು. ದೇಶದ, ಅರ್ಥಾತ್ ದೇಶದೊಳಗಿನ ಪ್ರಜೆಗಳ ರಕ್ಷಣಕ್ಕಾಗಿ ರಾಜನಿರುವನಲ್ಲದೆ, ಕೇವಲ ರಾಜನ

ಸುಖೋಪಭೋಗಕ್ಕಾಗಿ ಪ್ರಜೆಗಳು ಇರುವದಿಲ್ಲ. ರಾಜನಿಲ್ಲದಿದ್ದರೆ ಪ್ರಜೆಗಳು ಅರಾಜಕರಾಗಿ ಹೊಡೆದಾಡುತ್ತ ಬಡೆದಾಡುತ್ತ ಹ್ಯಾಗಾದರೂ ಇರಬಹುದು; ಆದರೆ ಪ್ರಜೆಗಳಿಲ್ಲದಿದ್ದರೆ ರಾಜನ ಅಸ್ತಿತ್ವವೇ ಇರುವದಿಲ್ಲ; ಆದ್ದರಿಂದಲೇ ರಾಜಪಿತೃ ಸ್ಥಾನಾಪನ್ನವಾದ ಪ್ರಜೆಗಳ, ಅರ್ಥಾತ್ ದೇಶದ ದ್ರೋಹವು ಹೆಚ್ಚು ಪಾಪಕರವೆಂದು ಪುನಃ ಹೇಳುವೆನು. ಇನ್ನು ಪ್ರಜೆಗಳನ್ನು ಉದಾತ್ತವಾದ ಶಿಕ್ಷಣ–ರಕ್ಷಣ–ಪೋಷಣಗಳಿಂದ ಋಣಿಯಾಗಮಾಡುವ ರಾಜನು, ಅಂಥ ಪ್ರಜೆಗಳಿಗೂ ಪಿತೃಸ್ವರೂಪನಾಗಿರುವದರಿಂದ ಅಂಥ ಧರ್ಮಿಷ್ಠನಾದ, ಅಂತೇ ವಿಷ್ಣುಸ್ವರೂಪ ನಾದ ರಾಜನ ದ್ರೋಹವು ನಿಶ್ಚಯವಾಗಿ ದೈವದ್ರೋಹವಾಗಿರವದು. ಅಂಥ ಪ್ರಜಾಹಿತ ತತ್ಪರನಾದ ಧರ್ಮಿಷ್ಠ ರಾಜನು ಪ್ರಜೆಗಳ ಆತ್ಮವಾಗಿರುವದರಿಂದ ''ಸರ್ವಂ ವಿಷ್ಣುರ್ಮಯಂ ಜಗತ್'' ಎಂಬಂತೆ, ಆ ವಿಷ್ಣು ಸ್ವರೂಪ ರಾಜನು ಪ್ರಜಾರೂಪನೇ ಆಗಿರಲು, ಅಂಥವನ ದ್ರೋಹವು ಕೇವಲ ರಾಜದ್ರೋಹವೇ ಅಲ್ಲ ಪ್ರಜಾದ್ರೋಹವು ಅರ್ಥಾತ್ ದೇಶದ್ರೋಹವು ಅಂದರೆ ಆತ್ಮದ್ರೋಹವು ಆಗಿರುವದು; ಆದ್ದರಿಂದಲೇ ಜ್ಞಾನಿಗಳು ಧರ್ಮಿಷ್ಠರಾಜನ ದ್ರೋಹವನ್ನು ಮಹತ್ಪಾಪವೆಂದು ಎಣಿಸುವರು. ತಿರುವೇಂಕಟಾ, ಶ್ರೀರಾಮನಂಥ ರಾಜರ ದ್ರೋಹವು ದ್ರೋಹಿಗಾಗಲಿ, ಜಗತ್ತಿಗಾಗಲಿ ಕ್ಷೇಮಕರವಾಗಬಹುದೆ? ಒಬ್ಬ ಯಃಕಶ್ಚಿತನಾದ ಅಗಸನು ಅನ್ಯಾಯದಿಂದ ಸುಳ್ಳೇ ಶ್ರೀ ಸೀತಾಮಾತೆಗೆ ಅಪವಾದ ಹೊರಿಸಿ ಸಂತಾಪ ಪಟ್ಟದ್ದಕ್ಕಾಗಿ ಶ್ರೀರಾಮನು ಪ್ರಜಾರಂಜನವು ತನ್ನ ಕರ್ತವ್ಯವೆಂದು ತಿಳಿದು ಆ ಅಗಸನನ್ನು ರಂಜಿಸುವದಕ್ಕಾಗಿ ಪತಿವ್ರತಾಶಿಖಾಮಣಿಯಾದ ತನ್ನ ಹೆಂಡತಿ ಸೀತಾಮಾತೆಯನ್ನು ಅಡವಿಗಟ್ಟಿದನು! ಇಂಥ ಪ್ರಜಾರಂಜಕ ರಾಜರು ವಿಷ್ಣ್ವಂಶವೇ ಏಕೆ? ಪ್ರತ್ಯಕ್ಷ ವಿಷ್ಣುವೇ ಆಗಿರುವರು. ಇಂಥ ಧರ್ಮಿಷ್ಠ ರಾಜರನ್ನೇ ''ನಾವಿಷ್ಣುಃಪೃಥಿವೀಪತಿಃ'' ಎಂದು ಸ್ಮೃತಿಯು ಹೇಳುವದು! ಹುಡುಗರನ್ನು ರಂಜಿಸಿ ರಮಿಸುವಂತೆ, ತನ್ನ ವಿಷಯವಾಗಿ ಹೊರಟ ಅಜ್ಞಾನಿ ಪ್ರಜೆಗಳ ಆಯೋಗ್ಯ ವಾಣಿಯ ಸ್ವಾತಂತ್ರ್ಯವನ್ನು ಕೂಡ ಮನ್ನಿಸಿ, ಅಂಥ ಪ್ರಜೆಗಳ ಮನಸ್ಸನ್ನು ರಮಿಸಹೋದ ಪ್ರಜೆಗಳ ಆತ್ಮಸ್ವರೂಪನಾದ ಶ್ರೀರಾಮನಂಥ ಅರಸರ ಯೋಗ್ಯತೆಯನ್ನೇನು ಹೇಳಬೇಕು? ನಿಜವಾದ ಪೃಥ್ವೀಪತಿತ್ವವು ಬರಬೇಕಾದರೆ ರಾಜನು ಶ್ರೀರಾಮನಂತೆ ವಿಷ್ಣ್ವಂಶನು, ಅಂದರೆ ಧರ್ಮಿಷ್ಠನೇ ಆಗಿರಬೇಕು., ಹೀಗಿರದೆ, ಮಹಾಪತಿವ್ರತೆಯಾದ ಭೂಮಾತೆಯನ್ನು ನೀಚ ವಿಟಪುರುಷನಂತೆ ಬಲಾತ್ಕರಿಸಹೋಗಿ ಪ್ರಜಾರೂಪ ಭೂಮಾತೆಯ ತಾಪವನ್ನುಂಟುಮಾಡುವ ರಾಜರು, ಪ್ರಜಾಕ್ಷೋಭ ರೂಪವಾದ ಭೂಮಾತೆಯ ಶಾಪದಿಂದ ದಗ್ಧರಾಗದೆ ಹೋಗರು. ಅಂದಬಳಿಕ ಶಾಪದಗ್ಧರು ವಿಷ್ಣ್ವಂಶರು ಹ್ಯಾಗಾದಾರು?

ತಿರುವೇಂಕಟಾ, ಇನ್ನುಮೇಲೆ ಕಲಿಯುಗದಲ್ಲಿ ವಿಷ್ಣ್ವಂಶದ ಪೃಥ್ವೀಪತಿಗಳು ಉತ್ಪನ್ನ ವಾಗುವದರ ಬದಲು, ಪೃಥ್ವಿಯ ಅಪಹಾರಕ ಅಂದರೆ ಪ್ರಜಾಪೀಡಕ ದುಷ್ಟ ರಾಜರೇ ಉತ್ಪನ್ನವಾಗುವದರಿಂದ ವಿಷ್ಣುಪತ್ನಿಯಾದ ಭೂಮಾತೆಯ ಶಾಪದಿಂದ ಪೃಥ್ವಿಯಲ್ಲಿ ದಿನದಿನಕ್ಕೆ ರಾಜಸತ್ತೆಯು ಲೋಪವಾಗುತ್ತ ಲೋಪವಾಗುತ್ತ, ಲೋಕಸತ್ತೆಯು ಪ್ರಚಾರದಲ್ಲಿ ಬರತೊಡಗುವದು; ಅಂದರೆ ಭೂಮಾತೆಯು ವೈಧವ್ಯದ ಔಪಚಾರಿಕ ಆರೋಪದಿಂದ ತನ್ನ

ಪುತ್ರರಾದ ಪ್ರಜೆಗಳ ಆಜ್ಞೆಯಲ್ಲಿ ಕಾಲಹರಣ ಮಾಡತೊಡಗುವಳು ! ತಿರುವೇಂಕಟಾ, ಕೇವಲ ಧರ್ಮಕ್ಕೆ ಮಾತ್ರ ಅಧೀನಳಾಗಿರುವ ಭೂಮಾತೆಯ ಮೇಲೆ, ಬರಬರುತ್ತ ಸರ್ವತ್ರ ನೀಚಸ್ವಾರ್ಥದ ಅಧರ್ಮ ಪ್ರವೃತ್ತಿಯಾಗುತ್ತಿರುವ ಈ ಕಲಿಯುಗದಲ್ಲಿ ಯಾವ ತರದ ಸತ್ತೆಯೂ ಸ್ಥಿರವಾಗಿರಲಾರದು. ರಾಜರು ಅಧರ್ಮಿಷ್ಠರಾಗಿರುವದರಿಂದ ವ್ಯಷ್ಟಿ ನಿಷ್ಠವೆನಿಸುವ ರಾಜಸತ್ತಾತ್ಮಕ ರಾಜ್ಯ ಪದ್ಧತಿಯು ಲುಪ್ತವಾಗುವಂತೆ, ಸಮಷ್ಟಿನಿಷ್ಠವೆನಿಸುವ ರಾಜ್ಯ ಪದ್ಧತಿಯು, ಅಂದರೆ, ಲೋಕಸತ್ತಾತ್ಮಕ ರಾಜ್ಯಪದ್ಧತಿಯಾದರೂ ಲೋಕವು ಅಧರ್ಮಿಷ್ಠವಾಗುವದರಿಂದ ಕ್ಷಣಕ್ಷಣಕ್ಕೆ ಲುಪ್ತವಾಗುತ್ತಿರುವದು. ಒಟ್ಟಿಗೆ ಪೃಥ್ವಿಯು ಧರ್ಮದಿಂದ ಮಾತ್ರ ಪಾಲಿಸಲ್ಪಡತಕ್ಕವಳು; ಅಂತೇ ಆಕೆಯು ಧರ್ಮಪ್ರಭುವಾದ ವಿಷ್ಣುವಿನ ಪತ್ನಿಯೆನಿಸುವಳು. ಅಂದಬಳಿಕ ಪ್ರಜೆಗಳ ಬೇಟೆಯಾಡುವಂಥ, ಪ್ರತ್ಯಕ್ಷ ಕಕ್ಕನ ಮಗನ ಮೈದೊಗಲು ಸುಲಿಸುವಂಥ, ಪ್ರಜೆಗಳ ಕಷ್ಟವನ್ನು ನೋಡದೆ ತನ್ನ ಮನಸ್ಸಿನ ಉಕ್ಕಿಗಾಗಿ ಲಕ್ಷಾಂತರ ಪ್ರಜೆಗಳ ಸಂಹಾರಕ್ಕೆ ಕಾರಣನಾಗುವಂಥ ಈಗಿನ ತಘಲಖ ಮಹಮ್ಮದನಂಥ ನರರಾಕ್ಷಸರು ವಿಷ್ಣ್ವಂಶರಾಗ ಬಹುದೋ? ಇಂಥ ರಾಕ್ಷಸಸದೃಶ ರಾಜರ ಸಂಹಾರದಿಂದ ವಿಷ್ಣುವಿಗೆ ರಾಕ್ಷಸಾಂತಕನೆಂಬ ಹೆಸರು ಬಂದಿರುವದರಿಂದ, ಇಂಥ ಪ್ರಜಾಪೀಡಕ ದುಷ್ಟ ರಾಜರು ಪೃಥ್ವಿಯ ಅಪಹಾರಕವಲ್ಲದೆ ಪತಿಗಳು ಹ್ಯಾಗಾದಾರು? ವಿಷ್ಣುವಿನ ಶತ್ರುಗಳಾದ ಇವರು ವಿಷ್ಣುವಂಶರೇ? ದುಷ್ಟನಾದ ನರಕಾಸುರನು ತನ್ನ ಮಗನಾದರೂ ಅವನಲ್ಲಿ ಪೃಥ್ವೀಪತಿತ್ವವು ಪ್ರಸಿದ್ಧಿಸದ್ದರಿಂದ ಭೂಮಾತೆಯು ಧರ್ಮಪ್ರಭುವಾದ ತನ್ನ ಪತಿ ವಿಷ್ಣುವಿನಿಂದ ಆತನನ್ನು ಕೊಲ್ಲಿಸಿದಳು! ಆದ್ದರಿಂದ ವೇನರಾಜನಂಥ ಇಂಥ ಅಧರ್ಮಿಷ್ಠರ ದ್ರೋಹವು, ಅಂದರೆ ಅಂಥವರ ನಾಶವು, ಅಥವಾ ಅವರ ಆಜ್ಞಾಭಂಗವು ಪೃಥ್ವಿಯ ಅರ್ಥಾತ್ ಪ್ರಜೆಗಳ ಕಲ್ಯಾಣಕ್ಕೆ ಕಾರಣವಾದದ್ದರಿಂದ, ಅದು ರಾಜದ್ರೋಹವೆನಿಸದೆ ವಿಷ್ಣುವಿನ ಆರಾಧನೆಯೆನಿಸುವದು! ಇನ್ನುಮೇಲೆ ಕಲಿಯುಗದಲ್ಲಿ ರಾಜ–ಪ್ರಜೆಗಳಿಬ್ಬರಲ್ಲಿಯೂ ಅಧರ್ಮವು ಹೆಚ್ಚುವದರಿಂದ ನಿಜವಾದ ಪೃಥ್ವಿಯ ಆಧಿಪತ್ಯವು ಯಾರಿಗೂ ದೊರೆಯದೆಹೋಗಲು ರಾಜರಾಗಲಿ ಪ್ರಜೆಗಳಾಗಲಿ ಪೃಥ್ವಿಯನ್ನು ಬಲಾತ್ಕರಿಸ ಹೋಗಿ ಪರಸ್ಪರ ಕಲಹ ಬಳಿಸಿ ಆಗಾಗ್ಗೆ ನಾಶವನ್ನು ಹೊಂದವರು! ಜಗತ್ತಿನ ಸ್ಥಿರತ್ವವು ಧರ್ಮಮೂಲವಾಗಿರುವದರಿಂದ ಈಶ್ವರಕೃಪೆಯಿಂದ ಜಗತ್ತಿನಲ್ಲಿ ಧರ್ಮ ಪ್ರಸಾರವಾಗುವವರೆಗೆ ಪೃಥ್ವಿಯಲ್ಲಿ ನಿಜವಾದ ಆಧಿಪತ್ಯವು ಯಾರಿಗೂ ದೊರೆಯಲಾರದು. ಪಥ್ವಿಯ ನಿಜವಾದ ಆಧಿಪತ್ಯವು ಶಾಂತಿರೂಪವಾಗಿರುವುದರಿಂದ ಅಶಾಂತವಾದ ಕಲಿಯುಗದ ರಾಜಸತ್ತೆಯಾಗಲಿ, ಲೋಕಸತ್ತೆಯಾಗಲಿ ನಿಜವಾದ ಸತ್ತಾಗಳೇ ಅಲ್ಲವು! ಧರ್ಮಿಷ್ಠವಾದ ರಾಜಸತ್ತೆಯೂ ಪ್ರಜಾಕ್ಷೇಮಕರವು; ಹಾಗೆ ಧರ್ಮಿಷ್ಠವಾದ ಲೋಕಸತ್ತೆಯು ಬಡೆದಾಡುತ್ತ ಬಡೆದಾಡುತ್ತ ಧರ್ಮಬಲದಿಂದಲ್ಲ, ಬಹುಮತದ ಬಲದಿಂದ ಬಲಿಷ್ಠರು ಹೆಚ್ಚು, ದುರ್ಬಲರು ಕಡಿಮೆಯಾಗಿ ಅಥವಾ ಬಲಿಷ್ಠರು ಮೊದಲು, ಬಲಹೀನರು ಹಿಂದುಗಡೆಗೆ ಹರಿದು ಹಂಚಿಕೊಂಡು ತಿನ್ನುವದಾಗಿರುವದು. ಹ್ಯಾಗಿದ್ದರೂ ಅಧರ್ಮಿಷ್ಠ ರಾಜ್ಯಪದ್ಧತಿಯಲ್ಲಿ ಧರ್ಮ ಪ್ರಸಾರ ಮೂಲಕ ಶಾಂತಿಯ ಪ್ರಸ್ಥಾಪನೆಯ ತತ್ವವು ಇರದೆ ಬಲಿಷ್ಠರು ದುರ್ಬಲರನ್ನು

ಮುರಿದು ತಿನ್ನುವ ತತ್ವವೇ ಓತಪ್ರೋತವಾಗಿರುವದು! ಇಂಥ ಪರರನ್ನು ತಿನ್ನುವ ಪದ್ಧತಿಗಳು ನಿಸ್ಪೃಹತ್ವದ ದ್ಯೋತಕವಾಗಿರದೆ, ಎಂದೂ ತುಂಬದ ಆಶಾರೂಪವಾದ ತಗ್ಗನ್ನು ತುಂಬುವದಕ್ಕಾಗಿಯೇ ಇರುವದರಿಂದ, ಇವು ತಾಪದಾಯಕಗಳಲ್ಲದೆ ಶಾಂತಿಕರವಾಗಲಾರವು; ಆದ್ದರಿಂದ ತಿರುವೇಂಕಟಾ, ರಾಜಸತ್ತೆಯಾಗಲಿ, ಮಹಾಜನಸತ್ತೆಯಾಗಲಿ, ಲೋಕಸತ್ತೆಯಾಗಲಿ, ಇವುಗಳ ಮಿಶ್ರಸತ್ತೆಯಾಗಲಿ ನಿಜವಾದ, ಅಂದರೆ ಶಾಂತಿದಾಯಕ ಸತ್ತೆಯಾಗಬೇಕೆಂದು ಇಚ್ಛಿಸುತ್ತಿದ್ದರೆ ಧರ್ಮಾಚರಣೆಯಿಂದ ಪ್ರಜೆಗಳು ಆತ್ಮಶುದ್ಧಿಯುಳ್ಳವರಾಗಬೇಕೆಂದು ಮಹಾತ್ಮರು ಅನಾದಿ ಕಾಲದಿಂದ ಹೇಳುತ್ತ ಬಂದಿರುವದನ್ನು ಮರೆಯತಕ್ಕದ್ದಲ್ಲ! ಪ್ರಜೆಗಳ ಆತ್ಮಶುದ್ಧಿಯಾದ ಹೊರತು ನಿಜವಾದ ಯಾವ ಸತ್ತೆಯೂ ಉಂಟಾಗುವದಿಲ್ಲವಾದ್ದರಿಂದ, ಜಗತ್ತಿನಲ್ಲಿ ತಾಪವು ತಪ್ಪದು! ಆತ್ಮಶುದ್ಧಿಯುಳ್ಳ ಪ್ರಜೆಗಳಿಂದುಂಟಾದ ಸತ್ತೆಯು, ಅದು ರಾಜಸತ್ತಾತ್ಮಕವೇ ಇರಲಿ, ಲೋಕಸತ್ತಾತ್ಮಕವೇ ಇರಲಿ, ಮತ್ತೆ ಯಾವ ಸತ್ತಾತ್ಮಕವೇ ಇರಲಿ ಶಾಂತಿದಾಯಕ ನಿಜವಾದ ಸತ್ತೆಯಾದೀತಲ್ಲದೆ ಆತ್ಮಶುದ್ಧಿಯಿಲ್ಲದ ಪ್ರಜೆಗಳಿಂದುಂಟಾದ ಸತ್ತೆಯು ನೀಚಸ್ವಾರ್ಥಮಯವಾದದ್ದರಿಂದ, ಅದು ಯಾವದಿದ್ದರೂ ಪ್ರಜೆಗಳಿಗೆ ಸುಖಕರವೂ, ಶಾಂತಿಕರವೂ ಆಗಲಾರದು; ಆದ್ದರಿಂದ ತಿರುವೇಂಕಟಾ, ತಘಲಖ ಮಹಮ್ಮದನಂಥ ಪ್ರಜಾ ಸ್ವಾತಂತ್ರ್ಯಹಾರಕ ದುಷ್ಟ ರಾಜರು ಪ್ರಜಾರಂಜಕರಲ್ಲದ್ದರಿಂದ ನಿಜವಾದ ರಾಜರೇ ಆಗದಿರಲು, ಅವರ ನಾಶಕ್ಕಾಗಿ ಮಾಡುವ ಉಪಾಯವು ಅಥವಾ ಅಂಥವರ ಆಜ್ಞಾಭಂಗವು ರಾಜದ್ರೋಹವಾಗಬಹುದೋ? ಪ್ರಜೆಗಳ ಪ್ರತಿನಿಧಿ ಸ್ವರೂಪದ ರಾಜನು ಯಾವಾಗಲೂ ಪ್ರಜೆಗಳಿಗೆ ಜವಾಬುದಾರನೇ ಆಗಿರುವನು; ಆದರೆ ಕೇವಲ ಧರ್ಮದ ಪ್ರತಿನಿಧಿಯ ಸ್ವರೂಪದವನಾಗಿದ್ದ ರಾಜನು ಮಾತ್ರ ವಿಷ್ಣ್ವಂಶನಾಗಿ ಪ್ರಜಾಶಾಸಕನಾಗಿರುವನು. ತಿರುವೇಂಕಟಾ, ನಾನು ಹೇಳುವ ಸೂಕ್ಷ್ಮ ರಹಸ್ಯದ ಕಡೆಗೆ ನಿನ್ನ ಲಕ್ಷವಿರಲಿ ''ಯೇಯಥಾಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ'' ಎಂಬ ಉಕ್ತಿಯಂತೆ ಅಂದರೆ ''ಯಾರು ಹ್ಯಾಗೋ ಅವರಿಗೆ ನಾನು ಹಾಗೆ'' ಎಂಬಂತೆ, ದೇವರು ಜನರ ಸ್ವಾತಂತ್ರ್ಯಕ್ಕೆ ಬಾಧೆ ಬಾರದಂತೆ ಅವರನ್ನು ಪಾಲಿಸುವನು; ಆದ್ದರಿಂದ ಭಗವಂತನ ಶಾಸನದಲ್ಲಿ ಶಾಶ್ಯರು ಧರ್ಮಿಷ್ಠರಾಗಿದ್ದರೆ, ಅವರು ಭಗವಂತನಿಂದ ಪಾಲನವನ್ನು, ಅಧರ್ಮಿಷ್ಠರಾಗಿದ್ದರೆ ಭಗವಂತನಿಂದ ಶಾಸನವನ್ನೂ ಹೊಂದುವದು. ಹೀಗೆ ಧರ್ಮಾಧರ್ಮಗಳೆರಡನ್ನೂ ಮಾಡಿ, ವಿಷ್ಣುವಿನ ಪಾಲನ–ಶಾಸನ ಗಳನ್ನು ಹೊಂದುವ ಸ್ವಾತಂತ್ರ್ಯವು ಪ್ರತಿ ಒಬ್ಬ ಜೀವನಿಗೆ ಇರುವದರಿಂದಲೇ ಈ ಜಗತ್ತು ಬದ್ಧರಿಂದಲೂ, ಮುಕ್ತರಿಂದಲೂ ಕೂಡಿದ್ದಾಗಿರುವದು. ಹಾಗಲ್ಲದೆ, ಧರ್ಮಮೂರ್ತಿಯಾದ ಭಗವಂತನು ಜೀವರ ಈ ಧರ್ಮಾಧರ್ಮ ಪ್ರವೃತ್ತಿಯ ಸ್ವಾತಂತ್ರ್ಯವನ್ನು ಹರಣಮಾಡಿ, ಎಲ್ಲ ಕಡೆಗೂ ಧರ್ಮಪ್ರಸಾರವನ್ನೇ ಮಾಡಿದ್ದರೆ ಎಲ್ಲರೂ ಮುಕ್ತರೇ ಆಗುತ್ತಿದ್ದರು; ಅಥವಾ ಎಲ್ಲ ಕಡೆಗೂ ಅಧರ್ಮ ಪ್ರಸಾರವನ್ನೇ ಮಾಡಿದ್ದರೆ ಎಲ್ಲರೂ ಬದ್ಧರೇ ಆಗುತ್ತಿದ್ದರು. ಒಟ್ಟಿಗೆ ಈಗಿನ ಬದ್ಧ–ಮುಕ್ತ ಯುಕ್ತ ಜಗತ್ತಿನ ಅಸ್ತಿತ್ವಕ್ಕೆ ಧರ್ಮಾಧರ್ಮ ಪ್ರವೃತ್ತಿಯು ಈಶ್ವರದತ್ತ ಅಥವಾ

ಸ್ವಯಂಸಿದ್ಧ ಸ್ವಾತಂತ್ರ್ಯವು ಜೀವರಿಗೆ ಇರುವದೇ ಕಾರಣವಾಗಿರುತ್ತದೆ. ಜೀವರ ಈ ಸ್ವಾತಂತ್ರ್ಯದ ಮೂಲಕವಾಗಿಯೇ ವಿಷ್ಣುವು, ಅಥವಾ ವಿಷ್ಣ್ವಂಶದ ರಾಜನು ಪಾಲನ–ಶಾಸನ ವ್ಯಾಪಾರಗಳನ್ನು ಮಾಡುತ್ತ ಜಗತ್ತಿನ ಅಥವಾ ತನ್ನ ರಾಜ್ಯದ ರಕ್ಷಣ ಮಾಡಬೇಕಾಗುವದು. ಒಟ್ಟಿಗೆ ಸರ್ವಸ್ವತಂತ್ರನಾದ ಭಗವಂತನೇ, ಜೀವಾತ್ಮನ ಸ್ವಾತಂತ್ರ್ಯವನ್ನು ಕಾಯುತ್ತಿರಲು, ಜೀವಾತ್ಮನ ಅಂಥ ಸ್ವಯಂಸಿದ್ಧವಾದ ಅಥವಾ ಈಶ್ವರದತ್ತವಾದ ಸ್ವಾತಂತ್ರ್ಯವನ್ನು ಅಪಹರಿಸಲಿಕ್ಕೆ ನಶ್ವರರಾದ ಪೃಥ್ವಿಯ ಅಪಹಾರಕರಾದ ದುಷ್ಟ ರಾಜರು ಎಷ್ಟರವರು?

ತಿರುವೇಂಕಟಾ ಧರ್ಮಿಷ್ಠ ರಾಜರು ಹ್ಯಾಗೆ ರಾಜ್ಯವಾಳುತ್ತಿರುವರೆಂಬದನ್ನು ಕುರಿತು ಕವಿಕುಲ ಗುರುವಾದ ಕಾಲಿದಾಸನು ದಿಲೀಪನ ರಾಜ್ಯಪಾಲನದ ಕ್ರಮವನ್ನು ವರ್ಣಿಸುವಾಗ ಹೇಳಿರುವದನ್ನು ಕೇಳಿ ಆ ಕವಿಶ್ರೇಷ್ಠನು ತನ್ನ ರಘುವಂಶ ಕಾವ್ಯದಲ್ಲಿ– ''ಪ್ರಜಾನಾಂ ವಿನಯಾಧಾನಾದ್ರಕ್ಷಣಾ ದ್ಭರಣಾದಪಿ! ಸಪಿತಾ ಪಿತರಸ್ತಾಸಾಂ ಕೇವಲಂ ಜನ್ಮಹೇತವಃ||';' ಎಂದು, ಅಂದರೆ—''ದಿಲೀಪನ ಪ್ರಜೆಗಳಿಗೆ ಅವರ ತಾಯಿ–ತಂದೆಗಳು ಕೇವಲ ಜನ್ಮವನ್ನು ಮಾತ್ರ ಕೊಡತಕ್ಕವರಾಗಿದ್ದರು; ಆದರೆ ಆ ಪ್ರಜೆಗಳನ್ನು ಶಿಕ್ಷಣದಿಂದ ಅಂದರೆ ಅವರನ್ನು ಸನ್ಮಾರ್ಗಪ್ರವರ್ತಕರನ್ನಾಗಿ ಮಾಡುವದರಿಂದಲೂ, ಭರಣದಿಂದ ಅಂದರೆ ಅವರನ್ನು ಅನ್ನಪಾನಾದಿ ಸಾಧನಗಳಿಂದ ಪೋಷಿಸುವದರಿಂದಲೂ ದಿಲೀಪನೇ ಪ್ರಜೆಗಳ ತಂದೆ ಯಾಗಿದ್ದನು'' ಎಂದು ಹೇಳಿರುವನು. ತಿರುವೇಂಕಟಾ, ಈ ಗಂಭೀರವಾದ ಶ್ಲೋಕದಲ್ಲಿ ಅರಸರ ಕರ್ತವ್ಯವನ್ನು ಬಹು ಸರಸವಾಗಿ ವರ್ಣಿಸಿರುವದೆಂದು ತಿಳಿ. ಬರಿಯ ಜನ್ಮ ಕೊಡುವವರೂ ಪೂರಾ ತಂದೆಯಾಗುವದಿಲ್ಲ; ಬರಿಯ ಶಿಕ್ಷಣ–ರಕ್ಷಣ–ಪೋಷಣ ಕಾರ್ಯಗಳನ್ನು ಮಾಡುವವರೂ ಪೂರಾ ತಂದೆಯಾಗುವದಿಲ್ಲ; ಆದರೆ ಜನ್ಮಕೊಟ್ಟು ಶಿಕ್ಷಣ–ರಕ್ಷಣ– ಪೋಷಣಗಳನ್ನು ಮಾಡುವವರು ಮಾತ್ರ ಪೂರಾ ತಂದೆಯೆನಿಸುವದು ವಾಡಿಕೆಯಾಗಿರುವದು. ಅಂದಬಳಿಕ ದಿಲೀಪನ ಪ್ರಜೆಗಳ ತಾಯಿತಂದೆಗಳು ತಮ್ಮ ಮಕ್ಕಳನ್ನು ಹಡೆದಕೂಡಲೆ ಚೆಲ್ಲಿಕೊಡತಕ್ಕವರಾಗಿರದೆ. ಅವರ ಶಿಕ್ಷಣ–ರಕ್ಷಣ ಪೋಷಣ ಗಳನ್ನು ಮಾಡುವವರು ಆಗಿದ್ದರೆಂದು ಬೇರೆ ಹೇಳುವ ಕಾರಣವಿಲ್ಲ; ಹೀಗಿದ್ದು ತಾನು ಜನ್ಮ ಕೊಡದಿದ್ದರೂ ಪ್ರಜೆಗಳ ಶಿಕ್ಷಣ–ರಕ್ಷಣ–ಪೋಷಣಗಳನ್ನು ಮಾಡಿದ ಮಾತ್ರದಿಂದ ದಿಲೀಪನು ಪ್ರಜೆಗಳ ತಂದೆಯೆನಿಸಿ ಕೊಂಡಬಳಿಕ, ಆತನ ಶಿಕ್ಷಣ–ರಕ್ಷಣ–ಪೋಷಣಗಳಲ್ಲಿ ಅಂಥ ಮಹತ್ವವೇನಾದರೂ ಇರಲೇಬೇಕು; ಆದ್ದರಿಂದ ಅವುಗಳಲ್ಲಿ ಅಂಥ ಮಹತ್ವ ವೇನಿರುವದೆಂಬದನ್ನು ವಿಚಾರಿ ಸೋಣ! ತಿರುವೇಂಕಟಾ, ದನ ಕಟ್ಟಿದವರೂ ಅವುಗಳ ಶಿಕ್ಷಣವನ್ನು ಅಂದರೆ ಅವು ಸಭ್ಯ ವಾಗುವಂತೆ ತಿದ್ದುವ ಕೆಲಸವನ್ನು, ರಕ್ಷಣವನ್ನು ಅಂದರೆ ಕ್ರೂರ ಶ್ವಾಪದಾದಿಗಳಿಂದ ಅವನ್ನು ಕಾಯುವ ಕೆಲಸವನ್ನು, ಪೋಷಣವನ್ನು ಅಂದರೆ ಹೊಟ್ಟು–ಮೇವು ಕಾಳು ಮೊದಲಾದವನ್ನು ಹಾಕಿ ಅವುಗಳ ದೇಹ ಪುಷ್ಟಮಾಡುವ ಕೆಲಸವನ್ನು ಮಾಡಿ, ಆ ಪಶುಗಳಿಂದಾಗುವ ಪ್ರಯೋಜನವನ್ನು ಮಾಡಿಕೊಳ್ಳುತ್ತಾರೆ. ಇದರಂತೆಯೇ ದಿಲೀಪನಾದರೂ ತನ್ನ ಪ್ರಜೆಗಳ ಶಿಕ್ಷಣ–ರಕ್ಷಣ–ಪೋಷಣಗಳನ್ನು ಮಾಡಿ

ಅವರಿಂದಾಗುವ ಪ್ರಯೋಜನವನ್ನು ಪಡೆಯುತ್ತಿದ್ದನೆಂದು ತಿಳಿಯವೆಯೋ ? ಹಾಗಿದ್ದರೆ ದಿಲೀಪನ ಮನೆಯಲ್ಲಿಯ ದನಗಳಿಗೂ, ಆತನ ಪ್ರಜೆಗಳಿಗೂ ಏನೂ ಭೇದವಿದ್ದಿಲ್ಲವೆಂದು ಹೇಳಿ, ದಿಲೀಪನನ್ನು ಪಶುಪಾಲಕರಲ್ಲಿ ಎಣಿಸಬೇಕಾದೀತು. ಆದರೆ ಅಂಥ ದನಕಾಯುವ ದಿಲೀಪನನ್ನು ಪ್ರಜೆಗಳ ತಂದೆಯೆಂದು ಕರೆಯುವಷ್ಟು ಮೂರ್ಖನು ಕಾಲಿದಾಸನಿದ್ದಿಲ್ಲ. ಅಂದಬಳಿಕ ದಿಲೀಪನು ಈ ಪಾಶವೀ ಶಿಕ್ಷಣ–ರಕ್ಷಣ–ಪೋಷಣಗಳಿಗಿಂತಲೂ ಉಚ್ಚತರಗಳಾದ ಶಿಕ್ಷಣ–ರಕ್ಷಣ– ಪೋಷಣಗಳನ್ನೇನು ಮಾಡುತ್ತಿರಬಹುದೆಂಬದನ್ನು ವಿಚಾರಿಸುವದೇ ಸಮಂಜಸತನವಾಗಿರುವದು. ಪಶ್ವಾದಿಗಳು ಬುದ್ಧಿಹೀನವಾಗಿರುವದರಿಂದ ಅವು ಕೇವಲ ಭೋಗ್ಯಯೋನಿಗಳೆನಿಸುವವು; ಮನುಷ್ಯನು ಬುದ್ಧಿವಂತನಾದ್ದರಿಂದ ಅವನು ಕರ್ತವ್ಯಯೋನಿಯವನೆನಿಸುವನು. ಈ ಭಿನ್ನಯೋನಿಯ ಪ್ರಾಣಿಗಳ ಶಿಕ್ಷಣ–ರಕ್ಷಣ–ಪೋಷಣಗಳಲ್ಲಿಯಾದರೂ ಭೇದವಿದ್ದೇ ತೀರಬೇಕು. ಅನ್ಯರ ಭಯದಿಂದ, ಅಂದರೆ ಅನ್ಯರ ದೇಹದಂಡನದ ಭಯದಿಂದ ಅನ್ಯರ ಉನ್ನತಿಯ ಸಲುವಾಗಿ ಸಭ್ಯತನವನ್ನು ಅಂದರೆ ಕೃತ್ರಿಮ ಸದ್ಗುಣಗಳನ್ನು ತಾಳುವದು ಪಾಶವೀಶಿಕ್ಷಣದ ಉದ್ದೇಶವು; ಆದರೆ ತನ್ನ ಭಯದಿಂದ, ಅಂದರೆ ತಾನು ಪಾಪ ಮಾಡಿ ಅಧಃಪತನ ಹೊಂದೇನೆಂಬ ಭಯದಿಂದ ತನ್ನ ಉನ್ನತಿಯ ಸಲುವಾಗಿ ಸಭ್ಯತನವನ್ನು ಅಂದರೆ ಸ್ವಾಭಾವಿಕವಾದ ಸದ್ಗುಣಗಳನ್ನು ತಾಳುವದು ಮಾನವೀಶಿಕ್ಷಣದ ಉದ್ದೇಶವು. ಅದರಂತೆ, ಇವು ಕೇವಲ ತನ್ನ ಸುಖದ ಸಾಧನೆಗಳೆಂದು ಅವುಗಳ ಸ್ವಾಮಿತ್ವವನ್ನು ಪಡೆದು, ಇವು ತನ್ನ ಮನಸ್ಸಿಗೆ ಬಂದಂತೆ ಉಪಯೋಗಿಸಿ ಕೊಳ್ಳತಕ್ಕವೆಂಬ ಭಾವನೆಯಿಂದ ಅವುಗಳ ಸ್ವಾತಂತ್ರ್ಯಹರಣಮಾಡಿ ಇತರ ಉಪಭೋಗ್ಯ ಜಡವಸ್ತುಗಳಂತೆ ಅವುಗಳ ರಕ್ಷಣಮಾಡುವದು ಪಾಶವೀರಕ್ಷಣವು; ಆದರೆ ತನ್ನಷ್ಟೇ ಇವರ ಯೋಗ್ಯತೆಯಿದ್ದು, ಇವರು ತಮ್ಮ ಉನ್ನತಿಯ ಸಲುವಾಗಿಯೇ ವ್ಯವಹರಿಸತಕ್ಕವರಾಗಿರುವರೆಂತಲೂ, ಇವರೇ ತನಗೆ ದಯಪಾಲಿಸಿದಂತೆ ಆಗಿದ್ದ ನ್ಯಾಯದ ನಿಯಾಮಕ ಸಂಬಂಧದ ಹೊರತು ಬೇರೆ ಸ್ವಾಮಿತ್ವವು ಇವರ ಮೇಲೆ ತನ್ನದಿರುವದಿಲ್ಲವೆಂತಲೂ ತಿಳಿದು, ಅವರವರ ಧರ್ಮಕ್ಕನುಸರಿಸಿದ ಅವರವರ ಆಚರಣೆಗೆ ಪ್ರತಿಬಂಧ ಬಾರದಂತೆ. ಅಂದರೆ ಅವರ ವ್ಯಾವಹಾರಿಕ ಸ್ವಾತಂತ್ರ್ಯಕ್ಕೆ ಭಂಗಬಾರದಂತೆ, ರಕ್ಷಿಸುವದು ಮಾನವೀರಕ್ಷಣವು. ಅದರಂತೆ ತನ್ನ ಪ್ರಯೋಜನಕ್ಕಾಗಿ ಕೇವಲ ದೇಹಪುಷ್ಟಿಯಲ್ಲಿ ದೃಷ್ಟಿಯನ್ನಿಟ್ಟು ಅವಕ್ಕೆ ಅನುಕೂಲವಾದ ತಿನಸುಗಳನ್ನು ತನ್ನ ಅನುಕೂಲತೆಯಂತೆ ಒದಗಿಸಿಕೊಡವದು ಪಾಶವೀ ಪೋಷಣವು; ಆದರೆ ಅವರವರ ಇಚ್ಛೆಯಂತೆ ಅವರವರು ತಮ್ಮ ದೇಹಪುಷ್ಟಿಯನ್ನೂ, ಪ್ರಾಮುಖ್ಯವಾಗಿ ಜ್ಞಾನಪುಷ್ಟಿ ಯನ್ನೂ ಒದಗಿಸಿಕೊಳ್ಳಲಿಕ್ಕೆ ಅನೂನವಾದ ಅನುಕೂಲತೆಯಿರುವ ಸ್ಥಿತಿಯನ್ನು ಉಂಟುಮಾಡಿ ಅದನ್ನು ಕಾಯ್ದುಕೊಳ್ಳುವದು ಮಾನವೀ ಪೋಷಣವು. ಹೀಗೆ ಪಾಶವೀಮಾನವೀ–ಶಿಕ್ಷಣ–ರಕ್ಷಣ–ಪೋಷಣಗಳಲ್ಲಿಯ ಮಹದಂತರವನ್ನು ತಿಳಿದು ಪಾಶವೀ ವ್ಯವಹಾರಗಳನ್ನು ಪಶುಗಳಿಗಾಗಿಯೂ, ಮಾನವೀ ವ್ಯವಹಾರಗಳನ್ನು ಮನುಷ್ಯರಿಗಾಗಿಯೂ ಉಪಯೋಗಿ ಸುತ್ತಿದ್ದದ್ದರಿಂದಲೇ ಮಹಾತ್ಮನಾದ ದಿಲೀಪರಾಜನು ತಾನು ಪ್ರಜೆಗಳ ಜನ್ಮದಾತೃವಾಗದಿದ್ದರೂ,

ಅವರ ತಂದೆಯೆನಿಸಿಕೊಂಡವನು! ತನಗೆ ಜನ್ಮಕೊಟ್ಟದ್ದರಿಂದ ಅರಸನಿಗೆ ಪ್ರಜೆಗಳು ಪಿತೃಗಳೆನಿಸುವರು; ಆದರೆ ಕೇವಲ ಜನ್ಮಕೊಟ್ಟವನ ಪಿತೃತ್ವಕ್ಕಿಂತ ಶಿಕ್ಷಣ ರಕ್ಷಣ–ಪೋಷಣಗಳ ತನ್ನ ಅನುಕೂಲತೆ ಮಾಡಿಕೊಡುವವನ ಪಿತೃತ್ವವು ಪ್ರಜೆಗಳ ಕೃತಾರ್ಥತೆಯ ದೃಷ್ಟಿಯಿಂದ ವಿಶೇಷ ಗೌರವದ್ದಾಗಿರುವ ಕಾರಣ, ಅರಸನಿಗೆ ಪ್ರಜೆಗಳು ತಂದೆಯೆನ್ನುವದು ವಾಡಿಕೆ ಯಾಗಿರುವದು; ಆದರೂ ತನಗೆ ಜನ್ಮಕೊಟ್ಟವರೆಂದು ತಿಳಿದು ಅರಸನು ಪ್ರಜೆಗಳ ಶಿಕ್ಷಣ–ರಕ್ಷಣ–ಪೋಷಣರೂಪವಾದ ಅವರ ಯೋಗಕ್ಷೇಮವನ್ನು ನೋಡುವ ಭರದಲ್ಲಿ ತನ್ನನ್ನು ಮರೆಯಬೇಕು; ಅದರಂತೆ ತಮ್ಮನ್ನು ಪುತ್ರವತ್ ಪಾಲಿಸುವವನೆಂದು ತಿಳಿದು ಪ್ರಜೆಗಳು ಅತ್ಯಂತ ನಿಷ್ಠೆಯಿಂದ ರಾಜನ ಆಜ್ಞಾಪಾಲನರೂಪವಾದ ಅವನ ಸೇವೆಯನ್ನು ಮಾಡುವ ಭರದಲ್ಲಿ ತಮ್ಮನ್ನು ಮರೆಯಬೇಕು. ಹೀಗೆ ಅಕೃತ್ರಿಮವಾದ ಪರಸ್ಪರಾನುರಾಗದ ಸಂಬಂಧವುಳ್ಳವರೇ ರಾಜಪ್ರಜರು. ಇಂಥ ರಾಜರ ಅಂದರೆ ಧರ್ಮಿಷ್ಠರಾಜರ ದ್ರೋಹವು ಪ್ರಜೆಗಳಿಗೂ, ಇಂಥ ಪ್ರಜೆಗಳ ಅಂದರೆ ಧರ್ಮಿಷ್ಠ ಪ್ರಜೆಗಳದ್ರೋಹವು ರಾಜನಿಗೂ ಐಹಿಕದಲ್ಲಿ ದುಃಖಕ್ಕೂ, ಪಾರತ್ರದಲ್ಲಿ ನರಕಕ್ಕೂ ನಿಶ್ಚಯವಾಗಿ ಸಾಧನವಾಗುವವೆಂಬದನ್ನು ರಾಜ–ಪ್ರಜೆಗಳಿಬ್ಬರೂ ಲಕ್ಷದಲ್ಲಿಡತಕ್ಕದ್ದು. ಹೀಗೆ ಧರ್ಮಿಷ್ಠರಾಗಿರದ ನೀಚಸ್ವಾರ್ಥಪ ರಾಯಣರಾದ ರಾಜ– ಪ್ರಜೆಗಳಿಬ್ಬರೂ ಪರಸ್ಪರರ ರಕ್ಷಣ ಶೋಷಣಕ್ಕಾಗಿ ಅವತರಿಸಿದ ನರರಾಕ್ಷಸರೆಂದು ತಿಳಿಯಬೇಕು; ಅಂದಬಳಿಕ ಅಂಥವರ ದ್ರೋಹವು ಹ್ಯಾಗೆ ಬಾಧಕ ವಾದೀತು!

ತಿರುವೇಂಕಟಾ, ಇನ್ನು ರಾಜದ್ರೋಹದ ಸ್ಪಷ್ಟ ಸ್ವರೂಪವನ್ನು ಸ್ವಲ್ಪದರಲ್ಲಿ ಹೇಳುವೆನು ಕೇಳು. ರಾಜನ ದ್ರೋಹವೆಂದರೆ ರಾಜನ ಪವಿತ್ರವಾದ ಆಜ್ಞೆಗಳ, ಅಂದರೆ ಅಹಿಂಸೆ, ಸತ್ಯ, ಸಮತೆಗಳನ್ನು ಪ್ರಸ್ಥಾಪಿಸುವ ಆಜ್ಞೆಗಳ ಭಂಗವೆಂದು ತಿಳಿ; ಯಾಕಂದರೆ, ಅರಸನ ಆಜ್ಞಾಭಂಗವು ಆತನ ಅಶಸ್ತ್ರವಧವೆಂದು ಜ್ಞಾನಿಗಳು ಹೇಳಿರುವರು. ಆದ್ದರಿಂದ ರಾಜನ ಶಾಸನ ಮಾಡುವ ಪ್ರಸಂಗದಲ್ಲಿ ರಾಷ್ಟ್ರವು ರಾಜನ ಮಾನಸಿಕ ಈ ಅಶಸ್ತ್ರವಧ ಮಾಡಬೇಕಲ್ಲದೆ, ಶಾರೀರಿಕ ಸಶಸ್ತ್ರ ವಧವನ್ನು ಸರ್ವಥಾ ಮಾಡಬಾರದು; ಯಾಕಂದರೆ ಅಭಿಷಿಕ್ತ ರಾಜನ ವಧೆಯು ಬ್ರಹ್ಮಹತ್ಯೆ ಗಿಂತಲೂ ಘೋರ ಪಾಪಕರವೆಂದು ಶ್ರೀಮದ್ಭಾಗವತದ ನವಮಸ್ಕಂದದಲ್ಲಿ ಜಮದಗ್ನಿಯು ತನ್ನ ಮಗ ಪರಶುರಾಮನಿಗೆ ಹೇಳಿರುವನು. ಏನಂದರೆ–ತಮ್ಮಾ, ನೀನು ಒಳ್ಳೇ ಪರಾಕ್ರಮಿ ಯೆಂಬದರಲ್ಲಿ ಸಂಶಯವಿಲ್ಲ; ಆದರೆ ಸರ್ವದೇವತಾರೂಪನಾದ ರಾಜನನ್ನು ಕೊಂದದ್ದು ಯೋಗ್ಯವಾಗಲಿಲ್ಲ. ರಾಮಾ, ನಾವು ಬ್ರಾಹ್ಮಣರು ಇಷ್ಟು ಯೋಗ್ಯತೆಯನ್ನು ಪಡೆದದ್ದು ಕೇವಲ ನಮ್ಮ ಕ್ಷಮಾಗುಣದಿಂದ! ಅಪ್ಪಾ, ಕ್ಷಮಾಗುಣವೇ ಬ್ರಾಹ್ಮಣರಿಗೆ ಭೂಷಣವು. ಈ ಗುಣಕ್ಕೆ ಲುಬ್ಧನಾಗಿ ಪರಮೇಶ್ವರನು ಬ್ರಾಹ್ಮಣರಿಗೆ ಬೇಗನೆ ಪ್ರಸನ್ನನಾಗುವನು. ನೀನು ಹತ್ಯಾರೂಪ ಪಾಪಕ್ಕೆ ಗುರಿಯಾದದಷ್ಟೇ ಅಲ್ಲ, ಅಭಿಷಿಕ್ತ ರಾಜನ ಹತ್ಯೆಯು ಬ್ರಹ್ಮಹತ್ಯೆಗಿಂತಲೂ ಹೆಚ್ಚಿನದಾದ್ದರಿಂದ ನೀನು ಮಹಾಪಾಪಕ್ಕೆ ಗುರಿಯಾದೆ; ಆದ್ದರಿಂದ ನೀನು ಪರಮಾತ್ಮನ ಧ್ಯಾನಮಾಡುತ್ತ ತೀರ್ಥ ಯಾತ್ರೆಗಳನ್ನು ಮಾಡಿ ಪಾಪವನ್ನು ಕಳೆದುಕೊಂಡುಬಿಡು, ಎಂದು ಹೇಳಿದನು.

ತಿರುವೇಂಕಟಾ, ಈ ಸಂಬಂಧದಿಂದ ಇನ್ನಿಷ್ಟು ಹೇಳುವೆನು ಕೇಳು, ಯೋಗ್ಯ ರಾಜನೆಂದರೆ, ಅವರವರ ಧರ್ಮಾಚರಣೆಗೆ ಬಾಧೆ ತಾರದಂತೆ ಪ್ರಜೆಗಳನ್ನು ನಿಸ್ಪೃಹವೃತ್ತಿಯಿಂದ ರಕ್ಷಿಸುವವನು. ಈ ಸಂಬಂಧದಿಂದ ಅದೇ ಭಾಗವತದ ಪ್ರಥಮ ಸ್ಕಂದದಲ್ಲಿ ಶೃಂಗಿಯು ತನ್ನ ತಂದೆಯ ಕೊರಳಿಗೆ ಹಾವು ಸುತ್ತಿದ ಸಿಟ್ಟಿನಿಂದ ಪರೀಕ್ಷಿತ ರಾಜನಿಗೆ :''ನೀನು ಏಳನೆಯ ದಿವಸ ಹಾವು ಕಡಿದು ಸಾಯಿ'' ಎಂದು ಶಾಪಕೊಟ್ಟಾಗ ಶೃಂಗಿಯ ತಂದೆಯಾದ ಶಮೀಕೃಷಿಯು ಮಗನನ್ನು ಗೌರವಿಸುವದೊತ್ತಟ್ಟಿಗುಳಿದು ತಿರಸ್ಕಾರದಿಂದ ಆತನನ್ನು ಕುರಿತು–''ಎಲೈ ಮೂರ್ಖಶಿರೋಮಣಿಯೇ, ನೀನು ಇದೇನು ಮಾಡಿಬಿಟ್ಟೆ! ಎಲಾ, ಸಣ್ಣ ತಪ್ಪಿಗಾಗಿ ಇಷ್ಟು ದೊಡ್ಡ ಶಿಕ್ಷೆಯು! ಮೂರ್ಖಾ, ಯಾವನ ಪರಾಕ್ರಮದಿಂದ ಯಾವತ್ತು ಪ್ರಜಾಜನವು ಸುಖದಿಂದಿದ್ದು, ತಮ್ಮ ತಮ್ಮ ಕರ್ಮಗಳನ್ನು ನಿರ್ಭಯದಿಂದ ಮಾಡುತ್ತಿರುವದೋ, ಆ ಧರ್ಮನಿಷ್ಠ ರಾಜನನ್ನು ನೀನು ಯ�ಃಕಶ್ಚಿತ ಮನುಷ್ಯನಂತೆ ತಿಳಿದೆಯೇನು? ಎಲಾ, ರಾಜನೆಂದರೆ ಪ್ರತ್ಯಕ್ಷ ಚಕ್ರಪಾಣಿಯಾದ ವಿಷ್ಣುವು. ರಾಜನಿಲ್ಲದ ಪ್ರಜೆಗಳು ರಕ್ಷಕನಿಲ್ಲದ ಕುರಿಗಳ ಹಿಂಡಿನಂತೆಯೇ ಸರಿ. ನಿನ್ನ ಶಾಪದಿಂದ ರಾಜನು ನಷ್ಟವಾದದ್ದರಿಂದ ಇನ್ನು ಮುಂದೆ ಪೃಥ್ವಿಯಲ್ಲಿ ಆಗುವ ಪಾಪಗಳೆಲ್ಲ ನಿಷ್ಕಾರಣ ನಮ್ಮ ತಲೆಯಮೇಲೆ ಬೀಳುವವು; ಯಾಕಂದರೆ ಅಂಥ ಸ್ಥಿತಿಯನ್ನುಂಟುಮಾಡಲಿಕ್ಕೆ ನಾವೇ ಕಾರಣರಾದೆವು. ಪೃಥ್ವಿಯು ಅರಾಜಕವಾದರೆ ಎಲ್ಲ ಕಡೆಯಲ್ಲಿ ಕೊಲೆ ಸುಲಿಗೆಗಳಾಗಿ ಸಜ್ಜನರು ವಿಪತ್ತುಗಳನ್ನು ಭೋಗಿಸಬೇಕಾಗುವದು. ಇಂಥ ಕಾಲವು ಒದಗಿತೆಂದರೆ ಜನರು ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳಂತೆ ನಡೆಯದಾಗುವರು. ಎಲ್ಲ ಜನರು ಆಹಾರ, ನಿದ್ರಾ, ಮೈಥುನ ಇವುಗಳ ವ್ಯಾಸಂಗದಲ್ಲಿ ಮಗ್ನರಾಗುವರು. ಜಾತಿ–ರೀತಿಗಳ ವಿಚಾರವು ಉಳಿಯುವದಿಲ್ಲ, ಎಲೈ ಮತಿಮಂದನೇ, ಪರೀಕ್ಷಿತನೆಂದರೆ ಸಾಮಾನ್ಯನಲ್ಲ. ಆತನು ಸೂರ್ಯನಂತೆ ತೇಜಸ್ವಿಯೂ, ಕೀರ್ತಿಶಾಲಿಯೂ, ಮಹಾಭಗವದ್ಭಕ್ತನೂ ಇದ್ದು, ಆತನು ಅಶ್ವಮೇಧವನ್ನು ಮಾಡುವವನಾದ್ದರಿಂದ ರಾಜರ್ಷಿಗಳಲ್ಲಿ ಶ್ರೇಷ್ಠನಿರುವನು. ಹಸಿವೆ, ನೀರಡಿಕೆ, ಶ್ರಮ ಇವುಗಳಿಂದ ಪೀಡಿತನಾದದ್ದರಿಂದ ಅವನ ಕೈಯಿಂದ ಒಂದು ಪಕ್ಷದಲ್ಲಿ ಅಪರಾಧವು ಘಟಿಸಿದ್ದರೂ ಆತನು ನಮ್ಮ ಶಾಪಕ್ಕೆ ಪಾತ್ರನಲ್ಲವು.''

''ತಿರುವೇಂಕಟಾ, ಯೋಗ್ಯ ರಾಜರ ಹತ್ಯೆಯ ಮಹಾಪಾತಕವನ್ನು ಅರಿತುಕೊಂಡೆಯಾ? ಇನ್ನು ನೀಚಸ್ವಾರ್ಥಪರರಾದ ಪೃಥ್ವಿ ಅಪಹಾರಕ ದುಷ್ಟ ರಾಜರ ಅಪವಿತ್ರ ಆಜ್ಞೆಗಳು, ಅಂದರೆ ಮೇಲೆ ಹೇಳಿದ ಅಹಿಂಸೆ, ಸತ್ಯ, ಸಮತೆಗಳನ್ನು ಸ್ಥಾಪಿಸುವ ಉದ್ದೇಶವಿಲ್ಲದಂಥ, ಅಥವಾ ಕೋರಿಕೆಗಾಗಿ ಮಾತ್ರ ಅಂಥ ಉದ್ದೇಶವನ್ನು ವ್ಯಕ್ತಮಾಡಿ ಕಾರ್ಯತಃ ಪ್ರಜೆಗಳ ಸ್ವಾತಂತ್ರ್ಯ ಹರಣ ಮಾಡುವಂಥ ಆಜ್ಞೆಗಳು ನಿಜವಾಗಿ'' ರಾಜಾಜ್ಞೆಗಳೇ ಅಲ್ಲದ್ದರಿಂದ ಅವುಗಳ ಭಂಗವು ರಾಜದ್ರೋಹವಾಗುವದಿಲ್ಲ!

ಈ ಮೇರೆಗೆ ನಿರೂಪಿಸಿದ್ದನ್ನು ಕೇಳಿ ತಿರುವೇಂಕಟನು—'' ಮಹಾತ್ಮನ್, ಇಂದಿನ ದಿನವೇ ಸುದಿನವು. ನಿಮ್ಮ ಬೋಧದಿಂದ ನನ್ನ ಭ್ರಾಂತಿಯ ನಿವಾರಣವಾಗಿ ನಾನು

ಧನ್ಯನಾದೆನು. ಯೋಗ್ಯ ರಾಜನ ಸೇವೆಯಲ್ಲಿಯೂ, ಯೋಗ್ಯ ಪ್ರಜೆಗಳ ಸೇವೆಯಲ್ಲಿಯೂ ದೇಹವನ್ನು ಸವೆಸುವವರು ನಿಶ್ಚಯವಾಗಿ ಧನ್ಯರೇ ಸರಿ! ಪರಸ್ಪರಾನುರಾಗವುಳ್ಳ ರಾಜಪ್ರಜೆಗಳಲ್ಲಿ ಭೇದವೇ ಇಲ್ಲದಿರಲು, ರಾಜಭಕ್ತಿಯೇ ದೇಶಭಕ್ತಿಯಾಗಿಯೂ, ದೇಶಭಕ್ತಿಯೇ ರಾಜಭಕ್ತಿಯಾಗಿಯೂ ಪರಿಣಮಿಸುವದರಿಂದ ಯಾರ ಸೇವೆ ಮಾಡಿದರೂ ಅದು ಲೋಕಹಿತಕ್ಕೇ ಕಾರಣವಾಗುವದು. ಈಗ ನಾನು ಅಯೋಗ್ಯ ರಾಜನಾದ ತಘಲಖ ಮಹಮ್ಮದನ ಸೇವೆಯನ್ನು ಬಿಟ್ಟು ಧರ್ಮವೃದ್ಧಿಗಾಗಿ ಲೋಕಾರಾಧನೆ ಮಾಡಬೇಕಾಗಿದೆ. ಆದರೆ ಗುರುದೇವಾ, ಆ ಲೋಕಾರಾಧನೆಯ ಮಹತ್ವವನ್ನು ಇನ್ನಿಷ್ಟು ಹೇಳಿಬಿಡು'' ಎಂದು ಕೇಳಿಕೊಳ್ಳಲು, ವಿರೂಪಾಕ್ಷಾರ್ಯರು—''ತಿರುವೇಂಕಟಾ, ಲೋಕಾರಾಧನೆಯ ಮಹತ್ವವನ್ನು ಎಷ್ಟೆಂದು ವರ್ಣಿಸಬೇಕು? ''ಲೋಕಾರಾಧನೆಯೇ ಶ್ರೇಷ್ಠವಾದ ಈಶ್ವರಾರಾಧನೆ''ಯೆಂಬ ಗುಟ್ಟಿನ ಮಾತನ್ನು ನೆನಪಿನಲ್ಲಿಡು. ಈ ಸಂಬಂಧದಿಂದ ಲಿಂಗಪುರಾಣದಲ್ಲಿ ಹೇಳಿರುವದೇನಂದರೆ –ಶಿವನ ಅಷ್ಟ ಮೂರ್ತಿಗಳು – ೧ ಪೃಥ್ವೀ, ೨ ಜಲ, ೩ ಅಗ್ನಿ, ೪ ವಾಯು, ೫ ಆಕಾಶ, ೬ ಸೂರ್ಯ, ೭ ಚಂದ್ರ, ೮ ಆತ್ಮ ಎಂಬವುಗಳಾಗಿದ್ದು ಇವುಗಳಿಗೆ ಕ್ರಮವಾಗಿ ಶರ್ವ, ಭವ, ಪಶುಪತಿ, ಈಶಾನ, ಭೀಮಸ, ರುದ್ರ, ಮಹಾದೇವ, ಉಗ್ರ ಎಂಬ ಹೆಸರುಗಳಿರುವವು. ದೇಹಧಾರಿಗಳಾದ ಯಾವತ್ತು ಪ್ರಾಣಿಗಳ ಕಠಿಣ ಭಾಗವೆಂದರೆ ಪೃಥ್ವಿಯ ಭಾಗವು ಶರ್ವನ ಅಂಶವಿರುತ್ತದೆಂತಲೂ, ಶರೀರದೊಳಗಿನ ವಾಯುವಿನ ಪರಿಣಾಮಗಳು ಈಶಾನನ ಅಂಶವೆಂತಲೂ, ಶರೀರದೊಳಗಿನ ಪೊಳ್ಳು ಅಥವಾ ಛಿದ್ರಗಳು ಭೀಮಾಂಶವೆಂತಲೂ, ಕಣ್ಣೊಳಗಿನ ತೇಜಸ್ಸು ರುದ್ರಾಂಶವೆಂತಲೂ, ಎಲ್ಲರ ಶರೀರ ದೊಳಗಿನ ಮನಸ್ಸು ಮಹಾದೇವನ ಅಂಶವೆಂತಲೂ, ಎಲ್ಲ ಶರೀರಗಳಲ್ಲಿರುವ ಆತ್ಮನು ರುದ್ರಾಂಶವೆಂತಲೂ ತಿಳಿಯತಕ್ಕದ್ದು. ತಿರುವೇಂಕಟಾ, ಈ ಸಂಬಂಧದಿಂದ ಪರಮಾರ್ಥಿಗಳು ತಿಳಿದುಕೊಳ್ಳುವದೇನೆಂದರೆ– ಪ್ರಾಣಿಯು ಯಾವ ಜನ್ಮದಲ್ಲಿಯೇ ಹುಟ್ಟಿರಲಿ, ಅದರ ಶರೀರದಲ್ಲಿ ಶಿವನ ಅಷ್ಟಮೂರ್ತಿಯ ಹೊರತು ಬೇರೆ ಅಂಶವೇ ಇರುವದಿಲ್ಲ. ಯಾವತ್ತು ಶರೀರದ ಭಾಗಗಳು ಶಿವನ ಏಳು ಮೂರ್ತಿಗಳಾಗಿದ್ದು, ಶಿವನ ಎಂಟನೆಯ ಮೂರ್ತಿಯಾದ ಆತ್ಮವು ಯಾವತ್ತು ಶರೀರಗಳಲ್ಲಿರುವದು. ಶ್ರೇಯಸ್ಸನ್ನು ಸಂಪಾದಿಸಲಿಚ್ಛಿಸುವವರು ಈ ಸರ್ವಲೋಕಾತ್ಮಕ ಅಷ್ಟಮೂರ್ತಿಯನ್ನು ಭಜಿಸಬೇಕು. ಒಂದಾನೊಂದು ಪ್ರಾಣಿಯನ್ನು ಅನುಗ್ರಹಿಸಿದರೆ ಅಷ್ಟಮೂರ್ತಿ ಶಂಕರನನ್ನು ಆರಾಧಿಸಿದಂತಾಗುವದು. ಯಾರದಾದರೂ ಅವಜ್ಞೆಯನ್ನು ಮಾಡಿದರೆ, ಯಾರನ್ನಾದರೂ ನಿಗ್ರಹಿಸಿದರೆ ಅದೆಲ್ಲ ಶಿವನ ಕಡೆಗೇ ಹೋಗುವದು; ಆದ್ದರಿಂದ ಲೋಕದಮೇಲೆ ಉಪಕಾರ ಮಾಡುವದು, ಅನುಗ್ರಹ ಮಾಡುವುದು, ಲೋಕಕ್ಕೆ ಅಭಯವೀಯುವದು, ಶಂಕರನ ಉತ್ತಮ ಪೂಜೆಯಾಗಿರುವುದು, ಶಿವಭಕ್ತರಾದವರು ಇಂಥ ಲೋಕಾರಾಧನರೂಪ ಶಿವಪೂಜೆಯನ್ನೇ ಮಾಡುತ್ತಿರಬೇಕು. ತಿರುವೇಂಕಟಾ, ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ಭಗವದ್ಗೀತೆಯ ಉಪದೇಶ ಮಾಡಿದನಂತರ ತನ್ನ ವಿರಾಡ್ರೂಪವನ್ನು ತೋರಿಸಿದ್ದು ಪ್ರಸಿದ್ಧವಿರುವದಷ್ಟೆ? ಆ

ವಿರಾಡ್ರೂಪದ ಆರಾಧನೆಯೆಂದರೆಯೇ ಲೋಕಾರಾಧನೆಯೆಂದು ತಿಳಿ. ವಿವೇಕಿಯಾದ ನಿನಗೆ ಇದಕ್ಕೂ ಹೆಚ್ಚಿಗೆ ಹೇಳಲವಶ್ಯವಿಲ್ಲ.''

ವಿರೂಪಾಕ್ಷಾರ್ಯರ ಈ ಸುಂದರವಾದ ಸತ್ಯಪೂರ್ಣ ತಾತ್ವಿಕ ವಿವೇಚನವನ್ನು ಕೇಳಿ ತಿರುವೇಂಕಟನು ಧನ್ಯನಾಗಿ, ಶುದ್ಧಾಂತಃಕರಣದಿಂದ ದೇಶೋದ್ಧಾರದ ಕಾರ್ಯಕ್ಕೆ ತೊಡಗಲು ನಿಶ್ಚಯಿಸಿದನು. ಆಧ್ಯಾತ್ಮಿಕ ಸಾಮರ್ಥ್ಯದ ಸದ್ಗುರುನಾಥನು ಶಿಷ್ಯನನ್ನು ಉದ್ಧರಿಸುವ ಇಚ್ಛೆಯಿಂದ ತನ್ನ ವರದ ಹಸ್ತವನ್ನು ಶಿಷ್ಯನ ತಲೆಯಮೇಲೆ ಇಟ್ಟ ಮಾತ್ರದಿಂದ ಆ ಶಿಷ್ಯನ ಉದ್ಧಾರವಾಗುತ್ತಿರಲು, ವಿರೂಪಾಕ್ಷಾರ್ಯರಂತಹ ಆಧ್ಯಾತ್ಮಿಕ ಬಲದ ಮಹಾತ್ಮರು ತಿರುವೇಂಕಟನನ್ನು ದೇಶದ್ರೋಹದ ಮಹಾಪಾತಕದಿಂದ ಉದ್ಧರಿಸುವ ಮನಸ್ಸು ಮಾಡಿ, ತಮ್ಮ ಸತ್ಯಮಾರ್ಗ ಬೋಧದಿಂದ ಅವನನ್ನು ಉದ್ಧರಿಸಿದ್ದೇನಾಶ್ಚರ್ಯವು? ಮಹಾತ್ಮರ ಶಕ್ತಿಯ ಪ್ರಭಾವವೇ ಅಷ್ಟು ವಿಲಕ್ಷಣವಾದದ್ದು! ಹೀಗೆ ಸತ್ಸಮಾಗಮದಿಂದ ಶುದ್ಧಾಂತಃಕರಣ ವುಳ್ಳವನಾದ ತಿರುವೇಂಕಟನು ಆ ಮಹಾತ್ಮರ ಸಮಾಗಮವಾಗುವ ಪೂರ್ವಕ್ಷಣದಲ್ಲಿ ತನ್ನ ದುರಾಲೋಚನೆಯಿಂದ ಮಾಡಹೋದ ಒಂದು ಮಹತ್ಪಾಪದ ಕೃತಿಗಾಗಿ ಈಗ ಪಶ್ಚಾತ್ತಾಪ ಪಡತೊಡಗಿದನು. ಪ್ರಿಯ ವಾಚಕರೇ, ತಿರುವೇಂಕಟನ ಈ ಪಾಪದ ಕೃತಿ ಯಾವುದು? ಆ ಪಾಪದ ಕೃತಿಯೇ ಕನ್ನಡಿಗರ ಇಷ್ಟಾರ್ಥಪೂರ್ತಿಗೆ ಹ್ಯಾಗೆ ಕಾರಣವಾಯಿತು? ಎಂಬದು ಪ್ರಸಂಗವಶಾತ್ ನಿಮಗೆ ಗೊತ್ತಾಗಬಹುದು!

## ಮಹಾತ್ಮರ ಕಾರಾಗೃಹ ವಾಸವು !

ಕಾಂಚನಗಡದ ಅರಮನೆಯದೊಂದು ಏಕಾಂತದ ಕೋಣೆಯು; ಎಂಟು ತಾಸಿನ ಇಳಿಯಹೊತ್ತಾಗಿದೆ; ಆಗ ಅಲ್ಲಿ ಮಲಿಕನಾಯಬನು ಒಬ್ಬನೇ ಆಲೋಚಿಸುತ್ತ ಕುಳಿತು ಕೊಂಡಿದ್ದಾನೆ; ಅಬದುಲರಹಿಮಾನನು ಮಾಧವಾಚಾರ್ಯರನ್ನೂ ಕಾಸಿಮುಖಾನನನ್ನೂ ಸೆರೆಹಿಡಿದು ತಂದ ವಿಷಯವೊಂದೇ ಆತನ ಮನಸ್ಸನ್ನು ವ್ಯಾಪಿಸಿಬಿಟ್ಟಿದೆ. ಆ ಕಾಲದ ರಾಜಕಾರಣ ಪುರುಷರಲ್ಲಿ ಹೆಸರು ತಕ್ಕೊಳ್ಳತಕ್ಕವನಾದ ಆ ಯವನ ಮುತ್ಸದ್ದಿಗೂ ಮಾಧವಾಚಾರ್ಯರ ತಂತ್ರವು ತಿಳಿಯದಾಗಿದೆ. ಆತನು ಹಾಗೆ ವಿಚಾರಿಸಿದರೂ, ಹೀಗೆ ವಿಚಾರಿಸಿದರೂ, ಹ್ಯಾಗೆ ವಿಚಾರಿಸಿದರೂ ಆತನ ಮನಸ್ಸಿಗೆ ಸಮರ್ಪಕವಾಗದಾಗಿದೆ. ಆಗ ಆತನು ಮನಸ್ಸಿನಲ್ಲಿ–ಅಹಹ! ಏನು ವಿಚಿತ್ರವಿದು! ಮಹಾತೇಜಸ್ವಿಗಳಾದ ಮಾಧವಾ ಚಾರ್ಯರಂಥವರು ಒಂದು ಪತ್ರದ ಮೇಲಿನಿಂದ ತಾವಾಗಿ ಸೆರೆಯಾಳಾಗಬರುವದೆಂದರೆ, ಜಗತ್ತಿನೊಳಗಿನ ಅತಿ ವಿಲಕ್ಷಣ ಸಂಗತಿಗಳಲ್ಲಿ ಒಂದಾಗಿರುವದೆಂಬದರಲ್ಲಿ ಸಂಶಯವಿಲ್ಲ! ಕಾಸಿಮುಖಾನನಂಥ ವೀರಾಗ್ರಣಿಯಾದ ಸ್ವಚ್ಛಂದ ಪುರುಷನನ್ನು ಆಚಾರ್ಯರು ತಾವು ಸ್ವತಃ ತಮ್ಮ ಅನುಯಾಯಿಯನ್ನಾಗಿ ಮಾಡಿಕೊಂಡದ್ದು ಹೋಗಲಿ; ಆದರೆ ಅವರ ಶಿಷ್ಯಳೆನಿಸುವ

ವೈರಾಗಿಣಿಯೆಂಬ ಒಬ್ಬ ಸರ್ವಸಾಧಾರಣ ಹೆಸರು, ಮಹಮ್ಮದ ತಘಲಖನಂಥ ಘನವಂತನನ್ನು ದಂಗುಬಡಿಸಿದ್ದು ಸಾಮಾನ್ಯಕೆಲಸವೆ? ಹೀಗೆ ಪರಧರ್ಮದವರ, ಹಾಗು ಕರ್ನಾಟಕದ ಸ್ತ್ರೀಯರ ವೃತ್ತಿಯಲ್ಲಿ ಕೂಡ ಇಂಥ ವಿಲಕ್ಷಣ ಪರಿವರ್ತನವನ್ನುಂಟುಮಾಡಿದ ಕರ್ತೃತ್ವಶಾಲಿಯಾದ ಆ ಬ್ರಾಹ್ಮಣನಿಂದ ಕರ್ನಾಟಕದಲ್ಲಿ ಎಂಥ ಜಾಗ್ರತಿಯಾಗಿರಬಹುದು? ಹೀಗೆ ಕರ್ನಾಟಕಕ್ಕೆ ಕರ್ನಾಟಕವೇ ಎಚ್ಚತ್ತಿರುವಾಗ ಮಾಧವಾಚಾರ್ಯರು ಕೈಲಾಗದವರಂತೆ ಸೆರೆಯಾಳಾಗಿ ಹ್ಯಾಗೆ ಬಂದಿದ್ದಾರು? ಮತ್ತು ಅವರ ಅನುಯಾಯಿಗಳಾದ ಹುಕ್ಕ–ಬುಕ್ಕ–ಕೃಷ್ಣನಾಯಕ– ಮಲ್ಲಸರ್ಜನರಂಥ ವೀರ ಶಿಷ್ಯ ಪರಿವಾರವು ಅವರನ್ನು ಹ್ಯಾಗೆ ಬರಗೊಟ್ಟಿರಬಹುದು? ನಿಷ್ಕಾರಣ ಯುದ್ಧ ಹೂಡಿದ ಆರೋಪಕ್ಕೆ ಒಳಗಾಗಬಾರದೆಂದು ನಾನು ಒಂದು ಅಶಕ್ಯ ಪತ್ರವನ್ನು ಬರೆದಿದ್ದೆನು; ಆದರೆ ಮಹಾ ಧೂರ್ತರಾದ ಆಚಾರ್ಯರು ಆ ನನ್ನ ಅಶಕ್ಯ ಪತ್ರವನ್ನೇ ಶಕ್ಯವಾಗಿ ಮಾಡಿ ತಮ್ಮ ಅಗಾಧ ಬುದ್ಧಿ ವೈಭವವನ್ನು ತೋರಿಸಲು ಸಿದ್ಧರಾದರು! ನನ್ನ ತಂತ್ರಕ್ಕೆ ಪ್ರತಿತಂತ್ರ ಹೂಡುವ ಯೋಗ್ಯತೆಯು ಮಾಧವಾಚಾರ್ಯರಲ್ಲಿ ಉಂಟು; ಅದರಂತೆ, ನಮ್ಮ ಯವನ ಸೈನ್ಯದ ತೋಳತಿಂಡೆಯನ್ನು ಕಳೆಯುವಷ್ಟು ಬಲವು ಆ ಆಚಾರ್ಯರ ಆಜ್ಞಾಧಾರಕ ಶಿಷ್ಯರಾದ ಹುಕ್ಕನೇ ಮೊದಲಾದ ಕನ್ನಡ ವೀರರಲ್ಲಿ ಉಂಟು. ಹಾಗಿಲ್ಲದಿದ್ದರೆ ಮಾಧವಾಚಾರ್ಯರು ನಿಶ್ಚಿಂತರಂತೆ ಕಂಪಲಿಯ ಕೋಟೆಯಲ್ಲಿ ಉಪನ್ಯಾಸದ ಮೇಲೆ ಉಪನ್ಯಾಸ ಕೊಡುತ್ತ ಕುಳಿತುಕೊಳ್ಳುತ್ತಿದ್ದರೆ ? ಆಚಾರ್ಯರ ತಂತ್ರವು ನಿಜವಾಗಿಯೇ ಮಹಾಗೂಢವಾದದ್ದು. ನಾನು ಇದನ್ನು ಮನಸ್ಸಿನಲ್ಲಿ ತಾರದೆ ತಿರುವೇಂಕಟನ ಮಾತಿನಂತೆ ಒಮ್ಮೆಲೆ ಕಂಪಲಿಯ ಕೋಟೆಯ ಮೇಲೆ ಸೈನ್ಯವನು ಕಳಿಸಿದ್ದು ಯೋಗ್ಯವಾಗಲಿಲ್ಲ. ಕದಾಚಿತ್ ತಿರುವೇಂಕಟನಾಗಲಿ, ಶ್ರೀಕಂಠಶಾಸ್ತ್ರಿಯಾಗಲಿ ಅಥವಾ ಇಬ್ಬರೂ ಆಗಲಿ ಆಚಾರ್ಯರ ಪಕ್ಷದವರಾಗಿ ನನ್ನ ಬಳಿಯಲ್ಲಿದ್ದು, ಆಚಾರ್ಯರ ವಿಚಾರದಂತೆ ನನಗೆ ಈ ಆಲೋಚನೆ ಯನ್ನು ಹೇಳಿರಲಿಕ್ಕಿಲ್ಲವೆಂದು ಯಾರು ಹೇಳಬೇಕು? ಒಟ್ಟಿಗೆ ಈಗಿನ ಪ್ರಸಂಗದಲ್ಲಿ ನಾನು ಬಹು ಜಾಗರೂಕನಾಗಿರತಕ್ಕದ್ದು; ಇಲ್ಲದಿದ್ದರೆ ಕಾಸಿಮಖಾನನಂತೆ ನಾನು ಆ ಬ್ರಾಹ್ಮಣನ ಬಲೆಯಲ್ಲಿ ಸಿಕ್ಕು ಉಪಹಾಸಕ್ಕೆ ಪಾತ್ರನಾಗಬೇಕಾದೀತು. ಅಬದುಲರಹಿಮಾನನು ಈಗ ತಿರುವೇಂಕಟನಿಗೆ ಕೋಟೆಯ ಮುತ್ತಿಗೆಯ ಕಾರ್ಯವನ್ನು ಒಪ್ಪಿಸಿ, ಆಚಾರ್ಯರನ್ನು ಕರತಂದದ್ದರಲ್ಲಿ ಸುಖವಾಗುವಂತೆ ನನಗೆ ತೋರುವದಿಲ್ಲ. ಆಚಾರ್ಯರು ದೇಹದೃಷ್ಟಿಯಿಂದ ಸೆರೆಯಾಳಾಗಿ ಬಂದಿದ್ದರೂ, ಅವರ ಅಗಾಧವಾದ ಮಹಿಮೆಯನ್ನೂ, ಉತ್ಕಟ ಸ್ವಾತಂತ್ರ್ಯ ಪ್ರಿಯವಾದ ಅವರ ಮನೋವೃತ್ತಿಯನ್ನೂ ಸೆರೆಯಲ್ಲಿಡುವದು ಯಾರ ಯೋಗ್ಯತೆಯು? ಸ್ವಸ್ವರೂಪ ಜ್ಞಾನಿಗಳು, ಅತೀವ ಸ್ವತಂತ್ರರಾದ ಅವರು ತಮ್ಮ ಮಹಾ ಮಹಿಮೆಯಿಂದ ಕರ್ನಾಟಕಕ್ಕೆ ಸ್ವಾತಂತ್ರ್ಯವನ್ನು ಒದಗಿಸಿಕೊಡಲು ನಿಸ್ಪೃಹವೃತ್ತಿಯಿಂದ ಪಾಮರರಿಗಿಂತಲೂ ಪಾಮರರಾಗಿ ಯತ್ನಿಸುತ್ತಿರುವಾಗ ಅದಕ್ಕೆ ಬಾಧೆಯುಂಟುಮಾಡುವದು ಅಶಕ್ಯವೇ ಸರಿ. ದಕ್ಷಿಣದಲ್ಲಿ ಪಸರಿಸುತ್ತಲಿದ್ದ ಇಸ್ಲಾಮಿಯ ವರ್ಚಸ್ಸು ಅಲ್ಲಾನ ಮನಸ್ಸಿಗೆ ಬಂದಿರಲಿಕ್ಕಿಲ್ಲವೇ? ಧರ್ಮದ ನೆವದಿಂದ ನಾವು ನಡೆಸಿರುವ ಕ್ರೂರತನವನ್ನು ಮನಸ್ಸಿನಲ್ಲಿ ತಂದರೆ, ಅಲ್ಲಾನ

ಕ್ಷೋಭವು ನಮ್ಮ ಮೇಲೆ ಆಗುವ ಸಂಭವವಿರುವದು! ಅಥವಾ ನ್ಯಾಯದಿಂದ ವಿಚಾರಿಸಿ ನೋಡಿದರೆ, ನಮ್ಮ ನಮ್ಮ ಕರ್ಮಗಳಂತೆ ಫಲ ದೊರೆಯುವದು ಸೃಷ್ಟಿಯ ನಿಯಮವಿರುತ್ತಿದ್ದು, ನಮ್ಮ ಕ್ರೂರ ಕರ್ಮಗಳೇ ನಮಗೆ ತೀಕ್ಷ್ಣ ಫಲಕೊಡುತ್ತಿರುವಾಗ ನಮ್ಮ ಕರ್ಮಕ್ಕಾಗಿ ಕ್ಷೋಭಿಸಿದ ಅಪವಾದವನ್ನು ಅಲ್ಲಾನಿಗೆ ಕೊಡುವದು ಗೌಣಪಕ್ಷವೇ ಸರಿ! ಒಟ್ಟಿಗೆ ಮಾಧವಾಚಾರ್ಯರ ಧರ್ಮಮೂಲ ವ್ಯವಹಾರದಲ್ಲಿ ನನಗೆ ಅಂಜಿಕೆ ಬರತೊಡಗಿದೆ. ಕಾಸಿಮಖಾನನು ಮಹಾವೀರನೆಂದು ಆತನನ್ನು ದಕ್ಷಿಣಕ್ಕೆ ಕಳಿಸಿದರೆ, ಆತನು ಮಾಧವಾಚಾರ್ಯರ ಶಿಷ್ಯನಾದನು! ನಮ್ಮವರ ಗತಿಯೇ ಹೀಗಾದ ಬಳಿಕ, ಈಗ ತಿರುವೇಂಕಟನಂಥ ಸ್ವಾರ್ಥಪರಾಯಣನ ನಿಯಮವನ್ನಾದರೂ ಏನು ಹೇಳಬೇಕು? ಆ ಧರ್ಮಹೀನನು ಅತ್ಯಂತ ಸ್ವಾರ್ಥಪರನಾಗಿರುವದರಿಂದ ಹಚ್ಚಗಿದ್ದಲ್ಲಿ ಮೇದು ಬೆಚ್ಚಗಿದ್ದಲ್ಲಿ ಮಲಗುವವನಾಗಿರುವನು!

ಈ ಮೇರೆಗೆ ನಾಯಬನು ವಿಚಾರ ಮಾಡುತ್ತಿರಲು, ಸೇವಕನು ಬಂದು— ''ಅಬದುಲರಹಿಮಾನಖಾನರು ಬಂದಿರುವರೆಂ''ದು ಅರಿಕೆ ಮಾಡಿಕೊಂಡನು. ಆಗ ನಾಯಬನು ಖಾನನನ್ನು ಕರೆಸಿಕೊಂಡು ಆತನನ್ನು ಕುರಿತು—''ಖಾನಸಾಹೇಬ, ಆಚಾರ್ಯರ ಯೋಗಕ್ಷೇಮವು ಸರಿಯಾಗಿ ಸಾಗಿದೆಯೆ?'' ಎಂದು ಕೇಳಲು, ಅಬದುಲರಹಿಮಾನನು— ''ಅಪ್ಪಣೆಯಂತೆ ಎಲ್ಲ ವ್ಯವಸ್ಥೆಯು ಸರಿಯಾಗಿ ಸಾಗಿದೆ. ಆಚಾರ್ಯರ ಧಾರ್ಮಿಕ ಕಾರ್ಯಗಳಿಗಾಗಲಿ, ಅವರ ದಾನಧರ್ಮಗಳಿಗಾಗಲಿ ಯಾವ ತರದ ಅನನುಕೂಲತೆಯನ್ನೂ ಮಾಡಿರುವದಿಲ್ಲ, ಆಚಾರ್ಯರು ಬೇಡಿದ ಪದಾರ್ಥಗಳನ್ನು ನಮ್ಮ ಗಂಗಾಧರ ಶಾಸ್ತ್ರಿಗಳು ಕೈಯಲ್ಲಿ ಹಿಡಿದಿರುವರು; ಆದರೆ ಆಚಾರ್ಯರು ತೀರ ಸಾಮಾನ್ಯ ಜನರಂತೆ ಆಚರಿಸುತ್ತಿದ್ದು, ಹೆಚ್ಚಿನ ಯಾವ ಪದಾರ್ಥಗಳನ್ನೂ ಸ್ವೀಕರಿಸುವದಿಲ್ಲ; ಆದರೆ ಖಾವಿಂದ, ಸೆರೆಯಾಳುಗಳ ವಿಷಯವಾಗಿ ಇಷ್ಟು ಅನುಕೂಲತೆ ಮಾಡಿಕೊಡುವ ಕಾರಣವೇನು?'' ಎಂದು ಕೇಳಿದನು. ಅದಕ್ಕೆ ಸುಜನನಾದ ಮಲಿಕ ನಾಯಬನು–''ಅಬದುಲರಹಿಮಾನ, ನಾನು ಇಷ್ಟು ಅನುಕೂಲತೆ ಮಾಡಿಕೊಡುವ ಕಾರಣವು ಆಚಾರ್ಯರ ಘನತರವಾದ ಯೋಗ್ಯತೆ ಯಾಗಿರುತ್ತದೆ. ನೀತಿಯನ್ನೂ, ನ್ಯಾಯದ ಕಾಯದೆಗಳನ್ನೂ ನೀಚಸ್ವಾರ್ಥಕ್ಕಾಗಿ ಉಲ್ಲಂಘಿಸಿ ಜನಪೀಡೆಯನ್ನುಂಟುಮಾಡಿ ಅಪರಾಧಿಗಳಾದ ದುಷ್ಟ ಸೆರೆಯಾಳುಗಳಿಗೆ, ಆಚಾರ್ಯ ರಂಥ ಮಹಾತ್ಮರನ್ನು ಹೋಲಿಸುವದು ಮಹತ್ಪಾಪವಾಗಿರುವದು. ಆಚಾರ್ಯರು ಸ್ವತಃ ನೀತಿಯನ್ನೂ, ನ್ಯಾಯದ ಕಾಯದೆಗಳನ್ನೂ ಮೀರುವವರಲ್ಲ; ರಾಜರು ನೀತಿ ತಪ್ಪಿ ನಡೆಯ ಹತ್ತಿ ಅನ್ಯಾಯದ ಕಾಯದೆಗಳಿಂದ ಪ್ರಜೆಗಳ ಸ್ವಾತಂತ್ರ್ಯಹರಣ ಮಾಡಿ ಪ್ರಜಾಪೀಡೆ ಯನ್ನುಂಟು ಮಾಡಹತ್ತಿದರೆ ಅಂಥ ರಾಜರನ್ನು ಹಾದಿಗೆ ತರುವದಕ್ಕಾಗಿ ಅಥವಾ ಅಂಥ ರಾಜರ ರಾಜ್ಯಾಧಿಕಾರವನ್ನು ನಷ್ಟಪಡಿಸುವದಕ್ಕಾಗಿ ತಮ್ಮನ್ನೇ ಬಲಿಕೊಡಲಿಕ್ಕೆ ಅವರು ಹಿಂದೆಮುಂದೆ ನೋಡರು! ಅಂತೇ ವೈರಾಗ್ಯಶೀಲರಾದ ಆಚಾರ್ಯರಿಗೆ ಸ್ವತಃ ಸ್ವಾನಂದ ಸಾಮ್ರಾಜ್ಯದ ಹೊರತು ಏನೂ ಬೇಡಾಗಿದ್ದರೂ, ಈಗ ಅನ್ಯರ ಸುಖ–ಶಾಂತಿಗಳಿಗಾಗಿ

ಆತ್ಮಾರ್ಪಣ ಮಾಡಲಿಕ್ಕೆ ನಿಂತಿರುವರು. ಆ ಮಹಾತ್ಮರನ್ನು ದೇವರಿಗಿಂತಲೂ ಹೆಚ್ಚಿನವರಂತೇ ಹೇಳಬೇಕಾಗುವದು; ಯಾಕಂದರೆ ದೇವರು ಬೇಡಿದ್ದನ್ನು ಮಾತ್ರ ಕೊಡುತ್ತ ಆಗುವದನ್ನೆಲ್ಲ ನೋಡುವವನಾಗಿದ್ದರೆ, ಮಾಧವಾಚಾರ್ಯರಂಥ ಮಹಾತ್ಮರು, ಅವರು ನಮ್ಮ ಮುಸಲ್ಮಾನ ಧರ್ಮದವರೇ ಇರಲಿ, ಪರಧರ್ಮದವರೇ ಇರಲಿ ಲೋಕದ ದುಃಖವನ್ನು ನೋಡಿ ಮರುಗಿ ಲೋಕವನ್ನು ದುಃಖಮುಕ್ತ ಮಾಡಲು ಆತ್ಮಾರ್ಪಣ ಮಾಡುವರು; ಆದ್ದರಿಂದ ರಾಜ್ಯಸುಖಕ್ಕೆ ಮೆಚ್ಚಿದ್ದ ನಮ್ಮಂಥ ಅಹಂಕಾರಿಗಳು ಇಂಥವರ ಉದಾತ್ತವಾದ ಆಚರಣೆಗೆ ನಾಚಿದರೂ, ಇವರು ನಮ್ಮ ರಾಜ್ಯ ಸುಖಭೋಗಕ್ಕೆ ಅಡ್ಡಾಗುವರೆಂದು ತಿಳಿದು ಇಂಥವರನ್ನು ನಾವು ಅನಿರ್ವಾಹ ಪಕ್ಷ ಹಿಡಿದು ಅನ್ಯಾಯದಿಂದ ಪ್ರತಿಬಂಧಿಸಿ ಇಡುವೆವು. ಹೀಗೆ ತಿಳಿದೂ ತಿಳಿದೂ ಅನ್ಯಾಯ ಮಾಡಿದ್ದು ಸಾಲದೆ, ದುಷ್ಟ ಸೆರೆಯಾಳುಗಳಂತೆ ಇಂಥ ಮಹಾತ್ಮರನ್ನು ನಡಿಸಿಕೊಳ್ಳುವದೆಂದರೆ, ನಾವು ಮನುಷ್ಯತ್ವದಿಂದ ಭ್ರಷ್ಟರಾಗಿ ಕ್ರೂರ ಶ್ವಾಪದ ವರ್ಗಕ್ಕೆ ಸೇರಿದೆವೆಂದು ಜಗತ್ತಿಗೆ ತೋರಿಸಿದ ಹಾಗೆಯೇ ಸರಿ ! ಆದ್ದರಿಂದ ಅಬ್ದುಲರಹಿಮಾನ, ಪರಿಶುದ್ಧ ರಾಜಕೀಯ ಸ್ಥಿತಿಯನ್ನುಂಟುಮಾಡುವದಕ್ಕಾಗಿ ಯತ್ನಿಸುವ ಇಂಥ ಲೋಕಹಿತತತ್ಪರ ಸೆರೆಯಾಳುಗಳನ್ನು ರಾಜಕೀಯ ಸೆರೆಯಾಳುಗಳೆಂದು ತಿಳಿದು ಅವರನ್ನು ಬಹು ಉದಾತ್ತ ರೀತಿಯಿಂದ ನಡಿಸಿಕೊಳ್ಳಬೇಕಾಗುವದು. ಅದಕ್ಕಾಗಿ ನಾನು ಇಂದು ಮಧ್ಯಾಹ್ನದ ಒಂಬತ್ತು ತಾಸಿನ ಸುಮಾರಕ್ಕೆ ಮಾಧವಾಚಾರ್ಯರನ್ನು ಅವರ ಯೋಗಕ್ಷೇಮವನ್ನು ವಿಚಾರಿಸುವ ನೆವದಿಂದ ಕಾಣುವವನಿದ್ದೇನೆ'' ಎಂದು ಹೇಳಿದನು; ಆದರೆ ಸಾಧಾರಣವಾಗಿ ದುಷ್ಟ ಅಧಿಕಾರಿಗಳ ವರ್ಗಕ್ಕೇ ಸೇರಿದವನಾದ ಅಬದುಲರಹಿಮಾನನಿಗೆ ನಾಯಬನ ಈ ಸೌಜನ್ಯವು ಯೋಗ್ಯವಾಗಿ ತೋರಲಿಲ್ಲ. ತಮ್ಮ ಪಾಶವೀ ಶಕ್ತಿಯಿಂದ ಪ್ರಜೆಗಳನ್ನು ಹಣ್ಣು ಮಾಡಿ ಕುರಿಗಳಂತೆ ಅವರನ್ನು ನಡೆಸಿಕೊಳ್ಳುವದೇ ಯೋಗ್ಯವೆಂದು ಆತನಿಗೆ ತೋರುತ್ತಿತ್ತು. ವ್ಯಕ್ತವಾದ ಪಾಶವೀ ಶಕ್ತಿಯಲ್ಲಿಯೇ ಅವನ ದೃಷ್ಟಿಯಿತ್ತಲ್ಲದೆ, ಗೂಢವಾದ ದೈವೀಶಕ್ತಿಯಲ್ಲಿ ಆತನ ದೃಷ್ಟಿಯಿದ್ದಿಲ್ಲ. ಆದರೂ ನಾಯಬನ ಮುಂದೆ ತನ್ನ ವಿಚಾರಗಳನ್ನು ಪ್ರಕಟ ಮಾಡಲು ಧೈರ್ಯ ಸಾಲದ್ದರಿಂದ ಆತನು ಸುಮ್ಮನೆ ಕುಳಿತುಕೊಂಡನು. ಬಳಿಕ ಮುಂದಿನ ಕಾರ್ಯಗಳ ಸಲುವಾಗಿ ಅವರಲ್ಲಿ ಆಲೋಚನೆಯು ನಡೆದು, ನಾಳೆ ಬೆಳಗಿನಲ್ಲಿಯೇ ಅಬದುಲರಹಿಮಾನನು ದೊಡ್ಡ ಸೈನ್ಯದೊಡನೆ ಕಂಪಲಿಯ ಕೋಟೆಗೆ ಹೊರಡಬೇಕೆಂದು ಗೊತ್ತಾಯಿತು.

ದೊಡ್ಡವರ ಯೋಗ್ಯತೆಯನ್ನು ದೊಡ್ಡವರೇ ತಿಳಿಯುವರೆಂಬ ಮಾತು ಸುಳ್ಳಲ್ಲ. ಮಾಧವಾಚಾರ್ಯರ ಕೀರ್ತಿಯನ್ನು ಕರ್ಣೋಪಕರ್ಣವಾಗಿ ಕೇಳಿದ ಮಲಿಕನಾಯಬನು ಅವರನ್ನು ಕಾಣಲು ಆತುರಪಡುತ್ತಿದ್ದನು; ಆದರೆ ರಾಜ್ಯದ ದೊಡ್ಡ ಅಧಿಕಾರಿಯೆನಿಸುವ ಆತನು ರಾಜನೀತಿಗೆ ವಿರೋಧವಾಗಿ ಸಿಕ್ಕಹಾಗೆ ಅವರನ್ನು ಕಾಣಲಿಕ್ಕೆ ಹೋಗುವ ಹಾಗಿದ್ದಿಲ್ಲ. ಅಂದಿಗೆ ಮಾಧವಾಚಾರ್ಯರು ಕಾಂಚನಗಡಕ್ಕೆ ಬಂದು ಎರಡು ದಿನಗಳಾಗಿದ್ದವು. ಅಂಥ ಘನವಂತರ ಯೋಗಕ್ಷೇಮವನ್ನು ವಿಚಾರಿಸುವದು ಶಿಷ್ಟಾಚಾರಕ್ಕೂ ಚಾತುರ್ಯದ ರಾಜನೀತಿಗೂ ವಿರೋಧವಲ್ಲದ್ದರಿಂದ ಅವರನ್ನು ಕಾಣುವದಕ್ಕಾಗಿ ನಾಯಬನು

ಮಾಧವಾಚಾರ್ಯರಿದ್ದ ಮನೆಗೆ ಹೋದನು. ಆತನ ಅಪ್ಪಣೆಯಂತೆ ಮಾಧವಾಚಾರ್ಯರನ್ನು ಕಾಣುವ ಸ್ಥಳವು ಮೊದಲೇ ಗೊತ್ತಾಗಿದ್ದು, ಅಲ್ಲಿ ಎಲ್ಲ ವ್ಯವಸ್ಥೆಯು ಪದ್ಧತಿಯಂತೆ ಮಾಡಲ್ಪಟ್ಟಿತ್ತು. ಮಾಧವಾಚಾರ್ಯರಿಗೆ ಕೋಟೆಯಿಂದ ಹೊರಗೆ ಹೋಗುವದೊಂದನ್ನು ಬಿಟ್ಟು ಉಳಿದ ಯಾವ ತರದ ಪ್ರತಿಬಂಧವೂ ಇದ್ದಿಲ್ಲವೆಂದು ಹೇಳಬಹುದು. ಅವರ ಅಗ್ನಿಹೋತ್ರಾದಿ ವೈದಿಕ ಕಾರ್ಯಗಳಿಗಾಗಲಿ, ಅವರ ಆಪ್ತೇಷ್ಟರನ್ನು ಕಾಣುವದಕ್ಕಾಗಿಯಾಗಲಿ ಪ್ರತಿಬಂಧವಿದ್ದಿಲ್ಲ. ಒಂದಾನೊಂದು ರಾಜ್ಯದ ಶ್ರೇಷ್ಠಮಂತ್ರಿಗೆ ಇರುವಷ್ಟು ಇತಮಾಮು ಆಚಾರ್ಯರ ವಿಷಯವಾಗಿ ಕಾಯಲ್ಪಟ್ಟಿತು; ಆದರೆ ಮಾಧವಾಚಾರ್ಯರು ಎಂದಿನಂತೆ ತಾವು ಋಷಿವೃತ್ತಿಯಿಂದಲೇ ಇರುತ್ತಿದ್ದರಲ್ಲದೆ, ಹೆಚ್ಚಿನ ಯಾವ ಅನುಕೂಲತೆಗೂ ಒಳಗಾಗಿದ್ದಿಲ್ಲ. ಮಲಿಕನಾಯಬನು ತನ್ನ ದೊಡ್ಡಿಸ್ತನಕ್ಕನುಸರಿಸಿ ಮಾಧವಾಚಾರ್ಯರ ಯೋಗಕ್ಷೇಮದ ವ್ಯವಸ್ಥೆಯನ್ನು ಇಡುವ ಹಾಗೆ ಇಟ್ಟಿದ್ದನು.; ಆದರೆ ಮಾಧವಾಚಾರ್ಯರು ತಮ್ಮ ತಪೋವೃತ್ತಿಗನುಸರಿಸಿ ಇರುವ ಹಾಗೆ ತೀರ ಸಾದಾ ವೃತ್ತಿಯಿಂದ ಇರುತ್ತಿದ್ದರು. ಹೀಗಿರುವಾಗ ಅಂದಿನ ಮಧ್ಯಾಹ್ನದ ಒಂಭತ್ತು ತಾಸಿನ ಸುಮಾರಕ್ಕೆ ಸೇವಕರು ಮಾಧವಾಚಾರ್ಯರ ಬಳಿಗೆ ಹೋಗಿ– ''ಮಲ್ಲಿಕನಾಯಬರು ತಮ್ಮನ್ನು ಕಾಣಲಿಚ್ಛಿಸಿ ತಮ್ಮ ಮಾರ್ಗ ನಿರೀಕ್ಷಿಸುತ್ತ ಕುಳಿತಿರುವರೆ''ಂದು ಹೇಳಿದರು. ಕೂಡಲೆ ಮಾಧವಾಚಾರ್ಯರು ಪಾದ ಪ್ರಕ್ಷಾಲನ ಮಾಡಿ ಆಚಮನಾನಂತರ ಪತ್ನಿಯಾದ ವೈತಿಹೋತ್ರಿಯ ಅನುಮತಿಯಿಂದ ನಾಯಬನನ್ನು ಕಾಣುವದಕ್ಕಾಗಿ ಆತನು ಕುಳಿತಲ್ಲಿಗೆ ಸೇವಕನನ್ನು ಹಿಂಬಾಲಿಸಿ ಹೋದರು. ಆಚಾರ್ಯರ ತೇಜಃಪುಂಜವಾದ ತಪೋಮೂರ್ತಿಯನ್ನು ನೋಡಿ ಮಲಿಕನಾಯಬನು ಪೂಜ್ಯ ಬುದ್ಧಿಯಿಂದ ಎದ್ದು ನಿಂತು ಆದರಿಂದ ಅವರನ್ನು ಬರಮಾಡಿಕೊಂಡು ಆಸನದಲ್ಲಿ ಕುಳಿತನು. ಇತ್ತ ಆಚಾರ್ಯರೂ ಬಹುಮಾನದಿಂದ ನಾಯಬನನ್ನು ಅಭಿವಂದಿಸಿ ಆತನು ಆಸನದಲ್ಲಿ ಕುಳಿತುಕೊಳ್ಳುತ್ತಿರಲು, ತಾವೂ ತಮ್ಮ ಆಸನದಲ್ಲಿ ಕುಳಿತುಕೊಂಡರು ! ನಾಯಬನ ಪೋಷಾಕು ಅವನ ಯಾವನೀ ವೈಭವಕ್ಕೆ ಒಪ್ಪುವಂತೆ ಇತ್ತು. ಆತನು ತಾನು ಕೇಳಿದ್ದಕ್ಕಿಂತಲೂ ಹೆಚ್ಚು ಕೌತುಕದ್ದಾಗಿರುವ ಆಚಾರ್ಯರ ವೈರಾಗ್ಯಸಂಪನ್ನ ಮೂರ್ತಿಯನ್ನು ನೋಡಿ ಅತ್ಯಂತ ಆದರ ಭಾವವನ್ನು ತಾಳಿದನು. ಶ್ರೇಷ್ಠ ಮಂತ್ರಿಪದವಿಗೇ ಏಕೆ, ಕರ್ನಾಟಕದ ಕಿಂಬಹುನಾ ಭರತ ಭೂಮಿಯ ರಾಜಗುರು–ಲೋಕಗುರು ಪದವಿಗಳಿಗೆ ಪಾತ್ರನಾಗಿರುವ ಶ್ರೀಮಾಧವ ಮುನಿ ವೈರಾಗ್ಯ ಸಂಪನ್ನ ದಿವ್ಯಮೂರ್ತಿಯ ವರ್ತನದಿಂದ ಸಜ್ಜನನಾದ ಮಲಿಕನಾಯಬನು ಧನ್ಯ ನಾದಂತೆ ಆನಂದಬಟ್ಟನು ! ಮಾಧವಾಚಾರ್ಯರ ಬಹುಭಾಷಾಭಿಜ್ಞತೆಯ ಕೀರ್ತಿಯನ್ನು ಕೇಳಿದ್ದ ಆ ನಾಯಬನು ಯಾವನೀ ಭಾಷೆಯಿಂದ ಅವರನ್ನು ಕುರಿತು–

ನಾಯಬ–ಆಚಾರ್ಯವರ, ತಮ್ಮ ನಿತ್ಯನೈಮಿತ್ತಿಕ ಕರ್ಮಗಳು ಯಥಾಸಾಂಗವಾಗಿ ಸಾಗಿರುವವೆ ? ತಮ್ಮಂಥ ತಪೋಧನರು ಗಿರಿಗಹ್ವರಗಳಲ್ಲಿಯೂ ರಾಜೈಶ್ವರ್ಯದಲ್ಲಿಲ್ಲದ ಆನಂದವನ್ನು ಅನುಭವಿಸುತ್ತಿರಲು, ಇಲ್ಲಿಯ ಅನುಕೂಲತೆ–ಅನನುಕೂಲತೆಗಳ ಪರಿಣಾಮವು ತಮ್ಮ ಮೇಲೆ ಏನು ಆಗಬೇಕಾಗಿದೆ ? ಆದರೂ ನಮ್ಮ ಬಾದಶಹ ತಘಲಖ ಮಹಮ್ಮದರವರ

ಸಾಂಪ್ರದಾಯವು ತಮ್ಮಂಥ ಮಹಾತ್ಮರ ನಿತ್ಯಕ್ರಮಕ್ಕೆ ಬಾಧೆಬಾರದಂತೆ ವ್ಯವಸ್ಥೆ ಕಾಯ್ದು ಕೊಳ್ಳುವದಾಗಿರುತ್ತದೆ.

ಮಾಧವಾಚಾರ್ಯ–ತಮ್ಮ ಸೌಜನ್ಯದ ವ್ಯವಸ್ಥೆಯಿಂದ ನನಗೆ ಪರಮಾನಂದ ವಾಗಿರುವದು. ನಾಯಬಸಾಹೇಬ, ನನಗೆ ಬೇಕಾದದ್ದು ಸೌಜನ್ಯವಲ್ಲದೆ ಉತ್ತಮ ವ್ಯವಸ್ಥೆಯಲ್ಲ; ನಿಮ್ಮಲ್ಲಿರುವ ಸೌಜನ್ಯವನ್ನು ದೊಡ್ಡ ದೊಡ್ಡ ರಾಜಕಾರಣ ಪುರುಷರೂ ಕಲಿತುಕೊಳ್ಳತಕ್ಕದ್ದು. ತಮ್ಮಂಥ ಉದಾತ್ತ ವಿಚಾರದ ಅಧಿಕಾರಿಗಳಿಂದ ಮಹಮ್ಮದ ಬಾದಶಹರೂ, ಅವರ ವೈಭವವೂ ನಿಶ್ಚಯವಾಗಿ ಅಲಂಕೃತವಾಗಿರುವವು.

ನಾಯಬ–ದೊಡ್ಡವರ ಮಾತನ್ನು ನಾನು ಒಪ್ಪಿಕೊಳ್ಳದಿರುವದಾದರೂ ಹ್ಯಾಗೆ ? ಆದರೆ ಆಚಾರ್ಯವರ, ನಮ್ಮ ಬಾದಶಹರ ಬಾಹುಬಲ ಸಂಪಾದಿತವಾದ ರಾಜ್ಯದಲ್ಲಿ ಅನವಸ್ಥೆ ಯುಂಟುಮಾಡಿದ ಅಪವಾದಕ್ಕಾಗಿ ತಮ್ಮಂಥ ತಪೋಧನರನ್ನು ಲೌಕಿಕರಂತೆ ನಾವಿದ್ದಲ್ಲಿಗೆ ಕರತರಬೇಕಾಯಿತು! ಇದಕ್ಕಾಗಿ ಉದಾರಧೀಗಳಾದ ತಾವು ನನ್ನನ್ನು ಕ್ಷಮಿಸದೆ ಇರಲಿಕ್ಕಿಲ್ಲ.

ಮಾಧವಾಚಾರ್ಯ–ನಾಯಬಸಾಹೇಬ, ಕರ್ತವ್ಯನಿಷ್ಠರು ತಮ್ಮ ಕರ್ತವ್ಯವನ್ನು ತಾವು ಮಾಡಿದಾಗ ಅದಕ್ಕಾಗಿ ತಿಳಿದವರು ಆನಂದ–ವಿಷಾದಗಳನ್ನಾಗಲಿ, ಅಭಿನಂದನ– ತಿರಸ್ಕಾರ ಗಳನ್ನಾಗಲಿ ವ್ಯಕ್ತಮಾಡುವದೇಕೆ? ಬಾಹುಬಲದಿಂದ ಅನ್ಯರನ್ನು ಆಕ್ರಮಿಸುವದನ್ನು ಬಾದಶಹರು ತಮ್ಮ ಕರ್ತವ್ಯವೆಂದು ತಿಳಿದಿರುವಂತೆ, ಆ ಬಾದಶಹರ ಬಾಹುಬಲಕ್ಕೆ ಒಳಗಾಗದೆ ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವದು ನಮ್ಮ ಕರ್ನಾಟಕರೇ ಮೊದಲಾದ ಆ ಅನ್ಯರ ಕರ್ತವ್ಯವಾಗಿರುತ್ತದೆ, ಅಂದಬಳಿಕ ಬಲಾತ್ಕಾರದಿಂದ ಅನ್ಯರ ಸ್ವಾತಂತ್ರ್ಯಹರಣ ಮಾಡುವ ನಿಮ್ಮ ಕರ್ತವ್ಯವನ್ನು ನೀವು ಮಾಡುವಾಗ, ಅಥವಾ ಆ ಅನ್ಯರು ತಮ್ಮ ಸ್ವಾತಂತ್ರ್ಯವು ನಷ್ಟವಾಗದಂತೆ ಯತ್ನಿಸುವಾಗ ಪರಸ್ಪರರು ಪರಸ್ಪರರ ಕರ್ತವ್ಯನಿಷ್ಠೆಗಾಗಿ ಸಮಾಧಾನಪಡ ಬೇಕಾಗುವದಲ್ಲದೆ ವಿಷಾದಪಡುವ ಕಾರಣವಿಲ್ಲ; ಆದ್ದರಿಂದ ಪ್ರಸಂಗದಲ್ಲಿ ನಿಮ್ಮ ಕರ್ತವ್ಯ ನಿಷ್ಠೆಗಾಗಿ ನಾವು ನಿಮ್ಮನ್ನು ಅಭಿನಂದಿಸೇವು, ತಿರಸ್ಕರಿಸಲಿಕ್ಕಿಲ್ಲ!

ನಾಯಬ–ಆಚಾರ್ಯವರ, ಕಾಲಕ್ಕನುಸರಿಸಿ ಒಂದು ರಾಷ್ಟ್ರವು ಒಮ್ಮೆ ಸ್ವತಂತ್ರ ವಾಗುವದು; ಒಮ್ಮೆ ಪರತಂತ್ರವಾಗುವದು; ಒಮ್ಮೆ ತಾನು ಅನ್ಯ ರಾಷ್ಟ್ರಗಳನ್ನು ಗೆಲ್ಲುವದು; ಒಮ್ಮೆ ಅನ್ಯ ರಾಷ್ಟ್ರಗಳಿಂದ ಗೆಲ್ಲಲ್ಪಡುವದು. ಅಂದಬಳಿಕ ಕಾಲಕ್ಕನುಸರಿಸಿ ಈಶ್ವರೀ ಸಂಕೇತದಂತೆ ಆಗುವ ಕಾರ್ಯಗಳಿಗೆ ಪ್ರತಿಬಂಧ ಮಾಡುವದು ಜ್ಞಾನಿಗಳ ದೃಷ್ಟಿಯಿಂದ ಅಯೋಗ್ಯವಲ್ಲವೆ ? ಕರ್ನಾಟಕವು ಈಗ ವಿಷಯಾಸಕ್ತವಾಗಿ ಅಂತಃಕಲಹಗಳಿಗೆ ಗುರಿ ಯಾಗಿರುವದರಿಂದ, ಧರ್ಮಹೀನವಾಗಿರುವ ಅದು ಈಗ ಅಧಃಪತನ ಹೊಂದುವದೇ ಯೋಗ್ಯ ವಾಗಿರುವದು; ಅಂದಬಳಿಕ ಜ್ಞಾನಿಗಳು ಕುಳಿತು ನೀವು ಕಾಲಸಂಕೇತಕ್ಕೆ ವಿರುದ್ಧವಾಗಿ ಅದರ ಸ್ವಾತಂತ್ರ್ಯಕ್ಕೋಸ್ಕರ ಯತ್ನಿಸುವಿರಲ್ಲ ?

ಮಾಧವಾಚಾರ್ಯ–ನಾಯಬಸಾಹೇಬ, ನೀವು ಹೇಳುವದು ಅಯುಕ್ತವೆಂದು ನಾನು ಅನ್ನುವದಿಲ್ಲ; ಉದ್ಧೃತ ರಾಷ್ಟ್ರವು ಬರಬರುತ್ತ ತನ್ನ ದುಷ್ಕರ್ಮದಿಂದ ಪತಿತವಾಗುವದು

ಸ್ವಾಭಾವಿಕವಾಗಿರುವಂತೆ, ಪತಿತ ರಾಷ್ಟ್ರವು ಉದ್ಧಾರಕ್ಕಾಗಿ ಯತ್ನಿಸುವದೂ ಸ್ವಾಭಾವಿಕ ವಾಗಿಯೇ ಇರುತ್ತದೆ. ಯಾವ ರಾಷ್ಟ್ರಕ್ಕಾದರೂ ಚಕ್ರನೇಮಿ ಕ್ರಮದಂತೆ ಈ ಉತ್ಕರ್ಷಾ ಪಕರ್ಷಗಳು ತಪ್ಪಿರುವದಿಲ್ಲ. ಧರ್ಮಜಾಗ್ರತಿಯೇ ರಾಷ್ಟ್ರದ ಉತ್ಕರ್ಷವು, ಧರ್ಮಹ್ರಾಸವೇ ರಾಷ್ಟ್ರದ ಅವನತಿಯು. ನಿಮ್ಮ ಹಜರತ್ ಮೊಹಮ್ಮದ ಪೈಗಂಬರರಿಂದ ಧರ್ಮಜಾಗ್ರತಿ ಯಾದಾಗಿನಿಂದ ಮುಸಲ್ಮಾನರಾದ ನಿಮ್ಮ ಉತ್ಕರ್ಷವಾಗುತ್ತಾಗುತ್ತ ನೀವು ಈ ಪವಿತ್ರ ಕುರಾನವನ್ನು ಜಗತ್ತಿನಲ್ಲಿ ಪ್ರಸಾರ ಮಾಡುವ ನೆವದಿಂದ ದೇಶಗಳನ್ನು ಗೆಲ್ಲುತ್ತ ಹೋಗುವಾಗ ರಾಜೈಶ್ವರ್ಯ ಭೋಗದ ಸವಿಯು ನಿಮಗೆ ಹತ್ತಲು, ಆ ಸವಿ ಹತ್ತಿದ್ದ ಮಾನದಿಂದ ನಿಮ್ಮ ಧರ್ಮಪ್ರವೃತ್ತಿಯು ಕಡಿಮೆಯಾಗಹತ್ತಿ ಆ ಮಾನದಿಂದ ನಿಮ್ಮ ಅಧಃಪತನವಾಗತೊಡಗಿತು. ಇದರಿಂದ ತಾರಕವಾದ ನಿಮ್ಮ ಆ ಕುರಾಣ ಧರ್ಮವೇ, ಅದನ್ನು ನೀವು ಸ್ವಸುಖದ ಸಾಧನವಾಗಿ ಉಪಯೋಗಿಸಹತ್ತಲು, ಆ ಮಾನದಿಂದ ನಿಮ್ಮ ಅಧಃಪತನಕ್ಕೆ ಕಾರಣವಾಯಿತು. ಧರ್ಮದ ಮುಖ್ಯೋದ್ದೇಶವು ಪರಹಿತಕ್ಕಾಗಿ ಸ್ವಹಿತದ ತ್ಯಾಗಮಾಡುವದು. ಹೀಗೆ ಪರಸ್ಪರರು ಸ್ವಹಿತದ ತ್ಯಾಗ ಮಾಡುವದೇ ಪರಸ್ಪರರನ್ನು ಪ್ರೀತಿಸುವ ಲಕ್ಷಣವಾಗಿರವದು. ಇಂಥ ಪರಹಿತದಕ್ಷರ. ಅಂದರೆ ಪ್ರೇಮಮಯರಾದವರ ಪರಲೋಕದ ಶಾಶ್ವತ ಕಲ್ಯಾಣ ಮಾಡುವ ಭಾರವು ದೇವರ ಕಡೆಗಿರುವದರಿಂದ, ಧರ್ಮಿಷ್ಠರು ಧರ್ಮ ಪ್ರಭುವಾದ ದೇವರ ಪ್ರೀತಿ ಸಂಪಾದನೆಗಾಗಿ ಐಹಿಕ ಸುಖದ ಆಸಕ್ತಿಯನ್ನು ಪರಿತ್ಯಜಿಸುವರು. ಈ ನಿಯಮದಂತೆ ನೀವು ಮುಸಲ್ಮಾನರು ಈಗ ಪರಹಿತ ಮಾಡುವದರ ಬದಲು ಪರಸ್ವಾತಂತ್ರ್ಯ–ಹರಣರೂಪ–ಪರಿಪೀಡೆ ಮಾಡತೊಡಗಿರುವದರಿಂದ ತೋರಿಕೆಯ ನಿಮ್ಮ ಅಧಾರ್ಮಿಕ ಅರ್ಥಾತ್ ಸೈತಾನೀ ಉತ್ಕರ್ಷವು ಅಪಕರ್ಷದ ಲಕ್ಷಣವಾಗಿರುವದು. ಹೀಗಿದ್ದರೂ ನಿಮ್ಮಂಥ ಜ್ಞಾನಿಗಳಾದ ಸಜ್ಜನರು ನಿಮ್ಮವರ ಆ ಹೀನಸ್ಥಿತಿಗಾಗಿ ಅಂತರಂಗದಲ್ಲಿ ಮರುಗಿ ರಾಷ್ಟ್ರದ ನಿಜವಾದ ಉತ್ಕರ್ಷಕ್ಕಾಗಿ ಶಕ್ಯನುಸಾರ ಯತ್ನಿಸುವಿರಲ್ಲವೆ ? ರೋಗಿಯು ಸಾಯುವನೆಂದು ತಿಳಿದಿದ್ದರೂ ಸಾಯುವತನಕ ಬದುಕುವ ಉಪಾಯಮಾಡುವ; ಅಥವಾ ರೋಗವ್ಯಥೆ ಕಡಿಮೆ ಮಾಡುವದೊಂದು ವೈದ್ಯರ ಪದ್ಧತಿ ಇರುವದಲ್ಲವೇ ? ಮಲಿಕನಾಯಬಸಾಹೇಬ, ನನ್ನಂಥ ಶತ್ರುವನ್ನು ಕೂಡ ಈ ಪರಿದೊಡ್ಡಿಸ್ತನ ದಿಂದ ನಡೆಸಿಕೊಳ್ಳುವ ನೀವು, ನಿಮ್ಮ ಧರ್ಮ ಹೀನ ರೋಗಪೀಡಿತ ಸಮಾಜಕ್ಕೆ ಅದರ ರೋಗ ವ್ಯಥೆಯು ಕಡಿಮೆಯಾಗುವದಕ್ಕಾಗಿ ಧರ್ಮಾಚರಣೆಯ ಪ್ರದರ್ಶನರೂಪ ಔಷಧವನ್ನು ಕೊಡುತ್ತಿರುವಿರೆಂಬದನ್ನು ನಾನು ಹ್ಯಾಗೆ ಮರೆಯಲಿ? ರಾಷ್ಟ್ರವು ಧರ್ಮಿಷ್ಟವಾಗಿರಲಿ, ಅಧರ್ಮಿಷ್ಟವಾಗಿರಲಿ ಅವರವರು ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುತ್ತಲೇ ಇರಬೇಕಾಗುವದು. ಆ ಕರ್ತವ್ಯವನ್ನು ಸಜ್ಜನರಾದ ನೀವು ಮಾಡುತ್ತಿರುವಂತೆ, ನನ್ನ ರಾಷ್ಟ್ರದ ವಿಷಯದ ನನ್ನ ಕರ್ತವ್ಯವನ್ನು ನಾನು ಮಾಡುವೆನು. ಕರ್ತವ್ಯ ಮಾಡುವದು ನಮ್ಮ ಅಧಿಕಾರವು, ಫಲ ಕೊಡುವದು ಈಶ್ವರನ ಅಧಿಕಾರವು; ಆದ್ದರಿಂದ ಫಲಾಪೇಕ್ಷೆಯಿಲ್ಲದೆ ಮಾಡತಕ್ಕದ್ದನ್ನು ನಾನು ರಾಷ್ಟ್ರ ಹಿತಕ್ಕಾಗಿ ಈಗ ಮಾಡುತ್ತಿರುವೆನು, ಅದರ ಪರಿಣಾಮವು ಈಶ್ವರೇಚ್ಛೆ ಇದ್ದಂತೆ ಆಗಲೊಲ್ಲದೇಕೆ?

ಮಲಿಕನಾಯಬ–ಮಹಾತ್ಮನ್, ಈಶ್ವರೀ ಸಂಕೇತದಿಂದಲೇ ಕರ್ನಾಟಕದ ಮುಖಂಡತ್ವವು ನಿಮಗೆ ಪ್ರಾಪ್ತವಾಗಿರುವದೆಂಬದರಲ್ಲಿ ಸಂಶಯವಿಲ್ಲ! ಈಗ ಕರ್ನಾಟಕದ ಉತ್ಕರ್ಷದ ಕಾಲವು ನಿಶ್ಚಯವಾಗಿ ಒದಗಿರುತ್ತದೆ. ತಮ್ಮಂಥ ಮೂರ್ತಿಮಂತ ಜ್ಞಾನ ಜ್ಯೋತಿಗಳು ರಾಷ್ಟ್ರಕ್ಕೆ ಮಾರ್ಗವನ್ನು ತೋರಿಸುತ್ತಿರುವಾಗ ಅದು ಯಾಕೆ ಜಾಗ್ರತವಾಗಿ ಕಣ್ಣು ತೆರೆಯಲಿಕ್ಕಿಲ್ಲ? ಆಚಾರ್ಯವರ ಬಹಳ ಸಂತೋಷವು. ಧರ್ಮವು ಪವಿತ್ರವಾಗಿದ್ದರೂ, ನಮ್ಮಂಥ ಸ್ವಾರ್ಥಪರರು, ಅಂದರೆ ಸೈತಾನನ (ಮಾಯೆಯ) ಪ್ರೇರಣೆಗೆ ಒಳಗಾದ ರಾಜ ಸೇವಕರು ಶಾಬ್ದಿಕ ಧರ್ಮಜ್ಞಾನವುಳ್ಳವರಾಗಿದ್ದರೂ ಗಹನವಾದ ಸೇವಾಧರ್ಮದ ಮೂಲಕ ನಾವು ಅಪವಿತ್ರರೇ ಆಗಿರುವೆವು; ಯಾಕಂದರೆ, ನಮ್ಮ ಸ್ವಾರ್ಥದೂಷಿತ ಧರ್ಮಜ್ಞಾನವನ್ನು ಸ್ವಾರ್ಥಕ್ಕಾಗಿ ಮಾರಿಕೊಂಡಿರುವದರಿಂದ ನಮಗೆ ಸ್ವಾತಂತ್ರ್ಯದ ಜ್ಞಾನವಿದ್ದರೂ ಸೈತಾನನ (ಮಾಯೆಯ) ಎಳತಕ್ಕೆ ಒಳಗಾಗಿ ನಾವು ಪಾರತಂತ್ರ್ಯದ ದುಃಖವನ್ನು ಭೋಗಿಸುತ್ತಿರುವೆವು. ಒಳ್ಳೇದು, ಕರ್ತವ್ಯನಿಷ್ಠರಾದ ಆಚಾರ್ಯವರ್ಯರೇ, ನಿಮ್ಮಂಥ ಪವಿತ್ರರಾದ ಕರ್ತವ್ಯನಿಷ್ಠರ ಭಯಕ್ಕಾದರೂ ನಾವು ಕರ್ತವ್ಯನಿಷ್ಠರಾಗಿರಬೇಕಾಗಿರುವದಲ್ಲವೇ? ನಮ್ಮ ಬಾದಶಹರ ಹಿತ ಮಾಡುವದು ಅವರ ಸೇವಕನಾದ ನನ್ನ ಕರ್ತವ್ಯವಾಗಿರುವದರಿಂದ, ಕರ್ತವ್ಯಮೂಢನಾದ ನಾನು ಧರ್ಮದಿಂದಾಗಲಿ, ಅಧರ್ಮದಿಂದಾಗಲಿ ನನ್ನ ಒಡೆಯನ ಮನಸ್ಸನ್ನು ಸಂತೋಷ ಪಡಿಸುವದು ಮುಖ್ಯ ಕೆಲಸವೆಂದು ತಿಳಿದಿರುವೆನು. ಆಚಾರ್ಯವರ, ಒಟ್ಟಿನಲ್ಲಿ ಈ ಜಗತ್ತಿನೊಳಗೆ ಸೈತಾನನ (ಮಾಯೆಯ) ಅಧಿಕಾರಕ್ಕೆ ಒಳಗಾಗಿರುವವರೇ ಬಹು ಜನರಲ್ಲದೆ, ಧರ್ಮಪ್ರಭುವಾದ ದೇವರ ಅಧಿಕಾರಕ್ಕೆ ಒಳಗಾಗಿರುವವರು ಅಪರೂಪವು. ಆದರೆ ಮಹಾತ್ಮನ್, ಅಲ್ಲಾನ ಇಚ್ಛೆಯಿಂದ ಜಗತ್ತಿನ ವ್ಯವಹಾರಗಳು ನಡೆಯುವ ಹಾಗೆಯೇ ನಡೆಯುತ್ತವೆ. ಅಂದಬಳಿಕ ಆ ಭಗವಂತನ ಆಜ್ಞೆಯಾದ ಧರ್ಮವನ್ನು ನಾವು ತಿಳಿದೂ ತಿಳಿದೂ ಯಾಕೆ ಆಚರಿಸದೆ ಇರಬೇಕು? ಧರ್ಮದಂತೆ ಆಚರಿಸುವದೇ ಐಹಿಕ ಮುಖ್ಯ ಕರ್ತವ್ಯ ವಾಗಿರುವದು. ಈಶ್ವರ ಕೃಪೆಯಿಂದ ನಾವು ಸತ್ಯಸ್ವರೂಪವನ್ನು ತಿಳಿಯುವವರೆಗೂ, ಮತ್ತು ಅಸತ್ಯ ಸ್ವರೂಪವನ್ನು ತಿಳಿದಬಳಿಕೂ ಈಶ್ವರಾಜ್ಞೆಯನ್ನು ಮುರಿಯದಿರುವದೇ ಶ್ರೇಯಸ್ಕರವೆಂದು ನನಗೆ ತೋರುತ್ತದೆ. ಆದರೆ ನಮ್ಮ ನೀಚಸ್ವಾರ್ಥ ಬುದ್ಧಿಯ ಮೂಲಕ ಈ ವಿಚಾರವು ಮಣ್ಣುಗೂಡಿಹೋಗಿ ನಾವು ಸೈತಾನನ ಅಧಿಕಾರಕ್ಕೆ ಒಳಗಾಗುತ್ತೇವೆ.''

ಈ ಮೇರೆಗೆ ನುಡಿದು ಸಜ್ಜನನಾದ ಮಲಿಕನಾಯಬನು ಆಚಾರ್ಯರ ಅನುಜ್ಞೆಯಿಂದ ಹೊರಟುಹೋದನು. ಸಜ್ಜನರ ಈ ಸಂಭಾಷಣವನ್ನು ಕೇಳಿ, ನಾಯಬನ ಸಂಗಡ ಬಂದಿದ್ದ ಅಬದುಲರಹಿಮಾನನು ಬೆರಗಾಗಿದ್ದನು. ನಾಯಬನು ಏಕಾಂತಗೃಹಕ್ಕೆ ಅವನನ್ನು ಕರೆದೊಯ್ದು– ''ಖಾನಸಾಹೇಬ, ಇನ್ನು ನೀವು ಹೊರಡುವ ಸಿದ್ಧತೆಯನ್ನು ಮಾಡಿರಿ. ಈ ಪ್ರಸಂಗದಲ್ಲಿ ನೀವು ಪರಾಕ್ರಮದಿಂದ ಕಾದಿ, ಕಂಪಲಿಯ ಕೋಟೆಯನ್ನು ವಶಮಾಡಿಕೊಂಡು ಅಲ್ಲಿಯ ಮುಖ್ಯ ಮುಖ್ಯ ಜನರನ್ನು, ಅದರಲ್ಲಿಯೂ ಹುಕ್ಕನನ್ನು ಸೆರೆಹಿಡಿದು ತರತಕ್ಕದು, ತಿರುವೇಂಕಟನು ಇರುತ್ತಿದ್ದರೂ, ಅವನು ಕೇವಲ ಆನೆಗುಂದಿಯ ಸಂಸ್ಥಾನದ ಆಸೆಯಿಂದ

ಕಾರ್ಯಮಾಡತಕ್ಕವನು; ಆದರೆ ನಿಮ್ಮಮಾತು ಹಾಗಲ್ಲ. ನೀವು ಧರ್ಮದಿಂದ ಮುಸಲ್ಮಾನರಿರುವದರಿಂದ, ಮುಸಲ್ಮಾನ ಧರ್ಮಪ್ರಸಾರಕ್ಕಾಗಿ ಮನಃಪೂರ್ವಕ ಹೆಣಗುವದು ನಿಮ್ಮ ಕರ್ತವ್ಯವಾಗಿರುವದು. ಪವಿತ್ರ ಕುರಾಣದ ಪ್ರಸಾರವನ್ನು ಜಗತ್ತಿನಲ್ಲಿ ಮಾಡುವದು ಮಹತ್ವಪೂರ್ಣವಾಗಿರುವದು. ನಾವೆಲ್ಲರೂ ಬಾದಶಹರ ನಂಬಿಗೆಯ ಸೇವಕರಾಗಿರುವದರಿಂದ ಬಾದಶಹರ ಇಚ್ಛೆಯನ್ನರಿತು, ಸ್ವಾರ್ಥವೇನೂ ಇಲ್ಲದೆ, ಕೇವಲ ಅವರ ಇಚ್ಛಾತೃಪ್ತಿಯಾಗುವಂತೆ ನಡೆಯುವದು ನಮ್ಮ ಧರ್ಮವಾಗಿರುವದು. ಇನ್ನು ಬಾದಶಹರ ಹಾದಿಯು ನಮಗೆ ನ್ಯಾಯದ್ದಾಗಿ ತೋರದಿದ್ದರೆ ಅವರ ಸೇವೆಯನ್ನು ಬಿಡಬಹುದು; ಆದರೆ ಅವರ ಸೇವಕರಾಗಿ, ಅವರ ಒಲವಿನ ವಿರುದ್ಧ ನಡೆಯುವದು ಧರ್ಮವಲ್ಲ. ಸೇವಕರು ತಾವು ತೇಲಲಿ–ಮುಣುಗಲಿ ತಮ್ಮ ಸೇವ್ಯರನ್ನು ಸಂತೋಷಪಡಿಸುವದು ತಮ್ಮ ಶ್ರೇಷ್ಠ ಧರ್ಮವೆಂದು ತಿಳಿಯಬೇಕು. ಈಗ ಬಾದಶಹರು ಕರ್ನಾಟಕವನ್ನು ಸ್ವಾಧೀನಪಡಿಸಿಕೊಂಡರೆ ಮಾತ್ರ ಸಂತೋಷವಾಗುವದರಿಂದ, ಆ ಕಾರ್ಯವನ್ನು ನಾವು ವಿಶ್ವಪ್ರಯತ್ನಮಾಡಿ ಸಾಧಿಸತಕ್ಕದ್ದು. ಈಗ ನೀವು ನಿಮ್ಮ ಮನಸ್ಸಿಗೆ ಬಂದಷ್ಟು ಸೈನ್ಯವನ್ನು ತಕ್ಕೊಳ್ಳಬೇಕು; ಹಾಗು ಬೇಕಾದ ಸಾಧನ ಸಾಮುಗ್ರಿಗಳ ಅನುಕೂಲತೆ ಮಾಡಿಕೊಳ್ಳಬೇಕು; ಆದರೆ ಕಾರ್ಯ ಸಾಧಿಸದೆ ಮಾತ್ರ ಬರಬಾರದು'' ಎಂದು ಹೇಳಿ, ಅವರನ್ನು ಅಪ್ಪಣೆಕೊಟ್ಟು ಕಳಿಸಲು, ಮರುದಿವಸವೇ ಆತನು ಪ್ರಚಂಡ ಸೈನ್ಯದೊಡನೆ ಸರ್ವಸನ್ನಾಹದಿಂದ ಕಂಪಲಿಯ ಮೇಲೆ ಸಾಗಿಹೋದನು.

## ಅಂತಃಕಲಹವು ಅಳಿಗಾಲದ ಲಕ್ಷಣವು !

ಹೀಗೆ ನಾಯಬನಿಂದ ಆಜ್ಞಾಪಿಸಲ್ಪಟ್ಟ ಅಬದುಲರಹಿಮಾನಖಾನನು ಪ್ರಚಂಡ ಸೈನ್ಯದೊಡನೆ ಕಂಪಲಿಯ ಕಡೆಗೆ ಸಾಗಿದನು. ಸ್ವಾರ್ಥಪರಾಯಣನಾದ ತಿರುವೇಂಕಟನ ಕಣ್ಣು ಪದ್ಮಿನಿಯ ಮೇಲೆ ಇರುವದು ಖಾನನಿಗೆ ಗೊತ್ತಾಗಿತ್ತು; ಆದ್ದರಿಂದ ಆತನ ಆಧಿಪತ್ಯದಲ್ಲಿ ಕಂಪಲಿಯ ಕೋಟೆಯು ಕೈಸೇರಬಾರದೆಂದು, ಖಾನನು ಬಹು ಒತ್ತರದಿಂದ ಸೈನ್ಯವನ್ನು ಸಾಗಿಸಿಕೊಂಡು ನಡೆದಿದ್ದನು. ಆತನು ಎರಡು ದಿವಸಗಳಲ್ಲಿಯೇ ಸಸೈನ್ಯವಾಗಿ ಕಂಪಲಿಗೆ ಬಂದು ಮುಟ್ಟಿ, ಕೂಡಲೆ ತಿರುವೇಂಕಟನನ್ನು ಕರೆಸಿದನು. ಇತ್ತ, ವಿರೂಪಾಕ್ಷಾರ್ಯರ ಉಪದೇಶದಿಂದ ತಿರುವೇಂಕಟನ ಮನಸ್ಸು ತಿರುಗಿದ್ದನ್ನು ವಾಚಕರು ಬಲ್ಲರಷ್ಟೇ? ವಿರೂಪಾಕ್ಷಾರ್ಯರು ಸದ್ಬೋಧದಿಂದ ತಿರುವೇಂಕಟನ ಮನಸ್ಸನ್ನು ತಿರುಗಿಸಿದ್ದಲ್ಲದೆ, ಆತನಿಗೆ ಮಾಧವಾಚಾರ್ಯರ ಗುಪ್ತ ವ್ಯವಸ್ಥೆಯ ಸ್ವರೂಪದ ದಿಗ್ದರ್ಶನ ಮಾಡಿ, ಆ ದೇಶದ್ರೋಹಿ ಕ್ಷತ್ರಿಯನಿಗೆ ಭಯವು ಉತ್ಪನ್ನವಾಗುವಂತೆಯೂ ಮಾಡಿದ್ದರು; ಆದ್ದರಿಂದ ತಿರುವೇಂಕಟನು, ತಮಗೆ ಹ್ಯಾಗಿದ್ದರೂ ಜಯ ಬರುವದು ಅಶಕ್ಯವೆಂದು ತಿಳಿದು ಸ್ವದೇಶದ್ರೋಹ ಮಾಡಲಿಚ್ಛಿಸದೆ ವಿರೂಪಾಕ್ಷಾರ್ಯರ ತಂತ್ರದಂತೆ ನಡೆಯಲು ಒಪ್ಪಿ ಕೇವಲ ಔದಾಸೀನ್ಯದಿಂದ ಖಾನನ

ಹಾದಿಯನ್ನು ನೋಡುತ್ತ ಕುಳಿತುಕೊಂಡಿದ್ದನು. ಯಾವದೊಂದು ಕಾರಣದಿಂದ ತಾನು ಖಾನನೊಡನೆ ವೈಮನಸ್ಸು ಉಂಟು ಮಾಡಿಕೊಂಡು ತಾನು ಮೊದಲು ಮುತ್ತಿಗೆಯನ್ನೆಬ್ಬಿಸಿ ಹೊರಟುಹೋಗಬೇಕೆಂದು ಆತನು ಮಾಡಿದ್ದನು. ಹೀಗಿರುವಾಗ ಖಾನನ ಕಡೆಯಿಂದ ಇಷ್ಟು ಅವರಸರದಿಂದ ತನ್ನನ್ನು ಕರೆಯಬಂದದ್ದೊಂದು ಅವನಿಗೆ ಅನುಕೂಲವೇ ಆಯಿತು. ಆ ಕರೆಯು ಬಂದ ಕಾಲವು ಮಧ್ಯರಾತ್ರಿಯಾಗಿತ್ತು. ಬೇಗನೆ ತನ್ನ ಆಧಿಪತ್ಯದಲ್ಲಿ ಕಂಪಲಿಯು ತನ್ನ ಕೈಸೇರಬೇಕೆಂದು ಆತುರಪಡುತ್ತಿದ್ದ ಖಾನನು ಹಗಲು ರಾತ್ರಿಯೆನ್ನದೆ ಹಾದಿಯನ್ನು ನಡೆದುಬಂದಿದ್ದನು. ಹೀಗೆ ಮಧ್ಯರಾತ್ರಿಯಲ್ಲಿ ತನ್ನನ್ನು ಕರೆಯಬಂದಿದ್ದ ಸೇವಕನನ್ನು ಕುರಿತು ತಿರುವೇಂಕಟನು ತಿರಸ್ಕಾರದಿಂದ–''ಇಷ್ಟು ಮಧ್ಯರಾತ್ರಿಯಲ್ಲಿ ಕರೆಸುವ ಅವಶ್ಯವೇನು? ನಾಳೆ ಬೆಳಗಿನಲ್ಲಿ, ನಾನು ಬರುವಂತೆ, ಖಾನರನ್ನು ಕಾಣಲಿಕ್ಕೆ ಬರುವೆನು; ಇಂದು ನನ್ನ ಪ್ರಕೃತಿಗೆ ಸ್ವಸ್ಥವಿಲ್ಲದ್ದರಿಂದ ಈಗ ರಾತ್ರಿ ಬರಲಾರೆನು'' ಎಂದು ಹೇಳಿ ಸೇವಕನನ್ನು ಹಾಗೇ ಹಿಂದಿರುಗಿ ಕಳಿಸಿದನು.

ತಿರುವೇಂಕಟನ ಈ ಔದ್ಧತ್ಯಕ್ಕಾಗಿ ಅಬದುಲರಹಿಮಾನನು ಸಿಟ್ಟು ಬೆಂಕಿಯಾದನು. ತನ್ನಂಥ ಸೇನಾಧ್ಯಕ್ಷನು ಕರೆಸಿದರೆ, ಅದರಲಿಯೂ ಊರಿಂದ ದಣಿದು ಬಂದಾಗ ಕರೆಸಿದರೆ ಬಾರದಿರುವ ಎಟ್ಟಿತನಕ್ಕಾಗಿ ಈಗಲೇ ಆ ಕಾಫರನನ್ನು ತುಂಡರಿಸಲಾ, ಅನ್ನುವ ಹಾಗೆ ಆತನಿಗೆ ಆಯಿತು; ಆ ಸಿಟ್ಟಿನ ಭರದಲ್ಲಿ ಆತನು ''ನೀನು ಈಗಲೇ ಹೊರಟುಬರಲೇಬೇಕು'' ಎಂದು ಮತ್ತೆ ತಿರುವೇಂಕಟನನ್ನು ಕರೆಸಬೇಕೆಂದುಮಾಡಿದನು. ಆದರೆ ಕಾರ್ಯ ಗೌರವದಿಂದಲೂ, ತಿರುವೇಂಕಟನ ಪರಾಕ್ರಮವನ್ನು ಆತನು ಅರಿತವನಾದ್ದರಿಂದಲೂ ಹಾಗೆ ಮಾಡದೆ, ಸಂತಾಪದಿಂದ ತಳಮಳಿಸುತ್ತ ಕುಳಿತುಕೊಂಡನು. ಸಂತಾಪದ ಭರದಲ್ಲಿ ಆತನಿಗೆ ಮಾರ್ಗಾಯಾಸವು ತೋರದಾಯಿತು; ನಿದ್ರೆ ಹಾರಿ ಆತನ ಕಣ್ಣುಗಳು ನಿಚ್ಚಳವಾದವು. ಮಾರ್ಗದಲ್ಲಿ ಏನೇನೋ ಮನೋರಾಜ್ಯವನ್ನು ಮಾಡುತ್ತ ಬಂದಿದ್ದ ಆ ಖಾನನು ತಿರುವೇಂಕಟನ ಈ ತಿರಸ್ಕಾರದಿಂದ ದೀರ್ಘ ವಿಚಾರಕ್ಕೆ ಒಳಗಾದನು. ಆತನ ಮನಸ್ಸಿನಲ್ಲಿ ಇಲ್ಲದ ಸಂಶಯಗಳು ಬರತೊಡಗಿದವು. ಆತನು ಚಿಂತಾಕ್ರಾಂತನಾಗಿ–ನಾನು ಇಲ್ಲಿಂದ ಹೋದಬಳಿಕ ಏನೋ ವಿಪರೀತ ಪ್ರಸಂಗವು ಒದಗಿದಂತೆ ತೋರುತ್ತದೆ. ಇಲ್ಲದಿದ್ದರೆ ಹೀಗೆ ಏನಾದರೂ ನೆವ ಹೇಳಿ ತಿರುವೇಂಕಟನು ಬಾರದಿರಲಿಕ್ಕೆ ಕಾರಣವೇನು? ಹಿಂದು–ಹಿಂದುಗಳು ಒಂದಾಗಿರಬಹುದೋ, ಅಥವಾ ತಿರುವೇಂಕಟನು ಆತನೇ ಕೋಟೆಯನ್ನು ವಶಮಾಡಿಕೊಂಡು ಕಂಪಲಿಯನ್ನು ಸುಲಿದು ಲಾಭ ಪಡೆಯಬೇಕೆಂದು ಯೋಚಿಸುತ್ತಿರುವಾಗ ನಾನು ಬಂದದ್ದರಿಂದ ಅಸಮಾಧಾನವಾಗಿ ಅವನು ಹೀಗೆ ಹೇಳಿಕಳಿಸಿರಬಹುದೋ? ಅಥವಾ ನಿಜವಾಗಿಯೇ ಅವನ ಪ್ರಕೃತಿಯು ಅಸ್ವಸ್ಥವಾಗಿರಬಹುದೋ? ಏನಿದ್ದರೂ ನಾನು ಬುದ್ಧಿಪೂರ್ವಕ ಹೇಳಿಕಳಿಸುವಾಗ ತಿರುವೇಂಕಟನು ಬಾರದಿರುವದು ಒಳ್ಳೆಯ ಲಕ್ಷಣವಲ್ಲ, ಪ್ರಸಿದ್ಧರೀತಿಯಿಂದಲೇ ನಮ್ಮನ್ನು ಲೆಕ್ಕಿಸದಷ್ಟು ಅವನು ಎಟ್ಟಿಯಾಗಿರುವನೆಂದು ತಿಳಿಯತಕ್ಕದ್ದು. ಆದರೆ ಅವನ ಈ ಔದ್ಧತ್ಯಕ್ಕಾಗಿ ನಾನು ಈಗ ಮಾಡುವದೇನು? ನಾನಂತು ಮಲಿಕನಾಯಬರ ಮುಂದೆ ಹುಕ್ಕನೇ

ಮೊದಲಾದವರನ್ನು ಸೆರೆಹಿಡಿದೇ ತರುವೆನೆಂದು ಪ್ರತಿಜ್ಞೆ ಮಾಡಿದಂತೆ ಇಲ್ಲದ್ದೊಂದು ಹೇಳಿಬಂದಿದ್ದೇನೆ; ಆದರೆ ಇಲ್ಲಿ ಬಂದು ನೋಡಿದರೆ ನಮ್ಮವನೇ ನಮ್ಮ ಮಾತು ಕೇಳದ ಹಾಗಾಗಿದ್ದಾನೆ! ಬಹಳ ಆಶ್ಚರ್ಯವು, ತಿರುವೇಂಕಟನು ನಾನು ಕರೆಸಿದರೆ ಬಾರದಿರುವದು ಬಹಳ ಆಶ್ಚರ್ಯವು! ಇನ್ನು ಇದಕ್ಕೆ ಉಪಾಯವೇನು ಮಾಡಬೇಕು! ಇಂಥ ಇಕ್ಕಟ್ಟಿನ ಪ್ರಸಂಗದಲ್ಲಿ ತಿರುವೇಂಕಟನಿಗೆ ಏನಾದರೂ ಅಂದು ಅಡಿ ಅವನ ಮನಸ್ಸನ್ನು ನೋಯಿಸಿ ನಮ್ಮ ನಮ್ಮೊಳಗೆ ಮನಸ್ತಾಪ ಮಾಡಿಕೊಳ್ಳುವದು ಹಿತವಲ್ಲ; ಇನ್ನು ಈ ಸಂಗತಿಯನ್ನು ಉದಾಸೀನ ಮಾಡಿ ತಿರುವೇಂಕಟನನ್ನು ಒಳಗೆ ಹಾಕಿಕೊಂಡು ಕಾರ್ಯ ಸಾಧಿಸಬೇಕಂದರೆ, ತಿರುವೇಂಕಟನು ನಿಜವಾಗಿಯೇ ನಮ್ಮ ದ್ರೋಹಚಿಂತನೆಗೆ ಸಿದ್ಧವಾಗಿದ್ದ ಪಕ್ಷದಲ್ಲಿ ಅವನು ಒಳ್ಳೆಯ ಸಮಯಕ್ಕೆ ಅಡ್ಡಗಾಲು ಹೊಡೆದು ನನ್ನನ್ನು ನೆಲಕ್ಕೆ ಕೆಡವಲಿಕ್ಕೆ ನಿಂತರೆ ಅದೂ ಕಷ್ಟ; ಅಂದಬಳಿಕ ನಾನು ಈಗ ಹೇಗೆ ಮಾಡಲಿ? ಅಥವಾ ಹೀಗೆಯೇ ತಿರುವೇಕಂಟನ ಛಾವಣಿಗೆ ಹೋಗಿ ಅವನನ್ನು ತುಂಡರಿಸಿಬಿಡಲಾ? ಅದಾದರೂ ಸಾಧಿಸೀತೆಂದು ಹ್ಯಾಗೆ ಹೇಳಬೇಕು? ಇಷ್ಟು ಔದ್ಧತ್ಯದ ಉತ್ತರ ಹೇಳಿ ಕಳಿಸಿದ ತಿರುವೇಕಂಟನು ಎಷ್ಟು ಮೈಮರೆತು ಮಲಗಬಹುದೆ? ಸುಮ್ಮನೆ ವಿಚಾರವಿಲ್ಲದೆ ಹುಂಬತನದಿಂದ ಹೋಗಿ ಪಶ್ಚಾತ್ತಾಪಕ್ಕೆ ಗುರಿಯಾಗಬೇಕಾದೀತು ಎಂದು ವಿಚಾರಮಾಡುತ್ತ ಕುಳಿತಿರಲು, ಅವನ ಅತ್ಯಂತ ವಿಶ್ವಾಸದ ಒಬ್ಬ ಮುಸಲ್ಮಾನ ಸರದಾರನು ಅಲ್ಲಿಗೆ ಬಂದು, ಒಬ್ಬ ಜಂಗಮನು ತಿರುವೇಂಕಟನೊಡನೆ ಏಕಾಂತದಲ್ಲಿ ಬಹಳ ಹೊತ್ತು ಆಲೋಚಿಸುತ್ತ ಕುಳಿತುಕೊಂಡ ಸಂಗತಿಯನ್ನು ಆ ಅಬದುಲರಹಿಮಾನನಿಗೆ ಹೇಳಿದನು. ಅದನ್ನು ಹೇಳಿದ ಬಳಿಕಂತು ಅಬದುಲ ರಹಿಮಾನನ ಸಂಶಯವು ಮತ್ತಿಷ್ಟು ಹೆಚ್ಚಾಯಿತು; ದೀರ್ಘವಾದ ಆಲೋಚನೆಗೆ ಒಳಗಾಗಿ ಏನು ಮಾಡಿದರೂ ಅವನ ಆಲೋಚನೆಯು ಬಗೆಹರಿಯದಂತಾಯಿತು.

ಮನುಷ್ಯನ ಮನಸ್ಸು ಚಂಚಲವಾಯಿತೆಂದರೆ, ಆ ಚಂಚಲ ಮನಸ್ಸಿನ ವಿಚಾರಗಳು ಮೇಲೆ ಮೇಲೆ ಬದಲಾಗುತ್ತಿರುವದು ಸ್ವಾಭಾವಿಕವು. ಹೀಗೆ ಚಿಂತೆಗೊಳಗಾದ ಶೂರ ಅಬದುಲರಹಿಮಾನನು ತನ್ನ ಪರಾಕ್ರಮವನ್ನು ಸ್ಮರಿಸಿ ಉತ್ಸಾಹದಿಂದ– ''ಹೀಗೆ ನಾಮರ್ದನಂತೆ ನಾನೇನು ವಿಚಾರಮಾಡಹತ್ತಿರುವೆನು? ಆ ಕಾಫರನಾದ ತಿರುವೇಂಕಟನ ಬಿಸಾತಾದರೂ ಏನು? ಅವನಲ್ಲಿ ದ್ರೋಹಬುದ್ಧಿಯು ಕಂಡುಬಂದರೆ, ಅವನನ್ನು ಕೂಡಲೆ ತುಂಡರಿಸಿ ಚಲ್ಲಿದರಾಯಿತು. ನಮ್ಮ ಅಚ್ಚ ಮುಸಲ್ಮಾನರ ಪ್ರಚಂಡ ಸೈನ್ಯವು ತಿರುವೇಂಕಟನ, ಹಾಗು ಕಂಪಲಿಯವರ ಪಾರುಪತ್ಯಕ್ಕೆ ಸಾಕಾಗಿ ಇನ್ನೂ ಉಳಿಯುವ ಹಾಗಿದೆ; ಅಂದಬಳಿಕ ನಾನು ಇಷ್ಟು ಚಿಂತಿಸುವದೇಕೆ? ನಾಳೆ ಬೆಳಗಾಗುತ್ತಲೆ ಮೊದಲು ತಿರುವೇಂಕಟನ ಸಮಾಚಾರವನ್ನೇ ತೆಗೆದುಕೊಳ್ಳತಕ್ಕದ್ದು; ಅದರಲ್ಲಿ ಈಗ ರಾತ್ರಿಯು ಬಹಳವಾಗಿರುವದರಿಂದ ಸ್ವಲ್ಪ ನಿದ್ದೆ ಮಾಡಿ ಏಳೋಣ!'' ಎಂದು ಯೋಚಿಸಿ ಅಬದುಲರಹಿಮಾನನು ಸ್ವಸ್ಥವಾಗಿ ನಿದ್ದೆ ಮಾಡಬೇಕೆಂದು ಹಾಸಿಗೆಯ ಮೇಲೆ ಮಲಗಿಕೊಂಡನು; ಆದರೆ ಏನು ಮಾಡಿದರೂ ಅವನ ಮನಸ್ಸು ಸ್ವಸ್ಥವಾಗಲೊಲ್ಲದು. ಇನ್ನು ನಿದ್ದೆ ಮಾಡಿಯೇ ತೀರುವೆನೆಂದು ಆ ಯವನವೀರನು ಗಟ್ಟಿಯಾಗಿ ಕಣ್ಣು ಮುಚ್ಚಲು, ಮಾಧವಾಚಾರ್ಯರ ಮೂರ್ತಿಯು ಅವನ ಕಣ್ಣಿಗೆ ಕಟ್ಟಿ,

ಅವನ ಮನಸ್ಸು ಮತ್ತಿಷ್ಟು ಚಂಚಲವಾಯಿತು. ಅವನು ಭಯಗ್ರಸ್ತನಾಗಿ ಮನಸ್ಸಿನಲ್ಲಿ–''ಆ ಬ್ರಾಹ್ಮಣನ ನೆಲೆ ಹತ್ತುವದು ಮಾತ್ರ ಬಲು ಕಠಿಣ! ಆತನು ತಾನಾಗಿ ಸೆರೆಯಾಳಾದದ್ದರಲ್ಲಿ ಏನಾದರೂ ಮೋಸವಿರುವದು. ತಾನು ಕಂಪಲಿಯನ್ನು ಬಿಟ್ಟು ಬರುವಾಗ ನಮಗಾಗಿ ಏನಾದರೂ ಬಲೆಯನ್ನು ಒಡ್ಡಿರಲೇಬೇಕು! ಎಲ ಎಲಾ! ಒಬ್ಬ ತಿರುವೇಂಕಟನ ಸಂಬಂಧ ವಿದ್ದರೆ, ಆ ಹುಂಬನನ್ನು ಈಗಲೇ ತುಂಡರಿಸಬಹುದಾಗಿತ್ತು; ಆದರೆ ಮಾಧವಾಚಾರ್ಯರ ಗೂಢ ತಂತ್ರದ ಭಯವು ನನಗೆ ಬಹಳವಾಗಿ ಬರುತ್ತದೆ. ಪ್ರತ್ಯಕ್ಷ ನಮ್ಮ ಕಾಸಿಮಖಾನರಂಥ ವೀರಾಧಿವೀರ ಅಚ್ಚ ಮುಸಲ್ಮಾನ ಸರದಾರರ ಮನಸ್ಸನ್ನು ತಿರುಗಿಸಿದ ಆ ಕರ್ತೃತ್ವಶಾಲಿಯಾವ ಬ್ರಾಹ್ಮಣನು ಏನು ಮಾಡಿಯಾನು? ಏನು ಮಾಡಲಿಕ್ಕಿಲ್ಲ! ಅಂದಬಳಿಕ ಈಗಿನ ಪ್ರಸಂಗದಲ್ಲಿ ಏನು ಮಾಡಲಿ?'' ಎಂದು ತಳಮಳಿಸುತ್ತ ಏನೇನೋ ಆಲೋಚನೆ ಹಾಕುತ್ತ ಹಾಸಿಗೆಯ ಮೇಲೆ ಅವನು ಹೊರಳಾಡುತ್ತಿರಲು, ಬೆಳ್ಳಗೆ ಬೆಳಗಾಯಿತು!

ಬೇಗನೆ ಕಂಪಲಿಯನ್ನು ವಶಮಾಡಿಕೊಳ್ಳಬೇಕೆಂದು ಧಾವಿಸಿ ಬಂದದ್ದರಿಂದಾದ ಮಾರ್ಗಾಯಾಸ, ವಿವಿಧ ಚಿಂತೆಯಿಂದ ರಾತ್ರಿಯೆಲ್ಲ ಅದ ನಿದ್ರೆಗೇಡಿನ ತ್ರಾಸು ಇವುಗಳ ಯೋಗದಿಂದ ಅಬದುಲರಹಿಮಾನನ ಚಿತ್ತವೃತ್ತಿಯು ಬಹಳ ಉದಾಸವಾಗಿತ್ತು, ಅವನು ಆಕಳಿಸುತ್ತ ಹಾಸಿಗೆಯಿಂದೆದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಔದಾಸೀನ್ಯದಿಂದ ಬೆಳಗಿನ ನಮಾಜು ಮಾಡಿ ಸದರಿನಲ್ಲಿ ಬಂದು ಕುಳಿತುಕೊಂಡನು; ಅಷ್ಟರಲ್ಲಿ ದ್ವಾರರಕ್ಷಕರು ತಿರುವೇಂಕಟನು ಬಂದ ವರ್ತಮಾನವನ್ನು ಹೇಳಿದನು. ಕೂಡಲೆ ಅಬದುಲರಹಿಮಾನನ ಸಿಟ್ಟು ಮಸ್ತಕಕ್ಕೇರಿ ಆ ಕಾಫರನನ್ನು ಬಂದಹಾಗೆಯೇ ಹಿಂದಕ್ಕೆ ಕಳಿಸಬೇಕೆಂದು ಆ ದ್ವಾರರಕ್ಷಕನಿಗೆ—''ಈಗ ಭೆಟ್ಟಿಯಾಗಲು ಅವಕಾಶವಿಲ್ಲ, ಬೇಕಾದಾಗ ಕರೆಸಿಕೊಳ್ಳುವೆವೆಂದು ಆತನಿಗೆ ಹೇಳು'' ಎಂದು ಆಜ್ಞಾಪಿಸಲು, ದ್ವಾರರಕ್ಷಕನು ಹೋಗುತ್ತಿರುವಾಗ ಮತ್ತೆ ಏನೋ ವಿಚಾರ ಬಂದು ಅವನನ್ನು ಕರೆದು–''ಇರಲಿ, ಹಾಗೇನು ಹೇಳದೆ ಆತನನ್ನು ಕರಕೊಂಡು ಬಾ'' ಎಂದು ಮತ್ತೆ ಆಜ್ಞಾಪಿಸಿದನು. ಈಗ ಆ ದ್ವಾರರಕ್ಷಕನು, ''ಮಹದಾಜ್ಞೆ'' ಎಂದು ಹೋಗಲು, ಅಬದುಲ ರಹಿಮಾನನು–''ಛೀ, ಛೀ! ನನ್ನ ಮೊದಲಿನ ವಿಚಾರವನ್ನು ಬದಲಿಸತಕ್ಕದ್ದಿದ್ದಿಲ್ಲ, ಈಗಿನ ಪ್ರಸಂಗದಲ್ಲಿ ತಿರುವೇಂಕಟನನ್ನು ಕಾಣಿಸಿಕೊಳ್ಳದೆ ಅವನನ್ನು ಹಾಗೇ ಕಳಿಸಿದ್ದರೆ ನನ್ನ ಒಗರು ಉಳಿಯುತ್ತಿತ್ತು'' ಎಂದು ಅಸಮಾಧಾನಪಡುತ್ತಿರಲು, ತಿರುವೇಂಕಟನು ಅಲ್ಲಿಗೆ ಬಂದುಬಿಟ್ಟು ಅಬದುಲರಹಿಮಾನನಿಗೆ ಬಗ್ಗಿ ಸಲಾಮು ಮಾಡಿದನು. ಆಗ ಅಬದುಲರಹಿಮಾನನು ಶಿಷ್ಟಾಚಾರವನ್ನು ಮೀರಲಾರದೆ ತೋರಿಕೆಯ ಮುಗುಳುನಗೆಯಿಂದ ತಿರುವೇಂಕಟನನ್ನು ಕುರಿತು–''ಬರಬೇಕು, ತಿರುವೇಂಕಟ ಸರದಾರರು ಬರಬೇಕು; ಪ್ರಕೃತಿಯು ಅಸ್ವಸ್ಥವಾಗಿದ್ದರೆ ಸ್ವಲ್ಪ ತಡೆದು ಬರಬಹುದಾಗಿತ್ತು; ಇಷ್ಟು ನಸುಕಿನಲ್ಲಿ ಯಾಕೆ ಬರಬೇಕು?'' ಎಂದು ಕೇಳಲು, ತಿರುವೇಂಕಟನು–''ನಿನ್ನೆಯೇ ನಾನು ಬರತಕ್ಕದ್ದು; ಆದರೆ ಅನಿವಾರ್ಯಹಪಕ್ಷ ಬಾರದ್ದರಿಂದ ಮನಸ್ಸಿಗೆ ಬಹಳ ಅಸಮಾಧಾನವಾಗಿರಲು, ಬೆಳಗಾಗುತ್ತಲೆ ಬಂದುಬಿಟ್ಟೆನು. ಖಾವಿಂದ, ಅತ್ತಕಡೆಗೆ ಎಲ್ಲ ಸ್ವಸ್ಥವೇ? ಮಾಧವಾಚಾರ್ಯರಿಂದ ಮಾರ್ಗದಲ್ಲಿ ತಮಗೆ ತೊಂದರೆಯಾಗ

ಲಿಲ್ಲವಷ್ಟೆ? ನಾಯಬಸಾಹೇಬರ ಆಜ್ಞೆಯೇನಾಗಿರುವದು? ನನ್ನ ಆಲೋಚನೆಯು ಅವರ ಮನಸ್ಸಿಗೆ ಬಂದಿತೋ?'' ಎಂದು ಪ್ರಶ್ನೆಯ ಮೇಲೆ ಪ್ರಶ್ನೆಗಳನ್ನು ಮಾಡುತ್ತಿರಲು, ಮೊದಲೇ ರೋಸಿಹೋಗಿದ್ದ ಅಬದುಲರಹಿಮಾನನು ಅಸಹ್ಯಪಟ್ಟು ಹುಬ್ಬು ಗಂಟಿಕ್ಕಿ–''ತಿರುವೇಂಕಟ, ನಿಮ್ಮ ಪ್ರಶ್ನೆಗಳ ಮಾಲಿಕೆಯನ್ನು ಮುಗಿಸಿರಿ; ಅದನ್ನು ಕೇಳಿಕೊಳ್ಳುವ ಇಚ್ಛೆಯು ನನಗಿಲ್ಲ. ನಾನು ಹೋದಬಳಿಕ ಇಲ್ಲಿ ನೀವು ಮಾಡಿದ್ದೇನೆಂಬದನ್ನು ಮೊದಲು ಹೇಳಿರಿ. ಯಾರೋ ಒಬ್ಬ ಜಂಗಮರೊಡನೆ ನಿಮ್ಮ ಏಕಾಂತವು ನಡೆದಿತ್ತೆಂದು ನಾನು ಕೇಳಿದ್ದೇನೆ; ಅದರ ಸಂಗತಿಯನ್ನು ನನಗೆ ತಿಳಿಸುವ ವ್ಯವಸ್ಥೆಯನ್ನೇನು ನೀವು ಮಾಡಿರುವಿರಿ? ಹಿಂದು–ಹಿಂದುಗಳು ನಿಮ್ಮೊಳಗೆ ನೀವು ಏನೋ ಗೇಣು ಹಾಕಿಕೊಂಡಂತೆ ತೋರುತ್ತದೆ; ಹಾಗಿಲ್ಲದಿದ್ದರೆ ನಿನ್ನೆ ನಾನು ನಮ್ಮವರೆಂದು ತಿಳಿದು ನನ್ನ ಮಾರ್ಗಾಯಾಸವನ್ನು ಲಕ್ಷಿಸದೆ ನಿಮ್ಮನ್ನು ಕರೆಸಿದಾಗ ನೀವು ಬಾರದೆ ಯಾಕೆ ಇರುತ್ತಿದ್ದಿರಿ? ನಿಮ್ಮ ವಿಷಯವಾಗಿ ನಾನು ನಾಯಬರ ಮುಂದೆ ಮಾಡಿದ ಸಿಫಾರಸಿನ ಉಪಕಾರವನ್ನು ನೀವು ತೀರಿಸಿದಂತಾಯಿತು. ಏನೂ ಚಿಂತೆಯಿಲ್ಲ. ಕಾಫರರಾದ ಹಿಂದುಗಳೊಡನೆ ಗುಪ್ತಾಲೋಚನೆ ಮಾಡಿದ ಹಿಂದುಗಳಾದ ನಿಮ್ಮ ಸಮಾಚಾರವನ್ನೂ ತಕ್ಕೊಳ್ಳುವಷ್ಟು ಸಾಮರ್ಥ್ಯವು ನನ್ನಲ್ಲಿರುವದು. ನಿಮ್ಮ ದೇಹದಲ್ಲಿ ಪೂರ್ಣ ಆರೋಗ್ಯವಾಗುವವರೆಗೆ ನೀವು ನನ್ನ ಬಳಿಗೆ ಬರುವ ಕಾರಣವಿಲ್ಲ; ಆ ನಿಮ್ಮ ತುಂಟ ಶಾಸ್ತ್ರಿ ಎಲ್ಲಿರುವನು? ಇದೆಲ್ಲ ಅವರ ಕುಂಟ ಚೇಷ್ಟೆಯೆಂದೇ ನನಗೆ ಕಾಣುತ್ತದೆ! ನೀವೇನು ಮಾಡೀರಿ, ನಮ್ಮ ಬಾದಶಹರ ಅನ್ನವು ಹೀಗೆ ಮಾಡಿಸುತ್ತದೆ!''

ಈ ಮೇರೆಗೆ ಅಬದುಲರಹಿಮಾನನು ಕ್ರೋಧದಿಂದ ಮೈಮರೆತು ಹಿಂದುಮುಂದಿನ ವಿಚಾರವಿಲ್ಲದೆ, ಸದ್ಯಕ್ಕೆ ತಾನು ಎಲ್ಲಿ ಯಾವ ಸ್ಥಿತಿಯಲ್ಲಿರುತ್ತಿರುವೆನೆಂಬದರ ಅರಿವಿಲ್ಲದೆ, ಬಾಯಿಗೆ ಬಂದ ಹಾಗೆ ಮಾತಾಡಹತ್ತಿದನು. ಆಗ ತಿರುವೇಂಕಟನು ನಡುವೆ ಬಾಯಿಹಾಕಿ–– ''ಖಾನಸಾಹೇಬ, ಈಗ ನಿಮಗೆ ಬಹಳ ಸಿಟ್ಟು ಬಂದಹಾಗೆ ಕಾಣುತ್ತದೆ; ಆದ್ದರಿಂದ ಸದ್ಯಕ್ಕೆ ನಾನು ಹೋಗುವೆನು. ನಿಮ್ಮ ಮಾತಿಗೆ ಪ್ರತಿಯಾಗಿ ಮಾತಾಡಲಿಕ್ಕೆ ನನಗೆ ಬರುವದಿಲ್ಲವೆಂತಲ್ಲ; ಆದರೆ ಹಾಗೆ ವ್ಯರ್ಥ ಮಾತಾಡುವದು ಶಿಷ್ಟಾಚಾರವಲ್ಲ. ನಿಮಗೆ ನಮ್ಮ ಅವಶ್ಯವಿಲ್ಲದಿದ್ದರೆ ನಮ್ಮ ಹಂಗು ಇಲ್ಲದೆ ನೀವೇ ಕೋಟೆಯನ್ನು ಸ್ವಾಧೀಪಡಿಸಿಕೊಳ್ಳಬಹುದು; ಆ ಪ್ರಸಂಗದಲ್ಲಿ ನೀವಾಗಿ ಕರೆಯುವವರೆಗೆ ನಮ್ಮ ಒರೆಯೊಳಗಿನ ಖಡ್ಗವು ಅಲ್ಲಾಡಲಿಕ್ಕಿಲ್ಲ! ನಮ್ಮ ಸದಸದ್ವಿವೇಕ ಬುದ್ಧಿಗೆ ತೋಚಿದಂತೆ ನಾವು ನಡೆದುಕೊಳ್ಳುವೆವಲ್ಲದೆ, ನಿಮ್ಮಂಥವರ ನಿಷ್ಠುರ ತನಕ್ಕಾಗಿಯಾಗಲಿ, ನಿಷ್ಠುರ ಮಾತುಗಳಿಗಾಗಿಯಾಗಲಿ ಅಂಜಿ ನಡೆದುಕೊಳ್ಳುವದಿಲ್ಲ. ನಮ್ಮಲ್ಲಿಗೆ ಜಂಗಮರು ಬಂದಿರಬಹುದು, ಜೋಗಿಗಳು ಬಂದಿರಬಹುದು; ಇನ್ನುಮೇಲೆ ಪ್ರಸಂಗ ಬಂದರೆ ಫಕೀರರೂ ಬರಬಹುದು! ಯಾರು ಬಂದರೂ ನಾವು ನಮ್ಮ ಕಾರ್ಯಸಾಧಿಸುವ ದೃಷ್ಟಿಯಿಂದ ಅವರೊಡನೆ ವ್ಯವಹರಿಸುವೆವಲ್ಲದೆ, ಕಾರ್ಯವಿಘಾತ ಮಾಡಿಕೊಳ್ಳುವಂತೆ ವ್ಯವಹರಿಸಲಾರೆವು. ನಮ್ಮ ಕಾರ್ಯವನ್ನು ಸಾಧಿಸುವದಕ್ಕಾಗಿ ನಾವು ಒಬ್ಬರ ಬಳಿಗೆ ಹೋಗಬಹುದು, ಅಥವಾ ನಾವಿದ್ದಲ್ಲಿಗೆ ಒಬ್ಬರನ್ನು ಕರೆಸಬಹುದು; ಆದರೆ ಈ ಹೋಗುಬರುವ ವ್ಯವಹಾರದ

ವಿಷಯವಾಗಿ ಕುಭಾವವನ್ನು ತಾಳುವದು ಮುತ್ಸದ್ದಿತನವಲ್ಲ. ಹೌದು, ಒಬ್ಬ ಮಹಾತ್ಮರಾದ ಜಂಗಮರು ನನ್ನ ಬಳಿಗೆ ಬಂದಿದ್ದರು; ಮತ್ತು ನೀನು ಹೀಗೆ ದೇಶದ್ರೋಹಿಯಾಗಿ ಪರದೇಶದ ಶತ್ರುಗಳಿಗೆ ಅನುಕೂಲವಾಗುವದು ಧರ್ಮವಲ್ಲೆಂದು ನನ್ನನ್ನು ಬೋಧಿಸಿದರು; ಅವರ ಆ ಬೋಧವು ನ್ಯಾಯ–ನೀತಿ ಸಮ್ಮತವಾದದ್ದರಿಂದ ಅದರಂತೆ ನಾನು ಸ್ವದೇಶದ ಉದ್ಧಾರ ಕ್ಕಾಗಿಯೇ ಇನ್ನುಮೇಲೆ ಯತ್ನಿಸುವೆನು, ಇನ್ನು ನೀವು ಅನ್ನುವದೇನು? ಖಾನಸಾಹೇಬ, ನನ್ನ ಮನಸ್ಸಿನಲ್ಲಿ ಈ ಮೊದಲೆ ಇಂಥ ನ್ಯಾಯಸಮ್ಮತ ವಿಚಾರವು ಬಂದಿರಲಿ, ಬಂದಿರದಿರಲಿ ಈಗ ನೀವು ನನ್ನ ಮೇಲೆ ಎಷ್ಟರಮಟ್ಟಿಗೆ ನಂಬಿಗೆಯಿಟ್ಟಿರುವಿರೆಂಬದು ನನಗೆ ಗೊತ್ತಾಗಿರುವದ ರಿಂದ ಈಗ ಮಾತ್ರ ನಾನು ಆ ವಿಚಾರದಂತೆಯೇ ನಡೆಯಬೇಕೆಂದು ನಿಶ್ಚಯಿಸಬೇಕಾಗುವದು. ಯಾಕಂದರೆ ನಾವು ಹೇಗಿದ್ದರೂ ನಿಮ್ಮ ಪಾಲಿಗೆ ಕಳ್ಳರೇ ಆದೆವು. ನಿಮ್ಮ ಕಾರ್ಯಕ್ಕಾಗಿ ನಮ್ಮ ಹಣೆ ಕೊಯ್ದು ಮಣೆ ಮಾಡಿದರೂ ನಮ್ಮ ನಂಬಿಗೆಯು ನಿಮಗೆ ಆಗದು. ನೀವು ನಿಮ್ಮ ಕಾರ್ಯ ಸಾಧಿಸಿಕೊಳ್ಳುವ ಮಟ್ಟಿಗೆ ಮಾತ್ರ ನಮ್ಮ ಮೇಲೆ ವಿಶ್ವಾಸ ತೋರಿಸುವವರೂ, ನಮ್ಮ ಮಾನ–ಮರ್ಯಾದೆಗಳನ್ನು ಕಾಯುವವರೂ ಆದಿರಿ; ಅಂದಬಳಿಕ ನಿಮ್ಮ ಮೇಲೆ ವಿಶ್ವಾಸ ವಿಟ್ಟು ನಾವಾದರೂ ಯಾಕೆ ನಡೆಯಬೇಕು? ಏನೂ ಚಿಂತೆಯಿಲ್ಲ, ಕಂಪಲಿಯವರೊಡನೆ ನನ್ನ ಶಾಸನವನ್ನು ನೀವು ಮಾಡಿರಿ; ಹಾಗೆ ನೀವು ನನ್ನ ಶಾಸನ ಮಾಡಿದಾಗಲೇ ನಾನು ನಿಮಗೆ ಶರಣಾಗತನಾಗುವೆನು, ಅಲ್ಲಿಯವರೆಗೆ ಇಗೋ ಈ ತಿರುವೇಂಕಟನು ಖಡ್ಗವನ್ನು ಕೆಳಗಿಟ್ಟನು! ಖಾನ ಸಾಹೇಬ, ನೀವು ನನ್ನ ವಿಷಯವಾಗಿ ಎಷ್ಟು ಸಂಶಯಪಟ್ಟರೂ ನಾನು ಮಾತ್ರ ಬಾದಶಾಹಿಯ ವಿಷಯವಾಗಿ ಬೇಈಮಾನನಾಗಲಿಕ್ಕಿಲ್ಲ; ಶತ್ರುಪಕ್ಷಕ್ಕೆ ಅನುಕೂಲವಾದೇನೆಂಬ ವಿಚಾರವನ್ನು ಮನಸ್ಸಿನಲ್ಲಿ ತರಬೇಡಿರಿ. ನಾನು ಹಿಂದುವಾದರೂ ಹಿಂದೂ ಪಕ್ಷೀಯನಲ್ಲದ್ದ ರಿಂದ ಹಿಂದುಗಳಿಗೆ ಸಹಾಯ ಮಾಡುವದಿಲ್ಲ; ಆದರಂತೆ ನಾನು ಮುಸಲ್ಮಾನಪಕ್ಷೀಯ ನಾದರೂ, ಪರಕೀಯರಾದ ಮುಸಲ್ಮಾನರು ನೀವು ನನ್ನ ವಿಷಯುವಾಗಿ ಸ್ವಕೀಯತ್ವವನ್ನು ವಹಿಸದೆಯಿರುವದರಿಂದ ನಿಮ್ಮ ಸ್ವರೂಪ ನಿರ್ಣಯವಾಗುವವರೆಗೆ ನಿಮಗೆ ನಾನು ಸಹಾಯ ಮಾಡುವದಿಲ್ಲ. ನನ್ನ ಮನಸ್ಸಿಗೆ ಬಂದಲ್ಲಿ ನನ್ನ ಸೈನ್ಯದೊಡನೆ ನಾನು ತಟಸ್ಥನಾಗಿದ್ದುಕೊಂಡು, ನೀವು ಜಯಶಾಲಿಗಳಾದಲ್ಲಿ ನಿಮ್ಮಿಂದ ದಂಡ್ಯನಾಗಿ ನಿಮ್ಮ ಬಳಿಗೆ ಬರುವೆನು. ನೀವು ಸೋತ ಪಕ್ಷದಲ್ಲಿ ನಿಮ್ಮ ಸ್ಥಾನವನ್ನು ಆಕ್ರಮಿಸಿ ಯವನ ಸೈನ್ಯದ ಮುಖ್ಯಾಧಿಕಾರಿಯಾಗಿ ಹಿಂದುಗಳನ್ನು ಸೋಲಿಸಿ ಕಂಪಲಿಯ ಕೋಟೆಯನ್ನು ಸ್ವಾಧೀನಪಡಿಸಿಕೊಂಡು ಹುಕ್ಕ ಮೊದಲಾದವರನ್ನು ಸೆರೆಹಿಡಿದು ನಾಯಬರ ಬಳಿಗೆ ಒಯ್ಯುವೆನು; ಅದು ಸಾಧಿಸದಿದ್ದರೆ ಶೌರ್ಯದಿಂದ ಕಾದಿ ರಣಭೂಮಿಯಲ್ಲಿ ದೇಹವಿಡುವೆನು'' ಎಂದು ನುಡಿದು ಆತನು ಚಟ್ಟನೆ ಎದ್ದು ಹೊರಟು ಹೋಗುತ್ತಿರಲು, ಅಬದುಲರಹಿಮಾನನು ತನ್ನ ಅಂಗರಕ್ಷಕರಿಗೆ ತಿರುವೇಂಕಟನ ಶಾಸನಕ್ಕಾಗಿ ಸನ್ನೆ ಮಾಡಿದನು. ಆಗ ಅಂಗರಕ್ಷಕರು ಶಸ್ತ್ರಗಳನ್ನು ಹಿರಿಯಲು, ತಿರುವೇಂಕಟನೂ ಶಸ್ತ್ರ ಹಿರಿಯುವಾಗ ಅವನ ಅಂಗರಕ್ಷಕರೂ ಶಸ್ತ್ರಗಳನ್ನು ಹಿರಿದರು. ಹೀಗೆ ತಮ್ಮ ತಮ್ಮೊಳಗೆ ಕಲಹವು ಉತ್ಪನ್ನವಾದದ್ದನ್ನು ನೋಡಿ, ಅಕಸ್ಮಾತ್ ಯಾವನೊ ಒಬ್ಬ ಫಕೀರನು

ನಡುವೆಯಾಗಿ–''ಸರದಾರಸಾಹೇಬ, ಈ ಅಂತಃಕಲಹವು ಹಿತಕರವಲ್ಲ! ದಯಮಾಡಿ ಖಡ್ಗವನ್ನು ಒರೆಗಾಣಿಸಿರಿ'' ಎಂದು ಹೇಳಿ ಅತ್ತ ಅಬದುಲರಹಿಮಾನನ ಕೈಖಡ್ಗವನ್ನು ಕಸಿದುಕೊಂಡು ಆತನನ್ನು ಕುರಿತು–''ಖಾನಸಾಹೇಬ, ನಿಮ್ಮ ಈ ವಿಪರೀತ ಬುದ್ಧಿಯನ್ನು ನೋಡಿದರೆ, ನೀವು ಬಾದಶಹರ ಹಿತ ಮಾಡುವವರಂತೆ ತೋರದೆ ಸ್ವಪ್ರತಿಷ್ಠೆಗಾಗಿ ಬಾದಶಾಹಿಯ ಅಹಿತವನ್ನು ಚಿಂತಿಸುವಂತೆ ತೋರುತ್ತದೆ; ಆದರೆ ಇದು ನಿಮಗೆ ಭೂಷಣವಲ್ಲ; ಇದರಿಂದ ನಿಮ್ಮ ಹಿತವೂ ಆಗದು! ಖಾನಸಾಹೇಬ, ಮಾಧವ ಬ್ರಾಹ್ಮಣನ ಗುಪ್ತ ವ್ಯವಸ್ಥೆಯ ಗಂಧವೂ ನಿಮಗೆ ಹತ್ತಿರುವದಿಲ್ಲ. ಕಂಪಲಿಯ ಕೋಟೆಯನ್ನು ಮುತ್ತಿರುವ ನಿಮ್ಮ ಸೈನ್ಯವನ್ನು ಹಿಂದೂಜನರ ಪ್ರಚಂಡ ಸೈನ್ಯವು ಹೊರಗಿನಿಂದ ಮುತ್ತಿಗೆಹಾಕಲು ಹೊರಟಿರುವದಲ್ಲದೆ, ಕಂಪಲಿಯ ಕೋಟೆಯಲ್ಲಿ ವೀರರ ತಂಡವು ನಿಮ್ಮನ್ನು ಹಣಿಯಲಿಕ್ಕೆ ಸಿದ್ಧವಾಗಿದೆ. ಇಂಥ ಪ್ರಸಂಗದಲ್ಲಿ ನಿಮ್ಮ ಅಂತಃಕಲಹದಿಂದ ಹಿತವಾಗಬಹುದೆ? ಈ ಪ್ರಸಂಗದಲ್ಲಿ ನಿಮ್ಮದೇ ಅಪರಾಧವಿರುವದು. ನೀವು ಹೀಗೆ ತಿರುವೇಂಕಟ ಸರದಾರರನ್ನು ನಿಷೇಧಿಸಿ ಕಠೋರ ಭಾಷಣ ಮಾಡತಕ್ಕದ್ದಲ್ಲ; ಅಂತಃಕಲಹವು ನಾಶದ ಲಕ್ಷಣವಾಗಿರವದು'' ಎಂದು ನುಡಿಯುತ್ತಿರಲು, ತಿರುವೇಂಕಟನು ಆ ಫಕೀರನನ್ನು ಕುರಿತು—''ಫಕೀರಸಾಹೇಬ, ನಿಮ್ಮಂಥ ವಿವೇಕಿಗಳಿರುವದರಿಂದಲೇ ಮುಸಲ್ಮಾನರ ಗೌರವವು ಉಳಿದಿರುವದು. ಖಾನಸಾಹೇಬರು ಏನಂದರೂ ನನಗೆ ಸಿಟ್ಟಿಲ್ಲ. ಮುಖ್ಯ ನಾವು ಬಾದಶಹರ ಕಡೆಗೆ ಲಕ್ಷಗೊಡತಕ್ಕದ್ದು; ಆದರೆ ಈ ಗಂಡುಮಕ್ಕಳು ಶಸ್ತ್ರ ಹಿರಿದದ್ದರಿಂದ, ಇತ್ತ ಕಡೆಯವರು ಹೆಂಗಸರಿರುವದಿಲ್ಲವೆಂಬದನ್ನು ತೋರಿಸುವದಕ್ಕಾಗಿ ನಾವೂ ಶಸ್ತ್ರ ಹಿರಿಯಬೇಕಾಯಿತು. ಏನೂ ಚಿಂತೆಯಿಲ್ಲ. ಕ್ಷತ್ರಿಯನಾದ ನಾನು ಆಡಿದ ಮಾತಿಗೆ ತಪ್ಪುವವನಲ್ಲ; ಖಾನಸಾಹೇಬರ ಸೋಕ್ಷಮೋಕ್ಷವಾಗುವವರೆಗೆ ನಾನು ಸುಮ್ಮನೆ ಇದ್ದುಕೊಂಡು ಆಮೇಲೆ ನಾನು ಮಾಡತಕ್ಕದ್ದನ್ನು ಮಾಡುವೆನು.''

ಈ ಮೇರೆಗೆ ನುಡಿದು ತಿರುವೇಂಕಟನು ತನ್ನ ಅಂಗರಕ್ಷಕರೊಡನೆ ಹೊರಟುಹೋದನು. ತಮ್ಮ ಶ್ರೀಕಂಠಶಾಸ್ತ್ರಿಗಳು ಯೋಚಿಸಿದಂತೆ ವ್ಯವಸ್ಥೆಯಾದದ್ದಕ್ಕಾಗಿ ಆತನಿಗೆ ಬಹಳ ಸಂತೋಷ ವಾಯಿತು. ಹೀಗೆ ಪ್ರತಿಜ್ಞೆ ಮಾಡಿದಹಾಗೆ ಮಾಡಿ ತಿರುವೇಂಕಟನು ಹೊರಟು ಹೋದ ಸುದ್ದಿಯು ಮುಸಲ್ಮಾನರ ಸೈನ್ಯದಲ್ಲೆಲ್ಲ ಪಸರಿಸಿ, ಯಾರು ಅಬದುಲರಹಿಮಾನನ್ನು ದೂಷಿಸ ತೊಡಗಿದರು; ಯಾರು ತಿರುವೇಂಕಟನನ್ನು ದೂಷಿಸತೊಡಗಿದರು. ಯಾರು ತಿರುವೇಂಕಟನ ಪಾರುಪತ್ಯವನ್ನು ಮೊದಲುಮಾಡಿ, ಆಮೇಲೆ ಕಂಪಲಿಯ ಕೋಟೆಯನ್ನು ಕೈವಶಮಾಡಿಕೊಳ್ಳ ಬೇಕೆನ್ನತೊಡಗಿದರು. ಯಾರು ಮೊದಲು ಕಂಪಲಿಯನ್ನು ಸ್ವಾಧೀನಮಾಡಿಕೊಂಡು ಆಮೇಲೆ ತಿರುವೇಂಕಟನ ಪಾರುಪತ್ಯ ಮಾಡಬೇಕೆನ್ನತೊಡಗಿದರು. ನಿಜವಾಗಿಯೆಂದರೆ ಅಬದುಲ ರಹಿಮಾನನು ಪ್ರಚಂಡ ಸೈನ್ಯದೊಡನೆ ಕಂಪಲಿಗೆ ಮುತ್ತಿಗೆಹಾಕಿದ್ದರಿಂದ ಮುಸಲ್ಮಾನರು ನಿರ್ಭಯರಾಗಿದ್ದರು. ತಾವು ಸಹಜವಾಗಿ ಕಂಪಲಿಯನ್ನು ವಶಮಾಡಿಕೊಂಡು ತಿರುವೇಂಕಟನ ಶಾಸನಮಾಡಬಹುದೆಂದು ನಂಬಿದ್ದರು. ಹೀಗಿರುವಾಗ ಒಬ್ಬ ಅಪರಿಚಿತನಾದ ತರುಣ

ಫಕೀರನು ತನ್ನ ತೇಜೋವಿಶೇಷದಿಂದ ಅಬದುಲರಹಿಮಾನನೇ ಮೊದಲಾದವರ ಚಿತ್ತಹರಣಮಾಡುತ್ತ ಹಿಂದೂ ಜನರು ತಮ್ಮನ್ನು ಮುತ್ತುವ ಸುದ್ದಿಯನ್ನು ಹೇಳಿದ್ದರಿಂದ ಅಲ್ಲಿದ್ದ ಮುಸಲ್ಮಾನರು ಅದರ ನಿಜತ್ವವನ್ನು ಅರಿಯಲು ಆತುರಪಡತೊಡಗಿದರು. ತಿರುವೇಂಕಟನು ಅತ್ತ ಹೊರಟು ಹೋಗಲು, ಅದಕ್ಕೆ ಮಹತ್ವಕೊಡದೆ ಅಬದುಲರಹಿಮಾನನು ಫಕೀರನನ್ನು ಕುರಿತು–ಫಕೀರಸಾಹೇಬ, ನಿಮ್ಮ ಮಾತು ಸತ್ಯವೆಂದು ನಾವು ಹ್ಯಾಗೆ ನಂಬಬೇಕು? ನೀವು ಅಕಸ್ಮಾತ್ತಾಗಿ ಬಂದು ನಿರ್ಬಂಧಿಸದಿದ್ದರೆ ತಿರುವೇಂಕಟನನ್ನು ನಾನು ಮೊದಲು ತುಂಡರಿಸಿ, ಹಿಂದಿನಿಂದ ಆದದ್ದನ್ನು ನೋಡಿಕೊಳ್ಳುತ್ತಿದ್ದನು; ಇರಲಿ, ಹ್ಯಾಗಿದ್ದರೂ ಆ ಕಾಫರನು ನಮ್ಮ ಪಕ್ಷದವನಾಗಿರುವದರಿಂದ ಅನಕಾ ಬದುಕಿಕೊಂಡಿರಲಿ! ಆದರೆ ನೀವು ಎಲ್ಲಿಯವರು? ಹಿಂದೂಜನರ ಸೈನ್ಯವು ನಮ್ಮನ್ನು ಮುತ್ತುವದೆಂಬದಕ್ಕೆ ಆಧಾರವೇನು?

## ಇಬ್ಬರು ತರುಣ ಫಕೀರರು

ಈ ಮೇರೆಗೆ ನುಡಿದು ಅಬದುಲರಹಿಮಾನನು ಉತ್ಸುಕತೆಯಿಂದ ಆ ತರುಣ ಫಕೀರನ ಮೋರೆಯನ್ನು ನೋಡುತ್ತಿರಲು, ಫಕೀರನು ಮುಗುಳುನಗೆ ನಗುತ್ತ–''ಪರವರದಿಗಾರ ಅಲ್ಲಾ! ನನ್ನ ಮಾತಿನ ಸತ್ಯತೆಗೆ ಬೇರೆ ಆಧಾರವೇಕೆ? ನಮ್ಮ ಸೈನ್ಯದಿಂದ ಮೂರು ಹರದಾರಿಯ ಮೇಲೆ ಹಿಂದೂ ಜನರ ಪ್ರಚಂಡ ಸೈನ್ಯವು ಪಾಳಯ ಬಿಟ್ಟಿರುವದನ್ನು ಈಗಲೇ ಒಬ್ಬ ರಾವುತನನ್ನು ಕಳಿಸಿ ಮನಗಾಣಬಹುದು. ಫಕೀರನಾದ ನಾನು ಹಿಂದುಗಳ ವೇಷದಿಂದ ಈಗ ಎಷ್ಟೋ ವರ್ಷಗಳಿಂದ ಆ ಸೈನ್ಯದಲ್ಲಿಯೇ ಇದ್ದೆನು. ಪವಿತ್ರ ಕುರಾಣ ಧರ್ಮವನ್ನು ಹಬ್ಬಿಸುವದು ಮುಹಮ್ಮದೀಯರ ಕರ್ತವ್ಯವಾದದ್ದರಿಂದ ನನ್ನ ಕೈಯಿಂದ ಕೆಲಸವನ್ನು ನಾನು ಮಾಡಬೇಕೆಂದು ಆ ಸೈನ್ಯದಲ್ಲಿಯೇ ಒಬ್ಬ ಸೈನಿಕನಾಗಿ ಇದ್ದೆನು. ಮಾಧವಾಚಾರ್ಯರ ತಂತ್ರದಿಂದ ಆ ಪ್ರಚಂಡ ಸೈನ್ಯವು ಬುಕ್ಕನ ಅಧಿಪತ್ಯದಲ್ಲಿ ಗುಪ್ತವಾಗಿ ಸಿದ್ಧವಾದದ್ದಿರುವದು. ಅದರ ಸೂತ್ರಚಾಲಕರು ಒಂದು ಗುಹೆಯವರು. ಆ ದಂಡಿನ ಶಿಕ್ಷಣವೆಲ್ಲ ಗುಪ್ತ ಸ್ಥಳದಲ್ಲಿಯೇ ಆಗಿರುವದು. ನೀವು ಕಂಪಲಿಯ ಕೋಟೆಯನ್ನು ಮುತ್ತಿರಲು, ನಿಮ್ಮನ್ನು ಪ್ರಸಂಗ ನೋಡಿ ಅಕಸ್ಮಾತ್ ಮುತ್ತುವಂತೆ ಮಾಧವಾಚಾರ್ಯರು ಗೊತ್ತುಮಾಡಿರುವರು. ಇಗೋ, ಈಗ ಆಚಾರ್ಯರ ಸ್ಥಳದಲ್ಲಿರುವ ವಿರೂಪಾಕ್ಷಾರ್ಯರೆಂಬುವರು ತಮ್ಮ ಸಿಕ್ಕಾ ಮೋರ್ತಬ ಮಾಡಿ ಕಳಿಸಿದ ಪತ್ರವಿದನ್ನು ನಿಮ್ಮ ಮುಂದೆ ಇಡುವೆನು! ಅಥವಾ ಪತ್ರವಾದರೂ ಏತಕ್ಕೆ? ನಾವು ಇಲ್ಲಿ ಕುಳಿತಿರುವಾಗಲೇ ನೀವು ಕಳಿಸಿರುವ ಸವಾರನು ಹಿಂದೂ ಜನರ ಸೈನ್ಯವು ಬೀಡು ಬಿಟ್ಟಿರುವದನ್ನು ಬಂದು ಹೇಳುವನು. ಖಾನಸಾಹೇಬ, ನಿಮ್ಮಂಥ ಸರಳ ಮಾರ್ಗದ ಶೂರರಿಗೆ ಮಾಧವಾಚಾರ್ಯರಂಥ ಶ್ರೇಷ್ಠ ಮುತ್ಸದ್ದಿಯ ಹಿಡತಗಳು ಗೊತ್ತಾಗವು. ಮಾಧವಾಚಾರ್ಯರ ಈ ಮುಖ್ಯ ಸೈನ್ಯದ ಸುಳಿವು ನಮ್ಮ ಯವನರಿಗಂತು ಇರಲಿ, ಹಿಂದುಗಳಿಗೂ ಹತ್ತಿರುವದಿಲ್ಲ ! ಇಷ್ಟರಿಂದಲೇ ಮಾಧವನ

ಮಂತ್ರಾಲೋಚನೆಯ ಮಟ್ಟು ಮುಗಿಯಿತೆಂದು ತಿಳಿಯಬೇಡಿರಿ. ನಮ್ಮ ಇನ್ನೊಬ್ಬ ತರುಣ ಫಕೀರನು ಇನ್ನೊಂದು ಸುದ್ದಿಯನ್ನು ತರತಕ್ಕವನಿರುವನು; ಅವನೂ ಇಷ್ಟರಲ್ಲಿಯೇ ಬರಬೇಕಾಗಿದ್ದು ಯಾಕೆ ಬರಲಿಲ್ಲವೋ ತಿಳಿಯದು. ನಾವಿಬ್ಬರೂ ಫಕೀರರು ಈಗ ಫಕೀರರೇ ಆಗಿದ್ದರೂ, ನಾವು ಮೂರು ನಾಲ್ಕು ವರ್ಷಗಳಿಂದ ಹಿಂದೂ ಜನರಾಗಿ ಅವರ ಸೈನಿಕರೊಡನೆ ಕೂಡಿ ನಡೆದಿರುವೆವು; ಆದ್ದರಿಂದ ನಾವು ಆ ಸೈನ್ಯದ ಮಟ್ಟನ್ನೆಲ್ಲ ತಿಳಿಸಲು ಸಮರ್ಥ ರಾಗಿದ್ದೇವೆ. ಖಾನಸಾಹೇಬ, ನಾವು ಮೂಲತಃ ಕ್ಷತ್ರಿಯರು, ಕುಲಗೆಟ್ಟು ಮುಸಲ್ಮಾನ ರಾಗಿರುವೆವು; ಏನು ಮಾಡಿದರೂ ಇನ್ನು ನಾವು ನಮ್ಮ ಕುಲದಲ್ಲಿ ಹೋಗುವ ಸಂಭವ ವಿಲ್ಲದ್ದರಿಂದ ಮುಸಲ್ಮಾನರಾದ ನಿಮ್ಮ ಉತ್ಕರ್ಷದಿಂದಲೇ ನಮ್ಮ ಉತ್ಕರ್ಷವನ್ನು ಮಾಡಿಕೊಳ್ಳ ಬೇಕಾಗಿರುವದು; ಆದ್ದರಿಂದ ಈಗ ನೀವು ಅಂತಃಕಲಕ್ಕೆ ಮನಸ್ಸು ಮಾಡದೆ ಒಕ್ಕಟ್ಟಿನಿಂದ ಶಕ್ತಿಸರ್ವಸ್ವವನ್ನು ಉಪಯೋಗಿಸಿರಿ. ಹಿಂದೂಜನರೊಡನೆ ಕಾದಿದರೆ ಅವರ ಆ ಹುರುಳಿಲ್ಲದ ಸೈನ್ಯವು ಶೂರರಾದ ನಮ್ಮ ಮುಸಲ್ಮಾನ ಸೈನ್ಯದ ಮುಂದೆ ಧೂಲಿಪಟಲವಾಗಿ ಹಾರಿಹೋಗಬಹುದಾಗಿದೆ! ಖಾನಸಾಹೇಬ, ನಮ್ಮ ಪ್ರತಾಪಶಾಲಿಯಾದ ಮುಸಲ್ಮಾನ ಸೈನ್ಯವು ಕಾದುವಾಗ ಇಗೋ ಈ ನನ್ನ ತೀಕ್ಷ್ಣ ಖಡ್ಗವು ಕಾಫರರಾದ ಹಿಂದುಗಳ ರಕ್ತವನ್ನು ಗಟಗಟ ಕುಡಿಯದೆ ಇರದು'' ಎಂದು ಗುಪ್ತವಾಗಿದ್ದ ತನ್ನ ಖಡ್ಗವನ್ನು ಒರೆಯಿಂದ ಹಿರಿದನು. ಅದೇ ಕಾಲದಲ್ಲಿ ಮತ್ತೊಬ್ಬ ತರುಣ ಫಕೀರನು ಅಕಸ್ಮಾತ್ತಾಗಿ ಅಲ್ಲಿಗೆ ಬಂದು – ''ಇಗೋ, ನಿನ್ನ ಖಡ್ಗವಿದ್ದಲ್ಲಿ ನನ್ನ ಈ ಖಡ್ಗವು ಝಳಪಿಸುತ್ತಿರುವದು'' ಎಂದು ನುಡಿದು ತನ್ನ ಖಡ್ಗವನ್ನೂ ಒರೆಯಿಂದ ಹಿರಿದನು. ಫಕೀರರ ಈ ವಿಲಕ್ಷಣ ರೀತಿಯನ್ನು ನೋಡಿ ಅಲ್ಲಿದ್ದವರೆಲ್ಲ ಬೆರಗಾಗಿ ನಿಂತುಕೊಂಡರು! ಅದೇ ಮಕಮೀಸೆ ಬಂದಿರುವ ಈ ತರುಣ ಫಕೀರರು ಎಲ್ಲಿಯವರು, ಇವರು ಹೇಗೆ ಆಕಸ್ಮಾತ್ ಎಲ್ಲಿಂದ ಬಂದರು ಎಂಬುದು ಯಾರಿಗೂ ತಿಳಿಯದೆ ಎಲ್ಲರೂ ಅಶ್ಚರ್ಯಚಕಿತರಾಗಿ ನೋಡುತ್ತಿರಲು, ಹೋದ ಮುಸಲ್ಮಾನ ರಾವುತನು ತಿರುಗಿ ಬಂದು, ಹಿಂದೂ ಜನರ ಪ್ರಚಂಡ ಸೈನ್ಯವು ಬೀಡುಬಿಟ್ಟಿರುವದು ನಿಜವೆಂಬ ಸುದ್ದಿಯನ್ನು ಹೇಳಿದನು.

ಹೀಗೆ ಫಕೀರನು ಹೇಳಿದ ಸುದ್ದಿಯು ನಿಜವಾದದ್ದನ್ನು ನೋಡಿ ಅಬದುಲರಹಿಮಾನನೇ ಮೊದಲಾದ ಮುಸಲ್ಮಾನ ವೀರರಿಗೆ ಯುದ್ಧೋತ್ಸಾಹವು ಉತ್ಪನ್ನವಾದರೂ, ಇಂಥ ಗುಪ್ತ ಸೈನ್ಯವು ಅಕಸ್ಮಾತ್ತಾಗಿ ತಮ್ಮನ್ನು ಹೊರಗಿನಿಂದ ಮುತ್ತಲು, ಕೋಟೆಯ ಒಳಗಿನವರಿಗೂ, ಈ ಹೊರಗಿನವರಿಗೂ ಒಮ್ಮೆಲೆ ತಾವು ಕೈಕೊಡುವ ಪ್ರಸಂಗದಲ್ಲಿ ತಿರುವೇಂಕಟನು ಸಹಾಯಕನಾಗಿ ಇರುವದು ಅವಶ್ಯವೆಂದು ಅವರು ನೆನಿಸಹತ್ತಿದರು. ಮೇಲಾಗಿ ತಿರುವೇಂಕಟನು ಶತ್ರುಗಳ ಹುಳಕುಗಳನ್ನೆಲ್ಲ ಬಲ್ಲವನಾಗಿದ್ದನು. ಕೋಟೆಯೊಳಗಿನ ಗುಪ್ತದ್ವಾರ ಮೊದಲಾದ ಗೂಢ ಸಂಗತಿಗಳು ಅವನಿಗೆ ಗೊತ್ತಿರುವವೆಂಬುದನ್ನು ಮುಸಲ್ಮಾನರು ಅರಿತಿದ್ದರು. ಇಂಥವನ ಮನಸ್ಸನ್ನು ಆಯತ ಸಮಯದಲ್ಲಿ ನೋಯಿಸಿದ್ದು ಒಳಿತಾಗ ಲಿಲ್ಲವೆಂದು ವಿವೇಕಿಗಳು ಎಣಿಸಿದ್ದಲ್ಲದೆ, ಸ್ವತಃ ಅಬದುಲರಹಿಮಾನನಿಗೂ ತನ್ನ ಸಂತಾಪದ ಸ್ವಭಾವಕ್ಕಾಗಿ ಪಶ್ಚಾತ್ತಾಪವಾಯಿತು; ಆ ಪಶ್ಚಾತ್ತಾಪದ ಭರದಲ್ಲಿ ತಿರುವೇಂಕಟನನ್ನು

ಕರೆಕಳುಹಬೇಕೆಂತಲೂ ಆತನು ನಿಶ್ಚಯಿಸಿದನು. ಅಷ್ಟರಲ್ಲಿ ಹೊಸದಾಗಿ ಬಂದಿದ್ದ ತರುಣ ಫಕೀರನು ಮತ್ತೆ ಯಾವ ಸುದ್ದಿಯನ್ನು ಹೇಳುವನೋ ಕೇಳಬೇಕೆಂದು ಆತನು ಆತುರ ಪಡುತ್ತಿದ್ದನು. ಆ ಸುದ್ದಿಯನ್ನು ಮೊದಲು ಕೇಳಿಕೊಂಡು ಆಮೇಲೆ ತಿರುವೇಂಕಟನನ್ನು ಕರೆಕಳುಹಬೇಕೆಂದು ಅಬದುಲರಹಿಮಾನನು ಯೋಚಿಸಿ ಮೊದಲು ಬಂದಿದ್ದ ಫಕೀರನನ್ನು ಕುರಿತು ''ಫಕೀರ ವೇಷಧಾರಿಯಾದ ತರುಣ ವೀರನೇ, ಮುಸಲ್ಮಾನನಾದ ನೀನು ಮುಸಲ್ಮಾನರ ಪಕ್ಷದಿಂದ ಸಹಾಯ ಮಾಡಿದ್ದಕ್ಕಾಗಿ ನಾನು ಕೃತಜ್ಞನಾಗಿರುವೆನು. ನೀನು ಹೇಳಿದ ಸುದ್ದಿಯು ನಿಜವಾಗಿದ್ದು ಅದನ್ನು ನೀನು ಮುಂಗಡವಾಗಿ ಹೇಳಿದ್ದರಿಂದ ನಾವು ಜಾಗರೂಕರಾಗಿರಲಿಕ್ಕೆ ಅನುಕೂಲವಾಯಿತು; ಅದರಂತೆ ಈಗ ನಾನು ತಕ್ಕ ವ್ಯವಸ್ಥೆಯನ್ನೂ ಮಾಡುವೆನು. ಅಳ್ಳಿದೆಯ ಕನ್ನಡಿಗರ ಸೈನ್ಯವು ಎಷ್ಟು ದೊಡ್ಡದಿದ್ದರೇನು? ನೀನು ಆಗಲೆ ಹೇಳಿದಂತೆ ನಮ್ಮ ವೀರ ಯವನ ಸೈನ್ಯದ ಮುಂದೆ ಅದು ಗಾಳಿಯ ಪಟವಾಗಿ ಹಾರಿ ಹೋಗುವದು. ಈ ಮಾತಿನ ಅನುಭವವು, ಹಿಂದಕ್ಕೆ ನಮ್ಮ ವೀರವರ ಮಲಿಕಕಾಫರರವರು ಒಂದೇ ಉಸುಲಿನಿಂದ ದಕ್ಷಿಣವನ್ನು ಗೆಲ್ಲುತ್ತ ರಾಮೇಶ್ವರಕ್ಕೆ ಹೋಗಿ ಅಲ್ಲಿ ಮಸೀದೆ ಕಟ್ಟಿಸಿದಾಗಲೇ ಬಂದಿರುವದು. ಆದರೆ ನಿನ್ನ ಜತೆಗಾರನು ಏನು ಸುದ್ದಿ ಹೇಳುವನೆಂಬದನ್ನು ಕೇಳಿಕೊಂಡರೆ ತಕ್ಕ ವ್ಯವಸ್ಥೆ ಮಾಡಲಿಕ್ಕೆ ನನಗೆ ನೆಟ್ಟಗಾಗುತ್ತದೆ''ಎಂದು ನುಡಿದು ಅಬದುಲರಹಿಮಾನನು ಒಮ್ಮೆ ಮೊದಲು ಬಂದ ಫಕೀರನ ಕಡೆಗೆ, ಒಮ್ಮೆ ಹಿಂದುಗಡೆ ಬಂದ ಫಕೀರನ ಕಡೆಗೆ ನೋಡತೊಡಗಿದನು!

ಆ ಇಬ್ಬರು ಫಕೀರರೂ ಅತ್ಯಂತ ತೇಜಸ್ವಿಗಳಾಗಿದ್ದರು. ಅವರಲ್ಲಿ ಮೊದಲಿನ ಫಕೀರನ ವಯಸ್ಸು ೨೫ ವರ್ಷಗಳ ಹೊರಗೊಳಗೆ; ಎರಡನೆಯವನು ಅವನಿಗಿಂತ ಚಿಕ್ಕವನಾಗಿ ತೋರುತ್ತಿದ್ದನು. ಅವರ ಪ್ರಸನ್ನಮುಖ ಮುದ್ರೆಯನ್ನು ನೋಡಿದರೆ ಎಂಥವರ ಮನಸ್ಸಾದರೂ ರಮಿಸದೆ ಇರುತ್ತಿದ್ದಿಲ್ಲ. ಅವರು ಫಕೀರರಿಗೆ ಒಪ್ಪುವ ಪೋಷಾಕುಗಳನ್ನು ಹಾಕಿಕೊಂಡಿದ್ದರು. ಅವರ ಮೋಹಕ ರೂಪಗಳಿಂದ ಅಬದುಲರಹಿಮಾನನ ಚಿತ್ತಹರಣವಾಗಿ ಹೋದದ್ದರಿಂದಲೂ, ಅವನು ಹಿಂದೂಜನರ ದೊಡ್ಡ ಸೈನ್ಯವು ಆಕಸ್ಮಾತ್ತಾಗಿ ತಮ್ಮ ಮೇಲೆ ಸಾಗಿಬರುತ್ತದೆಂಬ ಸುದ್ದಿಯನ್ನು ಹೇಳಿದ್ದರಿಂದಲೂ, ಇನ್ನೊಬ್ಬ ಫಕೀರನ ಮಹತ್ವದ ಸುದ್ದಿಯನ್ನು ಕೇಳಿಕೊಳ್ಳಲು ಅವನು ಆತುರಪಡುತ್ತಿದ್ದರಿಂದಲೂ, ಇಂಥ ಪ್ರಸಂಗದಲ್ಲಿ ತಿರುವೇಂಕಟನು ಸಿಟ್ಟಿನಿಂದ ಹೊರಟು ಹೋದದ್ದರಿಂದ ಅವನ ಮನಸ್ಸು ವ್ಯಗ್ರವಾದ್ದರಿಂದಲೂ ಆ ಇಬ್ಬರು ತರುಣ ಫಕೀರರ ವಿಷಯವಾಗಿ ಹೆಚ್ಚು ವಿಚಾರ ಮಾಡಲಿಕ್ಕಾಗಲಿ, ಅವರು ನಿಜವಾಗಿಯೇ ಮುಸಲ್ಮಾನರಾದರೂ ಇರುವರೆಯೇ ಎಂಬುದನ್ನು ತಿಳಿದುಕೊಳ್ಳುವದಕ್ಕಾಗಿಯಾಗಲಿ ಆ ಅಬದುಲರಹಿಮಾನನಿಗೆ ಅವಸರವೇ ದೊರೆಯಲಿಲ್ಲ. ಇದೇ ಈಗ ಬಂದಿರುವ ಈ ತರುಣ ಫಕೀರನು ಏನು ಸುದ್ದಿಯನ್ನು ಹೇಳುವನೆಂಬದನ್ನು ಕೇಳಲಿಕ್ಕೆ ಅವನು ಅತ್ಯಂತ ಉತ್ಸುಕನಾಗಿದ್ದನು. ಒಬ್ಬ ಫಕೀರನು ಹೇಳಿದ ಸುದ್ದಿಯು ನಿಜವಾದದ್ದರಿಂದ, ಈ ಫಕೀರರ

ಮಾತಿನಲ್ಲಿ ಅರ್ಥವಿರುವದೆಂಬ ನಂಬಿಗೆಯು ಅವನಿಗಾಗಿತ್ತು. ಅವನು ಮೊದಲನೆಯ ಫಕೀರನನ್ನು ಕುರಿತು —''ಮತ್ತೇನು ಸುದ್ದಿಯೆಂ''ದು ಕೇಳಬೇಕೆನ್ನುತ್ತಿರಲು, ಮೊದಲನೆಯ ಫಕೀರನು ಎರಡನೆಯವವನ್ನು ಕುರಿತು –

೧ನೆಯ ಫಕೀರ – ಯಾಕೆ? ಇಂದು ಸಾಯಂಕಾಲವಾದ ಕೂಡಲೆ ಅವರು ಹೊರಬಿದ್ದು ಬರುವದು ನಿಶ್ಚಯವಷ್ಟೆ? ಸಂಗಡ ಎಷ್ಟು ಜನರಿರಬಹುದು?

೨ನೆಯ ಫಕೀರ – ಹೌದು ನಿಶ್ಚಯವು. ೨೦೦ ಜನರ ಕಾವಲಿನಲ್ಲಿ ಅವರು ಕೋಟೆಯಿಂದ ಹೊರಬಿದ್ದು ಬರುವರು; ಆರಿಸಿದ ವೀರರೇ ಕಾವಲುಗಾರರಾಗಿದ್ದು, ಪ್ರತ್ಯಕ್ಷ ಹುಕ್ಕದೊರೆಯೇ ತನ್ನ ವೀರ ಪರಿವಾರದೊಡನೆ ಸಾಂಕೇತಿಕ ಸ್ಥಳದವರೆಗೆ ಅವರನ್ನು ಮುಟ್ಟಿಸಲು ಬರತಕ್ಕವನಿರು ತ್ತಾನಂತೆ; ಯಾಕಂದರೆ ಕೋಟೆಯೊಳಗಿನ ಸರ್ವಸ್ವವನ್ನೇ ಕೋಟೆಯೊಳಗಿಂದ ಹೊರಹೊರಡಿಸಿ ಸುರಕ್ಷಿತ ಸ್ಥಳಕ್ಕೆ ಮುಟ್ಟಿಸಬೇಕಾಗಿರುವದರಿಂದ ಹಿಂದುಗಳು ಇಷ್ಟು ಎಚ್ಚರಪಡಬೇಕಾಗಿದೆ.

ಈ ಮೇರೆಗೆ ಹೇಳಿದ್ದನ್ನು ಕೇಳಿ ಮೊದಲನೇ ಫಕೀರನು ಆಕಾಶದ ಕಡೆಗೆ ಮುಖವೆತ್ತಿ – ''ಯಾ ಅಲ್ಲಾ! ಯಾ ರಹಿಮಾನ! ನಮ್ಮ ಮೇಲೆ ಅಲ್ಲಾನ ಕೃಪೆಯು ನಿಶ್ಚಯವಾಗಿ ಇರುವದು'' ಎಂದು ನುಡಿದು ಅಬದುಲರಹಿಮಾನನ ಕಡೆಗೆ ನೋಡಿ –ಖಾವಿಂದ, ಈ ಪ್ರಸಂಗದಲ್ಲಿ ನೀವು ನನ್ನ ವಿನಂತಿಗೆ ಕಿವಿಗೊಟ್ಟು ನಾನು ಹೇಳಿದಂತೆ ಕಾರ್ಯಸಾಧಿಸಿದರೆ, ಕೋಟೆಯನ್ನು ವಶಮಾಡಿಕೊಳ್ಳುವ ನಮ್ಮ ಕಾರ್ಯವು ಅನಾಯಾಸವಾಗಿ ಆಗಿ, ನಾವು ಈ ಕಾಫರ ಹಿಂದುಗಳ ಪಾರುಪತ್ಯಕ್ಕಾಗಿ ಇಷ್ಟುದಿನ ಕಷ್ಟಪಟ್ಟು ಯತ್ನಿಸಿದ್ದು ಸಫಲವಾಗುವದು; ಯಾಕಂದರೆ, ಕೋಟೆಯ ಅಧಿದೈವತದಂತೆ ಇರುವ ಪದ್ಮಿನಿಯೂ, ಕೋಟೆಯೊಳಗಿನ ಸಕಲೈಶ್ವರ್ಯವೂ ಹಿಂದುಗಳ ಎಲ್ಲ ಯತ್ನದ ಮೂಲಾಧಾರವಾದ ಬುಕ್ಕದೊರೆಯೂ ಒಮ್ಮೆಲೆ ನಮ್ಮ ಕೈಸೇರುವರು! ಖಾವಿಂದ, ಎಲ್ಲವನ್ನು ಸ್ವಲ್ಪದರಲ್ಲಿ ಸ್ಪಷ್ಟವಾಗಿ ಹೇಳುವೆನು ಕೇಳಬೇಕು. ತಮ್ಮ ಪ್ರಚಂಡ ಸೈನ್ಯವು ಹೀಗೆ ಬಿಗಿಯಾಗಿ ಮುತ್ತಿಗೆ ಹಾಕಿರುವದನ್ನು ನೋಡಿ ಕಾಫರ ಹಿಂದುಗಳು ನಿಶ್ಚಯವಾಗಿ ಅಂಜಿಸುತ್ತಾರೆ. ಈ ಪ್ರಸಂಗದಲ್ಲಿ ತಾವು ಸೋಲುವದು ನಿಶ್ಚಯ ವೆಂದು ತಿಳಿದು ಅವರು ಕೋಟೆಯೊಳಗಿನ ಸರ್ವಸಂಪತ್ತನ್ನೂ, ಪದ್ಮಿನಿಯೇ ಮೊದಲಾದ ಅಂತಃಪುರದ ಸ್ತ್ರೀಯರನ್ನೂ ಗುಪ್ತರೀತಿಯಿಂದ ದೇವಿಯ ಕೊಳ್ಳಕ್ಕೇ ಸಾಗಿಸತಕ್ಕವರಿದ್ದಾರೆ, ದೇವಿಯ ಕೊಳ್ಳವು ಆ ಕಾಫರರ ಗೂಢಸೈನವು. ಅವರ ಗುಪ್ತಸೈನ್ಯವು ಅಲ್ಲಿಯೇ ತಯಾರಾದದ್ದಿರುವದು. ಹಿಂದಿನಿಂದ ಅದನ್ನೆಲ್ಲ ನಾನು ತಮಗೆ ತೋರಿಸಿ, ತಮ್ಮ ಕೈಯಿಂದ ಕಾಫರರ ನಿಃಪಾತ ಮಾಡಿಸಿ, ಇಸ್ಲಾಮಿ ಧರ್ಮದ ಪ್ರಸಾರ ಮಾಡಿದ ಸರ್ವಶ್ರೇಯಸ್ಸನ್ನು ತಮ್ಮ ಪದರಿಗೆ ಕಟ್ಟುವೆನು. ಇಷ್ಟು ಮಾಡದಿದ್ದರೆ ಈ ನಾಲ್ಕು ವರ್ಷಗಳಿಂದ ನಾನು ಗುಪ್ತರೀತಿ ಯಿಂದ ಹಿಂದುವಿನ ವೇಷದಿಂದ ಆ ಕಾಫರರ ಹೊಟ್ಟೆಯಲ್ಲಿ ಹೊಕ್ಕು ಬೆನ್ನಲ್ಲಿ ಬಿರಿಯುವದಕ್ಕಾಗಿ ಅವರ ಆಜ್ಞಾಧಾರಕನಾಗಿಯೂ, ಹಿತಕರ್ತನಾಗಿಯೂ ಆಚರಿಸಿದ್ದರ ಪ್ರಯೋಜನವೇನು? ತಮಗೆ ಗೆಲವು ಬರುವದು ನಿಶ್ಚಯವಿಲ್ಲದ್ದರಿಂದಲೇ ಶತ್ರುಗಳು

ಅಲ್ಲಿಂದಲ್ಲೇ ತರುಬಿನಿಂತು, ಕೋಟೆಯ ಸರ್ವಸ್ವವು ಸುರಕ್ಷಿತಸ್ಥಳಕ್ಕೆ ಮುಟ್ಟಿದ ಕೂಡಲೆ ಹುಕ್ಕದೊರೆಯು ತನ್ನ ವೀರಪರಿವಾರದಿಂದ ಕೋಟೆಯೊಳಗಿನಿಂದ, ಹಾಗು ಬುಕ್ಕದೊರೆಯು ದೇವಿಯಕೊಳ್ಳದೊಳಗಿನ ತನ್ನ ವೀರಪರಿವಾರದಿಂದ ಕೋಟೆಯ ಹೊರಗಿನಿಂದ ನಮ್ಮೊಡನೆ ನಿಕರದಿಂದ ಕಾದಲು ನಿಶ್ಚಯಿಸಿರುವರು ! ಈ ಪ್ರಸಂಗದಲ್ಲಿ ಹಿಂದೂ ಜನರ ಶೌರ್ಯವು ಚೆನ್ನಾಗಿ ಪ್ರಕಟವಾಗುವದೆಂಬದನ್ನು ತಾವು ಮರೆಯಲಾಗದು. ಕಾದುವಾಗ ತಮಗೆ ಕಾಲದೊಡರಾಗಬಾರದೆಂತಲೇ ಹೇಗೆ ಕೋಟೆಯ ಸರ್ವಸ್ವವನ್ನೂ ಕಾಫರರು ಹೊರಗೆ ಹಾಕುತ್ತಿರುವರು. ತಿರುವೇಂಕಟನು ಹಿಂದುವಾಗಿದ್ದರೂ, ಅವನು ಹಿಂದುಗಳನ್ನು ಮನಃಪೂರ್ವಕವಾಗಿ ದ್ವೇಷಿಸುವವನಾಗಿರುವನು. ಪದ್ಮಿನಿಯನ್ನು ಲಗ್ನವಾಗಿ ಆನೆಗುಂದಿಯ ಸಂಸ್ಥಾನವನ್ನು ಸಂಪಾದಿಸುವ ಇಚ್ಛೆಯು ಅವನಿಗೆ ವಿಶೇಷವಾಗಿರುವದು; ಕದಾಚಿತ್ ನಮಗೆ ಯುದ್ಧದಲ್ಲಿ ಸೋಲುಬಂದರೆ ತಿರುವೇಂಕಟನು ತಾನು ಮುಂದಾಗಿ ಕಾಫರರನ್ನು ಹಣಿದು ಬಾದಶಹರ ಕಾರ್ಯಮಾಡಿದ ಸಂಪೂರ್ಣ ಯಶಸ್ಸಿಗೆ ಪಾತ್ರನಾಗುವನಲ್ಲದೆ, ಅವನು ಹಿಂದುಗಳನ್ನು ಕೂಡುವ ಸಂಭವವು ಸರ್ವಥಾ ಇರುವದಿಲ್ಲ; ಆದ್ದರಿಂದ ಖಾವಿಂದ, ತಾವು ಅನ್ಯರಿಗೆ ಶ್ರೇಯಸ್ಸು ಕೊಡುವದೇಕೆ? ಅದರಲ್ಲಿ ಉದ್ಧಟತನದಿಂದ ನಿಮ್ಮನ್ನು ಲೆಕ್ಕಿಸದೆ ನಿಮ್ಮ ಪರಾಭವವಾಗುವ ಹಾದಿಯನ್ನು ನೋಡುತ್ತ ನಿಂತುಕೊಳ್ಳುವ ಕೃತಘ್ನ ತಿರುವೇಂಕಟನಿಗಂತು ತಾವು ಸರ್ವಥಾ ಶ್ರೇಯಸ್ಸನ್ನು ಕೊಡಲಾಗದು. ಈ ಪ್ರಸಂಗದಲ್ಲಿ ಯುಕ್ತಿಯಿಂದ ಕಾರ್ಯಸಾಧಿಸಿದರೆ ಸುಲಭವಾಗಿ ನಮಗೆ ಜಯವು ಪ್ರಾಪ್ತವಾಗಿ ತಿರುವೇಂಕಟನ ಮೂಗು ಕೊಯ್ದು ಅವನ ಕೈಯಲ್ಲಿ ಕನ್ನಡಿ ಕೊಟ್ಟಹಾಗಾಗುವದಲ್ಲದೆ, ನಾಯಬರಿಂದ ಆ ರಾಜದ್ರೋಹಿಯ ಶಾಸನ ಮಾಡಿಸಲಿಕ್ಕೂ ಅನುಕೂಲವಾಗುವದು. ಇದಕ್ಕಾಗಿ ನೀವು ಹೆಚ್ಚು ಆಯಾಸಪಡುವ ಕಾರಣವಿಲ್ಲ; ಹೆಚ್ಚು ವೆಚ್ಚಮಾಡುವ ಕಾರಣವು ಇಲ್ಲ. ಹೊತ್ತು ಮುಣುಗುವ ಸಂಧಿಯಲ್ಲಿ ನಿಮ್ಮ ಅತ್ಯಂತ ವಿಶ್ವಾಸದ ಇಬ್ಬರು ಮನುಷ್ಯರನ್ನು ನಮ್ಮ ಸಂಗಡ ಕಳಿಸಿರಿ. ಅವರನ್ನು ನಾವು ಈ ಕೋಟೆಯ ಪಶ್ಚಿಮ ಭಾಗದಲ್ಲಿ ಒಂದು ಕೂಗಳತೆಯ ಮೇಲೆ ಇರುವ ಗುಪ್ತದ್ವಾರದ ಬಳಿಗೆ ಕರೆದುಕೊಂಡು ಹೋಗುತ್ತೇನೆ. ಕತ್ತಲಾಗುತ್ತಲೇ ನಾನು ಹೇಳಿದಂತೆ ಆ ದ್ವಾರದಿಂದ ಕೋಟೆಯೊಳಗಿನ ಸರ್ವ ಸಂಪತ್ತೂ, ಸಕಲ ಸ್ತ್ರೀಯರೂ ವೀರಪರಿವಾರದ ಕಾವಲಿನಲ್ಲಿ ಹೊರಬೀಳುವರು. ಕೂಡಲೆ ಒಬ್ಬನು ನಮ್ಮ ಬಳಿಯಲ್ಲಿದ್ದು, ಇನ್ನೊಬ್ಬನು ನಿಮಗೆ ಸುದ್ದಿಯನ್ನು ಮುಟ್ಟಿಸಲು, ನೀವು ೨೫೦ ಜನ ವೀರರನ್ನು ಕಳಿಸಿರಿ; ಆ ಜನರ ಮೇಲೆ ಅಧಿಕಾರಿಯು ಯುದ್ಧದಲ್ಲಿ ಚೆನ್ನಾಗಿ ನುರಿತ ಒಬ್ಬ ವೀರನು ಇರತಕ್ಕದ್ದು. ಇನ್ನು ಪದ್ಮಿನಿಯಂಥ ಲೋಕೋತ್ತರ ಸುಂದರಿಯನ್ನು ನೋಡುವ ಇಚ್ಛೆಯು ನಿಮಗಿದ್ದರೆ ಸ್ವತಃ ನೀವೇ ಬರಬಹುದು.

ಈ ಮೇರೆಗೆ ನುಡಿದು ಆ ಒಂದನೆಯ ಫಕೀರನು ತನ್ನ ಸಂಗಡಿಗನಾದ ೨ನೆಯ ಫಕೀರನ ಕಡೆಗೆ ತಿರುಗಿ ಆತನನ್ನು ಕುರಿತು – ‘‘ಎಲ್ಲಿ? ದೇವೀಕೊಳ್ಳದ ಮುಖ್ಯಸ್ಥನ ಹೆಸರಿನಿಂದ ಹುಕ್ಕನು ಬರೆದಿರುವ ಪತ್ರವೆಲ್ಲಿ? ಅದು ನಿನ್ನ ಬಳಿಯಲ್ಲಿರುವದಷ್ಟೆ? ಅದನ್ನು ಖಾನಸಾಹೇಬರ ಕೈಯಲ್ಲಿ ಕೊಡು, ಎಂದು ಹೇಳಿ ಆ ಪತ್ರವನ್ನು ಅಬದುಲರಹಿಮಾನನ ಕೈಯಲ್ಲಿ ಕೊಡಕೊಡುತ್ತ

– ಖಾನಸಾಹೇಬ, ಈ ಪತ್ರವನ್ನು ಶತ್ರುಗಳು ಒಬ್ಬ ಜೋಗೇರವನ ಮುಖಾಂತರವಾಗಿ ದೇವೀಕೊಳ್ಳಕ್ಕೆ ಮುಟ್ಟಿಸುತ್ತಿದ್ದರು; ಆದರೆ ನಮ್ಮ ಈ ಚಾಣಾಕ್ಷ ತರುಣ ದೋಸ್ತನು, ಕೋಟೆಯ ಕಡೆಯಿಂದ ಹೋಗುತ್ತಲಿರುವ ಇವನು ನಿಜವಾದ ಜೋಗಿಯಾಗಿರದೆ, ವೇಷಧಾರಿಯಿರುವನೆಂದು ತಿಳಿದು ಕೂಡಲೆ ಅವನ ಮೇಲೆ ದುಮುಕಿ ಖಡ್ಗದಿಂದ ಅವನನ್ನು ತುಂಡರಿಸಿದನು, ಆಗ ಅವನ ಬಳಿಯಲ್ಲಿ ಈ ಪತ್ರವು ದೊರೆಯಿತು, ಎಂದು ಹೇಳಿ ಪತ್ರವನ್ನು ಖಾನನ ಮುಂದಿಟ್ಟನು. ಆ ಇಬ್ಬರು ಫಕೀರರು ತಂದ ಸುದ್ದಿಗಳನ್ನು ಕೇಳಿ ಬೆರಗಾಗಿ ವಿಚಾರಮಾಡುತ್ತ ಅಬದುಲರಹಿಮಾನನು ಪತ್ರವನ್ನು ಓದಹೋದನು; ಆದರೆ ಅದು ಕನ್ನಡದಲ್ಲಿ ಬರೆದದ್ದರಿಂದ ಖಾನನು ತನ್ನ ದುಭಾಷಿಯನ್ನು ಕರೆಸಿ ಓದಿಸಲು, ಆ ತರುಣ ಫಕೀರರ ಮೇಲಿನ ಖಾನನ ವಿಶ್ವಾಸವನ್ನು ಆ ಪತ್ರವು ನಿಶ್ಚಯವಾಗಿ ಹೆಚ್ಚಿಸಿತು! ಆಗ ಖಾನನು ಕೌತುಕದಿಂದ ಒಮ್ಮೆ ಮೊದಲನೆಯ ಫಕೀರನನ್ನು, ಒಮ್ಮೆ ಎರಡನೆಯ ಫಕೀರನನ್ನು ನೋಡಿ ಅವರಿಬ್ಬರನ್ನು ಕುರಿತು – " ದೋಸ್ತ ! ನೀವು ಒಳ್ಳೆಯ ಹೊತ್ತಿಗೆ ನನಗೆ ಮಾಡಿದ ಈ ಸಹಾಯವನ್ನು ನಾನು ಎಂದಿಗೂ ಮರೆಯಲಿಕ್ಕಿಲ್ಲ; ಆದರೆ ನೀವು ಯಾರು? ನೀವು ಮುಸಲ್ಮಾನರಾಗುವ ಕಾರಣವೇನು? ಫಕೀರರಿಗೆ ನಮ್ಮ ದಂಡಿನಲ್ಲಿ ಎಲ್ಲಿ ಹೋದರೂ ಸಾಧಾರಣವಾಗಿ ಪ್ರತಿಬಂಧವಿಲ್ಲದ್ದರಿಂದ ನೀವು ಅನಾಯಸವಾಗಿ ನನ್ನ ಬಳಿಗೆ ಬಂದಿರುವದರಲ್ಲಿ ಆಶ್ಚರ್ಯವಿಲ್ಲ; ಆದರೆ ಇಷ್ಟು ತಾರುಣ್ಯದಲ್ಲಿ ಫಕೀರರಾಗಿರುವದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಗಿರುತ್ತದೆ! ನೀವು ಈ ಪತ್ರ ಒಯ್ಯುತ್ತಿರುವ ಜೋಗಿಯನ್ನು ತುಂಡರಿಸಿದ್ದರ ಮೇಲಿಂದ ನೀವು ಶೂರರೂ ಇರುವಂತೆ ತೋರುತ್ತದೆ; ಆದ್ದರಿಂದ ನಿಮ್ಮ ವೃತ್ತಾಂತವನ್ನು ನನಗೆ ಹೇಳಿ ನನ್ನ ಕುತೂಹಲವನ್ನಷ್ಟು ಪೂರ್ಣಮಾಡಿರಿ" ಅನ್ನಲು, ಆ ಮೊದಲಿನ ಫಕೀರನು ಖಾನನನ್ನು ಕುರಿತು ಗಾಂಭೀರ್ಯದಿಂದ – " ಖಾವಿಂದ, ಈಗ ನಮ್ಮ ವೃತ್ತಾಂತವನ್ನು ಕೇಳುವದಕ್ಕಿಂತ ನಿಮ್ಮ ಮನಸ್ಸಿನಂತೆ ನಿಮ್ಮ ಕಾರ್ಯವಾದ ಬಳಿಕ ನಮ್ಮ ವೃತ್ತಾಂತವನ್ನು ಕೇಳಿಕೊಳ್ಳುವದರಲ್ಲಿ ಬಹಳ ಲಾಭವುಂಟು; ನಮ್ಮ ವೃತ್ತಾಂತವು ವಿಲಕ್ಷಣ ಚಮತ್ಕಾರವನ್ನುಂಟು ಮಾಡುವದಿರುತ್ತದಲ್ಲದೆ, ಅದನ್ನು ಕೇಳಿ ನೀವು ನಮ್ಮ ಮೇಲೆ ಸಂಪೂರ್ಣ ವಿಶ್ವಾಸವಿಟ್ಟು, ನಾವು ಹೇಳಿದಹಾಗೆ ಕೇಳುವ ನೆವದಿಂದ ಕೇವಲ ನಮ್ಮ ಅಧೀನವಾಗುವ ಸಂಭವವಿದೆ; ಆದರೆ ಹೀಗೆ ನೀವು ಹೊಸಬರಾದ ನಮ್ಮ ಮೇಲೆ ಅಷ್ಟು ವಿಶ್ವಾಸವಿಟ್ಟು ನಡೆಯುವದು ಹಿತಕರವಲ್ಲ; ಆದ್ದರಿಂದ ನಾವೂ ನೀವೂ ಮೊದಲು ಪವಿತ್ರ ಧರ್ಮಪ್ರಸಾರ ಮಾಡುವ ಅಲ್ಲಾನ ಕಾರ್ಯವನ್ನು ಮಾಡೋಣ; ಆಮೇಲೆ ನಮ್ಮ ವೃತ್ತಾಂತವನ್ನು ನಾವು ಸಂತೋಷದಿಂದ ನಿಮಗೆ ಹೇಳುವೆವು. ಖಾವಿಂದ, ಈ ಕಾರ್ಯದಲ್ಲಿ ನಮ್ಮಿಂದ ಇನ್ನೂ ಬಹಳ ಸಹಾಯವಾಗ ತಕ್ಕದ್ದಿರುವದು. ಕಾರ್ಯವಾದ ಬಳಿಕ ನಿಮ್ಮ ಸಹಾಯದಿಂದ ನಮ್ಮ ಶತ್ರುಗಳ ಸೇಡು ತೀರಿಸಿಕೊಂಡು ನಾವು ಕೃತಕೃತ್ಯರಾಗಬೇಕಾಗಿರುವದು; ಆದ್ದರಿಂದ ಸದ್ಯಕ್ಕೆ ನಮ್ಮ ವೃತ್ತಾಂತವನ್ನು ನೀವು ಕೇಳುವ ಉಸಾಬರಿಗೆ ಹೋಗದೆ, ನಾವು ಫಕೀರರಿರಲಿ – ಸರದಾರರಿರಲಿ, ಹಿಂದುಗಳಿರಲಿ –ಮುಸಲ್ಮಾನರಿರಲಿ ಅದನ್ನಾವದನ್ನೂ ಮನಸ್ಸಿನಲ್ಲಿ ತಾರದೆ ನಾವು ಹೇಳುವ ಮಾತಿನ ಸತ್ಯತೆಯನ್ನು ನೀವು ಮೊದಲು ಮನಗಂಡು ಆಮೇಲೆ ಅದರಂತೆ ಆಚರಿಸಿರಿ!

ಖಾವಿಂದ, ತಿರುಗಿ ಕೇಳಿದರೆ ನೀವು ಕೇವಲ ಹೊಸಬರಾದ ನಮ್ಮ ಮೇಲೆ ಇಷ್ಟು ವಿಶ್ವಾಸವಿಡುವದು ಒಳಿತಲ್ಲ; ಆದ್ದರಿಂದ ಯಾರೋ ಇವರು ನಮ್ಮಲ್ಲಿ ತಮ್ಮ ಕಾರ್ಯ ಸಾಧಿಸಿಕೊಳ್ಳಲಿಕ್ಕೆ ಬಂದಿರುವರೆಂದು ತಿಳಿದೇ ಕೇವಲ ಅವಿಶ್ವಾಸದಿಂದ ನಮ್ಮನ್ನು ನಡಿಸಿಕೊಂಡು ನಮ್ಮ ಮಾತಿನಂತೆ ಕಾರ್ಯ ಮಾಡಿರಿ; ಇಲ್ಲದ ವಿಶ್ವಾಸವನ್ನು ತೋರಿಸಿ ನಿಮ್ಮ ಘಾತಮಾಡುವ ಮನಸ್ಸು ನಮಗಿರುವದಿಲ್ಲ; ಆದರೆ ಅಲ್ಲಾನನ್ನು ಸ್ಮರಿಸಿ ಹೇಳುತ್ತೇವೆ, ನಾವು ಹೇಳುವ ಸುದ್ದಿಯು ಒಂದೂ ಅಸತ್ಯವಿರಲಾರದು. ಮುಖ್ಯ ಮಾತು ನಿಮಗೆ ಜಯವಾಗ ಬೇಕೆಂದು ನಾವು ತುಂಬಾ ಇಚ್ಛಿಸುತ್ತೇವೆ; ಯಾಕಂದರೆ ಅದರಲ್ಲಿಯೇ ನಮ್ಮ ಹಿತವಿದೆ!''

ಈ ಮೇರೆಗೆ ಫಕೀರನಾಡಿದ ಮಾತುಗಳನ್ನು ಕೇಳಿ ಅಬದುಲರಹಿಮಾನನು ಬಹಳ ವಿಚಾರದಲ್ಲಿ ಬಿದ್ದದ್ದಲ್ಲದೆ, ಫಕೀರನ ಈ ಸ್ಪಷ್ಟ ಮಾತಿಗಾಗಿ ಅವನಿಗೆ ಆಶ್ಚರ್ಯವೂ ಆಯಿತು. ಆತನು ಮನಸ್ಸಿನಲ್ಲಿ – ''ಎಂಥ ವಿಲಕ್ಷಣ ಜನರಿವರು! ಇವರ ಈ ಚಿಕ್ಕವಯಸ್ಸು, ಇವರ ಈ ತೇಜಸ್ಸು, ಮಾತಿನಲ್ಲಿಯ ಇವರ ಈ ನಿರ್ಭಯತೆ ಇವನ್ನು ನೋಡಿದರೆ ನನ್ನ ಮನಸ್ಸು ಗುಂಗಾಗಿಹೋಗುತ್ತದೆ; ಆದರೆ ಹ್ಯಾಗೇ ಇರಲಿ, ಈಗ ಧೀರ್ಘಕಾಲ ವಿಚಾರಮಾಡುತ್ತ ಕುಳಿತುಕೊಳ್ಳಲಿಕ್ಕೆ ಸಮಯವಿಲ್ಲ. ಹ್ಯಾಗಿದ್ದರೂ ಶತ್ರುಗಳು ನಮ್ಮ ಮೇಲೆ ದಂಡೆತ್ತಿ ಬರುವದೊಂದು ಮಾತ್ರ ನಿಜವಾಗಿದೆ; ಇಂದು ಸಂಜೆಯ ಮುಂದೆ ಕೋಟೆಯೊಳಗಿಂದ ಗುಪ್ತರೀತಿಯಿಂದ ದೇವಿಯಕೊಳ್ಳಕ್ಕೆ ಸಾಗಿಹೋಗುವ ಜನಾನಖಾನೆಯನ್ನೂ, ಸಂಪತ್ತನ್ನೂ ಕಣ್ಣುಮುಟ್ಟ ನೋಡಿ ಈ ಫಕೀರರ ಮಾತಿನ ಸತ್ಯೆಯನ್ನು ಮನಗಾಣೋಣ'' ಎಂದು ಯೋಚಿಸಿ ಫಕೀರನನ್ನು ಕುರಿತು – ''ಪ್ರಿಯದೋಸ್ತ, ನಿಮ್ಮ ಮಾತಿನಂತೆಯೇ ಆಗಲಿ. ನೀವು ಹೇಳಿದ ಕೂಡಲೆ ನಾನೇ ಸ್ವತಃ ಅಲ್ಪ ಸೈನ್ಯವನ್ನು ತಕ್ಕೊಂಡು ಪದ್ಮಿನಿಯೇ ಮೊದಲಾದವರನ್ನು ಸೆರೆಹಿಡಿಯಲಿಕ್ಕೆ ಬರುತ್ತೇನೆ; ಈಗ ನಮ್ಮ ಈ ವಿಶ್ವಾಸದ ಸರದಾರರಿಬ್ಬರನ್ನು ಕರೆದೊಯ್ದು ಅವರಲ್ಲಿ ಒಬ್ಬನ ಮುಖಾಂತರ ಜನಾನಖಾನೆಯು ಗುಪ್ತದ್ವಾರದಿಂದ ಹೊರಬಿದ್ದ ಸುದ್ದಿಯನ್ನು ನನಗೆ ತಿಳಿಸಿರಿ; ಆದರೆ ತರುಣ ಫಕೀರರೇ, ಯಾರ ಸಂಗಡ ನೀವು ವ್ಯವಹಾರ ನಡಿಸುತ್ತಿರು ವಿರೆಂಬದರ ಎಚ್ಚರವಿರಲಿ, ನಿಮ್ಮಲ್ಲಿ ಏನಾದರೂ ತಗಲುತಾಟೆ ಕಂಡುಬಂದರೆ ಇಗೋ ಈ ಖಡ್ಗದಿಂದ ನಿಮ್ಮನ್ನು ನುಚ್ಚು ನುಚ್ಚಾಗಿ ಕಡಿದುಹಾಕೇನು!'' ಎಂದು ಖಾನನು ಖಡ್ಗವನ್ನು ಹಿರಿದನು! ಆಗ ಅವರಿಬ್ಬರು ಫಕೀರರು ಗಾಂಭೀರ್ಯದಿಂದ ನಿಂತಿರಲು ಮೊದಲನೆಯ ಫಕೀರನು –''ಅವಶ್ಯ, ಅವಶ್ಯವಾಗಿ ಕಡಿದು ಹಾಕಿರಿ; ಖಾವಿಂದ, ನಮಗೇನು ಈ ಮಾತು ಗೊತ್ತಿಲ್ಲವೆ? ನಿಮ್ಮ ಘನತರವಾದ ಯೋಗ್ಯತೆಯನ್ನೂ, ಹಿಂದೂ ಜನರನ್ನು ನುಂಗಿ ನೀರು ಕುಡಿದು ಇನ್ನೂ ಉಳಿಯುವ ಹಾಗಿರುವ ನಿಮ್ಮ ಈ ಪ್ರಚಂಡವಾದ ಸೇನಾಬಲವನ್ನೂ ನಾವು ಅರಿತಿಲ್ಲವೇ? ನಮ್ಮ ಮಾತಿನಲ್ಲಿ ಹೊಲಸಿದ್ದರಷ್ಟೇ ನಿಮ್ಮ ಮಾತಿಗೆ ನಾವು ಹೆದರುವದು! ಆದರೆ ಬೇಡಿಕೊಳ್ಳುವದಿಷ್ಟೇ; ನಾವು ಹೇಳಿದ ಮಾತು ನಿಮಗೆ ನಂಬಿಗೆಯಾದರೂ, ನೀವು ನಮ್ಮ ಮೇಲಿನ ಅವಿಶ್ವಾಸದಿಂದ ಆದರಂತೆ ನಡೆಯದಿದ್ದರೆ ಅದರಿಂದ ನಿಮ್ಮ ಹಾನಿಯು ನಿಶ್ಚಯವಾಗಿ ಆಗುವದೆಂಬದನ್ನು ನೀವು ಚೆನ್ನಾಗಿ ಲಕ್ಷದಲ್ಲಿಡಿರಿ. ನಾವೇನು, ಸದ್ಯಕ್ಕೆ ಯಾವದೋ ಒಂದು ಕಾರಣದಿಂದ ಸರ್ವಸಂಗಪರಿತ್ಯಾಗವನ್ನೇ ಮಾಡಿರುವದರಿಂದ ನಾವು

ನಿರಿಚ್ಛರಾಗಿರುವೆವು. ನಮಗೆ ಇಂದು ಮರಣ ಬಂದರೂ ಅಷ್ಟೆಯೆ, ನಾಳೆ ಮರಣ ಬಂದರೂ ಅಷ್ಟೆಯೇ! ಆದರೆ ನಿಮ್ಮ ಮಾತು ಮಾತ್ರಹಾಗಲ್ಲ, ನೀವು ಕಂಪಲಿಯ ಕೋಟೆಯನ್ನು ವಶಮಾಡಿಕೊಂಡು ಹೋಗದಿದ್ದರೆ ನಾಯಬರ ಮುಂದೆ ನಿಮ್ಮ ಪತ್ತು ಉಳಿಯದು; ಅಂದಬಳಿಕ ನಿಮ್ಮ ಮನಸ್ಸಿನ ದೊಡ್ಡ ದೊಡ್ಡ ಬಯಕೆಗಳು ಹ್ಯಾಗೆ ಪೂರ್ಣವಾದಾವು? ಆದ್ದರಿಂದ ನಮ್ಮ ಮಾತಿನ ನಂಬಿಗೆಯಾಗುವವರೆಗೆ ಅವುಗಳ ಮೇಲೆ ವಿಶ್ವಾಸವಿಡಬೇಡಿರಿ; ಮಾತ್ರ ಅವುಗಳ ನಂಬಿಗೆಯಾದಬಳಿಕ ಅವುಗಳಂತೆ ನಡೆಯದೆ ಇರಬೇಡಿರಿ, ಇಷ್ಟೇ ನನ್ನ ಪ್ರಾರ್ಥನೆಯು'' ಎಂದು ನುಡಿದು ಎರಡನೆಯ ಫಕೀರನು ಕಡೆಗೆ ತಿರುಗಿ–'' ಯಾಕೆ ದೋಸ್ತ ಹೀಗೆಯೇ ಅಲ್ಲವೇ'' ಎಂದು ಕೇಳಲು, ಆ ಎರಡನೆಯ ಫಕೀರನು ಗಾಂಭೀರ್ಯದಿಂದ– ''ಹಾಗಲ್ಲದೇನು?'' ಎಂದಿಷ್ಟೇ ಉತ್ತರಕೊಟ್ಟು ಸುಮ್ಮನಾದನು!

## ಸತ್ವಪ್ರಭಾವ

ಈ ಮೇರೆಗೆ ದಿಟ್ಟ ಫಕೀರನು ಸ್ಪಷ್ಟವಾಗಿ ಮಾತಾಡುವಾಗ ಅಬದುಲರಹಿಮಾನನು ಆಶ್ಚರ್ಯದಿಂದ ಫಕೀರನ ಕಡೆಗೆ ನೋಡುತ್ತಿದ್ದನು. ಆಗ ಆ ಖಾನನ ಮನಸ್ಸಿನಲ್ಲಿ ಏನೋ ಸಂಶಯ ಬಂದು ಅವನು ಫಕೀರನನ್ನು ಕುರಿತು ಏನೇನೋ ಪ್ರಶ್ನೆ ಮಾಡಬೇಕೆಂದು ಮಾಡಿದನು; ಆದರೆ ಇವರಿಂದ ಈಗ ಸ್ಪಷ್ಟ ಉತ್ತರ ದೊರೆಯುವ ಸಂಭವವಿಲ್ಲದ್ದರಿಂದ ಸುಮ್ಮನೆ ಪ್ರಶ್ನೆಮಾಡಿ ಹೊತ್ತುಗಳೆಯುವದು ತಕ್ಕದ್ದಲ್ಲವೆಂದು ತಿಳಿದು, ಅವರ ಮೇಲೆ ಬಲವಾದ ಕಾವಲನ್ನಿಡುವದನ್ನು ನಿಶ್ಚಯಿಸಿ, ಅವರನ್ನು ಕುರಿತು–''ಅಪರಿಚಿತರಾದ ತರುಣ ಫಕೀರರೇ, ನೀವು ಸ್ಪಷ್ಟ ಮಾತಾಡುವದರಲ್ಲಿ ದೋಷಕ್ಕಿಂತ ಗುಣವೇ ಹೆಚ್ಚಿರುವದು; ಆದರೆ ನಿಮ್ಮ ಪೂರ್ವಪರ ವೃತ್ತಾಂತವು ತಿಳಿಯದ್ದರಿಂದ ನನಗೆ ನಿಮ್ಮ ಸಂಶಯ ಬರುತ್ತದೆ. ಕದಾಚಿತ್ ನೀವು ಶತ್ರುಪಕ್ಷದವರಿದ್ದರೂ ಇರಬಹುದು. ಹ್ಯಾಗೇ ಇರಲಿ, ನೀವು ಹೇಳಿದಂತೆ ನಿಮ್ಮ ಮಾತಿನ ನಂಬಿಗೆ ಮಾಡಿಕೊಂಡು ನಮಗೆ ಹಿತವಾಗಿ ತೋರಿದರೆ ಅದರಂತೆ ನಡೆಯಲಿಕ್ಕೆ ಅಡ್ಡಿಯಿಲ್ಲ; ಆದರೆ, ನೀವು ಮಾತ್ರ ನಮ್ಮ ವಿಶ್ವಾಸಕ್ಕೆ ಪಾತ್ರರಾಗುವವರೆಗೆ ನಮ್ಮ ಕಣ್ಣುಮರೆಯಾಗದೆ ನಮ್ಮ ಬಳಿಯಲ್ಲಿಯೇ ಇರಬೇಕಾಗುವದು'' ಎಂದು ಹೇಳಿದನು. ಅದಕ್ಕೆ ಮೊದಲನೆಯ ಫಕೀರನು ತತ್‌ಕ್ಷಣ– ''ಅಲಬತ, ಅಲಬತ! ಬಹು ಯೋಗ್ಯವಿಚಾರವು. ರಾಜಕಾರಣದ ಮರ್ಮವನ್ನು ನಾವು ಅಷ್ಟು ಬಲ್ಲವರಲ್ಲದಿದ್ದರೂ ಈಗಿನ ಸೂಕ್ಷ್ಮ ಪ್ರಸಂಗದಲ್ಲಿ ನೀವು ಹೀಗೆ ಹೇಳುವದು ನ್ಯಾಯವೇ ಸರಿ'' ಎಂದು ನುಡಿದು ಎರಡನಯೆ ಫಕೀರನ ಕಡೆಗೆ ನೋಡಲು ಅವನು– ''ನ್ಯಾಯವಲ್ಲದೆ ಮತ್ತೇನು? ಅವರ ನಂಬಿಗೆಯಾಗುವವರೆಗೆ ನಮ್ಮನ್ನು ಸೆರೆಯಲ್ಲಿಟ್ಟರೂ ಬಾಧೆಯಿಲ್ಲ, ನಾವು ಸ್ವಕೀಯರಿಗೆ ಯಶಸ್ಸು ದೊರೆಯಬೇಕೆಂದು ನಿಸ್ಪೃಹರಾಗಿ ಸಹಾಯ ಮಾಡತಕ್ಕವರು. ನಮ್ಮ ಸಹಾಯವನ್ನು ನಂಬಿಗೆಯಿಂದ ಪಡೆಯುವದು, ಅಥವಾ

ಅಪನಂಬಿಗೆಯಿಂದ ಪಡೆಯದಿರುವದು ಖಾನಸಾಹೇಬರ ಇಚ್ಛೆಯು. ಸದ್ಯಕ್ಕೆ ನಾವು ಹೇಳಿದ ಸುದ್ದಿಯ ನಿಜತ್ವವನ್ನಂತು ಖಾನಸಾಹೇಬರು ಮೊದಲು ಕಂಡುಕೊಳ್ಳಲಿ. ಎಷ್ಟು ಬೇಗನೆ ನಡೆದರೂ ಆ ಗುಪ್ತಸ್ಥಳಕ್ಕೆ ನಡೆದುಹೋಗಲಿಕ್ಕೆ ಅರ್ಧತಾಸಾದರೂ ಬೇಕಾಗಬಹುದು ಎಂದು ಹೇಳಲು, ಆ ಎರಡನೆಯ ಫಕೀರನೊಡನೆ ಹತ್ತು ಜನ ಶೂರ ಸಿಪಾಯಿಗಳನ್ನು ಸಶಸ್ತ್ರವಾಗಿ ಕಳಿಸಿದ್ದಲ್ಲದೆ, ನಮ್ಮವರಿಂದ ಸೂಚನೆಯಾದಕೂಡಲೆ ರಾಣೀವಾಸದ ಆ ಜನರನ್ನು ಮುತ್ತಿ ನಿಮ್ಮೊಳಗಿನ ಒಬ್ಬನು ನಮಗೆ ತತ್‌ಕ್ಷಣ ಸುದ್ದಿಯನ್ನು ತಿಳಿಸಬೇಕೆಂದು ಹೇಳಿ, ಖಾನನು ಮತ್ತೆ ಇನ್ನೂರಾಐವತ್ತು ಜನ ಮುಸಲ್ಮಾನ ರಾವುತರನ್ನು ಕಳಿಸಿ ಅರ್ಧ ಹಾದಿಯಮೇಲೆ ಕಾದಿರುವಂತೆ ಅವರಿಗೆ ಆಜ್ಞಾಪಿಸಿದನು.

ಇಷ್ಟೆಲ್ಲ ವ್ಯವಸ್ಥೆ ಮಾಡುತ್ತಿರಲು ಸಂಧ್ಯಾಕಾಲವಾಯಿತು. ಅಬದುಲರಹಿಮಾನನು ನಮಾಜು ಮಾಡುವದಕ್ಕಾಗಿ ಹೋದನು. ಮೊದಲನೆಯ ಫಕೀರನನ್ನು ದಕ್ಷತೆಯಿಂದ ಕಾಯಬೇಕೆಂದು ತನ್ನ ಸಿಪಾಯಿಗಳಿಗೆ ಸೂಚಿಸಲಿಕ್ಕೆ ಅವನು ಮರೆಯಲಿಲ್ಲ. ಖಾನನ ಅಂದಿನ ನಮಾಜು ಶಾಂತರೀತಿಯಿಂದ ಆಗಲೊಲ್ಲದು. ಆತನು ಮನಸ್ಸನ್ನು ಎಷ್ಟು ಶಾಂತಮಾಡ ಹೋದರೂ, ಈ ಮೊದಲೇ ಒಂದರ ಹಿಂದೆ ಒಂದು ಒದಗಿದ ಮಹತ್ವದ ಅನುಕೂಲ ಪ್ರತಿಕೂಲ ಪ್ರಸಂಗಗಳಿಂದ ಅವನು ಮನಸ್ಸು ಚಂಚಲವಾಗುತ್ತಲಿತ್ತು. ಈ ಪ್ರಸಂಗದಲ್ಲಿ ತಾನು ತಿರುವೇಂಕಟನ ಉಪಮರ್ದಮಾಡಿ ಅವನ ಸಹಾಯವನ್ನು ತಪ್ಪಿಸಿಕೊಂಡಿದ್ದು ನೆಟ್ಟಗಾಗ ಲಿಲ್ಲೆಂದು ಅವನು ಪಶ್ಚಾತ್ತಾಪಪಡತೊಡಗಿದನು. ಈಗಲೇ ತಿರುವೇಂಕಟನನ್ನು ಕರೆಕಳುಹಿ, ಆತನ ಕ್ಷಮೆಯನ್ನಾದರೂ ಬೇಡಿ ಆತನನ್ನು ತನಗೆ ಅನುಕೂಲವಾಗ ಮಾಡಿಕೊಳ್ಳಬೇಕೆಂದು ಯೋಚಿಸಿ ಸೇವಕನನ್ನು ಕರೆದನು. ಅಷ್ಟರಲ್ಲಿ ಒಬ್ಬನು ಬಂದು–'' ತಿರುವೇಂಕಟಸರದಾರರು ತಮ್ಮನ್ನು ಕಾಣಲಿಕ್ಕೆ ಬಂದಿರುವರೆಂ''ದು ಹೇಳಿದ್ದರಿಂದ ಖಾನನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಕೂಡಲೆ ಆತನು ತಿರುವೇಂಕಟನನ್ನು ಬರಮಾಡಿಕೊಳ್ಳಲು, ಆ ರಜಪೂತ ಸರದಾರನು ಖಾನನನ್ನು ಕಂಡಕೂಡಲೆ ಬಹು ವಿನಯದಿಂದ ಸಲಾಮು ಮಾಡಿ— ಖಾನಸಾಹೇಬ, ಸಿಟ್ಟಿನಲ್ಲಿ ನಾನು ಉದ್ಧಟತನದಿಂದ ನಡೆದದ್ದಕ್ಕಾಗಿ ಕ್ಷಮಿಸಬೇಕು. ಯಾವಾಗಲೂ ನನ್ನನ್ನು ಗೌರವದಿಂದ ನಡಿಸಿಕೊಳ್ಳುತ್ತಿದ್ದ ನೀವು, ಇಂದು ಈ ಪರಿ ತಿರಸ್ಕರಿಸಿದ್ದರಿಂದ ನನಗೂ ತಡೆಯದಾಯಿತು. ವಿಷವೇಳೆಯು ನಿಮ್ಮ ಈ ದೋಸ್ತನ ಯಾವ ಮಾತನ್ನೂ ಮನಸ್ಸಿನಲ್ಲಿ ಹಿಡಿಯಬಾರದೆಂದು ಪ್ರಾರ್ಥಿಸುವೆನು. ಖಾನಸಾಹೇಬ, ನಾವಿಬ್ಬರೂ ತಫಲಖ ಬಾದಶಹರ ಕೆಲಸ ಮಾಡತಕ್ಕ ಅವರ ನಂಬಿಗೆಯ ಸೇವಕರಾದದ್ದರಿಂದ ಹೀಗೆ ನಮ್ಮ ನಮ್ಮೊಳಗೆ ಕಲಹ ಬೆಳಿಸುವದು ಯೋಗ್ಯವಲ್ಲ. ಸಿಟ್ಟಿನ ಭರ ತಗ್ಗಿದ ಬಳಿಕ ಈ ಮಾತು ನನ್ನ ಮನಸ್ಸಿನಲ್ಲಿ ಬಂದು ನನಗೆ ಬಹಳ ಪಶ್ಚಾತ್ತಾಪವಾಗಲು, ಕೂಡಲೆ ಹೊರಟು ಬಂದಿದ್ದೇನೆ. ಶತ್ರುಗಳ ಗುಪ್ತವಾದ ಸಿದ್ಧತೆಯು ನಮಗೆ ಗೊತ್ತಾಗದ್ದರಿಂದ ನಾವು ಮೋಸಹೋಗುವ ಸಂಭವವಿದೆ. ಇಲ್ಲಿಂದ ಮೂರು ಹರದಾರಿಯ ಮೇಲೆ ಶತ್ರುಗಳ ದೊಡ್ಡ ಸೈನ್ಯವು ಬೀಡುಬಿಟ್ಟಿರುವದೆಂತಲೂ, ಈ ಕೋಟೆಯ ಪಶ್ಚಿಮಭಾಗದ ಗುಪ್ತದ್ವಾರದಿಂದ ಶತ್ರುಗಳು

ತಮ್ಮ ಪದ್ಮಿನಿಯೇ ಮೊದಲಾದ ಸ್ತ್ರೀಯರನ್ನೂ, ಜನಾನಖಾನೆಯನ್ನೂ, ಕೋಟೆಯೊಳಗಿನ ಅಪಾರ ಸಂಪತ್ತನ್ನೂ ಸಾಗಿಸಿಕೊಂಡು ಹೋಗುತ್ತಿರುವರೆಂತಲೂ ನಮ್ಮ ಗುಪ್ತಚಾರರು ಹೇಳಿದ್ದರಿಂದ ಆ ಸಂಗತಿಯನ್ನು ತಮಗೆ ತಿಳಿಸಬೇಕೆಂದು ಕೂಡಲೆ ಹೊರಟುಬಂದೆನು...ಎಂದು ನುಡಿಯುತ್ತಿರಲು, ಖಾನನು ನಡುವೇ ಬಾಯಿಹಾಕಿ ಸಲಿಗೆಯಿಂದ ತಿರುವೆಂಕಟನ ಕೈ ಹಿಡಿದು– ದೋಸ್ತ, ನನ್ನಿಂದ ಇಂದು ದೊಡ್ಡ ಅಪರಾಧವಾಯಿತು. ಅದನ್ನು ನೀವು ಕ್ಷಮಿಸಲೇಬೇಕು. ನೀವು ಹೇಳಿದಂತೆ ವಿಷವೇಳೆಯಿಂದ ಹಾಗೆ ಆಗಿರಬಹುದು. ನೀವು ಹೋದಾಗಿನಿಂದ ನನಗೆ ಪಶ್ಚಾತ್ತಾಪವಾಗ ಹತ್ತಿದ್ದು, ಇಲ್ಲಿಯವರೆಗೂ ನನ್ನ ಮನಸ್ಸಿನಲ್ಲಿ ಸಮಾಧಾನವಿಲ್ಲವು. ಈಗಿನ ನನ್ನ ನಮಾಜು ಶಾಂತರೀತಿಯಿಂದ ಆಗಲಿಲ್ಲವು; ನಿಮ್ಮನ್ನು ಕರೆಕಳುಹಿ ನಿಮ್ಮ ಕ್ಷಮೆ ಬೇಡಬೇಕೆಂದು ಯೋಚಿಸಿ ಸೇವಕನನ್ನು ಕರೆಯಬೇಕೆನ್ನುತ್ತಿರು ವಷ್ಟರಲ್ಲಿಯೇ ನೀವು ಬಂದದ್ದಕ್ಕಾಗಿ ನನಗೆ ಬಹಳ ಸಂತೋಷವಾಗಿದೆ. ಸರದಾರ ಸಾಹೇಬ, ನನ್ನ ಅಪರಾಧವನ್ನು ಕ್ಷಮಿಸಿ ಬಾದಶಹರ ಕಾರ್ಯಕ್ಕೆ ಮನಃಪೂರ್ವಕ ಸಹಾಯಮಾಡಿರಿ. ಈಗಲೇ ನೀವು ಶತ್ರುಗಳನ್ನು ಹಣಿದು ಅವರು ಸಾಗಿಸಿಕೊಂಡು ಹೋಗುತ್ತಿರುವ ಜನಾನಖಾನೆಯನ್ನು ಹಿಡಿಕೊಂಡು ಬರಬೇಕು, ಈ ಮಹತ್ವದ ಕಾರ್ಯಕ್ಕೆ ನಾನೇ ಹೋಗಬೇಕೆಂದು ಮಾಡಿದ್ದೆನು; ಆದರೆ ಪದ್ಮಿನಿಯನ್ನು ಲಗ್ನವಾಗಲು ಇಚ್ಛಿಸುತ್ತಿರುವ ನೀವೇ ಈ ಕೆಲಸ ಮಾಡಿಕೊಂಡು ಬರುವದೇ ನನಗೆ ಯೋಗ್ಯವಾಗಿ ತೋರುತ್ತದೆ ಎಂದು ಹೇಳಲು, ತಿರುವೇಂಕಟನು ಮುಗುಳುನಗೆ ನಗುತ್ತ–ಖಾವಿಂದ, ನೀವು ಹೇಳುವದು, ಬಹು ಯೋಗ್ಯ ವಿಚಾರವು. ಪದ್ಮಿನಿಯ ಸಲುವಾಗಿಯೇ ನನ್ನ ಜೀವಿತವು ಇರುತ್ತದೆಂದು ಹೇಳಬಹುದು; ನಾನು ದೇಶದ್ರೋಹದ ಆರೋಪಕ್ಕೆ ಗುರಿಯಾದದ್ದಾದರೂ ಆ ಸುಂದರಿಯ ಸಲುವಾಗಿಯೇ; ಈಗ ಹೀಗೆ ನಾನು ಬರಿಯ ಸುದ್ದಿಯನ್ನು ಹೇಳಲಿಕ್ಕೆ ಬಾರದೆ ಒಮ್ಮೆಲೆ ಜನಾನಖಾನೆಯನ್ನೇ ಸೆರೆಹಿಡಿದು ತರತಕ್ಕವನು, ಆದರೆ ಖಾನಸಾಹೇಬ, ರಜಪೂತರು ಮಾಡಿದ ಪ್ರತಿಜ್ಞೆಯು ವ್ಯರ್ಥವಾಗಲಾರದು, ಶಸ್ತ್ರ ಹಿಡಿಯದೆ ಮಾಡತಕ್ಕ ಸಹಾಯವನ್ನು ಮಾಡಿ ನಿಮಗೆ ಜಯ ಉಂಟಾಗುವಂತೆ ನಾನು ಮಾಡೇನಲ್ಲದೆ, ಪ್ರತ್ಯಕ್ಷ ಯುದ್ಧವ್ಯಾಪಾರದಲ್ಲಿ ಸೇರಲಾರೆನು. ಅಂದ ಬಳಿಕ ನಾನು ಹೋಗಿ ಏನುಮಾಡಲಿ? ಯುದ್ಧ ಮಾಡುವದನ್ನೊಂದು ಬಿಟ್ಟು ಉಳಿದ ಯಾವ ಸಹಾಯ ಮಾಡಲಿಕ್ಕೂ ನಾನು ಹಿಂದೆ ಮುಂದೆ ನೋಡಿಲಿಕ್ಕಿಲ್ಲ, ಇನ್ನು ಬೇರೆ ಬೇರೆ ಸಂಗತಿಗಳನ್ನು ತಿಳಿದುಕೊಂಡು ಬರುವದಕ್ಕಾಗಿ ಗೂಢಚಾರರನ್ನು ಕಳಿಸಿದ್ದೇನೆ. ಅವರು ಪ್ರತ್ಯಕ್ಷ ಕಂಪಲಿಯ ಕೋಟೆಯಲ್ಲಿಯೂ ಹೋಗಿರುವರು. ಆದ್ದರಿಂದ ಅವರು ತಂದ ವರ್ತಮಾನವನ್ನು ಕೇಳಿಕೊಳ್ಳುವದಕ್ಕಾಗಿ ನನ್ನ ಸ್ಥಳದಲ್ಲಿ ನಾನು ಇರಬೇಕಾಗುತ್ತದೆ. ಈಗಾದರೂ ಕ್ಷಮೆ ಬೇಡಿ ಮನಸ್ಸನ್ನು ಸರಳವಾಗಿ ಮಾಡಿಕೊಳ್ಳುವದರ ಮಟ್ಟಿಗೆ ನಾನು ಬಂದದ್ದು; ಇನ್ನು ಮೇಲೆ ಪ್ರತ್ಯಕ್ಷ ಬರುವ ಪ್ರಸಂಗವಿದ್ದರೆ ನಾನೇ ಪ್ರತ್ಯಕ್ಷವಾಗಿ ಬರುವೆನು. ಸೇವಕರ ಮುಖಾಂತರ ತಿಳಿಸತಕ್ಕ ಸಂಗತಿಗಳಿದ್ದರೆ ಹಾಗೆ ತಿಳಿಸುವೆನು. ನನ್ನ ಸಂಪೂರ್ಣ ಸಹಾಯವು ತಮಗಿರುತ್ತದೆಂದು ಭಾವಿಸತಕ್ಕದ್ದು. ಈಗಿನ ಪ್ರತಿಯೊಂದು ಕ್ಷಣವು ಬಹು ಮಹತ್ವದ್ದಾದ್ದರಿಂದ ಮಾತಾಡುತ್ತ

ಕಾಲಹರಣ ಮಾಡುವಹಾಗಿಲ್ಲ. ಎಂದು ಹೇಳಿದವನೇ ತಿರುವೇಂಕಟನು ಬಹು ವಿನಯದಿಂದ ಸಲಾಮುಮಾಡಿ ಹೊರಟುಹೋದನು!

ಹೀಗೆ ತಿರುವೇಂಕಟನು ಆಕಸ್ಮಾತ್ ತಾನಾಗಿ ಬಂದು ಕ್ಷಮೆ ಬೇಡಿದ್ದಕ್ಕಾಗಿ ಅಬದುಲ ರಹಿಮಾನನಿಗೆ ಸಮಾಧಾನವಾದಂತಾದರೂ, ಆ ರಜಪೂತನು ಒಪ್ಪಿಗೆಯಿಲ್ಲದೆ ತಟ್ಟನೆ ಹೊರಟು ಹೋದದ್ದರಿಂದ ಖಾನನ ಮನಸ್ಸಿನ ಸಂಶಯವು ಪೂರಾ ಹೋಗಲಿಲ್ಲ. ಆತನು ಮನಸ್ಸಿನಲ್ಲಿ– ಈ ಉದ್ಧಟ ಕ್ಷತ್ರಿಯನು ತಾನಾಗಿ ಬಂದು ಕ್ಷಮೆ ಬೇಡಿದ್ದರಲ್ಲಿ ಏನಾದರೂ ಮೋಸವಿರಬಹುದೋ? ನಾನು ಇಷ್ಟುದಿವಸ ತಿರುವೇಂಕಟನೊಡನೆ ವ್ಯವಹರಿಸಿದ್ದರ ಮೇಲಿನಿಂದ ಅವನು ದ್ರೋಹಬುದ್ಧಿಯವನಾಗಿದ್ದರೂ ''ಒಂದು ಹೊಡೆತ ಎರಡು ತುಂಡು'' ಎಂಬ ತರಹದ ಮನುಷ್ಯನಾಗಿರುವನೆಂದು ನಾನು ಮನಗಂಡಿದ್ದೇನೆ; ಅಂದಬಳಿಕ ಹೀಗೆ ಕ್ಷಣಕ್ಕೊಂದು ಬುದ್ಧಿ ಮಾಡುವದು ಆತನಿಂದ ಹ್ಯಾಗಾದೀತು? ಅವನ ಸ್ವಭಾವದಂತೆ ನೋಡಿದರೆ, ಅವನು ಸಿಟ್ಟಿನಿಂದ ಪ್ರತಿಜ್ಞೆಮಾಡಿ ನನ್ನ ಬಳಿಯಿಂದ ಹೊರಟುಹೋದವನು ಹೀಗೆ ತಿರುಗಿ ಬರಬಾರದಾಗಿತ್ತು; ಆದರೆ ಇಂದಿನ ಅವನ ಕ್ಷಮೆ ಬೇಡುವ ರೀತಿಯನ್ನು ಮನಸ್ಸಿನಲ್ಲಿ ತಂದರೆ, ಇದೆಲ್ಲ ಆ ಶ್ರೀಕಂಠಶಾಸ್ತ್ರಿಯ ತಂತ್ರವಿರಬಹುದೆನ್ನುವ ಹಾಗೆ ತೋರುತ್ತದೆ! ತಿರುವೇಂಕಟನು ಎಂಥ ಶೂರನಾದರೂ ಆತನು ಶ್ರೀಕಂಠಶಾಸ್ತ್ರಿಯ ತಂತ್ರದಂತೆ ನಡೆಯುವನೆಂಬದೇನು ಸುಳ್ಳಲ್ಲ. ಅವನು ಕಂಪಲಿಯನ್ನು ಮುತ್ತಿದ್ದು ಶ್ರೀಕಂಠಶಾಸ್ತ್ರಿಯ ತಂತ್ರದಿಂದ; ಈಗಲೇ ಕಂಪಲಿಯನ್ನು ಸ್ವಾಧೀನಪಡಿಸಿಕೊಂಡು ಕೋಟೆಯೊಳಗಿದ್ದವರನ್ನೆಲ್ಲ ಸೆರೆಹಿಡಿಯಬೇಕೆಂದು ಆಲೋಚಿಸಿದ್ದು ಶ್ರೀಕಂಠಶಾಸ್ತ್ರಿಯ ತಂತ್ರದಿಂದಲೇ; ಅದರಂತೆ ತಿರುವೇಂಕಟನು ನಿನ್ನೆ ರಾತ್ರಿ ನಾನು ಕರೆದಾಗ ಬಾರದೆ ಇದ್ದದ್ದೂ, ಮರುದಿನ ಬಂದು ಪ್ರತಿಜ್ಞೆ ಮಾಡಿದ್ದೂ, ಈಗ ಪುನಃ ಬಂದು ನನ್ನಲ್ಲಿ ಕ್ಷಮೆ ಬೇಡಿಕೊಂಡದ್ದೂ ಶ್ರೀಕಂಠಶಾಸ್ತ್ರಿಯ ತಂತ್ರದಿಂದಲೇ ಎಂದು ನಾನು ತಿಳಿದುಕೊಳ್ಳುತ್ತೇನೆ! ಎಲಎಲಾ! ಆ ತುಕಡಿಮುರಕ ಹಾರವನ ಕುಟಿಲತನವೆಷ್ಟದು! ಈಗ ತಿರುವೇಂಕಟನನ್ನು ನನ್ನ ಮಿತ್ರನೆಂದು ತಿಳಿಯಬೇಕೆ, ಶತ್ರುವೆಂದು ತಿಳಿಯಬೇಕೆ? ಮಿತ್ರನೆಂದು ತಿಳಿಯಬೇಕೆಂದರೆ, ನಾನು ಇರುವತನಕ ಕೈಯಲ್ಲಿ ಶಸ್ತ್ರಧರಿಸದೆ ತಟಸ್ಥನಾಗಿರುವೆನೆಂದು ಪ್ರತಿಜ್ಞೆ ಮಾಡುವ ಆತನು ನನ್ನ ಮಿತ್ರನು ಹ್ಯಾಗೆ? ಶತ್ರುವೆಂದು ತಿಳಿಯಬೇಕೆಂದರೆ, ಕೇವಲ ಹಿತಚಿಂತಕನಂತೆ ''ಹಿಂದುಸೈನ್ಯವು ನಮ್ಮನ್ನು ಹೊರಗಿನಿಂದ ಮುತ್ತುತ್ತಿರುವದೆ''ಂಬದನ್ನೂ, ''ಕೋಟೆಯ ಪಶ್ಚಿಮ ನಿಟ್ಟಿನಿಂದ ಈ ರಾತ್ರಿ ರಾಣೀವಾಸವೂ, ಸಕಲ ಸಂಪತ್ತೂ ಹೊರಬಿದ್ದು ಹೋಗುವದೆಂ''ಬದನ್ನೂ ಆ ಇಬ್ಬರು ತರುಣ ಫಕೀರರಂತೆ ಇವನೂ ಬಂದು ಹೇಳುತ್ತಾನೆ. ಈ ಎರಡು ಸುದ್ದಿಗಳಲ್ಲಿ ಒಂದು ಸುದ್ದಿಯು ನಿಜವಾಗಿರುವ ದೆಂದು ಗೊತ್ತಾಗಿ ಇನ್ನೊಂದರ ನಿಜತ್ವವನ್ನು ಮನಗಾಣಬೇಕಾಗಿದೆ! ''ಯಾ ಅಲ್ಲಾ, ಯಾ ರಹಿಮಾನ'' ಆ ತರುಣ ಫಕೀರರು ಯಾರೆಂಬದರ ನೆಲೆಯೂ ನನಗೆ ಹತ್ತಲೊಲ್ಲದು. ಅವರ ಗಂಭೀರಸ್ವರ, ದಿವ್ಯ ತೇಜಸ್ಸು ಇದನ್ನು ನೋಡಿದರೆ ಅವರು ರಾಜವಂಶೀಯರೆಂಬ ಸಂಶಯವು ನನಗೆ ಬರತೊಡಗಿದೆ. ಇವರು ಹುಕ್ಕ–ಬುಕ್ಕರಾಗಿರಬಹುದೋ? ಅವರು ಹೀಗೆ

ಶತ್ರುಗಳಾದ ನಮ್ಮ ಬಳಿಗೆ ಬರುವ ಸಂಭವವು ಇಲ್ಲ, ಅಂದ ಬಳಿಕ ಇವರು ಯಾರಾಗಿರಬಹುದು? ಈಗ ಬಿಟ್ಟದ್ದು ಬಿಟ್ಟು ಏನೆಂಬುದರ ನಿರ್ಣಯ ಮಾಡಿ ನಿಶ್ಚಯ ಮಾಡಿಕೊಂಡೇ ಬಿಟ್ಟೇನೆಂದರೆ, ಗಳಿಗೆ ಗಂಡಾಂತರಗಳಂತೆ ಒಂದಕ್ಕಿಂತ ಒಂದು ಮಹತ್ವದ ಪ್ರಸಂಗಗಳು ಒದಗಿ ಬರತೊಡಗಿವೆ. ಅತ್ತ ಸಾಗಿಬರುತ್ತಿರುವ ಹಿಂದೂ ಸೈನ್ಯದ ಸಮಾಚಾರವನ್ನು ತಕ್ಕೊಳ್ಳಲಾ? ಅಥವಾ ಇವೆರಡೂ ಕೆಲಸಗಳನ್ನು ಬಿಟ್ಟು ತರುಣ ಫಕೀರರಿಬ್ಬರ ಸ್ವರೂಪವನ್ನು ಹೊರಗೆಡವಲಾ? ನಾನು ಮಾಡಲಾದರೂ ಏನು? ನನ್ನ ಮನಸ್ಸನ್ನು ಚಂಚಲವಾಗಿಮಾಡಿ ನನಗೆ ಏನೂ ತೋಚದಂತೆ ಮಾಡಿದ ಇಷ್ಟು ಪ್ರಸಂಗಗಳು ಒಮ್ಮೆಲೆ ಹೇಗೆ ಒದಗಿರಬಹುದು? ನಾನು ಆ ಮಹಾ ತಂತ್ರಗಾರನಾದ ಮಾಧವಾಚಾರ್ಯನ ಬಲೆಯಲ್ಲಿ ಬೀಳುತ್ತಿರಲಿಕ್ಕಿಲ್ಲವಷ್ಟೆ? ಈ ಪ್ರಸಂಗದಲ್ಲಿ ನಾನು ಯಾವ ಹಾದಿಯನ್ನು ಹಿಡಿದುಹೋಗಲಿ, ಯಾರನ್ನು ನಂಬಲಿ, ನನಗೆ ಯೋಗ್ಯ ಮಾರ್ಗದರ್ಶಕರು ಹ್ಯಾಗೆ ದೊರೆತಾರು? ಎಂದು ಆಲೋಚಿಸುತ್ತಿರಲು, ಒಬ್ಬ ಸೇವಕನು ಬಂದು ವಿನಯದಿಂದ– ''ಖಾವಿಂದ, ತರುಣ ಫಕೀರನು ಹೇಳಿದ ಸುದ್ದಿಯು ಅಕ್ಷರಶಃ ನಿಜವಿರುವದು. ಎಷ್ಟೋ ಬುರುಕಿ ಹಾಕಿದ ಮೇಣೆಗಳೂ, ಸಂಪತ್ತು ತುಂಬಿದ ಆನೆ–ಒಂಟೆ–ಬಂಡಿಗಳೂ ಹಿಂದೂ ಸೈನ್ಯದಿಂದ ರಕ್ಷಿಸಲ್ಪಡುತ್ತ ಸಪ್ಪಳಿಲ್ಲದೆ ಸಾಗುತ್ತಿರಲು, ನಮ್ಮ ಸೈನಿಕರು ಅವರನ್ನು ಮುತ್ತಿ ಪ್ರತಿಬಂಧಿಸಿರುವರು. ಇನ್ನೂ ಯುದ್ಧಕ್ಕೆ ಆರಂಭವಾಗಿದ್ದಿಲ್ಲ, ನಾನು ಅಪ್ಪಣೆಯಂತೆ ಸುದ್ದಿಯನ್ನು ಹೇಳಲಿಕ್ಕೆ ಕುದುರೆಯನ್ನು ಓಡಿಸುತ್ತ ಬಂದೆನು'' ಎಂದು ಹೇಳಿದನು.

ಸೇವಕನ ಈ ಮಾತುಗಳನ್ನು ಕೇಳಿ ಅಬದುಲರಹಿಮಾನನು ಮತ್ತಿಷ್ಟು ಸಂಶಯದಲ್ಲಿಯೇ ಬಿದ್ದನು. ಆ ಇಬ್ಬರು ತರುಣ ಫಕೀರರೂ, ತಿರುವೇಂಕಟನೂ ನನಗೆ ಶತ್ರುಗಳೇ ಆಗಿದ್ದರೆ, ಇಂಥ ಮಹತ್ವದ ಸುದ್ದಿಗಳನ್ನು ನನಗೆ ಬುದ್ಧಿಪೂರ್ವಕವಾಗಿ ಬಂದು ಯಾಕೆ ಹೇಳುತ್ತಿದ್ದರು? ಅದರಲ್ಲಿಯೂ ಪದ್ಮಿನಿಯಂಥ ರಾಜಪುತ್ರಿಯೂ, ಕೋಟೆಯೊಳಗಿನ ಸರ್ವಸಂಪತ್ತೂ ಹೊರಬಿದ್ದು ಹೋಗುವದನ್ನು ನನಗೆ ಮಿತ್ರರಲ್ಲದವರು ಹೇಳಬಹುದೆ? ಇಂಥ ಕಠಿಣ ಪ್ರಸಂಗದಲ್ಲಿ ನಾನು ಇಲ್ಲದ ಸಂಶಯಗಳಿಗೆ ಗುರಿಯಾಗಿ ಮನಸ್ಸನ್ನು ಚಂಚಲವಾಗಿ ಮಾಡಿಕೊಳ್ಳುವದು ಸರಿಯಲ್ಲ! ಇನ್ನು ನನ್ನ ನಿಶ್ಚಯವಾಯಿತು. ತಿರುವೇಂಕಟನೂ, ಆ ತರುಣ ಫಕೀರರಿಬ್ಬರೂ ನನ್ನ ಮಿತ್ರರೇ ಇರುವರು. ಆ ಫಕೀರರಿಬ್ಬರು ರಾಜಪುತ್ರರಿರಲಿ –ಬಿಕ್ಕೆಬೇಡುವವರಿರಲಿ ಕಾರ್ಯವಾಗುವವರೆಗೆ ನನಗೆ ಈ ಸಂಶಯ ಬಂದಿರುವದೆಂಬ ಗಂಧವನ್ನೂ ಅವರಿಗೆ ಹತ್ತಗೊಡದೆ ಅವರೊಡನೆ ಅತ್ಯಂತ ಪ್ರೇಮದಿಂದ ನಡೆದುಕೊಳ್ಳತಕ್ಕದ್ದು. ತಿರುವೇಂಕಟನ ಮೇಲಾದರೂ ನಾನು ಇಲ್ಲದ ಆರೋಪವನ್ನು ಯಾಕೆ ಹೊರಿಸಬೇಕು? ನಾನು ಒಳ್ಳೇ ದೃಢನಿಶ್ಚಯದವನೆಂದು ಅಭಿಮಾನಪಡುತ್ತಿರುವ ನನ್ನ ಚಿತ್ತವೃತ್ತಿಯೇ ಈಗ ಅತ್ಯಂತ ಚಂಚಲವಾಗಿರುವದಿಲ್ಲವೆ? ಪ್ರಸಂಗವೇ ಹಾಗಿರುವದರಿಂದ ನನ್ನಂತೆಯೇ ತಿರುವೇಂಕಟನ ಚಿತ್ತವೃತ್ತಿಯಾದರೂ ಚಂಚಲವಾಗಿರಬಹುದು. ಆ ಸೊಟ್ಟ ಶಾಸ್ತ್ರಿಗಾದರೂ ಅಷ್ಟು ಮಹತ್ವವೇಕೆ ಕೊಡಬೇಕು? ಎಂದು ಆಲೋಚಿಸುತ್ತ ಒಬ್ಬ ಸೇವಕನನ್ನು ಕುರಿತು– ''ಹೋಗು,

ಬೇಗನೆ ಆ ತರುಣ ಫಕೀರನನ್ನು ಕರೆದು ತಾ'' ಎಂದು ಹೇಳಿ ಅವನಿಗಾಗಿ ಒಂದು ಕುದುರೆಯನ್ನು ಸಿದ್ಧಮಾಡಿಸಿ, ತಾನು ತನ್ನ ಕುದುರೆಯನ್ನು ಹತ್ತಿ ಅವನ ಹಾದಿಯನ್ನು ನೋಡುತ್ತ ನಿಂತುಕೊಂಡನು. ಅಷ್ಟರಲ್ಲಿ ಆ ಮೊದಲಿನ ತರುಣ ಫಕೀರನು ಬರಲು, ಅಬದುಲ ರಹಿಮಾನನು ಆತನನ್ನು ಕುರಿತು—''ದೋಸ್ತ, ಬಾ, ಕುದುರೆಯನ್ನು ಹತ್ತು, ನೀವು ಹೇಳಿದ ಸುದ್ದಿಗಳೆರಡೂ ನಿಜವಾದವು. ಸದ್ಯಕ್ಕೆ ಪದ್ಮಿನಿಯೇ ಮೊದಲಾದ ರಾಜ ಸ್ತ್ರೀಯರನ್ನೂ, ಸಕಲ ಸಂಪತ್ತನ್ನೂ ಸ್ವಾಧೀನಪಡಿಸಿಕೊಂಡು ಬರೋಣ'' ಎಂದು ಹೇಳಿ ಮತ್ತೆ ಇನ್ನೂರಾಐವತ್ತು ಜನ ಶೂರ ದಂಡಾಳುಗಳನ್ನು ಸಂಗಡ ಕರಕೊಂಡು ಸುದ್ದಿ ಹೇಳಬಂದ ಸೇವಕನನ್ನು ಹಿಂಬಾಲಿಸಿ ಭರದಿಂದ ಸಾಗಿದನು. ಮುಖ್ಯವಾಗಿ ಪದ್ಮಿನಿಯ ಮೇಣೆಯು ಯಾವಾಗ ಕಣ್ಣಿಗೆ ಬಿದ್ದೀತೆಂದು ಆ ಯವನ ಸೇನಾಪತಿಯು ಆತುರಪಡುತ್ತಿದ್ದನು. ಹೀಗೆ ವೇಗದಿಂದ ಸಾಗಿದ್ದ ಅಬದುಲ ರಹಿಮಾನನು ಲೋಕವಿಖ್ಯಾತ ಸೌಂದರ್ಯವುಳ್ಳ ಪದ್ಮಿನಿಯನ್ನು ಚಿಂತಿಸುತ್ತಿರಲು, ಅವನ ಏಕನಿಷ್ಠೆಯ ಚಿಂತನಕ್ಕೆ ಪ್ರತ್ಯಕ್ಷವಾದ ಆ ಚಪಲಾಕ್ಷಿಯ ನೇತ್ರಕಟಾಕ್ಷದ ಹೊಳಪುಗಳೋ ಅನ್ನುವ ಅತಿಶಯೋಕ್ತಿಯಂತೆ ದೀಪಜ್ಯೋತಿಗಳು ದೂರದಲ್ಲಿ ಅವನ ಕಣ್ಣಿಗೆ ಕಾಣಹತ್ತಿದ್ದವು! ಆಗ ಅಬದುಲರಹಿಮಾನನು ತರುಣ ಫಕೀರರನ್ನು ಕುರಿತು–''ದೋಸ್ತ, ಆ ದೀಪಗಳು ಕಾಣುತ್ತಿರುವದೇ ನೀನು ಹೇಳಿದ ಸ್ಥಳವೇನು?''ಎಂದು ಕೇಳಲು, ಫಕೀರನು– ''ಅಹುದಹುದು, ಅದೇ ಸ್ಥಳವು. ಶತ್ರುಗಳು ತಮ್ಮ ರಾಣೀವಾಸವನ್ನು ಕತ್ತಲಲ್ಲಿಯೇ ಗುಪ್ತವಾಗಿ ಸಾಗಿಸಿಕೊಂಡು ಹೋಗತಕ್ಕವರು; ಆದರೆ ನಮ್ಮ ಯವನ ಸೈನ್ಯವು ಆಕಸ್ಮಾತ್ತಾಗಿ ಅವರನ್ನು ಮುತ್ತಿದ್ದರಿಂದ ಅವರು ದೀವಟಿಗೆಗಳನ್ನು ಹಚ್ಚಿದಂತೆ ತೋರುತ್ತದೆ; ಆದರೆ ಖಾವಿಂದ, ನಾವು ಬೇಗನೆ ಹೋಗಬೇಕು; ಇಲ್ಲದಿದ್ದರೆ ಯುದ್ಧದ ಗದ್ದಲದಲ್ಲಿ ದೇವರಾಜಪುತ್ರಿಯಾದ ಪದ್ಮಿನಿಯು ಪ್ರಾಣಕ್ಕೆ ಎರವಾದಾಳು! ಯುದ್ಧಾವೇಶವು ಯಾರನ್ನು ಕೇಳೀತು! ಪದ್ಮಿನಿಯು ಸ್ತ್ರೀಯಾದರೂ ಯುದ್ಧಕಲೆಯನ್ನು ಚೆನ್ನಾಗಿ ಅರಿತವಳಿರುವಳು; ಆಕೆಯ ರೂಪದಂತೆ ಆಕೆಯ ದೇಶಾಭಿಮಾನವೂ, ಕ್ಷತ್ರಿಯ ಕುಲಾಭಿಮಾನವೂ ಪ್ರಸಿದ್ಧವಾಗಿರುವವು. ಆ ಕ್ಷತ್ರಿಯ ಕುವರಿಯು ಕ್ಷಾತ್ರತೇಜದಿಂದ ಪ್ರದೀಪ್ತಳಾಗಿ ಕೈಯಲ್ಲಿ ಶಸ್ತ್ರವನ್ನು ಧರಿಸಿದರೆ ದೈತ್ಯಹಾರಕ್ಕಾಗಿ ಮುಂದುವರಿದ ಸಾಕ್ಷಾತ್ ಚಂಡಿಯೇ ಸರಿ; ಆದ್ದರಿಂದ ಆ ವೀರ ವನಿತೆಯು ಎಲ್ಲಿಯಾದರೂ ನಮ್ಮ ಯವನವೀರರ ಖಡ್ಗಕ್ಕೆ ಆಹುತಿಯಾದಾಳು! ಹಾಗಾಯಿತೆಂದರೆ ಖಾವಿಂದ, ನೀವು ವಿಜಯವನ್ನು ಸಂಪಾದಿಸಿದರೂ ಅದರಲ್ಲಿ ಸ್ವಾರಸ್ಯವೇನು ಉಳಿಯುವದು? ಆದರೆ ಬೇಗನೆ ನಡೆಯಿರಿ, ನಾವು ಹೋಗಿ ಯುದ್ಧ ಮಾಡದೆ ಆದಷ್ಟು ಸೌಮ್ಯೋಪಾಯದಿಂದ ರಾಣೀವಾಸವನ್ನು ಕೈವಶಮಾಡಿಕೊಳ್ಳೋಣ! ಎಂದು ನುಡಿಯಲು, ಅಬದುಲರಹಿಮಾನನಿಗೆ ತರುಣ ಫಕೀರನ ಮಾತು ಸಯುಕ್ತವಾಗಿ ತೋರಿ ಆತನು ಕುದುರೆಯನ್ನು ವೇಗದಿಂದ ಸಾಗಿಸಿದನು; ಕೂಡಲೇ ಫಕೀರನೂ ಯವನ ರಾವುತರೂ ತಮ್ಮ ಕುದುರಗಳನ್ನು ಬಿಟ್ಟರು. ಅಬದುಲರಹಿಮಾನನು ತರುಣ ಫಕೀರನ ಅಶ್ವಾರೋಹಣ ನೈಪುಣ್ಯವನ್ನು ನೋಡಿ, ''ಇವನು ರಾಜಪುತ್ರನೇ ಸರಿ'' ಎಂದು ನಿಶ್ಚಯಿಸುತ್ತಿರಲು, ಅವನ ಸೈನ್ಯವು, ಈ ಮೊದಲೇ ಹೋಗಿ ರಾಣೀವಾಸವನ್ನು ಮುತ್ತಿದ್ದ ಯವನ ಸೈನ್ಯವನ್ನು ಕೂಡಿಕೊಂಡಿತು!

ಈ ಮೇರೆಗೆ ಮುಸಲ್ಮಾನ ರಾವುತರು ಪೆಟ್ಟಿನ ಮೇಲೆ ಪೆಟ್ಟು ಬಂದು ತಮ್ಮನ್ನು ಮುತ್ತಿದ್ದರಿಂದ ಹಿಂದೂಸೈನಿಕರು ಯುದ್ಧಾವೇಶಗೊಂಡು ಕೂಡಲೆ ದೀವಟಿಗೆಗಳನ್ನೂ, ಗೊರವಿಯ ಕಟ್ಟಿಗೆಗಳನ್ನೂ ಹಚ್ಚಿ ರಾಣೀವಾಸದ ಮೇನೆಗಳನ್ನೂ, ತುಂಬಿದ ಸಂಪತ್ತನ್ನೂ ನಡುವೆ ಹಾಕಿ ರಕ್ಷಿಸತೊಡಗಿದರು. ಆಗ ಆ ಕನ್ನಡ ವೀರರ ಮುಖ್ಯಸ್ಥರು ತನ್ನವರನ್ನು ಕುರಿತು–''ವೀರರೇ, ನಿಮ್ಮ ಪರಾಕ್ರಮದ ಪರೀಕ್ಷಾಕಾಲವು ಬಂದಿರುವದು. ನಿಮ್ಮ ಇಮ್ಮಡಿಗಿಂತ ಹೆಚ್ಚಾದ ಸೈನ್ಯವು ನಿಮ್ಮನ್ನು ಮುತ್ತಿದ್ದರೂ, ನೀವು ನಿಮ್ಮ ಪುರಾತನರಾದ ಸತ್ಯಾಶ್ರಯ ಪುಲಕೇಶಿಯೇ ಮೊದಲಾದ ವೀರಾಧಿವೀರರ ವಂಶದವರೆಂಬದನ್ನು ನೆನಪಿನಲ್ಲಿಟ್ಟು, ಮಹಾತ್ಮರಾದ ಮಾಧವಾಚಾರ್ಯರ ಅನುಯಾಯಿಗಳೆನಿಸಿಕೊಳ್ಳುವಂತಹ ಸಾಹಸಮಾಡಿರಿ. ಫಿತೂರಿಯಿಂದ ಈಗಿನ ಪ್ರಸಂಗವು ಒದಗಿರುತ್ತದೆ. ರಣಪಂಡಿತರಾದ ನೀವು ಈ ಸನ್ಮಾನೀಯ ರಾಣೀ ವಾಸವನ್ನೂ, ಸರ್ವ ಸಾಧನವಾದ ರಾಷ್ಟ್ರೀಯ ಸಂಪತ್ತನ್ನೂ ಸಂರಕ್ಷಿಸಿ ಕೀರ್ತಿಯನ್ನು ಸಂಪಾದಿಸಿರಿ! ಮೇಣೆಯ ಮುಸುಕಿನಲ್ಲಿದ್ದ ಸತ್ವಸ್ಥರಾದ ರಾಜಸ್ತ್ರೀಯರೂ, ಅತ್ಯಂತ ಸ್ವಾಮಿನಿಷ್ಠರಾದ ಅವರ ದಾಸೀಜನವೂ ನಿಮ್ಮ ಪರಾಕ್ರಮವನ್ನು ವರ್ಣಿಸಿ ನಿಮ್ಮನ್ನು ಹರಸುವಂತೆ ಸಾಹಸಮಾಡಿರಿ'' ಎಂದು ಹೇಳಿದನು. ಮೊದಲೇ ಬಂದು ಮುತ್ತಿದ್ದ ಮುಸಲ್ಮಾನ ರಾವುತರು ಇಷ್ಟು ಹೊತ್ತಿಗೆ ಹಿಂದೂ ಸೈನಿಕರ ಸಮಾಚಾರವನ್ನು ತಕ್ಕೊಳ್ಳತಕ್ಕವರು; ಆದರೆ ತರುಣ ಫಕೀರನ ಸೂಚನೆಯಂತೆ ಅಬದುಲರಹಿಮಾನನು–''ನಾನು ಬರುವವರೆಗೆ ಅದಷ್ಟು ಮಟ್ಟಿಗೆ ಮೇಲುಬಿದ್ದು ಯುದ್ಧ ಉಸಾಬರಿಗೆ ಹೋಗದೆ, ಅವರು ಏರಿಬಂದರೆ ಹಿಂದಕ್ಕೆ ಸರಿಸುತ್ತ ಮುಂದಕ್ಕೆ ಹೋಗಹತ್ತಿದರೆ ಪ್ರತಿ ಬಂಧಿಸುತ್ತ ಮಾತ್ರ ಇರಬೇಕೆ'ಂದು ಹೇಳಿದ್ದರಿಂದ, ಆ ಮುಸಲ್ಮಾನ ಸೈನಿಕರು, ತಮ್ಮ ಮೇಲೆ'' ಏರಿಬಾರದೆ ತಮ್ಮ ವ್ಯವಸ್ಥೆ ಮಾಡುವಲ್ಲಿ ತೊಡಗಿದ್ದ ಹಿಂದೂಜನರ ಮೇಲೆ ತಾವೂ ಏರಿಹೋಗಿದ್ದಿಲ್ಲ. ಅಷ್ಟರಲ್ಲಿ ಅಬದುಲರಹಿಮಾನನೂ ಸೈನ್ಯದೊಡನೆ ಅಲ್ಲಿಗೆ ಬಂದನು. ಅದೇ ಸಂಧಿಯಲ್ಲಿ ಕರ್ನಾಟಕ ಸೇನಾಪತಿಯು ತನ್ನ ವೀರ ಸೈನ್ಯವನ್ನು ಕುರಿತು ಉಪದೇಶಿಸ ತೊಡಗಿದನು. ಅದನ್ನು ಕೇಳಿ ಅಬದುಲರಹಿಮಾನನು ಆ ಸೇನಾಪತಿಯನ್ನು ಕುರಿತು–''ಎಲೈ ಬಾಯ್ಬಡಕನಾದ ಕನ್ನಡಿಗನೇ, ಹೀಗೆ ವೀರಾಧಿವೀರನಂತೆ ನಿನ್ನ ಕನ್ನಡ ವೀರರನ್ನು ಬೋಧಿಸುವ ನೀನು,`ಹೆಂಗಸರನ್ನು ಕಟ್ಟಿಕೊಂಡು ಹೆಂಗಸಿನಂತೆ ಹೀಗೆ ಕಳವಿನಿಂದ ಯಾಕೆ ಹೋಗುತ್ತಿದ್ದೆ? ಅದೇನೇ ಇರಲಿ, ಈಗ ಕಳ್ಳರಾದ ನಿಮ್ಮನ್ನು ನಾವು ಹಿಡಿದಿರುವಂದತೂ ನಿಜವು; ಆದರೆ ಹೆಂಗಸರೊಡನೆ ಯುದ್ಧಮಾಡುವದು ನಮ್ಮ ಯವನ ವೀರರ ಕೆಲಸವಲ್ಲ; ಆದ್ದರಿಂದ ನೀವು ಶಸ್ತ್ರಗಳನ್ನು ಕೆಳಗಿಟ್ಟು ಶರಣುಬಂದು ರಾಣೀವಾಸದ ಜನರನ್ನೂ, ಸರ್ವಸಂಪತ್ತನ್ನೂ ನಮಗೆ ಒಪ್ಪಿಸಿದರೆ ನಿಮ್ಮನ್ನು ಯಾವ ಬಗೆಯಿಂದಲೂ ಹಿಂಸಿಸದೆ ನಿಮ್ಮೆಲ್ಲರನ್ನು ಪಾಳಯಕ್ಕೆ ಹಿಡಿದೊಯ್ಯುವೆವು; ನಮ್ಮ ಸಂಕಲ್ಪದಂತೆ ಕಾರ್ಯವಾದ ಬಳಿಕ ನೀವು ಬೇಕಾದಲ್ಲಿಗೆ ಹೊರಟುಹೋಗಬಹುದು. ನಿಜವಾಗಿಯೆಂದರೆ ಕರ್ನಾಟಕವು ನಮ್ಮ ತಘಲಖ ಬಾದಶಹರ ಅಧಿಪತ್ಯಕ್ಕೆ ಒಳಗಾದದ್ದಾಗಿರುವದರಿಂದ, ನೀವು ನಮ್ಮ ಪ್ರಜೆಗಳಾಗಿರುವಿರಿ. ನಿಷ್ಕಾರಣ ಪ್ರಜೆಗಳನ್ನು ಹಿಂಸಿಸುವದು ನಮ್ಮ ಧರ್ಮವಲ್ಲ. ಇದರ ಮೇಲೆಯೂ ನೀವು ನಮ್ಮ ಮಾತುಮೀರಿ ಕಡದಿಗೆ ಬಿದ್ದು ಬಡಿದಾಡಿದರೆ, ಪೆಟ್ಟಿಗೆ ಪೆಟ್ಟು ಬಿದ್ದು

ಮೇಲೆ ಆಗುವಂತೆ ನೀವು ನಮ್ಮ ಸೆರೆಯಾಳೂ ಆಗಬೇಕಾಗುವುದು. ಬಡಿದಾಟವೇ ಆರಂಭವಾದ ಬಳಿಕ ನಿಯಮವೇನು ಉಳಿಯುವದು? ಪಾಪ! ನಿರಪರಾಧಿಗಳಾದ ಹೆಂಗಸರಿಗೂ ಕೈತಪ್ಪಿ ಪೆಟ್ಟು ಬಿದ್ದಾವು. ಹೀಗೆ ಸ್ತ್ರೀ ಜನಕ್ಕೆ ನಿಷ್ಕಾರಣ ತಾಪಕೊಡುವದು ಸ್ವಲ್ಪವೂ ನಮ್ಮ ಮನಸ್ಸಿನಲ್ಲಿಲ್ಲ; ಇದರ ಮೇಲೆಯೂ ನೀವು ತಾಪಕೊಡುವ ಪ್ರಸಂಗ ತಂದರೆ ಅದಕ್ಕೆ ಹೊಣೆಯು ನಾವಲ್ಲ; ಆದರೂ ಇನ್ನೊಮ್ಮೆ ಹೇಳುತ್ತೇನೆ, ರಾಜಪುತ್ರಿಯಾದ ಪದ್ಮಿನಿಯಂಥ ಲೋಕಸುಂದರಿಯನ್ನು ನಮ್ಮ ನಿಮ್ಮ ಗುದ್ದಾಟದಲ್ಲಿ ಗಾಸಿಗೊಳಿಸುವದು ಸರಿಯಲ್ಲ.

ಈ ಮೇರೆಗೆ ನುಡಿಯುತ್ತಿರಲು, ಆ ಕನ್ನಡ ವೀರರ ಮುಖ್ಯನು ಖಾನನನ್ನು ಕುರಿತು–ನಿರ್ಲಜ್ಜನಾದ ಖಾನಾ, ವ್ಯರ್ಥವಾಗಿ ನೀನು ಸಂಭಾವಿತನೆಂದು ತಿಳಿದುಕೊಂಡು ನಮ್ಮ ಮೇಲೆ ಕಳವಿನ ಆರೋಪವನ್ನು ಯಾಕೆ ಹೊರಿಸುತ್ತೀ? ಕಳವು–ಕೊಲೆ–ಸುಲಿಗೆಗಳನ್ನು ರಾಜ್ಯ ಸಂಪಾದನದ, ಹಾಗು ರಾಜ್ಯದಾಡಳಿತದ ಪ್ರಧಾನ ಸಾಧನಗಳೆಂದು ತಿಳಿದಿರುವ ನಿಮಗೆ ಆಚರಣೆಯಲ್ಲಿಯ ವಿಧಿ–ನಿಷೇಧವೆಲ್ಲಿರುವದು? ರಾಜ್ಯ ಲೋಭದಿಂದ ನೀವು ಏನು ಮಾಡಲಿಕ್ಕೂ ಹೇಸುವದಿಲ್ಲವೆಂಬದನ್ನು ನಿಮ್ಮ ವೀರಾಧಿವೀರರೆನಿಸುವ ಮಲಿಕಕಾಫರ, ಅಲ್ಲಾವುದ್ದೀನ ಮೊದಲಾದವರ ಚರಿತ್ರದಿಂದ ಜಗತ್ತೇ ಅರಿತಿರುವದು. ಅದರಲ್ಲಿ ನಿಮ್ಮ ತರ್ಘಲಖ ಮುಹಮ್ಮದ ಬಾದಶಹನ ದಯಾಗುಣವೂ, ಪ್ರಜಾವಾತ್ಸಲ್ಯವೂ ಜಗಪ್ರಸಿದ್ಧವೇ ಇರುವವು. ಇಂಥ ಧರ್ಮಹೀನರಾದ ನಿಮ್ಮೊಡನೆ ಧರ್ಮಯುದ್ಧವನ್ನು ಮಾಡುವದೆಂದರೆ, ಧರ್ಮದ ಅಪಮಾನ ಮಾಡಿ ಹಾವಿಗೆ ಹಾಲೆರೆದ ಹಾಗೆಯೇ ಸರಿ! ಮುಳ್ಳಿನಿಂದ ಮುಳ್ಳನ್ನು ತೆಗೆಯುವಂತೆ ನಿಮ್ಮಂಥ ಕಳ್ಳರಾದ ಕೊಲೆಗಡಕರನ್ನು ಕಳವು–ಕೊಲೆಗಳಿಂದಲೇ ಶಾಸನ ಮಾಡತಕ್ಕದ್ದು. ಧರ್ಮಯುದ್ಧಕ್ಕೆ ನೀವು ಅಧಿಕಾರಿಗಳೇ ಅಲ್ಲದ್ದರಿಂದ ನಿಮ್ಮ ಶಾಸನವನ್ನು ಅಧರ್ಮದಿಂದ ಮಾಡುವದೇ ಯೋಗ್ಯವು. ಹುಚ್ಚನಾಯಿಯನ್ನು ಹೊಡೆಯಲಿಕ್ಕೇಕೆ ಬಣ್ಣದ ಕೊಲು? ಮರೆಗೆ ನಿಂತಾಗಲಿ, ಮುಂದೆ ನಿಂತಾಗಲಿ ಅದನ್ನು ಬಡಿಗೆಯಿಂದ ಬಡಿದು ಕೊಂದು ಜನತೆಗೆ ನಿರ್ಭಯವನ್ನುಂಟುಮಾಡುವದಷ್ಟೇ ಮುಖ್ಯೋದ್ದೇಶವು; ಅದರಂತೆ ಐಶ್ವರ್ಯದ ಮದದಿಂದ ಹುಚ್ಚರಾಗಿದ್ದ ನಿಮಗೆ ಧರ್ಮದ ಸಂಬಂಧವೇನು? ಧರ್ಮಿಷ್ಠರಿಗಾಗಿ ಧರ್ಮವಿರುವಂತೆ, ಅಧರ್ಮಿಷ್ಠರಿಗಾಗಿ ಅಧರ್ಮವೇ ಎದುರಾದರೆ ಜೋಡಿಯು ಒಪ್ಪುವುದು. ವಿವೇಕಹೀನನಾದ ಖಾನಾ, ಸಮಹುದ್ದರಿಯ ಕುಸ್ತಿಯೇ ಜನರು ಮೆಚ್ಚುವಂತಹ ಕುಸ್ತಿಯಲ್ಲವೆ? ವಿಧಿನಿಷೇಧವಿಲ್ಲದೆ ಎಂಜಲ ಪತ್ರಾವಳಿಯನ್ನು ನೆಕ್ಕುತ್ತ, ನಾಚಿಕೆ–ಹೇಸಿಗೆಗಳಿಲ್ಲದೆ ಹೆಣ್ಣಿನ ಹಂಬಲದಿಂದ ಬೆನ್ನುಹತ್ತಿ ಓಡುತ್ತ ಬಾಳುವ ನಾಯಿಯಂತೆ, ಹೊನ್ನು–ಹೆಣ್ಣುಗಳ ಸುಲಿಗೆಯ ಆಸೆಯಿಂದ ಯುದ್ಧಮಾಡುವ, ಮತ್ತು ಅದೇ ಆಸೆಯಿಂದ ಈಗ ಇಲ್ಲಿಗೆ ಬಂದಿರುವ ಧರ್ಮಲಂಡನಾದ ನಿನಗೆ ಸ್ತ್ರೀಜನದ ಸಂಬಂಧದಿಂದ ಈಪರಿ ಆದರ ತೋರಿಸಲಿಕ್ಕೆ ನಾಚಿಕೆ ಬರುವದಿಲ್ಲವೇ? ಈ ಹೆಂಗಸರ ಮೇಲೆ ಕೈ ಎತ್ತಲಿಕ್ಕೆ ಹೇಸುವ ಖಾನಾ, ಗಂಡಸರನ್ನು ನೋಡಿ ಯುದ್ಧಮಾಡಿ ನಿನ್ನ ಪೌರುಷವನ್ನು ಪ್ರಕಟಮಾಡುವದನ್ನು ಬಿಟ್ಟು, ನಿಮ್ಮಂಥ ನರರಾಕ್ಷಸರ ಅನೀತಿಯ ಆಚರಣೆಯ ಭಯದಿಂದ ಯಾವ ಉಪಾಯದಿಂದಾದರೂ ತಮ್ಮ ಮರ್ಯಾದೆ

ಉಳಿಸಿಕೊಳ್ಳುವದಕ್ಕಾಗಿ ಪಾರಾಗುವವರ ಮೇಲೆ ಇಷ್ಟೊಂದು ಸೈನ್ಯವನ್ನು ತಕ್ಕೊಂಡು ಯಾಕೆ ಓಡಿಬಂದೆ! ಯಾವ ನೀಚ ದೇಶದ್ರೋಹಿಯು ನಿನಗೆ ಈ ಸುದ್ದಿಯನ್ನು ತಿಳಿಸಿದನು? ಆದರೂ ನಾನು ಸ್ಪಷ್ಟವಾಗಿ ಹೇಳುವ ಮಾತನ್ನು ಕೇಳು. ನೀನು ಧರ್ಮಯುದ್ಧಕ್ಕೆ ಸಿದ್ಧನಿದ್ದರೆ, ಇಗೋ ನಮ್ಮೊಡನೆ ಯಾವ ಬಗೆಯ ಯುದ್ಧಮಾಡಲಿಕ್ಕೆ ಯಾರನ್ನು ಕಳಿಸುವೆ ಹೇಳು; ಅಥವಾ ಮಂದಿಯನ್ನೇಕೆ ಕಳಿಸುವೆ, ನೀನೇ ಬಾ. ಅಬಲೆಯರನ್ನು ರಕ್ಷಿಸುವದು ಪುರುಷರ ಧರ್ಮವಿದ್ದು, ಹಾಗೆ ನೀನು ಇವರನ್ನು ರಕ್ಷಿಸಿ ಸುರಕ್ಷಿತ ಇವರನ್ನು ಹೋಗಗೊಟ್ಟು ಪುರುಷನೆನಿಸಿಕೊಳ್ಳು; ಇಲ್ಲದಿದ್ದರೆ ನಮ್ಮೊಡನೆ ಧರ್ಮಯುದ್ಧವನ್ನಾದರೂ ಮಾಡು; ಇದಾವದೂ ಮನಸ್ಸಿಗೆ ಬಾರದೆ ''ಇವರೇನು ಹೆಂಗಸರು'' ಎಂದು ಉದ್ಧಾಮತನದಿಂದ ನಮ್ಮೊಡನೆ ಆಚರಿಸಿದರೆ ನಾವು ಗಂಡಸರಂತೂ ಇರಲಿ, ಇಗೋ ಇಲ್ಲಿರುವ ವೀರಪುತ್ರಿಯರೂ, ವೀರಪತ್ನಿಯರೂ ಆದ ಈ ಸ್ತ್ರೀಜನರು ಜಂಬುಕೇಶ್ವರರಾಜನ ಸಂಬಂಧಿಕರೂ ಆತನ ಶೂರ ಪ್ರಜೆಗಳೂ ಆಗಿರುವದರಿಂದ ತಮ್ಮ ಅಗಾಧ ಸತ್ವವನ್ನು ತೋರಿಸದೆ ಇರರು! ಖಾನಾ, ಚೆನ್ನಾಗಿ ನೆನಪಿನಲ್ಲಿಡು, ಈ ಕನ್ನಡ ವೀರಪರಿವಾರವಂತು ಇರಲಿ, ಸ್ತ್ರೀ ಪರಿವಾರದ ಒಂದು ವ್ಯಕ್ತಿಯೂ ನಿನ್ನ ಗಂಟಲಲ್ಲಿ ಇಳಿಯಲಿಕ್ಕಿಲ್ಲ; ಒಮ್ಮೆ ಕನ್ನಡಿಗರ ಕೈಯನ್ನಾದರೂ ನೋಡಿಬಿಡು.

ಈ ಮೇರೆಗೆ ಆ ಕನ್ನಡ ಸೇನಾನಾಯಕನು ನುಡಿಯುತ್ತಿರಲು, ಒಂದು ಮೇಣೆಯ ಬಾಗಿಲು ಪಕ್ಕನ ತೆರೆದು ಆ ಮೇಣೆಗೆ ಹಾಕಿದ ಬುರುಕೆಯು ಓರೆಯಾಗಲು, ಮೇಲುವಸ್ತ್ರದ ಮುಸುಕಿನಿಂದ ಒಪ್ಪುತ್ತಿದ್ದ ಒಬ್ಬ ಸ್ತ್ರೀಯು ತನ್ನ ಸೇನಾಪತಿಯನ್ನು ಕುರಿತು–''ವೀರ ನರಸಿಂಗ, ಸ್ವಲ್ಪ ತಾಳು, ಹಾಗೆ ಮುಂದುವರಿದು ಹೋಗಬೇಡ. ಕರ್ನಾಟಕದ ಸ್ತ್ರೀಪುರುಷರು ಅಂಥ ಪ್ರಸಂಗವೇ ಒದಗಿದಾಗ ಸತ್ವರಕ್ಷಣಕ್ಕಾಗಿ ಪ್ರಾಣತ್ಯಾಗಮಾಡಬಹುದಲ್ಲದೆ, ಅಷ್ಟಕ್ಕಿಷ್ಟಕ್ಕೆ ಪ್ರಾಣವನ್ನು ತ್ಯಜಿಸಹೋಗವದು ಸರಿಯಲ್ಲ, ನಮ್ಮ ಸತ್ವದ ಬಲದಿಂದ ನಾವು ಸ್ವಾತಂತ್ರ್ಯವನ್ನು ಪಡೆಯುವದು ನಮ್ಮ ಮುಖ್ಯೋದ್ದೇಶವಿರುವದಲ್ಲದೆ, ನಾವು ಸತ್ವಸ್ಥರೆಂದು ತೋರಿಸುವದಕ್ಕಾಗಿ ಪ್ರಾಣತ್ಯಾಗಮಾಡುವದು ನಮ್ಮ ಮುಖ್ಯೋದ್ದೇಶವಲ್ಲ; ತನ್ನ ರಾಷ್ಟ್ರದ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಸರ್ವಸ್ವದ ತ್ಯಾಗಮಾಡಬೇಕಾದ್ದರಿಂದ, ತನ್ನ ಸತ್ವಹಾನಿಯಾಗುವದರಿಂದ ರಾಷ್ಟ್ರಕ್ಕೆ ಸ್ವಾತಂತ್ರ್ಯ ಪ್ರಾಪ್ತಿಯಾಗುತ್ತಿದ್ದರೆ ಸತ್ವ ಹಾನಿಯನ್ನಾದರೂ ಮಾಡಿಕೊಳ್ಳಬಹುದು; ಆದರೆ ಸ್ವರ್ಗಲೋಕದ ಸಾಮ್ರಾಜ್ಯ ದೊರೆತರೂ ಅದಕ್ಕಾಗಿ ತನ್ನ ಸ್ವಾತಂತ್ರ್ಯದ ಹಾನಿಯನ್ನು ಮಾತ್ರ ಮಾಡಿಕೊಳ್ಳ ಲಾಗದು. ಆತ್ಮ ಸ್ವಾತಂತ್ರ್ಯವೇ ಆತ್ಮನ ಸರ್ವಸ್ವದ ಪೋಷಕವಾದದ್ದರಿಂದ ಸ್ವಾತಂತ್ರ್ಯಕ್ಕಾಗಿ ಏನನ್ನಾದರೂ ಬಿಡಬೇಕು; ಆದ್ದರಿಂದ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಹೆಣಗುವ ನಾವು ಈಗ ಖಾನಸಾಹೇಬರ ಮಾತಿನಂತೆ ಅವರ ಅಧೀನರಾಗೋಣ, ಆದರೆ ಶಸ್ತ್ರಗಳನ್ನು ಮಾತ್ರ ಕೆಳಗಿಡಲಾರೆವೆಂಬದನ್ನು ಖಾನರವರಿಗೆ ಸ್ಪಷ್ಟವಾಗಿ ಹೇಳು. ಅದಕ್ಕೆ ಅವರು ಒಪ್ಪಿಕೊಂಡರ ನಾವೆಲ್ಲರೂ ಖಾನರ ಸ್ವಾಧೀನವಾಗೋಣ, ಅವರು ಯಾವ ಕಾರಣದಿಂದಲೇ ಆಗಲಿ, ಬಹುಮಟ್ಟಿಗೆ ಸೌಜನ್ಯವನ್ನು ತೋರಿಸುತ್ತಿರುವದರಿಂದ, ಕಾರ್ಯಾರ್ಥಿಗಳಾದ ನಾವು ಅದರ ಉಪಯೋಗವನ್ನು ಮಾಡಿಕೊಳ್ಳತಕ್ಕದ್ದು. ನಿಷ್ಕಾರಣವಾಗಿ ನಮ್ಮ ಮಾನ ಮರ್ಯಾದೆಗೆ ಬಾಧೆ ಬಂದರೆ ಇಂದೇ ತೋರಿಸುವ ಕೌರ್ಯ–ಸಾಹಸಗಳನ್ನು ಅಂದು ತೋರಿಸಿದರಾಯಿತು''

ಎಂದು ನುಡಿಯಲು, ''ಮಹದಾಜ್ಞೆಯೆಂ''ದು ವೀರನರಸಿಂಗನು ಸಮ್ಮತಿಸಿದನು. ಹೀಗೆ ಆ ವಸ್ತ್ರಾಚ್ಛಾದಿತ ಸ್ತ್ರೀಯು ದಿಟ್ಟತನದಿಂದ ಮಾತಾಡಿದ್ದನ್ನು ಕೇಳಿ ಅಬದುಲರಹಿಮಾನನು ಆಶ್ಚರ್ಯಪಟ್ಟು, ತನ್ನ ಬಳಿಯಲ್ಲಿ ನಿಂತಿದ್ದ ಆ ಇಬ್ಬರು ತರುಣ ಫಕೀರರ ಕಡೆಗೆ ಆಶ್ಚರ್ಯದಿಂದ ನೋಡಲು, ಅವರಲ್ಲಿ ಮೊದಲನೆಯ ಫಕೀರನು ಖಾನನಿಗೆ-''ಆ ಮಾತು ಹಾಗೆಯೇ ಸರಿ. ಅಂಥ ಪ್ರಸಂಗ ಒದಗಿದರೆ ಈ ರಾಣೀ ವಾಸದ ಜನರು ವೀರಾಧಿವೀರರಾದ ಪುರುಷರ ಮುಗ್ಗಲು ಮುಡಚಲಿಕ್ಕೂ ಹಿಂದೆಮುಂದೆ ನೋಡರು; ಆದ್ದರಿಂದ ಸದ್ಯಕ್ಕೆ ಇವರನ್ನು ಸೆರೆಹಿಡಿದು ಛಾವಣಿಗಂತು ಒಯ್ಯೋಣ'' ಎಂದು ಹೇಳಲು, ಅಬದುಲರಹಿಮಾನನು ಮನಸ್ಸಿನಲ್ಲಿ-''ಈ ಜನರನ್ನು ಹೀಗೆಯೇ ನಮ್ಮ ಪಾಳಯಕ್ಕೆ ಹಿಡಿದೊಯ್ದು ಇವರ ವಿಚಾರವನ್ನು ನಾಳೆಗೆ ಮಾಡೋಣ, ಈಗಲೇ ಶಸ್ತ್ರಗಳನ್ನು ಕೆಳಗಿಡಿಸುವ ಆಗ್ರಹಕ್ಕೆ ಹೋಗುವದು ಸರಿಯಲ್ಲ, ಇಂದು ಮಾಡುವ ಕೆಲಸವನ್ನು ನಾಳೆಗೆ ಮಾಡಿದರಾಯಿತು; ಇಷ್ಟು ಉದಾತ್ತವಿಚಾರದ ಮಾತುಗಳನ್ನಾಡಿದ ಸ್ತ್ರೀರತ್ನವನ್ನು ನಾನು ಹ್ಯಾಗಾದರೂ ಮಾಡಿ ಸಂಪಾದಿಸಲೇಬೇಕು. ಹಾಗೆ ಸಂಪಾದಿಸುವಾಗ ಪ್ರಾಣಹಾನಿಯಾದರೂ ನಾನು ಲೆಕ್ಕಿಸೆನು'' ಎಂದು ಯೋಚಿಸಿ, ''ನೀವೆಲ್ಲರೂ ಸಶಸ್ತ್ರವಾಗಿಯೇ ನಮ್ಮ ಸ್ವಾಧೀನವಾಗ ಬೇಕೆ''ಂದು ಹೇಳಲು, ಅವರು ಕೂಡಲೇ ಅವನ ಸ್ವಾಧೀನವಾದರು! ಸೇರಿಗೆ ಸವ್ವಾಸೇರು ಗಂಟುಬಿದ್ದರೆ ಹೀಗಾಗುವದೇ ಸರಿ!

## ಜಯಕ್ಕಾಗಿ ಅಪಜಯ!

ಅಬದುಲರಹಿಮಾನನ ದಂಡಿನ ಛಾವಣಿಯ ಭವ್ಯವಾದ ದರ್ಬಾರದ ಡೇರೆಯು ಬೆಳಗಿನ ಎಂಟು ಗಂಟೆಯ ಸಮಯವಾಗಿದೆ. ನಿನ್ನೆ ರಾತ್ರಿ ಹಿಡಿದು ತಂದಿದ್ದ ರಾಣೀವಾಸದ ಸತ್ಯಸ್ವರೂಪವನ್ನು ತಿಳಿಯಲು ಖಾನನು ಆತುರಪಡುತ್ತಲಿದ್ದಾನೆ. ಆತನ ಅಪ್ಪಣೆಯಂತೆ ಆತನ ಪ್ರಚಂಡ ಸೈನ್ಯದೊಳಗಿನ ಮುಖ್ಯ ಮುಖ್ಯ ಸರದಾರರೂ, ಶೂರ ದಂಡಾಳುಗಳೂ ಶಸ್ತ್ರಪಾಣಿಗಳಾಗಿ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡಿದ್ದಾರೆ. ಡೇರೆಯು ಜನರಿಂದ ಕಿಕ್ಕಿರಿದು ತುಂಬಿಹೋಗಿದೆ. ಮುಸಲ್ಮಾನ ದಂಡಾಳುಗಳು ಡೇರೆಯ ಹೊರಗೆ ಶಸ್ತ್ರಪಾಣಿಗಳಾಗಿ ಸುವ್ಯವಸ್ಥೆಯಿಂದ ನಿಂತು ಕೊಂಡಿದ್ದಾರೆ; ಅವರ ಜತೆಯಲ್ಲಿಯೇ ತಿರುವೇಂಕಟನ ಶೂರ ಕನ್ನಡಿಗರ ಸೈನ್ಯವೂ ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ತನ್ನ ಒಡೆಯನ ಸಂಕೇತದಂತೆ ಕಾರ್ಯ ಮಾಡಲು ಸಜ್ಜಾಗಿ ನಿಂತುಕೊಂಡಿದೆ. ಖಾನನು ಕರೆಕಳುಹಿದ್ದರಿಂದ ತಿರುವೇಂಕಟನೂ, ಶ್ರೀಕಂಠ ಶಾಸ್ತ್ರಿಯೂ ತಮ್ಮ ಶೂರ ಸರದಾರರೊಡನೆ ದರ್ಬಾರಕ್ಕೆ ಬಂದು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡಿದ್ದಾರೆ. ನಿನ್ನೆ ಬಂದಿದ್ದ ಆ ತೇಜಸ್ವಿಗಳಾದ ತರುಣ ಫಕೀರರಿಬ್ಬರೂ ಖಾನನ ಎಡ ಬಲಗಳಲ್ಲಿ ನಿಂತು ಕೊಂಡಿದ್ದಾರೆ. ಹೀಗಿರುವಾಗ ಅಬದುಲರಹಿಮಾನನು ಸಭಿಕರನ್ನು ಕುರಿತು-''ವೀರರೇ, ನಿನ್ನೆ ರಾತ್ರಿ ಹಿಡಿದುತಂದಿದ್ದ ರಾಣೀವಾಸದ ಸತ್ಯಸ್ವರೂಪವನ್ನು ಕುರಿತು

ಈಗ ವಿಚಾರಿಸಬೇಕಾಗಿದೆ. ನಿನ್ನೆ ನಮ್ಮ ಬಳಿಗೆ ಆಕಸ್ಮಾತ್ತಾಗಿ ಬಂದಿದ್ದ ಈ ತರುಣ ಫಕೀರರು, ಹಾಗು ನಮ್ಮ ದೋಸ್ತ ತಿರುವೇಂಕಟ ಸರದಾರರು ಹೇಳಿದ ಸುದ್ದಿಗಳಿಂದಲೇ ಈ ಸುಯೋಗವು ಬಂದೊದಗಿರುವದು. ಈಗಿನ ನಮ್ಮ ವಿಚಾರಣೆಯ ಕಾರ್ಯದಲ್ಲಿಯಾದರೂ ನಮ್ಮ ಆ ಸರದಾರರೂ, ತರುಣ ಫಕೀರರೂ ಯೋಗ್ಯ ಸಹಾಯ ಮಾಡುವರೆಂದು ನಂಬಿದ್ದೇನೆ. ನಮ್ಮ ಮೇಲೆ ಸಾಗಿಬರುತ್ತಿದ್ದ ಹಿಂದೂ ಜನರ ಗುಪ್ತ ಸೈನ್ಯವನ್ನು ನಮ್ಮ ತಿರುವೇಂಕಟ ಸರದಾರರ ಸೈನ್ಯವು ಹೊರಗಿನಿಂದ ಹೊರಗೇ ಹೊಡೆದೋಡಿಸಿದ್ದು ಬಹಳ ಸಂತೋಷದ ಮಾತು! ನಮ್ಮ ತಿರುವೇಂಕಟ ಸರದಾರರು ದೊಡ್ಡ ಮನಸ್ಸಿನಿಂದ ಈ ಮಹತ್ಕಾರ್ಯ ಮಾಡಿದ್ದಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿದ್ದೇನೆ. ಕೋಟೆಯೊಳಗಿನ ಸಂಪತ್ತೆಲ್ಲ ರಾಣೀವಾಸದೊಡನೆ ಈಗ ಹೊರಬಿದ್ದು ಬಂದಿರುವದರಿಂದ, ಈಗ ಕಂಪಲಿಯ ಕೋಟೆಯೆಂದರೆ, ತಿರುಳೆಲ್ಲ ಹೊರಟು ಹೋಗಿ ಬರಿಯ ಸಿಪ್ಪೆಯ ಟೊಕಳಿ ಉಳಿದ ಹಾಗಾಗಿರುತ್ತದೆ. ಅದನ್ನು ನಮ್ಮ ಬಾದಶಹರ ಪರಾಕ್ರಮಿಯಾದ ಸೈನ್ಯವು ಸಹಜವಾಗಿ ಊಬಿ ಹಾರಿಸಬಹುದು; ಇದೆಲ್ಲ ಸರಿ; ಆದರೆ ಮಹಾ ತಂತ್ರಗಾರನಾದ ಮಾಧವ ಬ್ರಾಹ್ಮಣನ ತಂತ್ರದ ನೆಲೆಯನ್ನು ತಿಳಿಯುವದು ಬಹು ಕಷ್ಟವಾದದ್ದರಿಂದ, ರಾಣೀವಾಸವೆಂದು ಕರೆಸಿಕೊಂಡು ಗೋಷೆಯ ನೆವದಿಂದ ನಮಗೆ ಸಂಪೂರ್ಣ ಮರೆಯಾಗಿರುವ ಈ ಜನರು ನಿಜವಾಗಿ ಸ್ತ್ರೀಯಾದರೂ ಇರುವರೋ ಇಲ್ಲವೋ ಎಂಬದನ್ನು ಪರೀಕ್ಷಿಸಬೇಕಾಗಿದೆ. ನಿನ್ನೆ ರಾತ್ರಿ ಮೇಣೆಯಲ್ಲಿ ಕುಳಿತೇ ಮಾತಾಡಿದ ಒಬ್ಬ ಸ್ತ್ರೀಯ ಗಂಭೀರ ಭಾಷಣವನ್ನು ಕೇಳಿದಾಗಿನಿಂದ ನನ್ನ ಮತಿಯು ಗುಂಗಾಗಿಹೋಗಿದೆ. ದನಿಯೇನೋ ಸ್ತ್ರೀಯರದು; ಆದರೆ ಮಾತುಗಳು ವೀರಾಗ್ರಣೀ ಪುರುಷರಿಗೆ ಮಾತ್ರ ಒಪ್ಪಬಹುದಾದ ಮುತ್ಸದ್ದಿತನದವಾದದ್ದವು. ದನಿಯ ಮೇಲಿಂದ ಅವಳೊಬ್ಬಳು ಮಾತ್ರ ಸ್ತ್ರೀಯಿರುವಳೆಂಬುದು ನನಗೆ ಗೊತ್ತಾಗಿದೆ; ಆದರೆ ಉಳಿದ ಈ ಸ್ತ್ರೀಯರೆನಿಸುವ ಮೇಣೆಯೊಳಗಿನ ಜನರೂ, ಅವರ ದಾಸಿಯರೆನಿಸಿಕೊಳ್ಳುತ್ತಿರುವ ಬುರುಕೆ ಹಾಕಿಕೊಂಡಿರುವ ಜನರೂ ನಿಜವಾಗಿ ಸ್ತ್ರೀಯರೆ ಇರಬಹುದೇ? ಮಾತಾಡಿದ ಆ ವ್ಯಕ್ತಿಯು ದನಿಯ ಮೇಲಿಂದ ಸ್ತ್ರೀಯಾಗಿ ತೋರುತ್ತಿದ್ದರೂ, ಅದರ ಧೈರ್ಯವು ಎಷ್ಟು ವಿಲಕ್ಷಣವಾದದ್ದು! ಈಗ ನಾವು ಮಾಡಿರುವ ದಂಡಯಾತ್ರೆಯಲ್ಲಿ ಒಂದಕ್ಕಿಂತ ಒಂದು ವಿಲಕ್ಷಣ ಪ್ರಸಂಗಗಳೇ ಒದಗುತ್ತಲಿರುವವು. ಇವೆಲ್ಲ ಶತ್ರುಗಳ ಗೂಢ ತಂತ್ರಗಳಾಗಿರಬಹುದೋ? ಅಥವಾ ನಾವು ತಿಳಿದುಕೊಂಡಿರುವಂತೆ ದುರ್ಬಲರಾಗಿರುವ ಕನ್ನಡಿಗರು ನಮ್ಮಿಂದ ಪಾರಾಗಿ ಹೋಗುವದಕ್ಕಾಗಿ ಕೈಲಾಗದೆ ಹೀಗೆ ಒದ್ದಾಡುತ್ತಿರಬಹುದೋ? ಹಾಗೆ ಅವರು ದುರ್ಬಲರಾಗಿದ್ದರೆ, ಅಥವಾ ಒದ್ದಾಡುವವರಾಗಿದ್ದರೆ ಒಬ್ಬ ಸ್ತ್ರೀಯು ಕೂಡ ಶಸ್ತ್ರಗಳನ್ನು ಕೆಳಗಿಡಲಿಕ್ಕೆ ಒಪ್ಪದಿರುವ ಕಾರಣವೇನು? ನನಗಂತೂ ಇದರ ಸತ್ಯಸ್ವರೂಪವು ತಿಳಿಯಲೊಲ್ಲದು'' ಎಂದು ನುಡಿದು ತಿರುವೇಂಕಟನನ್ನು ಕುರಿತು–''ಸರದಾರಸಾಹೇಬ, ಈ ಸಂಗತಿಗಳನ್ನು ಕುರಿತು ನೀವೇನು ತರ್ಕಿಸುವಿರಿ?'' ಎಂದು ಕೇಳಲು, ತಿರುವೇಂಕಟನು–''ಖಾವಿಂದ, ಮಾಧವಾಚಾರ್ಯರ ತಂತ್ರದಿಂದ ನಾನೂ ಮೂಢನಾಗಿ ಹೋಗಿದ್ದೇನೆ. ಇಷ್ಟರಮಟ್ಟಿಗೆ ಕನ್ನಡಿಗರ ಬಲವು

ಹೆಚ್ಚಿರಬಹುದೆಂಬದರ ಗಂಧವು ಕೂಡ ನನಗೆ ಹತ್ತಿದಿಲ್ಲ. ಈಗ ಎತ್ತ ನೋಡಿದರೂ ಮಾಧವಾಚಾರ್ಯರು ಒಡ್ಡಿದ ಬಲೆಯೇ ಕಾಣುತ್ತದೆ; ಆದರೂ ಈಗ ಕೋಟೆಯ ಗುಪ್ತದ್ವಾರದಿಂದ ಹೊರಬಿದ್ದು ಹೋಗುತ್ತಿದ್ದ ಇದು ನಿಜವಾಗಿಯೇ ರಾಣೀ ವಾಸವಿರಬಹುದಾಗಿ ತೋರುತ್ತದೆ. ಅಷ್ಟು ದಿಟ್ಟತನದಿಂದ ಮಾತಾಡಿದ ತರುಣಿಯು ರಾಜಪುತ್ರಿಯಾದ ಪದ್ಮಿನಿಯೇ ಇರಬಹುದು. ಅಂಥ ವೀರ ಕ್ಷತ್ರಿಯ ಪುತ್ರಿಯಿಂದಲ್ಲದೆ ಉಳಿದ ಸಾಮಾನ್ಯ ಸ್ತ್ರೀಯರಿಂದ ಅಂಥ ಪೌರುಷದ ಮಾತುಗಳು ಹೊರಡಲಾರವು. ಒಬ್ಬ ಮಾಧವಾಚಾರ್ಯರು ಸೆರೆಯಾಳಾಗಿ ಹೋದದ್ದರಿಂದ ಇಡಿಯ ಕರ್ನಾಟಕದ ಗಂಡು ಹೆಣ್ಣು ಬಡಿದು ಎಬ್ಬಿಸಿದ ಕೃಷ್ಣಸರ್ಪದಂತೆ, ರೊಚ್ಚಿಗೆದ್ದ ಹಾಗೆ ತೋರುತ್ತದೆ. ಮಾಧವಾಚಾರ್ಯರ ಬಂಧವಿಮೋಚನೆ ಯಾಗುವವರೆಗೆ ಆ ಕರ್ನಾಟಕರೂಪ ಕೃಷ್ಣ ಸರ್ಪವು ಕೆಂಪಡರಿದ ಕಣ್ಣುಗಳಿಂದ ನಮ್ಮನ್ನು ನೋಡುತ್ತ ನಮ್ಮ ಮೇಲೆ ವಿಷಕಾರದೆ ಬಿಡದು. ಮಾಧವಾಚಾರ್ಯರು ಹೊರಟುಹೋಗಿರುವ ಈಗಿನ ಕಾಲದಲ್ಲಿ ಕರ್ನಾಟಕವು ಜೀವದ ಹಂಗುದೊರೆದು ನಿಂತಂತೆ ತೋರುತ್ತದೆ. ಖಾನಸಾಹೇಬ, ಪ್ರಾಣಭಯವನ್ನು ಬಿಟ್ಟವರು ಬೇರೆ ಯಾವ ಭಯಕ್ಕೆ ಭೀತರಾದಾರು? ಆದರೂ ಬಾದಶಾಹಿಯ ಹಿತಚಿಂತಕರಾದ ನಾವು ಭಯಪಡುವ ಕಾರಣವಿಲ್ಲ. ಕೃಷ್ಣಸರ್ಪವು ಎಷ್ಟು ಭಯಂಕರವಾದರೂ ಗರುಡನ ಮುಂದೆ ಅದರ ಆಟ ನಡೆಯದಿರುವ ಹಾಗೆ, ನಮ್ಮ ಮುಂದೆ ರೊಚ್ಚಿಗೆದ್ದ ಕನ್ನಡಿಗರ ಆಟವು ನಡೆಯಲಾರದು. ಪ್ರತಿಜ್ಞೆ ಮಾಡಿರುವಂತೆ ನಾನು ಈ ಪ್ರತ್ಯಕ್ಷ ಯುದ್ಧವ್ಯಾಪಾರದಲ್ಲಿ ಸೇರದ ಹಾಗಿದ್ದರೂ, ತಮಗೆ ನನ್ನ ಸೈನ್ಯದ ಸಹಾಯವು ತಪ್ಪದೆ ಒದಗುವದು. ಈಗ ನಮ್ಮ ಮೇಲೆ ಸಾಗಿಬರುತ್ತಿದ್ದ ಕನ್ನಡಿಗರ ಸೈನ್ಯವನ್ನು ನಮ್ಮ ಶೂರ ದಂಡಾಳುಗಳು ಅತ್ತಿಂದತ್ತೇ ಹೊಡೆದೋಡಿಸಿದಂತೆ, ಈಗಿನ ಪ್ರಸಂಗದಲ್ಲಿ ಏನಾದರೂ ಘಾತಪಾತಗಳು ಒದಗಿದರೆ ಅದನ್ನು ನೋಡಿಕೊಳ್ಳುವದಕ್ಕಾಗಿ ನಮ್ಮ ಕೆಲವು ಶೂರ ದಂಡಾಳುಗಳು ಹೊರಗೆ ಸಿದ್ಧವಾಗಿ ನಿಂತುಕೊಂಡಿದ್ದಾರೆ; ಆದರೆ ಖಾವಿಂದ, ಈಗ ತಾವು ರಾಣೀವಾಸದ ವಿಚಾರಣೆಯ ಉಸಾಬರಿಗೆ ಹೋಗದೆ, ಅದನ್ನು ಬಲವಾದ ಕಾವಲಿನಲ್ಲಿಟ್ಟು, ಮೊದಲು ಕಂಪಲಿಯ ಕೋಟೆಯನ್ನು ಸ್ವಾಧೀನಪಡಿಸಿಕೊಳ್ಳುವ ಯತ್ನ ಮಾಡಬೇಕು. ಹೊರಗಿನಿಂದ ನಮ್ಮನ್ನು ಮುತ್ತುತ್ತಿದ್ದ ಬುಕ್ಕನ ಸೈನ್ಯವು ಅತ್ತಿಂದತ್ತೇ ಓಡಿಹೋದ್ದದ್ದರಿಂದ ಈಗ ಕೋಟೆಯನ್ನು ಸ್ವಾಧೀನಪಡಿಸಿಕೊಳ್ಳಲಿಕ್ಕೆ ವಿಳಂಬವಾಗದು. ಈಗ ನಮ್ಮ ಕೈಸೇರಿರುವ ರಾಣೀವಾಸದಲ್ಲಿ ರಾಜಪುತ್ರಿಯಾದ ಪದ್ಮಿನಿಯೂ, ಮುಖ್ಯ ಮುಖ್ಯ ಸ್ತ್ರೀಯರೂ ಇರುವರು. ಅವರನ್ನು ಸುರಕ್ಷಿತ ಸ್ಥಳಕ್ಕೆ ಮುಟ್ಟಿಸುವದಕ್ಕಾಗಿ ಹುಕ್ಕನ್ನು ಸ್ವತಃ ಬಂದಿರಲೇಬೇಕು. ಈಗ ಅವರೆಲ್ಲರೂ ಸಂಪೂರ್ಣವಾಗಿ ನಮ್ಮ ಕೈಸೇರಿರುವದರಿಂದ ಅವರ ಚಿಕಿತ್ಸೆಗೆ ಬೀಳದೆ ಮೊದಲು ಕೋಟೆಯನ್ನು ಸ್ವಾಧೀನ ಪಡಿಸಿಕೊಳ್ಳುವದು ನೆಟ್ಟಗೆ ಕಾಣುತ್ತದೆ. ಪದ್ಮಿನಿಯೂ, ಹುಕ್ಕನೂ ನಮ್ಮ ಕೈಸೇರಿರುವದರಿಂದ ಕೋಟೆಯು ನಮ್ಮ ಕೈಸೇರಿದ ಹಾಗೆಯೇ ಆಗಿರುವದು; ಅದನ್ನಷ್ಟು ಪ್ರತ್ಯಕ್ಷ ಸ್ವಾಧೀನಪಡಿಸಿಕೊಂಡು ಮುಖ್ಯರನ್ನು ಸೆರೆಹಿಡಿದರೆ ಬಂದ ಕೆಲಸವಾದಂತಾಯಿತು.''

ಈ ಮೇರೆಗೆ ತಿರುವೇಂಕಟನು ಹೇಳಿದ್ದು ಅಬದುಲರಹಿಮಾನನ ಮನಸ್ಸಿಗೆ ಬರಲಿಲ್ಲ; ಯಾಕಂದರೆ ಮೆಚ್ಚಿದವರಿಗೆ ಹೆಗ್ಗಣವೇ ಮುದ್ದೆನ್ನುವಂತೆ ಪದ್ಮಿನಿಯನ್ನು ಮೊದಲು ಕಣ್ಣುಮುಟ್ಟಿ ನೋಡಬೇಕೆಂಬ ಅವನ ಕ್ಷುದ್ರವಿಚಾರವೇ ಅವನಿಗೆ ಯೋಗ್ಯವಾಗಿ ತೋರಿತು. ಇದಲ್ಲದೆ ಒಮ್ಮೆ ತಿರುವೇಂಕಟನ ವಿಷಯವಾಗಿ ಸಂಶಯಪಟ್ಟಿದ್ದ ಅವನ ಮನಸ್ಸು ಅಷ್ಟಕ್ಕಿಷ್ಟಕ್ಕೆ ಅವನ ವಿಷಯ ವಾಗಿ ಸಂಶಯಗ್ರಸ್ತವಾಗುತ್ತಲಿತ್ತು, ಅವನ ಮನಸ್ಸಿನಲ್ಲಿ–''ಈ ತಿರುವೇಂಕಟನು ಹಿಂದುವಾಗಿರುವದರಿಂದ, ಕೂಡಿದ ದರ್ಬಾರದಲ್ಲಿ ಕುಲೀನ ಹಿಂದೂ ಸ್ತ್ರೀಯ ಅಪಮಾನ ವಾಗುವದು ಅವನ ಮನಸ್ಸಿಗೆ ಬರುತ್ತಿರಲಿಕ್ಕಿಲ್ಲ; ಅಥವಾ ಮೂಲತಃ ಪದ್ಮಿನಿಯು ಇಲ್ಲದಿರುವದು ಅವನಿಗೆ ಗೊತ್ತಿದ್ದು, ಈಗ ರಾಣೀವಾಸವನ್ನು ಪರೀಕ್ಷಿಸುವದರಿಂದ ಮೋಸವು ಹೊರಬಿದ್ದೀತೆಂಬ ಭಯವು ಅವನನ್ನು ಬಾಧಿಸುತ್ತಿರಬಹುದು; ಅಥವಾ, ತಾನು ಕಣ್ಣಿಟ್ಟಿದ್ದ ಪದ್ಮಿನಿಯು ಅನ್ಯರ ಕಣ್ಣಿಗೆ ಬೀಳುವದು ಈ ದ್ರೋಹಿಯಾದ ಕ್ಷತ್ರಿಯನ ಮನಸ್ಸಿಗೆ ಬರುತ್ತಿರಲಿಕ್ಕಿಲ್ಲ; ಆದರೆ ಅವನ ವಿಚಾರವನ್ನು ಕಟ್ಟಿಕೊಂಡು ನಾನು ಮಾಡುವದೇನು? ಈಗಲೇ ರಾಣೀವಾಸವನ್ನು ಪರೀಕ್ಷಿಸುವದರಿಂದ ಎರಡರಲ್ಲಿ ಒಂದು ಕಾರ್ಯವಾಗಿ ನನ್ನ ಮನಸ್ಸಿಗೆ ಸಮಾಧಾನವಾಗುವದು. ಪದ್ಮಿನಿಯು ಇದ್ದರೆ ಆ ತೇಜಸ್ವಿನಿಯನ್ನು ನೋಡಿದ ಸಮಾಧಾನವು ನನಗಾಗುವದು; ಪದ್ಮಿನಿಯು ಇರದೆ ಶತ್ರುಗಳ ಮೋಸದಿಂದ ನಮ್ಮ ಸೈನ್ಯದಲ್ಲಿ ಸೇರಿ ಪ್ರಸಂಗದಲ್ಲಿ ಘಾತ ಮಾಡಬೇಕೆಂದು ಈ ತರುಣ ಫಕೀರರ ಮುಖಾಂತರ ಯೋಚಿಸಿದ್ದರೆ. ಅವರ ಆ ದುಷ್ಟತನವು ಬೈಲಿಗೆಬಿದ್ದು, ಈಗಲೇ ಅವರೆಲ್ಲರ ಶಾಸನ ಮಾಡಲಿಕ್ಕೆ ನನಗೆ ಅನುಕೂಲವಾಗುವದು. ಯಾರಿಗೆ ಗೊತ್ತು, ಆಕಸ್ಮಾತ್ ಹೊರಗಿನ ಹಿಂದೂ ಸೈನ್ಯವು ನಮ್ಮನ್ನು ಮುತ್ತಿ, ಕೋಟೆಯೊಳಗಿನವರೂ ನಮ್ಮನ್ನು ಹಣಿಯುವಾಗ ಈ ಇನ್ನೂರು ಮುನ್ನೂರು ಜನ ಆರಿಸಿದ ಶೂರರು ನಮ್ಮ ಗಂಟಲಿಗೆ ಗಾಣವಾಗಬಹುದು! ಆದ್ದರಿಂದ ಬಿಟ್ಟದ್ದು ಬಿಟ್ಟು, ಈಗಲೇ ರಾಣೀವಾಸವನ್ನು ಪರೀಕ್ಷಿಸಿಬಿಡುವೆನು'' ಎಂದು ಯೋಚಿಸಿ ತಿರುವೇಂಕಟನನ್ನು ಕುರಿತು–''ಸರದಾರಸಾಹೇಬ, ನಿಮ್ಮ ಮಾತು ಅಸಮರ್ಪಕವೆಂದು ನಾನು ಹೇಳುವದಿಲ್ಲ; ಆದರೆ ಈ ರಾಣೀವಾಸದ ಜನರ ಸಂಬಂಧದಿಂದ ಇಲ್ಲದ ಸಂಶಯಗಳು ನನ್ನನ್ನು ಬಾಧಿಸತೊಡಗಿವೆ; ಆ ಸಂಶಯ ನಿವಾರಣವಾಗದಿದ್ದರೆ ನನ್ನ ಮುಂದಿನ ಕಾರ್ಯಗಳಿಗೆ ತೊಂದರೆಯಾಗುವ ಹಾಗಿರುವದು; ಆದ್ದರಿಂದನ ನಾನು ಈಗಲೇ ರಾಣೀವಾಸವನ್ನು ಪರೀಕ್ಷಿಸಿಬಿಡುವೆನು. ಪದ್ಮಿನಿಯೂ, ಬೇರೆ ರಾಜ ಸ್ತ್ರೀಯರೂ, ಅವರ ದಾಸಿಯರೂ ಇಷ್ಟೇ ಜನರು ದರ್ಬಾರಕ್ಕೆ ಬರಲಿ; ಅವರ ರಕ್ಷಕರ ಅವಶ್ಯಕತೆಯಿಲ್ಲ; ನನಗೆ ಸಂಶಯ ಬಂದಿರುವದು ಗೋಷೆಯ ಜನರ ಸಂಬಂಧದಿಂದಷ್ಟೇ! ಗೋಷೆಯ ಜನರು ಸ್ತ್ರೀಯರಿರುವದರ ಬದಲು ಪುರುಷರಿರಬಹುದೆಂಬ ಸಂಶಯವು ನನ್ನನ್ನು ಬಾಧಿಸತೊಡಗಿದೆ. ಇದಲ್ಲದೆ ಸಶಸ್ತ್ರ ಸೆರೆಯಾಳುಗಳಿಂದ ಪ್ರಸಂಗವಶಾತ್ ಅನರ್ಥವಾಗುವ ಪ್ರಸಂಗವಿರುವದರಿಂದ, ರಾಣೀವಾಸದ ರಕ್ಷಕರೆಲ್ಲರ ಶಸ್ತ್ರಗಳನ್ನು ಕಸಿದುಕೊಳ್ಳಬೇಕಾಗುವದು; ಆದ್ದರಿಂದ ಈಗ ನಮ್ಮ ಯವನ ಸೈನ್ಯಭಾಗವನ್ನು ಕಳಿಸಿ ಹಿಂದೂ ಸೈನ್ಯವನ್ನು ನಿಶ್ಯಸ್ತ್ರ ಮಾಡಿಸಿ, ರಾಣೀವಾಸದ

ಸ್ತ್ರೀಜನವನ್ನು ಹಿಡತರಿಸಿ ಪರೀಕ್ಷಿಸುವೆನು'' ಎಂದು ಹೇಳಲು, ತಿರುವೇಂಕಟನು ಗಾಂಭೀರ್ಯದಿಂದ–''ತಮ್ಮ ಚಿತ್ತ; ನನಗೆ ಹಿತವಾಗಿ ತೋರಿದ್ದನ್ನು ನಿಮಗೆ ನಾನು ಹೇಳಿದೆನು. ನಿಮಗೆ ಹಿತವಾಗಿ ತೋರಿದಂತೆ ನೀವು ಮಾಡುವಾಗ ನಾನು ನೋಡುತ್ತ ಕುಳಿತುಕೊಂಡ ರಾಯಿತು; ಆದರೂ ಇನ್ನೊಮ್ಮೆ ಸ್ಪಷ್ಟವಾಗಿ ಹೇಳುವೆನು, ರಾಣೀವಾಸವನ್ನು ಈಗ ಪರೀಕ್ಷಿಸುವದರಿಂದ ನಿಮಗೆ ಸರ್ವಥಾ ಹಿತವಾಗದು!'' ತಿರುವೇಂಕಟನ ಮಾತನ್ನು ಅಬದುಲ ರಹಿಮಾನನು ಲಕ್ಷಿಸಲಿಲ್ಲ; ಆ ರಜಪೂತ ಸರದಾರನು ಬೇಡೆಂದು ಹೇಳಿಹೇಳಿದಂತೆ ಆ ಯವನ ಸೇನಾಪತಿಯ ಹಟವು ಹೆಚ್ಚಾಗುತ್ತ ಹೋಯಿತು. ಆತನು ತಿರುವೇಂಕಟನ ಮಾತನ್ನು ಲಕ್ಷಿಸದೆ ತನ್ನ ಒಬ್ಬ ಶೂರ ಸರದಾರನನ್ನು ಕುರಿತು–''ರಣಮಸ್ತಖಾನ, ಹೋಗು; ನಿನ್ನ ಶೂರ ಯವನ ಪರಿವಾರವನ್ನು ಕರೆದುಕೊಂಡು ರಾಣೀವಾಸದ ರಕ್ಷಕರನ್ನು ನಿಶ್ಯಸ್ತ್ರವಾಗಿ ಮಾಡಿ, ರಾಣೀವಾಸವನ್ನು ಹಿಡಿದುಕೊಂಡು ಬಾ. ಅವರು ನಿಶ್ಯಸ್ತ್ರರಾಗುವದಿಲ್ಲವೆಂದು ಚಂಡಿತನ ಮಾಡಿದರೆ ಸಶಸ್ತ್ರರಾಗಿಯೇ ಅವರನ್ನು ಹಿಡಿದುಕೊಂಡು ಬಾ, ನಾನು ಇಲ್ಲಿ ಅವರ ಶಸ್ತ್ರಗಳನ್ನು ಕೆಳಗಿಡಿಸುವೆನು; ಅಥವಾ ನಮ್ಮ ಪ್ರಚಂಡ ಸೈನ್ಯದ ಮಧ್ಯದಲ್ಲಿ ಅವರು ಸಶಸ್ತ್ರರಾಗಿ ಇದ್ದು ಮಾಡುವದಾದರೂ ಏನು? ಈ ರಾಣೀ ವಾಸವೇ ನನಗೆ ಮೋಸದ್ದಾಗಿ ತೋರುವದರಿಂದ ಮೊದಲು ಅವರ ಸತ್ಯಸ್ವರೂಪವನ್ನು ಅರಿತುಬಿಡುವೆನು. ಅದು ರಾಣೀವಾಸವಾಗಿರದೆ, ಮೋಸದಿಂದ ನಮ್ಮ ಸೈನ್ಯಮಧ್ಯದಲ್ಲಿ ಸೇರಿದ ವೀರರ ತಂಡವಾಗಿದ್ದರೆ, ಕೂಡಲೆ ಅವರೆಲ್ಲರನ್ನು ತುಂಡರಿಸಿ ಚಲ್ಲಲಿಕ್ಕೆ ನಮ್ಮ ಶೂರ ಸೈನಿಕರು ಹೊರಗೆ ಸಿದ್ಧರಾಗಿರುವರು'' ಎಂದು ಹೇಳಲು, ತನ್ನ ಮಾತನ್ನು ನಿರಾಕರಿಸಿದ್ದರಿಂದ ಸಿಟ್ಟಾದ ತಿರುವೇಂಕಟನು ಹೊರಟುಹೋಗಬೇಕೆಂದು ಮೇಲಕ್ಕೆದ್ದನು. ಆಗ ಶ್ರೀಕಂಠಶಾಸ್ತ್ರಿಯು ಆತನನ್ನು ಕುರಿತು–''ಸರದಾರಸಾಹೇಬ, ಹಾಗೆ ಹೋಗಲಾಗದು. ಬಂದತಪ್ಪಿಗೆ ಏನಾಗುವದೆಂಬುದನ್ನು ಸಂಪೂರ್ಣವಾಗಿ ನೋಡಿಯೇ ಹೋಗತಕ್ಕದ್ದು. ಕುಲೀನ ಸಾಧ್ವಿಯರು ಹಿಂದುಗಳೇ ಇರಲಿ, ಮುಸಲ್ಮಾನರೇ ಇರಲಿ, ಅವರ ಅಪಮಾನವು ಕೂಡಿದ ದರ್ಬಾರ ದಲ್ಲಾಗುವದು ಹಿತಕರವಲ್ಲ. ಈ ಮಾತು ಖಾನಸಾಹೇಬರ ಮನಸ್ಸಿನಲ್ಲಿ ಬಾರದಿದ್ದರೂ; ಕೌರವ ಸಭೆಯಲ್ಲಿ ಸಾಧ್ವೀ ದ್ರೌಪದಿಯ ಅಪಮಾನ ವಾದದ್ದರಿಂದುಂಟಾದ ಮಹಾ ಅನರ್ಥವನ್ನು ಅರಿತ ನಾವು ಹೀಗೆ ದುರ್ಲಕ್ಷಿಸಿ ಹೋಗತಕ್ಕದ್ದಲ್ಲ. ನಮ್ಮ ಶತ್ರುತ್ವವು ಸ್ತ್ರೀಯರ ಸಂಗಡ ಇರುವದಿಲ್ಲ, ಖಾಸಸಾಹೇಬರು ಹೇಳಿಕೇಳಿ ಸ್ತ್ರೀಯರ ವಿಷಯವಾಗಿ ಅನ್ಯಾಯ ಮಾಡುತ್ತಿರುವಾಗ, ನೀವು ಅದನ್ನು ದುರ್ಲಕ್ಷಿಸುವದು ನಿಮ್ಮ ಕ್ಷತ್ರಿಯತ್ವಕ್ಕೆ ಲಾಂಛನವಿರುವದು; ಆದ್ದರಿಂದ ಖಾನರ ಈ ಅನ್ಯಾಯವನ್ನು ನೀವು ಪ್ರತಿ ಬಂಧಿಸಲೇಬೇಕು. ಕ್ಷತ್ರಿಯ ವೀರಸ್ತ್ರೀಯರ, ಅದರಲ್ಲಿಯೂ ಕುಲೀನ ಮನೆತನದ ಹಿಂದೂ ಸ್ತ್ರೀಯರ ಈಅಪಮಾನವು ನಿಮ್ಮ ಕಿವಿಗೆ ಮುಟ್ಟಿ, ನೀವು ಸುಮ್ಮನೆ ಹೊರಟುಹೋಗಬಹುದೆ?'' ಅನ್ನಲು, ತಿರುವೇಂಕಟನು ತನ್ನ ಸ್ಥಳದಲ್ಲಿ ಕುಳಿತುಕೊಳ್ಳುತ್ತ ಅಬದುಲರಹಿಮಾನನನ್ನು ಕುರಿತು– ''ಖಾನಸಾಹೇಬ, ರಾಣೀವಾಸವನ್ನು ಪರೀಕ್ಷಿಸಲು ನನ್ನ ಪ್ರತಿಬಂಧವಿರುತ್ತದೆ. ನೀವು

ಪುರುಷವರ್ಗವನ್ನು ನಿಶ್ಯಸ್ತ್ರವಾಗಿಮಾಡಿರಿ, ಅಥವಾ ಅವರ ಶಿರಚ್ಛೇದ ಮಾಡಿರಿ ಆದರೆ ನೀವು ಸ್ತ್ರೀಜನರಮೇಲೆ ಮಾತ್ರ ಬಲಾತ್ಕಾರಮಾಡಲಾಗದು!

ಈ ಮೇರೆಗೆ ನೆರೆದ ಸಭೆಯಲ್ಲಿ ತನ್ನ ಕೈಕೆಳಗಿನ ಸರದಾರನು, ಅದರಲ್ಲಿ ಕಾಫರನಾದ ಹಿಂದುವು ತನ್ನ ಅಪಮಾನ ಮಾಡಿದ್ದಕ್ಕಾಗಿ ಶೂರನಾದ ಅಬದುಲರಹಿಮಾನನು ಕ್ರೋಧಸಂತಪ್ತನಾಗಿ ಅಂಗಾಲಿನಿಂದ ನಡು ನೆತ್ತಿಯವರೆಗೆ ಉರಿಯುತ್ತ ತಿರುವೇಂಕಟನನ್ನು ಕುರಿತು–''ತಿರುವೇಂಕಟ, ನಿಷ್ಕಾರಣವಾಗಿ ನನ್ನನ್ನು ಸಂತಾಪಗೊಳಿಸಿ ಅಂತಃಕಲಹವನ್ನುಂಟು ಮಾಡಬೇಡ. ಈ ಪ್ರಸಂಗದಲ್ಲಿ ಎಂಥ ಅನರ್ಥವಾದರೂ ನಾನು ರಾಣೀವಾಸವನ್ನು ಪರೀಕ್ಷಿಸಿಯೇ ತೀರುವೆನು. ನನ್ನ ಕಾರ್ಯಕ್ಕೆ ಅಡ್ಡಾಗುವವನು ಯಾವನಿದ್ದರೂ ಅವನನ್ನು ಮೊದಲು ತುಂಡರಿಸಿ ನನ್ನ ಕಾರ್ಯ ಮಾಡುವೆನು'' ಎಂದು ನುಡಿಯುತ್ತ ಖಡ್ಗವನ್ನು ಹಿರಿಯಲು, ತಿರುವೇಂಕಟನೂ ತನ್ನ ಖಡ್ಗವನ್ನು ಹಿರಿದನು. ಆಗ ಖಾನನ ಬಳಿಯಲ್ಲಿ ನಿಂತಿದ್ದ ಮೊದಲನೆಯ ಫಕೀರನು ಖಾನನನ್ನೂ, ತಿರುವೇಂಕಟನನ್ನೂ ಉದ್ದೇಶಿಸಿ ಗಾಂಭೀರ್ಯದಿಂದ– ''ಖಾನ ಸಾಹೇಬ, ಸರದಾರಸಾಹೇಬ, ಮೊದಲು ನಿಮ್ಮ ಕತ್ತಿಗಳನ್ನು ಒರೆಗಾಣಿಸಿರಿ, ನೀವು ಕಾಂಚನಗಡದಿಂದ ಸೈನ್ಯವನ್ನು ಕಟ್ಟಿಕೊಂಡು ಬಂದದ್ದು ಹೀಗೆ ಅಂತಃಕಲಹದಿಂದ ಪರಸ್ಪರರನ್ನು ನಾಶಗೊಳಿಸುವದಕ್ಕಾಗಿಯಲ್ಲ, ಕ್ಷತ್ರಿಯ ಪುತ್ರಿಯಾದ ಪದ್ಮಿನಿಯು ತನ್ನ ಮಾನರಕ್ಷಣ ಮಾಡಿಕೊಳ್ಳಲು ಸ್ವತಃ ಸಮರ್ಥಳಾಗಿರುವಾಗ ಖಾನಸಾಹೇಬ, ನೀವು ಆಕೆಯ ಮಾನವನ್ನು ಕಳೆಯಲು ಎಷ್ಟರವರು? ಸರದಾರಸಾಹೇಬ, ನೀವು ಆಕೆಯ ಮಾನವನ್ನು ಕಾಯಲು ಎಷ್ಟರವರು? ಈ ಪ್ರಸಂಗದಲ್ಲಿ ಸಾಧ್ವಿಯರ ಸತ್ವವು ಎಷ್ಟು ತೀಕ್ಷ್ಣವಾಗಿರುತ್ತದೆಂಬದನ್ನು ನೀವಿಬ್ಬರು ಸುಮ್ಮನೆ ಕುಳಿತುಕೊಂಡು ನೋಡಿರಿ; ಪತಿವ್ರತೆಯರ ಮಾನವನ್ನು ಕಾಯಲು, ಅಲ್ಲಾನು ಸಮರ್ಥನಿರುವನು. ಕಾಲಕ್ಕನುಸರಿಸಿ ಆಗುವದು ಆಗಿಯೇ ಆಗುತ್ತದೆ. ಪ್ರಸಂಗವಾದರೂ ಬರಲಿ. ಹ್ಯಾಗೂ ರಣಮಸ್ತಖಾನನು ರಾಣೀವಾಸವನ್ನು ಹಿಡತರಲು ಹೋಗಿದ್ದಾನೆ. ಏನಾಗುವದೋ ನೋಡೋಣ. ಖಾನಸಾಹೇಬ, ರಾಣೀವಾಸವನ್ನು ಪರೀಕ್ಷಿಸಿಯೇ ತೀರುವೆನೆನ್ನುವ ನಿಮಗೆ ನಾನು ಬೇಡೆನ್ನುವದಿಲ್ಲ; ಅದರಂತೆ ಸರದಾರಸಾಹೇಬ, ರಾಣೀವಾಸವನ್ನು ಪರೀಕ್ಷಿಸಲೇ ಕೊಡಲಿಕ್ಕಿಲ್ಲವೆನ್ನುವ ನಿಮಗೂ ನಾನು ಬೇಡೆನ್ನುವದಿಲ್ಲ; ಆದರೆ ತಕ್ಕ ಪ್ರಸಂಗ ಬರುವವರೊಳಗೆ ನಿಮ್ಮ ನಿಮ್ಮೊಳಗೆ ನೀವು ಹೊಡೆದಾಡಬೇಡಿರೆಂದು ಕೈ ಮುಗಿದು ಹೇಳುತ್ತೇನೆ. ಆರ್ಯಸ್ತ್ರೀಯರ ಮಹಾ ತೇಜಸ್ಸನ್ನು ನೋಡಿ ನಿಮ್ಮಿಬ್ಬರಿಗೂ ಬಟ್ಟುಕಚ್ಚುವ ಪ್ರಸಂಗ ಬರುವಾಗ ನೀವೇಕೆ ಇಷ್ಟು ಅಭಿಮಾನಕ್ಕೆ ಬಿದ್ದು ಬಡಿದಾಡುತ್ತೀರಿ? ಬರಲಿ, ಕರೆಯಹೋದ ರಣಮಸ್ತಖಾನನಾದರೂ ಬರಲಿ. ಅಲ್ಲಿಯವರೆಗೆ ನಿಮ್ಮ ನಿಮ್ಮ ಖಡ್ಗಗಳನ್ನು ಒರೆಗಾಣಿಸಿರಿ. ಖಡ್ಗ ಹಿರಿಯುವ ಪ್ರಸಂಗ ಬಾರದೆ ದುರಭಿಮಾನದಿಂದ ನಿಷ್ಕಾರಣ ಖಡ್ಗ ಹಿರಿಯುವ ನಿಮ್ಮನ್ನು ನೋಡಿ ನನಗೆ ನಗೆ ಬರುತ್ತದೆ'' ಎಂದು ನುಡಿಯಲು, ಆ ತೇಜೋವಂತನ ಮಾತಿನಿಂದ ಅವರಿಬ್ಬರು ವೀರರೂ ತಮ್ಮ ತಮ್ಮ ಖಡ್ಗಗಳನ್ನು ಒರೆಗಾಣಿಸಿ ಫಕೀರನ ಮೋರೆಯನ್ನು ನೋಡಿ ತಮ್ಮ ಮೋರೆಯನ್ನು ತಗ್ಗಿಸಿದರು. ಅಷ್ಟರಲ್ಲಿ

ರಾಣೀವಾಸದವರು ನಿಶ್ಯಸ್ತ್ರರಾಗಲು ಒಪ್ಪದ್ದರಿಂದ ರಣಮಸ್ತಖಾನನು ಅವರನ್ನು ಸಶಸ್ತ್ರವಾಗಿಯೇ ಕರೆದುಕೊಂಡು ಬಂದನು.

ಮಾಧವಾಚಾರ್ಯರ ಗರಡಿಯ ಮನೆಯಲ್ಲಿ ಆಡಿದ ಕನ್ನಡ ವೀರರ ಈಗಿನ ಶಿಸ್ತು ನೋಡುವ ಹಾಗಿತ್ತು. ಅವರು ರಾಣೀವಾಸದ ಜನರನ್ನೂ, ಅವರ ದಾಸಿಯರನ್ನೂ ನಡುವೆಹಾಕಿ ಅವರ ಸುತ್ತಲೂ ಶಸ್ತ್ರಧಾರಿಗಳಾಗಿ ನಿಂತು ಅವರನ್ನು ರಕ್ಷಿಸುತ್ತಿದ್ದರು. ಅವರ ಆ ಸಂತಪ್ತ ಮುಖಮುದ್ರೆಗಳನ್ನೂ, ಜಗತ್ತನ್ನೇ ತೃಣೀಕರಿಸುವ ಅವರ ಧೀರೋದಾತ್ತ ಭಾವವನ್ನೂ, ಸ್ವಾಮಿ ಕಾರ್ಯದಲ್ಲಿ ತಮ್ಮ ವಿತ್ತ ಜೀವಿತಗಳನ್ನು ತೃಣಸಮಾನವೆಂದು ತಿಳಿದಿರುವ ಅವರ ನಿಸ್ಪೃಹತೆಯ ಲಕ್ಷಣವನ್ನೂ ನೋಡಿ ಮುಸಲ್ಮಾನರು –ಬೆರಗಾದರು. ಅಬದುಲರಹಿಮಾನನ ದರ್ಬಾರದ ಡೇರೆಯು ದಟ್ಟವಾಗಿ ತುಂಬಿಹೋದದ್ದರಿಂದ ಈ ಎಲ್ಲ ಜನರನ್ನು ಅದು ಹಿಡಿಯುವಹಾಗಿದ್ದಿಲ್ಲ. ರಾಣೀವಾಸದ ಮಟ್ಟಿಗೆ ಒಳಗೆ ಬರಬೇಕೆಂದರೆ ಕನ್ನಡ ವೀರರು ಅದಕ್ಕೆ ಒಪ್ಪುವಹಾಗಿದ್ದಿಲ್ಲ. ರಾಣೀವಾಸದ ದಾಸಿಯರೆನಿಸಿಕೊಳ್ಳುವವರೇ ನೂರಾರು ಜನರಿದ್ದರು. ಈ ಸ್ಥಿತಿಯಲ್ಲಿ ಏನು ಮಾಡಬೇಕೆಂಬ ಬಗ್ಗೆ ಅಬದುಲರಹಿಮಾನನೂ ಆಲೋಚಿಸತೊಡಗಿದನು. ಡೇರೆಯನ್ನು ಬಿಟ್ಟು ಬೈಲಿಗೆ ದರ್ಬಾರ ನೆರೆಸುವದು ಯೋಗ್ಯವೆಂದು ಅವನಿಗೆ ತೋರಿ ಅವನು ಹಾಗೆ ಆಜ್ಞಾಪಿಸಿದನು. ಕೂಡಲೆ ಡೇರೆಯೊಳಗಿನ ಜನರು ಹೊರಗೆ ಬಂದು ಹೊಸ ದರ್ಬಾರು ನೆರೆಸುವಾಗ ಅವ್ಯವಸ್ಥೆಯೂ, ಗದ್ದಲವೂ ಉಂಟಾದವು! ಯಾರು ಎಲ್ಲಿ ಕುಳಿತುಕೊಳ್ಳ ಬೇಕೆಂಬ ತಾರತಮ್ಯ ಉಳಿಯಲಿಲ್ಲ, ಶತ್ರು–ಮಿತ್ರರು ಸರಿಬೆರಿಕೆಯಾಗಿ ಬೆರೆತರು. ಈ ಗದ್ದಲದಲ್ಲಿ ಮಾದರ ದುರಗಪ್ಪನು ಯಾವ ಮಾಯದಿಂದಲೋ ತನ್ನ ಶೂರ ಪರಿವಾರದೊಡನೆ ಜನರಲ್ಲಿ ಬೆರೆತುಕೊಂಡಿದ್ದನು. ಈ ಪ್ರಸಂಗದಲ್ಲಿ ಕನ್ನಡಿಗರ ಹೊಲೆಹದಿನೆಂಟು ಜಾತಿಯವರೂ ಒಟ್ಟುಗೂಡಿ ಕರ್ನಾಟಕದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವ ಪ್ರಸಂಗವಿದ್ದದ್ದರಿಂದ, ಇವರು ಸ್ಪೃಶ್ಯರು, ಇವರು ಅಸ್ಪೃಶ್ಯರು ಎಂಬ ವಿಚಾರವೇ ಜನರ ಮನಸ್ಸಿನಲ್ಲಿ ಬಂದಿದ್ದಿಲ್ಲ. ಈ ಪ್ರಸಂಗದಲ್ಲಿ ಕನ್ನಡಿಗರು ನಾವು ಸ್ವಾತಂತ್ರ್ಯ ರಕ್ಷಣಕ್ಕಾಗಿ ಮುಗಿಬಿದ್ದು ಹ್ಯಾಗೆ ಮುಂದುವರಿದೇವೆಂಬ ಒಂದೇ ಒಂದಾದ ವಿಚಾರದಿಂದ ಎಲ್ಲ ಜಾತಿಯವರು ಪ್ರೇರಿತರಾಗಿದ್ದರು. ಆಗಿನ ಕಾಲದಲ್ಲಿ ಎಲ್ಲಿಯ ಜಾತಿಭೇದ, ಎಲ್ಲಿಯ ಮತಭೇದ; ಮಾಧವಾಚಾರ್ಯರು ತಮ್ಮ ಉಪನ್ಯಾಸದಲ್ಲಿ ಅಸ್ಪೃಶ್ಯರೂ ಸ್ಪೃಶ್ಯರೂ ಮುಟ್ಟಿ ಕೆಲಸ ಮಾಡುವ ಪ್ರಸಂಗದಲ್ಲಿ ಮುಟ್ಟಿ ಕೆಲಸ ಮಾಡಬೇಕೆಂತಲೂ, ದೂರಿದ್ದು ಕೆಲಸ ಮಾಡುವ ಪ್ರಸಂಗದಲ್ಲಿ ದೂರ ಇದ್ದು ಕೆಲಸ ಮಾಡಬೇಕೆಂತಲೂ ಹೇಳಿದ್ದನ್ನು ಕನ್ನಡಿಗರು ಈಗ ಅಕ್ಷರಶಃ ಪಾಲಿಸುತ್ತಿದ್ದರು. ಬರಬರುತ್ತ ಕನ್ನಡ ಸೈನಿಕರ ಸಂಖ್ಯೆಯು ಹೆಚ್ಚಿತು. ಹೊಲೆಯನೂ, ಬ್ರಾಹ್ಮಣನೂ ಭುಜಕ್ಕೆ ಭುಜವಾನಿಸಿ ಪರಾಕ್ರಮ ತೋರಿಸುವ ಪ್ರಸಂಗದ ಎದುರು ನೋಡುತ್ತಿದ್ದರು. ಇತ್ತ ಅಬದುಲರಹಿಮಾನನ ಸೈನಿಕರೂ ಸಜ್ಜಾಗಿದ್ದರು. ಈ ಸ್ಥಿತಿಯನ್ನು ನೋಡಿ ಅಬದುಲರಹಿಮಾನನು ಮನಸ್ಸಿನಲ್ಲಿ ಬೆದರಿದರೂ, ಅವನು ಹಿಂದಕ್ಕೆ ಸರಿಯುವಹಾಗಿದ್ದಿಲ್ಲ; ಯಾಕಂದರೆ ಅವನು ಹಿಂದಕ್ಕೆ ಸರಿಯಲಿಕ್ಕೆ ಬಾರದಷ್ಟು ಮುಂದೆ ಹೋಗಿದ್ದನು, ತಿರುವೇಂಕಟನ ಮಾತು ಮೀರಿ ಹಟಹಿಡಿದ

ತಾನು ಈಗ ಹಿಂದಕ್ಕೆ ಸರಿದರೆ ತನ್ನ ಜನರಲ್ಲಿಯೇ ತನ್ನ ಒಗರು ಉಳಿಯಲಿಕ್ಕಿಲ್ಲವೆಂದು ಆತನು ಭಾವಿಸಿದನು. ಆ ಭಾವನೆಗೆ ತಕ್ಕಂತೆ ಅಬದುಲರಹಿಮಾನನು ಹೆಸರಾದ ಶೂರನೂ ಆಗಿದ್ದನು. ಅವನ ದಂಡಾಳುಗಳೂ ಯುದ್ಧದಲ್ಲಿ ಹಿಂಜರಿಯತಕ್ಕವರಿದ್ದಿಲ್ಲ. ಕನ್ನಡಿಗರ ನಿಜವಾದ ಯೋಗ್ಯತೆಯನ್ನು ಅರಿಯದೆ ಇದ್ದ ಅವರು ತಮ್ಮ ಮುಂದೆ ಕನ್ನಡಿಗರನ್ನು ಕಃಪದಾರ್ಥವಾಗಿ ಭಾವಿಸುತ್ತಿದ್ದರು. ಹೀಗಿರುವಾಗ ಅಬದುಲರಹಿಮಾನನು ಮಹಾ ಪ್ರಯತ್ನದಿಂದ ದರ್ಬಾರವನ್ನು ನೆರೆಸಿ ತಾನು ಉಚ್ಚಾಸನದಲ್ಲಿ ಕುಳಿತುಕೊಂಡನು. ಆತನ ಶೂರ ಪರಿವಾರವು ಅನುವು ನೋಡಿ ಆತನ ಎಡಬಲಗಳಲ್ಲಿ ಕುಳಿತುಕೊಂಡಿತು. ಆ ಇಬ್ಬರು ತರುಣ ಫಕೀರರು ಮಾತ್ರ ಖಾನನ ಎಡಬಲದ ಬದಿಯ ತಮ್ಮ ಸ್ಥಳಗಳನ್ನು ಬಿಟ್ಟಿದ್ದಿಲ್ಲ. ರಾಣೀವಾಸವು ರಕ್ಷಕರಿಂದ ರಕ್ಷಿಸಲ್ಪಟ್ಟು ನಿಲ್ಲುವಂತೆ ನಿಂತುಕೊಂಡಿತ್ತು.

ಈ ಸ್ಥಿತಿಯಲ್ಲಿ ಇನ್ನು ಮುಂದೆ ಏನಾಗುವದೆಂಬದನ್ನು ಉಭಯಪಕ್ಷದದವರೂ ಎದುರು ನೋಡುತ್ತಿದ್ದರು. ಅಂಥ ಆ ಮಹಾ ಸಭೆಯೂ ಪಿಟ್ಟೆಂದು ಮಾತಾಡದೆ ಸ್ತಬ್ಧವಾಗಿ ಕುತೂಹಲದಿಂದ ನಿಂತುಕೊಂಡಿತ್ತು. ಜನರ ದೃಷ್ಟಿಗಳೆಲ್ಲ ಅಬದುಲರಹಿಮಾನನಿಂದ ರಾಣೀವಾಸದ ಕಡೆಗೆ, ರಾಣೀವಾಸದಿಂದ ಅಬದುಲರಹಿಮಾನನ ಕಡೆಗೆ ಹೊರಳುತ್ತಿದ್ದವಲ್ಲದೆ ಮೂರನೆಯ ಕಡೆಗೆ ಅವುಗಳ ಸುಳಿದಾಟವೇ ಇದ್ದಿಲ್ಲ. ಹೀಗೆ ತನ್ನ ಸತ್ವಪರೀಕ್ಷೆಯ ಕಾಲವೇ ಒದಗಿ ಬಂದದ್ದನ್ನು ನೋಡಿ ಖಾನನು ವಿಚಾರಮಗ್ನನಾದನು. ನೋಡನೋಡುತ್ತ ತನ್ನ ಸುತ್ತಲು ಹಿಂದೂಸೈನಿಕರು ಹೆಚ್ಚುತ್ತಿರುವದನ್ನು ನೋಡಿ ತನ್ನ ಸೈನ್ಯದಲ್ಲಿ ಫಂದ-ಫಿತೂರಿಯ ಸುಳಿದಾಟವಾಗಿರುವದೆಂದು ಆತನು ತರ್ಕಿಸಿದನು. ತಿರುವೇಂಕಟನ ಮೇಲೆ ಅವನು ಹಲ್ಲುಕಡಿಯುತ್ತ ಕೆಂಪಡರಿದ ಕಣ್ಣುಗಳಿಂದ ಅವನನ್ನು ನೋಡತೊಡಗಿದನು. ಅತ್ತ ತಿರುವೇಂಕಟನ ಕಣ್ಣುಗಳೂ ಕೆಂಪಾಗಿದ್ದವು. ತಿರುವೇಂಕಟನೇ ಶತ್ರುಗಳಿಗೆ ತನ್ನ ಸೈನ್ಯದಲ್ಲಿ ಸೇರಗೊಟ್ಟನೆಂದು ಅಬದಲುರಹಿಮಾನನು ನಿಶ್ಚಯಿಸಿದನು. ಸೈನ್ಯದ ಕಾವಲಿನ ಕೆಲಸವನ್ನು ಅವನಿಗೆ ಒಪ್ಪಿಸಿದ್ದು ನೆಟ್ಟಗಾಗಲಿಲ್ಲವೆಂದು ಆತನು ಪಶ್ಚಾತ್ತಾಪಪಟ್ಟನು; ಆದರೂ ಕಠಿಣ ಪ್ರಸಂಗವೇ ಒದಗಿದ್ದರಿಂದ ರಣಶೂರನಾದ ಆ ಖಾನನು ಸಿಟ್ಟಿನಿಂದ ಉರಿಯುಹತ್ತಿ ತಿರುವೇಂಕಟವನ್ನು ಕುರಿತು-

ಅಬದುಲರಹಿಮಾನ-ತಿರುವೇಂಕಟ, ನಿನ್ನ ರಾಜದ್ರೋಹವು ನಿನ್ನ ಕಣ್ಣಿಗೆ ಕಾಣು ವದೋ? ಇಷ್ಟುಜನ ಹಿಂದೂ ಸೈನಿಕರು ಎಲ್ಲಿಂದ ಬಂದರು?

ತಿರುವೇಂಕಟ-ಖಾನಸಾಹೇಬ, ''ನಾನು ರಾಣೀವಾಸವನ್ನು ಪರೀಕ್ಷಿಸಿಯೇ ತೀರವೆನೆಂ''ಬ ನಿಮ್ಮ ಹಟಮಾರಿತನದ ಹೊರತು ನನಗೆ ಬೇರೆ ಏನೂ ಕಾಣುವುದಿಲ್ಲ. ರಾಜದ್ರೋಹವು ನಿಮ್ಮ ನಮ್ಮ ಕಣ್ಣಿಗೆ ಕಾಣುವ ಪ್ರಸಂಗ ಒದಗಿದ್ದರೆ ಅದು ನಿಮ್ಮ ಯವನರ ಕ್ರೂರತನದ ಫಲವಾಗಿರಬಹುದು. ಇರಲಿ, ಈಗ ಬೇರೆ ವಿಚಾರವೇಕೆ? ಮೊದಲು ರಾಣೀವಾಸದ ಪರೀಕ್ಷೆಯಾಗಲಿ.

ಈ ಮೇರೆಗೆ ನುಡಿದ ತಿರುವೇಂಕಟನ ಮರ್ಮಭೇದಕ ಮಾತುಗಳನ್ನು ಕೇಳಿ ಅಬದುಲ ರಹಿಮಾನನು ಸಿಟ್ಟಿನಿಂದ ಮೈಮರೆತು ರಣಮಸ್ತಖಾನನನ್ನು ಕುರಿತು— ''ರಣಮಸ್ತಖಾನ, ಏನು ನೋಡುವೆ? ಈ ಬುರುಕಿಯ ಜನರನ್ನು ಎಳೆದುಕೊಂಡು ಬಾ.'' ಎನ್ನಲು, ಕನ್ನಡ ವೀರರು ಒಮ್ಮೆಲೆ ಖಡ್ಗಗಳನ್ನು ಹಿರಿದರು; ಅಷ್ಟರಲ್ಲಿ ಯವನ ವೀರರೂ ಖಡ್ಗಗಳನ್ನು ಹಿರಿದಿದ್ದರು. ಇಂಥ ಉಭಯರು ಕೈಗೆ ಕೈ ಹತ್ತುವ ಪ್ರಸಂಗವಿರಲು, ತಿರುವೇಂಕಟನು ಶ್ರೀಕಂಠಶಾಸ್ತ್ರಿಯೊಡನೆ ಎದ್ದುನಿಂತು– ''ಬಾದಶಾಹಿಯ ಹಿತಚಿಂತಕರಾದ ವೀರರೇ, ನಮ್ಮ ಮುಖ್ಯ ಸೇನಾಪತಿಯ ಅವಿಚಾರದಿಂದ ಇನ್ನು ಪ್ರತ್ಯಕ್ಷ ಯುದ್ಧಪ್ರಸಂಗವು ಒದಗುವದಾದ್ದರಿಂದ ಪ್ರತಿಜ್ಞೆಯಂತೆ ನಾನು ಇಲ್ಲಿ ನಿಲ್ಲುವದಿಲ್ಲ. ನನ್ನ ಪರಿವಾರದೊಡನೆ ಹೊರಟುಹೋಗುವೆನು. ಅಬ್ದುಲರಹಿಮಾನರು ನನಗೆ ರಾಜ ದ್ರೋಹಿಯೆನ್ನಲಿ, ಏನಾದರೂ ಅನ್ನಲಿ ಅಂಥ ಪ್ರಸಂಗವೇನಾದರೂ ಬಂದರೆ ಬಾದಶಾಹಿಯ ಉಪ್ಪು ಉಂಡ ಈ ಸೇವಕನು ನಾನು ಬಾದಶಾಹಿ ಗೌರವ ರಕ್ಷಣಕ್ಕಾಗಿ ಪ್ರಾಣಕೊಡಲು ಸಿದ್ಧನಿರುವೆನೆಂಬದನ್ನು ಮಾತ್ರ ಲಕ್ಷದಲ್ಲಿಡಿರಿ; ಖಾನರ ಸ್ವಾಮಿನಿಷ್ಠೆಯ ಬೆಳಕು ಪೂರ್ಣವಾಗಿ ಬೀಳುವವರೆಗೆ ನಾನು ಅವರ ಕೆಲಸದಲ್ಲಿ ಕೈಹಾಕುವದಿಲ್ಲ'' ಎಂದು ಹೇಳಿ ಅವನು ಶ್ರೀಕಂಠಶಾಸ್ತ್ರಿಯೊಡನೆ ಹೊರಟು ಹೋದನು. ಆಗ ಅವನ ಪರಿವಾರವೂ ಅವನನ್ನು ಹಿಂಬಾಲಿಸಿತು. ಈ ಪ್ರಸಂಗದಲ್ಲಿ ಅಬದುಲರಹಿಮಾನನು ತಿರುವೇಂಕಟನ ಮೇಲೆ ತನ್ನ ಶೂರ ಸೈನಿಕರನ್ನು ಕಳಿಸತಕ್ಕವನು; ಆದರೆ ಅದರಿಂದ ಶತ್ರುಪಕ್ಷಕ್ಕೆ ತಾನಾಗಿ ಅನುಕೂಲ ಮಾಡಿಕೊಟ್ಟ ಹಾಗಾಗುವದೆಂದು ತಿಳಿದು, ತಿರುವೇಂಕಟನ ಮೇಲಿನ ಸಿಟ್ಟನ್ನು ನುಂಗಿಕೊಂಡನು. ಅಷ್ಟರಲ್ಲಿ ಇತ್ತ ಮೇಣೆಯೊಳಗಿಂದ ನಿನ್ನೆ ರಾತ್ರಿ ಗಂಭೀರ ಶಬ್ದಗಳು ಹೊರಟಂತೆ ಈಗಲೂ ಹೊರಡ ಹತ್ತಿದವು. ಆ ಮೇಣೆಯೊಳಗಿನ ಸ್ತ್ರೀಯು ತನ್ನ ಸೈನಿಕರನ್ನು ಕುರಿತು—''ಕನ್ನಡ ವೀರರೇ, ನನ್ನ ಇಚ್ಛೆಯಂತೆ, ಈಗ ನೀವು ನಿಮ್ಮ ಖಡ್ಗಗಳನ್ನು ಒರೆಗಾಣಿಸಿರಿ. ಈ ಹಟಮಾರಿ ಖಾನನು ಹಟವನ್ನು ನಾನು ಪರೀಕ್ಷಿಸಿಬಿಡುವೆನು. ಈತನು ನಮ್ಮನ್ನು ಮಾಡುವದಾದರೂ ಏನು? ಆಚಾರ್ಯರು ಸೆರೆಯಾಳಾಗಿ ಹೋದಾಗಲೇ ನಮ್ಮ ಮಾನ–ಮರ್ಯಾದೆಗಳೂ, ಜೀವಿತಗಳೂ ಹಾಳಾಗಿಹೋದ ಹಾಗಾಗಿರುತ್ತವೆ. ಕಂಪಲಿಯ ಕೋಟೆಯನ್ನು ಬಿಡುವಾಗ ನಾವು ಹ್ಯಾಗೂ ಜೀವದ ಹಂಗುಬಿಟ್ಟೇ ಬಂದಿದ್ದೇವೆ. ನಮ್ಮ ಕನ್ನಡ ವೀರರು ನೀವು ಕರ್ನಾಟಕದ ಸ್ವಾತಂತ್ರ್ಯರಕ್ಷಣಕ್ಕಾಗಿ ಖಾನನ ಪಾರುಪತ್ಯ ಮಾಡಲು ಸಮರ್ಥರಿದ್ದರೂ, ನನ್ನಂಥ ಒಬ್ಬ ಸ್ತ್ರೀಯ ಮಾನರಕ್ಷಣಕ್ಕಾಗಿ ನೀವು ಇಷ್ಟು ಸಾಹಸ ಮಾಡುವ ಕಾರಣವಿಲ್ಲ. ಮಾನಭಂಗದ ಪ್ರಸಂಗದಲ್ಲಿ ಹ್ಯಾಗೆ ನಡೆದುಕೊಳ್ಳಬೇಕೆಂಬುದನ್ನು ಕ್ಷತ್ರಿಯ ಕನ್ಯೆಯರಿಗೆ ಅನ್ಯರು ಕಲಿಸುವ ಕಾರಣವಿಲ್ಲ. ನಮ್ಮಂಥ ತರುಣಿಯರ ಚಿಂತಯಿಂದ ನಮ್ಮ ಕನ್ನಡ ವೀರರಾದ ನಿಮ್ಮ ಶೌರ್ಯದ ಸ್ವಚ್ಛಂದದ ವಿಕಾಸಕ್ಕೆ ತೊಂದರೆಯಾಗುತ್ತಿರುವದು; ಆದ್ದರಿಂದ ನಮ್ಮ ಸತ್ವವನ್ನು ಪರೀಕ್ಷಿಸುತ್ತಿರುವ ಈ ಯವನ ಮಟ್ಟು ಎಷ್ಟಿರುತ್ತದೆಂಬುದನ್ನು ನಾನು ಪರೀಕ್ಷಿಸಿಯೇ ಬಿಡುವೆನು. ಈ ಯವನವ ವೀರರ ಹಿರಿದ ಕತ್ತಿಗಳು ನಮ್ಮಂಥ ತರುಣಿಯರ ರಕ್ತ ಕುಡಿದು

ತೃಪ್ತವಾಗಲಿ. ನಮ್ಮಂಥ ಅಬಲೆಯರ ಪರೀಕ್ಷೆಯ ವಿಷಯವಾಗಿ ಖಾನನ ಇಷ್ಟು ಅಟ್ಟಹಾಸವೇ? ಇನ್ನೆರಡು ದಿನಗಳಲ್ಲಿ ಆಚಾರ್ಯರ ಬಿಡುಗಡೆಯಾಗದಿದ್ದರೆ ಬೈರಾಗಿಣಿಯೊಡನೆ ನಾನು ಹ್ಯಾಗೂ ಪ್ರಾಣತ್ಯಾಗ ಮಾಡುವವಳಿರುವೆನು; ಅಂದ ಬಳಿಕ ಈ ಖಾನನ ಕಾಲಲ್ಲಿ ಇಂದೇ ನನ್ನ ದೇಹಪಾತವಾದರೆ ತಪ್ಪೇನು?'' ಎಂದು ನುಡಿದು ಮೇಣೆಯೊಳಗಿದ್ದ ಒಬ್ಬ ಬುರುಕಿಯ ಸ್ತ್ರೀಯು ಪಕ್ಕನೆ ಹೊರಬಿದ್ದು ನೆಟ್ಟಗೆ ಖಾನನ ಎದುರಿಗೆ ಹೋಗಿ ನಿಂತುಕೊಂಡಳು. ಅಷ್ಟರಲ್ಲಿ ಆಕೆಯ ದಾಸಿಯರೂ, ಕೆಲ ಮುಖ್ಯ ಮುಖ್ಯ ರಕ್ಷಕರೂ ಆಕೆಯನ್ನು ಹಿಂಬಾಲಿಸಿ ಹೋಗಿದ್ದರು. ಅವರಲ್ಲಿ ಮಾದಿಗರ ದುರಗಪ್ಪನು ಆ ಸ್ತ್ರೀಯ ತೀರ ಹತ್ತಿರ ಹೋಗಿನಿಂತಿದ್ದನು. ಆಗ ಆ ಸ್ತ್ರೀಯ ಖಾನನ್ನು ಕುರಿತು—''ಅಬದುಲರಹಿಮಾನ, ರಣಮಸ್ತಖಾನನು ನನ್ನನ್ನು ಯಾಕೆ ಹಿಡಿದೆಳೆಯಬೇಕು? ಇಗೋ, ನಿನ್ನ ಬಳಿಯಲ್ಲಿ ಬಂದಿದ್ದೇನೆ ನೋಡು, ನಿನ್ನಲ್ಲಿ ಅಷ್ಟು ಧೈರ್ಯವಿದ್ದರೆ ನನ್ನ ಮೈ ಮುಟ್ಟಿ ನನ್ನ ಬುರುಕೆಯನ್ನು ತೆಗೆ!''

ಈ ಮೇರೆಗೆ ನುಡಿದು ಆ ಸ್ತ್ರೀಯು ಖಾನನ ಮುಂದೆ ಹೋಗಿ ನಿಂತು ಕೊಳ್ಳಲು, ಎಲ್ಲರೂ ಆಶ್ಚರ್ಯಪಟ್ಟು ಚಿತ್ರದ ಗೊಂಬೆಗಳಂತೆ ನಿಂತಲ್ಲಿ ನಿಂತುಬಿಟ್ಟರು. ಕುಳಿತಲ್ಲಿ ಕುಳಿತುಬಿಟ್ಟರು. ಆಗಿನ ಪ್ರಸಂಗದಲ್ಲಿ ಹಿಂದು ಮುಸಲ್ಮಾನರಿಬ್ಬರೂ ಮೋಹನಾಸ್ತ್ರದಿಂದ ಮೋಹಿತರಾದಂತೆ ಮಿಕಿ ಮಿಕಿ ಕಣ್ಣುಬಿಡುತ್ತ ಆ ಸ್ತ್ರೀಯನ್ನು ನೋಡುವದನ್ನಲ್ಲದೆ ಅನ್ಯ ವ್ಯಾಪಾರಗಳನ್ನು ಮಾಡದಾದರು! ಈ ಪ್ರಸಂಗದಲ್ಲಿ ಖಾನನ ಸ್ಥಿತಿಯೂ ವಿಲಕ್ಷಣವಾಯಿತು. ಅಂಥ ವೀರನೆಂದರೇನು, ಆ ಸ್ತ್ರೀಯನ್ನು ಮುಟ್ಟುವ ಧೈರ್ಯವಾಗಲೊಲ್ಲದು. ಆಗ ಆ ಬುರುಕೆಯ ಸ್ತ್ರೀಯು ಕ್ರೋಧಾವೇಶದಿಂದ– ದುಷ್ಟನಾದ ಖಾನಾ, ಆರ್ಯಸ್ತ್ರೀಯರ ವಿಡಂಬನೆಯಲ್ಲಿ ನಿನ್ನ ಇಷ್ಟು ಅಭಿಲಾಷೆಯೆ? ಕೃಷ್ಣಸರ್ಪವನ್ನು ತಡವಹೋದ ಕ್ಷುದ್ರ ಇಲಿಯು ಪ್ರಾಣಕ್ಕೆ ಎರವಾಗುವಂತೆ, ಈಗ ನೀನು ನನ್ನ ಈ ಶಸ್ತ್ರಕ್ಕೆ ಬಲಿಯಾಗು, ಎಂದವಳೇ ಖಾನನ ಮೇಲೆ ದುಮುಕಿ ಕಠಾರಿಯಿಂದ ಅವನನ್ನು ಇರಿದು ನೆಲಕ್ಕೆ ಕೆಡವಿದಳು. ಅಷ್ಟರಲ್ಲಿ ಆ ಇಬ್ಬರು ತರುಣ ಫಕೀರರೂ, ಮಾದಿಗರ ದುರಗಪ್ಪನೂ, ಬುರುಕ ಹಾಕಿಕೊಂಡಿದ್ದ ಶೂರ ಕನ್ನಡಿಗರೂ ತಮಗೆ ಎದುರಾದವರನ್ನು ತುಂಡರಿಸುತ್ತ ಆ ಸ್ತ್ರೀಯನ್ನು ರಕ್ಷಿಸುತ್ತ ಕ್ಷಣಮಾತ್ರದಲ್ಲಿ ಅಲ್ಲಿಂದ ಹೊರಟುಹೋದರು. ಆ ಅನರ್ಥವು ಒದಗಿದ ಬಳಿಕ ಹಿಂದು ಮುಸಲ್ಮಾನರಲ್ಲಿ ಭಯಂಕರವಾದ ಕಾಳಗವಾಗಿ ಸ್ವಲ್ಪ ಹೊತ್ತಿನಲ್ಲಿ ವೀರರ ರಕ್ತದಿಂದ ಭೂಮಿಯು ನೆನೆಯಿತು! ಅಷ್ಟರಲ್ಲಿ ಬುಕ್ಕ ದೊರೆಯ ಸೈನ್ಯವು ಹೊರಗಿನಿಂದಲೂ, ಹುಕ್ಕ ದೊರೆಯ ಸೈನ್ಯವು ಕೋಟೆಯೊಳಗಿನಿಂದಲೂ ಯವನ ಸೈನ್ಯವನ್ನು ಹಣಿಯಹತ್ತಿದ್ದರೂ, ಮುಸಲ್ಮಾನವೀರರು ಶೌರ್ಯದಿಂದ ಕಾದಿ ತಮ್ಮ ಕೀರ್ತಿಯನ್ನು ಕಾದುಕೊಳ್ಳುತ್ತಲಿದ್ದರು. ಅಷ್ಟರಲ್ಲಿ ತಿರುವೇಂಕಟನು ಅಲ್ಲಿಗೆ ತನ್ನ ಸೈನ್ಯವನ್ನು ತಕ್ಕೊಂಡು ಬಂದು ತನ್ನ ಯವನ ಸೈನ್ಯವನ್ನು ಕುರಿತು–''ವೀರರೇ, ನಿಮ್ಮ ಮುಖ್ಯ ಸೇನಾಪತಿಯು ಮರಣಹೊಂದಿದನೆಂದು ತಿಳಿದು ಧೈರ್ಯಗೆಡಬೇಡಿರಿ. ಇಗೋ, ನಾನು ನಿಮ್ಮ ಮುಖ್ಯನಾಗಿ ಬಾದಶಹರ ಕೀರ್ತಿಯನ್ನು ರಕ್ಷಿಸುವದಕ್ಕಾಗಿ ಸಿದ್ಧನಾಗಿ ಬಂದಿದ್ದೇನೆ. ಖಾನನನ್ನು ಕೊಂದು ಹೋಗುತ್ತಿರುವ ಪದ್ಮಿನಿಯನ್ನೂ,

ಆಕೆಯ ರಕ್ಷಕರನ್ನೂ ನಮ್ಮ ಶೂರ ಸೈನಿಕರು ಸೆರೆಹಿಡಿದು ತಂದಿರುವರು; ಆ ತರುಣ ಫಕೀರರ ವೇಷದಿಂದ ಇದ್ದ ಹುಕ್ಕಬುಕ್ಕರೂ ನಮ್ಮ ಕೈಸೇರಿದ್ದಾರೆ. ಆದ್ದರಿಂದ ಎದೆಗೆಡಬೇಡಿರಿ. ಇನ್ನೂ ಸ್ವಲ್ಪ ಹೊತ್ತು ನೀವು ಹೀಗೆಯೇ ಶೌರ್ಯದಿಂದ ಕಾದಿದರೆ ನಿಶ್ಚಯವಾಗಿ ಕನ್ನಡಿಗರು ರಣಭೂಮಿಯಿಂದ ಓಡುವರು'' ಎಂದು ಹೇಳಲು, ಮುಸಲ್ಮಾನರು ಆವೇಶದಿಂದ ಕಾದಹತ್ತಿದರು. ತಿರುವೇಂಕಟನ ಭವಿಷ್ಯದಂತೆ ಸ್ವಲ್ಪ ಹೊತ್ತಿನಲ್ಲಿಯೇ ಕನ್ನಡಿಗರು ವಿರೂಪಾಕ್ಷಾರ್ಯರ ತಂತ್ರದಂತೆ ಜಯಕ್ಕಾಗಿ ಅಪಜಯಪಟ್ಟು ಸಮರಭೂಮಿಯಿಂದ ಓಡಿಹೋಗಿ ಕೆಲವರು ಕಂಪಲಿಯ ಕೋಟೆಯನ್ನು ಸೇರಿದರು; ಕೆಲವರು ಸೆರೆಹಿಡಿಯಲ್ಪಟ್ಟು; ಕೆಲವರು ದಾರಿಸಿಕ್ಕತ್ತ ಓಡಿಹೋದರು. ರಾಣೀವಾಸವೂ, ಅದರ ರಕ್ಷಕರಾದ ಮುಖ್ಯ ಮುಖ್ಯ ವೀರರೂ ತಿರುವೇಂಕಟನ ಕೈಸೇರಿದರು. ಸ್ವಲ್ಪ ಹೊತ್ತಿನಲ್ಲಿ ಮುಸಲ್ಮಾನರು ಪೂರ್ಣ ಜಯಶಾಲಿಗಳಾಗಿ, ಅವರು ಕಂಪಲಿಯನ್ನು ಸುಲಿಯುವದಕ್ಕಾಗಿ ತಿರುವೇಂಕಟನ ಒಪ್ಪಿಗೆಯನ್ನು ಕೇಳತೊಡಗಿದರು!

## ರಾಜತಂತ್ರದ ಕೌಟಿಲ್ಯ

ತಿರುವೇಂಕಟನ ಒಪ್ಪಿಗೆಯಿಂದ ಮುಸಲ್ಮಾನ ಸೈನಿಕರು ಕಂಪಲಿಯ ಕೋಟೆಯನ್ನು ಸುಲಿಯಹೋದರು; ಆದರೆ ಅಲ್ಲಿಯೇನಿದೆ ಮಣ್ಣು! ಹೆಣದ ಹೊಗೆ, ಬರಿದಾದ ಮನೆಗಳು, ಸಮರಭೂಮಿಯಿಂದ ಓಡಿಬಂದಿದ್ದ ದಂಡಾಳುಗಳು ಇವರ ಹೊರತು ಲಾಭದಾಯಕ ವಿಷಯಗಳೇನೂ ಆ ಯವನ ಸೈನಿಕರ ಕಣ್ಣಿಗೆ ಬೀಳಲಿಲ್ಲ! ವಿರೂಪಾಕ್ಷಾರ್ಯರಂತೂ ತಿರುವೇಕಂಟನ ಮನೆಯಲ್ಲಿಯೇ ಇದ್ದರು. ಅವರು ತಿರುವೇಂಕಟನೊಡನೆ ಆಲೋಚಿಸಿ, ಅಬದುಲರಹಿಮಾನನನ್ನು ಗೂಢತಂತ್ರದ ಬಲೆಯಲ್ಲಿ ಹಿಡಿದದ್ದರಿಂದ, ಆ ಯವನ ಸೇನಾ ಪತಿಯು ಪ್ರಾಣಕ್ಕೆ ಎರವಾದದ್ದಲ್ಲದೆ, ನಿಜವಾದ ಜಯವು ಹಿಂದೂಜನರಿಗೆ ಆಗಿದ್ದರೂ, ಮುಂದಿನ ಜಯಕ್ಕಾಗಿ ಅವರು ಈಗ ಅಪಜಯಪಟ್ಟು ಸೋಗು ಹಾಕಿದ್ದು ಅಬದುಲ ರಹಿಮಾನನ ದಂಡಾಳುಗಳಿಗೆ ತಿಳಿಯದೆ, ಅವರು ತಿರುವೇಂಕಟನ ಯೋಗದಿಂದ ತಮಗೆ ಜಯವಾಯಿ ತೆಂದು ತಿಳಿದುಕೊಂಡಿದ್ದರು. ಕೋಟೆಯೊಳಗಿನ ಹೆಣದ ಹೊಗೆಯು ನಿಜವಾದ ಹೆಣದ ಹೊಗೆಯೇ ಆಗಿರದೆ ಮುಸಲ್ಮಾನರನ್ನು ಮೋಸಗೊಳಿಸುವದಕ್ಕಾಗಿ ಕಿಚ್ಚಿನಲ್ಲಿ ಒಗೆದ ಚರ್ಮಸುಡುವ ಹೊಗೆಯಾಗಿತ್ತು, ತಿರುವೇಂಕಟನು ವಿರೂಪಾಕ್ಷಾರ್ಯರ ಬೋಧದಿಂದ ಸನ್ಮಾರ್ಗಕ್ಕೆ ಹತ್ತುವ ಮೊದಲು ಒಂದು ದುರಾಲೋಚನೆ ಮಾಡಿದ್ದನೆಂದು ಹಿಂದೆ ಹೇಳಿದೆಯಷ್ಟೆ? ಆ ದುರಾಲೋಚನೆಯೆಂದರೆ, ಮೋಸದಿಂದ ಪದ್ಮಿನಿಯನ್ನು ಅಪಹರಿಸುವದು, ಆದರೆ ವಿರೂಪಾಕ್ಷಾರ್ಯರ ಸದ್ಬೋಧದಿಂದ ಅವನು ಪಶ್ಚಾತ್ತಾಪಪಟ್ಟು ತನ್ನ ದುರಾಲೋಚನೆಯನ್ನು ತನ್ನ ಬಾಯಿಯಿಂದಲೇ ವಿರೂಪಾಕ್ಷಾರ್ಯರ ಮುಂದೆ

ಹೇಳಿದ್ದನು. ಆಗ ಶ್ರೀಕಂಠಶಾಸ್ತ್ರಿಯು–ಸರದಾರಸಾಹೇಬ, ನಿಮ್ಮ ಈ ಆಲೋಚನೆಯನ್ನೇ ಈಗ ನಮಗೆ ಅನುಕೂಲವಾಗಿ ಮಾಡಿಕೊಳ್ಳೋಣ. ನೀವು ಪದ್ಮಿನಿಯನ್ನು ಅಪಹರಿಸಿಕೊಂಡು ಬರುತ್ತಿದ್ದ ಗುಪ್ತದ್ವಾರದಿಂದಲೇ ಪದ್ಮಿನಿಯೇ ಮೊದಲಾದ ರಾಣೀವಾಸದ ಜನರನ್ನೂ, ಸರ್ವಸಂಪತ್ತನ್ನೂ ಹೊರಡಿಸುವ ನೆವದಿಂದ ಗುಪ್ತವಾಗಿ ಶಸ್ತ್ರಾಸ್ತ್ರಗಳನ್ನೂ ಸಾಗಿಸಿಕೊಂಡು ಬರಬೇಕು. ಹುಕ್ಕ–ಬುಕ್ಕರು ಫಕೀರರ ವೇಷದಿಂದ ಆ ವರ್ತಮಾನವನ್ನೂ, ಹಿಂದೂಜನರ ಸೈನ್ಯವು ಹೊರಗಿನಿಂದ ಮುತ್ತಿಗೆಹಾಕುವ ಸಂಗತಿಯನ್ನೂ ಹೇಳಿ, ಕನ್ನಡ ವೀರರ ತಂಡವನ್ನು ಯವನ ಸೈನ್ಯ ಮಧ್ಯದಲ್ಲಿ ಸೇರಿಸಬೇಕು. ಈ ಯುಕ್ತಿಯಿಂದ ರಾಣೀವಾಸವು ನಮ್ಮ ಹತ್ತಿರವೇ ಇದ್ದಂತಾಗುವದರಿಂದ ಮುಸಲ್ಮಾನ ಸೈನ್ಯಕ್ಕೆ ಕಂಪಲಿಯ ಸುಲಿಗೆಗೆ ನಿರ್ಬಾಧವಾಗಿ ಅಪ್ಪಣೆಕೊಟ್ಟು ಅವರನ್ನು ಮೋಸಗೊಳಿಸಬಹುದು ಎಂದು ಹೇಳಿದನು. ಅಬದುಲ ರಹಿಮಾನನ್ನು ಕೊಂದಕೂಡಲೆ ತಿರುವೇಂಕಟನು ಮುಖ್ಯಸ್ಥನಾಗಿ ಕನ್ನಡಿಗರನ್ನು ಸೋಲಿಸಿದ ನೆವದಿಂದ ಕಾಂಚನಗಡದಲ್ಲಿದ್ದ ಮಲಿಕನಾಯಬನನ್ನು ವಂಚಿಸಲೇಬೇಕೆಂದು ಆ ಶಾಸ್ತ್ರಿಯು ಸೂಚಿಸಿದ್ದನು. ಹಾಗೆ ಮಾಡಿದರೆ ಮಾತ್ರ ಮಾಧವಾಚಾರ್ಯರ ಬಂಧವಿಮೋಚನವು ಇನ್ನು ಎರಡು ದಿನಗಳಲ್ಲಿ ಆಗಿ ಬೈರಾಗಿಣಿ– ಪದ್ಮಿನಿಯರ ಪ್ರತಿಜ್ಞೆಯು ಈಡೇರುವದೆಂದು ಶ್ರೀಕಂಠಶಾಸ್ತ್ರಿಯು ಅಭಿಪ್ರಾಯಪಟ್ಟಿದ್ದರು. ಅದರಂತೆ ವಿರೂಪಾಕ್ಷಾರ್ಯರು, ಶ್ರೀಕಂಠಶಾಸ್ತ್ರಿ, ತಿರುವೇಂಕಟ ಈ ಮೂವರ ಒಳಸಂಚಿನಿಂದ ಈ ತಂತ್ರರಚನೆಯಾಗಿದ್ದು, ಅದು ಐಬು ಹತ್ತದಂತೆ ನೆರವೇರಿತು. ಯವನ ಸೈನಿಕರು ತಿರುವೇಕಂಟನ ಪರಾಕ್ರಮದಿಂದ ತಮಗೆ ಜಯವಾಯಿತೆಂದು ನಿಸ್ಸಂಶಯವಾಗಿ ತಿಳಿದು ಕೊಂಡರು. ಅವರಿಗೆ ಕಂಪಲಿಯ ಸುಲಿಗೆಯಲ್ಲಿ ಹೇಳಿಕೊಳ್ಳುವಂಥ ಲಾಭವಾಗದಿದ್ದರೂ, ಈ ಮೊದಲೆ ಅನಾಯಾಸವಾಗಿ ತಮ್ಮ ಕೈಸೇರಿರುವ ಕಂಪಲಿಯ ರಾಜಕೀಯ ಸಂಪತ್ತಿನಲ್ಲಿ ತಮಗೆ ಭಾಗ ದೊರೆತೇ ದೊರೆಯುವ ದೆಂದು ಅವರು ಸಮಾಧಾನ ಮಾಡಿಕೊಂಡರು. ತಾನು ಸುಲಿಗೆಗೆ ಅಪ್ಪಣೆ ಕೊಡದಿದ್ದರೆ ತಮಗೆ ಜಯವಾದ ಬಗ್ಗೆ ಸೈನಿಕರಿಗೆ ಸಂಶಯ ಉಂಟಾಗಬಹುದೆಂತಲೂ, ಹಾಗೆ ಸಂಶಯ ಉಂಟಾಗ ದಂತೆ ಸುಲಿಗೆಗೆ ಅಪ್ಪಣೆ ಕೊಟ್ಟಾಗ ಕೋಟೆಯೊಳಗಿನ ಹೆಂಗಸರಿಗೆ ತೊಂದರೆಯಾಗ ಬಾರದೆಂತಲೂ ತಿಳಿದು, ಕೋಟೆಯೊಳಗಿನ ಸಂಪತ್ತನ್ನು ಗುಪ್ತಸ್ಥಳದಲ್ಲಿರಿಸಿ, ಸಂಪತ್ತಿನ ಬದಲು ವಿವಿಧ ಶಸ್ತ್ರಾಸ್ತ್ರಗಳನ್ನೂ, ರಾಣೀವಾಸವನ್ನೂ ಕೋಟೆಯಿಂದ ಹೊರಡಿಸಿ ಯುಕ್ತಿಯಿಂದ ತಿರುವೇಂಕಟನು ಅವನ್ನು ಸ್ವಾಧೀನಪಡಿಸಿಕೊಂಡು ರಕ್ಷಿಸಿದ್ದನು. ಅದ್ದರಿಂದಲೇ ಮುಸಲ್ಮಾನ ಸೈನಿಕರಿಗೆ ಕಂಪಲಿಯಲ್ಲಿ ಹೊನ್ನು–ಹೆಣ್ಣುಗಳ ಲಾಭವಾಗಲಿಲ್ಲ. ಕಾಫರರಾದ ಹಿಂದುಗಳು ಕೋಟೆಯ ಗುಪ್ತ ಮಾರ್ಗಗಳಿಂದ ಎಲ್ಲವನ್ನು ಹೊರಡಿಸಿ, ನಮ್ಮನ್ನು ಮೋಸಗೊಳಿಸಿದರೆಂದು ಅವರು ಹಲ್ಲುಕಡಿದರು! ಆದರೂ ತಾವು ಜಯಶಾಲಿಗಳಾದ ಬಗ್ಗೆ ಅವರಿಗೆ ಬಹಳ ಸಂತೋಷವಾಗಿ ಅವರು ತಿರುವೇಂಕಟನನ್ನು ಬಹಳವಾಗಿ ಕೊಂಡಾಡಿದರು!

ತಿರುವೇಂಕಟನಿಗಾದರೂ ಇಷ್ಟೇ ಬೇಕಾಗಿತ್ತು. ಅವನು ಹಿಂದೂಸೈನಿಕರನ್ನು ನಿಶ್ಯಸ್ತ್ರ ಮಾಡಿ ಅವರನ್ನು ರಾಣೀವಾಸದೊಡನೆ ಸೆರೆಹಿಡಿದು ಕಾಂಚನಗಡದ ಕಡೆಗೆ ಸಾಗುವವನಿದ್ದನು;

ಆಗ ವಿರೂಪಾಕ್ಷಾರ್ಯರೂ, ಶ್ರೀಕಂಠಶಾಸ್ತ್ರಿಯೂ ನಡೆದ ಸಂಗತಿಯನ್ನು ಮುಂಗಡವಾಗಿ ಕಾಂಚನಗಡಕ್ಕೆ ಮಲಿಕನಾಯಬನಿಗೆ ತಿಳಿಸಬೇಕೆಂದು ಸೂಚಿಸಿದ್ದರಿಂದ ತಿರುವೇಂಕಟನು ಯುದ್ಧದ ಎಲ್ಲ ವರ್ತಮಾನವನ್ನು ಸವಿಸ್ತಾರವಾಗಿ ಉಪ್ಪು ಕಾರ ಹಚ್ಚಿ ಬರೆದನು. ಅಬದುಲ ರಹಿಮಾನನು ರಾಣೀವಾಸವನ್ನು ಪರೀಕ್ಷಿಸಹೋಗಿ ಹೊಂದಿದ ಅಪಘಾತವನ್ನೂ, ಪ್ರಸಂಗದಲ್ಲಿ ತಾನು ತೋರಿಸಿದ ಪರಾಕ್ರಮವನ್ನೂ, ರಾಣೀವಾಸ, ವಿರೂಪಾಕ್ಷಾರ್ಯ, ಹುಕ್ಕನೇ ಮೊದಲಾದ ಮುಖ್ಯ ಮುಖ್ಯ ಜನರು, ಇವರ ಸೆರೆಹಿಡಿದದ್ದನ್ನೂ ಆ ಪತ್ರದಲ್ಲಿ ಸವಿಯಾಗಿ ವರ್ಣಿಸಿದ್ದನು. ಹಾಗೆ ತಾನು ಬರೆದ ಪತ್ರವನ್ನು ವಿರೂಪಾಕ್ಷಾರ್ಯರಿಗೆ ತೋರಿಸಿ ಒಬ್ಬ ರಾವುತನ ಕೈಯಲ್ಲಿ ಕೊಟ್ಟು ಬೇಗನೆ ನಾಯಬಸಾಹೇಬರಿಗೆ ಮುಟ್ಟಿಸ ಬೇಕೆಂದು ಹೇಳಿ ಅದನ್ನು ಕಳಿಸಿಕೊಟ್ಟನು! ಪತ್ರದ ಹಿಂದಿನಿಂದಲೇ ತಾನು ಯಾವತ್ತು ಪರಿವಾರವನ್ನು ಕಟ್ಟಿಕೊಂಡು ಹೊರಟುಬಿಟ್ಟನು; ಯಾಕಂದರೆ ಪ್ರತಿಜ್ಞೆಯಂತೆ ಮೊದಲು ಮಾಧವಾಚಾರ್ಯರ ಬಂಧವಿಮೋಚನೆಯಾಗಬೇಕಾಗಿತ್ತು. ಕಂಪಲಿಯ ಕೋಟೆಯ ಸಂರಕ್ಷಣಕ್ಕಾಗಿ ಆ ಕ್ಷತ್ರಿಯನು ತನ್ನವರನ್ನು ನಿಯಮಿಸಿದ್ದನೆಂದು ಬೇರೆ ಹೇಳುವ ಕಾರಣವಿಲ್ಲ.

ತಿರುವೇಂಕಟನು ಸಕಲ ಪರಿವಾರದೊಡನೆಯೂ, ಸೆರೆಯಾಳುಗಳೊಡನೆಯೂ, ನಿಶ್ಶಸ್ತ್ರರಾದ ಹಿಂದೂ ಸೈನಿಕರೊಡನೆಯೂ ಕಾಂಚನಗಡದ ಕಡೆಗೆ ನಡುವೆ ಎಲ್ಲಿಯೂ ನಿಲ್ಲದೆ ಸಾಗಿದನು. ಬೈರಾಗಿಣಿ–ಪದ್ಮಿನಿಯರು ಮಾಡಿದ ಪ್ರತಿಜ್ಞೆಯಂತೆ ಇನ್ನೆರಡು ದಿನಗಳಲ್ಲಿ ಮಾಧವಾಚಾರ್ಯರನ್ನು ಬಂಧಮುಕ್ತ ಮಾಡಬೇಕಾಗಿತ್ತು. ಹ್ಯಾಗಾದರೂ ಮರೆಮೋಸಗಳಿಂದ ಅವರೊಬ್ಬರನ್ನು ಸೆರೆಮನೆಯೊಳಗಿಂದ ಹೊರಡಿಸಿಕೊಂಡು ಬರಬೇಕಾಗಿದ್ದರೆ ಬೈರಾಗಿಣಿಯೂ ಪದ್ಮಿನಿಯೂ ಮಾಡಬಾರದ ಯುಕ್ತಿ–ಪ್ರಯುಕ್ತಿಯಿಂದಲೂ, ಮಹಾಸಾಹಸದಿಂದದಲೂ, ತಮ್ಮ ಜೀವದ ಹಂಗು ಇಡದೆಯೂ ಅವರನ್ನು ಹೊರಡಿಸಿಕೊಂಡು ಬರಬಹುದಾಗಿತ್ತು; ಆದರೆ ಹಾಗೆ ಕಳ್ಳತನದಿಂದ ಹೊರಟುಬರಲಿಕ್ಕೆ ಆಚಾರ್ಯರು ಒಪ್ಪುವಹಾಗಿದ್ದಿಲ್ಲ; ಅಥವಾ ಹಾಗೆ ಹೊರಟುಬರಲಿಕ್ಕೆ ಸ್ವತಃ ಆಚಾರ್ಯರಿಗೆ ಅಶಕ್ಯವಾಗಿದ್ದಿಲ್ಲ. ತಿರುಗಿಕೇಳಿದರೆ ಆ ಯೋಗಿಶ್ರೇಷ್ಠರನ್ನು ಸೆರೆಯಲ್ಲಿ ಹಾಕಲು ಯಾರು ಸಮರ್ಥರಾಗಬಹುದು? ಮಹಾತ್ಮರಾದ ಮಾಧವಾಚಾರ್ಯರಿಗೆ ಅಣಿಮಾಡಿ ಅಷ್ಟ ಮಹಾಸಿದ್ಧಿಗಳೂ, ಪರಕಾಯಪ್ರವೇಶಾದಿ ಕ್ಷುದ್ರ ಸಿದ್ಧಿಗಳೂ ಸಾಧ್ಯವಾಗಿದ್ದವು. ತಮ್ಮ ಮಟ್ಟಿಗೆ ಅವರು ಲೋಕಕ್ಕೆ ಅಜಿಂಕ್ಯರೇ ಆಗಿದ್ದರು; ಅಂದಬಳಿಕ ಕನ್ನಡಿಗರಲ್ಲಿ ನಿಜವಾದ ಪೌರುಷವೂ, ಕರ್ತೃತ್ವವೂ ಉಂಟಾಗಲೆಂತಲೂ, ಅವರಲ್ಲಿ ಅಂಥ ಯೋಗ್ಯತೆಯು ಬಂದದ್ದನ್ನು ತಾವು ನೋಡಬೇಕೆಂತಲೂ, ಬುದ್ಧಿ ಪೂರ್ವಕವಾಗಿ ಸೆರೆಮನೆಗೆ ಹೋಗಿದ್ದ ಬಂಧನರಹಿತರಾದ ಆಚಾರ್ಯರನ್ನು ಢಾಣಾಡಂಗುರ ವಾಗಿ ಮಲಿಕನಾಯಬನನ್ನು ಸೆರೆಹಿಡಿದೇ ಸೆರೆಯಿಂದ ಬಿಡಿಸಬೇಕಾಗಿತ್ತು. ಈ ಮಾತನ್ನು ವಿರೂಪಾಕ್ಷಾರ್ಯರು ಎಲ್ಲರಿಗೂ ಸ್ಪಷ್ಟವಾಗಿ ತಿಳಿಸಿಹೇಳಿದ್ದರಿಂದ, ಅವರೆಲ್ಲರೂ ಮಲೀಕ ನಾಯಬನನ್ನು ಸೆರೆಹಿಡಿಯುವದೇ ಆಚಾರ್ಯರ ಸೆರೆಬಿಡಿಸೋಣವೆಂದು ತಿಳಿದು, ಅಂಥ ಮಹಾಕಾರ್ಯವನ್ನು ಮಾಡಲಿಕ್ಕೆ ಸಾಹಸಪಡುತ್ತಿದ್ದರು. ತಿರುವೇಂಕಟನು ಕಳಿಸಿದ ರಾವುತನು

ಬಹುವೇಗದಿಂದ ಕಾಂಚನಗಡಕ್ಕೆ ಹೋಗಿ ಮಲಿಕನಾಯಬನಿಗೆ ಪತ್ರವನ್ನು ಕೊಟ್ಟನು. ಅದನ್ನು ಓದಿ ನಾಯಬನು ಆಶ್ಚರ್ಯಪಟ್ಟನು. ಆ ಪತ್ರದ ಸಂಗತಿಯು ಆತನಿಗೆ ತೀರ ಅಶಕ್ಯವಾಗಿ ತೋರಿತು. ತನ್ನ ಸೈನ್ಯವು ಎಷ್ಟು ಪರಾಕ್ರಮಶಾಲಿಯಾಗಿದ್ದರೂ ಇಷ್ಟು ಬೇಗನೆ ಕಂಪಲಿಯ ಕೋಟೆಯೊಳಗಿನ ವೀರರನ್ನೂ, ಪದ್ಮಿನಿಯೇ ಮೊದಲಾದ ಜನಾನಖಾನೆಯನ್ನೂ, ಸರ್ವ ಸಂಪತ್ತನ್ನೂ ಸ್ವಾಧೀಪಡಿಸಿಕೊಂಡು ಬಂದದ್ದು ತೀರ ಅಶಕ್ಯವೆಂದು ಆತನು ಭಾವಿಸಿದನು. ಅದರಲ್ಲಿ ಅಬದುಲರಹಿಮಾನನು ಅಕಸ್ಮಾತ್ ಮರಣಹೊಂದಿರಲು, ತಿರುವೇಂಕಟನು ಇಷ್ಟೆಲ್ಲ ಕಾರ್ಯಮಾಡಿಕೊಂಡು ಬಂದನೆಂಬದಂತು ಆತನಿಗೆ ಸಂಭವನೀಯವಾಗಿ ಸರ್ವಥಾ ತೋರಲಿಲ್ಲ. ಇದರಲ್ಲಿ ಏನೋ ಮೋಸವಿರುತ್ತದೆಂದು ಆ ಶ್ರೇಷ್ಠಮುತ್ಸದ್ದಿಯು ನಿಶ್ಚಯಿಸಿ, ಕೋಟೆಯ ಬಾಗಿಲುಗಳನ್ನು ಭದ್ರವಾಗಿ ಇಕ್ಕಿಸಿ ಕಾವಲುಗಳನ್ನು ಬಿಗಿ ಮಾಡಿ ಯುದ್ಧದ ಸಿದ್ಧತೆಯನ್ನು ಮಾಡಲು ಅಧಿಕಾರಿಗಳನ್ನು ಆಜ್ಞಾಪಿಸಿದನು. ನಾಯಬನ ಅಪ್ಪಣೆಯಂತೆ ಮಾಧವಾಚಾರ್ಯರಿರುತ್ತಿದ್ದ ಮನೆಯನ್ನು ಸೇವಕರು ಭದ್ರವಾಗಿ ಕಾಯಹತ್ತಿದ್ದಲ್ಲದೆ, ಅವರಿರುತ್ತಿದ್ದ ಮನೆಯ ಮಹಾದ್ವಾರಕ್ಕೆ ಬೀಗಮುದ್ರೆಗಳನ್ನು ಮಾಡಿದರು. ಶೂರನೂ, ಮಹಾ ಮುತ್ಸದ್ದಿಯೂ ಆದ ಆ ನಾಯಬನು ತಮ್ಮ ಯವನರು ಗೌರವವನ್ನು ಪರಾಕ್ರಮದಿಂದ ಕಾಯ್ದುಕೊಳ್ಳುವ ಪ್ರಸಂಗವು ಒದಗಿರುವದೆಂದು ತಿಳಿದು, ಒಂದು ಕ್ಷಣವಾದರೂ ವಿಶ್ರಾಂತಿ ಪಡೆಯದೆ ಎಲ್ಲ ಸಿದ್ಧತೆಯನ್ನು ಮಾಡಿ, ತಿರುವೇಂಕಟನ ಸೈನ್ಯದ ಇರವನ್ನೂ, ಅವನ ಚಲನವಲನ ವನ್ನೂ, ಬೇರೆ ಸಣ್ಣಪುಟ್ಟ ಸಂಗತಿಗಳನ್ನೂ ಅರಿತುಕೊಂಡು ಬರುವದಕ್ಕಾಗಿ ತನ್ನ ಅತ್ಯಂತ ವಿಶ್ವಾಸದ ಶೂರ ಜನರೊಡನೆ ತನ್ನ ಮುಖ್ಯ ರಾಯಭಾರಿಯನ್ನೇ ಆ ತಿರುವೇಂಕಟನನ್ನು ಮಧ್ಯಮಾರ್ಗದಲ್ಲಿ ಭೆಟ್ಟಿಯಾಗಿ ಅವನನ್ನು ಅಭಿನಂದಿಸುವ ನೆವದಿಂದ ಕಳಿಸಿಕೊಟ್ಟನು. ಅಷ್ಟರಲ್ಲಿಯೇ ಮತ್ತೊಬ್ಬ ಸವಾರನು ಬಂದು ತಿರುವೇಂಕಟನ ಸೈನ್ಯವು ಕೋಟೆಯಿಂದ ಮೂರು ಮೈಲಿನ ಮೇಲೆ ಬೀಡುಬಿಟ್ಟಿರುವದೆಂದು ನಾಯಬನಿಗೆ ಹೇಳಿದನು.

ತಿರುವೇಂಕಟನು ಇಷ್ಟು ತ್ವರೆಯಾಗಿ ಸೈನ್ಯ ಸಾಗಿಸಿಕೊಂಡು ಬಂದದ್ದನ್ನು ಕೇಳಿಯಂತೂ ಮಲಿಕನಾಯಬನು ಮತ್ತಿಷ್ಟು ಸಂಶಯಪಟ್ಟನು. ಹೀಗೆ ಬರುವದರಲ್ಲಿ ತಿರುವೇಂಕಟನ ವಿಚಾರವು, ಅಕಸ್ಮಾತ್ತಾಗಿ ತಾನು ಕೋಟೆಯನ್ನು ಪ್ರವೇಶಿಸಿ ಅಜಾಗರೂಕರಾಗಿರುವ ನಮ್ಮನ್ನು ಹಣಿದು ಕೋಟೆಯನ್ನು ಸ್ವಾಧೀನಪಡಸಿಕೊಳ್ಳುವುದೇ ಇರಬೇಕೆಂದು ನಾಯಬನು ತರ್ಕಿಸಿದನು. ಹೀಗೆ ಅವಸರದಿಂದ ನಾವು ಹೋಗುವದರಿಂದ ಧೂರ್ತನಾದ ಮಲಿಕನಾಯಬನು ಸಂಶಯಪಟ್ಟು ಅತ್ಯಂತ ದಕ್ಷತೆಯಿಂದಲೂ, ಪರಾಕ್ರಮದಿಂದಲೂ ನಮ್ಮ ಕಾರ್ಯಕ್ಕೆ ಪ್ರತಿಬಂಧಮಾಡುವನೆಂಬದನ್ನು ರಾಜಕಾರಣ ಪಟುವಾದ ಶ್ರೀಕಂಠಶಾಸ್ತ್ರಿಯೂ, ಮಹಾತ್ಮರಾದ ವಿರೂಪಾಕ್ಷಾರ್ಯರೂ ಅರಿತಿದ್ದರು; ಆದರೂ ತಾವು ಪ್ರಚಂಡ ಸೈನ್ಯದೊಡನೆ ಸಕಲ ಸಿದ್ಧತೆಯಿಂದ ಪ್ರಾಣವನ್ನಾದರೂ ಅರ್ಪಿಸಿ ಆಚಾರ್ಯರನ್ನು ಬಂಧಮುಕ್ತಮಾಡಿಯೇ, ತೀರುವೆವೆಂಬ ದಮ್ಮಿನಿಂದ ಬಂದದ್ದರಿಂದ ಅವರಾದರೂ ನಾಯಬನ ಮುತ್ಸದ್ದಿತನ, ಪರಾಕ್ರಮಗಳನ್ನು ಲೆಕ್ಕಿಸುವಹಾಗಿದ್ದಿಲ್ಲ. ಅವರು ತಮ್ಮ ನಿರೀಕ್ಷಣ ಮಾಡುವದಕ್ಕಾಗಿ

ನಾಯಬನ ಕಡೆಯಿಂದ ಯಾರಾದರೂ ಬಂದರೆ, ಅವರಿಗೆ ಯಾವ ಬಗೆಯ ಸಂಶಯವೂ ಬರಬಾರದೆಂದು ಮಾಡಬಹುದಾದ ಎಲ್ಲ ಸಿದ್ಧತೆಯನ್ನು ಮಾಡಿ ಅವರು ಸೈನ್ಯದ ಬೀಡುಬಿಟ್ಟಿದ್ದರು. ಅವರು ತರ್ಕಿಸಿದಂತೆ ಮಲಿಕ ನಾಯಬನ ಶೂರನಾದ ಕಾರಭಾರಿಯು ತಿರುವೇಂಕಟನನ್ನು ಕಂಡು ಅಭಿನಂದಿಸುವ ನೆವದಿಂದ ಬಂದು, ಬೇರೆ ಬೇರೆ ಸಂಗತಿಗಳನ್ನು ಕುರಿತು ಸೂಕ್ಷ್ಮ ರೀತಿಯಿಂದ ಶೋಧಿಸಿದನು; ಆದರೆ ಶ್ರೀಕಂಠಶಾಸ್ತ್ರಿಯ ಮುಂಜಾಗ್ರತೆಯ ವ್ಯವಸ್ಥೆಯಿಂದ ಆ ಯವನ ಕಾರಭಾರಿಗೆ ಯಾವ ಸಂಶಯವೂ ತೋರಲಿಲ್ಲ. ಹಿಂದೂ ಸೈನಿಕರೆಲ್ಲ ನಿಶ್ಯಸ್ತ್ರರಾಗಿದ್ದರು. ರಾಣೀವಾಸವನ್ನೂ, ಹುಕ್ಕನೇ ಮೊದಲಾದ ವೀರಪರಿವಾರ ವನ್ನೂ ಯವನ ಸೈನ್ಯವೇ ಸಶಸ್ತ್ರವಾಗಿ ರಕ್ಷಿಸುತ್ತಲಿತ್ತು. ತಿರುವೇಕಂಟನ ವೃತ್ತಿಯಲ್ಲಾಗಲಿ, ಅವನ ಚಲನವಲನದಲ್ಲಾಗಲಿ ಸಂಶಯ ಬರುವಂಥ ಲಕ್ಷಣವೇನು ತೋರಲಿಲ್ಲ. ಇದನ್ನು ನೋಡಿ ಆ ಕಾರಭಾರಿಯು ತಿರುವೇಂಕಟನಿಗೆ ತನ್ನ ಹೃದಯವನ್ನು ತಿಳಿಸದೆ–ಸರದಾರ ಸಾಹೇಬ, ನಿಮ್ಮ ಈ ಅಪೂರ್ವ ವಿಜಯವನ್ನು ಕೇಳಿ ನಾಯಬಸಾಹೇಬರು ಸಂತುಷ್ಟರಾಗಿದ್ದು, ನಿಮ್ಮನ್ನು ಅಭಿನಂದಿಸಿ ತಮಗಾದ ಆನಂದವನ್ನು ವ್ಯಕ್ತಮಾಡುವದಕ್ಕಾಗಿಯೇ ನನ್ನನ್ನು ಈಗ ಕಳುಹಿಸಿದ್ದಾರೆ. ನಿಮ್ಮನ್ನು ಯೋಗ್ಯ ರೀತಿಯಿಂದ ಸತ್ಕರಿಸುವದಕ್ಕಾಗಿಯೂ, ಗೊತ್ತಾದಂತೆ ನಿಮಗೆ ಆನೆಗುಂದಿಯ ಸಂಸ್ಥಾನವನ್ನು ಕೊಡುವದಕ್ಕಾಗಿಯೂ ಅಪ್ಪಣೆ ಪಡೆಯಬೇಕೆಂದು ಬಾದಶಹರ ಕಡೆಗೆ ನಿಮ್ಮ ಪರಾಕ್ರಮದ ಸಂಪೂರ್ಣ ವರ್ಣನವನ್ನು ಬರೆದು ಪತ್ರ ಕಳಿಸಿರುವರು. ಅದಕ್ಕೆ ಉತ್ತರ ಬರುವವರೆಗೆ ತಾವು ಇಲ್ಲಿಯೇ ಬೀಡುಬಿಟ್ಟಿರಬೇಕೆಂದು ನಾಯಬಸಾಹೇಬರ ಅಪ್ಪಣೆಯಾಗಿದೆ. ಬಾದಶಹರಿಂದ ಅಪ್ಪಣೆಯಾದ ಕೂಡಲೆ ತಮ್ಮನ್ನು ಮಹಾ ಸಮಾರಂಭದಿಂದ ದುರ್ಗದ ಮೇಲೆ ಕರೆದೊಯ್ದು ಆನೆಗುಂದಿಯ ಸಂಸ್ಥಾನದ ಸನದನ್ನು ತಮಗೆ ಒಪ್ಪಿಸಲಾಗುವದು ಎಂದು, ಹೇಳಿ ತಿರುವೇಂಕಟನ ಮುಖಚರ್ಯ ದಲ್ಲುಂಟಾಗುವ ಬದಲಾವಣೆಗಳನ್ನು ಸೂಕ್ಷ್ಮರೀತಿಯಿಂದ ಪರೀಕ್ಷಿಸತೊಡಗಿದನು.

ತಿರುವೇಂಕಟನು ರಣಶೂರನು ಮಾತ್ರ ಇದ್ದದ್ದರಿಂದ ಇಂಥ ಹೇಚು ಪೇಚುಗಳನ್ನು ಅರಿಯದವನಾಗಿದ್ದರೂ ರಾಜಕಾರಣಪಟುವಾದ ಶ್ರೀಕಂಠಶಾಸ್ತ್ರಿಯೂ, ಮಹಾತ್ಮರಾದ ವಿರೂಪಾಕ್ಷಾರ್ಯರೂ ಈ ಪ್ರಸಂಗವು ಬರಬಹುದೆಂದು ಮನಗಂಡವರಾಗಿದ್ದು, ಅಂಥ ಪ್ರಸಂಗ ಬಂದರೆ ಏನು ಉತ್ತರ ಕೊಡಬೇಕು, ಹ್ಯಾಗೆ ನಡೆದುಕೊಳ್ಳಬೇಕು, ಎಂಬದನ್ನು ಮೊದಲೇ ಆ ಕ್ಷತ್ರಿಯನಿಗೆ ಕಲಿಸಿಟ್ಟಿದ್ದರು. ಕರ್ಮ ಧರ್ಮ ಸಂಯೋಗದಿಂದ ಕನ್ನಡ ಜನರಿಗೆ ಅನುಕೂಲ ಕಾಲವೇ ಒದಗಿಬರಲು, ತಿರುವೇಂಕಟನು ಕಾರಭಾರಿಯ ಮಾತಿನಿಂದ ಕಂಗೆಡದೆ ಗಾಂಭೀರ್ಯದಿಂದ–ಹಾಗೇ ಆಗಲಿ; ನಾಯಬರ ಇಚ್ಛೆ; ಅವರ ಅಪ್ಪಣೆಯಂತೆ ನಡೆಯುವ ದಷ್ಟು, ನನ್ನ ಕೆಲಸವು. ಬೇಕಾದಾಗ ನನ್ನನ್ನು ದುರ್ಗದೊಳಗೆ ಕರೆಸಿಕೊಳ್ಳಬಹುದು; ಬಾದಶಹರ ಪುಣ್ಯದಿಂದಲೂ, ನಾಯಬಸಾಹೇಬರ ಅನುಗ್ರಹದಿಂದಲೂ ಇಲ್ಲಿಯಾದರೂ ನಮಗೇನು ಕೊರತೆಯಾಗುವ ಹಾಗಿದೆ? ತಿರುಗಿ ನಾಯಬರು ಸೂಚಿಸುವವರೆಗೆ ನಾನು ಈ ಸ್ಥಳಬಿಟ್ಟು ಕದಲುವದಿಲ್ಲ; ಆದರೆ ಈ ರಾಣೀವಾಸವನ್ನೂ, ಶಸ್ತ್ರಹೀನವಾಗಿರುವ ಈ ಕನ್ನಡವೀರ

ಪರಿವಾರವನ್ನೂ, ಕಂಪಲಿಯ ಸರ್ವಸಂಪತ್ತನ್ನೂ ಹೀಗೆ ಇಲ್ಲಿ ಬೈಲಲ್ಲಿ ಇರಗೊಡುವದಕ್ಕಿಂತ ಇವರೆಲ್ಲರನ್ನೂ ದುರ್ಗದಲ್ಲಿ ಭದ್ರವಾದ ಕಾವಲಿನಲ್ಲಿಡುವದು ನನಗೆ ನೆಟ್ಟಗೆ ಕಾಣುತ್ತದೆ. ಇದರ ಮೇಲೆ ನಾಯಬಸಾಹೇಬರ ಇಚ್ಛೆಯಂತೆ ನಡಕೊಳ್ಳುವೆನು ಎಂದು ನುಡಿಯಲು, ಒಳ್ಳೇದು, ಈ ಸಂಗತಿಯನ್ನು ನಾಯಬರಿಗೆ ತಿಳಿಸುವೆನು, ಎಂದು ಹೇಳಿ ಕಾರಭಾರಿಯು ತನ್ನ ವೀರಪರಿವಾರದೊಡನೆ ಹೊರಟುಹೋಗಿ ನಡೆದ ಸಂಗತಿಯನ್ನು ನಾಯಬನಿಗೆ ನಿವೇದನ ಮಾಡಿದನು.

ತನ್ನ ಕಾರಭಾರಿಯು ಹೇಳಿದ ವರ್ತಮಾನವನ್ನು ಕೇಳಿ ನಾಯಬನು ವಿಚಾರ ಕ್ಕೊಳಗಾದನು. ಕಾರಭಾರಿಯ ಮಾತಿನಿಂದ ತಿರುವೇಂಕಟನ ವಿಷಯವಾಗಿ ನಾಯಬನು ಸಂಶಯಪಡುವಹಾಗಿದ್ದಿಲ್ಲ, ಸೆರೆಯಾಳುಗಳನ್ನೂ, ಶಸ್ತ್ರಾಸ್ತ್ರಗಳನ್ನೂ, ಸಂಪತ್ತನ್ನೂ, ರಾಣೀ ವಾಸವನ್ನೂ ಬೈಲಲ್ಲಿಡುವದಕ್ಕಿಂತ ತಿರುವೇಂಕಟನು ಹೇಳಿದಂತೆ ದುರ್ಗದಲ್ಲಿ ಭದ್ರವಾಗಿ ಇಡುವದು ಅವನಿಗೂ ಸಮರ್ಪಕವಾಗಿ ತೋರಿತು; ಆದ್ದರಿಂದ ನಾಯಬನು ತನ್ನ ಮುಖ್ಯ ಕಾರ ಭಾರಿಯನ್ನು ಕುರಿತು–ಸೈಯದಖಾನ, ನಿನ್ನ ಮಾತಿನ ಮೇಲಿಂದ ತಿರುವೇಂಕಟನ ವಿಷಯವಾಗಿ ಅಷ್ಟು ಸಂಶಯಪಡುವ ಕಾರಣ ತೋರುವದಿಲ್ಲ. ಆದರೂ ಆತನಿಗೆ ಒಮ್ಮೆ ಹೇಳಿರುವಂತೆ ಕೆಲವು ದಿನ ಅವನು ತನ್ನ ಸೈನ್ಯದೊಡನೆ ಹೊರಗೇ ಇರಲಿ. ನೀನು ಈಗ ರಾಣೀವಾಸವನ್ನೂ, ಸೆರೆಯಾಳುಗಳನ್ನೂ, ಸಂಪತ್ತನ್ನೂ, ಕಸಿದುಕೊಂಡಿರುವ ಶಸ್ತ್ರಾಸ್ತ್ರಗಳನ್ನೂ ಚೆನ್ನಾಗಿ ಶೋಧಮಾಡಿ ದುರ್ಗದೊಳಗೆ ಹೊರಡಿಸಿಕೊಂಡು ಬಂದು ಅವನ್ನು ಭದ್ರವಾದ ಕಾವಲಿನಲ್ಲಿಡು. ಶಸ್ತ್ರಹೀನರಾದ ಸೈನಿಕರಿಂದ ಅಪಾಯವಾಗುವ ಹಾಗಿಲ್ಲದಿದ್ದರೂ, ಒಬ್ಬ ಸೆರೆಯಾಳಿಗೆ ನಮ್ಮ ಒಬ್ಬ ಸಶಸ್ತ್ರ ಸೈನಿಕನಂತೆ ದಂಡಾಳುಗಳನ್ನು ಕರಕೊಂಡುಹೋಗಿ ಕನ್ನಡಿಗರನ್ನು ರಕ್ಷಿಸುತ್ತ ದುರ್ಗದೊಳಗೆ ಕರೆತರತಕ್ಕದ್ದು, ಅವರ ಕಸಿದುಕೊಂಡ ಶಸ್ತ್ರಾಸ್ತ್ರಗಳನ್ನು ನಮ್ಮ ಶಸ್ತ್ರಾಗಾರದಲ್ಲಿಡಿಸಿ ರಾಣೀವಾಸವನ್ನೊತ್ತಟ್ಟಿಗೆ, ಸೆರೆಯಾಳುಗಳನ್ನೊತ್ತಟ್ಟಿಗೆ ಇಟ್ಟು ಕಂಪಲಿಯ ಕೋಟೆಯೊಳಗಿನ ಸಂಪತ್ತು ತುಂಬಿದ ಪೆಟ್ಟಿಗೆಗಳನ್ನು ಬೀಗಮುದ್ರೆಗೆ ಬಾಧೆಬಾರದಂತೆ ಸೆರೆಯಾಳುಗಳ ಹತ್ತಿರದಲ್ಲಿಯೇ ಒತ್ತಟ್ಟಿಗಿಟ್ಟು ಬಹು ಜಾಗರೂಕತೆಯಿಂದ ಕಾದಿರತಕ್ಕದ್ದು. ರಾಣೀವಾಸದ ಸ್ತ್ರೀಯರನ್ನು ನಮ್ಮ ನಂಬಿಗೆಯ ಸ್ತ್ರೀಯರ ಮುಖಾಂತರ ಶೋಧಮಾಡಿಸಿ, ಸೆರೆಯಾಳುಗಳ ಶೋಧವನ್ನು ನೀನು ಸ್ವತಃ ಮಾಡು. ಮುಖ್ಯಮಾತು, ಸೆರೆಯಾಳುಗಳ ಬಳಿಯಲ್ಲಿಯಾಗಲಿ, ರಾಣೀವಾಸದವರ ಬಳಿಯಲ್ಲಿಯಾಗಲಿ ಯಾವ ಬಗೆಯ ಸಣ್ಣಪುಟ್ಟ ಶಸ್ತ್ರಗಳು ಕೂಡ ಇರಲಾಗದು. ಈ ಮಾತಿನ ಜವಾಬುದಾರಿಯು ಸಂಪೂರ್ಣವಾಗಿ ನಿನ್ನ ತಲೆಯ ಮೇಲಿರುವದು. ಸಂಪತ್ತು ತುಂಬಿದ ಪೆಟ್ಟಿಗೆಗಳ ಶೋಧವನ್ನು ನಾಳೆ ದರ್ಬಾರದಲ್ಲಿ ನಾನು ಸ್ವತಃ ಮಾಡುವೆನು. ಈ ಪ್ರಸಂಗದಲ್ಲಿ ಮಾಧವಾಚಾರ್ಯರ ಕಾವಲನ್ನು ಅವರಿಗೆ ತಿಳಿಯದಂತೆ ಹೆಚ್ಚು ಬಿಗಿಯಾಗಿ ಮಾಡತಕ್ಕದ್ದು. ನಾಳೆ ಸೆರೆಯಾಳುಗಳೆಲ್ಲರ ವಿಚಾರವಾಗುವವರೆಗೆ ಆಚಾರ್ಯರು ತಮ್ಮ ವಾಸಸ್ಥಳನ್ನು ಬಿಟ್ಟು ಎರಡನೆಯ ಕಡೆಗೆ ಹೋಗಲಾಗದು; ಅಥವಾ ಸಂಕೋಚವೇಕೆ? ಅವರಿದ್ದ ಮನೆಗೆ ಬಿಗಿಯಾದ ಕಾವಲು

ಇಡೆಂದರಾಯಿತು. ಒಟ್ಟಿಗೆ ಶತ್ರುಗಳು ಶರಣುಬಂದರೆಂದು ನಾವು ಸಂತೋಷಪಡದೆ, ಬೆಂಕಿಯನ್ನು ಉಡಿಯಲ್ಲಿ ಕಟ್ಟಿಕೊಂಡಿರುವಂತೆ ಬಹು ಜಾಗರೂಕರಾಗಿರತಕ್ಕದ್ದು. ನಮ್ಮ ಸೈನಿಕರು ಯಾವಾಗಲೂ ಸಜ್ಜಾಗಿದ್ದು, ಕಾವಲಿನ ಸ್ಥಳಗಳ ಕಾವಲುಗಾರರೂ ಪೂರಾ ಎಚ್ಚತ್ತಿದ್ದು ಹೋಗಬರುವವರ ಶೋಧವನ್ನು ಬೇಸರಿಯದೆ ಮಾಡತಕ್ಕದ್ದು. ಈ ಮಾತುಗಳನ್ನು ಲಕ್ಷದಲ್ಲಿಟ್ಟು ಎಚ್ಚರದಿಂದ ಎಲ್ಲ ಕೆಲಸ ಮಾಡಿ ಬೇಗನೆ ನನಗೆ ಸುದ್ದಿಯನ್ನು ಹೇಳು.

ಈ ಮೇರೆಗೆ ಆಜ್ಞಾಪಿಸಲ್ಪಟ್ಟು ಸೈಯದಖಾನನು ದುರ್ಗದಲ್ಲಿ ಮಾಡತಕ್ಕ ವ್ಯವಸ್ಥೆಯನ್ನೆಲ್ಲ ಮೊದಲು ಮಾಡಿ ಕೂಡಲೆ ತಿರುವೇಂಕಟನ ಛಾವಣಿಗೆ ಹೋಗಿ ಮಲಿಕನಾಯಬನು ಹೇಳಿದಂತೆ ರಾಣೀವಾಸವನ್ನೂ, ಸೆರೆಯಾಳುಗಳನ್ನೂ, ಶಸ್ತ್ರತುಂಬಿದ ಪೆಟ್ಟಿಗೆಗಳನ್ನೂ ದೊಡ್ಡ ದೊಡ್ಡ ಕೀಲಿ ಹಾಕಿ ಅರಗಿನ ಮುದ್ರೆ ಒತ್ತಿದ್ದ ಸಂಪತ್ತು ತುಂಬಿದ ದೊಡ್ಡ ದೊಡ್ಡ ಪೆಟ್ಟಿಗೆ ಗಳನ್ನೂ ಹೊರಡಿಸಿಕೊಂಡು, ಶೂರರಾದ ಮುಸಲ್ಮಾನರ ದೊಡ್ಡ ಸೈನ್ಯದ ಸಹಾಯದಿಂದ ರಕ್ಷಿಸುತ್ತ ದುರ್ಗದ ಕಡೆಗೆ ಸಾಗಿದನು. ಎಲ್ಲಕ್ಕೂ ಮುಂದುಗಡೆಯಲ್ಲಿ ಮುಸಲ್ಮಾನರ ಸಶಸ್ತ್ರ ಸೈನ್ಯಭಾಗವು. ಅದರ ಹಿಂದಿನಿಂದ ಶಸ್ತ್ರಾಸ್ತ್ರಗಳು ತುಂಬಿದ ಪೆಟ್ಟಿಗೆಗಳು, ಅವುಗಳ ಹಿಂದಿ ನಿಂದ ಸೆರೆಯಾಳುಗಳು, ಅವರ ಹಿಂದಿನಿಂದ ರಾಣೀವಾಸದ ಜನರು, ಅವರ ಹಿಂದಿನಿಂದ ಸಂಪತ್ತು ತುಂಬಿದ ಪೆಟ್ಟಿಗೆಗಳು, ಅವುಗಳ ಹಿಂದಿನಿಂದ ಪುನಃ ಮುಸಲ್ಮಾನರ ಸಶಸ್ತ್ರ ಸೈನ್ಯವು ಈ ಕ್ರಮದಿಂದ ಶತ್ರುಗಳ ಕಡೆಯ ಜೊಂಜಾಟವನ್ನು ಸೈಯದಖಾನ ಕಾರಭಾರಿಯು ದುರ್ಗದ ಕಡೆಗೆ ಸಾಗಿಸಿಕೊಂಡು ನಡೆದಿದ್ದನು. ಕಾಂಚನಗಡದ ಮಹಾದ್ವಾರದೊಳಗಿಂದ ಹೋಗುವಾಗ ಸೂಕ್ಷ್ಮ ನಿರೀಕ್ಷಣವು ನಡೆಯಿತು. ಮೊದಲು ಸೈಯದಖಾನನು ಶಸ್ತ್ರಗಳ ಪೆಟ್ಟಿಗೆಗಳನ್ನು ಪರೀಕ್ಷಿಸಿ ಒಳಗೆ ಬಿಟ್ಟನು. ಆಮೇಲೆ ಸೈನಿಕರ ಪರೀಕ್ಷೆಯಾಯಿತು; ಜನಾನಖಾನೆಯು ನಿಜವಾಗಿಯೂ ಜನಾನಾಖಾನೆಯೇ ಇರುತ್ತದೆಂಬದನ್ನೂ, ಅದು ನಿಶ್ಯಸ್ತ್ರವಾಗಿರುತ್ತದೆಂಬದನ್ನೂ ಸ್ತ್ರೀಯರ ಮುಖಾಂತರ ಖಾನನು ಮನಗಂಡನು. ಇಷ್ಟೆಲ್ಲ ಆಗುವದರೊಳಗೆ ಹೊತ್ತು ಮುಣುಗಿದ್ದರಿಂದ, ಪರೀಕ್ಷಿಸಿ ಪರೀಕ್ಷಿಸಿ ಬೇಸತ್ತಿದ್ದ ಸೈಯದಖಾನನೂ, ಬೇರೆಯವರೂ ಕಂಪಲಿಯ ಖಜಾನಿಯ ಪೆಟ್ಟಿಗೆಗಳನ್ನು ಹೊರಹೊರಗೂ ಪರೀಕ್ಷಿಸದೆ ಹಾಗೇ ಒಳಗೆ ಬಿಟ್ಟರು. ಅವನ್ನು ಪರೀಕ್ಷಿಸಲು ನಾಯಬನು ಅಪ್ಪಣೆಮಾಡದೆಯಿದ್ದದ್ದರಿಂದ, ಅವುಗಳನ್ನು ಪರೀಕ್ಷಿಸುವ ಅವಶ್ಯಕತೆಯೂ ಇದ್ದಿಲ್ಲ. ನಾಯಬನು ಹೇಳಿದಂತೆಯೇ ಅವರವರನ್ನೂ, ಆಯಾ ವಸ್ತುಗಳನ್ನೂ ಆಯಾ ಸ್ಥಾನದಲ್ಲಿರಿಸಿ ಬಿಗಿಯಾದ ಕಾವಲಿಟ್ಟು, ಸೈಯದಖಾನನು ಆ ಎಲ್ಲ ಸಂಗತಿಯನ್ನು ನಾಯಬನಿಗೆ ತಿಳಿಸಿ ಆತನ ಅಪ್ಪಣೆಯಿಂದ ಹೊರಟುಹೋದನು.

ಹೀಗೆ ಇತ್ತ ಮಾಡತಕ್ಕ ಕೆಲಸ ಮಾಡಿದ್ದರಿಂದ ಸೈಯದಖಾನನೂ ಮಲಿಕನಾಯಬನೂ ಸಮಾಧಾನಪಡುತ್ತಿರಲು, ಅತ್ತ ತಿರುವೇಂಕಟನೂ, ಗಂಗಾಧಾರಶಾಸ್ತ್ರಿಯೂ ಮುಂದಿನ ಕೆಲಸಗಳಿಗಾಗಿ ಆಲೋಚಿಸತೊಡಗಿದರು. ಸೆರೆಯಾಳುಗಳೂ, ಸಂಪತ್ತಿನ ಪೆಟ್ಟಿಗೆಗಳೂ ದುರ್ಗವನ್ನು ಸೇರಿದ್ದರಿಂದ ಅವರಿಗೆ ಒಂದು ಬಗೆಯಿಂದ ಸಮಾಧಾನವಾಗಿತ್ತು. ನಾಳೆ ಸಂಜೆಯೊಳಗಾಗಿಯೇ ಮಾಧವಾಚಾರ್ಯರನ್ನು ಸೆರೆಯಿಂದ ಬಿಡಿಸದಿದ್ದರೆ ಎಲ್ಲರ ಪ್ರತಿಜ್ಞಾ

ಭಂಗವಾಗುತ್ತಿತ್ತು. ಸೆರೆಯಾಳುಗಳ ರೂಪದಿಂದ ಹುಕ್ಕ-ಬುಕ್ಕ-ಕೃಷ್ಣನಾಯಕ-ಮಲ್ಲಸರ್ಜ ಮೊದಲಾದ ವೀರಾಧಿವೀರರೆಲ್ಲ ಕಾಂಚನಗಡವನ್ನು ಸೇರಿದ್ದರು. ತಮ್ಮ ಗುರುವಿನ ಬಂಧವಿಮೋಚನೆಗಾಗಿ ಪ್ರಾಣವನ್ನಾದರೂ ಅರ್ಪಿಸಿ, ಮಾಡಬಾರದ ಸಾಹಸ ಮಾಡಲು ಸಿದ್ಧರಾಗಿದ್ದ ಬೈರಾಗಿಣಿಯೂ, ಪದ್ಮಿನಿಯೂ ಕಾಂಚನಗಡವನ್ನು ಸೇರಿದ್ದರು; ಇನ್ನು ಇವರೆಲ್ಲರು ನಿಶ್ಶಸ್ತ್ರರಾಗಿದ್ದು, ಅವರ ಕೈಯಲ್ಲಿ ಶಸ್ತ್ರಗಳು ಹ್ಯಾಗೆ ಬಂದಾವೆಂಬದೊಂದೇ ಚಿಂತೆಯು ಗಂಗಾಧರಶಾಸ್ತ್ರಿಯನ್ನೂ, ತಿರುವೇಂಕಟನನ್ನೂ ಬಾಧಿಸುತ್ತಿತ್ತು. ಅವರು ತಮ್ಮವರಿಗೆ ಶಸ್ತ್ರಗಳು ದೊರೆಯುವ ಬಗ್ಗೆ ಎರಡು ಮೂರು ಮಾರ್ಗಗಳನ್ನು ದುರ್ಗದಲ್ಲಿ ಮಾಡಿದ್ದರೂ, ತಾವು ಕಂಪಲಿಯ ಕೋಟೆಯಿಂದಲೇ ಗೊತ್ತುಮಾಡಿದ ಮಾರ್ಗದಿಂದ ತಮ್ಮವರಿಗೆ ಶಸ್ತ್ರಗಳು ಸಿಕ್ಕರೆ ಕಾರ್ಯವು ಸುಲಭವಾಗುವದೆಂತಲೂ, ಇಷ್ಟಾರ್ಥವು ಬೇಗನೆ ಸಾಧಿಸುವದೆಂತಲೂ ಅವರು ಯೋಚಿಸುತ್ತಿದ್ದರು. ತಮಗೆ ಅನುಕೂಲಕಾಲವಿರುವದರಿಂದ ತಮ್ಮ ಕಾರ್ಯವು ಸಾಧಿಸುವದೆಂಬ ವಿಶ್ವಾಸವು ಅವರಿಗೆ ಸಂಪೂರ್ಣವಾಗಿ ಇತ್ತು. ನಾಯಬನು ತನ್ನ ವಿಷಯವಾಗಿ ತೋರಿಸಿದ ಅವಿಶ್ವಾಸವು ತಿರುವೇಂಕಟನಿಗೆ ಅನುಕೂಲವೇ ಆಯಿತು. ಆತನು ತನ್ನ ಸೈನ್ಯದಲ್ಲಿ ಮಾಡತಕ್ಕ ಸಿದ್ಧತೆಯನ್ನೆಲ್ಲ ಮಾಡಿ ದುರ್ಗದ ಮೇಲಿನ ತಮ್ಮವರು ಸಾಂಕೇತಿಕ ಸೂಚನೆ ಮಾಡುವ ಹಾದಿಯನ್ನು ನೋಡುತ್ತ ಕುಳಿತುಕೊಂಡನು. ಆಗ ಶ್ರೀಕಂಠಶಾಸ್ತ್ರಿಯು ವಿರೂಪಾಕ್ಷಾರ್ಯರನ್ನು ಕುರಿತು—''ಮಹಾತ್ಮನ್, ನಮ್ಮಂಥ ಲೌಕಿಕರು ಎಷ್ಟು ಕುಟಿಲತಂತ್ರ ಮಾಡಿದರೂ, ಎಷ್ಟು ಆಯಾಸಪಟ್ಟರೂ ತಮ್ಮಂಥ ತಪಸ್ವಿ ಮಹಾತ್ಮರ ಕೃಪಾದೃಷ್ಟಿಯಿಲ್ಲದೆ ಮಹಾಕಾರ್ಯಗಳು ಸಾಧಿಸವು. ನಾವು ಮನುಷ್ಯಸಂಕಲ್ಪದಂತೆ ಮಾಡುವದನ್ನು ಮಾಡಿರುವೆವು; ಆದರೆ ಅದಕ್ಕೆ ದೇವಸಂಕಲ್ಪವು ಅನುಕೂಲವಾಗಿರಬೇಕು. ತಮ್ಮ ಕೃಪೆಯಿಂದ ಈವರೆಗೆ ನಮ್ಮ ಎಲ್ಲ ಯತ್ನಗಳು ಸಫಲವಾಗಿವೆ. ಆಚಾರ್ಯರ ಅಪ್ಪಣೆಯಂತೆ ನಾನು ತಿರುವೇಂಕಟ ಸರದಾರರ ಬಳಿಯಲ್ಲಿದ್ದು, ಅವರ ದ್ರೋಹಬುದ್ಧಿಯಿಂದ ಸ್ವದೇಶದ ಕಾರ್ಯಕ್ಕೆ ಅಪಾಯತಟ್ಟದೆ ಅನುಕೂಲವಾಗುವಂತೆ ತಂತ್ರಗಳನ್ನು ಒಡ್ಡುತ್ತ ಬಂದೆನು; ಆದರೆ ತಮ್ಮ ಯೋಗದಿಂದ ನಮ್ಮ ಸರದಾರರ ಬುದ್ಧಿಯು ತಿರುಗಿ ಅವರು ಸ್ವದೇಶೋದ್ಧಾರಕ್ಕಾಗಿ ಟೊಂಕ ಕಟ್ಟದಿದ್ದರೆ ನನ್ನ ತಂತ್ರದ ಗತಿಯು ಏನಾಗುತ್ತಿತ್ತೆಂಬದನ್ನು ಹೇಳಲಾಗುವದಿಲ್ಲ; ಲೌಕಿಕ ಬುದ್ಧಿಯು ನನ್ನ ತಂತ್ರಗಳೆಲ್ಲ ವಿಪರೀತವಾಗಿ ಪರಿಣಮಿಸಿ, ತಿರುವೇಂಕಟ ಸರದಾರರ ಶಾಸನಕ್ಕೆ ನಾನು ಗುರಿಯಾಗುವ ಸಂಭವವಿತ್ತು; ಆದರೆ ಮಹಾತ್ಮನ್, ಈವರೆಗೆ ನಮ್ಮನ್ನು ಅನುಗ್ರಹಿಸಿದಂತೆ ಈಗಲೂ ಅನುಗ್ರಹಿಸಬೇಕು. ಮತ್ತು ತಮ್ಮಂಥ ಸಜ್ಜನರ ಎದುರಿನಲ್ಲಿ ಒಡ್ಡುತ್ತಿರುವ ಕುಟಿಲ ರಾಜತಂತ್ರಕ್ಕಾಗಿ ನಮ್ಮನ್ನು ಕ್ಷಮಿಸಬೇಕು'' ಎಂದು ಪ್ರಾರ್ಥಿಸುತ್ತಿರಲು, ವಿರೂಪಾಕ್ಷಾರ್ಯರು-''ಶಾಸ್ತ್ರಿಗಳೇ, ಕರ್ನಾಟಕವು ಯವನ ಬಾಧೆಯಿಂದ ಮುಕ್ತವಾಗುವದು ಶ್ರೀವಿರೂಪಾಕ್ಷನ ಮನಸ್ಸಿಗೇ ಬಂದಿರುವಾಗ ನಮ್ಮ ನಿಮ್ಮ ಯತ್ನಗಳು ಸಫಲವಾಗದೇನು ಮಾಡುವುವು? ಕೌಟಿಲ್ಯಕ್ಕೆ ಕೌಟಿಲ್ಯವನ್ನು ಎದುರು ಮಾಡುವದು ಒಂದು ದೃಷ್ಟಿಯಿಂದ ಅಯುಕ್ತವಲ್ಲ. ಮಾಧವಾಚಾರ್ಯರಂಥ ಮಹಾತಪಸ್ವಿಗಳು ಮುಂದಾಗಿರುವ ಕಾರ್ಯವು

ಶಿವನ ಮನ್ಸಿಗೆ ಬಾರದ್ದಾಗಿರಬಹುದೇ? ಎಲ್ಲಕ್ಕೂ ಶಿವನೇ ಹೊಣೆಗಾರನು. ಈ ವಿಷಯವಾಗಿ ನಾವೂ ನೀವೂ ಅವಿಶ್ವಾಸಪಡುವ ಕಾರಣವಿಲ್ಲ. ನಾಳೆ ಸಂಜೆಯೊಳಗಾಗಿ ಮಾಧವಾಚಾರ್ಯರ ಬಂಧವಿಮೋಚನವು ನಮ್ಮ ಕನ್ನಡಿಗರ ಮಹಾಪೌರುಷದಿಂದ ಆಗಲೇಬೇಕು!

## ಕನ್ನಡಿಗರ ರಣರಕ್ಕಸತನ!

ಹುಕ್ಕನೇ ಮೊದಲಾದ ರಣಶೂರ ಕನ್ನಡಿಗರು ಕಾರಾಗ್ರಹವಾಸಿಗಳಾಗಿರುವಾಗ ಅವರು ಯಾವಾಗ ಹೊತ್ತು ಮುಣುಗಿ ಕತ್ತಲಾಗುವದೆಂಬ ಹಾದಿಯನ್ನು ನೋಡುತ್ತಿದ್ದರು. ನಾಳೆ ಸಂಜೆಯೊಳಗಾಗಿ ಮಾಧವಾಚಾರ್ಯರನ್ನು ಸೆರೆಮನೆಯೊಳಗಿಂದ ಬಿಡಿಸದಿದ್ದರೆ, ಅವರ ಪ್ರತಿಜ್ಞಾಭಂಗವಾಗುತ್ತಿತ್ತು. ಪದ್ಮಿನಿಯೂ ಬೈರಾಗಿಣಿಯೂ ತಮ್ಮ ಪ್ರತಿಜ್ಞೆಯಂತೆ ಅನ್ನಗ್ರಹಣಮಾಡದೆ, ವಿರೂಪಾಕ್ಷಾರ್ಯರ ಅಪ್ಪಣೆಯಿಂದ ಹಾಲಿನಮೇಲಿದ್ದು ಅಂದಿಗೆ ಏಳು ದಿನಗಳಾಗಿದ್ದವು. ಅದರಂತೆ ಉಳಿದವರೂ ಆಚಾರ್ಯರ ಬಂಧವಿಮೋಚನ ಮಾಡಿಯೇ ಅನ್ನಗ್ರಹಣ ಮಾಡಬೇಕೆಂದು ಅಂದು ಉಪೋಷಣ ಮಾಡಿದ್ದರು. ಆ ಸತ್ವಸ್ಥರ ಚಿತ್ತವೃತ್ತಿಗಳೆಲ್ಲ ಆಚಾರ್ಯರ ಬಂಧವಿಮೋಚನದ ವಿಷಯದಲ್ಲಿ ಏಕಾಗ್ರವಾದದ್ದರಿಂದ, ಬೇರೆ ವಿಚಾರಗಳೇ ಅವರಿಗೆ ಸೂಚಿಸದಾಗಿದ್ದವು. ಆ ಸೆರೆಯಾಳುಗಳಾಗಿದ್ದವರಲ್ಲಿ ಸಕಲ ಜಾತಿಯವರೂ ಇದ್ದರು. ಅವರ ಸಂಖ್ಯೆಯು ಇನ್ನೂರರ ಹೊರಬಳಗಿರಬಹುದು. ತಿರುವೇಂಕಟನು ಕನ್ನಡಿಗರಲ್ಲಿಯ ಮುಖಂಡರೆಂದು ಅವರನ್ನು ಸೆರೆಹಿಡಿದು ಕಳಿಸಿದ್ದನು; ಆದರೆ ಮಾಧವಾಚಾರ್ಯರ ಬಂಧವಿಮೋಚನೆಯಲ್ಲಿ ಪ್ರಾಣವನ್ನರ್ಪಿಸಲು ಸಿದ್ಧರಾದ ಆ ವೀರರು ಮೇಲಾಟದಿಂದ ಸೆರೆಮನೆಯನ್ನು ಸೇರಿದ್ದರೆಂದು ವಾಚಕರು ತಿಳಿಯತಕ್ಕದ್ದು. ಈ ಸೆರೆಯಲ್ಲಿದ್ದ ಜನರಷ್ಟೇ ಆಚಾರ್ಯರ ಬಂಧವಿಮೋಚನೆಗಾಗಿ ತಮ್ಮ ಶಿರಸ್ಸುಗಳನ್ನು ಕೈಯಲ್ಲಿ ತಕ್ಕೊಂಡು ಸಿದ್ಧರಾಗಿದ್ದರೆಂತಲ್ಲ; ಕೋಟೆಯೊಳಗಿದ್ದು ಇವರ ಸೂಚನೆಯಾದ ಕೂಡಲೆ ಇವರಂತೆಯೇ ಆಚಾರ್ಯರ ಸಲುವಾಗಿ ಪ್ರಾಣವನ್ನರ್ಪಿಸಲು ಸಿದ್ಧರಾದ ಅಸಂಖ್ಯ ಜನರು ಆವೇಶಗೊಂಡು ಜೀವದ ಹಂಗಿಲ್ಲದೆ ಆಯಾ ಸಂಕೇತ ಸ್ಥಳದಲ್ಲಿದ್ದು, ಯಾವಾಗ ಸೂಚನೆಯಾಗುವದೆಂದು ಹಾದಿಯನ್ನು ನೋಡುತ್ತಿದ್ದರು. ಅಂಥ ಸ್ವಾರ್ಥತ್ಯಾಗಿಗಳಾದ ವೀರಪುರುಷರಲ್ಲಿ ಬ್ರಾಹ್ಮಣರಿದ್ದರು, ಲಿಂಗವಂತರಿದ್ದರು, ಕುರುಬರಿದ್ದರು, ಕಬ್ಬೇರರಿದ್ದರು, ಬೇಡರಿದ್ದರು, ಹೊಲೆಯರಿದ್ದರು! ಬಹಳ ಹೇಳುವದೇನು, ಮಹಾತ್ಮರಾದ ಮಾಧವಾಚಾರ್ಯರು ದೇಶೋದ್ಧಾರಕ್ಕಾಗಿ ಕರ್ನಾಟಕದ ಸಕಲ ಜಾತಿಯವರನ್ನೂ ಸಂಗ್ರಹಿಸಿದ್ದರು. ಅವರ ಲೋಕಸಂಗ್ರಹದ ರೀತಿಯು ಪರಿಶುದ್ಧವಾದದ್ದೂ, ಆಶ್ಚರ್ಯಕರವಾದದ್ದೂ ಇತ್ತು. ಆಚಾರ್ಯರ ಈ ಅನುಯಾಯಿಗಳು ತಮ್ಮ ಜಾತಿ–ಕುಲ–ಪಂಥ ಮೊದಲಾದವುಗಳ ಭೇದವನ್ನು ಮರೆಯತಕ್ಕಂಥ ರಾಜಕೀಯ ಪ್ರಸಂಗದಲ್ಲಿ ಅವನ್ನು ಮರೆತು ಒಟ್ಟುಗೂಡುವರು,

ಅವನ್ನು ಮರೆಯಲಾಗದ ಧಾರ್ಮಿಕ ಪ್ರಸಂಗದಲ್ಲಿ ಮರೆಯದೆ ಬೇರೆ ಬೇರೆಯಾಗಿರುವರು. ಒಟ್ಟಿಗೆ ದೇಶಕಾರ್ಯವಿದ್ದು, ಪವಿತ್ರ ದೇಶಾಭಿಮಾನ ಪ್ರೇರಿತರಾದಾಗ ಆ ಹೊಲೆಹದಿನೆಂಟು ಜಾತಿಯವರು ಹೊಂದಿಕೊಂಡ ಬೆರಳಿನ ಹಸ್ತದಂತೆ, ತಮ್ಮ ಶಕ್ತಿಸರ್ವಸ್ವವನ್ನೂ ಒಟ್ಟುಗೂಡಿಸಿ ದೇಶಕಾರ್ಯವನ್ನು ನಿರ್ವಹಿಸುತ್ತಿದ್ದರು. ಧರ್ಮಕಾರ್ಯವಿದ್ದು, ಅವರು ಪವಿತ್ರ ಧರ್ಮಾಭಿಮಾನ ಪ್ರೇರಿತರಾದಾಗ ತೆರೆದ ಬೆರಳಿನ ಹಸ್ತದಂತೆ ತಮ್ಮ ತಮ್ಮ ಧರ್ಮ ಪದ್ಧತಿಗಳ ಪ್ರಕಾರ ಬೇರೆ ಬೇರೆಯಾಗಿದ್ದು, ಭಾವಿಕತನದ ಬಲದಿಂದ ಆತ್ಮಶುದ್ಧಿಯನ್ನು ಪಡೆದು ಈಶಕೃಪೆಗೆ ಪಾತ್ರರಾಗುತ್ತಿದ್ದರು! ಒಟ್ಟಿಗೆ ಅವರು ವರ್ಣಸಂಕರ ಮಾಡುವಷ್ಟು ಧರ್ಮಲಂಡರೂ, ನಾಸ್ತಿಕರೂ ಇದ್ದಿಲ್ಲ; ಅದರಂತೆ ಪ್ರೇಮಭಂಗವನ್ನುಂಟುಮಾಡಿಕೊಳ್ಳುವವರೆಗೆ ಜಾತಿಭೇದದ ಕಸುವು ಬಳಿಸಿ ಪತಿತರಾಗುವಷ್ಟು ದುರಭಿಮಾನಿಗಳೂ, ಡಾಂಭಿಕರೂ ಇದ್ದಿಲ್ಲ. ಮಾದಿಗರ ನೆರಳು ಬಿದ್ದರೆ ಅಪವಿತ್ರನಾದೆನೆಂದು ಭಾವಿಸುವ ಬ್ರಾಹ್ಮಣನೂ, ನನ್ನ ನೆರಳು ಬಿದ್ದರೆ ನಾನು ಪಾಪಿಯಾದೇನೆಂದು ಭಾವಿಸುವ ಮಾದಿಗನೂ ಈಗ ಮಲಿಕನಾಯಬನ ಸೆರೆಮನೆಯಲ್ಲಿ ಆಚಾರ್ಯರ ಬಂಧವಿಮೋಚನ ಮಾಡುವ ಆವೇಶದಲ್ಲಿ ಭುಜಕ್ಕೆ ಭುಜವನ್ನು ಆನಿಸಿ ಕುಳಿತುಕೊಂಡಿದ್ದರು, ಆ ಹೊಲೆ ಹದಿನೆಂಟು ಜಾತಿಯ ಕನ್ನಡಿಗರ ಮುಖ್ಯಸ್ಥರು, ತಾವು ಕರ್ನಾಟಕಸ್ಥರೆಂಬ ಒಂದೇ ಭಾವನೆಯಿಂದ ಪ್ರೇರಿತರಾಗಿ ಕರ್ನಾಟಕದಲ್ಲಿ ಸ್ವಾತಂತ್ರ್ಯ ರಕ್ಷಣಕ್ಕಾಗಿ ಸೆರೆಮನೆಯನ್ನು ಸೇರಿದ್ದರಲ್ಲದೆ, ತಮ್ಮ ತಮ್ಮ ಜಾತಿ–ಧರ್ಮದಂತೆ ಆಚರಿಸಿ, ತಮ್ಮ ಧರ್ಮಶೀಲತೆಯನ್ನು ಕಾಯ್ದುಕೊಳ್ಳುವದಕ್ಕಾಗಿ ಸೆರೆಮನೆಯನ್ನು ಸೇರಿದ್ದಿಲ್ಲ. ಬ್ರಾಹ್ಮಣರ ಸ್ನಾನಸಂಧ್ಯಾದಿ ಕರ್ಮಗಳು, ಲಿಂಗವಂತರ ಲಿಂಗ ಪೂಜೆ, ಮಾದಿಗರ ದುರಗವ್ವನ ಪೂಜೆ, ಅದರಂತೆ ಉಳಿದ ಆಯಾ ಜಾತಿಯವರ ಪೂಜೆ ಪುನಸ್ಕಾರ ಇವೆಲ್ಲ ಈಗಿನ ಕಾಲದಲ್ಲಿ ಆಚಾರ್ಯರ ಬಂಧವಿಮೋಚನೋಪಾಯವೆಂಬ ಒಂದೇ ಒಂದಾದ ಏಕಾಗ್ರತೆಯ ಔಪಾಸನೆಯ ಸ್ವರೂಪವನ್ನು ಹೊಂದಿದ್ದವು. ಸೆರೆಮನೆಯೊಳಗಿನ ಪ್ರತಿ ಒಬ್ಬ ಕನ್ನಡಿಗನು ನಾನು ಆಚಾರ್ಯರ ಬಂಧವಿಮೋಚನೆಯನ್ನು ಮಾಡಿಯೇತೀರುವೆನೆಂಬ ದೃಢ ನಿಶ್ಚಯ ಉಳ್ಳವನಾಗಿ, ತಾನು ಎಲ್ಲರಿಗಿಂತಲೂ ಹೆಚ್ಚು ಸಾಹಸವನ್ನು ಹ್ಯಾಗೆ ಮಾಡೇನೆಂದು ಯೋಚಿಸುತ್ತಿದ್ದನು. ಆ ಸೆರೆಮನೆಯಲ್ಲಿದ್ದು ಪವಿತ್ರ ದೇಶಭಕ್ತರಲ್ಲಿ ಆಗಿನ ಕಾಲಕ್ಕೆ ಜಾತಿ–ಕುಲ–ಪಂಥಾದಿಗಳ ಭೇದಗಳಂತು ಇರಲಿ ಸ್ತ್ರೀ–ಪುರುಷರ ಭೇದವೂ, ಶ್ರೇಷ್ಠ ಕನಿಷ್ಠ ಭೇದವೂ ಇದ್ದಿಲ್ಲ. ಪದ್ಮಿನಿಯು ತಾನು ರಾಜಪುತ್ರಿಯೆಂಬದನ್ನು ಮರೆತಿರುವಂತೆ, ಬೈರಾಗಿಣಿಯು ತಾನು ಸಾಮಾನ್ಯ ಸ್ತ್ರೀಯೆಂಬದನ್ನು ಮರೆತಿದ್ದಳು. ಒಟ್ಟಿಗೆ ಆ ಸೆರೆಮನೆಯಲ್ಲಿದ್ದ ಆ ಪುಣ್ಯವಂತ ದೇಶಭಕ್ತರು ದೈಹಿಕ ಉಪಾಧಿಯ ಭೇದಭಾವಗಳನ್ನೆಲ್ಲ ಮರೆತುಬಿಟ್ಟು, ತಾವೆಲ್ಲರು ಆಚಾರ್ಯರ ಬಂಧವಿಮೋಚನೆಗಾಗಿ ಒಟ್ಟುಗೂಡಿದ ಪ್ರತಿಜ್ಞಾಬದ್ಧರಾದ ಮಹಾಪೌರುಷಿಗಳೆಂಬ ಒಂದೇ ಒಂದಾದ ಸದ್ಭಾವದಿಂದ ಭೂಷಿತರಾಗಿದ್ದರು!

ಹೀಗಿರುವಾಗ ನಾಲ್ಕು ತಾಸು ರಾತ್ರಿಯಾಯಿತು. ಅಂದು ಕೃಷ್ಣಪಕ್ಷದ ಚತುರ್ದಶಿಯ ತಿಥಿಯಿದ್ದದ್ದರಿಂದ ಕಗ್ಗತ್ತಲೆಯು ಮುಸುಕಿತ್ತು, ಸೆರೆಮನೆಯ ನೆರೆಯಲ್ಲಿಟ್ಟಿದ್ದ ಪೊಹರಿನ

ಪೆಟ್ಟಿಗೆಗಳ ಮೊಹರುಗಳನ್ನು ಒಡೆದು ಬುಕ್ಕನು ಬಡಬಡ ಅವುಗಳ ಕೀಲಿಗಳನ್ನು ತೆಗೆದನು. ಆ ಪೆಟ್ಟಿಗೆಗಳಲ್ಲೆಲ್ಲ ವಿವಿಧ ತೀಕ್ಷ್ಣಶಸ್ತ್ರಗಳೂ, ಯುದ್ಧೋಪಯೋಗಿಯ ಉಡುಪು ತೊಡುಪು ಗಳೂ ತುಂಬಿದ್ದವು. ಎಲ್ಲ ವೀರರೂ ತಮ್ಮ ತಮ್ಮ ಶಸ್ತ್ರಗಳನ್ನು ತಕ್ಕೊಂಡು ಉಡುಪು ತೊಡುಪುಗಳನ್ನು ಧರಿಸಿದರು. ಸೆರೆಮನೆಯ ಬಹು ಎತ್ತರವಾದ ಗೋಡೆಗಳನ್ನು ಹತ್ತಿ ಇಳಿದ ಹೊರತು ಸೆರೆಮನೆಯ ಹೊರಗೆ ಬರಲಿಕ್ಕೆ ಅವರಿಗೆ ಮಾರ್ಗವಿದ್ದಿಲ್ಲ. ಸೆರೆಮನೆಯ ಭದ್ರವಾದ ಗಚ್ಚಿನ ಗೋಡೆಗಳು ಬಹು ಎತ್ತರವಾಗಿದ್ದದ್ದರಿಂದ ಅವನ್ನು ಏರಿಹೋಗುವದು ಅಸಾಧ್ಯವಾಗಿತ್ತು. ಈ ಪ್ರಸಂಗದಲ್ಲಿ ಪುರುಷ ವೇಷಧಾರಿಯಾದ ಬೈರಾಗಿಣಿಯು ಒಂದು ಪೆಟ್ಟಿಗೆಯನ್ನು ತೆರೆದು ಅದರೊಳಗಿನ ಒಂದು ಉಡವನ್ನು ಹೊರಗೆ ತಗೆದಳು. ಆಕೆಯ ಈ ಮುಂಜಾಗ್ರತೆಯನ್ನು ನೋಡಿ ಬುಕ್ಕನೇ ಮೊದಲಾದ ವೀರರಿಗೆ ಬಹಳ ಆಶ್ಚರ್ಯವಾಯಿತು. ಅವರು ಬೈರಾಗಿಣಿಯನ್ನು ಬಹಳವಾಗಿ ಕೊಂಡಾಡಿದರು. ಬಳಿಕ ಆ ವೀರರು ಸಪ್ಪಳಿಲ್ಲದಂತೆ ಸೆರೆಮನೆಯ ಮಹಾದ್ವಾರದಿಂದಾಚೆಕಡೆ ಸ್ವಲ್ಪ ದೂರವಾಗಿ ಆ ಉಡವನ್ನು ಒಯ್ದು ಅದರ ಟೊಂಕಕ್ಕೆ ಒಂದು ಸರಪಳಿಯನ್ನು ಕಟ್ಟಿ ಅದನ್ನು ನಮಸ್ಕರಿಸಿ, ಮಾಧವಾಚಾರ್ಯರನ್ನು ಮನಸ್ಸಿನಲ್ಲಿ ಸ್ಮರಿಸಿ, ಹಂಪೆಯ ಶ್ರೀ ವಿರೂಪಾಕ್ಷನನ್ನು ಧ್ಯಾನಿಸುತ್ತ ಆ ಉಡವನ್ನು ಗೋಡೆಯ ಮೇಲೆ ಏರಿಸಿದರು. ಆಗ ಆ ಉಡವು ವೀರರಿಗೆ ಉತ್ಸಾಹವಾಗುವಂತೆ ಸರಸರ ಗೋಡೆಯನ್ನೇರಿ ಸದುವು ನೋಡಿ ತನ್ನ ಉಗುರುಗಳಿಂದ ಗೋಡೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಗೋಡೆಗೆ ರಾವಿಕೊಂಡಿತು. ಅದು ಗೋಡೆಯನ್ನು ಗಟ್ಟಿಯಾಗಿ ಹಿಡಿದುಕೊಂಡಿದೆಯೋ ಇಲ್ಲವೋ ಎಂಬದನ್ನು ನೋಡವದಕ್ಕಾಗಿ ಮಲ್ಲಸರ್ಜನೂ, ಮಾದಿಗರ ದುರಗಪ್ಪನೂ ಸರಪಳಿಯನ್ನು ಗಟ್ಟಿಯಾಗಿ ಜಗ್ಗಿ ನೋಡಿದರು; ಆದರೆ ಉಡವುತಾನು ಹಿಡಿದುಕೊಂಡಿದ್ದ ಸ್ಥಳವನ್ನು ಬಿಟ್ಟು ಉಲುಕಲಿಲ್ಲ. ಆಗ ಹುಕ್ಕ ದೊರೆಯು– ಏರಿಹೋಗುವವರಾರು? ಮುಂದಕ್ಕೆ ಬರ್ರಿ, ಎಂದು ಅನ್ನುವದರೊಳಗಾಗಿಯೇ ವೀರರ ತಂಡವು ನಾಮುಂದೆ ನೀಮುಂದೆ ಅನ್ನುವಂತೆ ಸರಪಳಿಯನ್ನು ಮುತ್ತಿತು; ಆದರೆ ಯವನ ವೇಷದಾರಿಯಾದ ಬೈರಾಗಿಣಿಯು ಏನು ಮಾಡಿದರೂ ಹಿಡಿದ ಸರಪಳಿಯನ್ನು ಬಿಡದೆ ಹುಕ್ಕ ದೊರೆಯನ್ನು ಕುರಿತು ಮೆಲ್ಲಗೆ–ಅಣ್ಣಾ, ನಾನು ಮೊದಲು ಹತ್ತಿ ಹೋಗಿ ಉಡವು ಭದ್ರವಾಗಿ ಹಿಡಿದುಕೊಂಡು ಕುಳಿತಿದೆಯೋ ಇಲ್ಲವೋ ಎಂಬದನ್ನು ಪರೀಕ್ಷಿಸಿ ನೋಡುವೆನು. ಆಮೇಲೆ ಬೇಕಾದವರು ಹತ್ತಿ ಬರಬಹುದು. ನಮ್ಮ ಈ ''ಜಯಾ'' ಎಂಬ ಹೆಸರಿನ ಉಡವನ್ನು ತಕ್ಕೊಂಡು ಹೋಗುವಂತೆ ಮಹಾತ್ಮರಾದ ವಿರೂಪಾಕ್ಷಾರ್ಯರು ಸೂಚಿಸಿದ್ದರಿಂದ, ಆ ಮಹಾತ್ಮರ ಕೃಪಾಸಂಪಾದನೆಗಾಗಿ ನಾನೇ ಮೊದಲು ಹತ್ತಿ ಹೋಗವವಳು. ನಮ್ಮ ಜಯೆಯು ನನ್ನ ಮೈಭಾರವನ್ನು ಸಹಜವಾಗಿ ಸಹಿಸಬಹುದು. ನಾನು ಮೇಲೆ ಹೋದೆನೆಂದರೆ, ನಿಮ್ಮಂಥ ವೀರರು ಮೇಲಕ್ಕೆ ಹತ್ತಿಬರುವಾಗ ನಿಮ್ಮ ಭಾರವನ್ನು ಸಹಿಸುವದಕ್ಕಾಗಿ ನಾನು ನಮ್ಮ ಜಯೆಗೆ ಸಹಾಯ ಮಾಡುವೆನು. ನಾನು ಗೋಡೆಯೇರಿ ಹೋದಕೂಡಲೆ ನನ್ನ ಸಂಗಡ ತಂದಿರುವ ಈ ಹಗ್ಗವನ್ನು ಉಡದ ಟೊಂಕಕ್ಕ ಕಟ್ಟಿ ಅದನ್ನು ಕೋಟೆಯ ಗೋಡೆಯ ಹೊರಬದಿಗೆ

ಇಳಿಬಿಡುವೆನು. ಈ ಸರಪಳಿಯಿಂದ ಏರಿಬಂದ ವೀರನು ಆ ಹಗ್ಗದಿಂದ ಕೋಟೆಯ ಗೋಡೆಯ ಕೆಳಗೆ ಇಳಿದು ಹೋಗುವವರೆಗೆ ನಾನು ಈ ಸರಪಳಿಯನ್ನು ಮೇಲಕ್ಕೆ ಎತ್ತಿ ಹಿಡಿದು, ಅವನು ಕೆಳಗೆ ಇಳಿದಕೂಡಲೆ ಇದನ್ನು ಮತ್ತೆ ಕೆಳಗೆ ಬಿಡುವೆನು. ಹೀಗೆ ಸರಪಳಿಯನ್ನು ಎತ್ತಿಹಿಡಿಯುವ, ಹಾಗು ಕೆಳಗೆ ಬಿಡುವ ಕೆಲಸವನ್ನು ಬಹು ಎಚ್ಚರದಿಂದ ಮಾಡುವವರು ಮೇಲೆಯೊಬ್ಬರು ಯಾರಾದರೂ ಇರಬೇಕಾಗುತ್ತದಷ್ಟೆ? ಆ ಕೆಲಸವನ್ನು ನಾನು ಮಾಡುವೆನು. ಈ ವಿಷಯದಲ್ಲಿ ಅಜಾಗರೂಕತೆ ತಾಳಿದರೆ ಇತ್ತ ಸರಪಳಿಯಿಂದ ಗೋಡೆಯನ್ನೇರುವ ವೀರನ, ಹಾಗು ಅತ್ತ ಹಗ್ಗದಿಂದ ಗೋಡೆ ಇಳಿದುಹೋಗುವ ವೀರನ ಹೀಗೆ ಇಬ್ಬರ ಭಾರವು ನಮ್ಮ ಜಯೆಯ ಮೇಲೆ ಬಿದ್ದು, ಅದು ಗಾಸಿಯಾದೀತು. ಇದಲ್ಲದೆ ಈ ಇನ್ನೊಂದು ಹಗ್ಗವನ್ನು ಈ ಗೋಡೆಯ ಬಳಿಯಲ್ಲಿರುವ ಈ ಮರಕ್ಕೆ ಕಟ್ಟಿ ಅದನ್ನೂ ನನ್ನ ಟೊಂಕಕ್ಕೆ ಕಟ್ಟಿರಿ. ನಾನು ಮೇಲೆ ಹೋದಬಳಿಕ ಅದನ್ನು ಗೋಡೆಯ ಕೆಳಗೆ ಇಳಿಬಿಡುವೆನು. ಅಂದರೆ ಎರಡೂ ಹಗ್ಗಗಳಿಂದ ಇಳಿದುಹೋಗುವದಕ್ಕಾಗಲಿ, ಅಥವಾ ಒಂದು ಹಗ್ಗದಿಂದಿಳಿದು ಹೋಗುವಾಗ ಒಂದು ಹಗ್ಗವು ಆಸರ ಹಿಡಿಯುವದಕ್ಕಾಗಲಿ ವೀರರಿಗೆ ಉಪಯೋಗಿಸುವದು. ಅಣ್ಣಾ, ಸದ್ಗುರುನಾಥನ ಕಾರ್ಯದಲ್ಲಿ ನನ್ನ ಪಾಲಿಗೆ ಇದಿಷ್ಟು ಚಾಕರಿಯನ್ನು ನನಗೆ ಬಿಟ್ಟುಕೊಡು, ಇಲ್ಲೆನಬೇಡ ಎಂದು ನುಡಿದು ಬೈರಾಗಿಣಿಯು ಹಗ್ಗವನ್ನು ಟೊಂಕಕ್ಕೆ ಕಟ್ಟಿಕೊಂಡು ತನ್ನ ಪಟ್ಟಾಕತ್ತಿಯನ್ನು ಬಾಯಲ್ಲಿ ಹಿಡಕೊಂಡು ಸರಸರ ಏರತೊಡಗಿ ಕ್ಷಣಮಾತ್ರದಲ್ಲಿ ಗೋಡೆಯ ಮೇಲೆ ಹೋಗಿ ಕುಳಿತುಕೊಂಡಳು. ಹೀಗೆ ಆ ಗುರುಭಕ್ತಳು ಮೇಲೆ ಹೋಗಿ ಕುಳಿತುಕೊಳ್ಳುವದರೊಳಗಾಗಿಯೇ ಯವನ ವೇಷಧಾರಿಯಾದ ಪದ್ಮಿನಿಯು ಬಂದು ಹಗ್ಗವನ್ನು ಹಿಡಿದು ''ಬೈರಾಗಿಣಿಯಿದ್ದಲ್ಲಿ ಪದ್ಮಿನಿಯು, ಆದ್ದರಿಂದ ಬುಕ್ಕದೊರೆಗಳು ಹಿಂದಕ್ಕೆ ಸರಿಯಬೇಕು'' ಎಂದು ನುಡಿದು ಆಶ್ಚರ್ಯದಿಂದ ಬುಕ್ಕದೊರೆಯು ಹಿಂದಕ್ಕೆ ಸರಿದು ನೋಡುತ್ತಿರುವಾಗಲೇ ಪದ್ಮಿನಿಯು ಗೋಡೆಯ ತುದಿಯನ್ನು ಕಾಣಲು, ಬೈರಾಗಿಣಿಯು ಆಕೆಯ ಕೈಹಿಡಿದು ಕರಕೊಂಡಳು! ಅಹಹ! ಆಚಾರ್ಯರ ಸಚ್ಛಿಷ್ಯರಲ್ಲಿಯ ಭಕ್ತಿಯ ಆವೇಶವು ಏನು ಮಾಡಿಸಲಿಕ್ಕಿಲ್ಲ? ತರುವಾಯ ಬೈರಾಗಿಣಿ–ಪದ್ಮಿನಿಯರ ಬಹುಚಾತುರ್ಯದ ವ್ಯವಸ್ಥೆಯಿಂದ ಒಂದು ತಾಸಿನೊಳಗಾಗಿ ಎಲ್ಲ ಸೆರೆಯಾಳುಗಳು ಶಸ್ತ್ರಪಾಣಿಗಳಾಗಿ ಸದ್ದಿಲ್ಲದೆ ಸುರಕ್ಷಿತಗೋಡೆಯು ಕೆಳಗಿಳಿಯಲು, ಬೈರಾಗಿಣಿಯೂ ಪದ್ಮಿನಿಯೂ ಕೆಳಗಿಳಿದು ಉಡವನ್ನು ಇಳಿಸಿಕೊಂಡು ಯಥಾ ಸ್ಥಿತವಾಗಿ ಅದನ್ನು ಪೆಟ್ಟಿಗೆಯಲ್ಲಿ ಹಾಕಿದರು.

ಪ್ರಿಯ ವಾಚಕರೇ, ಕಾಲವು ಒಂದು ಅನುಕೂಲವಾಗಿತ್ತೆಂದರೆ, ಎಲ್ಲ ಸಂಗತಿಗಳೂ ಅನುಕೂಲವಾಗುತ್ತದೆ. ಸೆರೆಮನೆಯೊಳಗಿನ ವೀರರು ಸಪ್ಪಳಿಲ್ಲದೆ ಎಲ್ಲ ಸಿದ್ಧತೆಯನ್ನು ಮಾಡಿಕೊಂಡು ಉಡವನ್ನು ಕೋಟೆಯ ಗೋಡೆಯ ಮೇಲೆ ಏರಿ ಬಿಟ್ಟಾಗ ಏಳು ತಾಸು ರಾತ್ರಿಯಾಗಿರಬಹುದು. ಆಗ ಸೆರೆಮನೆಯ ಕಾವಲುಗಾರರು ಸ್ವಸ್ಥವಾಗಿ ನಿದ್ದೆಮಾಡುತ್ತಲಿದ್ದರು; ಅಥವಾ ರಾಜಕಾರಣದ ಗೂಢತಂತ್ರದಿಂದ ಆಚಾರ್ಯ ಪಕ್ಷಿಯರು ಆ ಕಾವಲುಗಾರರಿಗೆ

ಉಪಾಯದಿಂದ ಅಮಲಿನ ಪದಾರ್ಥಗಳ ಸೇವನ ಮಾಡಿಸಿದ್ದರಿಂದ ಅವರು ಮೈಮರೆತು ಮಲಗಿದ್ದರೆಂದು ಹೇಳಬಹುದು. ಅಂತೇ ಸೆರೆಮನೆಯಿಂದ ಹೊರಟ ವೀರರು ಆ ಕಾವಲುಗಾರರ ಉಸಾಬರಿಗೆ ಹೋಗದೆ, ನೆಟ್ಟಗೆ ಕೋಟೆಯ ಮಹಾದ್ವಾರಕ್ಕೆ ಹೋದರು. ಅಷ್ಟರಲ್ಲಿ ಮಾದಿಗರ ದುರಗಪ್ಪನು ದುರ್ಗದ್ದೊಂದು ಕೊತ್ತಲವನ್ನೇರಿ ಸಂಕೇತದ ಬೆಳಕು ಮಾಡಲು, ಅದರ ಹಾದಿಯನ್ನು ನೋಡುತ್ತಿದ್ದ ತಿರುವೇಂಕಟನ ಸೈನ್ಯವೂ, ಆಯಾಸಂಕೇತ ಸ್ಥಳದಿಂದ ರಾತ್ರಿ ಒಟ್ಟುಗೂಡಿ ತಿರುವೇಂಕಟನ ಆಧಿಪತ್ಯಕ್ಕೊಳಗಾದ ಕನ್ನಡಿಗ ಸೈನ್ಯವೂ ದುರ್ಗದ ಕೆಳಗಿನಿಂದ ಸರಸರ ಮೇಲಕ್ಕೇರಿ ಬರತೊಡಗಿದವು. ಹಾಗೆ ಅಕಸ್ಮಾತ್ತಾಗಿ ರಭಸದಿಂದ ಮೇಲಕ್ಕೇರಿ ಬರುವ ಸೈನ್ಯವನ್ನು ಅಲ್ಲಿಯ ದುರ್ಗದ ಚೌಕಿಯ ಕಾವಲುಗಾರರು ತರಬಲು ಸಮರ್ಥರಾಗದ್ದರಿಂದ ಎರಡನೆಯ ಚೌಕಿಯ ಕಾವಲುಗಾರರಿಗೆ ಎಚ್ಚರಕೊಡುವ ಅವಕಾಶವನ್ನು ಪಡೆಯದೆ ಕನ್ನಡಿಗರ ಖಡ್ಗಗಳಿಗೆ ಅವರು ಆಹುತಿಯಾಗಹತ್ತಿದರು! ಇತ್ತ ಸೆರೆಮನೆಯಿಂದ ಹೊರಟ ವೀರರು ಕೋಟೆಯ ಸಿಂಹದ್ವಾರದ ಕಾವಲುಗಾರರನ್ನೆಲ್ಲ ತುಂಡರಿಸಿ ಎರಡನೆಯ ಕಡೆಗೆ ಸುದ್ದಿ ಹೇಳಲಿಕ್ಕೆ ಆಸ್ಪದವನ್ನು ಕೊಡದೆ ಕೋಟೆಯ ಸಿಂಹದ್ವಾರದ ಭಯಂಕರವಾದ ಲಾಲಂಡಿಗೆಯನ್ನು ಸೊನ್ನೆಯ ಸಹಾಯದಿಂದ ತೆರೆದು, ಅದೇ ಯುಕ್ತಿಯಿಂದಲೇ ಮಹಾದ್ವಾರವನ್ನು ತೆರೆದರು! ಹೀಗೆ ದ್ವಾರವನ್ನು ತೆರೆಯುವಾಗ ಆದ ಭಯಂಕರ ಧ್ವನಿಯಿಂದ ಕೋಟೆಯೊಳಗಿನ ಆಯಾ ಸ್ಥಳ ಕಾವಲುಗಾರರು ಬೆರಗಾಗಿ ಭಯಪಟ್ಟು ಅಲ್ಲಲ್ಲಿ ಗುಲ್ಲು ಎಬ್ಬಿಸಿ ಕೋಟೆಯೊಳಗಿನ ಜನರನ್ನು ಎಚ್ಚರಗೊಳಿಸತೊಡಗಿದರು! ಅಪರಾತ್ರಿಯಲ್ಲಿ ಕೋಟೆಯ ಮಹಾದ್ವಾರವು ಅಕಸ್ಮಾತ್ತಾಗಿ ತೆರೆದದ್ದರಿಂದ, ಏನೋ ಘಾತಪ್ರಸಂಗವು ಒದಗಿತೆಂದು ತಿಳಿದು ಕೋಟೆಯೊಳಗಿನ ಜನರು ಅವ್ಯವಸ್ಥೆಯಿಂದ ಗದ್ದಲಮಾಡುತ್ತ ಅತ್ತಿತ್ತ ಎಡತಾಕಹತ್ತಿದರು. ಹೀಗೆ ಗದ್ದಲವಾಗಲು, ದುರ್ಗರಕ್ಷಕನು ಯುದ್ಧ ಸಿದ್ಧತೆಯ ಅಪ್ಪಣೆಯ ಸಾಂಕೇತಿಕ ವಾದ್ಯಧ್ವನಿಯನ್ನುಂಟುಮಾಡಿದನು. ಆಗ ಯವನ ವೀರರಲ್ಲಿ ಯಾರು ಕಣ್ಣು ಒರಿಸುತ್ತ ಏಳತೊಡಗಿದರು, ಯಾರು ಶಸ್ತ್ರಗಳನ್ನು ತಕ್ಕೊಳ್ಳತೊಡಗಿದರು, ಯಾರು ಶಸ್ತ್ರಧಾರಿಗಳಾಗಿ ವೈರಿಗಳೆಲ್ಲಿ ಎಂದು ಅವರನ್ನು ಹುಡುಕತೊಡಗಿದರು. ಕಗ್ಗತ್ತಲೆಯಲ್ಲಿ ತಮ್ಮವರಾರು, ಶತ್ರುಗಳಾರು ಎಂಬದರ ಗೊತ್ತೇ ಅವರಿಗೆ ಹತ್ತದಾಯಿತು. ಬರಬರುತ್ತ ದುರ್ಗದ ಬೇರೆ ಬೇರೆ ಕಡೆಗಳಲ್ಲಿ ದೀವಟಿಗೆಗಳು ಹತ್ತಿ ನಾಲ್ಕೂ ಕಡೆಗೆ ಬೆಳಕಾಗಿ, ಆ ಬೆಳಕಿನ ಉಪಯೋಗವು ಗಾಬರಿಯಾಗಿ ಎಡತಾಕುತ್ತಿದ್ದ ದುರ್ಗದೊಳಗಿನವರಿಗಿಂತ, ಶಾಂತರೀತಿ ಯಿಂದಲೂ, ಸುವ್ಯವಸ್ಥೆಯಿಂದಲೂ ಅಲ್ಲಲ್ಲಿ ಆಯಕಟ್ಟಿನ ಸ್ಥಳಗಳಲ್ಲಿ ಗುಂಪಾಗಿ ನಿಂತಿರುವ ಕನ್ನಡ ವೀರರಿಗೆ ಬಹು ಚೆನ್ನಾಗಿ ಆಗತೊಡಗಿತು. ದೀವಟಿಗೆಗಳು ಹತ್ತಿ ಎಲ್ಲ ಕಡೆಯಲ್ಲಿ ಬೆಳಕಾಗುವದರೊಳಗಾಗಿ ದುರ್ಗದ ಕೆಳಗಿನ ಜನರು ಮೇಲಕ್ಕೇರಿ ಬಂದು ಕೋಟೆಯನ್ನು ಪ್ರವೇಶಿಸಿ–''ಹರಹರ ಮಹಾದೇವ'' ಎಂದು ಧ್ವನಿಮಾಡಲು, ದುರ್ಗದೊಳಗಿನ ವೀರರು ''ಮಹಾತ್ಮನಾದ ಮಾಧವಮುನಿಯ ಜಯಜಯಕಾರವು'' ಎಂಬ ಪ್ರಚಂಡ ಧ್ವನಿಯಿಂದ ಅವರಿಗೆ ಉತ್ತರ ಕೊಟ್ಟರು. ಕೂಡಲೆ ವ್ಯವಸ್ಥಿತವಾಗಿ ಅಲ್ಲಲ್ಲಿ ಪಸರಿಸಿದ್ದ ಕನ್ನಡ ವೀರರ

ತಂಡಗಳು ತಮಗೆ ಎದುರಾದ ಯವನ ವೀರರನ್ನು ತುಂಡರಿಸಹತ್ತಿ, ಕೋಟೆಯತುಂಬೆಲ್ಲ ಯುದ್ಧವನ್ನು ಆರಂಭಿಸಿದರು. ಶತ್ರುಗಳ ಗುಂಪು ಯಾವ ಕಡೆಗೆ ಹೆಚ್ಚಿರುವದೆಂಬದು ಯವನ ವೀರರಿಗೆ ಗೊತ್ತಾಗದೆ ಹೋಗಿ ಎಲ್ಲ ದುರ್ಗವು ಶತ್ರುಮಯವಾಯಿತೆಂದು ಅವರು ಆಶ್ಚರ್ಯದಿಂದ ಕಂಗೆಟ್ಟರು!

ಹೀಗಿರುವಾಗ ಇತ್ತ ಮಲಿಕನಾಯಕನು ತನ್ನ ಶಯನಗೃಹದಲ್ಲಿ ಹಾಸಿಗೆಯ ಮೇಲೆ ಮಲಗಿಕೊಂಡಿದ್ದನು. ಕಂಪಲಿಯ ಕೋಟೆಯಲ್ಲಿ ತಮಗೆ ಜಯವು ಒದಗಿದ ಸಂಬಂಧದಿಂದ ಆತನ ಮನಸ್ಸು ಹಲವು ಸಂಶಯಗಳಿಂದ ದೂಷಿತವಾಗಿತ್ತು. ಮುಖ್ಯ ಮುಖ್ಯ ವೀರರೂ, ರಾಜಪುತ್ರಿಯಾದ ಪದ್ಮಿನಿಯೇ ಮೊದಲಾದವರೂ ಸೆರೆಯಾಳಾಗಿ ಬಂದದ್ದು ಆತನಿಗೆ ಪರಮಾಶ್ಚರ್ಯಕರವಾಗಿ ತೋರಿತ್ತು. ಕಂಪಲಿಯ ಯುದ್ಧದಲ್ಲಿದ್ದ ತನ್ನ ಯವನ ಸೈನಿಕರನ್ನು ಅಲ್ಲಿಯ ಸಂಗತಿಯ ವಿಷಯವಾಗಿ ವಿಚಾರಿಸಲು, ಸಂಶಯದ ಮೇಲೆ ಸಂಶಯಗಳು ಆತನಿಗೆ ಬರತೊಡಗಿದ್ದವು. ಒಬ್ಬ ಜಂಗಮನು ತಿರುವೇಂಕಟನನ್ನು ಕಂಡದ್ದು, ತಿರುವೇಂಕಟನ ಉದ್ಧಟತನ, ಅವನು ಮಾಡಿದ ಪ್ರತಿಜ್ಞೆ, ಇಬ್ಬರು ತರುಣ ಫಕೀರರು ಅಕಸ್ಮಾತ್ತಾಗಿ ಅಬದುಲರಹಿಮಾನನಿಗೆ ರಾಣೀವಾಸವು ಕೋಟೆಯಿಂದ ಹೊರಬಿದ್ದ ಸುದ್ದಿಯನ್ನು ಹೇಳಿದ್ದು, ಅಬದುಲರಹಿಮಾನನ ಆಶ್ಚರ್ಯಕಾರವಾದ ಮರಣ, ತಿರುವೇಂಕಟನು ಅಲ್ಪಾವಕಾಶದಲ್ಲಿ ಸಂಪಾದಿಸಿದ ಜಯ, ಆತನು ತನಗೆ ಸುದ್ದಿಯನ್ನು ಮುಟ್ಟಿಸುವದರೊಳಗಾಗಿಯೇ ಅತಿ ತ್ವರೆಯಿಂದ ಕಾಂಚನಗಡಕ್ಕೆ ತಾನೇ ಸಸೈನ್ಯನಾಗಿ ಬಂದದ್ದು ಇವೇ ಮೊದಲಾದ ಸಂಗತಿಗಳನ್ನು ಕುರಿತು ಆಲೋಚಿಸಿ, ನಾಯಬನು ಚಿಂತೆಗೊಳಗಾಗಿ ಇದೆಲ್ಲ ಮೋಸದ ವ್ಯವಹಾರವೆಂತಲೂ, ತಿರುವೇಂಕಟನು ನಿಶ್ಚಯವಾಗಿ ಶತ್ರುಪಕ್ಷಕ್ಕೆ ಕೂಡಿರುವನೆಂತಲೂ ತಿಳಿದು ಘೋರಚಿಂತೆಯಿಂದ ಆತನು ಹಾಸಿಗೆಯ ಮೇಲೆ ಹೊರಳಾಡುತ್ತಲಿದ್ದನು. ಸಂಪತ್ತಿನ ಪೆಟ್ಟಿಗೆಗಳು ನಿಜವಾಗಿ ಸಂಪತ್ತು ತುಂಬಿದವಾಗಿರದೆ, ಅವುಗಳಲ್ಲಿ ಶಸ್ತ್ರಗಳು ತುಂಬಿರಲೇಬೇಕೆಂಬ ವಿಚಾರವು ಪಕ್ಕನೆ ಅವನ ಮನಸ್ಸಿನಲ್ಲಿ ಹೊಳೆದು, ತಾನು ಆ ಪೆಟ್ಟಿಗೆಗಳನ್ನು ಮೂರ್ಖತನದಿಂದ ಸೆರೆಯಾಳುಗಳ ಬಳಿಯಲ್ಲಿಯೇ ಇರಿಸಿದ್ದಕ್ಕಾಗಿ ಈಗ ಆತನು ಪಶ್ಚಾತ್ತಾಪಪಡತೊಡಗಿದನು. ಕಾಲಕ್ಕನುಸರಿಸಿ ಬುದ್ಧಿಯು ಉತ್ಪನ್ನವಾಗುತ್ತದೆಂಬ ಮಾತು ಸುಳ್ಳಲ್ಲ. ಅಂಥ ರಾಜಕಾರಣಪಟು ನಾಯಬನೂ ಪ್ರಮಾದಕ್ಕೆ ಒಳಗಾದದ್ದು ಆಶ್ಚರ್ಯದ ಸಂಗತಿಯೇ ಸರಿ. ಮುಖ್ಯವಾಗಿ ಜನಾನಖಾನೆಯು, ಅದರಲ್ಲಿಯೂ ಪ್ರತ್ಯಕ್ಷ ರಾಜಪುತ್ರಿಯಾದ ಪದ್ಮಿನಿಯು ಸೆರೆಯಲ್ಲಿ ಸಿಕ್ಕಿದ್ದರಿಂದ, ಮುಸಲ್ಮಾನರಿಗೊದಗಿದ ಜಯದ ವಿಷಯವಾಗಿ ಮೋಸವಿದ್ದೀತೆಂಬ ಸ್ವತಃ ಮುಸಲ್ಮಾನರಿಗಾಗಲಿ, ಬೇರೆಯವರಿಗಾಗಲಿ ಸಂಶಯ ಬರುವ ಹಾಗಿದ್ದಿಲ್ಲ. ಕ್ಷತ್ರಿಯರು ತಾವೆಲ್ಲರೂ ರಣಭೂಮಿಯಲ್ಲಿ ದೇಹವಿಟ್ಟಾರು, ಆದರೆ ತಮ್ಮ ಹೆಂಗಸರನ್ನು ಶತ್ರುಗಳ ಕೈಸೇರಗೊಡಲಿಕ್ಕಿಲ್ಲವೆಂಬದನ್ನು ಜಂಬುಕೇಶ್ವರ ರಾಜನ ಸಂಬಂಧದಿಂದ ಮುಸಲ್ಮಾನರು ಸ್ವಲ್ಪ ದಿನಗಳ ಹಿಂದೆ ಮನಗಂಡಿದ್ದರು! ಇಂಥವರು ರಾಣೀವಾಸವನ್ನು ಕಂಪಲಿಯಿಂದ ಹೊರಹೊಡಿಸಿಕೊಂಡು ಹೋಗುವಾಗ ಅಕಸ್ಮಾತ್ ಶತ್ರುಗಳ ಕೈಸೇರಿ ಆ ರಾಣೀವಾಸದೊಡನೆ ತಾವೂ ಸೆರೆಯಲ್ಲಿ

ಸಿಕ್ಕದ್ದರಿಂದ, ಆ ಕಂಪಲಿಯ ಕೋಟೆಯವರು ನಿಜವಾಗಿಯೇ ಸೋತರೆಂಬ ಸಂಗತಿಯು ಅಬದುಲರಹಿಮಾನನ ಸೈನ್ಯದವರಿಗಾಗಲಿ, ಪ್ರತ್ಯಕ್ಷ ಮಲಿಕನಾಯಬನಿಗಾಗಲಿ ವಿಶ್ವಸನೀಯ ವಾಗಿ ತೋರಿತು; ಆದರೆ ಮಲಿಕನಾಯಬನು ಯುದ್ಧದ ವರ್ತಮಾನವನ್ನು ಸಾದ್ಯಂತವಾಗಿ ಕೇಳಿದಬಳಿಕ ಮಾಧವಾಚಾರ್ಯರ ತಂತ್ರವು ಆತನ ಮನಸ್ಸಿಗೆ ಹೊಳೆದು, ಆ ನಿಸ್ಪೃಹಿಯು ಆಚಾರ್ಯರ ಕಾರ್ಯಕೌಶಲ್ಯಕ್ಕಾಗಿ ತಲೆದೂಗಿದನು. ತಿರುವೇಂಕಟನೂ, ಶ್ರೀಕಂಠಶಾಸ್ತ್ರಿಯೂ ಗುಪ್ತಚಾರರಾಗಿಯೇ ತನ್ನಲ್ಲಿರುತ್ತಿರಬಹುದೆಂಬ ಸಂಶಯವೂ ಆ ನಾಯಬನಿಗೆ ಉತ್ಪನ್ನವಾಯಿತು. ಅಥವಾ ಮೊದಲು ತಿರುವೇಂಕಟನು ಸ್ವಾರ್ಥಪರಾಯಣನಾಗಿದ್ದರೂ ಅವನ ಆಟವನ್ನು ನಡೆಯಗೊಡದಂತೆ ಆಚಾರ್ಯರು ಶ್ರೀಕಂಠಶಾಸ್ತ್ರಿಯನ್ನು ತಮ್ಮ ಗೂಢಚಾರನನ್ನಾಗಿ ಆತನ ಬಳಿಯಲ್ಲಿ ಇಟ್ಟಿರಬಹುದೆಂತಲೂ, ತಿರುವೇಕಂಟನನ್ನು ಕಂಡ ಜಂಗಮನು ಬೋಧದಿಂದ ತಿರುವೇಂಕಟನ ಮನಸ್ಸನ್ನು ತಿರುಗಿಸಿದ್ದರೂ ತಿರುಗಿಸಿರಬಹು ದೆಂತಲೂ ಆತನು ಕಲ್ಪಿಸಿದನು. ಹೀಗೆ ನಾಯಬನು ಶಕ್ಯಾಶಕ್ಯದ ಹಲವು ಕಲ್ಪನೆಗಳ ತರಂಗಗಳ ಹೊಡೆತನದಿಂದ ಹಣ್ಣಾಗುತ್ತಿರಲು, ದುರ್ಗದಲ್ಲಿ ಗದ್ದಲವಾದದ್ದೂ, ಯುದ್ಧದ ಸಿದ್ಧತೆಯ ಸೂಚನೆಯಾದದ್ದೂ ಅವನ ಕಿವಿಗೆ ಕೇಳಿಸತೊಡಗಿದವು. ಇಂಥ ಅಪರಾತ್ರಿಯಲ್ಲಿ ಗದ್ದಲವೇನಿರಬಹುದೆಂದು ಆತನು ಕಿವಿಗೊಟ್ಟು ಕೇಳುತ್ತಿರಲು, ಬರಬರುತ್ತ ಕಲಕಲಧ್ವನಿಯು ಹೆಚ್ಚಿ ನಡುನುಡುವೆ ಜನರ ಆಕ್ರೋಶ ಧ್ವನಿಯೂ, ಹಿಂದೂಜನರ ''ಹರಹರ ಮಹಾದೇವ'' ಎಂಬ ಧ್ವನಿಯೂ ''ಮಹಾತ್ಮನಾದ ಮಾಧವಮುನಿಯ ಜಯಜಯಕಾರವು'' ಎಂಬ ಧ್ವನಿಯೂ ಕೇಳಿಸತೊಡಗಿದ್ದರಿಂದ ಅಂಥ ರಣಧೀರ ಮಲಿಕನಾಯಬನೂ ಗಾಬರಿಯಾಗಿ ಮುಂದುಗಾಣದೆ ಹಾಸಿಗೆಯಮೇಲೆ ಎದ್ದು ಕುಳಿತು ಆಲೋಚಿಸತೊಡಗಿದನು. ಇಷ್ಟು ಗದ್ದಲವಾದರೂ ತಮ್ಮವರು ತನಗೆ ಯಾವ ಸುದ್ದಿಯನ್ನೂ ಹೇಳಲಿಕ್ಕೆ ಬಾರದಿರುವದು ಅವನಿಗೆ ಪರಮಾಶ್ಚರ್ಯವಾಗಿ ತೋರಿತು. ನಿಜವಾಗಿಯೆಂದರೆ, ಅಲ್ಲಲ್ಲಿ ಯವನ ಸೈನಿಕರಿಗೆ ತಮ್ಮ ತಮ್ಮ ರಕ್ಷಣಮಾಡಿಕೊಳ್ಳುವ ಅವಸರದಲ್ಲಿ ನಾಯಬನಿಗೆ ಸುದ್ದಿಯನ್ನು ಮುಟ್ಟಿಸಲಿಕ್ಕೆ ಕೂಡಲೇ ಇಲ್ಲ. ದುರ್ಗರಕ್ಷಕನು ಕಳಿಸಿದ ಜನರನ್ನು ಮಧ್ಯದಲ್ಲಿಯೇ ಹಿಂದೂ ಸೈನಿಕರು ಗೊತ್ತಿಗೆಹಚ್ಚಿದ್ದರಿಂದ ನಿಜವಾದ ಸಂಗತಿಯು ನಾಯಬನಿಗೆ ತಿಳಿಯಲಿಕ್ಕೆ ಮಾರ್ಗವಿಲ್ಲದಾಯಿತು. ಇತ್ತ ನಾಯಬನು ಯಾವಾಗ ಸುದ್ದಿ ಬಂದೀತೆಂದು ಆತುರದಿಂದ ಮಾರ್ಗನಿರೀಕ್ಷಣ ಮಾಡಿಮಾಡಿ ಬೇಸತ್ತನು. ಅತ್ತ ಕೋಟೆಯ ತುಂಬ ಗದ್ದಲವಾಗ ತೊಡಗಿತು. ಆಗ ಆ ಶಾಂತವೃತ್ತಿಯ ಮಲಿಕನಾಯಬನು ತನ್ನವರ ಮೇಲೆ ಸಿಟ್ಟಾಗಿ ಸಂತಾಪಗೊಳ್ಳುತ್ತ, ತನ್ನ ಯುದ್ಧದ ಉಡುಪು-ತೊಡುಪುಗಳನ್ನು ಧರಿಸಿ ಶಾಸ್ತ್ರಾಸ್ತ್ರಗಳಿಂದ ಸಜ್ಜಾಗಿ ಹೊರಬೀಳುತ್ತಿರಲು ಒಬ್ಬ ಯವನ ತರುಣ ಸೈನಿಕನು ಅರ್ಧಮರ್ಧ ಉರ್ದುಭಾಷೆಯಿಂದ ನಾಯಬನನ್ನು ಕುರಿತು-''ಖಾವಿಂದ, ಶತ್ರುಗಳು ಮಾಧವಾಚಾರ್ಯರ ಸೆರೆಮನೆಯನ್ನೊಡೆದು ಆಚಾರ್ಯರನ್ನು ಬಂಧಮುಕ್ತ ಮಾಡಿದರು'' ಎಂದು ಹೇಳುತ್ತಿರಲು, ಮತ್ತೊಬ್ಬ ತರುಣ ಸೈನಿಕನು ಓಡುತ್ತ ಬಂದು-'' ಖಾವಿಂದ, ಶತ್ರುಗಳ ಅಪಾರವಾದ ಸೈನ್ಯವು ಕೋಟೆಯ ಬಾಗಿಲು ತೆರೆದು ಕೋಟೆಯಲ್ಲಿ ಸೇರುತ್ತಿರುವದು. ನಮ್ಮ

ಕಡೆಯವರು ಸುದ್ದಿಯನ್ನು ಹೇಳಲಿಕ್ಕೆ ಬಂದರೆ ಅವರನ್ನು ಕಾಫರರಾದ ಹಿಂದುಗಳು ತುಂಡರಿಸಿ ಚೆಲ್ಲುತ್ತಿರುವರು; ನಾವಾದರೂ ಬಹು ಪ್ರಯಾಸದಿಂದ ಅವರ ಕೈಯಿಂದ ಪಾರಾಗಿ ಬಂದಿದ್ದೇವೆ; ನಾವು ಇತ್ತ ಬಂದಿರುವದನ್ನು ಆ ದುಷ್ಟರು ನೋಡಿರುವದರಿಂದ ನಮ್ಮನ್ನು ತುಂಡರಿಸಿ ಚೆಲ್ಲುವದಕ್ಕಾಗಿ ಇಲ್ಲಿಗೆ ಬಂದರೂ ಬರುತ್ತಿರಬಹುದು'' ಎಂದು ನುಡಿಯುತ್ತಿರಲು, ನಿಜವಾಗಿಯೇ ಹಿಂದೂ ಸೈನಿಕರು ಅಲ್ಲಿಗೆ ಬಂದುಬಿಟ್ಟರು!

ಈ ವಿಲಕ್ಷಣ ಪ್ರಕಾರವನ್ನು ನಾಯಬನು ನೋಡಿ ಕ್ರೋಧಾವೇಶದಿಂದ ತನ್ನ ಖಡ್ಗವನ್ನು ಹಿರಿದು ಆ ಬಂದ ಕನ್ನಡ ಸೈನಿಕರ ಮೇಲೆ ದುಮುಕುತ್ತಿರಲು, ಸುದ್ದಿಯನ್ನು ಹೇಳಬಂದ ಆ ಚಪಲ ತರುಣ ಯವನ ದಂಡಾಳುಗಳು ಕ್ಷಣಮಾತ್ರದಲ್ಲಿ ಅಲ್ಲಿಂದ ಜಾರಿದರು. ಕೂಡಲೆ ಅವರನ್ನು ಬೆನ್ನಟ್ಟಿಬಂದಿದ್ದ ಆ ಹಿಂದೂಸೈನಿಕರೂ ಹೊರಟುಹೋದರು. ನಿಜವಾಗಿಯೆಂದರೆ ಏಕಾಕಿಯಾಗಿರುವ ಮಲಿಕನಾಯಬನ ಮೇಲೆ ಆ ಬಂದ ಜನರು ಏರಿ ಹೋಗಬಹುದಾಗಿತ್ತು; ಆದರೆ ಅವರು ನಾಯಬನನ್ನು ನೋಡಿದರೋ ನೋಡಲಿಲ್ಲವೋ ಎಂಬಂತೆ ಮಾಡಿ ಓಡಿಹೋಗುತ್ತಿರುವ ಆ ತರುಣ ಯವನ ದಂಡಾಳುಗಳಿಬ್ಬರನ್ನು ಹಿಂಬಾಲಿಸಿ ಹೊರಟು ಹೋದರು! ಇದನ್ನು ನೋಡಿ ಮಲಿಕನಾಯಬನು ಮತ್ತಿಷ್ಟು ಆಶ್ಚರ್ಯಪಟ್ಟನು. ಶತ್ರುಗಳು ಇಷ್ಟು ಏರಿಬಂದು ನನ್ನನ್ನೂ ಲೆಕ್ಕಿಸದಷ್ಟು ಪ್ರಬಲರಾಗಿರುವಾಗ ನಮ್ಮವರು ಏನು ಮಾಡುತ್ತಿರಬಹುದು? ಇಂದಿಗೆ ನಮ್ಮ ಶೌರ್ಯವೆಲ್ಲ ಅಳಿದುಹೋಯಿತೋ? ಘಝುನಿಮಹಮ್ಮದ, ಘೋರಿಮಹಮ್ಮದ, ತೈಮೂರಲಿಂಗ, ಅಲಾಉದ್ದೀನ ಮೊದಲಾದ ಲೋಕ ಪ್ರಸಿದ್ಧ ವೀರರ ಪುಣ್ಯವು ತೀರಿತೋ ಎಂದು ನುಡಿದು ಪರಾಕ್ರಮಶಾಲಿಯಾದ ಮಲಿಕನಾಯಬನು ಸೈನಿಕರನ್ನು ಪ್ರೋತ್ಸಾಹಿಸುವ ತನ್ನ ಯಶಸ್ವಿಯಾದ ತುತೂರಿಯನು ಊದಿದನು. ಕನ್ನಡಿಗರ ಅಬ್ಬರದ ಮುತ್ತಿಗೆಯಲ್ಲಿ ಕಂಗೆಟ್ಟಿದ್ದ ಯವನ ವೀರರು, ತಮ್ಮ ಒಡೆಯನು ಎಲ್ಲಿರುವನೆಂಬದನ್ನೂ, ಆತನ ಗತಿಯು ಏನಾಗಿರುವದೆಂಬದನ್ನೂ ಅರಿಯದವ ರಾಗಿದ್ದದ್ದರಿಂದ ಉದಾಸೀನರಾಗಿದ್ದರು. ದುರ್ಗರಕ್ಷಕನು ತಾನು ಎಷ್ಟು ಜನರನ್ನು ನಾಯಬನ ಕಡೆಗೆ ಕಳಿಸಿದರೂ ನಾಯಬರಿಂದ ಉತ್ತರವಂತು ಇರಲಿ, ಹೋದ ಮನುಷ್ಯನೂ ತಿರುಗಿ ಬಾರದ್ದರಿಂದ ಅವನು ಮೂಢನಾಗಿಹೋಗಿದ್ದನು. ಇಂಥ ಪ್ರಸಂಗದಲ್ಲಿ ನಾಯಬನ ಉತ್ಸಾಹಜನಕವಾದ ತುತೂರಿಯ ಶಬ್ದವಾದದ್ದರಿಂದ ಯವನ ವೀರರು ಜಾಗ್ರತರಾಗಿ ಉತ್ಸಾಹಗೊಂಡು ತುತೂರಿಯ ದನಿಯ ಸುಳವು ಹಿಡಿದು ನಾಯಬನ ಅಂತರ್ಗೃಹದ ಕಡೆಗೆ ''ದೀನದೀನ'' ಎಂಬ ಶಬ್ದ ಮಾಡುತ್ತ ಸಾಗಿದರು. ಅವರ ಆ ಉತ್ಸಾಹಜನಕ ಧ್ವನಿಯನ್ನು ಕೇಳಿ ಮಲಿಕ ನಾಯಬನೂ ಸಮಾಧಾನಪಟ್ಟು, ಯುದ್ಧಾವೇಶದಿಂದ ತನ್ನ ಅಂತರ್ಗೃಹದಿಂದ ಹೊರಬಿದ್ದನು. ತಮ್ಮ ಒಡೆಯನಿದ್ದೆಡೆಗೆ ಹೋಗುತ್ತಿದ್ದ ಆ ಯವನವೀರರನ್ನು ಕನ್ನಡ ಸೈನಿಗಕರು ಎಷ್ಟು ನಿರ್ಬಂಧಿಸಿದರೂ, ಅದನ್ನು ಲೆಕ್ಕಿಸದೆ ಅವರು ನಾಯಬನಿದ್ದೆಡೆಗೆ ಹೋದರು. ನಾಲ್ಕೂ ಕಡೆಗೆ ಪಸರಿಸಿದ್ದ ಯವನ ಸೈನ್ಯವು ನಾಯಬನ ಅಂತರ್ಗೃಹದ ಮುಂದೆ ಒಟ್ಟುಗೂಡಿತು. ಹೀಗೆ ಒಟ್ಟು ಗೂಡುವಾಗ ಕನ್ನಡ ವೀರರು ಮಾಡಿದ ಪ್ರತಿಬಂಧದಿಂದ ಉಭಯರ ಕಡೆಗೂ

ನೆಲೆಯಿಲ್ಲದೆ ಪ್ರಾಣಹಾನಿಯಾಗಿ, ಕಾಂಚನಗಡವು ರಕ್ತಮಯವಾಗಿ ಲಾಲಗಡವಾಯಿತು! ಅಂತರ್ಗೃಹದ ಮುಂದುಗಡೆಯಲ್ಲಿ ಉಭಯ ವೀರರು ಜಯಾಪೇಕ್ಷೆಯಿಂದ ಕಾದ ತೊಡಗಿದರು. ಬರಬರುತ್ತ ವೀರರಲ್ಲಿ ಯುದ್ಧಾವೇಶವು ಹೆಚ್ಚಿ ಅವರು ಸ್ವ–ಪರಪಕ್ಷ ದವರನ್ನು ಅರಿಯದವರಾದರು. ಅಂದಿನ ಕಾಳಗದಲ್ಲಿಯ ಉಭಯ ಪಕ್ಷದ ವೀರರ ಶೌರ್ಯವೂ ಚೆನ್ನಾಗಿ ಪ್ರಕಟವಾಗಿ ಪರಸ್ಪರರು ಪರಸ್ಪರರನ್ನು ಹೊಗಳಹತ್ತಿದರು. ಹೀಗೆ ಸಮಬಲವಾಗಿ ಉಭಯರೂ ಕಾದುತ್ತಿರುವಾಗ ಕ್ಷತ್ರಿಯ ಪುತ್ರಿಯಾದ ಪದ್ಮಿನಿಯು ಬೈರಾಗಿಣಿಯನ್ನು ಕುರಿತು– ಎಲೈ ಪುಣ್ಯ ಶಾಲಿನಿಯೇ, ಇನ್ನು ತಡವೇಕೆ? ಸದ್ಗುರುವಿನ ಬಂಧವಿಮೋಚನೆಗಾಗಿ ಯತ್ನಿಸುವಾಗ ನನ್ನ ಈ ದೇಹವು ರಣಕ್ಷೇತ್ರದಲ್ಲಿ ಪತನಹೊಂದಿಕೃತಾರ್ಥವಾಗಲಿ; ನಮ್ಮ ಆಚಾರ್ಯವರ್ಯರ ಕಾರಾಗೃಹವಾಸಕ್ಕೆ ಮಲಿಕನಾಯಬನೇ ಮುಖ್ಯನಾದದ್ದರಿಂದ ಆತನ ಸಮಾಚಾರವನ್ನೇ ನಾನು ಮೊದಲು ತೆಗೆದುಕೊಳ್ಳುವೆನು. ಪ್ರಿಯಸಖೀ, ನಾವಿಬ್ಬರು ಯವನ ಸೈನಿಕರ ವೇಷದಿಂದ ನಾಯಬನ ಬಳಿಗೆ ಸುದ್ದಿಯನ್ನು ಹೇಳಲಿಕ್ಕೆ ಹೋದಾಗ, ನಮ್ಮವರ ಸಹಾಯದಿಂದ ಆತನನ್ನು ಯಮಸದನಕ್ಕಟ್ಟುವದು ನನಗೆ ಸುಲಭವಾಗಿತ್ತು, ಆದರೆ ಕ್ಷಾತ್ರದರ್ಮಕ್ಕೆ ಉಚಿತವಲ್ಲದ ಆ ಕರ್ಮವನ್ನು ಮಾಡಲಿಕ್ಕೆ ನಮ್ಮ ಪರಂಪರಾಗತ ಕ್ಷಾತ್ರತೇಜವು ಆಗ ನನ್ನನ್ನು ಪ್ರೇರಿಸದೆ ಇದ್ದದ್ದು ಪರಮಭೂಷಣವು. ಈಗ ಸಮರವು ರಭಸಕ್ಕೆ ಬಂದಿದೆ. ಈಗಲೇ ನನ್ನ ಕ್ಷಾತ್ರತೇಜಸ್ಸನ್ನು ಪ್ರಕಟಸುವೆನು. ನನ್ನ ರಣರಕ್ಕಸತನದಿಂದ ನಾಯಬನ ನಾಶವಾಗಿ ನಮ್ಮ ಗುರುವರನ ಬಂಧವಿಮೋಚನವಾದರೂ ಸಂತೋಷವೇ; ಹಾಗೆ ನಾನು ರಣರಕ್ಕಸತನವನ್ನು ತೋರಿಸುವಾಗ ನನ್ನ ದೇಹವು ಸಮರಭೂಮಿಯಲ್ಲಿ ಪತನ ಹೊಂದಿ ನಮ್ಮ ಕ್ಷತ್ರಿಯರಿಗೆ ಉಚಿತವಾದ ವೀರಸ್ವರ್ಗವು ನನಗೆ ಪ್ರಾಪ್ತವಾದರೂ ಸರಿಯೇ! ಬೈರಾಗಿಣೀ, ನಿನ್ನ ಮಹಾಪ್ರಯತ್ನದಿಂದ ಉಳಿದಿರುವ ನನ್ನ ಈ ದೇಹವನ್ನು ಗುರು ಕಾರ್ಯಕ್ಕಾಗಿ ಅರ್ಪಿಸಲು ಸಿದ್ಧಳಾಗಿರುವೆನು. ನಾನು ವೀರ ಜಂಬುಕೇಶ್ವರರಾಯನ, ಮನೆತನಕ್ಕೆ ಹೊಂದಿದವಳಲ್ಲವೆ? ಆ ವೀರಾಗ್ರಣಿಯು ಯುದ್ಧಕ್ಕೆ ಹೊರಡುವಾಗ ತನಗೆ ಜಯದ ಆಸೆಯು ತೋರದಿರಲು, ತನ್ನ ರಾಣೀವಾಸವನ್ನೂ, ಬೇರೆ ವೀರ ಪತ್ನಿಯರನ್ನೂ ಅಗ್ನಿನಾರಾಯಣನಿಗೆ ಆಹುತಿಯಾಗಿ ಕೊಟ್ಟು ಸಪರಿವಾರ ತಾನು ಸಮರಭೂಮಿಯಲ್ಲಿ ದೇಹವಿಟ್ಟು, ಪವಿತ್ರ ಕ್ಷಾತ್ರಧರ್ಮವನ್ನು ಕಾಯ್ದುಕೊಂಡದ್ದನ್ನು ನಾನು ಮರೆತಿರುವದಿಲ್ಲವಷ್ಟೇ? ಪ್ರಿಯಸಖೀ, ನೀನಾದರೂ ವೀರ ಜಂಬುಕೇಶ್ವರರಾಯನ ಪ್ರಜೆಯೇ ಇರುತ್ತೀ, ನಡೆ ಹಾಗಾದರೆ ದುಮುಕು ಸಮರಭೂಮಿಯನ್ನು; ನಮ್ಮ ತೀಕ್ಷ್ಣ ಕರವಾಳಗಳಿಗೆ ಶತ್ರುಗಳ ರುಂಡಗಳು ಆಹುತಿಯಾಗುತ್ತಿರಲು, ನಾವಿಬ್ಬರೂ ಮಲಿಕನಾಯಬನ ಬಳಿಗೆ ಹೋಗಿ ಅವನ ಗಂಟಲು ಒಡೆಯೋಣ! ಎಂದು ನುಡಿದು ಆ ಕ್ಷತ್ರಿಯ ಕುಮಾರಿಯು ಯುದ್ಧಾವೇಶದಿಂದ ಮೈಮರೆತು, ದೈತ್ಯ ಸಂಹಾರಕ್ಕಾಗಿ ಮುಗಿಬಿದ್ದ ಚಂಡಿಯಂತೆ ಬೈರಾಗಿಣಿಯೊಡನೆ ಸಮರಭೂಮಿ ಯನ್ನು ಹೊಕ್ಕಳು! ಹೀಗೆ ಆ ವೀರವನಿತೆಯರಿಬ್ಬರು ಆವೇಶದಿಂದ ಸಾಗುವಾಗ ಕನ್ನಡಿಗರ ರಣರಕ್ಕಸತನವು ಚೆನ್ನಾಗಿ ಪ್ರಕಟವಾಯಿತು! ಹುಕ್ಕ–ಬುಕ್ಕ– ಕೃಷ್ಣನಾಯಕ–

ಮಲ್ಲಸರ್ಜ– ಮಾದಿಗರ ದುರಗಪ್ಪಮೊದಲಾದ ವೀರಾಧಿವೀರರು ತಮ್ಮ ಪ್ರತಿಜ್ಞೆಯನ್ನು ಪೂರ್ಣ ಮಾಡುವದಕ್ಕಾಗಿ ಮೊದಲೇ ತಮ್ಮ ರಣಮದದಿಂದ ಶತ್ರುಗಳಿಗೆ ದುರ್ದಮ ರಾಗಿದ್ದರು! ಅದರಲ್ಲಿ ಪದ್ಮಿನಿಯಂಥ ವೀರಪುತ್ರಿಯ ವೀರಾಲಾಪಗಳನ್ನು ಕೇಳಿ ಅವರ ರಣಮದದ ಮಿತಿಯು ಮೀರಿತು. ಆಗ ಆ ವೀರಾಗ್ರಗಣ್ಯರು ಮಾಧವಾಚಾರ್ಯರ ಹೆಸರಿನಿಂದ ಜಯಘೋಷ ಮಾಡಿ ಶತ್ರುಗಳ ಮೇಲೆ ಬೀಳಲು, ಅವರನ್ನು ಯಾವತ್ತೂ ಕನ್ನಡ ವೀರರು ಆವೇಶದಿಂದ ಅನುಸರಿಸುವಾಗ ಆದ ಶತ್ರು ಸಂಹಾರ ವ್ಯಾಪಾರವನ್ನು ಯಾರು ವರ್ಣಿಸಬೇಕು? ಶೌರ್ಯದಲ್ಲಿ ಎಣೆಯಿಲ್ಲದೆ ಯವನರೂ ಕನ್ನಡಿಗರ ಈ ರಣರಕ್ಕಸತವನ್ನು ನೋಡಿ ಬೆರಗಾದರು. ಕನ್ನಡಿಗರ ಆವೇಶಕ್ಕೆ ಎದುರಾಗುವದು ಅವರಿಂದಾಗದೆ ಅವರು ಹಿಂದಕ್ಕೆ ಸರಿದು ಕನ್ನಡವೀರರಿಗೆ ಹಾದಿಯನ್ನು ಕೊಡಬೇಕಾಯಿತು! ಹೀಗೆ ಶತ್ರುಸೈನ್ಯವನ್ನು ಭೇದಿಸಿ ಕನ್ನಡವೀರರ ವೀರಗಣವು ಮಲಿಕನಾಯಬನ ಬಳಿಗೆ ಹೋಗುವದರೊಳಗೆ ಪದ್ಮಿನಿಯೂ, ಬೈರಾಗಿಣಿಯೂ ಮಲಿಕನಾಯಬನನ್ನು ಕೆಣಕಿ ಕಾದತೊಡಗಿದ್ದರು. ತನ್ನೊಡನೆ ಕಾದುವವರು ಪುರುಷ ವೇಷಧಾರಿಗಳಾದ ಸ್ತ್ರೀಯರೆಂದು ತಿಳಿದು, ಅವರ ಪರಾಕ್ರಮಕ್ಕಾಗಿ ಮೆಚ್ಚಿ ನಾಯಬನು ತನ್ನ ಖಡ್ಗವನ್ನು ಒರೆಗಾಣಿಸಿ ಅವರನ್ನು ಕುರಿತು–ವೀರವನಿತೆಯರೇ, ನಿಮ್ಮ ಪರಾಕ್ರಮಕ್ಕೆ ಮೆಚ್ಚಿ ನಾನು ನನ್ನ ಖಡ್ಗವನ್ನು ಒರೆಗಾಣಿಸಿದ್ದೇನೆ. ನಿಮ್ಮ ಕಡೆಯ ವೀರಾಧಿವೀರರು ಜೀವದಿಂದಿರದೆ ಸ್ವರ್ಗಸ್ಥರಾಗಿಹೋಗಿದ್ದರೆ, ನಿಮ್ಮ ಈ ಶೌರ್ಯಸಾಹಸ ಗಳಿಗಾಗಿ ಮೆಚ್ಚಿದ್ದ ನಾನು ನಿಮ್ಮ ಮೇಲೆ ಶಸ್ತ್ರವೆತ್ತಲಿಕ್ಕೆ ನಾಚಿ ನಿಶ್ಚಯವಾಗಿ ನೀವು ಜಯಶಾಲಿಗಳಾದಿರೆಂದು ತಿಳಿದು ನಿಮ್ಮ ಶೌರ್ಯದ ಕಾಣಿಕೆಗಾಗಿ ಕಾಂಚನಗಡವನ್ನು ನಿಮಗೆ ಒಪ್ಪಿಸಿ, ನಾನು ಸಂತೋಷದಿಂದ ಎರಡನೆಯ ಕಡೆಗೆ ಹೋಗುತ್ತಿದ್ದೆನು! ಶಾಬಾಸ ವೀರಪುತ್ರಿ ಯರೇ, ನಿಮ್ಮ ಪರಾಕ್ರಮವು ನಿಶ್ಚಯವಾಗಿ ಬಣ್ಣಿಸತಕ್ಕಂತಹದು. ಯವನ ವೀರರಂಥ ಕೆಚ್ಚೆದೆಯ ಕ್ರೂರ ದಂಡಾಳುಗಳ ಒಡ್ಡನ್ನು ಒಡೆದು ಬಂದಿರುವ ಆರ್ಯ ಸ್ತ್ರೀಯರು ನಿಸ್ಸಂಶಯ ಧನ್ಯರು; ಮತ್ತು ನಿಮ್ಮಂಥ ವೀರಮಾತೆಯರ ಯೋಗದಿಂದ ನಿಮ್ಮ ಕ್ಷಾತ್ರ ಧರ್ಮವೂ ಧನ್ಯವಾದದ್ದು; ಆದರೆ ನಿಮ್ಮ ಅಬಲಾಜನರ ಪ್ರತಿಜ್ಞೆಯನ್ನು ಪೂರ್ಣ ಮಾಡುವದಕ್ಕಾಗಿ ತಮ್ಮ ಶಿರಸ್ಸನ್ನು ಕೈಯಲ್ಲಿ ತಕ್ಕೊಂಡು ಬಂದಿರುವ ಹುಕ್ಕನೇ ಮೊದಲಾದ ವೀರರೆಲ್ಲಿರುವರು? ಅವರು ಪ್ರಸಂಗ ಒದಗಲು, ನಿಮ್ಮನ್ನು ಮುಂದೆ ಮಾಡಿ ಎಲ್ಲಿಯಾದರೂ ಮರೆಯಾದರೋ ಏನು?

ಈ ಮೇರೆಗೆ ನುಡಿದು ಉದಾರಾಂತಃಕರುಣದ ಮಲಿಕನಾಯಬನು ತನ್ನ ಖಡ್ಗವನ್ನು ಒರೆಗಾಣಿಸಿ ಸುಮ್ಮನೆ ನಿಂತಿರಲು, ಅಷ್ಟರಲ್ಲಿ ಹುಕ್ಕ ದೊರೆಯೂ ಆತನ ಎದುರಿಗೆ ಬಂದು ಪ್ರಾಂಜಲ ಮನಸ್ಸಿನಿಂದ ಆತನನ್ನು ಕುರಿತು–ಉದಾರಾಂತಃಕರುಣದ ಮಲಿಕನಾಯಬ, ನಿನ್ನ ಸಮರ್ಪಕ ಮಾತುಗಳನ್ನೂ, ಯಥಾರ್ಥವಾದ ಗುಣಗ್ರಾಹಕತೆಯನ್ನೂ, ಜಯಶಾಲಿತ್ವಕ್ಕಿಂತ ಧರ್ಮಶೀಲತ್ವಕ್ಕೆ ಮಹತ್ವಕೊಡುವ ನಿನ್ನ ಅಲೌಕಿಕ ಸೌಜನ್ಯವನ್ನೂ ನೋಡಿ ನಮ್ಮೆಲ್ಲರಿಗೆ ಬಹಳ ಸಂತೋಷವಾಗಿದೆ. ನೀನು ಇಂಥ ಘನವಂತನಾದದ್ದರಿಂದಲೇ ನಮ್ಮ ಆಚಾರ್ಯ

ವರ್ಯರಂಥ ಮಹಾತ್ಮರನ್ನು ಸೆರೆಮನೆಯ ನೆವದಿಂದ ನಿನ್ನ ಬಳಿಗೆ ಬರಮಾಡಿಕೊಳ್ಳಲು ಸಮರ್ಥನಾದೆ! ಸರಿ ಸರಿ! ನಮ್ಮ ಸುದ್ಗುರುವಾದ ಮಾಧವಮುನಿಯು ತಾನಾಗಿ ನಿನ್ನ ಬಳಿಗೆ ಯಾಕೆ ಬಂದಿರುವನೆಂಬದರ ಮರ್ಮವು ಈಗ ನನಗೆ ಗೊತ್ತಾಯಿತು. ಸಜ್ಜನರು ಧರ್ಮಪ್ರಿಯರು! ಅವರು ತಮ್ಮ ಶತ್ರುಗಳಲ್ಲಿಯ ಧರ್ಮವನ್ನೂ, ಅಭಿನಂದಿಸದೆ ಇರಲಾರದವರಾದ್ದರಿಂದ ಧರ್ಮಿಷ್ಠನಾದ ನಿನ್ನ ಅಭಿನಂದಕ್ಕಾಗಿಯೇ ಅವರು ನಿನ್ನ ಬಳಿಗೆ ಬಂದಿರುವರು. ಬಹಳ ಸಂತೋಷವು. ನಿನ್ನಂಥ ಧರ್ಮಿಷ್ಠನೊಡನೆ ಯುದ್ಧಮಾಡುವ ಪ್ರಸಂಗ ಒದಗಿದ್ದರಿಂದ ನಾನೂ ಧನ್ಯನೇ ಸರಿ! ನಾಯಬ, ಇನ್ನು ತಡವೇಕೆ? ಹೊರಬೀಳಲಿ ನಿಮ್ಮ ಖಡ್ಗವು ಒರೆಯಿಂದ! ಎಂದು ನುಡಿದು ವೀರನಾದ ಹುಕ್ಕದೊರೆಯು ಮಲ್ಲಿಕನಾಯಬನೊಡನೆ ಯುದ್ಧವನ್ನು ಆರಂಭಿಸಲು, ಕೃಷ್ಣನಾಯಕನು ರಣಮಸ್ತಖಾನನೊಡನೆ, ಹಾಗು ಬುಕ್ಕದೊರೆಯು ಸೈಯದಖಾನನೊಡನೆ ಕಾದತೊಡಗಿದರು. ಆ ವೀರರ ರಣಕೌಶಲ್ಯವನ್ನು ಉಭಯ ಪಕ್ಷದ ವೀರರೂ ಕ್ಷಣಹೊತ್ತು ತಟಸ್ಥರಾಗಿ ನಿಂತು ಕೌತುಕದಿಂದ ನೋಡುತ್ತಲಿದ್ದರು! ಮಲ್ಲ ಸರ್ಜನನು ಹುಕ್ಕದೊರೆಯ ಅಂಗರಕ್ಷಕನಾಗಿದ್ದನು; ತಿರುವೇಂಕಟನು ಬುಕ್ಕನನ್ನು ರಕ್ಷಿಸುತ್ತಿದ್ದನು; ಮಾದಿಗರ ದುರಗಪ್ಪನು ಕೃಷ್ಣನಾಯಕನನ್ನು ರಕ್ಷಿಸುತ್ತಿದ್ದನು. ಹೀಗೆ ಆ ವೀರರ ಕದನವು ಕಾಲನ ಕೋಲಾಹಲದಂತೆ ಲೋಕ ಭಯಂಕರವಾಗಿ ನಡೆದಿರುವಾಗ ಬುಕ್ಕದೊರೆಯು ರಣಮಸಖಾನನ್ನು ನೆಲಕ್ಕೆ ಕೆಡವುತ್ತಿರಲು, ಅತ್ತ ಸೈಯದಖಾನನೂ ವೀರ ಕೃಷ್ಣನಾಯಕನ ಖಡ್ಗಕ್ಕೆ ತುತ್ತಾದನು! ಹೀಗೆ ತಮ್ಮ ಪ್ರತಿಸ್ಪರ್ಧಿಗಳನ್ನು ಸಂಹರಿಸಿದ ಆ ವೀರಾಧಿವೀರರಿಬ್ಬರೂ ರಣದ ಆವೇಶನಿಂದ ಶತ್ರುಸೈನ್ಯವನ್ನು ಸಂಹರಿಸುತ್ತ ಮುಂದಕ್ಕೆ ಸಾಗಿದರು. ಅವರನ್ನು ದುರಗಪ್ಪನೇ ಮೊದಲಾದ ಬೇರೆ ಕನ್ನಡ ವೀರರು ಹಿಂಬಾಲಿಸಿ ರಕ್ಷಿಸುತ್ತ ಭಯಂಕರವಾಗಿ ಶತ್ರು ಸಂಹಾರವನ್ನು ಮಾಡುತ್ತಲಿದ್ದರು. ಇತ್ತ ಮಲಿಕನಾಯಬನೂ, ಹುಕ್ಕದೊರೆಯೂ ಪರಾಕ್ರಮದಿಂದ ಕಾದುವಾಗ ಮಲ್ಲಸರ್ಜನು ಹುಕ್ಕದೊರೆಯ ಅಂಗರಕ್ಷಕ ನಾಗಿದ್ದನು. ಈ ಇಬ್ಬರು ವೀರರ ಯುದ್ಧವನ್ನು ಪದ್ಮಿನಿಯೂ, ಬೈರಾಗಿಣಿಯೂ ಕೌತುಕದಿಂದ ನೋಡುತ್ತಿದ್ದರಲ್ಲದೆ, ಪದ್ಮಿನಿಯು ಹುಕ್ಕದೊರೆಯ ಸುರಕ್ಷಿತತೆಯ ವಿಷಯವಾಗಿಯೂ, ಬೈರಾಗಿಣಿಯು ಅಂಗರಕ್ಷಕನಾದ ಮಲ್ಲಸರ್ಜನನ ಸುರಕ್ಷಿತತೆಯ ವಿಷಯವಾಗಿಯೂ ಜಾಗರೂಕರಾಗಿದ್ದರು. ಹೀಗೆ ಯುದ್ಧವು ಒಳ್ಳೇ ಭರಕ್ಕೆ ಬಂದಿರುವಾಗ ಹುಕ್ಕದೊರೆಯನ್ನು ರಕ್ಷಿಸುವ ಆವೇಶದಲ್ಲಿ ಮಲ್ಲಸರ್ಜನನು ತನ್ನ ಎಚ್ಚರವಿಲ್ಲದವನಾಗಿರಲು. ಈ ಸಂಧಿಯನ್ನು ಸಾಧಿಸಿ ಒಬ್ಬ ಯವನನು ಖಡ್ಗವೆತ್ತಿ ಮಲ್ಲಸರ್ಜನನ ರುಂಡವನ್ನು ತುಂಡರಿಸುತ್ತಿರಲು. ಬೈರಾಗಿಣಿಯು ಸಿಂಹಿಣಿಯಂತೆ ಪುಟನೆಗೆದು ಆ ಯವನನ ಖಡ್ಗ ಸಹಿತವಾದ ಹಸ್ತವನ್ನು ಆಕಾಶಕ್ಕೆ ಹಾರಿಸಿದಳು! ಆ ಚಿಮ್ಮಿದ ರಕ್ತ ಸಿಡಿದು ಎಚ್ಚತ್ತ ಮಲ್ಲಸರ್ಜನು ಹಿಂದಿರುಗಿ ನೋಡಲು, ಬೈರಾಗಿಣಿಯ ಈ ಸಾಹಸವು ಅವನ ಕಣ್ಣಿಗೆ ಬಿದ್ದಿತು. ಆಗ ಮಲ್ಲಸರ್ಜನನು ಅತ್ಯಂತ ಕೃತಜ್ಞತೆಯಿಂದಲೂ, ಪೂಜ್ಯಬುದ್ಧಿಯಿಂದಲೂ ಬೈರಾಗಿಣಿಯನ್ನು ಕುರಿತು–''ಎಲೈ ಮಹಿಮಾಶಾಲಿನಿಯಾದ ಬೈರಾಗಿಣಿಯೇ, ಸ್ವಾಮಿಕಾರ್ಯಕ್ಕಾಗಿ ನನ್ನ ಈ ದೇಹವನ್ನು

ಉಳಿಸಿದ ನಿನ್ನ ಈ ಉಪಕಾರವನ್ನು ನಾನು ಎಂದಿಗೂ ಮರೆಯೆನು; ಆದರೆ ಈ ಮಹತ್ಕೃತ್ಯದ ಸ್ಮರಣಕ್ಕಾಗಿ ಈ ಉಂಗುರವನ್ನು ಹಿಡಿಯೆಂದು ಆ ವೀರ ಮಲ್ಲಸರ್ಜನು ಕೈಯನ್ನು ಮುಂದಕ್ಕೆ ಚಾಚಲು, ಬೈರಾಗಿಣಿಯು ಬಹು ಆದರದಿಂದ ಅದನ್ನು ಸ್ವೀಕರಿಸಿ ಯಾವ ಮಾತನ್ನೂ ಆಡದೆ ಗದ್ಗದಕಂಠಿಯಾಗಿ ಉಂಗುರವನ್ನು ಕಣ್ಣು ಮೂಗಿಗೆ ಹಚ್ಚಿಕೊಂಡು ಅದನ್ನು ಭಕ್ತಿಯಿಂದ ತನ್ನ ಬೆರಳೊಳಗಿಟ್ಟುಕೊಂಡಳು!

ಪ್ರಿಯ ವಾಚಕರೇ, ಈಗಿನ ಯುದ್ಧಪ್ರಸಂಗದಲ್ಲಿ ಪ್ರಕಟವಾದ ಕನ್ನಡಿಗರ ರಣರಕ್ಕಸತನವು ಆಶ್ಚರ್ಯಕರವಾದದ್ದಿತ್ತು, ಅಂಗರಕ್ಷಕನಾದ ಮಲ್ಲಸರ್ಜನನ್ನು ಯವನ ವೀರನು ತುಂಡರಿಸಹೋಗಿ ಬೈರಾಗಿಣಿಯಿಂದ ಸ್ವರ್ಗಸ್ಥನಾದದ್ದನ್ನು ನೋಡಿ ವೀರ ಕುಮಾರಿ ಪದ್ಮಿನಿಯು ಹುಕ್ಕದೊರೆಯ ಅಂಗರಕ್ಷಣದ ಕಾರ್ಯವನ್ನು ಮಲ್ಲಸರ್ಜನನೊಡನೆ ಮಾಡತೊಡಗಿದಳು. ಅಂಥ ಭಯಂಕರವಾದ ಯುದ್ಧಪ್ರಸಂಗದಲ್ಲಿಯಾದರೂ ತನ್ನ ಮೇಲೆ ಪದ್ಮಿನೀ ದೇವಿಯು ಮಾಡುತ್ತಿರುವ ಉಪಕೃತಿಯನ್ನು ಹುಕ್ಕದೊರೆಯು ನೋಡಿ ತಾನು ಧನ್ಯನೆಂದು ಭಾವಿಸಿದನು. ಕೃತಜ್ಞತೆಯಿಂದ ಆತನ ಕಂಠವು ಬಿಗಿದುಬರುತ್ತಿತ್ತು, ಹೀಗೆ ಪ್ರತ್ಯಕ್ಷ ರಾಜಪುತ್ರಿಯ ಅಂಗರಕ್ಷಣ ವ್ಯಾಪಾರದಿಂದ ಪ್ರೋತ್ಸಾಹಿತನಾದ ಹುಕ್ಕದೊರೆಯು ಮಲಿಕನಾಯಬನಂಥ ವೀರಾದಿ ವೀರನೊಡನೆ ಕಾದುವಾಗ ತನ್ನ ಅಮೋಘವಾದ ಕ್ಷಾತ್ರತೇಜಸ್ಸನ್ನು ಪ್ರಕಟ ಮಾಡಿ ಪದ್ಮಿನಿಯ ಧನ್ಯವಾದಗಳನ್ನು ಪಡೆದದ್ದು ಆಶ್ಚರ್ಯವಲ್ಲ! ಆ ಲೋಕಸುಂದರಿಯ ಹುಕ್ಕದೊರೆಯ ಪರಾಕ್ರಮವನ್ನು ನೋಡಿ ಆನಂದ ಬಾಷ್ಪಗಳನ್ನು ದುರಿಸುತ್ತ ಗದ್ಗದಕಂಠದಿಂದ–''ಹೌದು, ಅನಾದಿಕಾಲದಿಂದ ಲೋಕೈಕ ವೀರರಾದ ಅರ್ಜುನನಾದಿ ಕ್ಷತ್ರಿಯ ವೀರರು ಪ್ರಕಟಿಸುತ್ತ ಬಂದ ಕ್ಷಾತ್ರತೇಜವು ಇದೇ ಹೌದು'' ಎಂದು ಹುಕ್ಕದೊರೆಯನ್ನು ಅಭಿನಂದಿಸುತ್ತ ಆತನ ಮೇಲೆ ಸಾಗಿಬರುವ ಶತ್ರುಗಳನ್ನು ಹಣಿಯುವಾಗ ಹುಕ್ಕದೊರೆಯ ಮೈಉಬ್ಬಿ ಅವನ ಕ್ಷಾತ್ರತೇಜವು ಉಕ್ಕೇರಿ ಹೊರಸೂಸಿತು. ಹೀಗೆ ತನ್ನೊಡನೆ ಸಮಬಲದಿಂದ ಕಾದುತ್ತಿರುವ ಮಲಿಕನಾಯಬನನ್ನು ಆ ಮಾಧವಮುನಿಯ ಧನ್ಯ ಶಿಷ್ಯನಾದ ಹುಕ್ಕದೊರೆಯು ತನ್ನ ಅಮೋಘ ಯುದ್ಧಕೌಶಲ್ಯದಿಂದ ಅಕಸ್ಮಾತ್ ನೆಲಕ್ಕುರುಳಿಸಿ, ಸಿಂಹನಾದ ಮಾಡಿದನು! ಈ ಆನಂದದ ಪ್ರಸಂಗವನ್ನು ನೋಡಿ ಆವೇಶದಿಂದ ಆತನ ಬಳಿಯಲ್ಲಿ ಬಂದು ನಿಂತಿದ್ದ ದೇವರಾಜಪುತ್ರಿ ಪದ್ಮಿನಿಯು, ಆನಂದಾವೇಶದಿಂದ ಜೋಲಿಹೋಗಿ ಬೀಳುತ್ತಿರಲು, ಹುಕ್ಕದೊರೆಯು ತಟ್ಟನೆ ಹೋಗಿ ಆಕೆಯ ಹಸ್ತವನ್ನು ಹಿಡಿದು–ರಾಜ ಪುತ್ರಿ, ಜೋಕೆ ಜೋಕೆ, ಈ ನಿನ್ನ ಪ್ರಜೆಯಾದ ಹುಕ್ಕನು ನಿನ್ನ ಮಂಗಲಕರ ಹಸ್ತ ಹಿಡಿದು ಅಸರವಿತ್ತಿರುವನು, ಹೆದರಬೇಡ ಎಂದು ಆದರದಿಂದ ನುಡಿದನು. ಆಗ ಹುಕ್ಕದೊರೆಯ ಹಸ್ತಸ್ಪರ್ಶದಿಂದ ರೋಮಾಂಚಿತಳಾಗಿದ್ದ ವೀರ ಪದ್ಮಿನಿಯು ತನ್ನ ಹಸ್ತವು ಬೆವರುತ್ತಿರಲು, ಆನಂದಾತಿರೇಕದ ಕೃತಜ್ಞತೆಯಿಂದ–''ಎಲೈ ವೀರಶಿರೋಮಣಿಯಾದ ಹುಕ್ಕದೊರೆಯೇ, ನಮ್ಮ ಮಾಧವಮುನಿಯ ಪಟ್ಟಶಿಷ್ಯನು ನೀನು ನನ್ನ ಪ್ರಜೆಯಾಗಿರು, ಅಥವಾ ಯಾದವ ವಂಶದ ರಾಜಪುತ್ರನಾಗಿರು; ಅಥವಾ ಇವೆರಡೂ ಆಗಿರದೆ ಈಗ ಎಲ್ಲರೂ ತಿಳಿದುಕೊಂಡಿರುವಂತೆ

ಕುರುಬನೇ ಆಗಿರು. ಈ ವರೆಗೆ ಯಾವ ಪುರುಷನೂ ಗ್ರಹಿಸದೆ ಇದ್ದ ನನ್ನ ಹಸ್ತವನ್ನು ಗ್ರಹಿಸಿ ಕ್ಷತ್ರಿಯ ರಾಜಪುತ್ರಿಯ ಪಾಣಿ ಗ್ರಹಣ ವಿಧಿಯನ್ನು ನೀನು ನೆರವೇರಿಸಿರುವದರಿಂದ ನೀನೇ ನನ್ನ ಪತಿಯೆಂದು ನಾನು ಭಾವಿಸಿರುವೆನು'' ಎಂದು ನುಡಿದಳು. ಅಷ್ಟರಲ್ಲಿ ಬೈರಾಗಿಣಿಯೂ, ಮಲ್ಲಸರ್ಜನನೇಮೊದಲಾದ ವೀರರೂ ಮಾಧವಮುನಿಯ ಹೆಸರಿ ನಿಂದಲೂ, ಪಂಪಾ ವಿರೂಪಾಕ್ಷನ ಹೆಸರಿನಿಂದಲೂ, ಬುಕ್ಕದೊರೆಯ ಹೆಸರಿನಿಂದಲೂ ಜಯಘೋಷ ಮಾಡಿದರು; ಈ ಜಯಘೋಷದ ಅನುಕರಣವನ್ನು ಯಾವತ್ತು ಕನ್ನಡ ವೀರರು ಮಾಡ ತೊಡಗಿದ್ದರಿಂದ ಕನ್ನಡಿಗರ ಜಯಘೋಷದಿಂದ ದಶ ದಿಕ್ಕುಗಳು ತುಂಬಿಹೋದವು! ಅಷ್ಟರಲ್ಲಿ ಬುಕ್ಕ-ಕೃಷ್ಣನಾಯಕರ ಪರಾಕ್ರಮದಿಂದ ಶತ್ರುಗಳು ಸೋತು ಓಡತೊಡಗಲು, ಹುಕ್ಕದೊರೆಯ ಅಪ್ಪಣೆಯಂತೆ ರಣವ್ಯಾಪಾರವು ನಿಲ್ಲಿಸಲಟ್ಟಿತ್ತು. ಆಗ ಕನ್ನಡಿಗರ ಸ್ವರಾಜ್ಯ ಸೂರ್ಯನು ಇನ್ನು ಬೇಗನೆ ಉದಯವಾಗುವನೆಂದು ಸೂಚಿಸುವಂತೆ ''ಕೂ ಕೂ ಕೂ '' ಎಂದು ಕೋಳಿಯು ಕೂಗುತ್ತಿರಲು, ಮೂಡಲಗೆಂಪು ಹರಿದು ಬೆಳ್ಳಗೆ ಬೆಳಗಾಯಿತು!

## ಮುಯ್ಯಕ್ಕೆ ಮುಯ್ಯ!

ಯುದ್ಧವ್ಯಾಪಾರವನ್ನು ನಿಲ್ಲಿಸಿದ ಬಳಿಕ ಸ್ವಲ್ಪ ಹೊತ್ತಿನಲ್ಲಿ ಎಲ್ಲ ಕಡೆಯಲ್ಲಿಯೂ ಶಾಂತತೆಯಾಯಿತು. ಬೆಳಗಿನ ಹೂಬಿಸಿಲು ರಕ್ತಮುಣುಗಿದ ದುರ್ಗದ ಮೇಲೆ ಬಿದ್ದಾಗ ಅದರ ಉಗ್ರತೆಯು ಹೆಚ್ಚಿತು. ಅಂದಿನ ಯುದ್ಧದಲ್ಲಿ ಮಾದಿಗರ ದುರಗಪ್ಪನು ತನ್ನ ಅನುಯಾಯಿ ಗಳೊಡನೆ ಅದ್ಭುತ ಶೌರ್ಯವನ್ನು ಪ್ರಕಟ ಮಾಡಿದನು. ಕೋಟೆಯ ಮೇಲಿನಿಂದ ಸೂಚನೆಯಾದಕೂಡಲೆ ಬಿದ್ದೇವೆಂಬ ಅರಿವಿಲ್ಲದೆ ಆವೇಶದಿಂದ ದುರ್ಗವನ್ನು ಏರಿಬಂದು ದುರ್ಗವನ್ನು ಮೊದಲು ಸೇರಿದವರೆ ದುರಗಪ್ಪನ ಜನರು! ಅಂದಿನ ಘೋರ ರಣಾಂಗಣದಲ್ಲಿ ಕನ್ನಡಿಗರ ಹೊಲೆಹದಿನೆಂಟು ಜಾತಿಯವರೂ ಯಾವ ಭೇದಭಾವವನ್ನೂ, ಸ್ಪೃಶ್ಯಾ ಸ್ಪೃಶತೆಯನ್ನೂ ಎಣಿಸದೆ ಭುಜಕ್ಕೆ ಭುಜವನ್ನು ಹೊಂದಿಸಿ ನಿಂತು ಕಾದಿದ್ದರು. ಯುದ್ಧ ವ್ಯಾಪಾರವು ಮುಗಿದು ಎಲ್ಲಕಡೆಯಲ್ಲಿಯೂ ಶಾಂತತೆಯಾದ ಬಳಿಕ ಕನ್ನಡವೀರರು ಯವನ ವೀರರನ್ನು ಪ್ರತಿಬಂಧಿಸಿ ಇಟ್ಟರು; ಅವರನ್ನು ನಿಶ್ಯಸ್ತ್ರ ಮಾಡುವ ಗೊಡವೆಗೆ ಹೋಗಲಿಲ್ಲ. ಮಲಿಕನಾಯಬನಂಥ ಘನವಂತನ ಜನರ ಮನಸ್ಸು ನೋಯಿಸುವದು ಹುಕ್ಕ ದೊರೆಯ ಮನಸ್ಸಿಗೆ ಸರ್ವಥಾ ಬರಲಿಲ್ಲ. ಮೇಲಾಗಿ ಕನ್ನಡಿಗರ ಬಲದ ಮುಂದೆ ಮುಸಲ್ಮಾನರ ಆಟವೇನು ನಡೆಯುವಹಾಗಿದ್ದಿಲ್ಲ. ಕನ್ನಡಿಗರು ಜಯಘೋಷದ ಆನಂದದಲ್ಲಿರುವಾಗ ನೆಲಕ್ಕೆ ಬಿದ್ದ ಮಲಿಕನಾಯಬನನ್ನು ಆವನ ನಂಬಿಗೆಯ ಜನರು ಎತ್ತೋ ಎತ್ತಿಕೊಂಡು ಹೋಗಿದ್ದರು. ಅದರಿಂದ ಮಲಿಕನಾಯಬನು ಸತ್ತನೆಂದು ತಿಳಿಯಲಿಲ್ಲ, ಗಾಯಪಟ್ಟು ಮೂರ್ಛಿತನಾದ ನೆಂದೂ ತಿಳಿಯಲಿಲ್ಲ, ಓಡಿಹೋದನೆಂದೂ ತಿಳಿಯಲಿಲ್ಲ. ಸದ್ಯಕ್ಕೆ ಮಾಧವಾಚಾರ್ಯರ ಬಂಧ

ವಿಮೋಚನ ಮಾಡಲು ಆತುರಪಡುತ್ತಿದ್ದ ಕನ್ನಡಿಗರು ನಾಯಬನ ಯೋಗಕ್ಷೇಮದ ಕಡೆಗೆ ಹೆಚ್ಚು ಲಕ್ಷವನ್ನೂ ಕೊಡಲಿಲ್ಲ. ಹುಕ್ಕನೇ ಮೊದಲಾದ ವೀರರು ದುರ್ಗದ ಕಾವಲುಗಳನ್ನು ಭದ್ರಪಡಿಸಿ, ಅಲ್ಲಲ್ಲಿ ತಮ್ಮ ಸೈನಿಕರ ಗುಂಪುಗಳನ್ನು ಠಾಣ್ಯಗೊಳಿಸಿ ದುರ್ಗದ ತುಂಬೆಲ್ಲ ತಮ್ಮ ದರ್ಪವನ್ನು ಕೂಡ್ರಿಸಿದರು. ಬಳಿಕ ಅವರು ಅತ್ಯಂತ ಉತ್ಸಾಹದಿಂದಲೂ, ಕೃತಕೃತ್ಯತೆಯಿಂದಲೂ ಮಹಾತ್ಮರಾದ ವಿರೂಪಾಕ್ಷಾರ್ಯರನ್ನು ಮುಂದೆಮಾಡಿಕೊಂಡು ರಾಜಪುತ್ರಿಯಾದ ಪದ್ಮಿನಿಯೂ, ಬೈರಾಗಿಣಿಯೂ ಕಾಲುನಡಿಗೆಯಿಂದಲೇ ತಮ್ಮನ್ನು ಹಿಂಬಾಲಿಸಲು, ಆಚಾರ್ಯರಿದ್ದ ಮನೆಯಕಡೆಗೆ ಸಾಗಿದರು. ತಮ್ಮ ಪ್ರತಿಜ್ಞೆಯು ಈಡೇರಿದ್ದರಿಂದ ಆಚಾರ್ಯರನ್ನು ಕಾಣಲಿಕ್ಕೆ ಪ್ರತಿ ಒಬ್ಬ ಕನ್ನಡಿಗನೂ ಉಲ್ಲಾಸಪಡುತ್ತಿದ್ದನು. ಎಲ್ಲರೂ ಆಚಾರ್ಯರ ಸೆರೆಮನೆಯ ಬಳಿಗೆ ಹೋಗಲು, ಅಲ್ಲಿ ಕಾವಲಾಗಿದ್ದ ಯವನ ಸೈನಿಕರು ಅವರಿಗೆ ಸಲಾಮುಮಾಡಿ ಹಿಂದಕ್ಕೆ ಸರಿದು ಹಾದಿಯನ್ನು ಕೊಟ್ಟಕೂಡಲೆ ಅವರನ್ನು ಸೆರೆ ಹಿಡಿದು ಅಲ್ಲಿ ಕನ್ನಡ ಸೈನಿಕರ ಕಾವಲನ್ನಿರಿಸಿ ಆಚಾರ್ಯರಿದ್ದ ಗೃಹವನ್ನು ಅವರೆಲ್ಲರು ಪ್ರವೇಶಿಸಿದರು.

ಆಚಾರ್ಯರ ದರ್ಶನಕ್ಕೆ ಹೋಗುವಾಗ ವಿರೂಪಾಕ್ಷಾರ್ಯರು ಸತ್ವ ಶಾಲಿನಿಯರಾದ ಪದ್ಮಿನಿ–ಬೈರಾಗಿಣಿಯರನ್ನು ಮುಂದೆ ಮಾಡಿದ್ದರು. ಆಚಾರ್ಯರಲ್ಲಿ ಆಕೃತ್ರಿಮ ನಿಷ್ಠೆಯುಳ್ಳ ಆ ತರುಣಿಯರು ಆಚಾರ್ಯರನ್ನು ಕಂಡ ಕೂಡಲೆ ಸದ್ಗದಿತಕಂಠರಾಗಿ ಭೂಮಿಯಮೇಲೆ ಸಾಷ್ಟಾಂಗವೆರಗಿದರು. ಆ ನಿರ್ಮಲಾಂತಃಕರುಣದ ಅಬಲೆಯರಿಂದ ಸಹಿತವಾದ ಕನ್ನಡವೀರ ವರ್ಗವನ್ನು ನೋಡಿ ಕೃತಾರ್ಥತೆಯಿಂದ ಆಚಾರ್ಯರ ಕಂಠ ಬಿಗಿದು ಆನಂದಬಾಷ್ಪಗಳು ದುರುತ್ತಿರಲು, ಆ ಮಹಾತ್ಮರು ವಿರೂಪಾಕ್ಷಾರ್ಯರನ್ನು ನೋಡಿದಕೂಡಲೆ ಎದ್ದುನಿಂತು ಮುಂದಕ್ಕೆ ಬಂದು ಅವರ ಕೈಯನ್ನು ಹಿಡಿದು– ''ಬರಬೇಕು, ಕನ್ನಡಿಗರ ಸತ್ವರಕ್ಷಣ ಮಾಡಿ ಕರ್ನಾಟಕ ಭೂಮಾತೆಯನ್ನು ಧನ್ಯಳಾಗ ಮಾಡಿದ ಆರ್ಯವರ್ಯರು ಇತ್ತ ಬರಬೇಕು'' ಎಂದು ನುಡಿದು ತಮ್ಮ ಅರ್ಧಾಸನದ ಮೇಲೆ ಅವರನ್ನು ಕುಳ್ಳಿರಿಸಿಕೊಂಡರು. ಬಳಿಕ ಬ್ರಹ್ಮ ಭಾವನೆಯಿಂದ ಅವರು ಪರಸ್ಪರರನ್ನು ಅಭಿನಂದಿಸಿದರು. ಅಷ್ಟರಲ್ಲಿ ಹುಕ್ಕನೇ ಮೊದಲಾದ ವೀರರು ಸಾಷ್ಟಾಂಗವೆರಗಿ ಸದ್ಗುರುದರ್ಶನದಿಂದುಂಟಾದ ಆನಂದ ಬಾಷ್ಪೋದಕಗಳಿಂದ ಭೂಮಿಯನ್ನು ತೋಯಿಸತೊಡಗಿದರು! ಆಗ ಶಿಷ್ಯ ವತ್ಸಲರಾದ ಆಚಾರ್ಯವರ್ಯರು ಎದ್ದು ನಿಂತು ಎಲ್ಲ ವೀರರನ್ನು ಕುರಿತು–''ಏಳಬೇಕು, ಹುಕ್ಕದೊರೆಯು, ಬುಕ್ಕದೊರೆಯು, ಕೃಷ್ಣನಾಯಕನು, ಮಲ್ಲಸರ್ಜನನು, ತಿರುವೇಂಕಟನು ಎಲ್ಲ ವೀರರು ಮೇಲಕ್ಕೇಳಬೇಕು! ಕರ್ನಾಟಕ ಭೂಮಾತೆಯ ಸತ್ಪುತ್ರರೇ, ನನ್ನ ಸಲುವಾಗಿ ನೀವು ಬಹಳವಾಗಿ ದಣಿದು ಕೊಂಡಿರಿ; ನಿಮ್ಮ ಆ ದಣುವಿಕೆಯೇ ಕರ್ನಾಟಕಕ್ಕೆ ಸ್ವಾತಂತ್ರ್ಯವನ್ನಿತ್ತು ನಿಮ್ಮನ್ನು ವಿಶ್ರಾಂತಿ ಗೊಳಿಸಲಿ! ಆರ್ಯವರ, ನನ್ನ ಸಲುವಾಗಿ ನಿಮ್ಮಂಥ ಮಹಾತ್ಮರ ಉಪೋಷಣ! ಈ ರಾಜಪುತ್ರಿ ಪದ್ಮಿನಿಯೂ ಎಂಟು ದಿನಗಳಿಂದ ಉಪವಾಸ!! ಬೈರಾಗಿಣಿಯ ನಿಷ್ಠೆಗಂತು ನೆಲೆಯಿಲ್ಲ!!! ಯಾವತ್ತೂ ಕನ್ನಡ ವೀರರೆ, ನನ್ನ ಸುಲವಾಗಿ ನೀವೆಲ್ಲರೂ ಇಂದು ಅಖಂಡ ಉಪೋಷಣವಿದ್ದು

ಕಾದಿ ಆಯಾಸಪಟ್ಟಿರಾ? ಆದರೆ ಈ ಉಪೋಷಣವೂ, ಈ ಅಕೃತ್ರಿಮ ನಿಷ್ಠೆಯೂ, ಮಾಧವನೆಂಬ ವ್ಯಕ್ತಿಮಾತ್ರಕ್ಕಾಗಿರದೆ, ನಿಮ್ಮೆಲ್ಲರ ಪುಣ್ಯದಿಂದ ಆ ವ್ಯಕ್ತಿಯಲ್ಲಿರುತ್ತಿರಬಹುದಾದ ಕರ್ನಾಟಕದ ಕಲ್ಯಾಣದ ಬುದ್ಧಿಗಾಗಿಯೆಂದು ನಾನು ತಿಳಿದುಕೊಳ್ಳುವೆನು. ಕರ್ನಾಟಕದ ಕಲ್ಯಾಣಬುದ್ಧಿಯನ್ನು ತಾಳಿದ್ದರಿಂದ ನಾನು ನಿಮಗೆ ಆದರಣೀಯನಾಗಿರುವಂತೆ, ಅದೇ ಕಲ್ಯಾಣಬುದ್ಧಿಯನ್ನು ತಾಳಿ ಪರಿಪರಿಯ ಕಷ್ಟಗಳನ್ನು ಭೋಗಿಸುವ ನೀವು ನನಗೂ ಅತ್ಯಂತ ಆದರಣೀಯರಾಗಿರುವಿರಿ! ಶ್ರೀ ಪಂಪಾ ವಿರೂಪಾಕ್ಷನ ಕೃಪೆಯಿಂದ ಈ ಸತ್ವಶಾಲಿನಿಯರ ಪ್ರತಿಜ್ಞೆಯು ನಿಮ್ಮಿಂದ ಪೂರ್ಣವಾದದ್ದರಿಂದ ನನಗೆ ಬಹಳ ಸಂತೋಷವಾಗುತ್ತದೆ. ಕೆಚ್ಚೆದೆಯ ನಿಮ್ಮಂಥ ವೀರರ ಮುಂದಾಳುವೆನಿಸಿಕೊಳ್ಳಲಿಕ್ಕೆ ನಾನು ತುಂಬಾ ಅಭಿಮಾನಪಡುತ್ತೇನೆ. ತಿರುವೇಕಂಟ, ವೀರಾಧಿವೀರನಾದ ನೀನು ವಿರೂಪಾಕ್ಷಾರ್ಯ ರಂಥ ಸಜ್ಜನರ ಸಮಾಗಮ ದಿಂದ ಧನ್ಯವಾದದ್ದನ್ನು ನೋಡಿ ನನಗೆ ಹಿಡಿಸಲಾರದಷ್ಟು ಸಂತೋಷವಾಗುತ್ತದೆ. ಕ್ಷತ್ರಿಯ ವೀರಾ, ಕಾಲಕ್ಕನುಸರಿಸಿ ಆಗುವ ಬುದ್ಧಿಯ ಪಲ್ಲಟಕ್ಕೆ ಯಾರು ಯಾರಿಗೂ ಹೆಸರಿಡದೆ, ಸುದ್ಬುದ್ಧಿಯು ಉತ್ಪನ್ನವಾದದ್ದಕ್ಕಾಗಿ ಸಂತೋಷ ಮಾತ್ರ ಪಡಬೇಕು; ಯಾಕಂದರೆ ಬಹಿರ್ಮುಖವಾಗಿರುವ ಈ ಸೃಷ್ಟಿಯಲ್ಲಿ ವಿಷಯಾಸಕ್ತಿಯೂ ತಜ್ಜನ್ಯ ದುರ್ಗುಣಗಳೂ ಮನುಷ್ಯ ಮಾತ್ರರಾದ ನಮಗೆ ಉಂಟಾಗುವದರಲ್ಲಿ ಆಶ್ಚರ್ಯವಿಲ್ಲ! ದೊಡ್ಡವರ ಕೃಪೆಯಿಂದ ನೀನು ಮಹಾ ನರಕದಿಂದ ಉದ್ಧೃತನಾಗಿರುವದರಿಂದ ಹಿಂದಿನ ಸ್ಥಿತಿಗಾಗಿ ನೀನು ಎಷ್ಟು ಮಾತ್ರವೂ ಪಶ್ಚಾತ್ತಾಪಪಡದೆ, ಇನ್ನುಮುಂದೆ ಯಾವಾಗಲೂ ದೇಶಕಲ್ಯಾಣ ಮಾಡುತ್ತ ''ಲೋಕಾರಾಧನೆಯೇ ಶ್ರೇಷ್ಠವಾದ ಶಿವಪೂಜೆ''ಯೆಂದು ಆರ್ಯವರ್ಯರು ಉಪದೇಶಿಸಿದಂತೆ ಆ ಜನ್ಮ ನಡೆದು ನಿನ್ನ ಜನ್ಮವನ್ನು ಕೃತಾರ್ಥಮಾಡಿಕೋ. ಒಟ್ಟಿಗೆ ಕರ್ನಾಟಕದ ಉದ್ಧಾರಕಾಲವು ಒದಗಿರುವದರಿಂದ ಎಲ್ಲ ಸುಯೋಗಗಳು ಒದಗಿಬಂದವು; ಆದರೆ ನಾವು ಮೊದಲು ಘನವಂತನಾದ ಮಲಿಕನಾಯಬನನ್ನು ಕಂಡು ಆತನನ್ನು ಸತ್ಕರಿಸುವದು ಅಗತ್ಯವಾಗಿದೆ. ರಾಜಕಾರಣ ಪುರುಷರಲ್ಲಿ ರಾಜನ ನಿಜವಾದ ಕಲ್ಯಾಣವನ್ನು ಮಾಡುವ ಆ ನಾಯಬನಂಥ ಸಜ್ಜನರನ್ನು ಕಾಣುವದು ಅಪರೂಪವು. ಪ್ರಿಯ ಕನ್ನಡಿಗರೇ, ಸೆರೆಮನೆಯ ನೆವದಿಂದ ಮಲಿಕನಾಯಬನಂಥ ಸಜ್ಜನನ ಸಮಾಗಮವಾದದ್ದೊಂದು ಸುಯೋಗವೆಂದು ನಾನು ತಿಳಿಯುತ್ತೇನೆ.

ಈ ಮೇರೆಗೆ ನುಡಿದು ಆಚಾರ್ಯರು ಮಲಿಕನಾಯಬನನ್ನು ಕಾಣುವದಕ್ಕೆ ಹೊರಟರು. ಈ ಅವಸರದಲ್ಲಿ ಸಾಧ್ವೀಮಣಿಯಾದ ಆಚಾರ್ಯ ಪತ್ನಿ ವೈತಿಹೋತ್ರಿಯರ ದರ್ಶನವಾದದ್ದರಿಂದ ಆ ಕನ್ನಡವೀರರ ಪರಿವಾರವು ಧನ್ಯವಾಗಿ, ಆ ಪತಿವ್ರತೆಯನ್ನು ಮನಸಾ ನಮಸ್ಕರಿಸಿ ಪೂಜ್ಯ ಭಾವದಿಂದ ಆ ಸಾಧ್ವಿಯ ಮುಂದೆ ತಲೆತಗ್ಗಿಸುವಾಗ ಅವರ ನೇತ್ರಗಳು ಬಾಷ್ಪಪೂರ್ಣವಾದವು! ಈ ಪೂಜ್ಯ ದಂಪತಿಗಳು ಕರ್ನಾಟಕಕ್ಕೆ ತಾಯಿ–ತಂದೆಗಳಂತೆ ಇರುವರೆಂದು ಎಷ್ಟೋ ಜನರು ಭಕ್ತಿಪರವಶತೆಯಿಂದ ತಟ್ಟನೆ ನುಡಿದರು! ಆಚಾರ್ಯರು ಕಾರಾಗೃಹವಾಸಿಗಳಾಗಿದ್ದರೂ, ಈ ವರೆಗೆ ಯಾರಿಗೂ ಗೊತ್ತುಹತ್ತದೆಯಿದ್ದ ಮಲಿಕನಾಯಬರಿದ್ದ

ಸ್ಥಳವು ಅವರಿಗೆ ಗೊತ್ತಾಗಿತ್ತು, ಕರ್ನಾಟಕದ ಸೂತ್ರಚಾಲಕರ ಇಂಥ ಅಗಾಧ ಯೋಗ್ಯತೆಯಿಲ್ಲದಿದ್ದರೆ ಸೂತ್ರ ಚಾಲನ ವ್ಯಾಪಾರವು ಅವರಿಂದ ಹ್ಯಾಗೆ ಸಾಗೀತು? ಆಚಾರ್ಯರು ಸಕಲ ಪರಿವಾರವನ್ನು ಕೂಡಿಕೊಂಡು ಮಲಿಕನಾಯಬರಿರುತ್ತಿದ್ದ ಗುಪ್ತಸ್ಥಳಕ್ಕೆ ನೆಟ್ಟಗೆ ಹೋದರು. ಹೀಗೆ ಶತ್ರುಗಳು ನೆಟ್ಟಗೆ ತಮ್ಮ ಬಳಿಗೆ ಬಂದದ್ದರಿಂದ ಬೆದರಿದ ನಾಯಬನ ಸ್ವಾಮಿ ನಿಷ್ಠ ಸೇವಕರು ನಾಯಬರ ಸಂರಕ್ಷಣಕ್ಕಾಗಿ ಜೀವದ ಹಂಗುದೊರೆದು ಖಡ್ಗ ಹಿರಿದರು. ಆಗ ಮಾಧವಾಚಾರ್ಯರು ಶಾಂತವಾದ ಗಂಭೀರಸ್ವರದಿಂದ–ಯವನ ವೀರರೇ, ಯುದ್ಧ ಪ್ರಸಂಗವು ಮುಗಿದುಹೋಗಿರುವದರಿಂದ ಈಗ ನೀವು ಖಡ್ಗಗಳನ್ನು ಹಿರಿಯುವದು ಯಾತಕ್ಕೆ? ನಿಶ್ಯಸ್ತ್ರರಾದ ನಮ್ಮಮೇಲೆ ಶಸ್ತ್ರಗಳನ್ನು ಪ್ರಯೋಗಿಸುವದು ಯೋಗ್ಯವಾಗಿ ಕಂಡರೆ, ನೀವು ಹಾಗೆ ಮಾಡಬಹುದು. ಆದರೆ ನಾವು ಈಗ ಕಾಲವಶದಿಂದ ನಾಯಬಸಾಹೇಬರಿಗೊದಗಿದ ವಿಪತ್ತಿನ ಸಲುವಾಗಿ ಅಸಮಾಧಾನಪಟ್ಟು, ಅವರನ್ನು ಸಮಾಧಾನಪಡಿಸುವದಕ್ಕಾಗಿ ಬಂದಿರುತ್ತೇವೆ. ಹೋಗಿರಿ, ಒಳಗೆ ಹೋಗಿ ಮಾಧವಾಚಾರ್ಯನು ನಿಮ್ಮನ್ನು ಕಾಣಲಿಕ್ಕೆ ಬಂದಿರುವನೆಂದು ಹೇಳಿರಿ; ಆದರಮೇಲೆ ಅವರ ಅಪ್ಪಣೆಯಾದಂತೆ ನಾವೂ ನೀವೂ ನಡೆದುಕೊಳ್ಳೋಣ! ನೀವು ಕೇಳಿಬರುವವರೆಗೆ ನಾವೆಲ್ಲರೂ ಇಲ್ಲಿಯೇ ನಿಂತಿರುವೆವು ಎಂದು ಹೇಳಿದರು. ಆಗ ಯವನ ವೀರರಲ್ಲಿ ಒಬ್ಬನು ಒಳಗೆ ಹೋಗಿ ನಾಯಬನಿಗೆ ಮಾಧವಾಚಾರ್ಯರ ವಿಚಾರವನ್ನು ತಿಳಿಸಲು, ಕೂಡಲೆ ಆತನು ಆ ಬಂದ ಮನುಷ್ಯನಿಗೆ–''ನೀವು ಆಚಾರ್ಯರಿಗೆ ಯಾವ ತರದ ಪ್ರತಿಬಂಧವನ್ನೂ ಮಾಡತಕ್ಕದ್ದಲ್ಲ, ನಮ್ಮ ಮೇಲಿನ ಭಕ್ತಿಯಿಂದ ನೀವು ಅವರೊಡನೆ ಯುದ್ಧಕ್ಕೆ ಸಿದ್ಧರಾಗಬಹುದು. ನನ್ನ ಸಲುವಾಗಿ ನೀವು ಪ್ರಾಣವನ್ನರ್ಪಿಸಲಿಕ್ಕೂ ಹಿಂದುಮುಂದು ನೋಡಲಾರಿರೆಂಬುದನ್ನು ನಾನು ಬಲ್ಲೆನು; ಆದರೆ ಈಗ ಹಾಗೆ ಪ್ರಾಣಗಳನ್ನು ಅರ್ಪಿಸುವದು ನಿರರ್ಥಕವೆಂದು ತಿಳಿಯಿತು. ಈಗ ಹೀಗೆಯೇ ನೀವು ಹೋಗಿ ಆಚಾರ್ಯರನ್ನು ಕುರಿತು–''ನಾಯಬಸಾಹೇಬರು ತಮ್ಮನ್ನು ಬರಮಾಡಿ ಕೊಳ್ಳುವದಕ್ಕಾಗಿ ತಾವೇ ಬರುತ್ತಿದ್ದರು; ಆದರೆ ದೇಹದ ಅಸ್ವಾಸ್ಥ್ಯದ ಮೂಲಕ ವಿನಂತಿ ಮಾಡಿ ಕೊಳ್ಳುವರೇನಂದರೆ –''ದಯವಿಟ್ಟು ತಾವು ಒಬ್ಬರೇ ಬಂದು ದರ್ಶನಕೊಟ್ಟು ಹೋಗಬೇಕು. ನಮ್ಮ ಯಾವತ್ತು ಜನರು ಶಸ್ತ್ರಗಳನ್ನು ಕೆಳಗಿಟ್ಟು ನಿಮಗೆ ಶರಣುಬರುವರು. ಒಬ್ಬರೇ ಬರಲು ನಿಮಗೆ ಸಂದೇಹ ತೋರುತ್ತಿದ್ದರೆ, ಯೋಗ್ಯರಾದ ಅಂಗರಕ್ಷಕರೊಡನೆ ಬರಬಹುದು'' ಎಂದು ವಿಜ್ಞಾಪನೆ ಮಾಡಿಕೊಳ್ಳು, ಆಮೇಲೆ ಶಸ್ತ್ರಗಳನ್ನು ಕನ್ನಡಿಗರಿಗೆ ಒಪ್ಪಿಸಲು ನನ್ನ ಆಜ್ಞೆಯಾಗಿರುವದೆಂದು ನಮ್ಮವರಿಗೆ ಹೇಳು'' ಎಂದು ಹೇಳಿದನು.

ಹೀಗೆ ನಾಯಬನಿಂದ ಆಜ್ಞಾಪಿತನಾದ ಯವನವೀರನು, ನಾಯಬನ ವಿನಂತಿಯನ್ನು ಮಾಧವಾಚಾರ್ಯರಿಗೂ, ನಾಯಬನ ಅಪ್ಪಣೆಯನ್ನು ತನ್ನ ಸಂಗಡಿಗರಿಗೂ ತಿಳಿಸಲು, ಮಾಧವಾಚಾರ್ಯರು ತಮ್ಮ ಪರಿವಾರಕ್ಕೆಲ್ಲ– ನೀವು ಉಪೋಷಣ ಮಾಡಿದವರಾದದ್ದರಿಂದ ಇನ್ನು ಬೇಗನೆ ಊಟದ ವ್ಯವಸ್ಥೆಯನ್ನು ಮಾಡಿರಿ. ನಾನು ನಾಯಬರನ್ನು ಕಂಡು ಬೇಗನೆ ಬರುವೆನು. ಎಂದು ಹೇಳುತ್ತಿರಲು, ಯವನವೀರರು ನಾಯಬರನ ಅಪ್ಪಣೆಯಂತೆ ಬಡಬಡ

ಶಸ್ತ್ರಗಳನ್ನು ಕೆಳಗಿಟ್ಟರು. ಆಗ ಮಾಧವಾಚಾರ್ಯರು ಅವರವರ ಶಸ್ತ್ರಗಳನ್ನು ಅವರವರಿಗೆ ತಕ್ಕೊಳ್ಳ ಹೇಳಿ ತಾವು ನಿರ್ಭಯದಿಂದ ಮಲಿಕನಾಯಬನನ್ನು ಕಾಣುವದಕ್ಕಾಗ ಅವನಿದ್ದ ಗೃಹವನ್ನು ಪ್ರವೇಶಿಸಿದರು. ನಾಯಬನು ಆಚಾರ್ಯರ ಸಲುವಾಗಿ ಆಸನವನ್ನು ಸಿದ್ಧಮಾಡಿಸಿ ಇಟ್ಟಿದ್ದನು. ಆಚಾರ್ಯರು ಒಳಗೆ ಬಂದಕೂಡಲೆ ನಾಯಬನು ಮೇಲಕ್ಕೇಳುತ್ತಿರಲು. ಆಚಾರ್ಯರು ಆತನನ್ನು ಏಳಗೊಡದೆ-''ಗಾಯಹೊಂದಿದ ನೀವು ಹೀಗೆ ಏಳುವದರಿಂದ ಅಪಾಯವಾದೀತು! ನಾಯಬಸಾಹೇಬ, ನಾವೇನು ನಿಮಗೆ ಇನ್ನು ಹೊರಗಿನವರಾಗಲಿಲ್ಲ. ನಮ್ಮ ನಿಮ್ಮ ಜಾತಿಯನಲ್ಲಿ ಭೇದವಿದ್ದರೂ ನೀತಿಯಲ್ಲಿ ಭೇದವಿಲ್ಲ; ನಮ್ಮ ನಿಮ್ಮ ಧರ್ಮಗಳು, ನಮ್ಮ ನಿಮ್ಮ ತೋರಿಕೆಯ ನಡಾವಳಿಯ ದೃಷ್ಟಿಯಿಂದ ಭಿನ್ನವಾಗಿದ್ದರೂ ಈಶ್ವರಪ್ರೀತಿಯಾಗ ಬೇಕೆಂಬ ಉದ್ದೇಶದ ದೃಷ್ಟಿಯಿಂದ ಒಂದೇ ಆಗಿರುತ್ತದೆ. ಭಕ್ತಿ-ಜ್ಞಾನ-ವೈರಾಗ್ಯಗಳನ್ನು ಸಂಪಾದಿಸುವದು ನಮ್ಮ ಧರ್ಮದ ಮುಖ್ಯ ಕಟಾಕ್ಷವಾಗಿರುವಂತೆ. ನಿಮ್ಮ ಧರ್ಮದ ಕಟಾಕ್ಷವು ಆಗಿರುತ್ತದೆ; ಈ ರಹಸ್ಯವನ್ನರಿತು ಹಿಂದುಗಳಾದ ನಾವೂ, ಮುಸಲ್ಮಾನರಾದ ನೀವು ದೃಢವಾದ ಪ್ರೇಮಬಂಧನದಿಂದ ಬದ್ಧರಾದರೆ ಒಬ್ಬರ ಧರ್ಮಸಾಧನಕ್ಕೆ ಒಬ್ಬರು ಅನುಕೂಲವಾಗಿ ನಮ್ಮೆರಡೂ ಸಮಾಜಗಳ ಸ್ವಾತಂತ್ರ್ಯಕ್ಕೆ ಬಾಧೆಬಾರದೆ ಎರಡೂ ಸಮಾಜಗಳ ಸುಖಶಾಂತಿಗಳು ಹೆಚ್ಚುವವು! ಈ ಮಾತನ್ನು ಸಜ್ಜನರೂ, ಸ್ವಾಮಿನಿಷ್ಠರೂ ಆದ ನಿಮಗೆ ನಾನು ಹೇಳುವ ಕಾರಣವಿಲ್ಲ. ರಾಜಕಾರಣದಲ್ಲಿ ಒಬ್ಬರು ಒಮ್ಮೆ ಬೀಳುವದುಂಟು, ಒಬ್ಬರು ಒಮ್ಮೆ ಏಳುವದುಂಟು. ಈ ಬೀಳೋಣ ಏಳೋಣಗಳು ಪ್ರತಿ ಒಂದು ವ್ಯಕ್ತಿಗೂ, ಕುಟುಂಬಕ್ಕೂ, ಸಮಾಜಕ್ಕೂ, ರಾಷ್ಟ್ರಕ್ಕೂ ಬಿಟ್ಟಿರುವದಿಲ್ಲ. ಅಂದಬಳಿಕ ನಮಗೆ ಆಗಿರುವ ಜಯಕ್ಕಾಗಿ ನಾವು ಹಿಗ್ಗುವದೇಕೆ, ನಿಮಗಾದ ಪರಾಜಯಕ್ಕಾಗಿ ನೀವು ಕುಗ್ಗುವದೇಕೆ? ವ್ಯವಹಾರದೃಷ್ಟಿಯಿಂದ ಈ ಹಿಗ್ಗೋಣ-ಕುಗ್ಗೋಣಗಳು ಯಾವಾಗಲೂ ಬೆನ್ನು ಹತ್ತಿಯೇ ಇರುವದರಿಂದ, ಅವಕ್ಕೆ ಮಹತ್ವಕೊಡದೆ ಹಿತೇಚ್ಛುಗಳು ಯಾವಾಗಲೂ ತಮ್ಮ ಧರ್ಮದಿಂದ ಚಲಿಸಬಾರದು. ಈ ಮಾತು ನಿಮಗೆ ಗೊತ್ತಿದ್ದದ್ದೇ ಆದರೂ ನಮಗೂ ಇದು ಗೊತ್ತಿರುವ ದೆಂದು ನಿಮಗೆ ತಿಳಿದರೆ ಸಜ್ಜನರಾದ ನೀವು ಸಮಾಧಾನ ಪಡುವಿರೆಂದು ತಿಳಿದು ನಾಲ್ಕು ಮಾತು ಹೇಳಿ ಸಮಾಧಾನಪಡಿಸಲು ಬಂದಿದ್ದೇನೆ; ರಾಜಕಾರಣದ ದೃಷ್ಟಿಯಿಂದ ಈ ಕೋಟೆಯು ನಮ್ಮದಾಗಿದ್ದರೂ, ನಿಮ್ಮ ಸ್ವಾತಂತ್ರ್ಯಕ್ಕೆ ಕೊರತೆ ತರಲು ನಾವು ಎಷ್ಟು ಮಾತ್ರವೂ ಇಚ್ಛಿಸುವದಿಲ್ಲ. ರಾಜತಂತ್ರಕ್ಕನುಸರಿಸಿ ನಾವು ಮಾಡತಕ್ಕ ಮುಂದಿನ ವ್ಯವಸ್ಥೆಯನ್ನು ಮಾಡಬೇಕಾಗುವದು, ಆದ್ದರಿಂದ ತಾವು ತಮ್ಮ ಪರಿವಾರದೊಡನೆ ಬೇಕಾದಾಗ ಬೇಕಾದತ್ತ ಹೋಗಬಹುದು. ಈ ಸಂಬಂಧವಾಗಿ ತಮಗೆ ಯಾರಿಂದಲೂ ಯಾವ ತರದಿಂದಲೂ ಪ್ರತಿಬಂಧವು ಉಂಟಾಗಲಾರದು'' ಎಂದು ನುಡಿದು ಸುಮ್ಮನಾಗಲು, ನಾಯಬನು ಆಚಾರ್ಯರನ್ನು ಕುರಿತು-''ಆರ್ಯವರ, ನಿಮ್ಮ ಅಗಾಧವಾದ ಮಹಾತ್ಮ್ಯಕ್ಕೆ ನಿಮ್ಮ ಈ ಧರ್ಮಸಮ್ಮತ ಮಾತುಗಳು ವಿಶೇಷವಾಗಿ ಒಪ್ಪುತ್ತಿರುವವು. ಕೇವಲ ಸ್ವತಂತ್ರರೂ, ಬೇಕಾದದ್ದನ್ನು ಮಾಡುವ ಸಾಮರ್ಥ್ಯವುಳ್ಳವರೂ ಆದ ನೀವು ಒಬ್ಬ ದ್ರೋಹಿಯ

ಹೇಳಿಕೆಯಂತೆ ನಾನು ಬರೆದ ಕ್ಷುದ್ರ ಪತ್ರಕ್ಕೆ ಯಾವ ಕಾರಣದಿಂದಲೇ ಆಗಲಿ ಮಾನ ಕೊಟ್ಟು ಕಾಂಚನಗಡಕ್ಕೆ ನೀವಾಗಿ ಸೆರೆಯಾಳಾಗಿ ಬಂದಿರಿ; ಆದರೆ ಈಗ ನೀವು ನಿಮ್ಮ ಅಗಾಧ ಕರ್ತೃತ್ವಶಾಲಿತ್ವದಿಂದ ನಾನಿದ್ದ ಮನೆಯನ್ನೇ ಸೆರೆಮನೆಯಾಗಿ ಮಾಡಿರಲು, ನಾನು ನಿಮ್ಮ ಸೆರೆಯಾಳೇ ಅಲ್ಲದೆ ಸ್ವತಂತ್ರನು ಹ್ಯಾಗಾಗುವೆನು? ಆರ್ಯವರ, ನಿಮ್ಮಂಥ ಸಜ್ಜನರ ಸೆರೆಮನೆಯು ಆಯೋಗ್ಯ ಅರಸನ ಅರಮನೆಗಿಂತ ಹೆಚ್ಚು ಹಿತಕರವಾದದ್ದು! ಆದ್ದರಿಂದ ನಾನು ಸದ್ಯಕ್ಕಂತು ನಿಮ್ಮ ಸೆರೆಯಾಳಾಗಿರುವೆನು. ನೀವು ನನ್ನನ್ನು ಇಲ್ಲಿ ಕಾಂಚನಗಡದಲ್ಲಿಯೇ ಸೆರೆಯಲ್ಲಿಡಿರಿ, ಅಥವಾ ಅನುಗ್ರಹಿಸಿ ನಿಮ್ಮ ಸಂಗಡ ಕರಕೊಂಡಾದರೂ ಹೋಗಿರಿ, ಧರ್ಮಿಷ್ಠ ರಾಜರ ಹಾಗು ಧರ್ಮಿಷ್ಠ ಪ್ರಜೆಗಳ ಸೇವೆಗಳು ಧರ್ಮದ ಸೇವೆಯೇ ಆಗಿರುವದರಿಂದ ಅವರಲ್ಲಿ ಯಾರ ಸೇವೆ ಮಾಡಿದರೂ ವಿರೋಧಭಾವವು ಉತ್ಪನ್ನವಾಗಲಾರದು; ಇನ್ನು ಅಧರ್ಮಿಷ್ಠ ಸ್ಥಿತಿಯಲ್ಲಿಯಾದರೂ ಅಧರ್ಮಿಷ್ಠ ರಾಜರಿಗಿಂತ ಅಧರ್ಮಿಷ್ಠ ಪ್ರಜೆಗಳ ಸೇವೆಯು ಹೆಚ್ಚು ಮಾನ್ಯವಾಗಿರುವದು; ಯಾಕಂದರೆ, ವ್ಯಷ್ಟಿರೂಪನಾದ ರಾಜನು ಅಧರ್ಮಿಷ್ಠನಾದರೆ ಧರ್ಮಕ್ಕೆ ಸ್ಥಳವೇ ಇಲ್ಲದಾಗುವಂತೆ, ಸಮಷ್ಟಿರೂಪರಾದ ಪ್ರಜೆಗಳಲ್ಲಿ ಎಲ್ಲ ಜನರು ಅಧರ್ಮಿಷ್ಠರಾದರೂ ತಮ್ಮಂಥ ಹಾಗು ಆರ್ಯವರ್ಯರಂಥ ಮಹಾತ್ಮರು ಕೆಲವರಾದರೂ ಧರ್ಮಿಷ್ಠರು ಇದ್ದೇ ಇರುವದರಿಂದ ಅಧರ್ಮಿಷ್ಠ ರಾಜನ ಸೇವೆಗಿಂತ ಒಟ್ಟಿನಲ್ಲಿ ಕೇವಲ ಅಧರ್ಮಿಷ್ಠವಾಗದಿರುವ ಪ್ರಜೆಗಳ ಸೇವೆಯು ಹೆಚ್ಚು ಮಾನ್ಯವಾದದ್ದೆಂದು ನನಗೆ ತೋರುತ್ತದೆ. ಆಚಾರ್ಯವರ, ತಮ್ಮ ಸಹವಾಸದಿಂದ ನನಗೆ ಸ್ವಾರ್ಥಪರವಾದ ನೀಚಸೇವೆಯ ತಿರಸ್ಕಾರವು ಉತ್ಪನ್ನವಾಗಿದೆ; ಮತ್ತು ಪರಧರ್ಮದವರ ವಿಷಯದ ತಿರಸ್ಕಾರವು ಕಡಿಮೆಯಾಗಿದೆ; ವಿಶ್ವಬಂಧುತ್ವದಲ್ಲಿಯೇ ಆನಂದವಿರುತ್ತದೆಂಬ ವಿಚಾರವು ನನ್ನಲ್ಲಿ ತಲೆದೋರಹತ್ತಿದೆ; ಆದ್ದರಿಂದ ನಿಮ್ಮ ಸಮಾಗಮದ ವಿಷಯವಾಗಿ ನಾನು ಅತ್ಯಂತ ಉತ್ಸುಕನಾಗಿರುವೆನು. ಬ್ರಾಹ್ಮಣೋತ್ತಮರೇ, ನಮ್ಮ ಈ ಕಾಸಿಮುಖಾನರವರು ತಮ್ಮ ಶಿಷ್ಯರಾದದ್ದರ ಮರ್ಮವು ಈಗ ನನ್ನ ಅನುಭವಕ್ಕೆ ಬಂದಿತು. ಈಗ ಹಿಂದೂ ಮುಸಲ್ಮಾನರು ಪರಸ್ಪರರನ್ನು ದ್ವೇಷಬುದ್ಧಿಯಿಂದ ನೋಡುವ ಅಜ್ಞಾನವು ದೂರವಾಗುವದಾದಾರೆ ನಿಮ್ಮಂಥ ಮಹಾತ್ಮರಿಂದಲೇ ದೂರವಾಗಬೇಕು. ಆ ದ್ವೇಷಬುದ್ಧಿಯ ಕಸುವು ಕಡಿಮೆಯಾದ ಮಾತ್ರದಿಂದ ನನಗಾಗಿರುವ ಸಮಾಧಾನವನ್ನು ಈಗ ಅನುಭವಿಸುತ್ತಿರುವೆನು. ನನ್ನ ಈ ಸಮಾಧಾನವು ಅಖಂಡವಾಗಬೇಕಾದರೆ ನಿಮ್ಮಂಥ ಮಹಾತ್ಮರ ಸಹವಾಸದ ಅವಶ್ಯಕತೆ ಯಿರುವದು; ಆದ್ದರಿಂದ ನನ್ನ ಶಾಶ್ವತ ಕಲ್ಯಾಣಕ್ಕಾಗಿಯೇ ನಾನು ನಿಮ್ಮ ಸೆರೆಯಾಳಾಗುವೆನಿಷ್ಟೇ ಅಲ್ಲ, ನಿಮ್ಮ ಗುಲಾಮನಾಗುವ ಇಚ್ಛೆಯೂ ನನ್ನಲ್ಲಿ ಉತ್ಪನ್ನವಾಗಿರುವದು! ಪರಾಜಿತವಾದ ನಮ್ಮ ಸೈನ್ಯವೆಲ್ಲ ನೀವು ಒಪ್ಪಿಗೆಯಿತ್ತರೆ ಇಂದೇ ಬಾದಶಹರ ಕಡೆಗೆ ಹೋಗುವದು. ನಿಮ್ಮ ಧಾರ್ಮಿಕ ಪ್ರಭುತ್ವವು ಬೇಗನೆ ಪ್ರಸ್ಥಾಪಿತವಾಗಲೆಂದು ನಾನು ಅಲ್ಲಾನನ್ನು ಪ್ರಾರ್ಥಿಸುವೆನು. ಮುನಿಪುಂಗವ, ಸತ್ತೆಯು ಯಾವದಿದ್ದರೂ ಯಾರದ್ದಿರೂ ಅದು ಧರ್ಮಮೂಲವಿದ್ದರೆಯೇ

ಲೋಕಹಿತಕಾರಿಯಾಗುವದೆಂಬದು ನಿಮ್ಮ ಕ್ಷಣಿಕ ಸಹವಾಸದಿಂದ ನನ್ನ ನಿದರ್ಶನಕ್ಕೆ ಬಂದಿತು; ಆದ್ದರಿಂದ ನನಗೆ ನಿಮ್ಮ ದೃಢಸಹವಾಸದ ಯೋಗವನ್ನು ಒದಗಿಸಿಕೊಡಿರಿ!

ನಾಯಬನ ಈ ಮಾತುಗಳನ್ನು ಕೇಳಿ ಮಾಧವಾಚಾರ್ಯರು ಅತ್ಯಂತ ಲೀನತೆಯಿಂದ– ನಾಯಬಸಾಹೇಬ, ನಿಮ್ಮಂಥವರ ಮಾತನ್ನು ಅಭಿನಂದಿಸುವ ಯೋಗ್ಯತೆ ನನ್ನದಲ್ಲ! ತನ್ನ ಮೂಲಕವಾಗಿ ಜಗತ್ತನ್ನು ನೋಡುವದು ಮನುಷ್ಯ ಸ್ವಭಾವವಾದದ್ದರಿಂದ, ಮನುಷ್ಯನು ತಾನು ಸಜ್ಜನನಿದ್ದರೆ ಜಗತ್ತು ಅವನಿಗೆ ಸಜ್ಜನವಾಗಿ ತೋರುವದು; ತಾನು ದುರ್ಜನನಿದ್ದರೆ ಜಗತ್ತೇ ಅವನಿಗೆ ದುರ್ಜನವಾಗಿ ತೋರುವದು; ಆದ್ದರಿಂದ ನಾನು ಯಾವ ಯೋಗ್ಯತೆಯವನಿದ್ದರೂ ನಿಮ್ಮ ಯೋಗ್ಯತೆಯು ಘನವಾದದ್ದೆಂಬ ನಂಬಿಗೆಯು ನನಗೆ ಆಯಿತು! ನಿಮ್ಮಂಥ ಘನವಂತರ ಸಹವಾಸವು ನನಗೆ ಒದಗುತ್ತಿರುವದು ನನ್ನ ಧನ್ಯತೆಯ ಲಕ್ಷಣವೇ ಆಗಿರುತ್ತದೆ! ನಾಯಬಸಾಹೇಬ, ಬೇಕಾದಂಥ ಉಚ್ಚ–ನೀಚ ಸ್ಥಿತಿಯಲ್ಲಾದರೂ ಸಂತೋಷದಿಂದ ಇರಲೂ ಸಮರ್ಥರಾದ ನಿಮ್ಮಂಥವರಿಗೆ, ಹೀಗೆ ಇರಬೇಕೆಂದು ನಿಯಮನ ಮಾಡುವದರಲ್ಲಿ ಅರ್ಥವೇನಿರುವದು? ಹಾಗೆ ನಿಯಮನ ಮಾಡುವ ಯೋಗ್ಯತೆಯಾದರೂ ಯಾರಿಗೆ ಬರುವದು'; ಆದ್ದರಿಂದ ನಾನು ನಿಮಗೆ ಏನೆಂದು ವಿಧಿಸುವದಿಲ್ಲ. ನಾನು ನಿಮ್ಮವ ನಿರುವೆನೆಂದಿಷ್ಟು ಹೇಳುವೆನು; ನನ್ನ ಆ ಹೇಳಿಕೆಯಂತೆ ನನ್ನನ್ನು ನಡಿಸಿಕೊಳ್ಳುವ ಭಾರವು ನಿಮ್ಮನ್ನು ಕೂಡಿರುವದು ಈಗ ನಮ್ಮ ಈ ವಿರೂಪಾಕ್ಷಾರ್ಯರ ಲಿಂಗಪೂಜೆಯ ಹೊತ್ತಾಯಿತು. ಸದಾ ಲಿಂಗಾರಾಧನತತ್ಪರರಾದ ಆ ಮಹಾತ್ಮರಿಗೂ ನಮ್ಮ ಈ ರಾಜಕೀಯ ರಾಜಸ– ತಾಮಸ ವ್ಯವಹಾರಗಳ ಮೂಲಕ ನಿನ್ನೆನಿಂದ ಲಿಂಗಪೂಜೆಯಿಲ್ಲ! ಆದ್ದರಿಂದ ನಮಗೆ ಹೋಗಲು ಅಪ್ಪಣೆಕೊಡಿರಿ. ನಿಮ್ಮ ಸೈನ್ಯವು ಬೇಕಾದಾಗ ಬಾದಶಹರ ಬಳಿಗೆ ಹೋಗಬಹುದು. ಅವರಿಗೆ ಬೇಕಾದ ಅನುಕೂಲತೆ ಮಾಡಿಕೊಡಲು ಬಾಧೆಯಿಲ್ಲೆಂದು ಹೇಳಲಿಕ್ಕೆ ನೀವು ನಮಗೆ ಪರಕೀಯರಾಗಿರುವದಿಲ್ಲ. ನಾಯಬಸಾಹೇಬ, ನಾವು ಯುದ್ಧಾದಿ ಕ್ರೂರ ವ್ಯವಹಾರಗಳನ್ನೇ ಮಾಡಲಿ, ಅವುಪಾಸನೆ ಮೊದಲಾದ ಸೌಮ್ಯ ವ್ಯವಹಾರಗಳನ್ನೇ ಮಾಡಲಿ, ಅವು ಧರ್ಮಕ್ಕೋಸ್ಕರವಿದ್ದು ಧರ್ಮದ ತಳಹದಿಯಿಂದಲೇ ನಡೆದದ್ದವಾದರೆ ಮಾತ್ರ ತಾರಕವಾಗುವವು; ಆದ್ದರಿಂದ ನಾವೂ ನೀವೂ ಪ್ರತಿಯೊಂದು ವ್ಯವಹಾರದಲ್ಲಿ ಧರ್ಮಕ್ಕೆ ಶರಣುಹೋಗಿ ನಡೆದುಕೊಳ್ಳೋಣ! ಎಂದು ನುಡಿದು ಯವನ ದಂಡಾಳುಗಳ ಯೋಗ ಕ್ಷೇಮದ ಸಲುವಾಗಿ ಬುಕ್ಕದೊರೆಗೆ ಸೂಚಿಸಿದರು. ಯುದ್ಧದಲ್ಲಿ ಮರಣಹೊಂದಿದ ವೀರರ ಅಂತ್ಯವಿಧಿಗಳು ಆಯಾ ಧರ್ಮದ ಪದ್ಧತಿಯಂತೆ ಪ್ರಸಂಗಕ್ಕನುಸರಿಸಿ ಆದವು. ಬಳಿಕ ಆಯಾ ಧರ್ಮದವರು ಯುದ್ಧವ್ಯವಹಾರದಲ್ಲಿ ತೊಡಗಿದ್ದರಿಂದ ಆದ ಸ್ಪೃಶ್ಯಾ–ಸ್ಪೃಶ್ಯ ದೋಷ ನಿವಾರಣವನ್ನು ತಮ್ಮ ತಮ್ಮ ಧರ್ಮೋಕ್ತ ವಿಧಿಯಂತೆ ಮಾಡಿಕೊಂಡು, ತಮ್ಮ ತಮ್ಮ ನಿತ್ಯ ನೈಮಿತ್ತಿಕ ಧರ್ಮಕಾರ್ಯಗಳನ್ನು ನೆರವೇರಿಸಿ ಊಟಮಾಡಿ ವಿಶ್ರಾಂತಿಹೊಂದಿದರು. ಮಲಿಕನಾಯಬನ ವ್ಯವಸ್ಥೆಯನ್ನು ಆಚಾರ್ಯರು ಅತ್ಯುತ್ತಮ ರೀತಿಯಿಂದ ಇಡಿಸಿದರೆಂದು ಬೇರೆ ಹೇಳುವ ಕಾರಣವಿಲ್ಲ. ಆಚಾರ್ಯರ ಭೋಜನವಾದ ನಂತರ ಅವರ ಶಿಷ್ಯಪರಿವಾರವು ಗುರುಪ್ರಸಾದ ಗ್ರಹಣಮಾಡಿ ಕೃತಕೃತ್ಯವಾಯಿತು! ತಮ್ಮ ಗುರುವರನನ್ನು ಮಲಿಕನಾಯಬನು

ಸೆರೆಹಿಡಿದು ಕೊಂಡು ಹೋದ ಮುಯ್ಯಕ್ಕೆ, ಆ ನಾಯಬನೇ ಈಗ ಸೆರೆಯಾಳಾದದ್ದರಿಂದ ಈಗ ಮುಯ್ಯವಾಯಿತೆಂದು ಎಲ್ಲರಿಗೂ ಸಂತೋಷವಾದದ್ದು ಮನುಷ್ಯಸ್ವಭಾವವೇ ಸರಿ!

## ತಪಃಪ್ರಭಾವವೋ ವರಪ್ರಭಾವವೋ?

ಸುವರ್ಣಾಂಗೀಂ ಸಮಾರಾಧ್ಯ ಸುವರ್ಣಗಣಭೂಷಿತಃ ।
ಸುವರ್ಣವೃಷ್ಟಿಂ ವಿದಧೆ ಸುವರ್ಣಾನಂದದೋಮುನಿಃ ॥

ಮಾಧವಾಚಾರ್ಯರ ಕಾಲವು ಕನ್ನಡಿಗರ ವಿಲಕ್ಷಣ ಜಾಗ್ರತಿಯ ಕಾಲವಾಗಿತ್ತು. ಮುಸಲ್ಮಾನರ ಅಬ್ಬರದ ಆಘಾತದಿಂದ ಕಂಗೆಟ್ಟಿದ್ದ ಕನ್ನಡಿಗರಿಗೆ ಮಹಾತ್ಮರಾದ ಮಾಧವಾಚಾರ್ಯರ ಮಹಾಮಹಿಮೆಯ ಮಾರ್ಗದರ್ಶನವು, ಮುಣುಗುವವರಿಗೆ ಕೈಕೊಟ್ಟು ಎಳೆದುಕೊಂಡು ಬದುಕಿಸಿದಂತಾಯಿತು. ರಾಜ್ಯ ಸಂಪಾದನದ ಸವಿ ಹತ್ತಿ ತಮ್ಮ ಪವಿತ್ರ ಕುರಾಣ ಧರ್ಮಪ್ರಸಾರ ಮಾಡುವ ನೆವದಿಂದ ಆ ಮುಸಲ್ಮಾನ ವೀರರು ಕರ್ನಾಟಕದಲ್ಲಿ ನಡೆಸಿದ ಕೊಲೆ–ಸುಲಿಗೆಗಳೂ, ಮಾನಖಂಡನವೂ ಕನ್ನಡಿಗರ ಅಲಸ್ಯ ದುರಾಚಾರಗಳನ್ನು ಹೊಡೆದೋಡಿಸಿಬಿಟ್ಟವು. ಒಂದರ ಹಿಂದೊಂದರಂತೆ ತೆರಪಿಲ್ಲದೆ ಆಗತೊಡಗಿದ ಅವರ ದಾಳಿಗಳ ಕಸುವಿನ ಮಹಾ ಪ್ರವಾಹಕ್ಕೆ ಮಾಧವಾಚಾರ್ಯರು ತಮ್ಮ ಸತ್ವಬಲದಿಂದ ಒಡ್ಡುಹಾಕಿ, ಸ್ವದೇಶಬಾಂಧವರ ನಂದಿ ಹೋಗುತ್ತಿರುವ ಜ್ಯೋತಿಯನ್ನು ಸತೇಜಗೊಳಿಸ ತೊಡಗಿದ್ದರಿಂದ ಆಚಾರ್ಯವರ್ಯರು ಕನ್ನಡಿಗರಿಗೆ ಪರಮಾಪ್ತರಾಗಿಯಷ್ಟೇ ಅಲ್ಲ, ದೇವತಾಸ್ವರೂಪರಾಗಿ ತೋರಹತ್ತಿದರು. ಅವರ ಕೃಪೆಯಿಂದ ಕನ್ನಡಿಗರ ಕಿವಿಗಳು ವಿಜಯದ ಸುದ್ದಿಗಳಿಂದ ಗಡಚಿಕ್ಕಿಹೋಗಿದ್ದವು. ಇಂದು ಆಚಾರ್ಯರ ಯೋಗದಿಂದ ಅಲ್ಲಿಯವರ ವಿಪನ್ನಿವಾರಣವಾಯಿತು. ಇಂದು ಇಲ್ಲಿಯವರ ವಿಪನ್ನಿವಾರಣವಾಯಿತು; ಇಂದು ಆ ಮಹಾತ್ಮರ ಬೆಂಬಲದಿಂದ ಕನ್ನಡಿಗರು ಅಲ್ಲಿಯ ಯವನರ ಮಗ್ಗಲು ಮುರಿದರು, ಇಂದು ಇಲ್ಲಿಯ ಯವನರ ಮಗ್ಗಲು ಮುರಿದರು; ಆ ಬ್ರಾಹ್ಮಣೋತ್ತಮರ ಅಗಾಧ ರಾಜತಂತ್ರದಿಂದ ಇಂದು ಕನ್ನಡಿಗರು ಅಲ್ಲಿ ಜಯಶಾಲಿಗಾಳಾದರು, ಇಂದು ಇಲ್ಲಿ ಜಯಶಾಲಿಗಳಾದರೂ; ಎಂಬ ಸುದ್ದಿಗಳು ಕನ್ನಡಿಗರ ಉತ್ಸಾಹವನ್ನು ಹೆಚ್ಚಿಸುತ್ತಿರಲು. ಮಾಧವಾಚಾರ್ಯರ ವಿಷಯದ ಅವರ ಭಕ್ತಿ–ವಿಶ್ವಾಸಗಳು ದಿನದಿನಕ್ಕೆ ಹೆಚ್ಚತೊಡಗಿದವು. ಆ ಮಹಾತ್ಮರು ಕಂಪಲಿಯ ಕೋಟೆಯನ್ನು ವಶಮಾಡಿ ಕೊಂಡದ್ದರಿಂದಂತು ಕನ್ನಡಿಗರು ಅವರ ಅಗಾಧ ಸಾಮರ್ಥ್ಯಕ್ಕಾಗಿ ತಲೆದೂಗಿ ಅವರ ಅನುಯಾಯಿಗಳಾದರು! ಹೀಗೆ ಕನ್ನಡಿಗರು ಮಾಧವಾಚಾರ್ಯರ ಸೂತ್ರಚಾಲನದಂತೆ ಅಲ್ಲಾಡಲಿಕ್ಕೆ ಸಿದ್ಧರಾಗುತ್ತಿರಲು, ಅಬದುಲರಹಿಮಾನನ ಕಂಪಲಿ ಕೋಟೆಯ ಮುತ್ತಿಗೆಯಲ್ಲಿ ಕನ್ನಡಿಗರು ಜಯಕ್ಕಾಗಿ ಅಪಜಯಪಟ್ಟಿದ್ದನ್ನೂ, ಆ ಅಪಜಯವೇ ಕಾಂಚನಗಡದಲ್ಲಿ ವಿಜಯದ ಸ್ವರೂಪವನ್ನು ಹೊಂದಿ ಮಲಿಕನಾಯಬನಂಥ ವೀರಾಗ್ರಣಿ

ಯಾದ ಶ್ರೇಷ್ಠ ಮುತ್ಸದ್ದಿಯನ್ನು ಮೂಲೆಗುಂಪು ಮಾಡಿದ್ದನ್ನೂ ಕೇಳಿದಬಳಿಕಂತು ಕನ್ನಡಿಗರ ಸ್ವಾತಂತ್ರ್ಯ ಸೂರ್ಯನ ಉದಯವಾಗಿ, ಆ ಧನ್ಯರಾದ ಕನ್ನಡಿಗರ ಮನಃಕುಸುಮಗಳು ವಿಕಸಿತವಾಗುವ ಭರದಲ್ಲಿ ಅವರು ತಮ್ಮ ಸರ್ವಸ್ವದೊಡನೆ ತಮ್ಮನ್ನು ಆಚಾರ್ಯರಿಗೆ ಒಪ್ಪಿಸಿಬಿಟ್ಟರು! ತಾವು, ಹಾಗು ತಮ್ಮಲ್ಲಿಯ ಸಿರಿ-ಸಂಪತ್ತು ಆಚಾರ್ಯರದೇ ಆದದ್ದರಿಂದ ಆಚಾರ್ಯರ ಅಪ್ಪಣೆಯಂತೆ ಅವನ್ನು ವಿನಿಯೋಗಿಸುವ ಪ್ರಸಂಗವು ಯಾವಾಗ ಬಂದೀತೆಂದು ಅವರು ಆತುರದಿಂದ ಹಾದಿಯನ್ನು ನೋಡತೊಡಗಿದರು. ಆಚಾರ್ಯರ ಪ್ರೇಮಾದರಗಳಿಗೆ ತಾವು ಪಾತ್ರರಾಗದಿದ್ದರೆ ತಮ್ಮ ಜನ್ಮವು ವ್ಯರ್ಥವೆಂದು ಅವರು ಭಾವಿಸತೊಡಗಿದರು. ಆಚಾರ್ಯರು ತಮ್ಮ ಕಡೆಗೆ ಕೃಪಾಕಟಾಕ್ಷದಿಂದ ಒಮ್ಮೆ ಎಂದು ನೋಡಿಯಾರು? ಹಾಗೆ ಕರುಣಿಸಿ ನೋಡಿ ನಮ್ಮ ವಿಷಯದ ಮಮಕಾರ ವಹಿಸಿ ನಮ್ಮನ್ನು ಅವರು ಏನಾದರೂ ಎಂದು ಕೇಳಿಯಾರು ? ಹಾಗೆ ಆ ಮಹಾತ್ಮರು ನಮ್ಮವರಾಗಿ ನಮ್ಮನ್ನು ಕೇಳಿದಾಗ ನಮ್ಮ ಪ್ರಾಣವನ್ನಾದರೂ ಅವರಿಗೆ ಅರ್ಪಿಸಿ ಅವರನ್ನು ನಾವು ಎಂದು ಸಂತೋಷಪಡಿಸೇವು? ಎಂದು ಕನ್ನಡಿಗರು ಆತುರಪಡುವಾಗ ಅವರ ಸ್ವಾರ್ಥಾಭಿಲಾಷೆಯ ಸದ್ದು ಅಡಗಲು ಪವಿತ್ರಾತ್ಮರಾದ ಆ ಕನ್ನಡಿಗರು ಆಚಾರ್ಯಮಯರಾದರು! ಹೀಗೆ ಕನ್ನಡಿಗರು ಆಚಾರ್ಯರಿಗೆ ಆತ್ಮಾರ್ಪಣ ಮಾಡಿ ಆಚಾರ್ಯರೂಪರೇ ಆಗಿರುವಾಗ ಆನೆಗುಂದಿಯ ರಾಜಸಿಂಹಾಸನದಿಂದ ಶ್ರೀ ಮಾಧವಾಚಾರ್ಯರ ಪವಿತ್ರ ಆಜ್ಞಾಪತ್ರಗಳು ಹೊರಟು ಊರೂರಿಗೆ ಹೋಗಿ ಕನ್ನಡಿಗರ ಸ್ವಾರ್ಥತ್ಯಾಗದ ಪ್ರತ್ಯಕ್ಷ ಕೃತಿಗೆ ಅನುವು ಮಾಡತೊಡಗಿದವು.

## ಆಚಾರ್ಯರ ಪವಿತ್ರ ಸಂದೇಶ!

(೧) ಪ್ರಿಯ ದೇಶಬಾಂಧವರೇ, ಈ ಜಗತ್ತಿನಲ್ಲಿ ಮಹಾಕಾರ್ಯಗಳು ತಪಸ್ಸಿನಿಂದ ಆಗುತ್ತವಲ್ಲದೆ, ದುಡ್ಡಿನಿಂದ ಆಗುವದಿಲ್ಲ. ತಪಸ್ಸೆಂದರೆ ಇಷ್ಟಾರ್ಥ ಪ್ರಾಪ್ತಿಗಾಗಿ ಪಡಬೇಕಾದ ಮನಸ್ತಾಪ- ದೇಹದಂಡನೆಯನ್ನು ಈಶ್ವರನಿಷ್ಠೆಯಿಂದ ಸಹಿಸುವದು! ಇಂಥ ತಪಸ್ವಿಯು ಸಕಾಮನಾಗಿದ್ದರೆ ಆತನು ತನ್ನ ತಪೋಬಲವಿದ್ದಂತೆ ಐಹಿಕ ಶ್ರೇಷ್ಠ ಸುಖಗಳನ್ನು ಪಡೆಯಬಹುದು; ಅಥವಾ ಸ್ವರ್ಗವನ್ನು ಸೂರೆಗೊಳ್ಳಬಹುದು; ಇನ್ನು ನಿಷ್ಕಾಮನಾಗಿದ್ದರೆ ಆತನು ಮೋಕ್ಷವನ್ನು ಸಂಪಾದಿಸಬಹುದು. ಒಟ್ಟಿಗೆ ಐಹಿಕ-ಪಾರತ್ರಿಕ-ಸುಖಗಳೂ, ಮೋಕ್ಷವೆಂಬ ಪರಮಪುರುಷಾರ್ಥವೂ ತಪಸ್ಸಿನ ಫಲಗಳಾಗಿರುವವು; ಆದರೆ ಅಜ್ಞಾನಿಗಳು ಈ ತತ್ವವನ್ನು ಅರಿಯದೆ, ದ್ರವ್ಯವೇ ಸರ್ವಸಾಧನವೆಂಬ ಅಸುರೀ ಭಾವದಿಂದ ಪ್ರೇರಿತರಾಗಿ ದ್ರವ್ಯ ಸಂಪಾದನೆಗೋಸ್ಕರ ಮಾಡಬಾರದ ಅಕೃತ್ಯಗಳನ್ನಾದರೂ ಮಾಡಿ ಘೋರ ನರಕಯಾತನೆಗೆ ಗುರಿಯಾಗುವರು! ಹತ್ತು ಮಂದಿ ಬಡವರನ್ನು ಮುರಿದಿಲ್ಲದೆ ಒಬ್ಬನು

ದೈವವುಳ್ಳವ ನಾಗನೆಂಬಂತೆ, ಒಂದಿಲ್ಲೊಂದು ನೆವದಿಂದ ನ್ಯಾಯದ ಸೋಗು ಹಾಕಿ, ಅಂದರೆ ತಾನು ಮಹಾವಿದ್ವಾಂಸನು, ಅಥವಾ ಮಹಾ ಕಲ್ಪಕನು, ಅಥವಾ ಮಹಾ ಶೋಧಕನು, ಅಥವಾ ಮಹಾ ಬಲಿಷ್ಠನು, ಅಥವಾ ಮಹಾ ದೊಡ್ಡ ಅಧಿಕಾರಿಯು, ಅಥವಾ ಮಹಾ ತಪಸ್ವಿಯು ಇತ್ಯಾದಿ ಕಾರಣಗಳನ್ನು ಮುಂದೆ ಮಾಡಿ ಈ ಕಾರಣಗಳ ಮೂಲಕ ನಾವು ಹೆಚ್ಚು ಗಳಿಸುವದು ಅನ್ಯಾಯವಲ್ಲೆಂದು ಹೇಳಿ ಪರರ ದ್ರವ್ಯ ಶೋಷಣಮಾಡಿ ದೊಡ್ಡವರಾಗುವರು! ಈ ಸ್ವಾರ್ಥಪರರು, ತಮಗೆ ಈಶ್ವರನು ದಯಪಾಲಿಸಿರುವ ಗುಣೋತ್ಕರ್ಷವನ್ನು ಹೀಗೆ ಪರದ್ರವ್ಯಶೋಷಕ ತುಂಬಡಿಯೆಂದು ತಿಳಿದು ಮನುಷ್ಯನ ಬಹಿಃಪ್ರಾಣವೆನಿಸುವ ದ್ರವ್ಯವನ್ನು ಶೋಷಿಸಿ ಪರಹಿಂಸಾದೋಷಕ್ಕೆ ಭಾಗಿಗಳಾಗುವರು! ಪರಮೇಶ್ವರನು ಸ್ವಪರಹಿತಕ್ಕಾಗಿ ಈ ಸೃಷ್ಟಿಯನ್ನು ಮಾಡಿರುವದರಿಂದ ಅಷ್ಟರಮಟ್ಟಿಗಲ್ಲದೆ ಹೆಚ್ಚಿನ ದ್ರವ್ಯವನ್ನು ಗಳಿಸಿಡುವದು ಪರರ ಸೊತ್ತೆನಿಸಿ, ಅದು ಸಂಪಾದಕನನ್ನು ಅತಿ ಸಂಚಯದ ದೋಷಕ್ಕೆ ಗುರಿಮಾಡುವದು!

(೨) ಹೀಗೆ ಸ್ವಾರ್ಥಪರಾಯಣರು ಪರಹಿಂಸೆಯಿಂದ ಸಂಪಾದಿಸಿದ ದ್ರವ್ಯವು ಸಂಪಾದನದ ಮಾನದಿಂದ ಸ್ವ–ಪರಹಿತಕ್ಕಾಗಿ ಬಳಿಕೆಯಾಗದಿದ್ದರೆ, ಅದು ಬಚ್ಚಲದ ಕುಣಿಯೊಳಗಿನ ನೀರಿನಂತೆ ಮಲೆತುನಿಂತು, ಅದರಿಂದ ಸ್ವಾತಂತ್ರ್ಯಾಪಹಾರಕಗಳಾದ ಅಲಸ್ಯ–ದುರ್ವ್ಯಸನ–ಮದಾಂಧತೆ ಎಂಬ ರೋಗರೂಪ ತ್ರಿದೋಷಗಳು ಉತ್ಪನ್ನವಾಗುವವು. ಬಚ್ಚಲದ ಕುಣಿಯೊಳಗಿನ ಕಳಕಿನ ಹುಳಗಳು, ಆ ಕಳಕ ನೀರನ್ನೇ ಪರಮಪುರುಷಾರ್ಥವೆಂದು ತಿಳಿದು, ಆ ಕಳಕನ್ನೇ ತಿಂದು, ಕಳಕಿನಲ್ಲಿಯೇ ಹೊರಳಾಡುತ್ತ ಕಳಕಿನಲ್ಲಿಯೇ ಸತ್ತುಹೋಗಿ ಮತ್ತಿಷ್ಟು ಕಳಕನ್ನೇ ಹೆಚ್ಚಿಸಿ ವಿವಿಧ ರೋಗಬೀಜಗಳನ್ನು ನಾಲ್ಕೂಕಡೆಗೆ ಹಬ್ಬಿಸುವಂತೆ, ಅತಿ ಸಂಚಯಕ್ಕೆ ಮನಸ್ಸು ಮಾಡಿರುವವರು ದುಡ್ಡನ್ನೇ ಪರಮಪುರುಷಾರ್ಥವೆಂದು ತಿಳಿದು, ದುಡ್ಡಿನ ಗಳಿಕೆಗಾಗಿ ತೊಳಲುತ್ತ ಪರರ ರಕ್ತರೂಪವಾಗಿದ್ದ ದುಡ್ಡಿನಿಂದಲೇ ವಿವಿಧ ವಿಲಾಸಗಳನ್ನು ಭೋಗಿಸಿ ಆ ಕೊಳಕ ದುಡ್ಡೇ ತಮಗೆ ತಾರಕವಾದದ್ದೆಂದು ತಿಳಿದು, ಮಕ್ಕಳು ಮರಿಗಾಗಿ ಇನ್ನಷ್ಟು ದುಡ್ಡು ಕೂಡಿಸಿ ಇಡಲಿಲ್ಲವೆಂದು ತಾಪಪಡುತ್ತ ಕಡೆಗೆ ಮರಣಕಾಲವು ಒದಗಿ ತಮ್ಮನ್ನು ಭೂಶಯ್ಯೆಗೆ ಹಾಕಲು, ''ದುಡ್ಡು ದುಡ್ಡು'' ಎಂದು ಕನಕರಿಸುತ್ತ ಪ್ರಾಣಬಿಟ್ಟು, ತಮ್ಮ ಈ ಕೆಟ್ಟ ನಡತೆಯಿಂದ ದುಡ್ಡುಗಳಿಸುವ ಹುಚ್ಚನ್ನು ದೇಶದತುಂಬೆಲ್ಲ ಹಬ್ಬಿಸುವ ನೆವದಿಂದ ಮೇಲೆ ಹೇಳಿದ ಸ್ವಾತಂತ್ರ್ಯಾಪಹಾರಕ ತ್ರಿದೋಷಗಳನ್ನು ಹೆಚ್ಚಿಸಿ ದೇಶವನ್ನು ಪರತಂತ್ರವಾಗಿ ಮಾಡುವರು! ಆದ್ದರಿಂದ ಪ್ರಿಯ ದೇಶಬಾಂಧವರೇ, ಆ ಜಡವಾದ ಪವಿತ್ರ ತಪೋಧನವು ಸ್ವಾತಂತ್ರ್ಯಪ್ರಾಪ್ತಿಯ ಸಾಧನವಾಗಿರುವಂತೆ, ಜಡವಾದ ಅಪವಿತ್ರ ಧನವು ಪಾರತಂತ್ರ್ಯ ಪ್ರಾಪ್ತಿಯ ಸಾಧನವಾಗಿರುತ್ತದೆಂಬದನ್ನು ವಿವೇಕಿಗಳು ಎಂದೂ ಮರೆಯಲಾಗದು!

(೩) ಇನ್ನು ಜಡದ್ರವ್ಯವು ಅತಿಸಂಚಯದ ಧನಿಕರನ್ನು ಯಾವ ಒಳ್ಳೆಯ ಕೆಲಸಕ್ಕೂ ಹರಿಯಗೊಡದೆ ಅವನ ಪಾರತಂತ್ರ್ಯದ ಸಾಧನವೂ, ನರಕಸಾಧನವೂ ಹ್ಯಾಗಾಗುವದೆಂಬದನ್ನು ಹೇಳುವೆನು ಕೇಳಿರಿ. ಸಿರಿವಂತನು ಸಾಂಸರ್ಗಿಕ ರೋಗಾದಿಗಳಿಂದ ಮುಕ್ತನಾಗುವದಕ್ಕಾಗಿ ಮನೆಯನ್ನು ಬಿಟ್ಟು ಜೀವ ಉಳಿಸಿಕೊಳ್ಳಬೇಕೆಂದರೆ, ಸಿರಿಯ ಮೋಹವು ಅವನನ್ನು ಮನೆ

ಬಿಡಗೊಡದೆ ತನ್ನಲ್ಲಿಯೇ ಕೆಡವಿಕೊಳ್ಳುವದು; ಮತ್ತು ಅತಿಸಂಚಯದ ಸಿರಿವಂತನು ತಾನಾಗಲಿ, ತನ್ನ ಸಂತತಿಯಾಗಲಿ ಗುರುಕುಲವಾಸದ ತಪಶ್ಚರ್ಯದಿಂದ ಸದ್ವಿದ್ಯೆಯನ್ನು ಸಂಪಾದಿಸಿ ಧನ್ಯನಾಗಬೇಕೆಂದರೆ, ಸಿರಿಯ ಸೊಬಗು ಅವನ ಮೇಲೆ ಸುಖಲೋಲಪತೆಯ ಬಲೆ ಬೀಸಿ, ಅವನನ್ನು ದುರಭಿಮಾನದ ಹಗ್ಗದಿಂದ ಬಿಗಿದು, ಬಹಳವಾದರೆ ಅವನನ್ನು ಅರ್ಥಕರಿ ವಿದ್ಯೆಯಲ್ಲಿ ತೊಡಗಿಸಿ ಮದಾಂಧನನ್ನಾಗಿ ಮಾಡಿ ಅವನ ಸನ್ಮಾರ್ಗಗಮನವನ್ನು ಸಂಪೂರ್ಣವಾಗಿ ತಡೆದು ಬಿಡುವದು! ಮತ್ತು ಸಿರಿವಂತನು ತನಗೆ ದೇವರು ಕೊಟ್ಟಿರುವ ಜ್ಞಾನೇಂದ್ರಿಯ– ಕರ್ಮೇಂದ್ರಿಯಗಳನ್ನು ದುಡಿಸಿ, ಇಂದ್ರಿಯಪಾಟವದಿಂದ ತನ್ನ ಶರೀರ ಯಾತ್ರೆಯನ್ನು ಸ್ವತಂತ್ರವಾಗಿ ನಡೆಸಬೇಕೆಂದರೆ, ಸಿರಿಯ ಸೊಕ್ಕು ಆ ಸಿರಿವಂತನನ್ನು ''ಕುಳಿತಲ್ಲಿ ಮಣೆ, ನಿಂತಲ್ಲಿ ನೀರು'' ಎಂಬ ಚಂದದಿಂದ ನಡಿಸುತ್ತ ಅವನ ಇಂದ್ರಿಯ ಶಕ್ತಿಗಳನ್ನು ಕುಗ್ಗಿಸಿ, ಅವನನ್ನು ಕಣ್ಣಿದ್ದು ಕುರುಡನನ್ನು, ಕಿವಿಯಿದ್ದು ಕಿವುಡನನ್ನು, ಕಾಲಿದ್ದು ಹೆಳವನನ್ನು, ಕೈಯಿದ್ದು ಚೊಂಚಲನನ್ನು ಮಾಡುವದು! ಇದರಂತೆ ಅತಿಸಂಚಯದ ಸಿರಿವಂತನು ಸಾಧು–ಸಜ್ಜನರ ಸೇವೆಯಿಂದ, ಹಾಗು ಈಶ್ವರೋಪಾಸನೆಯಿಂದ ಸಂಸಾರ ಸಾಗರವನ್ನು ದಾಟಬೇಕೆಂದರೆ, ಸಿರಿಯ ಸಡಗರವು ಅವನನ್ನು ಅತ್ತಿತ್ತ ಸರದಾಡಗೊಡದೆ ''ದುಡ್ಡಿದ್ದವನೇ ದೊಡ್ಡಪ್ಪನು'' ''ಸರ್ವೇಗುಣಾಃ ಕಾಂಚನ ಮಾಶ್ರಯಂತೇ'' ''ಸಿರಿಯಿದ್ದಲ್ಲಿಯೇ ಸರ್ವವೂ'' ಎಂಬ ಭ್ರಾಂತಿಕಾರಕ ಘಾತಕ ಸಿದ್ಧಾಂತಗಳನ್ನು ಉಪದೇಶಿಸುತ್ತ ಸಿರಿಯು ತನ್ನ ಸೇವೆಯಲ್ಲಿಯೇ ಸಿರಿವಂತನನ್ನು ತತ್ಪರವಾಗಿ ಮಾಡಿಕೊಂಡು ಬಿಡುವದು! ಹೀಗೆ ಗಳಿಸಿದ್ದ ಕೊಳಕ ಸಿರಿಯಿಂದ ಸಿರಿವಂತನ ಪುಣ್ಯವು ನಷ್ಟವಾಗಿ ಅವನ ಅಂತಸ್ತೇಜಸ್ಸು ಕಡಿಮೆಯಾಗುವದು. ಅವನ ಸಂತತಿಯ ತೇಜೋಭಂಗವಾಗುವದು! ಅಂದಬಳಿಕ ಪ್ರಿಯಕನ್ನಡಿಗರೇ, ಬಳಿಕೆಯಿಲ್ಲದ ಕೊಳಕು ಸಿರಿಯು ಸಿರಿವಂತನ ಕೈಕಾಲು ಕಟ್ಟಿ ತನ್ನೊಳಗೇ ಕೆಡವಿಕೊಂಡಂತೆ ಮಾಡುವದರಿಂದ 'ಸಿರಿಯೇ ಸೊಬಗಿನ ಸೆರೆಯು'' ಎಂದು ಹೇಳುವದು ಸಿದ್ಧಾಂತದ ಮಾತೆಂದು ತಿಳಿಯಿರಿ. ಜಡವಾದ ಕಲ್ಲುಕಟ್ಟಿಕೊಂಡವನು ಕಲ್ಲಿನೊಡನೆ ತಾನೂ ಕಲ್ಲಾಗಿ ನೀರಲ್ಲಿ ಮುಣುಗಿ ಹೋಗುವಂತೆ, ಜಡದ್ರವ್ಯವನ್ನು ಆಶ್ರಯಿಸಿದವನು ತಾನೂ ಜಡನೇ ಆಗಿ ಹೋಗಿ ಅಧಃಪತನಹೊಂದುವನು. ಯಾಕಂದರೆ ಸತ್ವದಿಂದ ಸಿರಿಯು, ಸಿರಿಯಿಂದ ಸತ್ವಹಾನಿಯು ಎಂಬದು ಸಿದ್ಧಾಂತವಾಗಿರುವದು!

(೪) ಈ ಸಿದ್ಧಾಂತವನ್ನು ಅರಿತ ಜ್ಞಾನಿಗಳು, ಅದರಲ್ಲಿಯೂ ವಿಶೇಷವಾಗಿ ನಮ್ಮ ಮಹಾತ್ಮರಾದ ಪ್ರಾಚೀನ ಆರ್ಯಋಷಿಗಳು ತಮ್ಮ ಅಗಾಧ ಜ್ಞಾನವನ್ನು, ಅಗಾಧ ಶೋಧಗಳನ್ನು, ಅಗಾಧ ಕಲ್ಪಕತೆಯನ್ನು, ಅಗಾಧ ತಪಶ್ಚರ್ಯವನ್ನು ಈಗಿನವರಂತೆ ದುಡ್ಡಿಗೆ ಮಾರಿಕೊಂಡು ಸಿರಿಯೆಂಬ ಸೊಬಗಿನ ಸೆರೆಮನೆಯಲ್ಲಿ ತೊಳಲಾಡದೆ ವೈರಾಗ್ಯಸಂಪನ್ನರಾಗಿ ತಮ್ಮ ಆ ಅಗಾಧ ಜ್ಞಾನ–ಶೋಧ–ಕಲ್ಪಕತೆ–ತಪಶ್ಚರ್ಯ ಮೊದಲಾದವುಗಳ ಫಲಗಳನ್ನೆಲ್ಲ ಜಗತ್ತಿನ ಧಾರ್ಮಿಕ ಭೋಗಕ್ಕಾಗಿ ಕೊಟ್ಟು, ಬಿಟ್ಟು, ತಾವು ಕೇವಲ ತಪೋಧನರಾಗಿ

''ಯಾವದೀಶ್ವರ ತಂತ್ರತ್ವಂ ತಾವದೀಶ್ವರತೋಭಯಂ'' ಎಂಬ ಗಂಭೀರ ಭಾವದಿಂದ ದೇವರೊಡನೆ ವ್ಯವಹರಿಸುತ್ತ ಸರ್ವತಂತ್ರ ಸ್ವತಂತ್ರರಾಗಿದ್ದರು; ಆದರೆ ಒಂದಿಲ್ಲೊಂದು ಬಗೆಯಿಂದ ಅವರ ಸಂಬಂಧಿಕರೆನಿಸಿಕೊಳ್ಳುವ ಈಗಿನ ಕನ್ನಡಿಗರು ನೀವು ಕೊಳಕು ಧನದ ಕಿಲುಬಿನ ವಿಷದಿಂದ ಸ್ವಾತಂತ್ರ್ಯವನ್ನು ನಷ್ಟ ಪಡಿಸಿಕೊಳ್ಳುವದು ಯೋಗ್ಯವೆ? ಕೊಳಕು ಧನದ ಹಂಬಲಕ್ಕೆ ಬಿದ್ದ ನೀವು ಮನುಷ್ಯರಾಗಿಯೂ ಬಚ್ಚಲ ನೀರನ್ನು ಮುತ್ತುವ ನೊರಜುಗಳಂತೆ ಬಾಳಿ ಕ್ಷುದ್ರರಿಗಿಂತಲೂ ಕ್ಷುದ್ರರೆನಿಸಿ ಒಂದು ದಿನ ಬಿದ್ದು ಹೋಗುವದು ಪರಮ ಲಾಂಛನ ವಾಸ್ಪದವಾಗಿರುವದಲ್ಲವೆ?

(೫) ವಿವೇಕಿಗಳಾದ ಕನ್ನಡಿಗರೇ, ಶ್ರೀ ವಿರೂಪಾಕ್ಷನ ಕೃಪೆಯಿಂದಲೂ, ಶ್ರೀ ಭುವನೇಶ್ವರಿಯ ಕರುಣಾಕಟಾಕ್ಷದಿಂದಲೂ ಈಗ ಸ್ವರಾಜ್ಯ ಸ್ಥಾಪನೆಯ ಸುಯೋಗವು ಒದಗಿರುವದು. ಇಂಥ ಅಪೂರ್ವ ಯೋಗದಲ್ಲಿ ನಿಮ್ಮ ನಿಮ್ಮ ಕೊಳಕಧನದ ತ್ಯಾಗವನ್ನು ಸ್ವರಾಜ್ಯದ ಆಸ್ತಿವಾರಕ್ಕಾಗಿ ಮಾಡಿ ಧರ್ಮಮೂಲವಾದ ಅರ್ಥ–ಕಾಮಗಳನ್ನೂ, ತದ್ವಾರಾ ಮೋಕ್ಷವೆಂಬ ಪರಮ ಪುರುಷಾರ್ಥವನ್ನೂ ಸಂಪಾದಿಸಲು ಸಮರ್ಥರಾಗಬೇಕೆಂದು ಈ ಸಂದೇಶವನ್ನು ನಾನು ನಿಮಗೆ ಕಳಿಸಿರುವೆನು. ನಿಜವಾದ ಕಲ್ಯಾಣವನ್ನು ನೀವು ಇಚ್ಛಿಸುತ್ತಿದ್ದರೆ ನಿಮಗೆ ಕಾಲುದೊಡರಾಗುವ ಧನತ್ಯಾಗವನ್ನು, ಮುಂದೆ ಸ್ವರಾಜ್ಯದಲ್ಲಿ ಪವಿತ್ರ ಧನ ಸಂಪಾದನ ಮಾಡುವ ಅಧಿಕಾರ ಪಡೆಯುವದಕ್ಕಾಗಿಯೇ ಮಾಡಿ ನಿರ್ಭಯರಾಗಿರಿ. ಇಲ್ಲದಿದ್ದರೆ ಇನ್ನುಮೇಲೆ ನಿಮ್ಮ ಕರ್ನಾಟಕವು ನಾಯಿಯಂತೆ ಬಾಳಹತ್ತಿ ಆ ಕರ್ನಾಟಕ ದೊಳಗಿನ ನಿಮ್ಮಂಥ ಕೊಳಕ ಸಿರಿವಂತರು ನಿಮ್ಮ ಸ್ವಾತಂತ್ರ್ಯಾಪಹಾರಕ ದುಷ್ಟರಿಂದ ಸಾಕಿದ ಶುನಕಗಳಂತೆ ಪೋಷಿತರಾಗಿ ಆ ದುಷ್ಟರ ಬೆಂಬಲದಿಂದ ನಿಮ್ಮವರ ಮೇಲೆಯೇ ನೀವು ಗುರುಗುಟ್ಟುತ್ತ, ಪ್ರಸಂಗಬಂದರೆ ನಿಮ್ಮವರ ನಾಶಕ್ಕೇ ನೀವು ಪ್ರತ್ಯಕ್ಷವಾಗಿಯಾಗಲಿ, ಅಪ್ರತ್ಯಕ್ಷವಾಗಿಯಾಗಲಿ ಕಾರಣವಾಗುವಾಗ ಅವರೊಡನೆ ನೀವೂ ನಾಶಹೊಂದ ಬೇಕಾಗುವದು; ಆದ್ದರಿಂದ ಈಗಿನ ಪ್ರಸಂಗದಲ್ಲಿ ಸಿರಿವಂತರು ಬಡವರು ಎಂಬ ಭೇದವೆಣಿಸದೆ, ನೀವೆಲ್ಲರೂ ನಿಮ್ಮ ನಿಮ್ಮ ಯೋಗ್ಯತೆಯಂತೆ ಸಂಗ್ರಹಿಸಿದ್ದ ರಾಮಟೆಂಕಿಯ ವರಗಳನ್ನು ಬಂಡಿಯಮೇಲೆ, ಆನೆ– ಒಂಟೆ–ಕತ್ತೆ–ಕುದುರೆ ಎತ್ತುಗಳ ಮೇಲೆ, ಎಷ್ಟು ಇಲ್ಲದಿದ್ದರೆ ತಲೆಯಮೇಲೆ, ಅಷ್ಟೂ ಇಲ್ಲದಿದ್ದರೆ ಕಿಸೆಗಳಲ್ಲಿ, ಅಷ್ಟು ಸಂಚಯವೂ ನಿಮ್ಮಲಿಲ್ಲದಿದ್ದರೆ ಟೊಂಕದಲ್ಲಿ ಹಿಡಿಸಬಹುದಾದಷ್ಟು ಸಂಗ್ರಹಿಸಿಕೊಂಡು ಬರಬೇಕೆಂದು ನಿಮ್ಮ ದೇಶಬಂಧುವಾದ ಮಾಧವನು ಹೇಳುವನು! ನಿಮ್ಮ ಧನಸಮರ್ಪಣ ಕಾಲವು ಇಂದಿನಿಂದ ಒಂದು ತಿಂಗಳಿಗೆ ಚಿತ್ರಾಪೂರ್ಣಿಮೆಗೆ ಆಗುವ ಶ್ರೀ ವಿರೂಪಾಕ್ಷ ರಥೋತ್ಸವದ ದಿವಸವೆಂದು ಗೊತ್ತಾಗುವದು. ಇತಿ ಶಂ!''

ಮಾಧವಾಚಾರ್ಯರ ಈ ಸಂದೇಶವನ್ನು ಹುಕ್ಕದೊರೆಯು ಸೇವಕರ ಮುಖಾಂತರ ಊರೂರಿಗೆ ತಿಳಿಸಿ, ಆಯಾ ಊರ ಅಧಿಕಾರಿಗಳ ದ್ವಾರದಿಂದ ಕರ್ನಾಟಕದಲ್ಲೆಲ್ಲ ಪ್ರಸಿದ್ಧ

ಮಾಡಿದನು. ಮೊದಲೇ ಆಚಾರ್ಯರ ಮಹಾಮಹಿಮೆಯಲ್ಲಿ ಜನರ ನಿಷ್ಠೆಯಿದ್ದದ್ದರಿಂದ ಅವರ ಬೇಡಿಕೆಯನ್ನು ಪೂರಯಿಸಲು ಜನರು ಸಿದ್ಧರಾಗಿದ್ದರು; ಅದರಲ್ಲಿ ಶ್ರೀ ಭುವನೇಶ್ವರಿಯು ತಾನು ಆಚಾರ್ಯರ ತಪಃಪ್ರಭಾವಕ್ಕೆ ಮೆಚ್ಚಿ ವರವಿತ್ತಂತೆ ಕರ್ನಾಟಕದ ಜನರನ್ನು ಅಂತಃಪ್ರೇರಕಳಾಗಿ ಪ್ರೇರಿಸಿದಳು. ಅಂದಬಳಿಕ ಕೇಳುವದೇನು? ಜನರು ತಾವು ಸಂಚಯ ಮಾಡಿಟ್ಟಿದ್ದ ರಾಮಟೆಂಕಿಯ ವರಗಳನ್ನು ಭಕ್ತಿಯ ಪರವಶತೆಯಿಂದ ಹೊರಗೆ ತೆಗೆದು ತಮ್ಮ ತಮ್ಮ ಯೋಗ್ಯತೆಯಂತೆ ಬಂಡಿ, ಆನೆ, ಒಂಟೆ, ಹೇಸರಗತ್ತೆ, ಕುದುರೆ, ಎತ್ತು ತಲೆಹೊರೆ, ಕಿಸೆ, ಟೊಂಕ ಮೊದಲಾದವುಗಳ ಸಹಾಯದಿಂದ ಸಾಗಿಸಿಕೊಂಡು ಬಂದು ಚಿತ್ರಾಪೂರ್ಣಿಮೆಗೆ ಪಂಪಾಕ್ಷೇತ್ರದಲ್ಲಿ ನೆರೆದರು! ಶ್ರೀ ಪಂಪಾಪತಿಯ ರಥೋತ್ಸವ, ಹಾಗು ವಿಜಯಶಾಲಿಗಳಾದ ಮಾಧವಾಚಾರ್ಯರ ಆಜ್ಞಾಪರಿಪಾಲನೋತ್ಸವ ಇವೆರಡುಗಳ ಯೋಗವು ಒಮ್ಮೆಲೆ ಕೂಡಿಬಂದದ್ದರಿಂದ, ಆ ಪಂಪಾಕ್ಷೇತ್ರದಲ್ಲಿ ಎಂಥ ಪ್ರಚಂಡ ಜನಸಮೂಹವು ಕೂಡಿ ತೆಂಬದನ್ನು ಏನು ಹೇಳಬೇಕು? ಹಂಪೆಯ ಆ ಮಹಾಶೈವ ಪವಿತ್ರ ಕ್ಷೇತ್ರದಲ್ಲಿ ಸುವರ್ಣ ವೃಷ್ಟಿಗಾಗಿ ದಟ್ಟವಾಗಿ ಕವಿದ ರಾಮಟೆಂಕಿಯ ವರಗಳ ಚಿತ್ರವಿಚಿತ್ರ ಮೇಘಪಂಕ್ತಿಗಳೋ ಅನ್ನುವಂತೆ, ಧನ ಬಾರದಿಂದ ಬಳುಕುತ್ತಿರುವ ಜನರ ತಂಡಗಳು ಅಲ್ಲಲ್ಲಿ ಶೋಭಿಸ ತೊಡಗಿದವು!

ಪವಿತ್ರವಾದ ಚಿತ್ರಾಪೌರ್ಣಿಮೆಯು ಮಧ್ಯಾಹ್ನದ ಒಂಬತ್ತು ತಾಸಿನ ಸಮಯವಾಗಿದೆ; ಶ್ರೀ ಪಂಪಾವತಿಯ ರಥೋತ್ಸವ ಸಮಾರಂಭವು ಮುಗಿದು ಜನರು ಶ್ರೀ ಪಂಪಾವಪತಿಯ ಪ್ರಸಾದದಿಂದ ತೃಪ್ತರಾಗಿ ಮಾಧವಾಚಾರ್ಯರು ಕುಳಿತಿದ್ದ ಒಂದು ದಿನ್ನೆಯ ಬಳಿಯಲ್ಲಿ ನೆರೆಯಹತ್ತಿದ್ದಾರೆ; ಮುಂಗಾರಿಯ ಮಳೆಯ ಮೋಡಗಳು ಒಟ್ಟುಗೂಡುವಾಗ ಉತ್ಪನ್ನವಾಗುವ ಮಿಂಚಿನಂತೆ ಜನರು ಧರಿಸಿದ್ದ ಅಲಂಕಾರಗಳೂ, ಶಸ್ತ್ರಾಸ್ತ್ರಗಳೂ ಮಿನುಗುತ್ತಲಿವೆ? ಆ ಮಿಂಚಿನ ಹಿಂದೆಯೇ ಉತ್ಪನ್ನವಾಗುವ ಗುಡುಗಿನಂತೆ ಜನರ ಕಲಕಲದ ಗಂಭೀರಧ್ವನಿಯು ಉಂಟಾಗತೊಡಗಿದೆ; ಗಾಳಿಯ ಸುಳಿದಾಟವಿಲ್ಲದ್ದರಿಂದ ಮುಂಗಾರಿಯ ಮಳೆಯ ಗಮ್ಮಿದಿಂದ ಜನರು ಕುದಿಯುವಂತೆ, ಜನಸಮ್ಮರ್ದದ ಗಮ್ಮಿನಿಂದ ಜನರು ಕುದಿಯುತ್ತಲಿದ್ದಾರೆ; ಜನರು ಆಚಾರ್ಯರನ್ನು ಕಾಣುವ ಲವಲವಿಕೆಯಲ್ಲಿ ಭರದಿಂದ ಮುಂದಕ್ಕೆ ಸಾಗಿ ಹೋಗುತ್ತಿರಲು, ಹುಕ್ಕದೊರೆಯು ವ್ಯವಸ್ಥೆಗೊಳಿಸುವುದಕ್ಕಾಗಿ ಅಲ್ಲಲ್ಲಿ ನಿಯಮಿಸಿದ್ದ ಅಧಿಕಾರಿಗಳು ತಮ್ಮ ಕೈಕೆಳಗಿನವರ ಸಹಾಯದಿಂದ ಅವರನ್ನು ಸಂತಯಿಸುತ್ತಲಿದ್ದಾರೆ! ಎಲ್ಲಿ ನೋಡಿದರೂ ರಾಮಟೆಂಕಿವರ ತುಂಬಿದ ಬಂಡಿಗಳು; ಎಲ್ಲಿ ನೋಡಿದರೂ ರಾಮಟೆಂಕಿಯವರ ತುಂಬಿದ ಆನೆ–ಒಂಟೆ–ಹೇಸರಗತ್ತೆ–ಕುದುರೆ–ಎತ್ತುಗಳು, ಎಲ್ಲಿ ನೋಡಿದರೂ ರಾಮಟೆಂಕಿಯ ವರಗಳ ತಲೆಹೊರೆಯ ಜನಸಮೂಹವು; ಎಲ್ಲಿ ನೋಡಿದರೂ ಕಿಸೆ–ಟೊಂಕಗಳಲ್ಲಿಟ್ಟು ಕೊಂಡಿದ್ದ ರಾಮಟೆಂಕಿಯ ವರಗಳ ಮೇಲೆ ಕೈಯಿಟ್ಟು ಸಾಗಿದ್ದ ಜನರು, ಎಲ್ಲಿ ನೋಡಿದರೂ ರಾಮಟೆಂಕೆಯ ವರಗಳ ವಿಚಾರ, ಎಲ್ಲಿ ನೋಡಿದರೂ ರಾಮಟೆಂಕಿಯ ವರಗಳ ಮಾತು

ಹೀಗಾಗಿ ಜನರ ದೇಹಗಳು, ವಾಣಿಗಳು, ಮನಸ್ಸುಗಳು ರಾಮಟೆಂಕಿಯ ವರಗಳೇ ಆಗಿಹೋಗಿದ್ದವು. ಹೀಗೆ ದೃಷ್ಟಿ ಹರಿಯುವವರೆಗೆ ನೋಡಿದರೂ ರಾಮಟೆಂಕಿಯ ವರಗಳ ಜನರೇ ಜನರಾಗಿ ತೋರುತ್ತಿರಲು, ಮಾಧವಾಚಾರ್ಯರು ತಾವು ಕುಳಿತಿದ್ದ ದಿಬ್ಬದ ಮೇಲೆ ಹಾಕಿದ್ದ ಎತ್ತರವಾದ ಪೀಠದ ಮೇಲೆ ನಿಂತುಕೊಂಡು ನಾಲ್ಕೂ ಕಡೆಗೆ ನೋಡಹತ್ತಿದರು! ಆಗ ಅವರ ಹೃದಯವು ಭಕ್ತಿರಸಪೂರ್ಣವಾಗಲು, ಶ್ರೀ ಭುವನೇಶ್ವರಿಯ ಪ್ರಭಾವವನ್ನು ಸ್ಮರಿಸಿ ಜನಸಮೂಹದ ಹೃದಯದ ಆ ಭಗವತಿಯನ್ನು ಭಕ್ತಿಯಿಂದ ಕೈಜೋಡಿಸಿ ನಮಿಸಿದರು! ಆಗ ಅವರ ನೇತ್ರಗಳು ಆನಂದ ಬಾಷ್ಪಪೂರ್ಣವಾದವು. ಕಂಠವು ಸದ್ಗದಿತವಾಯಿತು. ಆಗಿನ ಆಚಾರ್ಯರ ಪುಣ್ಯಕರ ಮೂರ್ತಿಯ ದರ್ಶನದಿಂದ ಆ ಪ್ರಚಂಡ ಜನಸಮೂಹದ ಕೋಲಾಹಲ ಧ್ವನಿಯು ನಿಂತುಹೋಯಿತು! ಆಗ ಯೋಗೀಶ್ವರರಾದ ಮಾಧವಾಚಾರ್ಯರು ಒಬ್ಬ ಪುಣ್ಯಾತ್ಮನ ತಲೆಯಮೇಲಿನ ರಾಮಟೆಂಕಿಯ ವರದ ಚೀಲವನ್ನು ತಕ್ಕೊಂಡು ಗದ್ಗದಕಂಠದಿಂದ ಜನಸಮೂಹವನ್ನು ಕುರಿತು– ಪ್ರಿಯ ದೇಶಬಾಂಧವರೇ, ಕಮಲಾವರನ ಸ್ವರೂಪಿಗಳಾದ ನೀವು ಸ್ವರಾಜ್ಯ ಸ್ಥಾಪನೆಗಾಗಿ ಅನಂತಹಸ್ತಗಳಿಂದ ಧನರಾಶಿಗಳನ್ನು ಅರ್ಪಿಸುತ್ತಿರಲು, ನಾನು ನನ್ನ ಎರಡು ಕೈಗಳಿಂದ ಅದನ್ನು ಎಷ್ಟೆಂತ ತೆಗೆದುಕೊಳ್ಳಲಿ? ಆದ್ದರಿಂದ ನೀವು ಇದ್ದ ಸ್ಥಳದಲ್ಲಿಯೇ ಕೃಷ್ಣಾರ್ಪಣಬುದ್ಧಿಯಿಂದ ಸ್ವರಾಜ್ಯಕ್ಕಾಗಿ ತಂದ ಧನವನ್ನು ನೀವು ನೆಲಕ್ಕೆ ಸುರುವಿಬಿಡಿರಿ; ಅಂದರೆ ಶ್ರೀ ಭುವನೇಶ್ವರೀ ಮಾತೆಯ ಆ ಅಕ್ಷಯ ಪ್ರಸಾದವನ್ನು ಶಕ್ಯವಾದಮಟ್ಟಿಗೆ ರಾಜ್ಯಾಧಿಕಾರಿಗಳು ಸಂಗ್ರಹಿಸಿಕೊಳ್ಳುವರು; ಉಳಿದ ಧನವು ಭೂಗತವಾಗಿ ಮುಂದೆ ಚಿರಕಾಲ ಈ ಸುವರ್ಣ ವೃಷ್ಟಿಯ ಕುರುಹಾಗಿ ಉಳಿದುಕೊಳ್ಳಲಿ! ಎಂದು ನುಡಿದು ತಮ್ಮ ಕೈಯೊಳಗಿನ ವರಹದ ಚೀಲವನ್ನು ನೆಲಕ್ಕೆ ಸುರುವಿ, ಮತ್ತೆ ಜನರು ಕೊಟ್ಟ ಚೀಲಗಳನ್ನು ಹಾಗೆಯೇ ಸುರುವುತ್ತ ನಿಂತುಕೊಂಡರು. ಅದನ್ನು ನೋಡಿ ಅಸಂಖ್ಯಾತ ಜನಸಮೂಹರೂಪ ಮೇಘವು ಅಲ್ಲಲ್ಲಿ ಸುವರ್ಣವೃಷ್ಟಿ ಗರೆಯಹತ್ತಿತು! ಅಹಹ! ಯಾರು ಬಂಡೆಗಳ ಮೇಲಿಂದ, ಯಾರು ಆನೆಗಳ ಮೇಲಿಂದ, ಯಾರು ಒಂಟೆಗಳ ಮೇಲಿಂದ. ಯಾರು ಉಪ್ಪರಿಗೆಗಳ ಮೇಲಿಂದ ಹೀಗೆ ಅವರವರು ನಿಂತುಕೊಂಡಲ್ಲಿಯೇ, ಮೂರು ಮುಕ್ಕಾಲು ಘಳಿಗೆ ಅಖಂಡ ಸುವರ್ಣವೃಷ್ಟಿಗರೆಯುವ ಅಪೂರ್ವ ವೈಭವವನ್ನು ನೋಡುವವರ ಮುಖದಿಂದ ''ಇದೇನು ಆಚಾರ್ಯರ ತಪಃಪ್ರಭಾವವೋ, ಭಗವತೀ ಭುವನೇಶ್ವರಿಯ ವರಪ್ರಭಾವವೋ'' ಎಂಬ ಉದ್ಗಾರಗಳು ಹೊರಡಹತ್ತಿದವು; ಆದರೆ ಪ್ರಿಯವಾಚಕರೇ, ಶ್ರೀ ಭುವನೇಶ್ವರಿಯು ಮಹಾತ್ಮರಾದ ಆಚಾರ್ಯರ ತಪಃಪ್ರಭಾವಕ್ಕೆ ಮೆಚ್ಚಿಯೇ ವರಪ್ರದಾನ ಮಾಡಿರುವದರಿಂದ, ಈಗಾದ ಸುವರ್ಣವೃಷ್ಟಿಯನ್ನು ಆಚಾರ್ಯರ ತಪಃಪ್ರಭಾವವೆಂತಲೇ ಕರೆಯತಕ್ಕದ್ದು; ಆದ್ದರಿಂದ ಮಹಾತ್ಮರ ಅಂಥ ಅಗಾಧ ತಪಶ್ಚರ್ಯಕ್ಕೆ ನಮ್ಮ ನಿಮ್ಮ ಅನಂತ ಪ್ರಣಾಮಗಳನ್ನು ಅರ್ಪಿಸೋಣ!

## ಸಡಗರದ ಸಮಾರಂಭಗಳು!

ಈ ಮೇರೆಗೆ ಶ್ರೀ ಭುವನೇಶ್ವರಿಯ ಪ್ರಭಾವದಿಂದ ಪಂಪಾಕ್ಷೇತ್ರದಲ್ಲಿ ಸುವರ್ಣವೃಷ್ಟಿಯಾಗಲು, ಸ್ವರಾಜ್ಯ ಸ್ಥಾಪನೆಯ ಕಾರ್ಯಕ್ಕೆ ಹೊಸ ಕಸುವು ಉಂಟಾಯಿತು. ಸ್ವಪರಹಿತಕ್ಕಾಗಿ ಬಳಕೆಯಿಲ್ಲದೆ ಆಸೆಬುರುಕ ಕನ್ನಡಿಗರಲ್ಲಿ ಕೂಡಿಬಿದ್ದಿದ್ದ ಕೊಳಕ ಧನದಿಂದ ಕನ್ನಡಿಗರ ಸ್ವಾತಂತ್ರ್ಯದ ಹಾನಿಯಾಗ ತೊಡಗಿತ್ತು; ಆದರೆ ಮಾಧವಾಚಾರ್ಯರಂಥ ಮಹಾತ್ಮರು ತಮ್ಮ ತಪಃಪ್ರಭಾವದಿಂದ ಆ ಕೊಳಕ ಧನವನ್ನೇ ಹಂಪೆಯ ಪುಣ್ಯಕ್ಷೇತ್ರದಲ್ಲಿ ಕರುಣಿಸಿ ಪವಿತ್ರವಾಗಿ ಮಾಡಲು, ಸ್ವರಾಜ್ಯಪ್ರತಿಷ್ಠಾರೂಪ ಸ್ವ–ಪರಹಿತ–ಧನವಾಗಿ ಅದರಿಂದ ಕನ್ನಡಿಗರ ಸ್ವಾತಂತ್ರ್ಯದ ಸಂಪಾದನವಾಯಿತು! ಕೂಡಿಬಿದ್ದ ಆ ವಿಪುಲ ಧನದಿಂದ ಮಾಧವಾಚಾರ್ಯರು ಪ್ರಚಂಡ ಸೈನ್ಯವನ್ನೂ, ಅಮೋಘವಾದ ಯುದ್ಧೋಪಕರಣಗಳನ್ನೂ ಸಿದ್ಧಪಡಿಸಿಕೊಂಡು, ಯವನರ ಸಣ್ಣದೊಡ್ಡ ದಾಳಿಗಳನ್ನು ಮುರಿಬಡಿದು, ಕರ್ನಾಟಕವನ್ನು ನಿಷ್ಕಂಟಕವಾಗಿ ಮಾಡಿದರು! ಈ ಮಹಾತ್ಮರು ಗೋಮಾಂತಕ ಸೀಮೆಗೆ ಸ್ವತಃ ದಂಡೆತ್ತಿ ಹೋಗಿದ್ದರಂತೆ! ಅವರ ಈ ಅದ್ಭುತ ಕಾರ್ಯವನ್ನು ನೋಡಿ ಕರ್ನಾಟಕನೊಳಗಿನ ಸಣ್ಣ–ದೊಡ್ಡ ಹಿಂದೂರಾಜರು ಮುಸಲ್ಮಾನರ ಅಧಿಕಾರದ ಭಾರವನ್ನು ಚೆಲ್ಲಿಕೊಟ್ಟು, ಮಾಧವಾಚಾರ್ಯರ ನೂತನ ಸಾಮ್ರಾಜ್ಯಕ್ಕೆ ಅಧೀನರಾಗತೊಡಗಲು, ಆ ನೂತನ ಹಿಂದೂ ಸಾಮ್ರಾಜ್ಯದ ಕಸುವು ಹೆಚ್ಚತೊಡಗಿತು. ಈ ನೂತನ ಸಾಮ್ರಾಜ್ಯಕ್ಕೆ ಪ್ರಥಮ ರಾಜರಾಗಲು ದೇವರಾಜನು ಒಪ್ಪಲಿಲ್ಲ, ಆ ಪದವಿಗೆ ಹುಕ್ಕನೇ ಯೋಗ್ಯನೆಂದು ಆತನು ಹೇಳಿದನು. ಆದರೆ ಕುರುಬನಾದ ಹುಕ್ಕನು ರಾಜ್ಯಾಧಿಕಾರಿಯಾಗುವ ಬಗೆ ಹೇಗೆ? ಆದರೆ ಮಹಾತ್ಮರಾದ ಮಾಧವಾಚಾರ್ಯರು, ವಿರೂಪಾಕ್ಷಾರ್ಯರೂ ಹುಕ್ಕನ ತಂದೆಯಾದ ಸಂಗಮರಾಜನನ್ನು ಪಟ್ಟಕ್ಕೆ ಕುಳ್ಳಿರಿಸಬೇಕೆಂದು ಹೇಳಲು, ಶ್ರದ್ಧೆಯಿಂದ ಜನರು ಒಪ್ಪಿಕೊಂಡರು! ಬಳಿಕ ಮಹಾತ್ಮರಾದ ಮಾಧವಾಚಾರ್ಯರು ಹೇಳಿದ ಯಾವತ್ತೂ ಸಾಹಿತ್ಯಗಳನ್ನು ಹುಕ್ಕ ದೊರೆಯು ವಿಲಂಬವಾಗದಂತೆ ಸಿದ್ಧಮಾಡಿಸಿದನು. ಪಂಪಾಕ್ಷೇತ್ರದಲ್ಲಾದ ಸುವರ್ಣವೃಷ್ಟಿಯಿಂದ ಧನಸಂಗ್ರಹಕ್ಕೆ ಕೊರತೆಯಿದ್ದಿಲ್ಲ. ಶ್ರೀ ಭಗವತೀ ಭುವನೇಶ್ವರಿಯ ವರಪ್ರಧಾನದಿಂದ ಆಚಾರ್ಯರಿಗೆ ಗುಪ್ತನಿಧಿಯ ಹಾಗು ಸುವರ್ಣ ವೃಷ್ಟಿಯ ಯೋಗದಿಂದ ವಿಪುಲ ಧನಸಹಾಯವು ದೊರೆತದ್ದರಿಂದ, ಅವರ ಸಾಮ್ರಾಜ್ಯ ಸ್ಥಾಪನೆಯ ಕಾರ್ಯವು ಸುಲಭವಾಗಿ ಸಾಧಿಸಿತು. ಆಚಾರ್ಯರು ಶಾಸ್ತ್ರೋಕ್ತವಾದ ಸಿಂಹಾಸನಾರೋಹಣ ಸರ್ವಸಂಭಾರಗಳ ಪಟ್ಟಿಯನ್ನು ಮಾಡಿಕೊಟ್ಟಂತೆ ಕಾರ್ಯದಕ್ಷನಾದ ಹುಕ್ಕ ದೊರೆಯು ವಿಪುಲ ವಸ್ತುಸಂಗ್ರಹವನ್ನು ಮಾಡಿಸಿದನು.

ಈ ಮೇರೆಗೆ ಎಲ್ಲ ವ್ಯವಸ್ಥೆಯಾಗುತ್ತಿರಲು, ಪಟ್ಟಾಭಿಷೇಕದ ಸುಮುಹೂರ್ತವು ಪ್ರಾಪ್ತವಾಯಿತು. ಪ್ರಥಮ ಪಟ್ಟಬಂಧನ ವಿಧಿಯಾದ ಮೇಲೆ ಪುಣ್ಯಾಹವಾಚನ ಪೂರ್ವಕವಾಗಿ ಹೋಮಹವನಕ್ಕೆ ಆರಂಭವಾಯಿತು. ವಿನಾಯಕಶಾಂತಿ, ನಕ್ಷತ್ರಶಾಂತಿ, ಗ್ರಹ ಶಾಂತಿ ಇವೇ ಮೊದಲಾದ ರಾಜ್ಯಾಭಿಷೇಕಾಂಗಭೂತವಾದ ಸರ್ವಶಾಸ್ತ್ರ ವಿಧಿಗಳು

ಯಥಾಸಾಂಗವಾಗಿ ಜರುಗಿದವು. ಋತ್ವಿಜರೂ, ಯಜಮಾನನಾದ ಸಂಗಮರಾಜರೂ ಹಾಲು–ಹಣ್ಣಿನ ಮೇಲೆ ವ್ರತಸ್ಥರಾಗಿ ಇದ್ದರು. ಕಡೆಗೆ ಪಟ್ಟಾಭಿಷೇಕದ ಮಂಗಲದಿನವು ಪ್ರಾಪ್ತವಾಗಲು. ಇಷ್ಟಮಿತ್ರರ ಹಾಗು ಸ್ವಾಮಿನಿಷ್ಠ ಸೇವಕರ ಹೃದಯಗಳು ಆನಂದದಿಂದ ಉಕ್ಕೇರಿದವು. ಅಭಿಷೇಕ ಸಮಾರಂಭವನ್ನು ನೋಡುವ ಲವಲವಿಕೆಯು ಎಲ್ಲರಲ್ಲಿಯೂ ಉತ್ಪನ್ನವಾಯಿತು. ಈ ಪಟ್ಟಾಭಿಷೇಕ ಮಹೋತ್ಸವವು ಆನೆಗುಂದಿಯ ರಾಜ್ಯದ ಪ್ರಜೆಗಳಿಗೆ ಹೊಸದಲ್ಲದಿದ್ದರೂ, ಯವನಬಾಧೆಯಿಂದ ಲುಪ್ತವಾಗತೊಡಗಿದ್ದ ಸ್ವಾತಂತ್ರ್ಯವನ್ನು ಆಚಾರ್ಯರ ಕೃಪೆಯಿಂದ ಎಲ್ಲ ಕನ್ನಡಿಗರೂ, ಆಂಧ್ರರೂ ಬಹು ಶ್ರಮಪಟ್ಟು ಸಂಪಾದಿಸಿ, ನಿಜವಾದ ಸ್ವರಾಜ್ಯದ ಸಿಂಹಾಸನಾರೋಹಣ ಸಮಾರಂಭದ ಯೋಗವನ್ನು ತಂದದ್ದು ಕೇವಲ ಅಪರೂಪವೇ ಆಗಿತ್ತು! ಸಂಗಮರಾಜನೇ ಮೊದಲಾದ ಎಲ್ಲ ಅಧಿಕಾರಿಗಳು ಮಂಗಲಸ್ನಾನ ಮಾಡಿದರು. ಮೃತ್ತಿಕಾಸ್ನಾನ, ಪಂಚಗವ್ಯ ಸ್ನಾನ, ಗಂಗಾದಿ ಪುಣ್ಯತೀರ್ಥೋದಕ ಸ್ನಾನ, ಪಂಚಾಮೃತ ಸ್ನಾನಗಳನ್ನು ಅವರು ವಿಧ್ಯುಕ್ತವಾಗಿ ಮಾಡಿದರು. ಎಲ್ಲರೂ ಶುಭ್ರವಸ್ತ್ರ ಗಳನ್ನುಟ್ಟುಕೊಂಡು ಗಂಧ–ಪುಷ್ಪಗಳನ್ನೂ, ಅಲಂಕಾರಗಳನ್ನೂ ಧರಿಸಿದರು. ವೃದ್ಧ ಸಂಗಮರಾಜನು ಪತ್ನಿಯೊಡನೆ ಕ್ಷೀರವೃಕ್ಷದ ಸುವರ್ಣ ಖಚಿತವಾದ ಹಸೆಮಣೆಯ ಮೇಲೆ ಕುಳಿತುಕೊಂಡನು. ಯುವರಾಜನಾದ ಹುಕ್ಕ ದೊರೆಯು ಅವನ ಬಳಿಯಲ್ಲಿ ಕುಳಿತು ಕೊಂಡನು. ಸುಹೃಜ್ಜನರೂ, ಮಾಂಡಲಿಕರೂ ಸುತ್ತುಮುತ್ತು ನಿಂತುಕೊಂಡರು. ಹೀಗೆ ಎಲ್ಲರೂ ನಿಂತುಕೊಂಡಬಳಿಕ ಸಂಗಮರಾಜನಿಗೆ ಯಥಾಶಾಸ್ತ್ರ ಮಂತ್ರೋಚ್ಚಾರಪೂರ್ವಕವಾಗಿ ಅಭಿಷೇಕ ಮಾಡಿದರು. ಆ ಕಾಲದಲ್ಲಿ ಎಲ್ಲ ಮಂಗಲವಾದ್ಯಗಳು ಭೋರ್ಗರೆಯುತ್ತಿದ್ದವು; ವಾರಾಂಗನೆಯರು ನರ್ತನ ಮಾಡುತ್ತಲಿದ್ದರು; ಗಾಯಕರು ಗಾಯನ ಮಾಡುತ್ತಿದ್ದರು. ಇವೆಲ್ಲವುಗಳ ಮಿಶ್ರ ಧ್ವನಿಯು ದಿಗಂತವನ್ನು ವ್ಯಾಪಿಸಿ ಸಹೃದಯರ ಸಹೃದಯತ್ವವನ್ನು ವ್ಯಕ್ತಗೊಳಿಸುತ್ತಲಿತ್ತು. ಆ ಸಮಾರಂಭವನ್ನು ನೋಡುವ ದೇಶಾಭಿಮಾನಿಗಳ ನೇತ್ರಗಳು ಆನಂದ ಬಾಷ್ಪಪೂರ್ಣವಾದವು; ಕಂಠಗಳು ಸಂದಟಿತವಾದವು; ಮೈಯಲ್ಲಿ ರೋಮಾಂಚಗಳು ಉತ್ಪನ್ನವಾದವು. ತಮ್ಮ ತಮ್ಮ ಜಾತಿಯ ನಿರ್ಬಂಧಕ್ಕನುಸರಿಸಿ ಸಮಾರಂಭವನ್ನು ಆಯಾ ಸ್ಥಳದಲ್ಲಿ ನೋಡುತ್ತನಿಂತಿದ್ದ ಮಾದಿಗರ ದುರಗಪ್ಪನಂಥ ಅಕೃತ್ರಿಮ ಸ್ವಾಮಿನಿಷ್ಠರು ಆನಂದಪರವಶರಾಗಿ–''ಇದೆಲ್ಲ ನಮ್ಮಪ್ಪ ಮಾದಪ್ಪನ ಆಟವು'' ಎಂದು ಕಂಠವು ಹಿಡಿಸದೆ ನುಡಿಯುತ್ತಲಿದ್ದರು; ಮಲಿಕ ನಾಯಬ–ಕಾಸಿಮಖಾನ ಮೊದಲಾದ ಯವನ ಸದ್ಗೃಹಸ್ಥರು ಆಚಾರ್ಯರ ಈ ಪಟ್ಟಾಭಿಷೇಕ ಮಹೋತ್ಸವವನ್ನು ಕೌತುಕದಿಂದ ನೋಡುತ್ತಲಿದ್ದರು. ವೀರರ ಬಾಹುಗಳೂ, ಸ್ವಾಮಿನಿಷ್ಠರ ಸ್ವಾಮಿಭಕ್ತಿಯೂ, ಪ್ರಜೆಗಳ ರಾಜನಿಷ್ಠೆಯೂ ಧನ್ಯತೆಯನ್ನು ಪಡೆದವು. ಅತ್ತ ಮಹಾತ್ಮರಾದ ಮಾಧವಾಚಾರ್ಯರ, ಹಾಗು ಮಹಾತ್ಮರಾದ ವಿರೂಪಾಕ್ಷಾರ್ಯರ ನೇತ್ರಗಳಿಂದ ಆನಂದ ಬಾಷ್ಪಗಳುದುರುತ್ತಲಿದ್ದವು. ತಾವು ಹಚ್ಚಲು ಯತ್ನಿಸಿದ ಸ್ವರಾಜ್ಯದ ಸಸಿಯು ಫಲಪ್ರದವಾದದ್ದನ್ನು ನೋಡಿ ಅವರು ಮನಸಾ ಶ್ರೀ ಪಂಪಾವತಿಯನ್ನು ಧ್ಯಾನಿಸಿದರು. ಹೀಗೆ ಎಲ್ಲರ ಮನಸ್ಸಿನಲ್ಲಿ ಒಂದಿಲ್ಲೊಂದು ಬಗೆಯ ಉಜ್ವಲ ಭಾವನೆಯು ಉಂಟಾಗಿರುವಾಗ ಅಭಿಷೇಕವಿಧಾನವು ಮುಗಿಯಿತು.

ಶಾಸ್ತ್ರೋಕ್ತವಾಗಿ ರಚಿಸಿದ ಮನೋಹರವಾದ ಬಹು ಬೆಲೆಯುಳ್ಳ ಸಿಂಹಾಸನದ ಮೇಲೆ ಮೊದಲು ಮೃಗಚರ್ಮವನ್ನು ಹಾಸಿ, ಅದರ ಮೇಲೆ ಕೆಲವು ಸುವರ್ಣದ್ರವ್ಯವನ್ನು ಹರವಿ, ಅದರ ಮೇಲೆ ವ್ಯಾಘ್ರಚರ್ಮವನ್ನು ಹಾಸಿದ್ದರು. ಆ ವ್ಯಾಘ್ಯಚರ್ಮದ ಮೇಲೆ ಉತ್ತಮ ಮಖಮಲಿನ ಕಾರ್ಪಾಸಾಸನವನ್ನು ಹಾಕಿ ಉತ್ತಮ ಜರತಾರಿಯ ವಸ್ತ್ರದ ಆವರಣವುಳ್ಳ ತಕ್ಕೆ ಲೋಡುಗಳನ್ನು ಇಟ್ಟಿದ್ದರು. ಸಿಂಹಾಸನದ ಹಿಂದೆ ಸುವರ್ಣಮಯವಾದ ಪ್ರಭಾವಳಿಯಿದ್ದು, ಅದರ ಮೇಲೆ ರತ್ನಖಚಿತವಾದ ಸುವರ್ಣದ ಛತ್ರವು ಮುತ್ತಿನ ಝೂಲರಗಳಿಂದ ಪ್ರಕಾಶಿ ಸುತ್ತಲಿತ್ತು, ಅದರ ಮೇಲೆ ಅಲ್ಲಲ್ಲಿ ಮುತ್ತಿನ ಗೊಂಚಲುಗಳು ತೂಗಾಡುತ್ತಲಿದ್ದವು. ಹೀಗೆ ಸಿಂಹಾಸನವನ್ನು ವ್ಯವಸ್ಥೆಗೊಳಿಸಿ, ಸಭಾಮಂಟಪದ ಎದುರಿಗೆ ಸುಲಕ್ಷಣವಾದ ಆನೆಯನ್ನೂ, ಕುದುರೆಯನ್ನೂ ಬೆಲೆಯುಳ್ಳ ವಸ್ತ್ರ-ಸುವರ್ಣಾಲಂಕಾರಗಳಿಂದ ಶೃಂಗರಿಸಿ ನಿಲ್ಲಿಸಿದ್ದರು. ಸಿಂಹಾಸನಾರೋಹಣದ ಮುಹೂರ್ತವು ಸಮೀಪಿಸಿರಲು ಸಂಗಮರಾಜರು ಸುವರ್ಣದ ವಿಷ್ಣುಪ್ರತಿಮೆಯನ್ನು ಷೋಡಶೋಪಚಾರಗಳಿಂದ ಪೂಜಿಸಿ, ಅದನ್ನು ಬಲಗೈಯಲ್ಲಿ ಇಟ್ಟುಕೊಂಡು ಮುಹೂರ್ತದ ಗಳಿಗೆಯು ತುಂಬಿದಕೂಡಲೆ ಬ್ರಾಹ್ಮಣರನ್ನು ನಮಸ್ಕರಿಸಿ, ಅವರ ವೇದೋಕ್ತಾಶೀರ್ವಾದವನ್ನು ಪಡೆದು ಹಾಗೆಯೇ ವಿಷ್ಣುಪ್ರತಿಮೆಯೊಡನೆ ಸಿಂಹಾಸ ನವನ್ನು ಆರೋಹಿಸುವದಕ್ಕಾಗಿ ಹೊರಟನು. ಸಂಗಮರಾಜನು ಸಿಂಹಾಸನದ ಬಲಗಡೆಗೆ ನಿಂತು ಬಲಮೊಣಕಾಲೂರಿ ಅದನ್ನು ವಂದಿಸಿ ಅದಕ್ಕೆ ಕಾಲುಹತ್ತದಂತೆ ಪೂರ್ವಾಭಿಮುಖವಾಗಿ ಸಿಂಹಾಸನವೇರಿದನು. ಕೂಡಲೆ ನೌಬತ್ತು ತೂರ್ಯ ಮೊದಲಾದ ಮಂಗಲವಾದ್ಯಗಳು ಭೋರ್ಗರೆಯ ತೊಡಗಿದವು. ನೃತ್ಯ-ಗಾನಗಳು ಆರಂಭವಾದವು. ಪ್ರೇಕ್ಷಕರು ಜಯಘೋಷಮಾಡಿದರು. ಈ ಗಂಭೀರ ಘೋಷದಿಂದ ದಿಕ್ತಟಗಳು ತುಂಬಿಹೋಗುತ್ತಿರಲು. ತೋಪುಗಳ ಗರ್ಜನೆಗೆ ಆರಂಭವಾಯಿತು. ರಾಜನು ಮಹಾ ಸಮಾರಂಭದಿಂದ ದೇವದರ್ಶನ ಕ್ಕಾಗಿ ಹೊರಟು, ಶ್ರೀ ವಿರೂಪಾಕ್ಷನಿಗೂ ಶ್ರೀ ಭುವನೇಶ್ವರಿಗೂ ವಸ್ತ್ರಾಲಂಕಾರಗಳನ್ನು ಸಮರ್ಪಿಸಿ, ಅರ್ಚಕರನ್ನು ದಕ್ಷಿಣಾದಿಗಳಿಂದ ಸಂತೋಷಪಡಿಸಿ ರಾಜಗೃಹವನ್ನು ಪ್ರವೇಶಿ ಸಿದನು. ಅಲ್ಲಿ ಕುಲದೇವತೆಯ ದರ್ಶನಮಾಡಿ ಕೊಂಡು ಪೂಜ್ಯರನ್ನು ವಂದಿಸಿ ಆಶೀರ್ವಾದ ಪಡೆದು ಆತನು ಪುನಃ ರಾಜಗೃಹಕ್ಕೆ ಬಂದು ಸಿಂಹಾಸನವನ್ನು ಆರೋಹಿಸಿದನು. ಆಗ ಮಹಾತ್ಮರಾದ ಮಾಧವಾಚಾರ್ಯರೂ, ಮಹಾತ್ಮರಾದ ವಿರೂಪಾಕ್ಷಾರ್ಯರೂ ತಮ್ಮ ವರದ ಹಸ್ತಗಳನ್ನು ನೆಗಪಿ ಸಂಗಮರಾಜನನ್ನು ಆಶೀರ್ವದಿಸಿದರು! ಆಮೇಲೆ ಸಂಗಮರಾಜನು ಎಲ್ಲರ ಮುಜುರೆಗಳನ್ನು ಸ್ವೀಕರಿಸಿದ ಬಳಿಕ ತಾಂಬೂಲ, ಪುಷ್ಪಹಾರ, ಸುಗಂಧದ್ರವ್ಯಗಳ ಸಮರ್ಪಣವಾದನಂತರ ಎಲ್ಲರಿಗೆ ನಿರೂಪ ಕೊಡಬೇಕಾಗಿತ್ತು; ಅಷ್ಟರಲ್ಲಿ ಮಹಾತ್ಮರಾದ ಮಾಧವಾಚಾರ್ಯರು ಆ ಮಹಾಸಭೆಯನ್ನು ಕುರಿತು ಗಾಂಭೀರ್ಯದಿಂದ-

ಧರ್ಮಿಷ್ಠರಾದ ಪ್ರಜೆಗಳೇ, ನಿಮ್ಮ ಪರಾಕ್ರಮದಿಂದ ಸ್ವರಾಜ್ಯಸ್ಥಾಪನೆಯ ಸಡಗರದ ಸಮಾರಂಭವನ್ನು ನಾವೆಲ್ಲರೂ ನೋಡಿದೆವು; ಆದರೆ ಇದೇ ಸಮಾರಂಭದಲ್ಲಿ ಪದ್ಮಿನೀದೇವಿ ಯೊಡನೆ ಹುಕ್ಕದೊರೆಯ ವಿವಾಹಕಾರ್ಯವಾಗುವದೊಂದು ಉಳಿದಿರುವದು. ಈ ವಿವಾಹವು

ದೈವಸಂಕಲ್ಪದಂತೆ ಮೊನ್ನಿನ ಕಾಂಚನಗಡದ ಯುದ್ಧದಲ್ಲಿ ಹುಕ್ಕದೊರೆಯು ಅಕಸ್ಮಾತ್ ಪದ್ಮಿನೀ ದೇವಿಯ ಪ್ರಾಣಗ್ರಹಣ ಮಾಡಿದಾಗಲೇ ಆಗಿಹೋಗಿರುವದು. ಹುಕ್ಕ ದೊರೆಯು ಕುರುಬ ನಾಗಿರದೆ ಯಾದವಕುಲೋತ್ಪನ್ನ ಕ್ಷತ್ರಿಯನಿದ್ದು, ವರಂಗಳ ರಾಜಧಾನಿಯು ಹಾಳಾದಾಗ ಕುರುಬರ ವೇಷದಿಂದ ತನ್ನ ತಮ್ಮನಾದ ಬುಕ್ಕನೊಡನೆ ಆತನು ದಕ್ಷಿಣಕ್ಕೆ ಬಂದಿದ್ದನು. ಆತನ ಘನವಾದ ಯೋಗ್ಯತೆಗೆ ತಕ್ಕದ್ದಾದ ಕರ್ನಾಟಕದ ಸಿಂಹಾಸನಾರೋಹಣದ ಅಧಿಕಾರವು ಶ್ರೀ ವಿರೂಪಾಕ್ಷನ ಕೃಪೆಯಿಂದ ಆತನಿಗೆ ಪ್ರಾಪ್ತವಾದದ್ದು ಬಹಳ ಸಂತೋಷವು! ಆತನಿಗೆ ಪ್ರತ್ಯಕ್ಷ ರಾಜಪುತ್ರತ್ವವೂ ಯೌವರಾಜ್ಯಾಭಿಷೇಕವೂ ಉಂಟಾಗಿ ಬೇಕಂತಲೇ ಆತನ ತಂದಿ ವೃದ್ಧ ಸಂಗಮರಾಜನಿಗೆ ಈಗ ರಾಜ್ಯಾಭಿಷೇಕವು ಮಾಡಲ್ಪಟ್ಟಿರುವದು. ಒಟ್ಟಿಗೆ ಹುಕ್ಕ, ಬುಕ್ಕ, ಮುದ್ದ, ಮಾರ ಎಂಬ ನಾಲ್ವರು ಸಂಗಮರಾಜನ ಮಕ್ಕಳಾಗಿದ್ದು ಕ್ಷತ್ರಿಯ ಕುಲೋತ್ಪನ್ನರಾಗಿ ರುವರು. ಈ ಯಾವ ಸಂಗತಿಯನ್ನೂ ನಾನು ನಿಮಗೆ ಪ್ರಸಿದ್ಧ ರೀತಿಯಿಂದ ಹೇಳಿರದಿದ್ದರೂ ಸಂಗಮರಾಜನ ಪಟ್ಟಾಭಿಷೇಕ್ಕೆ ನೀವೆಲ್ಲರು ಒಪ್ಪಿಕೊಂಡದ್ದು ನನ್ನ ಮೇಲಿನ ಶ್ರದ್ಧೆಯ ಲಕ್ಷಣ ವಾಗಿರುವದು. ನನ್ನ ವಿಷಯದ ಈ ಅತ್ಯಂತಿಕ ಶ್ರದ್ಧೆಗಾಗಿ ನಾನು ನಿಮ್ಮನ್ನು ಅಭಿನಂದಿ ಸುವೆನು. ರಾಜಕೀಯ ವ್ಯವಹಾರದಲ್ಲಿ ಅತ್ಯಂತ ನಿಸ್ಪೃಹಿಗಳಾದ ಮುಂದಾಳುಗಳ ವಿಷಯವಾಗಿ ಹೀಗೆ ಒಂದು ಬಗೆಯ ಅಂಧಶ್ರದ್ಧೆಯನ್ನು ಲೋಕಸಮೂಹವು ಪ್ರಸಂಗವಶಾತ್ ತಾಳಬೇಕಾಗುತ್ತದೆ. ಇರಲಿ, ನಿಮ್ಮ ಶ್ರದ್ಧೆಯ ಫಲವಾದ ಈ ಸ್ವರಾಜ್ಯೋಗಭೋಗವು ನಿಮ್ಮೊಬ್ಬರಿಗೇ ಅಲ್ಲ, ಶ್ರೀ ವಿರೂಪಾಕ್ಷನ ಕೃಪೆಯಿಂದ ಇನ್ನೂರು ವರ್ಷಗಳಿಗಿಂತ ಹೆಚ್ಚು ಕಾಲ ಕರ್ನಾಟಕಕ್ಕೆ ದೊರೆಯುವದು! ಕೇವಲ ಈಶ್ವರ ಪ್ರೇರಣೆಯಂತೆ ನಡೆಯುವವರಾದ ವಿರೂಪಾಕ್ಷಾರ್ಯರಂಥ ಮಹಾತ್ಮರು ಮುಂದಾಳುಗಳಾಗಿರುವಾಗ ಇಂಥ ಮಹತ್ಫಲವು ಕರ್ನಾಟಕಕ್ಕೆ ದೊರೆತದ್ದೇನು ಆಶ್ಚರ್ಯವಲ್ಲ. ಇರಲಿ, ಇದೇ ಕಾಲದಲ್ಲಿ ಇನ್ನೊಂದು ಗೂಢ ಸಂಗತಿಯನ್ನು ನಿಮ್ಮ ಮುಂದೆ ಬಿಚ್ಚಿ ಇಡುವೆನು. ಯಾವ ಪುಣ್ಯವಂತಳ ಗುರುವೆನಿಸಿಕೊಳ್ಳಲಿಕ್ಕೆ ನನಗೆ ಪರಮಾನಂದವಾಗುತ್ತಿರುವದೋ, ಆ ಪತಿವ್ರತಾಶಿಖಾಮಣಿಯಾದ ಬೈರಾಗಿಣಿಯು ಎಲ್ಲಿಯವಳೋ ಒಬ್ಬಳಾಗಿರದೆ, ನಮ್ಮ ಪ್ರತಾಪಶಾಲಿಯಾದ ಮಲ್ಲಸರ್ಜನನ ಹೆಂಡತಿಯಾದ ಕುರುಬರ ಚಿನ್ನಮ್ಮನಾಗಿರುವಳು. ಆಕೆಯ ಪರಿಶುದ್ಧತೆಯನ್ನೂ, ಸತ್ವಾಧಿಕ್ಯವನ್ನೂ ನಮ್ಮ ಕಾಶಿಮಖಾನರು ತಮಗೆ ಪಶ್ಚಾತ್ತಾಪವಾದ ಕಾಲದಲ್ಲಿ ನೆರೆದ ಸಭೆಯಲ್ಲಿ ಈ ಮೊದಲೆ ವರ್ಣಿಸಿ ಚಿನ್ನಮ್ಮನು ತನ್ನ ತಾಯಿಯೆಂದು ಹೇಳಿರುವರು! ಈಗ ಮಾಧವನು ನಾನೂ ಆಕೆಯ ಪರಿ ಶುದ್ಧತೆಯನ್ನು ಪ್ರಸ್ಥಾಪಿಸುವೆನು. ಆ ಪುಣ್ಯವಂತಳು ಪಂಪಾಸರೋವರದಲ್ಲಿ ದುಮುಕಿದಾಗ ನಾನೇ ಆಕೆಯನ್ನು ಬದುಕಿಸಬೇಕಾಯಿತು. ಸ್ವದೇಶೋದ್ಧಾರಕ್ಕಾಗಿ ಶ್ರದ್ಧೆಯಿಂದ ತಪಶ್ಚರ್ಯ ಮಾಡುವಾಗ ಕುರುಬರ ಮಲ್ಲಪ್ಪನು ಹೋಗಿ ಮಲ್ಲಸರ್ಜನು ಆದಂತೆ, ಕುರುಬರ ಚಿನ್ನಮ್ಮನು ಹೋಗಿ ಲೋಕಾದರಣೀಯ ಸತ್ವಶಾಲಿನಿ ಬೈರಾಗಿಣಿಯಾದದ್ದೇನು ಆಶ್ಚರ್ಯವಲ್ಲ! ಶುದ್ಧಭಾವದಿಂದ ಕರ್ತವ್ಯ ಮಾಡುವಾಗ ನರನು ಹೋಗಿ ನಾರಾಯಣನಾಗುತ್ತಿರಲು. ಇದರಲ್ಲಿ ಅಶಕ್ಯತೆಯೇನು ಇರುವದಿಲ್ಲ! ಈಗ ಸ್ವರಾಜ್ಯ ಪ್ರಾಪ್ತಿಯ ತಪಸಕ್ತರಾದ ಈ ಇಬ್ಬರು ಪುಣ್ಯವಂತರು ಪುಟಕ್ಕೆ ಹಾಕಿದ ಚಿನ್ನದಂತೆ ಪರಿಶುದ್ಧರೂ, ಅತ್ಯಂತ ಸತ್ವಶಾಲಿಗಳೂ

ಆಗಿರುವದರಿಂದ ಅವರು ದಾಂಪತ್ಯಭಾವ ವಹಿಸಿ ಸಂಸಾರಸುಖವನ್ನು ಪಡೆಯಬೇಕೆಂದು ನಾನು ಇಚ್ಛಿಸುವೆನು. ಮಲ್ಲಸರ್ಜನನ ಗುರುತು ಚಿನ್ನಮ್ಮನಿಗಿರುವದು; ಆದರೆ ಯವನರ ದವಡೆಯಲ್ಲಿ ತನ್ನ ಹೆಂಡತಿಯು ಜಿಬ್ಬಿಯಾದಳೆಂದಾಗಲಿ, ಮಾಲಿನ್ಯ ಪಡೆದಳೆಂದಾಗಲಿ ಮಲ್ಲಸರ್ಜನನು ತಿಳಿದುಕೊಂಡದ್ದರಿಂದ, ಬೈರಾಗಿಣಿಯು ತನ್ನ ಹೆಂಡತಿಯ ಹಾಗೆ ತೋರಿದರೂ ಆ ಧೀರನು ತನ್ನ ಚಿತ್ತವನ್ನು ಎಂದೂ ಚಂಚಲವಾಗಗೊಡಲಿಲ್ಲ! ಮೊನ್ನಿನ ಕಾಂಚನಗಡದ ಯುದ್ಧದಲ್ಲಿ ತನ್ನ ಪ್ರಿಯ ಪತಿಯ ಸಂರಕ್ಷಣದ ವಿಷಯವಾಗಿ ಅತ್ಯಂತ ಜಾಗರೂಕಳಾಗಿದ್ದ ನಮ್ಮ ಬೈರಾಗಿಣಿಯು, ಅಲ್ಲ ಅಲ್ಲ, ಧೀರಳಾದ ಪತಿವ್ರತಾಶಿಖಾಮಣಿ ಚಿನ್ನಮ್ಮನು ಯವನರ ಕೈಯಿಂದ ತನ್ನ ಪತಿಯ ಪ್ರಾಣವನ್ನು ಉಳಿಸಿದಾಗ ಮಲ್ಲಸರ್ಜನು ಕೃತಜ್ಞತೆಯಿಂದ ತನ್ನ ಬೆರಳ ಉಂಗುರವನ್ನು ಕೊಡಲು, ಅದನ್ನು ಚಿನ್ನಮ್ಮನು ಭಕ್ತಿಯಿಂದ ಪರಿಗ್ರಹಿಸಿದ್ದನ್ನು ನಾನು ಬಲ್ಲೆನು. ಒಟ್ಟಿಗೆ ಶ್ರೀ ವಿರೂಪಾಕ್ಷನ ಕೃಪೆಯಿಂದ ಎಲ್ಲ ಕಾರ್ಯಗಳು ಆಗುವಹಾಗೆ ಆಗಿರುತ್ತದೆ; ಆದ್ದರಿಂದ ನಾಳೆಗೇ ಪದ್ಮಿನೀ–ಬುಕ್ಕದೊರೆಗಳ ವಿವಾಹವು ಆಗತಕ್ಕದಿದ್ದು, ನಮ್ಮ ಚಿನ್ನಮ್ಮ–ಮಲ್ಲಸರ್ಜನರು ಟೊಂಕಕಟ್ಟಿ, ಆ ಸಡಗರದ ಸಮಾರಂಭವನ್ನು ಜರುಗಿಸುವರೆಂದು ನಾನು ಭಾವಿಸುವೆನು, ಎಂದು ನುಡಿಯಲು, ಎಲ್ಲರಿಗೂ ಪರಮಾನಂದವಾಯಿತು! ಆಚಾರ್ಯರ ಇಚ್ಛೆಯಂತೆ ಪದ್ಮಿನಿಯ ವಿವಾಹ ಸಮಾರಂಭವು ನಡೆಯಿತು! ಮಲ್ಲಸರ್ಜನನು ತನ್ನ ಪ್ರಿಯ ಪತ್ನಿಯನ್ನು ಸ್ವೀಕರಿಸಿದನು. ಹೀಗೆ ಆನೆಗುಂದಿಯಲ್ಲಿ ಒಂದರ ಹಿಂದೊಂದು ಆದ ಸಡಗರದ ಸಮಾರಂಭಗಳ ಆನಂದದಲ್ಲಿ ಮಗ್ನರಾದ ಜನರು ತಮ್ಮ ಮನೆಮಾರುಗಳನ್ನು ಮರೆತುಬಿಟ್ಟರು!

## ಮಹಾತ್ಮರ ಭವಿಷ್ಯಕಥನ!

ಹೀಗೆ ಆನೆಗುಂದಿಯಲ್ಲಿ ಸಡಗರದ ಸಮಾರಂಭಗಳು ಎಷ್ಟಾದವು, ಹ್ಯಾಗಾದವು ಎಂಬದನ್ನು ನಾವು ವರ್ಣಿಸುತ್ತ ಕುಳಿತುಕೊಳ್ಳುವದಿಲ್ಲ. ಆದರೆ ಮಹಾತ್ಮರಾದ ಮಾಧವಾಚಾರ್ಯರು ಲೋಕಕಲ್ಯಾಣಕ್ಕಾಗಿ ಸ್ವರಾಜ್ಯವನ್ನು ಸ್ಥಾಪಿಸಿ ಸಂಗಮ, ಹುಕ್ಕ, ಬುಕ್ಕ ಎಂಬ ಮೂವರು ಅರಸರ ಸಂಪೂರ್ಣ ಆಳಿಕೆಯಲ್ಲಿ ಅವರ ಕುಲಗುರು–ಪದವಿಯನ್ನೂ, ಮಂತ್ರಿ ಪದವಿಯನ್ನೂ ಪಡೆದು. ಅವರ ಕೃತಾರ್ಥತೆಯ, ಹಾಗು ರಾಜ್ಯಸ್ಥಿರೀಕರಣದ ತಮ್ಮ ಕರುಣಾವಿಲಾಸವನ್ನು ಪ್ರಕಟಮಾಡಿ, ಕಡೆಗೆ ಶೃಂಗೇರಿಯ ಜಗದ್ಗುರು ಪೀಠವನ್ನು ಅಲಂಕರಿಸಿದ್ದರಿಂದ, ಇವರಂಥ ಮಹಾಪುರುಷರು ಐತಿಹಾಸಿಕ ಕಾಲದಲ್ಲಿ ಭರತಭೂಮಿಯಲ್ಲಿ ಬ್ರಾಹ್ಮಣರಲ್ಲಿಯಂತು ಆಗಲಿಲ್ಲವೆಂದು ಮಾತ್ರ ಸ್ಪಷ್ಟವಾಗಿ ಹೇಳುವೆವು! ಶ್ರೀಶಂಕರಾಚಾರ್ಯ, ಶ್ರೀ ರಾಮಾನುಜಾಚಾರ್ಯ, ಶ್ರೀ ಮಧ್ವಾಚಾರ್ಯರಂಥ ಮಹಾತ್ಮರಾದ ಧರ್ಮಸ್ಥಾಪಕರು ಆಗಿರುವರು; ಅದರಂತೆ ಲೋಕಕಲ್ಯಾಣಕ್ಕಾಗಿ ರಾಜಕಾರಣದಂಥ ತೊಡಕಿನ ವ್ಯವಹಾರದಲ್ಲಿ ಮಾಧವಾ

ಚಾರ್ಯರಂತೆಯೇ ಸೇರಿ ಪವಿತ್ರ ವೀರಶೈವ ಧರ್ಮವನ್ನು ಪುರಸ್ಕರಿಸಿದ ಮಹಾತ್ಮರಾದ ಶ್ರೀ ಬಸವೇಶ್ವರರಂಥ ಮಹಾಪುರುಷರೂ ಆಗಿರುವರು; ಆದರೆ ಚತುರ್ವೇದಗಳಿಗೂ ಭಾಷ್ಯ ಬರೆದು, ಪಂಚದಶಿಯಂಥ ಸರ್ವೋತ್ಕೃಷ್ಟ ವೇದಾಂತ ಗ್ರಂಥಗಳನ್ನು ರಚಿಸಿ ''ಮಾಧವನಿಂದ ಬರೆಯಲ್ಪಡದ ಶಾಸ್ತ್ರವಿಲ್ಲ'' ಎಂಬ ಘನವಾದ ಉಕ್ತಿಗೆ ಒಪ್ಪುವಂತೆ ತನ್ನ ವಿವಿಧ ಗ್ರಂಥಗಳ ಭಾಂಡಾರವನ್ನು ಜಗತ್ತಿನ ಕಲ್ಯಾಣಕ್ಕಾಗಿ ತೆರೆದಿಟ್ಟು, ಮೇಲೆ ''ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ'' ಎಂಬ ರಾಜ್ಯಸ್ಥಾಪನದ ಬಿರುದನ್ನು ಧರ್ಮಪೀಠಕ್ಕೆ ಒದಗಿಸಿಕೊಟ್ಟು ಆದಿಭೌತಿಕ ಹಾಗು ಆಧ್ಯಾತ್ಮಿಕ ದೃಷ್ಟಿಗಳೆರಡರಿಂದಲೂ ಜಗತ್ತಿನ ಕಲ್ಯಾಣ ಮಾಡಿದವರು ಮಾಧವಾಚಾರ್ಯರೊಬ್ಬರೇ ಎಂದು ಮತ್ತೂ ಮತ್ತೂ ಸಾರಿ ಸಾರಿ ಹೇಳಬಹುದು. ಅಂಥ ಘನವಾದ ಯೋಗ್ಯತೆಯ ಮಹಾತ್ಮರು ಆನೆಗುಂದಿಯ ಸಮಾರಂಭದ ಕಡೆಯ ದಿನದ ದರ್ಬಾರದಲ್ಲಿ ಯಾವತ್ತು ಕನ್ನಡಿಗರನ್ನೂ, ಆಂಧ್ರರನ್ನೂ ಕುರಿತು ಸ್ವಲ್ಪದರಲ್ಲಿ ಹೇಳಿದ ಭವಿಷ್ಯವೇನಂದರೆ–

ದೇಶಬಾಂಧವರೇ, ನೀವು ಇಹ–ಪರಗಳೆರಡರಲ್ಲಿಯೂ ಸುಖಿಗಳಾಗಬೇಕೆಂದು ಇಚ್ಛಿಸುತ್ತಿದ್ದರೆ, ಶ್ರೀ ಪಂಪಾಪತಿಯು ನನ್ನ ಮುಖದಿಂದ ವಿರೂಪಾಕ್ಷಾರ್ಯರಂಥ ಮಹಾತ್ಮರ ಸನ್ನಿಧಿಯಲ್ಲಿ ಕಂಪಲಿಯ ಸಭೆಯೊಳಗೆ ನುಡಿಸಿದ ಬೋಧವಚನಗಳಂತೆ, ಹಾಗು ವಿರೂಪಾಕ್ಷಾರ್ಯರ ಮುಖದಿಂದ ತಿರುವೇಂಕಟನನ್ನು ಕುರಿತು ನುಡಿಸಿದ ಬೋಧವಚನಗಳಂತೆ ನೀವು ವಿವೇಕಿಗಳಾಗಿ ಆಚರಿಸತಕ್ಕದ್ದು. ಆ ಬೋಧದ ಸಾರಶೋಷಣದ ಮುಖ್ಯ ಮಾತೆಂದರೆ–ಮನುಷ್ಯನು ಸ್ವಸ್ವರೂಪಜ್ಞಾನದಿಂದ ನಿಜವಾದ ಸ್ವಾತಂತ್ರ್ಯವನ್ನು ಪಡೆಯುವ ವರೆಗೆ ಉಚ್ಛೃಂಖಲವಾಗಿ ಹರಿದಾಡುವ ಸ್ವಭಾವದ ತನ್ನ ಮನಸ್ಸನ್ನು ಸ್ವಧರ್ಮ ರೂಪಸ್ತಂಭಕ್ಕೆ ಗಟ್ಟಿಯಾಗಿ ಕಟ್ಟತಕ್ಕದ್ದು. ಮತ್ತು ಹೀಗೆ ಕಟ್ಟಿದವರ ಯಾವತ್ತು ವ್ಯವಹಾರಗಳು ಧರ್ಮಮೂಲ ವಾಗಿದ್ದು, ಅವು ಧರ್ಮಕ್ಕಾಗಿಯೇ ಆಗುತ್ತಿರಬೇಕು. ಹೀಗೆ ಪವಿತ್ರವಾದ ಧಾರ್ಮಿಕ ಪಾರತಂತ್ರ್ಯಕ್ಕೆ ಒಳಗಾದವರೇ ಧರ್ಮಪ್ರಭುವಾದ ದೇವರ ಕೃಪೆಯಯಿಂದ ಸ್ವಸ್ವರೂಪ ಜ್ಞಾನವನ್ನು ಪಡೆದು ನಿಜವಾದ ಸ್ವಾತಂತ್ರ್ಯದ ಸುಖವನ್ನು ಭೋಗಿಸುವರು. ಆ ಸ್ಥಿತಿಯನ್ನು ಪಡೆಯುವವರೆಗೆ ''ನಾವು ಧರ್ಮಭ್ರಷ್ಟರಾಗಿಲ್ಲ''ವೆಂಬ ಸಮಾಧಾನ ದಿಂದುಂಟಾಗುವ ಆನಂದವೇ ಮನುಷ್ಯರ ತಾರಕವಾದ ಪರಮಾನಂದವಾಗಿರುವದು. ಆದರೆ ಸ್ವಾರ್ಥದ ಕಸದಿಂದ ಈ ಧಾರ್ಮಿಕ ಪ್ರವೃತ್ತಿಯ ಕಸುವು ಕಡಿಮೆಯಾಗಿ, ಸ್ವಾರ್ಥರೂಪ ಕಸದ ಕಸುವು ಹೆಚ್ಚಾಗುತ್ತ ಹೋದಂತೆ ಧಾರ್ಮಿಕ ಪ್ರವೃತ್ತಿಯು ನಾಶದ ಪಂಥವನ್ನು ಹಿಡಿಯುವದು. ಇಂಥ ಪ್ರಸಂಗಗಳಲ್ಲಿ ಆ ಸ್ವಾರ್ಥರೂಪ ಕಸವನ್ನು ಕಿತ್ತು ಧರ್ಮದ ಪುನರುಜ್ಜೀವನ ಮಾಡುವದಕ್ಕಾಗಿ ದೇಶ–ಕಾಲ ಪರಿಸ್ಥಿತ್ಯನುರೂಪಗಳಾದ ಹೊಸ ಹೊಸ ಧರ್ಮಪಂಥಗಳನ್ನು ಸ್ಥಾಪಿಸುವ ಮಹಾಪುರುಷರು ಕಾಲಕಾಲಕ್ಕೆ ಉಂಟಾಗುವದೊಂದು ಈಶಕೃಪೆಯೇ ಆಗಿರುವದು. ಇದೇ ಮಾತನ್ನೇ ಭಗವದ್ಗೀತೆಯಲ್ಲಿ –''ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ! ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ॥'' ಎಂಬ ಶ್ಲೋಕದಿಂದ ಹೇಳಿದ್ದು,

ಅದರಂತೆ ವಿವಿಧ ಮತಸ್ಥಾಪಕರು ಈ ಭರತಭೂಮಿಯಲ್ಲಿಯೂ, ಬೇರೆಕಡೆಯಲ್ಲಿಯೂ ಹಿಂದೆ ಆಗಿರುವರು, ಈಗ ಆಗುತ್ತಿರವರು, ಮುಂದೆ ಆಗುವರು. ನೆಟ್ಟಗಿದ್ದದ್ದನು ಕೆಡುವದೂ, ಕೆಟ್ಟಿದ್ದು ನೆಟ್ಟಗಾಗುವದೂ ಸೃಷ್ಟಿಯ ಧರ್ಮವಿರುವಂತೆ, ಧರ್ಮದ ಗ್ಲಾನಿಯಾಗದಿರುವಾಗ ಧರ್ಮರೂಪದಿಂದ ಪ್ರಕಟವಾಗಿರುವದೂ, ಧರ್ಮಗ್ಲಾನಿಯಾದಾಗ ಧರ್ಮಸ್ಥಾಪಕರ ರೂಪದಿಂದ ಅವತರಿಸುವದೂ ಈಶ್ವರನ ಧರ್ಮವಾಗಿರುವದು!

ಪ್ರಿಯವಾಚಕರೇ, ಇನ್ನು ಮುಂದೆ ಈ ಧರ್ಮಕ್ಕೆ ವಿರುದ್ಧವಾಗಿ ಜಗತ್ತಿನಲ್ಲಿ ಸ್ವಾರ್ಥದ ಕಸುವು ಮಿತಿಮೀರಿ ಬೆಳೆದು ಐಹಿಕ ಸುಖಕ್ಕಾಗಿ ಸರ್ವಧರ್ಮಗಳನ್ನು ನಾಮಶೇಷವಾಗಿ ಮಾಡುವದೊಂದು ನಾಸ್ತಿಕತನದ ಘಾತಕ ಯತ್ನವು ಕಾಲಮಹಿಮೆಯಿಂದ ಬಳಿಕೆಯಲ್ಲಿ ಬರುವದು. ಆ ಯತ್ನವೆಂದರೆ, ನಾವು ಇಂಥ ಧರ್ಮದವರು, ಇಂಥ ಜಾತಿಯವರು ಎಂದು ಹೇಳಿ, ಆ ಧರ್ಮ ಜಾತಿಗಳಂತೆ ಆಚರಿಸದೆ ತಮ್ಮ ಮನಸ್ಸಿಗೆ ಬಂದಂತೆ, ಅಥವಾ ಅನಧಿಕಾರಿಗಳು ಐಹಿಕಸುಖದ ಆಮಿಷ ತೋರಿಸಿ ನಡೆಯಹೇಳಿದಂತೆ ನಡೆಯುವರು! ತಮ್ಮ ಪ್ರಾಚೀನರ ಧರ್ಮದಂತೆ ಶ್ರದ್ಧೆಯಿಂದ ಅಕ್ಷರಶಃ ಆಚರಿಸದ, ಅಥವಾ ತನ್ನದೊಂದು ಹೊಸ ಧರ್ಮವನ್ನು ಸ್ಥಾಪಿಸಿ ಇದೇ ತಾರಕವೆಂಬ ಅನುಭವವನ್ನು ಅನ್ಯರಿಗೆ ತಂದುಕೊಟ್ಟು, ತನ್ನದೊಂದು ಪಂಗಡವನ್ನುಂಟುಮಾಡಲು, ಸಮರ್ಥನಲ್ಲದ ಮನುಷ್ಯನು ಎಂಥ ತೇಜಸ್ವಿಯಿದ್ದರೂ, ಎಂಥ ನಿಸ್ಪೃಹನಿದ್ದರೂ, ಎಂಥ ಸದ್ಗುಣಿಯಿದ್ದರೂ, ಎಂಥ ಪರೋಪಕಾರಿ ಯಿದ್ದರೂ, ಎಂಥ ವಿದ್ವಾಂಸನಿದ್ದರೂ ಆತನ ಧಾರ್ಮಿಕ ವ್ಯವಹಾರದಲ್ಲಿ ಕೈಹಾಕಲು ಸರ್ವಥಾ ಅಧಿಕಾರಿಯಲ್ಲವೆಂಬದನ್ನು ಚೆನ್ನಾಗಿ ಲಕ್ಷದಲ್ಲಿಡತಕ್ಕದ್ದು. ಇಂಥ ಅನಧಿಕಾರಿಗಳು ರಾಜಕೀಯ ಸ್ವಾತಂತ್ರ್ಯಪ್ರಾಪ್ತಿಯ ಆವೇಶದಿಂದ ವರ್ಣಾಶ್ರಮ ಧರ್ಮಗಳನ್ನು ಪಾಲಿಸುವವರ ಸಹಾನು ಭೂತಿಯನ್ನು ಪಡೆಯುವದಕ್ಕಾಗಿ ವರ್ಣಾಶ್ರಮ ಧರ್ಮಗಳ ಗೌರವದ ಗಾಯನಮಾಡಿ, ಅದರಂತೆ ತಾವು ಸ್ವತಃ ನಡೆಯದೆ. ವರ್ಣಾಶ್ರಮ ಧರ್ಮಗಳನ್ನು ಪಾಲಿಸಬೇಕೆನ್ನುವವರನ್ನು ಕುರಿತು–''ನೀವು ವರ್ಣಾಶ್ರಮ ಧರ್ಮಗಳನ್ನು ಪಾಲಿಸಿರಿ; ಆದರೆ ಅಸ್ಪೃಶ್ಯತಾತತ್ವವು ಅನುದಾರವಾದದ್ದರಿಂದ ಅದನ್ನು ತೆಗೆದುಹಾಕಿರಿ'' ಇತ್ಯಾದಿ ರೀತಿಯಿಂದ ವಿವೇಕವಿಲ್ಲದೆ ಬೋಧಿಸಿ ತಮ್ಮ ಗಾಢತರ ಧಾರ್ಮಿಕ ಅಜ್ಞಾನವನ್ನು ಪ್ರಕಟಿಸಲಿಕ್ಕೂ, ಅಥವಾ ''ನೀವು ಲಿಂಗವಂತರೆನಿಸಿಕೊಳ್ಳಿರಿ, ಆದರೆ ತಾರತಮ್ಯವಿಲ್ಲದೆ ಭವಿಗಳೊಡನೆ ಬೇಕಾದಹಾಗೆ ಬಳಿಕೆ ಮಾಡಿರಿ'' ಎಂದು ಹೇಳಿ ತಮ್ಮ ಆಸ್ತಿಕಾಭಾಸ ನಾಸ್ತಿಕತ್ವವನ್ನು ತೋರಿಸಲಿಕ್ಕೂ ಹಿಂದೆ ಮುಂದೆ ನೋಡಲಿಕ್ಕಿಲ್ಲ! ಲಕ್ಷಣಗಳಿಲ್ಲದ ಲಕ್ಷ್ಯವೂ, ಲಕ್ಷ್ಯವಿಲ್ಲದ ಲಕ್ಷಣಗಳೂ ಕೇವಲ ಕಾಲ್ಪನಿಕಗಳೇ ಎಂಬ ಶಾಸ್ತ್ರೀಯ ವಿಚಾರವು ಐಹಿಕ ಸುಖಸಂಪಾದನದ ಆವೇಶದಲ್ಲಿ ಇವರ ಲಕ್ಷದಲ್ಲಿ ಬರಲಿಕ್ಕಿಲ್ಲವೋ, ಅಥವಾ ಬಂದರೂ ಅದನ್ನು ತಮ್ಮ ಕಾರ್ಯಸಾಧನಕ್ಕಾಗಿ ಆಚ್ಛಾದಿಸುವರೋ ತಿಳಿಯದು! ಬೆಕ್ಕಿನ ಲಕ್ಷಣಗಳನ್ನು ಉದ್ದಕ್ಕೆ ಓದಿ, ಆ ಲಕ್ಷಣಗಳ ಲಕ್ಷ್ಯವಾಗಿ ನಾಯಿಯನ್ನು ಮುಂದೆ ನಿಲ್ಲಿಸಿದರೆ, ಲಕ್ಷ್ಯವಿಲ್ಲದೆ ಬೆಕ್ಕಿನ ಲಕ್ಷಣಗಳೂ, ಲಕ್ಷಣವಿಲ್ಲದ ನಾಯಿಯು ಲಕ್ಷ್ಯವೂ ನಿರರ್ಥಕವಾದವುಗಳೇ ಸರಿ! ಆದರಂತೆಯೇ ಅಸ್ಪೃಶ್ಯತೆಯ ತತ್ವವನ್ನು ಪರಿತ್ಯಜಿಸಿದ

ವರ್ಣಾಶ್ರಮ ಧರ್ಮಪಾಲಕನು ನಿರರ್ಥಕನೇ ಸರಿ! ಇದೇ ಮಾತು ಅನ್ಯಧರ್ಮದವರ ಲಕ್ಷಣ–ಲಕ್ಷ್ಯಗಳಿಗೂ ಸಂಬಂಧಿಸುವದು. ಇನ್ನು ಮಹಾಪುರುಷರು ತಮ್ಮ ಮಹಾಮಹಿಮೆ ಯಿಂದ ಲೋಕಕಲ್ಯಾಣಕ್ಕಾಗಿ ರಾಷ್ಟ್ರೀಯವೆಂಬ ಹೆಸರಿನದಾಗಲಿ, ಬೇರೆ ಯಾವದೊಂದು ಹೆಸರಿನದಾಗಲಿ, ಹೊಸ ಧರ್ಮಪಂಥವನ್ನು ಅಥವಾ ಜಾತಿಯನ್ನು ನಿರ್ಮಿಸಿ ಇಡಿಯ ಜಗತ್ತಿಗೇ ಅದರ ದೀಕ್ಷೆಯನ್ನು ಕೊಟ್ಟು ಜಗತ್ತಿನಲ್ಲಿ ಏಕಧರ್ಮ ಪ್ರಸಾರ ಮಾಡಿದರೆ ತಪ್ಪಲ್ಲ! ಭಗವಾನ್ ಬುದ್ಧ, ಶ್ರೀ ಬಸವೇಶ್ವರ ಮುಂತಾದ ಮಹಾತ್ಮರು ಲೋಕಕಲ್ಯಾಣಕ್ಕಾಗಿ ಇದೇ ಕಾರ್ಯವನ್ನು ಮಾಡಿರುವರು. ಆ ಮಹಾತ್ಮರ ಸಾಧಕಸ್ಥಿತಿಯ ತಮ್ಮ ಅನುಯಾಯಿಗಳ ಕಲ್ಯಾಣಕ್ಕಾಗಿ ಅನ್ಯಮತಗಳನ್ನು ಹಾಗು ಅನ್ಯಮತ ಗ್ರಂಥಗಳನ್ನು ಹಳಿಯಲಿಕ್ಕೆ ಸಹ ಹಿಂದೆ ಮುಂದೆನೋಡಿರುವದಿಲ್ಲ. ''ಪುರಾಣಗಳು ಪುಂಡರ ಕಥೆಗಳು'' ''ವೇದಗಳು ಗಾದೆಯ ಮಾತುಗಳು'' ಇತ್ಯಾದಿ ಅಗೌರವದ ಉತ್ತಿದಳು ಇದಕ್ಕೆ ಸಾಕ್ಷಿಗಳಾಗಿರುವವು. ಆಯಾ ಮತದ ಹಾಗೂ ಆಯಾ ಜಾತಿಯ ವೈಶಿಷ್ಟ್ಯವನ್ನು ಸಾಧಕನ ವೃತ್ತಿಯ ಸ್ಥೈರ್ಯವುಂಟಾಗುವವರೆಗೆ ಕಾದುಕೊಳ್ಳಲಿಕ್ಕೆ ಹೀಗೆ ಮಾಡಲೇಬೇಕಾಗುವುದು. ಆದ್ದರಿಂದ ಜಾತಿ–ಪಂಥಾದಿಗಳ ಹೆಸರುಗಳನ್ನು ಮಾತ್ರ ಅಳಿಸಿಬಿಡದೆ, ಅವುಗಳ ಲಕ್ಷಣಗಳನ್ನುಷ್ಟು ಅಳಿಸಿಬಿಟ್ಟು ಜನರಮೇಲಿನ ತಮ್ಮ ವರ್ಚಸ್ಸಿನ ದುರುಪಯೋಗಮಾಡಿ– ''ಸಾರ್ವಜನಿಕವಾದದ್ದರಿಂದ ಬೇಕಾದವರು ಬೇಕಾದ ಗುಡಿಗಳಲ್ಲಿ ಹೋಗಬಹುದು' ಎಂಬಂತಹ ಉದ್ಧಾಮತನದ ನಡತೆಯನ್ನು ಬಲಾತ್ಕಾರದಿಂದ ಬಳಿಕೆಯಲ್ಲಿ ತರಲು ಯತ್ನಿಸಿ, ಮಹಾತ್ಮರಾದ ತಮ್ಮ ಪುರಾತನರ ಸಂಕಲ್ಪವನ್ನು ಭಂಗಗೊಳಿಸಿ ಕೃತಜ್ಞತೆಯ ಹಾಗು ನಾಸ್ತಿಕತ್ವದ ಆರೋಪಕ್ಕೆ ಗುರಿಯಾಗುವವರ ಧಾರ್ಮಿಕ ಪಾಮರತ್ವಕ್ಕಾಗಿ ಮರುಗಬೇಕಾದರೂ, ಅವರಿಂದಾಗುವ ಮಾನವ ಜಾತಿಯ ಶಾಶ್ವತ ಕಲ್ಯಾಣದ ವಿಘಾತಕ್ಕಾಗಿ ಸಂತಾಪಗೊಳ್ಳಬೇಕಾಗುತ್ತದೆ. ಈ ಅತಂತ್ರ ಜನರಿಗೆ, ಅಂದರೆ ತಾವು ಅಜ್ಞಾನಿಗಳೆಂದು ಹೇಳುತ್ತ ಮಹಾಜ್ಞಾನಿಗಳೂ ಮಾಡಹೋಗದ ಮಹಾಸಾಹಸ ಮಾಡ ಹೋಗುವವರಿಗೆ ತಮ್ಮದೊಂದು ರಾಷ್ಟ್ರೀಯ ಪಂಥವನ್ನು ಸ್ಥಾಪಿಸಲಿಕ್ಕೂ, ಸರ್ವರೂ ಹೋಗಿ ಬರುವಿಕೆಗೆ ಅನುಕೂಲವಾಗಿರುವ ದೇವಸ್ಥಾನಗಳನ್ನು ಹೊಸದಾಗಿ ಕಟ್ಟಿಸಲಿಕ್ಕೂ ದಶದಿಕ್ಕುಗಳೂ ತೆರೆದಿರಲು, ಪಾಪ! ಧರ್ಮಹ್ರಾಸವಾಯಿತಲ್ಲ, ಎಂದು ನಮ್ಮ ಮನ್ವಾದಿ ಮಹರ್ಷಿ ಪೂರ್ವಜರು ಮೊದಲೇ, ದುಃಖಪಡುತ್ತಿರುವಾಗ ಅವರ ಪದ್ಧತಿಯ ಹಳೆಯ ಗುಡಿ–ಗುಂಡಾರಗಳ ಭ್ರಷ್ಟಾಕಾರಮಾಡಿ ಅವರ ಶಾಪದಿಂದ ದಗ್ಧರಾಗುವ ಉಸಾಬರಿಗೆ ಯಾಕೆ ಹೋಗಬೇಕೆಂಬದೂ ಮುಂದಿನ ಆ ನಾಸ್ತಿಕರ ಮನಸ್ಸಿನಲ್ಲಿ ಬರುವದಿಲ್ಲ.

ಪ್ರಿಯ ದೇಶಬಾಂಧವರೇ, ಇನ್ನು ನಾನು ಹೇಳುವ ಭವಿಷ್ಯವೆಂದರೆ, ''ಪತಿತ ಪರಾವರ್ತನವು'' ಧರ್ಮಭ್ರಷ್ಟರು ಪತಿತರಾಗಿದ್ದು, ಅವರು ಪುನಃ ಧರ್ಮದ ಕಡೆಗೆ ಹೊರಳುವದು ಪತಿತಪರಾವರ್ತವೆನಿಸುವದರಿಂದ, ಅಧರ್ಮಿಷ್ಠರನ್ನು ಧರ್ಮಿಷ್ಠರನ್ನು ಮಾಡುವದು ಅಪರಾಧವಲ್ಲ. ಆದರೆ ಮುಂದಿನ ಕಲಿಕಾಲದಲ್ಲಿ ದೇಹಾತ್ಮವಾದಿತ್ವವು ಹೆಚ್ಚಿ, ತಮ್ಮ ದೇಹಸೌಖ್ಯವು ಎಲ್ಲರಿಗಿಂತಲೂ ಹೆಚ್ಚಾಗಬೇಕೆಂದು ಆಸೆಬುರುಕರಾಗಿ ಪ್ರತಿ ಒಂದು

ಧರ್ಮದವರು ಅಹಂಕಾರದಿಂದ ತಾವು ಜಗತ್ತಿಗೆ ಭಾರಿಯಾಗಬೇಕೆಂದು ಹುರುಳಿಲ್ಲದ ಹಂಬಲಕ್ಕೆ ಬಿದ್ದು, ಕಲಹಕ್ಕೆ ತಮ್ಮ ಪಂಗಡವು ಸಮರ್ಥವೂ, ಬಹುಸಂಖ್ಯಾಕವೂ ಆಗುವದಕ್ಕಾಗಿ ತಾವು ಸ್ವತಃ ಪತಿತರೋ ಉದ್ಧೃತರೋ ಎಂಬದನ್ನು ನೋಡಿಕೊಳ್ಳದೆ. ಮತ್ತು ಧಾರ್ಮಿಕ ವಿಷಯದ ತಮ್ಮ ಅಧಿಕಾರವನ್ನು ವಿಚಾರಿಸದೆ ಪತಿತಪರಾವರ್ತನದ ದುರುಪಯೋಗ ಮಾಡಿ ಜಗತ್ತಿನ ಪತಿತತ್ವಕ್ಕೆ ಮತ್ತಿಷ್ಟು ಸಹಾಯಮಾಡುವ ಪ್ರಸಂಗವು ಬರಬಹುದು; ಆದರೆ ಬಲಾತ್ಕಾರದಿಂದ ಧರ್ಮಾಂತರವನ್ನು ಅಥವಾ ಜಾತ್ಯಂತರವನ್ನು ಹೊಂದಿದವರಿಗೆ ಅವರ ಬಲಾತ್ಕಾರದ ಬಾಧೆಯು ಹೋದಬಳಿಕ ಅವರು ತಮ್ಮ ಭಕ್ತಿಗೆ ಕಾರಣವಾದ ತಮ್ಮ ಪೂರ್ವದ ಧರ್ಮದಂತೆ, ಅಥವಾ ತಮ್ಮ ಪೂರ್ವದ ಜಾತಿಯಂತೆ, ಆ ಜಾತಿಯದೊಂದು ಬೇರೆ ಪಂಗಡವನ್ನು ಮಾಡಿಕೊಂಡು ಆಚರಿಸಲಿಕ್ಕೆ ಬಾಧೆ ತೋರುವದಿಲ್ಲ. ಈ ಬಗೆಯ ಯಾವ ಎಚ್ಚರವನ್ನೂ ಪಡೆದ ಐಹಿಕಸುಖದ ಆಸೆಯಿಂದ ತಾರತಮ್ಯವಿಲ್ಲದೆ ಬಡಬಡ ಪತಿತಪರಾವರ್ತನ ಮಾಡಿದರೆ ನಿಶ್ಚಯವಾಗಿ ಧರ್ಮಗ್ಲಾನಿಯು ಹೆಚ್ಚುವದು. ಪರಾವರ್ತನ ಹೊಂದಿದ ಜಾತಿಯು ಆಯಾ ಜಾತಿಯದೊಂದು ಪಂಗಡವಾಗಿ ಉಳಿದು ಮುಂದೆಕ್ರಮದಿಂದ ಅದರ ಆಚಾರವು ಶುದ್ಧವಾಗಿ ಪಂಗಡದ ಕಸುವು ಕಡಿಮೆಯಾದಂತೆ ಅದು ಯಾವದೊಂದು ಜಾತಿಯಲ್ಲಿ ಬೆರೆತುಹೋಗ ಬಹುದಲ್ಲದೆ, ಕೂಡಲೆ ಬಲಾತ್ಕಾರದಿಂದ ಅದನ್ನು ಜಾತಿಯಲ್ಲಿ ಕೂಡಿಸಿ ಎಲ್ಲ ಜಾತಿಯವರು ಕೂಡಿ ಬಳಿಕೆ ಮಾಡುವದು ಭಾವನೆಯ ಪಾವಿತ್ರ್ಯಕ್ಕೆ ಕುಂದುತರುವ ಮಾತಾಗಿರುವದು!

ಈ ಮೇರೆಗೆ ನುಡಿದು ಆಚಾರ್ಯರು ವಿರೂಪಾಕ್ಷಾರ್ಯರ ಕಡೆಗೆ ನೋಡಲು, ಅವರು ಆಚಾರ್ಯವರ, ನಿಮ್ಮ ಮಾತು ಒಪ್ಪತಕ್ಕದ್ದೇ ಸರಿ; ಆದರೆ ಮಹಾತ್ಮನ್, ನೀವು ಹೇಳಿದಂತೆ ಮುಂದೆ ಆಗಬಹುದಾದ ಈ ಸೂಕ್ಷ್ಮ ಧಾರ್ಮಿಕ ವ್ಯವಹಾರದ ಘಾತಕತನವು ಹೋಗಲಿ, ಸ್ಥೂಲವಾದ ಲೌಕಿಕ ವ್ಯವಹಾರದಲ್ಲಿಯೂ ಜನರು ಒಂದಿಲ್ಲೊಂದು ಬಗೆಯ ಪ್ರಾಬಲ್ಯದಿಂದ ಒಂದೇ ಸವನೆ ದುರ್ಬಲರ ರಕ್ತಶೋಷಣ ಮಾಡುವರೆಂದು ಹೇಳಬಹುದು! ನಾವು ಜಗತ್ತಿನ ಸುಖದ ಸಾಧನೆಗಳನ್ನು ಹೆಚ್ಚಿಸುವವೆಂಬ ಹೆಮ್ಮೆಯ ಮಾತಿನಿಂದ, ತಮ್ಮ ತಲೆಶಿಕ್ಕಿಕೊಂಡು ಬಗೆಬಗೆಯ ಯಾಂತ್ರಿಕ ಶೋಧಗಳನ್ನು ಮಾಡಿ, ಆ ಶೋಧಗಳ ಕೀಲಿಯ ಕೈಗಳನ್ನು ತಮ್ಮ ಕೈಯಲ್ಲಿ ಇಟ್ಟುಕೊಂಡು ಆ ಶೋಧಗಳಿಗಾಗಿ ತಾವು ಪಡೆಯತಕ್ಕ ಹಕ್ಕಿನ ಫಲವೆಂದು ದುರ್ಬಲರ ರಕ್ತಶೋಷಣ ಮಾಡುವರು! ಹೊಸ ಹೊಸ ಶೋಧಗಳು ಆಗಿ ಜಗತ್ತಿನ ಸುಖವು ಹೆಚ್ಚುವದು. ಲೌಕಿಕ ದೃಷ್ಟಿಯಿಂದ ಅಷ್ಟು ದೋಷವಲ್ಲದಿದ್ದರೂ. ನಮ್ಮ ಪ್ರಾಚೀನ ಮಹರ್ಷಿಗಳಂತೆ ಅಂಥ ಶೋಧಗಳ ಕೀಲಿಯು ಕೈಗಳನ್ನು ಪರೋಪಕಾರ ಬುದ್ಧಿಯಿಂದ ಜಗತ್ತಿಗೆ ಕೊಟ್ಟುಬಿಟ್ಟು, ತಮ್ಮ ಸತ್ವಕ್ಕೆ ಭಂಗತಂದುಕೊಳ್ಳದಿರುವದಕ್ಕಾಗಿ ತಾವು ಅವುಗಳಿಂದ ನಿರ್ಲಿಪ್ತರಾಗಿರದೆ, ಅವುಗಳ ಫಲಭೋಕ್ತಾರರು ತಾವೇ ಆಗಿ ಜಗತ್ತನ್ನು ಹಿಂಡುವದು ಮಹತ್ಪಾಪವಾಗಿರುವದು! ಇಂಥ ಪರರಕ್ತಶೋಷಕ ಶೋಧಗಳಿಗಾಗಿ ಜಗತ್ತಿನ

ಸುಖ–ಶಾಂತಿಗಳ ವಿಷಯದ ವಿಷಮತೆಯನ್ನು ಮಿತಿಮೀರಿ ಹೆಚ್ಚಿಸುವದಕ್ಕಿಂತ ಇಂಥ ಶೋಧಗಳಾಗದಿರುವದೇ ಹಿತಕರವು. ಸುಖಸಾಧನಗಳ ವೈಪುಲ್ಯದಿಂದ ಸಾಧಕನ ಸತ್ವಹಾನಿ ಯಾಗುವದೆಂಬದೂ ಇಲ್ಲಿ ಲಕ್ಷದಲ್ಲಿಡತಕ್ಕ ಮಾತಾಗಿದೆ. ಒಟ್ಟಿಗೆ ಮಹಾತ್ಮನ್, ಜಗತ್ತಿನ ಆಗುಹೋಗುಗಳು ಈಶ್ವರೀತಂತ್ರದಿಂದ ಕಾಲಕ್ಕನುಸರಿಸಿ ಆಗಿಯೇ ತೀರುವವು; ಆದರೆ ತಾವು ಹೇಳಿದಂತೆ ಸತ್ವಶಾಲಿಗಳು ಅವಕ್ಕೆ ಒಳಗಾಗದೆ, ಆಯಾ ಕಾಲದ ಮಹಾತ್ಮರು ಆತ್ಮಶುದ್ಧಿಗಾಗಿ ತೋರಿಸಿದ ಧರ್ಮದಂತೆ ಆಚರಿಸಿದರೆ ಈಶ್ವರಪ್ರೀತಿ ಯಾಗುವದು ಎಂದು ನುಡಿಯಲು, ಆಚಾರ್ಯರು ಆನಂದದಿಂದ ತಲೆದೂಗಿ ಒಪ್ಪಿ ಜಗತ್ತಿಗೆ ಮಂಗಲವೀಯಲು ಪಂಪಾಪತಿಯ ನಾಮಘೋಷಮಾಡುತ್ತ ಸಭಾಕಾರ್ಯವನ್ನು ಮುಗಿಸಿ ದೇಶಕಲ್ಯಾಣದ ಮುಂದಿನ ಮಹತ್ವದ ಕಾರ್ಯಗಳಿಗೆ ಅವಸರದಿಂದ ತೊಡಗಿದರು !

ಸರ್ವೇಜನಾಃ ಸ್ಸುಖಿನೋ ಭವಂತು!!

ಸಂಪೂರ್ಣ

ಗಳಗನಾಥ ಸಮಗ್ರ ಸಾಹಿತ್ಯ

## ನಿಮ್ಮ ನೆನೆದಾಗಲೆ ಉದಯ

'ಗಳಗನಾಥ' ಹಾವೇರಿ ಜಿಲ್ಲೆಯ ಒಂದು ಹಳ್ಳಿ. ವೆಂಕಟೇಶ ತಿರಕೋ ಕುಲಕರ್ಣಿಯವರು ತಮ್ಮ ಈ ಹಳ್ಳಿಯ ಹೆಸರನ್ನು ಕಾವ್ಯನಾಮವಾಗಿ ಬಳಸುವ ಮೂಲಕ, ಅದನ್ನು ಸಾಹಿತ್ಯದಲ್ಲಿ ಚಿರಸ್ಥಾಯಿಗೊಳಿಸಿದರು.

ಧಾರವಾಡದ ಗಂಡುಮಕ್ಕಳ ಟ್ರೇನಿಂಗ್ ಕಾಲೇಜು ಇವರ ಸಾಹಿತ್ಯಿಕ ವ್ಯಕ್ತಿತ್ವವನ್ನು, ಅಗಡಿ ಆನಂದಾಶ್ರಮ ಇವರ ಆಧ್ಯಾತ್ಮಿಕ ವ್ಯಕ್ತಿತ್ವವನ್ನು ರೂಪಿಸಿದವು. ಈ ಎರಡೂ ಆಯಾಮಗಳಿಗೆ ಆಧಾರವಾದುದು ಅವರ ಕನ್ನಡ ಶಾಲೆಯ ಶಿಕ್ಷಕವೃತ್ತಿ. ಹೊಸಗನ್ನಡ ಸಾಹಿತ್ಯಿಕ ಪರಿಸರವನ್ನು ಮೈಸೂರು ಪ್ರದೇಶದಲ್ಲಿ ರಾಜರ ಆಸ್ಥಾನ ವಿದ್ವಾಂಸರು ಸೃಷ್ಟಿಸಿದರೆ, ಉತ್ತರ ಕರ್ನಾಟಕದಲ್ಲಿ ಅಂತಹ ಪರಿಸರವನ್ನು ಕನ್ನಡ ಶಾಲೆಯ ಮಾಸ್ತರರು ಸೃಷ್ಟಿಸಿದರು. ಇವರಲ್ಲಿ ಎದ್ದು ಕಾಣುವ ಹೆಸರು, ಗಳಗನಾಥ ಮಾಸ್ತರು.

೨೦ನೆಯ ಶತಮಾನದಲ್ಲಿ ಗದ್ಯಯುಗವನ್ನು ಆಳಿದುದು ಕಾದಂಬರಿ. ಹೀಗಾಗಿ ಈ ಶತಮಾನವನ್ನು "ಕಾದಂಬರಿ ಪ್ರಧಾನಯುಗ" ವೆಂದು ಕರೆಯಬಹುದಾಗಿದೆ. ಇದು ನವೋದಯ, ಪ್ರಗತಿಶೀಲ, ನವ್ಯವೆಂಬ ಮೂರು ಹಂತಗಳಲ್ಲಿ ಸಾಗಿ ಬಂದಿದೆ. ಇವುಗಳಲ್ಲಿ ಪ್ರಗತಿಶೀಲವೆಂಬುದು ಒಂದು ಪ್ರಯೋಗವಾಗಿ ಉಳಿಯಿತೇ ಹೊರತು, ಪರಂಪರೆಯಾಗಿ ಬೆಳೆಯಲಿಲ್ಲ. ಇತ್ತೀಚೆಗೆ ನವ್ಯ ಕಾದಂಬರಿ ಬಂದು ಪರಂಪರೆಯಾಗಿ ಬೆಳೆಯುತ್ತಲಿದ್ದರೂ ಅದರ ಸಂಖ್ಯೆ ಕಡಿಮೆ. ಆದುದರಿಂದ ಇಂದಿಗೂ ಕಾದಂಬರಿ ಕ್ಷೇತ್ರವನ್ನು ಬಹುಪಾಲು ವ್ಯಾಪಿಸಿದುದು ನವೋದಯಪ್ರಜ್ಞೆಯ ಕಾದಂಬರಿ. ಈ ಪ್ರಜ್ಞೆಯ ಮೂಲಪುರುಷರಲ್ಲಿ ಮುಖ್ಯವೆನಿಸಿದ್ದಾರೆ, ಕಾದಂಬರಿ ಪಿತಾಮಹ ಗಳಗನಾಥರು.

ಸಾಹಿತ್ಯವನ್ನು ಸೃಷ್ಟಿಸುವವನು ಸಾಹಿತಿಯಾದರೂ ಅದರ ವಾರಸುದಾರರು ಸಹೃದಯರು. ಈಗಿನಂತೆ ಪುಸ್ತಕದ ಉತ್ಪಾದನೆಗೆ ಅನುಕೂಲವಿಲ್ಲದ ಪ್ರಾಚೀನಕಾಲದಲ್ಲಿಯೂ ಇವರು ಉತ್ತಮ ಸಾಹಿತ್ಯ ಕೃತಿಗಳನ್ನು ತಲೆಮಾರಿನಿಂದ ತಲೆಮಾರಿಗೆ ಪ್ರತಿಮಾಡುತ್ತ - ಮಾಡಿಸುತ್ತ ಬಂದಿದ್ದಾರೆ. ಹೀಗಿರುವಾಗ ಎಲ್ಲ ಬಗೆಯ ಅನುಕೂಲತೆಗಳನ್ನು ಹೊಂದಿರುವ ಇಂದಿನ ಕಾಲದವರಾದ ನಾವು ಅವುಗಳ ಮರುಮುದ್ರಣ ವಿಷಯದಲ್ಲಿ ಹೆಚ್ಚು ಆಸಕ್ತಿವಹಿಸುವದು ತೀರ ಸಹಜ. ಆದುದರಿಂದ, ಪ್ರಾಚೀನ ಹಸ್ತಪ್ರತಿಗಳ ಪರಿಷ್ಕರಣ - ಮುದ್ರಣ - ಮರುಮುದ್ರಣದಂತೆ ನವೋದಯಕಾಲೀನ ಯಂತ್ರಪ್ರತಿಗಳನ್ನೂ ಮತ್ತೆ ಮತ್ತೆ ಅಚ್ಚಿಸಿ ಓದುಗರಿಗೆ ಒದಗಿಸುತ್ತಲಿದ್ದೇವೆ.

**ಎಂ. ಎಂ. ಕಲಬುರ್ಗಿ**
ಪ್ರಧಾನ ಸಂಪಾದಕರು




Rs. 2000/- (Set of 6 Volumes)

ಗಳಗನಾಥರ ವರ್ಣಚಿತ್ರ ಕೃಪೆ : ಎನ್.ಸಿ. ದೇಸಾಯಿ